ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ -೧೨೨

# ಶ್ರೀಮದ್ಭಾಗವತ

## ಪ್ರಥಮಸ್ಕಂಧ

*ಅನುವಾದ ಹಾಗೂ ಸಂಪಾದನೆ*
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಪಂ. ವೆಂಕಟೇಶಾಚಾರ್ಯ ಬಿ.ಆರ್

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

ಪ್ರತಿಬಿಂಬಗಳು ಸೂರ್ಯನೇ ಮೊದಲಾದವುಗಳಿಂದ ಹೇಗೆ ಹುಟ್ಟುವವೋ ಹಾಗೆ ಸೂಕ್ಷ್ಮ ಸ್ಥೂಲಮೊದಲಾದ ಶರೀರಗಳೆಂಬ ಉಪಾಧಿಗಳ ನಿಮಿತ್ತದಿಂದ ಜೀವರು ಶ್ರೀಹರಿಯಿಂದ ಹುಟ್ಟುವರು. ಕುಂಬಾರ ಮಣ್ಣಿನಿಂದ ನಾನಾ ಪದಾರ್ಥಗಳನ್ನು ತಯಾರಿಸುವಂತೆ ಮೂಲಪ್ರಕೃತಿಯಿಂದ ಜಡವಸ್ತುಗಳನ್ನು ನಿರ್ಮಿಸುವವನು ಭಗವಂತ. ಈ ಮೂರು ರೀತಿಯ ಸೃಷ್ಟಿಯಿಂದ ಪೂರ್ಣಕಾಮನಾದ ಅವನಿಗೇನೂ ಪ್ರಯೋಜನವಿಲ್ಲ. ಜೀವರಿಗಾಗಿ ಮಾಡುತ್ತಾನೆ. ಜೀವರು ಅನೇಕ ಜನ್ಮಗಳಲ್ಲಿ ಸಾಧನೆ ಮಾಡಿ ಮೋಕ್ಷಸಂಪಾದನೆ ಮಾಡಿಕೊಳ್ಳಲಿ ಎಂಬ ಪರೋಪಕಾರ ಬುದ್ಧಿಯಿಂದಲೇ ಭಗವಂತ ಪ್ರಪಂಚವನ್ನು ಸೃಷ್ಟಿ ಮಾಡುತ್ತಾನೆ. ಈ ಕಾರ್ಯದಲ್ಲಿ ಅವನಿಗೆ ಯಾರ ಸಹಾಯವೂ ಬೇಕಿಲ್ಲ. ಅವನು ಸ್ವತಂತ್ರ. ಆದರೂ ಲೀಲೆಯಿಂದ ಜಡತತ್ತ್ವಗಳನ್ನು ಅವುಗಳ ಅಭಿಮಾನಿಗಳನ್ನೂ ತನ್ನ ಕಾರ್ಯಗಳಲ್ಲಿ ಬಳಸಿಕೊಳ್ಳುತ್ತಾನೆ. ಸೃಷ್ಟಿಕರ್ತನಾದ ಈ ಭಗವಂತನೇ ಸೂರ್ಯಮಂಡಲದಲ್ಲಿ ನೆಲೆಸಿ ಗಾಯತ್ರೀಮಂತ್ರದಿಂದ ಉಪಾಸನೆ ಮಾಡುವವರಿಗೆ ತತ್ತ್ವಜ್ಞಾನದ ಬೆಳಕನ್ನು ನೀಡುತ್ತಾನೆ. ಈ ಗಾಯತ್ರೀ ಮಂತ್ರದ ಅರ್ಥವೇ ಶ್ರೀಮದ್ಭಾಗವತ. ಇದು ನಿಷ್ಕಾಮಕರ್ಮವನ್ನು ಮಾಡಲು ಆದೇಶ ನೀಡುತ್ತದೆ. ಭಾಗವತ ಶ್ರವಣದಿಂದ ಭಗವಂತನಲ್ಲಿ ಭಕ್ತಿ ಹುಟ್ಟುತ್ತದೆ. ಭಕ್ತಿರಸವೇ ಪ್ರಧಾನವಾಗಿರುವ ಭಾಗವತವೆಂಬ ಫಲವು ಶುಕಾಚಾರ್ಯರೇ ಮೊದಲಾದ ಜ್ಞಾನಿಗಳಿಂದ ಮಾಗಿದ ಹಣ್ಣಿನಂತೆ ಮತ್ತಷ್ಟು ರಸಭರಿತವಾಗಿರುತ್ತದೆ.

ನೈಮಿಷಾರಣ್ಯದಲ್ಲಿ ಶೌನಕಾದಿ ಮಹರ್ಷಿಗಳು ಮೋಕ್ಷಕಾಮನೆಯಿಂದ ಸಾವಿರ ವರ್ಷಗಳ ದೀರ್ಘಸತ್ರವನ್ನು ಕೈಗೊಂಡರು. ಆ ಸಮಯದಲ್ಲಿ ನಿರಂತರ ಹರಿಕಥಾಶ್ರವಣ ನಡೆದರೆ ಮೋಕ್ಷ ಲಭ್ಯವಾಗುವುದು ಎಂದು ಭಾವಿಸಿ ಜ್ಞಾನಿಗಳಿಗಾಗಿ ಕಾಯುತ್ತಿದ್ದರು. ಶುಕಾಚಾರ್ಯರಿಂದ ಎಲ್ಲ ಪುರಾಣಗಳನ್ನು ಶ್ರವಣಮಾಡಿದ ರೋಮಹರ್ಷಣರ ಮಕ್ಕಳಾದ ಸೂತಾಚಾರ್ಯರು ಅಲ್ಲಿಗೆ ಬಂದರು. ಅವರನ್ನು ಆದರದಿಂದ ಸತ್ಕರಿಸಿ ಕುಳ್ಳಿರಿಸಿ ಅವರನ್ನು ಶೌನಕರು ಪ್ರಾರ್ಥಿಸಿದರು. ಅಲ್ಪಜ್ಞಾನ ಅಲ್ಪಶಕ್ತಿಯುಳ್ಳವರಿಗೆ ಮೋಕ್ಷಸಾಧನ ಯಾವುದು? ಹರಿಯ ಮೂಲರೂಪ ಅವತಾರಗಳ ಬಗ್ಗೆ ವಿಶೇಷವಾಗಿ ಕೃಷ್ಣಾವತಾರದ ಬಗ್ಗೆ ನಿಮ್ಮ ಮುಖದಿಂದ ಕೇಳುವ ಆಸೆ ನಮಗೆ. ಕೃಷ್ಣಾವತಾರದ ಬಳಿಕ ಯಾರು ಧರ್ಮವನ್ನು ರಕ್ಷಿಸಿದರು ? ಇಲ್ಲಿ ಒಟ್ಟು 6 ಪ್ರಶ್ನೆಗಳನ್ನು ಶೌನಕರು ಸೂತರಿಗೆ ಕೇಳುತ್ತಾರೆ.

**Srimad Bhagavata Pratham Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : **1000**

First Edition : **4th May 2013**

No.of Pages : **16+550**



**Price.** : [In India] **Rs. 250**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Type Setting : **V.M.M.P Research wing.**

Cover Design : **Gopalakrishna**

Printed by : **Vagartha**



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

1. **ಪುಂಸಾಂ ಏಕಾಂತತ-** ಶ್ರೇಯ ಸಾಧನ ಪ್ರಶ್ನೆ
2. **ಬ್ರೂಹಿ ಭದ್ರಾಯ-** ಜೀವ ವಿಷಯ (ಪ್ರತ್ಯಗಾತ್ಮ) ಪ್ರಶ್ನೆ
3. **ಅರ್ಹಸ್ಯಂಗಾನುವರ್ಣಿತುಂ-** ಕೃಷ್ಣಾವತಾರ ಪ್ರಶ್ನೆ
4. **ಬ್ರೂಹಿ ನಃ ಶ್ರದ್ದಧಾನಾನಾಂ**- ಯಶೋವಿಷಯ ಪ್ರಶ್ನೆ
5. **ಅಥಾಖ್ಯಾಹಿ ಹರೇ ಧೀಮನ್**- ಅವತಾರಾಂತರ ಪ್ರಶ್ನೆ
6. **ಬ್ರೂಹಿ ಯೋಗೇಶ್ವರೇ**- ಧರ್ಮವಿಷಯ ಪ್ರಶ್ನೆ

ಇವುಗಳಿಗೆ ಜ್ಞಾನಿಗಳಾದ ತಾವು ಉತ್ತರವನ್ನು ನೀಡಬೇಕು ಎಂದು ಸೂತರನ್ನು ಪ್ರಾರ್ಥಿಸಿದರು.

**ಶ್ರೀಮದ್ಭಾಗವತದ ಮಂಗಲಪದ್ಯ-**

**ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮಹೃದಾಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥೧॥**

**ಅನ್ವಯಾತ್** 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯೇನ ಜಾತಾನಿ ಜೀವಂತಿ' ಇವೇ ಮೊದಲಾದ ಶ್ರುತಿಗಳಿಂದ 'ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ' 'ದ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು' ಇವೇ ಮೊದಲಾದ ಸ್ಮೃತಿಗಳಿಂದ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಎಂಬ ತಾತ್ಪರ್ಯನಿರ್ಣಾಯಕ ಲಿಂಗಗಳಿಂದ ವಿಚಾರಮಾಡಿದಾಗ ಗುಣಪೂರ್ಣನಾದ ನಾರಾಯಣನೇ ಜಗತ್ಕಾರಣನೆಂದು ತಿಳಿದು ಬರುವುದರಿಂದ ವೇದಗಳಿಂದಲೂ, ಆದಿಕಾಲೀನಚೇತನಾಚೇತನಾತ್ಮಕಂ ಜಗತ್ ಚೇತನಪೂರ್ವಕಂ ಕಾರ್ಯತ್ವಾತ್ ಪುತ್ರವತ್ ಎಂಬ ಅನ್ವಯಾನುಮಾನದಿಂದಲೂ, ಸಾಮಾನ್ಯವಾಗಿ ಚೇತನನೊಬ್ಬ ಕಾರಣನೆಂದು ಸಿದ್ಧವಾಗಲು ಉಳಿದ ಚೇತನರಲ್ಲಿ ಅದು ಅಸಂಭಾವಿತವಾದ್ದರಿಂದ ಪರಿಶೇಷತಃ ಶ್ರೀಮನ್ನಾರಾಯಣನೇ ಜಗತ್ಕರ್ತೃವೆಂದು ಸಿದ್ಧವಾಗುವುದರಿಂದ, **ಇತರತಃ** ಪ್ರತ್ಯಕ್ಷ ಅಥವಾ ಆಗಮಪ್ರಮಾಣಗಳಿಗೆ ಅನುಗುಣವಾದ, ಮೇಲೆ ಹೇಳಿದ ಅನುಮಾನ ಪ್ರಮಾಣದಿಂದಲೂ, ಲಕ್ಷ್ಮೀಬ್ರಹ್ಮಾದಿ ಪ್ರತ್ಯಕ್ಷದಿಂದಲೂ, ವ್ಯತಿರೇಕಾನುಮಾನ-



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

## ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹ ಸಂದೇಶ''

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥**

ಎಂಬ ಉಕ್ತಿಯಂತೆ ಧರ್ಮದ ರಕ್ಷಣೆಗಾಗಿ ಅವತರಿಸಿದ ಶ್ರೀಕೃಷ್ಣನ ಪ್ರತಿಮೆಯಂತಿರುವ, ಅಜ್ಞಾನಾಂಧಕಾರಕ್ಕೆ ಸೂರ್ಯನಂತೆ ಇರುವ 'ಶ್ರೀಮದ್ಭಾಗವತ' ಗ್ರಂಥದ ಒಂದು ಶ್ಲೋಕದ ಅರ್ಧಭಾಗವನ್ನು ಅಥವಾ ಪಾದವನ್ನು ಪಠಿಸಿದರೂ ಮಹಾಫಲವಿದೆ. ಆದರೆ ಅರ್ಥಾನುಸಂಧಾನವಿದ್ದಾಗ ಮಾತ್ರ ಅಧಿಕವಾದ ಲಾಭ. ಆದರೆ ಭಾಗವತದ ಒಂದೊಂದು ಶ್ಲೋಕಗಳೂ ಕಬ್ಬಿಣದ ಕಡಲೆಗಳಂತೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯ, ವಿಜಯಧ್ವಜತೀರ್ಥರು, ಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀನಿವಾಸತೀರ್ಥರೇ ಮೊದಲಾದವರ ವ್ಯಾಖ್ಯಾನಗಳ ಉಪಕಾರವಿಲ್ಲದೇ ಶ್ರೀಮದ್ಭಾಗವತ ಅರ್ಥವಾಗುವುದು ಅಸಾಧ್ಯ. ಈ ನಿಟ್ಟಿನಲ್ಲಿ ಶ್ರೀಮದ್ಭಾಗವತ ಹಾಗೂ ಶ್ರೀಮದ್ಭಾಗವತತಾತ್ಪರ್ಯಕ್ಕೆ ಉಪಲಬ್ಧವಿರುವ ಮುದ್ರಿತ ಹಾಗು ಅಮುದ್ರಿತ ಸಕಲಟೀಕಾಟಿಪ್ಪಣಿಗಳ ಅಭಿಪ್ರಾಯಗಳನ್ನು ಹಾಗು ಅದಕ್ಕನುಗುಣವಾಗಿ ಶ್ರೀಮದ್ಭಾಗವತದ ಪದಪದಾರ್ಥ ಹಾಗು ವಿಶೇಷಾರ್ಥಗಳನ್ನು ಭಾಗವತದ ಅಧ್ಯಯನ ಹಾಗು ಪಾಠಪ್ರವಚನಾಸಕ್ತರಾದ ಎಲ್ಲ ಜಿಜ್ಞಾಸುಗಳಿಗೆ ತಿಳಿಸುವುದಕ್ಕಾಗಿ ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ, ನಿರಂತರ ಸುಧಾ, ವ್ಯಾಸತ್ರಯ, ದ್ವೈತದ್ಯುಮಣ್ಯಾದಿಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ **ಶ್ರೀಗುತ್ತಲ ಆಚಾರ್ಯರವರು** (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡುತ್ತಾ ಬಂದಿದ್ದಾರೆ. ಈಗಾಗಲೇ ಸಮಗ್ರವಾದ ಭಾಗವತದ ಅನುವಾದಕಾರ್ಯವು ಸಂಪನ್ನವಾಗಿದೆ. ಅನೇಕ ಆಸಕ್ತ ವಿದ್ವಾಂಸರು ಹಾಗು ಲೌಕಿಕ ಜಿಜ್ಞಾಸುಗಳು ಇವುಗಳ ಅಧ್ಯಯನದಿಂದ

ವಿಶೇಷ ಲಾಭವಾಗಿದೆ ಎಂಬುದಾಗಿ ಮುಕ್ತಕಂಠದಿಂದ ಹೇಳುತ್ತಿದ್ದಾರೆ. ಎಷ್ಟೋ ವ್ಯಾಖ್ಯಾನಗಳು ಮುದ್ರಿತವೇ ಆಗಿಲ್ಲ. ಮುದ್ರಿತವಾದ ವ್ಯಾಖ್ಯಾನಗಳಲ್ಲಿ ಮುದ್ರಣದೋಷಗಳು ಸಾಕಷ್ಟು ಇರುತ್ತವೆ. ಇವುಗಳೆಲ್ಲವನ್ನು ಸರಿಪಡಿಸಿಕೊಂಡು ಓದುವಷ್ಟು ಅವಧಾನ-ಅನುಕೂಲತೆಗಳು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಬಹಳ ಪರಿಶ್ರಮಪೂರ್ವಕವಾಗಿ ಆ ಎಲ್ಲ ವ್ಯಾಖ್ಯಾನಗಳನ್ನು ಶೋಧಿಸಿ ಏಕತ್ರ ಸಂಗ್ರಹಿಸಿ ಮಾಡಿದ ಈ ಅನುವಾದಕಾರ್ಯವು ನಿಜಕ್ಕೂ ಲಾಭದಾಯಕವಾಗುವಲ್ಲಿ ಸಂದೇಹವಿಲ್ಲ. ಉಪವಾಸ, ಸಭೆ-ಸಮಾರಂಭ ಯಾವುದೇ ಪ್ರಸಂಗವಿರಲಿ ಹಗಲಿರುಳೆನ್ನದೆ ಈ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದೊಂದು ಭಗವಂತನಿಗೆ ಅತ್ಯಂತ ಪ್ರೀತಿಕರವಾದ ತಪಸ್ಸು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ಪ್ರಥಮಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನ ವತಿಯಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಸಂಪುಟದ ಸಹ ಸಂಪಾದನಾಕಾರ್ಯವನ್ನು ನಮ್ಮ ಶಿಷ್ಯರಾದ ಪಂ. ಬಿ. ಆರ್ ವೆಂಕಟೇಶಾಚಾರ್ಯರು ವಿಶೇಷ ಶ್ರದ್ಧೆಯಿಂದ ಮಾಡಿದ್ದಾರೆ. ಅವರಿಗೂ ಭಗವಂತ ವಿಶೇಷ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನೀಡಿ ಇದೇ ತರಹದ ವೇದವ್ಯಾಸದೇವರ ಸೇವೆ ಅವರಿಂದ ನಡೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

**ವಿಜಯ ಚೈತ್ರ ಶುದ್ಧ ಪ್ರತಿಪದಾ**
೧೧-೦೪-೨೦೧೩

# ಮುನ್ನುಡಿ

ಭಗವದ್ಭಕ್ತಿಯ ಮಹಾಪೂರದಿಂದ ಮೈದುಂಬಿ ಹರಿವ ನದಿಯೊಂದಿರುವುದಾದರೆ ಅದು ''ಭಾಗವತ ಮಹಾಪುರಾಣ'' ಈ ಭಾಗವತ ನದಿ ಅಪಾರವಾದ ಸಂಸಾರ ಸಾಗರಕ್ಕೆ ಸೇರಿತೆಂದರೆ ಈ ಸಾಗರ ಒಣಗುವುದು ಖಂಡಿತ. ಭೋರ್ಗರೆಯುವ ಈ ಭಾಗವತನದಿ ನಮ್ಮ ಜೀವನದಲ್ಲಿ ಒಮ್ಮೆಯಾದರೂ ನಮ್ಮ ಅಂತರಂಗವನ್ನು ಬಾಚಿ, ಬಳಸಿ, ಉಬ್ಬಿ ತಬ್ಬಿ, ಹರಿಯಿತೆಂದರೆ, ತನು-ಮನಗಳಲ್ಲಿ ಆನಂದೋತ್ಸಾಹಗಳ ಫಸಲು ಬರುವುದರಲ್ಲಿ ಇನಿತೂ ಸಂದೇಹವಿಲ್ಲ.

ಪರಿಶುದ್ಧ ಜೀವನಕ್ಕೆ ಅತ್ಯವಶ್ಯಕವಾದ ಬೆಳಕಿನ ಹೊನಲು, ಬದುಕಿನ ಬೇಸಿಗೆಯಲ್ಲಿ ಬರುವ ವಸಂತ, ಬರಡು ಬದುಕಿಗೊಂದು ಚೈತನ್ಯದ ಚಿಲುಮೆ ಈ ಭಾಗವತ. ನಮ್ಮ ಮನಸ್ಸಿನ ಕೊಳೆಯೆಂಬ ಕಳೆಯನ್ನು ಕಿತ್ತಿ ಭಗವದ್ಭಕ್ತಿಯ ಬೀಜವನ್ನು ಬಿತ್ತಲು ಅನಿವಾರ್ಯವಾದದ್ದು ಭಾಗವತ ಕೃಷಿ. ಆತ್ಮಸಂದೇಶವನ್ನು ಹೊತ್ತ ಓಲೆಯ ವಿಸ್ತೃತ ರೂಪ.

ಇಂತಹ ಭಾಗವತದ ವ್ಯಾಖ್ಯಾನವನ್ನು ಮಾಡುವುದರಲ್ಲಿಯೇ ಸಾರ್ಥಕತೆಯನ್ನು ಕಂಡವರು ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀಶ್ರೀನಿವಾಸತೀರ್ಥರು ಮುಂತಾದ ಮಹನೀಯರು. ಮಹಾಮೇಧಾವಿಗಳಾದ ಇವರ ಪ್ರತಿಭೆಯೂ ಪ್ರಕಾಶಕ್ಕೆ ಬಂದದ್ದು ಈ ಭಾಗವತ ವ್ಯಾಖ್ಯಾನವೆಂಬ ಕಾಯಕವನ್ನು ಕೈಗೊಂಡದ್ದರಿಂದಲೇ ಎಂದರೆ ತಪ್ಪಾಗಲಾರದು. ಇಂತಹ ಭಾಗವತವನ್ನು ಕನ್ನಡದಲ್ಲಿ ಅನುವಾದಿಸಲು ಅವಕಾಶವನ್ನು ಕರುಣಿಸಿದ ಆ ಭಗವಂತನಿಗೆ ನನ್ನ ಅನಂತ ನಮನಗಳು. ನನ್ನ ಪಾಲಿಗೆ ಇದರ ಅನುವಾದವೆಂಬುದು ಬಹು ಜನ್ಮದ ತಪಸ್ಸಿನ ಫಲ. ಬಾಳಿನಲ್ಲಿ ದೊರಕಬಹುದಾದಂತಹ ಅಪರೂಪದ ಸುಯೋಗ. ಈ ಸುಯೋಗ ನನಗೆ ಒದಗಿ ಬಂದದ್ದು ನನ್ನ ಅದೃಷ್ಟದ ಪರಿಪಾಕವೇ ಸರಿ ಎಂಬುದಾಗಿ ಭಾವಿಸುವೆ.

ಪ್ರಕೃತ ಭಾಗವತ ಪ್ರಥಮ ಸ್ಕಂಧವನ್ನು ಜನರ ಮುಂದಿರಿಸಲು ಮನಸ್ಸು ಮುದಗೊಳ್ಳುತ್ತಿದೆ. ಈ ಗ್ರಂಥದ ಸಂಪಾದನಾಕಾರ್ಯದಲ್ಲಿ ವಿಶೇಷಪರಿಶ್ರಮ ವಹಿಸಿದ ಶ್ರೀ.ಪಂ. ವೆಂಕಟೇಶಾಚಾರ್ಯ ಬಿ.ಆರ್ ಇವನಿಗೆ ಕುಲಸ್ವಾಮಿ ತೊರವೆಯ ನಾರಸಿಂಹನು ಆಯುರಾರೋಗ್ಯಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಆದರಂತೆ ಈ ಪುಸ್ತಕಕ್ಕೆ ಸುಂದರ ರೂಪವನ್ನು ಕೊಟ್ಟ ಪಂ. ಮಹಿದಾಸಾಚಾರ್ಯ ಜೋಶಿ ಇವನಿಗೆ, ಸುಂದರಮುಖಪುಟದ ವಿನ್ಯಾಸವನ್ನು ಮಾಡಿದ ಶ್ರೀ ಗೋಪಾಲಕೃಷ್ಣನಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ, ಯಾವ ಗುರುಗಳ ಅನುಗ್ರಹದಿಂದ ನನಗೆ ಈ ಅನುವಾದ ಸಾಮರ್ಥ್ಯವು ಬಂದಿತೋ ಅಂತಹ ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಅಡಿದಾವರೆಯಲ್ಲಿ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ಹಾಗೆಯೇ ಯಾವ ಗುರುಗಳ ಆಶೀರ್ವಾದ ಬಲದಿಂದಾಗಿ ಈ ನನ್ನ ಅನುವಾದ ಕಾರ್ಯವು ಸಾಂಗವಾಗಿ ನೆರವೇರಿತೋ ಅಂತಹ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥರ ಪಾದಾರವಿಂದಗಳಿಗೂ ಸಭಕ್ತಿ ಅನಂತ ನಮನಗಳನ್ನು ಸಲ್ಲಿಸಿ ಇನ್ನು ಮುಂದೆ ನನ್ನಿಂದ ಹೀಗೆಯೇ ಸತ್ಕರ್ಮಗಳನ್ನು ಮಾಡಿಸಲೆಂದು ಮದ್ಗುರ್ವಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುವ

ಭಾಗವತಜನಸೇವಕ
ಪಂ.ರಂಗಾಚಾರ್ಯ ಗುತ್ತಲ

ವಿಜಯ ಚೈತ್ರ ಶುದ್ಧ ಪ್ರತಿಪದಾ
೧೧-೦೪-೨೦೧೩

# ಪ್ರಕಾಶಕರ ನುಡಿ

ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **''ವಿಶ್ವಮಧ್ವಮಹಾಪರಿಷತ್''**

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಆ ದೃಷ್ಟಿಯಲ್ಲಿ ಅನೇಕ ಮಹತ್ವದ ಪುಸ್ತಕಗಳನ್ನು ಪ್ರಕಾಶಿಸಿದೆ. ಅದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಸಮಗ್ರ ಶ್ರೀಮದ್ಭಾಗವತದ ಕನ್ನಡ ಅನುವಾದವನ್ನು ಅನೇಕ ವ್ಯಾಖ್ಯಾನಗಳ ವಿಶೇಷ ಅಂಶಗಳೊಂದಿಗೆ ಮಾಡಿದ್ದಾರೆ. ಈಗಾಗಲೇ 2, 3, 4, 6, 9, 10, 11, 12 ಈ ಸ್ಕಂಧಗಳ ಪ್ರಕಾಶನವನ್ನು ಮಾಡಿ ಪರಿಷತ್ತು ಸಜ್ಜನರ ಮುಂದಿಟ್ಟಿದೆ. ಈಗ **''ಶ್ರೀಮದ್ಭಾಗವತದ ಪ್ರಥಮಸ್ಕಂಧ''**ವನ್ನು ಜಿಜ್ಞಾಸುಗಳ ಮುಂದಿಡುತ್ತಿದ್ದೇವೆ. ಎಲ್ಲ ಪುಸ್ತಕಗಳಂತೆ ಇದನ್ನೂ ತಾವು ಸ್ವಾಗತಿಸುತ್ತೀರಿ ಎಂದು ನಂಬಿದ್ದೇವೆ.

ಪ್ರಧಾನ ಕಾರ್ಯದರ್ಶಿಗಳು<br>
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ<br>
ಬಸವನಗುಡಿ ಬೆಂಗಳೂರು - 4

## ವಿಷಯಾನುಕ್ರಮಣಿಕಾ

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಪ್ರಥಮೋಽಧ್ಯಾಯಃ

**ಪ್ರಥಮಾಧ್ಯಾಯದ ಸಾರಾಂಶ**

ಕಲಿಕಾಲದಿಂದ ಬರುವ ಪಾಪಗಳ ಪರಿಹಾರಕ್ಕಾಗಿ ಬ್ರಹ್ಮ-ರುದ್ರಾದಿ ದೇವತೋತ್ತಮರಿಂದ ಪ್ರಾರ್ಥಿತನಾದ ಭಗವಂತನು ದೈತ್ಯರ ಭಾರದಿಂದ ಬಹಳ ದುಃಖಿತಳಾದ ಭೂದೇವಿಯನ್ನು ಸಂತೋಷಪಡಿಸಲು ಸತ್ಯವತಿಯಲ್ಲಿ ವೇದವ್ಯಾಸ ರೂಪದಿಂದ ಅವತರಿಸಿದನು. ವ್ಯಾಸರೂಪದಿಂದ ಶ್ರೀಹರಿಯು ಸಮಸ್ತವೇದಗಳೆಂಬ ಕಲ್ಪವೃಕ್ಷವನ್ನು ಉದ್ಧರಿಸಿ ಅಲ್ಪಮತಿಗಳಾದ ಸಜ್ಜನರಲ್ಲಿಯ ದಯೆಯಿಂದ ಆ ವೇದಗಳನ್ನು ಶಾಖೋಪಶಾಖೆಗಳಾಗಿ ವಿಭಾಗಗೈದು ಅದರ ಅರ್ಥ ನಿರ್ಣಯಿಸಲು ಬ್ರಹ್ಮಸೂತ್ರಗಳನ್ನು ರಚಿಸಿದನು. ವೇದಮೀಮಾಂಸಾಗಳಲ್ಲಿ ಅಧಿಕಾರವಿಲ್ಲದ ಜನರಿಗೆ ಮೋಕ್ಷಕ್ಕಾಗಿ ಪುರಾಣಗಳನ್ನೂ ರಚಿಸಿದನು. ಕಾಲದೋಷದಿಂದ ಮರೆಯಾದ ಭಾಗವತ ಧರ್ಮಗಳನ್ನು ಆವಿಷ್ಕರಿಸಲು ಹದಿನೆಂಟು ಸಾವಿರ ಸಂಖ್ಯಾಕವಾದ, (ಗ್ರಂಥ)ಹನ್ನೆರಡು ಸ್ಕಂಧಗಳುಳ್ಳ, ವೇದಾರ್ಥವನ್ನು ಪ್ರಕಾಶಗೊಳಿಸುವ ಶ್ರೀಮದ್ಭಾಗವತ ಸಂಹಿತೆಯನ್ನು ಬರೆಯಲು ಇಚ್ಛೆಯುಳ್ಳವರಾಗಿ ಶ್ರೀವೇದವ್ಯಾಸದೇವರು ಶಿಷ್ಯಶಿಕ್ಷೆಗಾಗಿ ಮತ್ತು ಮಂಗಳಾಚರಣ ಮುಂತಾದ ಅನೇಕ ಪ್ರಯೋಜನಕ್ಕಾಗಿ ಸರ್ವೇಷ್ಟದೇವತೆಯಾದ ನಾರಾಯಣನನ್ನು ಸ್ಮರಿಸುವರು.

ಒಂದು ದೀಪದಿಂದ ಅನೇಕ ದೀಪಗಳು ಬೆಳಗುವಂತೆ ಅವನ ಮೂಲರೂಪದಿಂದ ಅನಂತರೂಪಗಳು ಜಗತ್ತಿನಲ್ಲಿ ಬೆಳಗುತ್ತವೆ. ಸೂರ್ಯನೇ ಮೊದಲಾದ ತೇಜಃ ಪದಾರ್ಥಗಳಿಗೆ ನೀರೇ ಮೊದಲಾದ ಉಪಾಧಿಗಳನ್ನು ನಿಮಿತ್ತ ಮಾಡಿಕೊಂಡು ಅನೇಕ

ದಿಂದಲೂ,(ಮೇಲೆ ಹೇಳಿದ ಅನುಮಾನದಲ್ಲಿಯೇ ಯತ್ ಚೇತನಪೂರ್ವಕಂ ನ ಭವತಿ ತತ್ ಕಾರ್ಯಂ ನ ಭವತಿ ಯಥಾ ನಿತ್ಯಪದಾರ್ಥಃ ಎಂದು ವ್ಯತಿರೇಕವ್ಯಾಪ್ತಿ ಹೇಳಿದಾಗ ವ್ಯತಿರೇಕಾನುಮಾನವಾಗುವುದು.) **ಅಸ್ಯ** ಪ್ರಮಾಣಗಳಿಂದ ಸಿದ್ಧವಾದ ಸತ್ಯವಾದ ಈ ರಮಾಬ್ರಹ್ಮಾದಿಚೇತನಾಚೇತನಾತ್ಮಕ ಜಗತ್ತಿನ **ಜನ್ಮಾದಿ** ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು(ಆ ಆ ಪದಾರ್ಥಕ್ಕೆ ತಕ್ಕಂತೆ ಎಲ್ಲವೂ ಅಥವಾ ಕೆಲವು)**ಯತಃ** ಯಾವ ವಿಷ್ಣುವಿನಿಂದ ಆಗುತ್ತವೆಯೋ **ಯಶ್ಚ** ಯಾವ ವಿಷ್ಣುವು **ಅರ್ಥೇಷು** ತನ್ನಿಂದ ಸೃಜ್ಯವಾದ ಪ್ರಕೃತ್ಯಾದಿ ಘಟ-ಪಟ-ಜೀವ ಮೊದಲಾದವುಗಳ **ಅಭಿಜ್ಞಃ** ಸರ್ವ ರೀತಿಯ ತಿಳುವಳಿಕೆಯುಳ್ಳವನಾದ್ದರಿಂದ ಸರ್ವಜ್ಞನೋ, **ಯಶ್ಚ** ಯಾವ ವಿಷ್ಣುವು **ಸ್ವರಾಟ್** 1.ಸ್ವತಃ ಪ್ರಕಾಶಿಸುವನೋ 2.ತನಗೇ ತಾನೇ ರಾಜನೋ 3.ತನಗೆ ಕಾರಣನಾದ ರಾಜನಿಲ್ಲದವನೋ 4.ತನ್ನನ್ನು ತನ್ನ ಇಚ್ಛೆಯಿಂದಲೇ ಪ್ರಕಾಶಪಡಿಸುವವನೋ **ಯಶ್ಚ** ಯಾವನು **ಆದಿಕವಯೇ** ಸರ್ವಜಗತ್ತಿಗೆ ಗುರುವಾದ ಚತುರ್ಮುಖಬ್ರಹ್ಮನಿಗೆ **ಬ್ರಹ್ಮ** ಷಡಂಗ ಸಹಿತವಾದ ವೇದರೂಪ ಶಬ್ದರಾಶಿಯನ್ನು, ಅವೆಲ್ಲವುಗಳ ಅರ್ಥನಾದ ಪರಬ್ರಹ್ಮನನ್ನೂ **ಹೃದಾ** ಸ್ನೇಹದಿಂದ, ಅನುಗ್ರಹ ಪೂರ್ವಕವಾಗಿ **ತೇನೇ** ವಿಸ್ತಾರ ಪಡಿಸಿದನೋ, ಉಪದೇಶಿಸಿದನೋ **ಯಂ** ಯಾವನ ವಿಷಯದಲ್ಲಿ **ಸೂರಯಃ** ಹಿಂದಿನ ಮುಂದಿನ ಈಗಿನ ಕಲ್ಪಗಳ ಬ್ರಹ್ಮದೇವರೇ ಮೊದಲಾದ ಜ್ಞಾನಿಗಳೂ ಸಹ **ಮುಹ್ಯಂತಿ** ಅವನ ಅನುಗ್ರಹವಿಲ್ಲದೆ ಜ್ಞಾನವನ್ನು ಹೊಂದಲಾರರೋ **ಯತ್ರ** ಯಾವನ ವಿಷಯದಲ್ಲಿ **ತೇಜೋವಾರಿ ಮೃದಾಂ** ಬೆಂಕಿ ನೀರು ಮತ್ತು ಮಣ್ಣುಗಳ **ವಿನಿಮಯಃ** ಕಾರ್ಯವು **ಯಥಾ** ಹೇಗೆ ಸತ್ಯವೋ **ತಥಾ** ಹಾಗೆ ಸತ್ಯವಾದ **ತ್ರಿಸರ್ಗಃ** ಈಶ್ವರ, ಜೀವ, ಜಡ ಸೃಷ್ಟಿಯೆಂಬ ಮೂರು ಬಗೆಯ ಸೃಷ್ಟಿಯು **ಮೃಷಾ** ವ್ಯರ್ಥ(ಹಿಂದೆ ಪಡೆಯದ ಯಾವ ಹೊಸ ಪ್ರಯೋಜನವನ್ನು ತಂದು ಕೊಡಲಾರದೋ ಅಂತಹ ಪರಮಾತ್ಮನ ವಿಷಯದಲ್ಲಿ ಮಾತ್ರ ಮೃಷಾ)ಅವನಿಂದ ಭಿನ್ನರಾದ ಜೀವಜಡಗಳಿಗೆ ಈ ಮೂರು ಸೃಷ್ಟಿಗಳು **ಅಮೃಷಾ** ಸಾರ್ಥಕವೇ(ಅಂದರೆ ಹಿಂದೆ ಹೊಂದದ ಹೊಸ ಪ್ರಯೋಜನವನ್ನು ಹೊಂದುವವೋ) **ತಂ** ಅಂತಹ **ಸ್ವೇನ ಧಾಮ್ನಾ** ತನ್ನ ಸ್ವರೂಪಜ್ಞಾನದ ಮಹಿಮೆಯಿಂದ **ಸದಾ** ಯಾವಾಗಲೂ **ನಿರಸ್ತಕುಹಕಂ** ಇಂದ್ರಜಾಲಾದಿಮಾಯೆಗಳಿಂದ ದೂರನಾದ, ಸಮಸ್ತದೋಷದೂರನಾದ **ಸತ್ಯಂ** ನಿರ್ದುಃಖ ನಿತ್ಯನಿರತಿಶಯಾನಂದಾನುಭವಸ್ವರೂಪಿಯಾದ **ಪರಂ** ಸಕಲ

ಜಗದ್ವಿಲಕ್ಷಣನಾದ,(ಭಿನ್ನನಾದ)ನಾರಾಯಣನನ್ನು **ಧೀಮಹಿ** ಶ್ರವಣ ಮನನ ನಿದಿಧ್ಯಾಸನದಿಂದ ಉಪಾಸನೆಮಾಡೋಣ.

**ಶ್ಲೋಕದ ತಾತ್ಪರ್ಯ**

ಉಪಕ್ರಮಾದಿತಾತ್ಪರ್ಯಯುಕ್ತಿಗಳಿಂದ ಸಹಿತವಾದ ಶ್ರುತಿಸ್ಮೃತಿಯನ್ನು ವಿಚಾರ ಮಾಡಲಾಗಿ ಸರ್ವಜಗತ್ಸ್ರಷ್ಟೃವಾದ, ಸರ್ವಜ್ಞನಾದ, ಅನನ್ಯಾಧಿಪತಿಯಾದ, ಆದ್ದರಿಂದಲೇ ಚತುರ್ಮುಖನಿಗೆ ಜ್ಞಾನೋಪದೇಶಕನಾದ ತನ್ನ ಅನುಗ್ರಹವಿಲ್ಲದೆ ತಿಳಿಯಲಾಗದವನಾದ, ಪ್ರಯೋಜನವಿಲ್ಲದೆ ಕೇವಲ ಲೀಲಾರೂಪವಾಗಿ ಜಗತ್ ಸೃಷ್ಟ್ಯಾದಿಪ್ರವೃತ್ತಿವುಳ್ಳವನಾದ ಸ್ವತಃ ಏವ ನಿತ್ಯದಲ್ಲಿ ನಿರಸ್ತಇಂದ್ರಜಾಲನಾದ, ಸತ್ಯಮಹಿಮನಾದ, ನಿತ್ಯನಿರ್ದುಃಖನಿರತಿಶಯಾನಂದಾನುಭವರೂಪನಾದ, ಸರ್ವಗುಣಪೂರ್ಣನಾದ ವಿಷ್ಣುವು ಎಲ್ಲರಿಂದ ಧ್ಯೇಯನು.

***ಪ್ರಥಮಶ್ಲೋಕದ ವ್ಯಾಖ್ಯಾನವಿಶೇಷಗಳು***

ಯತ್ ತತ್ ಶಬ್ದಗಳ ಅಧ್ಯಾಹಾರ

ಇಲ್ಲಿ ಯಚ್ಛಬ್ದವಿರುವುದರಿಂದ ತಚ್ಛಬ್ದಾಧ್ಯಾಹಾರ ಮಾಡಬೇಕು.

**ಅಸ್ಯ ಜಗತಃ ಜನ್ಮಾದಿ ಯತಃ, ಯಶ್ಚ ಅರ್ಥೇಷು ಅಭಿಜ್ಞಃ, ಯಶ್ಚ ಸ್ವರಾಟ್, ಯಶ್ಚ ಬ್ರಹ್ಮಹೃದಾಯ ಆದಿಕವಯೇ ತೇನೇ, ಯಂ ಪ್ರತಿ ಸೂರಯಃ ಮುಹ್ಯಂತಿ । ತೇಜೋವಾರಿಮೃದಾಂ ವಿನಿಮಯಃ ಯಥಾ ತಥಾ ತ್ರಿಸರ್ಗಃ ಅಪಿ ಯತ್ರ ಮೃಷಾ ತಂ ಸ್ವೇನ ಧಾಮ್ನಾ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ಎಂದು ಅಖಂಡಾನ್ವಯ.**

**ಅಧಿಕೃತ ಹಾಗೂ ಅಭೀಷ್ಟದೇವತೆಗಳನ್ನು ತಿಳಿಸುವ ಪರಶಬ್ದ**

ಮೊದಲಿಗೆ **ಪರಂ ಧೀಮಹಿ** ಎಂದು ಅಖಂಡಾನ್ವಯ. ನಂತರ ಆಕಾಂಕ್ಷಾಕ್ರಮದಿಂದ ಎಲ್ಲ ಪದಗಳಿಗೆ ಅನ್ವಯ. **ಪರಂ**-ಗುಣಪೂರ್ಣನಾದ ಭಗವಂತನನ್ನು ಎಂದರ್ಥ. ಗ್ರಂಥಾರಂಭದಲ್ಲಿ ಅಧಿಕೃತದೇವತಾ ನಮಸ್ಕಾರ ವಿಹಿತವಾಗಿದೆ. ಜ್ಯೋತಿಶ್ಶಾಸ್ತ್ರದಲ್ಲಿ ಸೂರ್ಯಾದಿಗ್ರಹರೂಪದೇವತೆಯು ಅಧಿ ಕೃತವಾದುದು ಪರಮ ಪ್ರೇಮಕ್ಕೆ ವಿಷಯವಾದುದು ಆದುದರಿಂದ ನಮನಾರ್ಹ. ಭಗವಂತನಾದರೂ ಅಧಿಕೃತ ಮತ್ತು ಅಭೀಷ್ಟನೂ ಆಗಿರುವನು ಎಂಬ ಅಭಿಪ್ರಾಯದಿಂದ **ಪರಂ** ಎಂದು ಹೇಳಿರುವರು. ಪರಮಾತ್ಮನಾದರೂ ಸಂಸಾರವನ್ನು

ಪರಿಹರಿಸಲು ಈ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಡುವನು. (ಅದೇ ಅಧಿಕೃತತತ್ವವು) **'ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ಅನ್ಯಸ್ಮಾತ್ ಸರ್ವಸ್ಮಾತ್ ಅಂತರತರಂ ಯದಯಮಾತ್ಮಾ'** ಎಂದು ಶ್ರುತಿ ಇರುವದರಿಂದ ನಾರಾಯಣನೇ ಪರಮ ಪ್ರೇಮ ವಿಷಯನು ಸರ್ವೋತ್ತಮನು.

**ಯದೇತತ್ ಪರಮಂ ಬ್ರಹ್ಮ ವೇದವಾದೇಷು ಪಠ್ಯತೇ ।**
**ಸ ದೇವಃ ಪುಂಡರೀಕಾಕ್ಷಃ ಸ್ವಯಂ ನಾರಾಯಣಃ ಪರಮ್ ॥**

ಎಂದು ಹರಿವಂಶದಲ್ಲಿ ಸತ್ಯತಪ ಪ್ರಶ್ನೋತ್ತರರೂಪದಲ್ಲಿ ದೂರ್ವಾಸರು ಪರಮಪುರುಷನಾರಾಯಣನೆಂದು ಹೇಳಿದ್ದಾರೆ. 'ಬ್ರಹ್ಮವಿದಾಪ್ನೋತಿ ಪರಂ' ಎಂದು ಶ್ರುತಿಯೂ ಇದೆ. ಆದ್ದರಿಂದ ಅಂತಹ ಭಗವಂತನನ್ನು **ಧೀಮಹಿ** ಧ್ಯಾನ ಮಾಡೋಣ.

**ಪರಶಬ್ದೋಕ್ತ ಗುಣಗಳು**

**'ಜನ್ಮಾದ್ಯಸ್ಯ ಯತಃ'** ಮುಂತಾದ ವಿಶೇಷಣಗಳಿಂದ ಪರಶಬ್ದೋಕ್ತಗುಣಗಳನ್ನು ತಿಳಿಸುವರು. 'ಪೃ ಪಾಲನಪೂರಣಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾದ ಪರಶಬ್ದಕ್ಕೆ ಪಾಲನ ಪೂರಣ ಎಂಬ ಅರ್ಥಗಳಿವೆ. ಈ ಪಾಲನ ಪೂರಣಗಳಿಂದ ಸೃಷ್ಟ್ಯಾದಿಗಳನ್ನು ಊಹಿಸಬೇಕು. ಅಲೌಕಿಕ ವಸ್ತುವು ಮೊಲದ ಕೋಡಿನಂತೆ ಲಕ್ಷಣ ಹೇಳದೇ ತಿಳಿಯದು. ಕಾರಣ ಲಕ್ಷಣ ಹೇಳುವರು. **ಜನ್ಮಾದ್ಯಸ್ಯ ಯತಃ** ಎಂದು. **ಅಸ್ಯ** ಪ್ರತ್ಯಕ್ಷಾದಿಪ್ರಮಾಣಸಿದ್ಧವಾದ ಜಗತ್ತಿಗೆ **ಜನ್ಮಾದಿ** ಸೃಷ್ಟಿಸ್ಥಿತಿಸಂಹಾರ ನಿಯಮನಜ್ಞಾನಾಜ್ಞಾನಬಂಧಮೋಕ್ಷಗಳು **ಯತಃ** ಯಾವನಿಂದ **ಭವತಿ** ಆಗುವದೋ **ತತ್** ಅವನು ಬ್ರಹ್ಮ. ಈ ರೀತಿ ಲಕ್ಷಣ ಜ್ಞಾನವಾದಾಗ ಜಗಜ್ಜನ್ಮಾದಿಕಾರಣನಾದವನು ಜೀವರಿಂದ ಭಿನ್ನನೆಂದು ತಿಳಿಯುವನು. ಜನ್ಮಾದಿಕರ್ತೃತ್ವವು ಪ್ರತ್ಯೇಕ ಲಕ್ಷಣಗಳೆಂದು ತಿಳಿಯಬೇಕು. ಶಾಸ್ತ್ರದಲ್ಲಿ ಹಾಗೆ ಹೇಳಿದೆ. ಪೂರ್ಣನಾದ ಬ್ರಹ್ಮನಿಗೆ ಜನ್ಮಾದಿ ಕಾರಣತ್ವವು ಏಕೆ ಎಂದರೆ **ಅನ್ವಯಾತ್** ಎಂದಿರುವರು.

'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ' ಮುಂತಾದ ಶ್ರುತಿಗಳು

'ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ ।
ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು ॥

ಮುಂತಾದ ಸ್ಮೃತಿಗಳು. ಇವುಗಳಿಗೆ ಜಗತ್ಕಾರಣನಾದ ಶ್ರೀಹರಿಯಲ್ಲಿ ಉಪಕ್ರಮೋಪಸಂಹಾರ ಮುಂತಾದ ತಾತ್ಪರ್ಯ ಲಿಂಗಗಳಿಂದ ಶಕ್ತಿತಾತ್ಪರ್ಯ ಲಕ್ಷಣ ಸಂಬಂಧವಿರುವದರಿಂದ ಪರಬ್ರಹ್ಮನೇ ಜಗತ್ಕಾರಣನು ಬೇರೆಯವರಲ್ಲವೆಂದು ಭಾವ.

**ರುದ್ರಾದಿಗಳಿಗೆ ಜಗತ್ಕಾರಣತ್ವವು ಕೂಡುವುದಿಲ್ಲ**

ರುದ್ರಾದಿಗಳಿಗೂ ಜಗತ್ಕಾರಣತ್ವವು ಅಲ್ಲಲ್ಲಿ ಹೇಳಲ್ಪಡುವುದು. ಕಾರಣ ಪರಬ್ರಹ್ಮನೇ ಜಗತ್ಕಾರಣನು ಎಂದು ನಿಶ್ಚಯಿಸುವುದು ಹೇಗೆ ಎಂದರೆ ವೇದೈಕದೇಶದಲ್ಲಿ ರುದ್ರಾದಿಗಳಿಗೆ ಕಾರಣತ್ವ ಹೇಳಿದಂತೆ ಕಂಡರೂ ಅನಂತವೇದಪ್ರತಿಪಾದ್ಯತ್ವ ವಿಷ್ಣುವಿಗೇ ಇದೆ. 'ಸರ್ವೇ ವೇದಾ ಯತ್ಪದಮಾಮನಂತಿ' ಎಂದೂ 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಎಂದು ಶ್ರುತಿಸ್ಮೃತಿಗಳಿರುವದರಿಂದ 'ನಾಮಾಣಿ ಸರ್ವಾಣಿ ಯಮಾವಿಶಂತಿ' 'ಯೋ ದೇವಾನಾಂ ನಾಮಧಾ ಏಕ ಏವ' ಎಂದು ಶ್ರುತಿ ಇರುವದರಿಂದ ಆ ಎಲ್ಲ ವಾಕ್ಯಗಳು ವಿಷ್ಣುವಿಗೆ ಕಾರಣತ್ವ ಹೇಳುವವು ಎಂದು ನಿರ್ಧರಿಸಲಾಗುವುದು.

**ಪರಮಾಣು ಪುಂಜವಾದ ನಿರಾಕರಣೆ**

ಶ್ರುತಿಗಳು ಪಿಪೀಲಿಕಾ ಲಿಪಿಯಂತೆ ಅಪ್ರಮಾಣವಾದುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ನಿಶ್ಚಯವಾಗಲಾರದು. ಕಾರಣ ಪರಮಾಣು ಪುಂಜವೇ ಜಗತ್ಕಾರಣ ಎಂಬ ಶಂಕೆಗೆ ಉತ್ತರ **ಇತರತಃ** ಎಂದು. ಪ್ರತ್ಯಕ್ಷ ಆಗಮಗಳ ಅನುಗ್ರಹವಿರುವ ತರ್ಕದಿಂದ ಪರಬ್ರಹ್ಮನಿಗೆ ಕಾರಣತ್ವ ತಿಳಿಯುವದು. 'ಓಂ ಸಮುದಾಯಉಭಯ ಹೇತುಕೇಽಪಿ ತದಪ್ರಾಪ್ತಿಃ ಓಂ ಎಂದು ಭಗವಾನ್ ಕೃಷ್ಣದ್ವೈಪಾಯನರು ಪರಮಾಣು ಪುಂಜವಾದವನ್ನು ನಿರಾಕರಿಸಿದ್ದಾರೆ. ಅವು ಕುತರ್ಕಗಳಷ್ಟೇ.

**ವಿಷ್ಣುವೇ ಜಗತ್ಕಾರಣ**

ಜಗದ್ರೂಪ ಕಾರ್ಯವು ಕಾರಣಪೂರ್ವಕವಾಗಿದೆ ಕಾರ್ಯವಾದ್ದರಿಂದ ಎಂಬ ಈ ಮಾತಿನಿಂದ ಕಾರಣವಿದೆ ಎಂದಿಷ್ಟೇ ಸಿದ್ಧವಾಗುವುದೇ ಹೊರತು ವಿಷ್ಣುವೇ ಕಾರಣ ಎಂಬ ವಿಶೇಷವು ಹೇಗೆ ಸಿದ್ಧಿಸುವುದು ಎಂದರೆ ನಿಜ. ಕಾರ್ಯತ್ವ ಹೇತುವಿನಿಂದ ಕಾರಣಮಾತ್ರ ಸಿದ್ಧವಾದರೂ ಪರಿಶೇಷದಿಂದ ವಿಶೇಷ ಸಿದ್ಧಿಯಾಗುವುದು. ಹೇಗೆಂದರೆ ಪ್ರಧಾನಾದಿಗಳು ಅಚೇತನಗಳಾದುದರಿಂದ ಬುದ್ಧಿಪೂರ್ವಕ ಕರ್ತೃತ್ವ ಕೂಡಲಾರದು. ಅವುಗಳಿಗೆ ಅಸ್ವತಂತ್ರತೆಯು ಇರುವುದರಿಂದ. ಕ್ಷಿತ್ಯಾದಿಗಳಿಗೆ ಚೇತನ ಕರ್ತೃತ್ವ ಪರಿಶೇಷಸಿದ್ಧವಾಗುವುದು. ಚೇತನನಾದ ತಂದೆಯಿಂದ ಮಗನ ಜನ್ಮವಾಗುವುದು

ಕಂಡದ್ದರಿಂದ ಆ ದೃಷ್ಟಾಂತದಿಂದ ಬ್ರಹ್ಮಾದಿಚೇತನರು ಪರಮ ಚೇತನನಾದ ವಿಷ್ಣುವಿನಿಂದ ಹುಟ್ಟುವರು. ಎಂದು ಸುಲಭವಾಗಿ ತರ್ಕಿಸಬಹುದು. ಚ ಶಬ್ದವು ಸಮುಚ್ಚಯಾರ್ಥಕವು. ವೇದಗಳು ಅಪೌರುಷೇಯಗಳಾದುದರಿಂದ ಅಸಂದಿಗ್ಧ ಪ್ರಮಾಣವಾದುದರಿಂದ ಅದರಿಂದ ಅನುಗೃಹೀತತರ್ಕಕ್ಕೆ ಪ್ರತಿತರ್ಕ ಪರಾಹತಿಯನ್ನು ಶಂಕಿಸಬಾರದು. ಒಟ್ಟಿನಲ್ಲಿ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ, 'ಓಂ ಜನ್ಮಾದ್ಯಸ್ಯಯತಃ ಓಂ, ಓಂ ಶಾಸ್ತ್ರಯೋನಿತ್ವಾತ್ ಓಂ, ಓಂ ತತ್ತು ಸಮನ್ವಯಾತ್ ಓಂ' ಎಂಬ ನಾಲ್ಕು ಸೂತ್ರಗಳನ್ನೂ ವಾಖ್ಯಾನಿಸಿದಂತಾಯಿತು. ಧೀಮಹಿ ಎಂಬುದರಿಂದ ಜಿಜ್ಞಾಸೆಯೇ ಹೇಳಲ್ಪಡುವುದು. ವೇದವಿಚಾರನಿರ್ಣೀತ ಗುಣೋಪಸಂಹಾರವೇ ಧ್ಯಾನ, ಧ್ಯಾನವೇ ಜ್ಞಾನಸಾಧನ. ಕರ್ಮಾದಿಗಳಲ್ಲ ಎಂದು ತಿಳಿಸಲು ಧೀಮಹಿ ಎಂದಿರುವರು. ಕರ್ಮದಿಂದ ಶುದ್ಧಾಂತಃಕರಣನಾದವನಿಗೆ ಧ್ಯಾನ ಮಾಡಲು ಸಾಧ್ಯ.

ಯಾರು(ಶ್ರುತಿ-ಸ್ಮೃತಿಗಳನ್ನು ಆದರಿಸದ)ಕೇವಲ ತರ್ಕದಿಂದ ಬ್ರಹ್ಮನಿಗೆ ಜನ್ಮಾದಿ ಕಾರಣತ್ವವಿಲ್ಲವೆನ್ನಲು ಪ್ರಯತ್ನಿಸುವವರೋ ಅವರನ್ನು ಅನ್ವಯ ವ್ಯತಿರೇಕಾತ್ಮಕ ತರ್ಕದಿಂದ ನಿರಾಕರಿಸಬೇಕು ಎಂದು ಹೇಳುವರು.(ಅನ್ವಯಾದಿತರತಃ)ಎಂದು. **ಅನ್ವಯಾತ್** ಎಂದರೆ ಅನ್ವಯಾನುಮಾನದಿಂದ **ಇತರತಃ** ಎಂದರೆ ವ್ಯತಿರೇಕ ಅನುಮಾನದಿಂದ ಎಂದರ್ಥ. ಅನುಮಾನಗಳನ್ನು ಹಿಂದೆ ತೋರಿಸಿದೆ. ಚ ಶಬ್ದವು ಪರಕೀಯ ತರ್ಕವು ವ್ಯಾಪ್ತಿ ಶೂನ್ಯವಾದುದು. ನಮ್ಮದಾದರೂ ಪ್ರತ್ಯಕ್ಷಗೃಹೀತವ್ಯಾಪ್ತಿ ಉಳ್ಳದ್ದಾದ್ದರಿಂದ ಬಲಿಷ್ಠವು ಎಂಬ ವಿಶೇಷವನ್ನು ತಿಳಿಸುವುದು. ಕಾರಣ ನಾವು ಹೇಳಿದ ಅರ್ಥಸಿದ್ಧವಾಗುವುದು.

ಅಚೇತನವಾದ ನೀರು ಹರಿಯುವುದು, ಹಾಲು ಮೊಸರಾಗುವುದು, ಅದರಂತೆ ಪ್ರಧಾನ ಕಾರಣವಾಗಬಹುದಲ್ಲ ಎಂದರೆ ಹೇಳುವರು **ಅರ್ಥೇಷು ಅಭಿಜ್ಞಃ** ಎಂದು. ಅಂದರೆ ಇಲ್ಲಿ ಬರೀ ಕಾರಣತ್ವವಿವಕ್ಷಿತವಲ್ಲ. ಕಿಂತು ಕರ್ತೃತ್ವ. ಅದು ಕಾರ್ಯವಿಷಯಕ ಜ್ಞಾನೇಚ್ಛಾ ಪ್ರಯತ್ನ ರೂಪವಾದುದು. ಜಡವಾದ ಪ್ರಧಾನಕ್ಕೆ ಜ್ಞಾನವಿಲ್ಲದಿರುವದರಿಂದ ಕರ್ತೃತ್ವ ಉಪಪನ್ನವಾಗುವದಿಲ್ಲ. 'ಯಃ ಸರ್ವಜ್ಞಃ ಸ ಸರ್ವವಿತ್' 'ತಾನ್ಯಹಂ ವೇದ ಸರ್ವಾಣಿ' ಮುಂತಾದ ಶ್ರುತಿಸ್ಮೃತಿಗಳಿಂದ ಸಿದ್ಧವಾದ ಸಾರ್ವಜ್ಞವುಳ್ಳ ವಿಷ್ಣುವಿಗೆ ಕರ್ತೃತ್ವವು ಸಿದ್ಧವಾಗುವುದು ಎಂದು ಭಾವ.

**ಅರ್ಥೇಷ್ವಭಿಜ್ಞಃ**

ಅರ್ಥೇಷ್ವಭಿಜ್ಞತ್ವ-ಘಟಾದಿಸರ್ವವಿಷಯಕಜ್ಞಾನವು ರುದ್ರಾದಿಗಳಿಗೂ ಇರುವುದರಿಂದ ವಿಷ್ಣುವೇ ಕರ್ತಾ ಎಂಬುವದಕ್ಕೆ ಸಾಧಕವಾಗಲಾರದು ಎಂದರೆ ಹೇಳುವರು **ಸ್ವರಾಟ್** ಎಂದು. 'ಸ್ವಯಮೇವ ರಾಜತೇ ಇತಿ ಸ್ವರಾಟ್ ಅಥವಾ ಸ್ವಸ್ಯಮೇವ ರಾಜಾ ನಾನ್ಯಃ' ಎಂದಾಗಲಿ ಅರ್ಥ. ಅಂದರೆ 'ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ' ಎಂದು ರುದ್ರ ಮುಂತಾದವರಿಗೆ ಶ್ರೀಪ್ರಸಾದಾಧೀನವಾದ ಜ್ಞಾನಾದಿಗುಣಗಳು ತಿಳಿದು ಬರುವುದು. ಶ್ರೀಗೂ ಸಹ 'ಮಮ ಯೋನಿರಪ್ಸ್ವಂತಸ್ಸಮುದ್ರೇ' ಎಂದು ವಿಷ್ಣ್ವನುಗ್ರಹೀತಜ್ಞಾನಾದಿಗುಣಗಳು ತಿಳಿದು ಬರುವುದರಿಂದಲೂ ವಿಷ್ಣುವಾದರೂ ಅನನ್ಯಾಧೀನ ಗುಣವುಳ್ಳವನಾದ್ದರಿಂದ ಅವನಲ್ಲಿರುವ ಅನಂತವಿಶೇಷಗಳ ಜ್ಞಾನ ಶ್ರೀರುದ್ರಾದಿಗಳಿಗೆ ಇಲ್ಲದಿರುವುದರಿಂದ ನಿರುಪಚರಿತಸಾರ್ವಜ್ಞ ಅವರಲ್ಲಿ ಇಲ್ಲವಾದುದರಿಂದ ಆ ಹೇತುವಿಗೆ ವ್ಯಭಿಚಾರವಿಲ್ಲ. ಆದ್ದರಿಂದ ಅವನೇ ಸರ್ವಕರ್ತಾ. 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವಮಹಿಮ್ನಃ ಪರಮಂತಮಾಪ' ಎಂದು ಪರಮಾತ್ಮನ ಅನಂತಗುಣ ಮಾಹಾತ್ಮ್ಯವನ್ನು ಯಾರೂ ತಿಳಿದಿಲ್ಲ. ಹೊಂದುವದಂತೂ ದೂರ ಉಳಿಯಿತು. 'ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ' ಎಂದು ತಿಳಿಸುವ ಶ್ರುತಿಗಳುಂಟು. **ಸುಷ್ಟು ಅರಾಟ್ ರಾಜಾಂತರರಹಿತ ಇತಿ ಸ್ವರಾಟ್** ಎಂದು ತಿಳಿಯಬಹುದು. ಸ್ವತಂತ್ರನೆಂದರ್ಥ.

**ಅನನ್ಯಾಧೀನ ಭಗವಂತ**

ಶ್ರುತಿಗಳು ಅನಂತವಾದುದರಿಂದ ಎಲ್ಲೋ ಒಂದೆಡೆ ಶ್ರೀ ಹರಿಯು ಅನ್ಯಾಧೀನವೆಂದು ಹೇಳಿರಬಹುದಲ್ಲ ಆದ್ದರಿಂದ ಶ್ರೀಹರಿ ಅನನ್ಯಾಧೀನನೆಂಬ ನಿಶ್ಚಯ ಹೇಗೆ ಸಾಧ್ಯ ಎಂದರೆ ಹೇಳುವರು **ಯಃ ಆದಿಕವಯೇ ಬ್ರಹ್ಮಹೃದಾ ತೇನೇ** ಎಂದು. ಯಾವ ಪರಬ್ರಹ್ಮನು ಆದಿವಿಜ್ಞಾನಿಯಾದ ಚತುರ್ಮುಖನಿಗೆ ಷಡಂಗಸಹಿತಸಮಸ್ತವೇದಗಳನ್ನು ಸ್ನೇಹದಿಂದ ವಿಸ್ತರಿಸಿರುವನೋ ಎಂದರ್ಥ. ಚತುರ್ಮುಖನಿಗೆ ಒಂದು ಸಲ ಹೇಳುವುದರಿಂದಲೇ ಎಲ್ಲವನ್ನು ತಿಳಿದುಕೊಳ್ಳುವ ಸಾಮರ್ಥ್ಯವಿದ್ದರೂ 'ವಕ್ತವ್ಯಂ ಬ್ರಹ್ಮಗುರುಣಾ ಚತುರ್ವಾರಮಥಾಽಪಿ ವಾ ' ಎಂಬ ಉಪದೇಶ ಶಾಸ್ತ್ರವನ್ನು ಅನುಸರಿಸಿ **ತೇನೇ** ವಿಸ್ತರಿಸಿದನು ಎಂದು ಹೇಳಿದ್ದು ಶಿಷ್ಯರಿಗೆ ಉಪದೇಶ ಕ್ರಮ ಶಿಕ್ಷಿಸಲು ಮಾಡಿರಬೇಕು. ಅಲ್ಲಿ ಎಲ್ಲಿಯೂ ಶ್ರೀಹರಿಗೆ ಇನ್ನೊಬ್ಬ ಅಧಿಪತಿ ಇರುವನೆಂದು ಹೇಳಿಲ್ಲ ಎಂಬುದು 'ಗತಿಸಾಮಾನ್ಯಾತ್' ಎಂಬ ಸೂತ್ರಸಿದ್ಧ ವಿಷಯ.

ಚತುರ್ಮುಖನಿಗೆ ವೇದೋಪದೇಶ ಮಾಡಿದರೆ ಶ್ರೀಹರಿ ಏಕೆ ಅನನ್ಯಾಧಿಪತಿಯಾಗಬೇಕು ಎಂದರೆ 'ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾಬಭೂವ' ಎಂಬ ಶ್ರುತಿಯು ಚತುರ್ಮುಖಬ್ರಹ್ಮನ ಮಹಿಮೆಯನ್ನು ಹೀಗೆ ಹೇಳುತ್ತದೆ. ಈ ಚತುರ್ಮುಖಬ್ರಹ್ಮನು ಸೃಷ್ಟವಾದ ಎಲ್ಲ ಪದಾರ್ಥಗಳನ್ನು ಮೀರಿದವನು ಆ ಎಲ್ಲ ಪದಾರ್ಥಗಳಿಗಿಂತ ಉತ್ತಮನು ಎಂದು. ಅಂಥಹ ಚತುರ್ಮುಖಬ್ರಹ್ಮನಿಗೆ ಉಪದೇಶ ಮಾಡಿದವನು ಈ ಭಗವಂತ ಎಂದು ಹೇಳುವ ಮೂಲಕ ಶ್ರುತಿಯು ಭಗವಂತನ ಅನನ್ಯಾಧಿಪತಿತ್ವವನ್ನು ಗಟ್ಟಿಯಾಗಿ ಸಮರ್ಥಿಸುತ್ತದೆ. ಮತ್ತು 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂಬ ಶ್ರುತಿಯಲ್ಲಿ ಬ್ರಹ್ಮನನ್ನು ಸೃಷ್ಟಿಸಿ ಸಕಲವೇದೋಪದೇಶ ಮಾಡಿದನೆಂದೂ ಭಗವಂತನನ್ನು ಹೇಳುವರು. ಮತ್ತು ಬ್ರಹ್ಮನು ಆದಿಕವಿ ಎಂಬುದು 'ಕವಿಃ ಯಃ ಪುತ್ರಃ ಸ ಇಮಾಚಿಕೇತು' ಎಂಬಲ್ಲಿ ಹೇಳಿದೆ. 'ಬ್ರಹ್ಮ ವೇದಸ್ತಪಸ್ತತ್ವಂ ಬ್ರಹ್ಮ ವಿಪ್ರಃ ಪ್ರಜಾಪತಿಃ' ಎಂದು ಅಭಿಧಾನ ವಿರುವದರಿಂದ ಬ್ರಹ್ಮಶಬ್ದಕ್ಕೆ ವೇದವೆಂದರ್ಥ. 'ಹೃತ್‌ಸ್ನೇಹೇ ಮನಸಿ ಸ್ನಿಗ್ಧೇ ಸುಹೃದ್ಬಂಧೌ ಹರಾವಿತಿ' ಎಂದೂ ಅಭಿಧಾನವಿರುವದರಿಂದ **ಹೃದಾ** ಎಂದರೆ ಸ್ನೇಹದಿಂದ ಎಂದರ್ಥ. ಪ್ರಹೇಲಿಕಾ(ಒಗಟು)ದಂತೆ ಅಲ್ಲಿ ಉಪದೇಶ ಎಂದು ತಿಳಿಸಲು ಹೃದಾ ಎಂದು ಹೇಳಿದ್ದು. ಇದೂ ಸಹ ಶ್ರೀಹರಿಯು ಸರ್ವಜ್ಞ ಎನ್ನಲು ಇನ್ನೊಂದು ಹೇತುವಾಗಿದೆ. ಸಕಲ ಚೇತನೋತ್ತಮನಾದ ಸರ್ವಜ್ಞಕಲ್ಪನಾದ ಚತುರ್ಮುಖನಿಗೆ ಉಪದೇಶಿಸಿದ ವಿಷ್ಣುವಿಗೆ ಸರ್ವಜ್ಞತ್ವ ಇರಲೇಬೇಕು ಎಂದು ಭಾವ.

'ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್' ಎಂಬ ಶ್ರುತಿಯಲ್ಲಿ ನಾರಾಯಣನ ಜ್ಞಾನ ನಾನೇ ಮಾಡಿಕೊಂಡೆ ಎಂದು ಹೇಳುವಾಗ ಭಗವಂತನ ಉಪದೇಶದಿಂದ ಭಗವಂತನ ಜ್ಞಾನ ಎಂದು ಹೇಳಿದ್ದು ಹೇಗೆ ಸಂಗತವಾಗುವುದು ಎಂದು ಶಂಕಿಸಿ 'ಯಮೇವೈಷ ವೃಣುತೇ ತೇನ ಲಭ್ಯಃ' ಎಂದು ಶ್ರುತಿ ಇರುವುದರಿಂದ ಅವನ ಅನುಗ್ರಹದಿಂದಲೇ ಅವನ ಜ್ಞಾನವೇ ಹೊರತು, ಕೇವಲ ಸ್ವಪ್ರತಿಭೆಯಿಂದ ಅಲ್ಲ. ಅನುಗ್ರಹವಿಲ್ಲವಾದರೆ ಜ್ಞಾನವೇ ಬರಲಾರದು ಎಂಬ ಅಭಿಪ್ರಾಯದಿಂದ **ಮುಹ್ಯಂತಿ ಯಂ ಸೂರಯಃ** ಎಂದಿದ್ದಾರೆ. ಭೂತಭವಿಷ್ಯದ್ವರ್ತಮಾನ ಬ್ರಹ್ಮರು ಯಾವನ ಪ್ರಸಾದವಿಲ್ಲದೆ ಇದ್ದರೆ ಜ್ಞಾನವನ್ನೇ ಪಡೆಯಲಾರರು. ಕೆಲವು ಸಲ ವಿಪರೀತ ತಿಳಿಯುವರು ಆದ್ದರಿಂದ ಬ್ರಹ್ಮಾದಿಗಳಿಂದ ಅಚಿಂತ್ಯವಾದ ಮಹಿಮಾಮಹೀಧರನು ಶ್ರೀಹರಿ ಎಂದು ತಿಳಿದು ಬರುವುದು.

### ಭಗವಂತನಿಗೆ ಜಗತ್ಸೃಷ್ಟ್ಯಾದಿಗಳಿಂದ ಪ್ರಯೋಜನ ಉಂಟೇ?

ಶ್ರೀಹರಿಯು ಸೃಷ್ಟ್ಯಾದಿಗಳನ್ನು ಮಾಡುವಾಗ ಯಾವುದಾದರು ಪ್ರಯೋಜನವನ್ನು ಉದ್ದೇಶ್ಯವಾಗಿಟ್ಟುಕೊಂಡು ಮಾಡುವನೋ ಅಥವಾ ಪ್ರಯೋಜನವಿಲ್ಲದೇ ಮಾಡುವನೋ ? ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ ಯಾವ ಪ್ರಯೋಜನಕ್ಕಾಗಿ ಮಾಡುವನೋ ಆ ಪ್ರಯೋಜನವು ಅವನಿಗೆ ಅದಕ್ಕಿಂತ ಮೊದಲು ಇರಲಿಲ್ಲವೆಂದಾಗಿ (ಅಪೂರ್ಣನೆಂದಾಗಿ) ಅಶಕ್ತನಾದ್ದರಿಂದ ಸೃಷ್ಟಿಯು ಉಪಪನ್ನವಾಗಲಾರದು. ಎರಡನೇ ಪಕ್ಷವೂ ಸರಿಯಲ್ಲ. ಎಲ್ಲ ಪ್ರವೃತ್ತಿಗಳೂ ಪ್ರಯೋಜನೋದ್ದೇಶದಿಂದಲೇ ಕಂಡಿರುವುದರಿಂದ ಪ್ರಯೋಜನವಿಲ್ಲದೇ ಪ್ರವೃತ್ತಿ ಕೂಡಲಾರದು. ಆದ್ದರಿಂದ ಮಾಯಾಮಯ ಸೃಷ್ಟಿಯನ್ನೇ ಅಂಗೀಕರಿಸಬೇಕು.

### ಜಗತ್ತು ಭಗವಂತನ ಲೀಲಾಸೃಷ್ಟಿ

ಯಾವ ಮೂರ್ಖನೂ ಪ್ರಯೋಜನವಿಲ್ಲದೇ ಕೆಲಸ ಮಾಡಲಾರ ಎಂಬ ಶಂಕೆಗೆ ಉತ್ತರಿಸುವರು '**ತೇಜೋವಾರಿಮೃದಾಂ ಯಥಾ ವಿನಿಮಯಃ ತಥಾ ತ್ರಿಸರ್ಗಃ ಯತ್ರ ಮೃಷಾ**' ಎಂದು. ಯಾವ ಭಗವಂತನ ವಿಷಯದಲ್ಲಿ **ಮೃಷಾ** ಎಂದರೆ ಹಿಂದೆ ಪಡೆಯದಿರುವ ಪ್ರಯೋಜನ ಪ್ರಾಪ್ತಿ ಎಂದಲ್ಲ ಎಂದು ಭಾವ. ಹಾಗಾದರೆ ಪ್ರವೃತ್ತಿ ಹೇಗೆ ಎಂದರೆ 'ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಶ್ರುತಿ ಹಾಗು ಓಂ ಲೋಕವತ್ತು ಲೀಲಾ ಕೈವಲ್ಯಂ ಓಂ ಎಂಬ ಸೂತ್ರಗಳ ಪ್ರಕಾರ ಸಮಸ್ತ ಪ್ರಯೋಜನಗಳನ್ನು ಪಡೆದ ಶ್ರೀಹರಿಯ ಪ್ರವೃತ್ತಿಯು ಲೀಲಾರೂಪವಾಗಿದೆ.

### ತ್ರಿವಿಧ ಸೃಷ್ಟಿ

**ತ್ರಿಸರ್ಗಃ** ಜೀವ ಈಶ್ವರ ಜಡಗಳ ಸರ್ಗವೇ ತ್ರಿಸರ್ಗ. ಹೇಗೆ ಮೂಲ ತೇಜಸ್ಸು ತನ್ನ ಕಾರ್ಯವಾದ ಪಾರ್ಥಿವಾದಿಪದಾರ್ಥಗಳಲ್ಲಿ ಅನೇಕ ರೀತಿಯಾಗಿ ಪ್ರವೇಶಿಸುವುದು. ಮಥನ ಮಾಡುವುದರಿಂದ ಹೊರಗೂ ಬರುವುದು. ಅದರಂತೆ ಈಶ್ವರನೂ ಸಹ ಜಗತ್ತನ್ನು ಸೃಷ್ಟಿಸಿ ಅನೇಕರೂಪವಾಗಿ ಜಗತ್ತಿನಲ್ಲಿ ಪ್ರವೇಶಿಸುವನು. ಹೊರಗೂ ಅನೇಕ ಭಕ್ತರ ಮೇಲಿನ ದಯೆಯಿಂದ ವಾಸುದೇವಾದಿ ರೂಪದಿಂದ ಆವಿರ್ಭೂತನಾಗುವನು. ಇದು ಈಶ್ವರ ಸೃಷ್ಟಿ. ಅಥವಾ ದೀಪದಿಂದ ದೀಪಾಂತರ ಉತ್ಪತ್ತಿಯಂತೆ ಈಶ್ವರ ಸೃಷ್ಟಿಯು. ಸೂರ್ಯ ಮುಂತಾದ ತೇಜಸ್ಸುಗಳ ಪ್ರತಿಬಿಂಬವಾದ ಸೂರ್ಯಕಾದಿಗಳು ನೀರು ಮುಂತಾದ ಉಪಾಧಿ ನಿಮಿತ್ತದಿಂದ ಅನೇಕ ರೀತಿಯಾಗಿ

ಸೂರ್ಯನಿಂದ ಜನಿಸಿದಂತೆ ಸೂಕ್ಷ್ಮಸ್ಥೂಲ ಶರೀರರೂಪ ಉಪಾಧಿಗಳಿಂದಾಗಿ ಪ್ರತಿಬಿಂಬರಾದ ಜೀವರು ಶ್ರೀಹರಿಯಿಂದ ಜನಿಸುವರು. ಇದು ಜೀವ ಸರ್ಗ. ಹೇಗೆ ಕುಂಬಾರನು ಮಣ್ಣಿನಿಂದ ಮಡಿಕೆ ಮಾಡುವನೋ ಹಾಗೆ ಈಶ್ವರನು ಜಡ ಪ್ರಕೃತಿಯನ್ನು ಉಪಾದಾನ ಮಾಡಿ ಮಹತ್ತತ್ವ ಮುಂತಾದ ಎಲ್ಲಾ ಜಡಪದಾರ್ಥಗಳನ್ನು ಸೃಷ್ಟಿಸುವನು ಇದು ಜಡಸೃಷ್ಟಿ.

'ಸೃಷ್ಟಿಮಾಯಾಮಯಂ' ಎಂಬುದಕ್ಕೇನು ಉತ್ತರ ಹೇಳಿದಂತಾಯಿತು ಎಂದರೆ **ಯತ್ರ** ಈಶ್ವರವಿಷಯೇ **ವೃಷಾ** ಎಂದು ಹೇಳಿದ್ದರಿಂದ **ಅನ್ಯತ್ರ ಅವೃಷಾ** ಜಗದ್ವಿಷಯದಲ್ಲಿ ಮಿಥ್ಯಾ ಅಲ್ಲ ಎಂದಾಗುವುದು. ಅಂದರೆ ತೋಜೋವಾರಿಮೃದಾಂ ವಿನಿಮಯಃ ತೇಜಸ್ಸು ನೀರು ಮಣ್ಣಿನ ಕಾರ್ಯವಾದರೂ ಅರ್ಥಕ್ರಿಯಾಕಾರಿಯಾದ್ದರಿಂದ ಸದಸದ್ವಿಲಕ್ಷಣ ಹೇಗಲ್ಲವೋ ಆದರಂತೆ **ಯತ್ರ** ಯಾವ ಭಗವದಾಧಾರತಯಾ ಮಾಡಲ್ಪಡುವ ತ್ರಿಸರ್ಗವು ಮಿಥ್ಯಾ ಅಲ್ಲ. ಮಿಥ್ಯಾ ಆಗಿದ್ದರೆ ಅರ್ಥಕ್ರಿಯಾಕಾರಿ ಆಗುತ್ತಿರಲಿಲ್ಲವೆಂಬುದೇ ಬಾಧಕ.

**ಜಗತ್ಸೃಷ್ಟಿ ಮಾಯಾಮಯ ಎಂಬ ವಾದದ ನಿರಾಕರಣೆ**

ತೇಜಸ್ಸಿನ ಕಾರ್ಯವಾದ ಕೇಶೋಂಡ್ರಕ,(ಬಿಸಿಲಲ್ಲಿ ಕೂದಲಿನ ಸುರಳಿಯಂತೆ ಕಾಣುವುದು) ವಾರಿಯ ಕಾರ್ಯವಾದ ಫೇನ,(ಬುರಗು) ಮೃತ್ಕಾರ್ಯ ಘಟಾದಿಗಳು **ಯಥಾ** ಹೇಗೆ ಮಿಥ್ಯೆಯೋ ಹಾಗೆ **ಯತ್ರ** ಯಾವನಲ್ಲಿ ಜಗತ್ತು **ಮಿಥ್ಯಾ** ಎಂದರ್ಥ ಆಗಬಹುದು. ಇದಕ್ಕೆ ಪೋಷಕವಾಗುವಂತೆ 'ವಾಚಾರಂಭಣಂ ವಿಕಾರಃ' ಎಂದು ಶ್ರುತಿಯಿದೆ. 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವಿದೆ. ಆದ್ದರಿಂದ ಮಾಯಾಮಯ ಸೃಷ್ಟಿ ಎಂದು ಹೇಳಬಹುದು ಎಂದು ಶಂಕಿಸಿದರೆ ಅದಕ್ಕೆ ಹೀಗೆ ಸಮಾಧಾನವನ್ನು ಹೇಳುವರು **ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ** ಎಂದು. ತನ್ನ ಸ್ವರೂಪಜ್ಞಾನ ಮಹಿಮೆಯಿಂದ ನಿತ್ಯದಲ್ಲಿ ಪರಿಹೃತವಾದ ಇಂದ್ರಜಾಲಾದಿ ಮಾಯಾವುಳ್ಳ ಎಂದರ್ಥ.(ಯಃ ಸರ್ವಜ್ಞಃ ಅಥೈನಮಾಹುಃ ಸತ್ಯಕರ್ಮಾ) 'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿಗಳಿಂದ ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತಿರಲು ವಾಚಾರಂಭಣ ಶ್ರುತಿಗೆ ಅರ್ಥಾಂತರ ಮಾಡಲು ಬರುತ್ತದೆ. ಮಿಥ್ಯಾತ್ವಾನುಮಾನಗಳಿಗೆ ವ್ಯಾಪ್ತಿ ಇಲ್ಲದಿರುವುದರಿಂದ ನಿತ್ಯನಿರಸ್ತಇಂದ್ರಜಾಲನಾದ ವಿಷ್ಣುವು ಮಾಯಾಮಯ ಸೃಷ್ಟಿ ಮಾಡಲಾರನು ಕಿಂತು ಸತ್ಯವಾದುದನ್ನೇ ಮಾಡುವನು.

ಜಗತ್ತಿನಲ್ಲಿ ಅಸಮರ್ಥರಾದವರು ಇಂದ್ರಜಾಲಾದಿಗಳನ್ನು ಸೃಷ್ಟಿಸುವರು. ಸಮರ್ಥರಾದವರಲ್ಲ. ವಿಷ್ಣುವು ನಿತ್ಯ ಪರಿಪೂರ್ಣಶಕ್ತಿ ಉಳ್ಳವನಾದ ಕಾರಣ ಸುಳ್ಳು ಸೃಷ್ಟಿ ಮಾಡುವವನಲ್ಲ. ಮುಕ್ತರನ್ನು ವ್ಯಾವೃತ್ತಿಮಾಡಲು **ಸದಾ** ಎಂದಿರುವರು. ಅವರಿಗೆ ಮೊದಲು ಬಂಧವಿರುವುದರಿಂದ ಕುಹಕತ್ವ ಸಂಭಾವಿತವಾಗಿದೆ. ವಿಷ್ಣು ಸದಾ ನಿರಸ್ತ ಕುಹಕ. ಆದ್ದರಿಂದ ವಿಷ್ಣುವಿಗೆ ಮುಕ್ತರಿಂದ ಭೇದ ಹೇಳಲು ಬರುತ್ತದೆ. ಅದೇ ಯಾಕೆ ಎಂದರೆ ಹೇಳುವರು **ಸತ್ಯಂ** ಎಂದು. ಅಂದರೆ ನಿರ್ದುಃಖ ನಿತ್ಯ ನಿರತಿಶಯಾನಂದಾನುಭವರೂಪನೆಂದರ್ಥ. 'ಸಚ್ಛಬ್ದ ಉತ್ತಮಂ ಬ್ರೂಯಾತ್' 'ಆನಂದತೀತಿ ವೈ ವದೇತ್ ಯತಿಜ್ಞಾನಂ ಸಮುದ್ದಿಷ್ಟಂ' ಎಂದು ವಚನವಿರುವದರಿಂದ ನಿತ್ಯ ನಿರಸ್ತ ಕುಹಕನಾದ್ದರಿಂದ ಮುಕ್ತರಿಂದ ಭೇದ ಸಿದ್ಧವಾಗುವುದು ಎಂಬ ಅಭಿಪ್ರಾಯವು ಈ ಮಾತಿನಲ್ಲಿ ಅಡಗಿದೆ.

**ಧೀಮಹಿ ಅಂದದ್ದು ಏಕೆ ?**

ಗಾಯತ್ರೀ ಪ್ರತಿಪಾದ್ಯನಾದವನು ಪರಬ್ರಹ್ಮನಾದ ನಾರಾಯಣನೇ ಹೊರತು ಸೂರ್ಯನಲ್ಲ ಎಂಬುದನ್ನು ತಿಳಿಸುವದಕ್ಕಾಗಿ ಇಲ್ಲಿ **ಧೀಮಹೀ** ಎಂದು ಛಾಂದಸ ಪ್ರಯೋಗವನ್ನು ಮಾಡಿದ್ದಾರೆ. ವೇದಾಧ್ಯಯನ ಪ್ರಾರಂಭಿಸುವಾಗ ಗಾಯತ್ರಿಯ ಅಧ್ಯಯನ ಹೇಗೆ ಮಾಡಲ್ಪಡುವುದೋ ಅದರಂತೆ ಭಾಗವತ ಪ್ರಾರಂಭದಲ್ಲಿಯೂ ಗಾಯತ್ರೀ ಹೇಳಬೇಕು ಎಂಬ ಅಭಿಪ್ರಾಯದಿಂದ ಧೀಮಹಿ ಎಂದು ಹೇಳಿರುತ್ತಾರೆ.

ಅಥವಾ ಗಾಯತ್ರೀ ಮೊದಲಾದ ಎಲ್ಲ ವೇದಗಳಿಂದ ಪ್ರತಿಪಾದ್ಯನಾದ ನಾರಾಯಣನೇ ಭಾಗವತದಿಂದಲೂ ಪ್ರತಿಪಾದ್ಯನು ಎಂಬ ಕಾರಣಕ್ಕಾಗಿಯೂ ಇತರ ಪುರಾಣಗಳನ್ನೂ ಬಾದರಾಯಣರೇ ರಚನೆ ಮಾಡಿದ್ದರೂ ಅವುಗಳಿಗಿಂತಲೂ ಭಾಗವತ ಶ್ರೇಷ್ಠವೆಂದೂ ತಿಳಿಸಲು **ಧೀಮಹಿ** ಎಂದು ಛಾಂದಸ ಪ್ರಯೋಗ ಮಾಡಿರುವರು. ಈ ವಿಷಯವನ್ನು ಮತ್ಸ್ಯಪುರಾಣದಲ್ಲಿ ಪುರಾಣದಾನಮಾಹಾತ್ಮ್ಯ ಹೇಳುವಾಗ ಭಾಗವತಮಾಹಾತ್ಮ್ಯ ಮತ್ತು ಲಕ್ಷಣವನ್ನು ಹೇಳಿರುವರು.

> 'ಯತ್ರಾಧಿಕೃತ್ಯ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ ।
> ವೃತ್ರಾಸುರವಧಶ್ಚಾಪಿ ಯತ್ತದ್ಭಾಗವತಂ ವಿದುಃ ॥
>
> ಲಿಖಿತ್ವಾ ತಚ್ಚ ಯೋ ದದ್ಯಾದ್ದೇವೈಸ್ಸಹ ಸಮನ್ವಿತಮ್ ।
> ಪೌರ್ಣಮಾಸ್ಯಾಂ ಪ್ರೋಷ್ಠಪದ್ಯಾಂ ಸ ಯಾತಿ ಪರಮಂ ಪದಮ್ ॥
> ಅಷ್ಟಾದಶ ಸಹಸ್ರಾಣಿ ಪುರಾಣಂ ತತ್ಪ್ರಕೀರ್ತಿತಮ್ ॥ -ಸ್ಕಂಧ ಪುರಾಣ

ಗ್ರಂಥೋಽಷ್ಟಾದಶ ದ್ವಾದಶಸ್ಕಂಧಸಮ್ಮಿತಃ ।
ಹಯಗ್ರೀವಬ್ರಹ್ಮವಿದ್ಯಾ ಯತ್ರ ವೃತ್ರವಧಸ್ತಥಾ ॥
ಗಾಯತ್ರ್ಯಾ ಚ ಸಮಾರಂಭೋ ಯತ್ರ ಭಾಗವತಂ ವಿದುಃ । -ಗರುಡ ಪುರಾಣ
ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥವಿನಿರ್ಣಯಃ ।
ಗಾಯತ್ರೀ ಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ ॥

ದ್ವಾದಶಸ್ಕಂಧಸಂಯುಕ್ತಃ ಶತವಿಚ್ಛೇದಸಂಯುತಃ ।
ಗ್ರಂಥೋ ಅಷ್ಟಾದಶಸಾಹಸ್ರಃ ಶ್ರೀಮದ್ಭಾಗವತಾಭಿಧಃ ॥

ಎಂದೂ ಹೇಳಿದೆ. ಪರಕೀಯರು ಇಪ್ಪತ್ನಾಲ್ಕು ಸಾವಿರ ಗ್ರಂಥಾತ್ಮಕ ಭಾಗವತ ಎಂದು ಹೇಳುವರು. ಸಂಪ್ರದಾಯ ತಿಳಿಯದವರ ಅನಿಸಿಕೆ ಆದ್ದರಿಂದ ಗ್ರಾಹ್ಯವಲ್ಲ.

**ಭಾಗವತದ ಮಂಗಲಪದ್ಯದಲ್ಲಿ ಗಾಯತ್ರಿಯ ಅರ್ಥ**

**ತತ್ಸವಿತುಃ ದೇವಸ್ಯ** ಎಂಬುದರ ಅರ್ಥವೇ **ಜನ್ಮಾದ್ಯಸ್ಯ ಯತಃ** ಎಂಬುವುದು. 'ವಾಮಂ ವರೇಣ್ಯಂ ಪರಂ' ಎಂದು ಅಭಿಧಾನವಿರುವುದರಿಂದ **ವರೇಣ್ಯಂ** ಎಂಬುದರ ವ್ಯಾಖ್ಯಾನವು **ಪರಂ** ಎಂಬುದು. **ಭರ್ಗಃ** ಎಂಬುದರ ವ್ಯಾಖ್ಯಾನವೇ **ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ** ಎಂಬುದು. **ತತ್**‌ಪದ ವ್ಯಾಖ್ಯಾನವು **ಸ್ವರಾಟ್** ಎಂಬುದು. **ಧಿಯೋ ಯೋ ನಃ ಪ್ರಚೋದಯಾತ್** ಎಂಬುದರ ವ್ಯಾಖ್ಯಾನ **ತೇನೇ ಬ್ರಹ್ಮ ಹೃದಾಯ ಆದಿಕವಯೇ** ಎಂಬುದು. ಯಾವ ಜನ್ಮಾದಿಕರ್ತೃವು **ನಃ** ನಮ್ಮ **ಧಿಯಃ**-ಬುದ್ಧಿಗಳನ್ನು ಉಪಲಕ್ಷಣಯಾ ಸರ್ವೇಂದ್ರಿಯಗಳನ್ನು ತನ್ನ ಯಥಾರ್ಥ ಸ್ವರೂಪ ವಿಷಯಜ್ಞಾನವನ್ನು ಗುರುಮುಖದಿಂದ ಉಪದೇಶಮಾಡಿ ಜ್ಞಾನ ಸಾಧನಗಳಾದ ಎಲ್ಲ ಕರಣಗಳನ್ನು **ಪ್ರಚೋದಯಾತ್** ತನ್ನ ವಿಷಯಕವಾಗಿ ಪ್ರೇರಿಸುವನೋ **ತಸ್ಯ** ಅಂತಹ **ಸವಿತುರ್ದೇವಸ್ಯ** ಕ್ರೀಡಾದಿಗುಣಸಂಪನ್ನನಾದ ನಾರಾಯಣನ **ತತ್** ವ್ಯಾಪ್ತವಾದ **ವರೇಣ್ಯಂ** ಸಕಲ ಗುಣಪೂರ್ಣವಾದ್ದರಿಂದ ಪರಮಮಂಗಲವಾದ **ಭರ್ಗಃ** ಜ್ಯೋತಿರೂಪನಾದ 'ಭರಣಗಮನಯೋಗಾತ್' ಭರ್ಗನೆನಿಸಿದ, ಸರ್ವಜ್ಞನಾದ ಜ್ಞಾನಾನಂದಾತ್ಮಕವಾದ ಅವಯವವುಳ್ಳ ಭಗವಂತನನ್ನು **ಧೀಮಹಿ** ಧ್ಯಾನ ಮಾಡೋಣ. ಜ್ಞಾನವೇ ಅವನ ಪ್ರೀತಿಗೆ ಕಾರಣ. ಕರ್ಮಾದಿಗಳಲ್ಲ. ಆದ್ದರಿಂದ ಅವನ ಚಿಂತನೆಯನ್ನು ಮಾಡಬೇಕು ಎಂದರ್ಥ.

ತತ್ಸವಿತುಃ ದೇವಸ್ಯ - ಜನ್ಮಾದ್ಯಸ್ಯ ಯತಃ
ವರೇಣ್ಯಂ - ಪರಂ
ಭರ್ಗಃ - ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ತತ್ - ಸ್ವರಾಟ್
ಧಿಯೋ ಯೋ ನಃ ಪ್ರಚೋದಯಾತ್
-ತೇನೇ ಬ್ರಹ್ಮ ಹೃದಾಯ ಆದಿಕವಯೇ

**ವೇದಸದೃಶವಾದ ಈ ಗ್ರಂಥದ ವ್ಯಾಖ್ಯಾನಾರಂಭದಲ್ಲಿ ಮೂಡಿಬಂದ ಒಂದು ವಿಶೇಷ**

ಪದಚ್ಛೇದಃ ಪದಾರ್ಥೋಕ್ತಿಃ ವಿಗ್ರಹೋ ವಾಕ್ಯಯೋಜನಾ ।
ಆಕ್ಷೇಪಸ್ಯ ಸಮಾಧಾನಂ ವ್ಯಾಖ್ಯಾನಂ ಪಂಚ ಲಕ್ಷಣಮ್ ॥

ಅತಿರಿಕ್ತಂ ಪದಂ ತ್ಯಾಜ್ಯಂ ಹೀನಂ ವಾಕ್ಯೇ ನಿವೇಶಯೇತ್ ।
ವಿಪ್ರಕೃಷ್ಟಂ ಚ ಸಂದಧ್ಯಾದಾನುಪೂರ್ವೀಂ ಚ ಕಲ್ಪಯೇತ್ ॥

ಲಿಂಗಂ ಧಾತುಂ ವಿಭಕ್ತಂ ಚ ಯೋಜಯೇಚ್ಚಾನುಲೋಮತಃ ।
ವಾಕ್ಯಾರ್ಥಸ್ಯಾನುಸಾರೇಣ ತೇಷಾಂ ಚ ವ್ಯತ್ಯಯೋಽಪಿ ವಾ ॥

ಎಂಬ ನಿಯಮಾನುಸಾರ ಹೆಚ್ಚಿನಪದಗಳನ್ನು ಬಿಡಬೇಕು. ಕಡಿಮೆ ಇದ್ದದ್ದನ್ನು ಸೇರಿಸಬೇಕು. ಇದ್ದದ್ದನ್ನು ಜೋಡಿಸಿ ಆನುಪೂರ್ವಿಯನ್ನು ತಯಾರಿಸಬೇಕು. ಲಿಂಗ ಧಾತು ವಿಭಕ್ತಿಗಳಿಗೆ ಅನುಗುಣವಾಗಿ ಯೋಜಿಸಬೇಕು. ವಾಕ್ಯಾರ್ಥಾನುಗುಣವಾಗಿ ಲಿಂಗಗಳನ್ನು ವ್ಯತ್ಯಾಸಮಾಡಬೇಕು ಎಂದು ಹೇಳಿದ್ದಾರೆ. ಆದು ಗ್ರಂಥದ ಸಂಪ್ರದಾಯ ತಿಳಿದ ಸಜ್ಜನರಿಂದ ಉಪೇಕ್ಷಿತವಾದ್ದರಿಂದ ಜ್ಞಾನಿಗಳಲ್ಲಿ ಶೋಭಿಸಲಾರದು. ಹೇಗೆ ವೇದದಲ್ಲಿ 'ಅಕರಿ' ಎಂಬಲ್ಲಿ 'ಅಕರೋತ್' ಎಂಬ ಪದಸೇರಿಸಲಾಗದು. ಆದರಂತೆ ಅತಿರಿಕ್ತಪದವನ್ನು ಬಿಟ್ಟು ಹೀನಪದವನ್ನು ಜೋಡಿಸಿ ವ್ಯಾಖ್ಯಾನ ಮಾಡುವುದೇ ಸಜ್ಜನರಿಗೆ ಸಂತೋಷದಾಯಕವಾಗಿದೆ ಎಂದು ತಿಳಿಯಬೇಕು.

**ಪರವ್ಯಾಖ್ಯಾನಗಳು**

ಇಲ್ಲಿ ಕೆಲವರು ಇದು ಶ್ಲೋಕಾರ್ಥವೇ ಅಲ್ಲ. ಶ್ಲೋಕಾರ್ಥ ಒಂದು ಬೇರೆ ಇದೆ ಆದರ ವಿವರಣೆ ಹೀಗಿದೆ. **ತಂ ಸತ್ಯಂ ಧೀಮಹಿ** ಎಂದು ಅನ್ವಯ. 'ಮೃತ್ತಿಕೇತ್ಯೇವ ಸತ್ಯಂ' ಎಂದು ಮಣ್ಣು ಮುಂತಾದವುಗಳಿಗೂ ಸತ್ಯತ್ವವು ಶ್ರುತಿಯಲ್ಲಿ ಉಕ್ತವಾಗಿದೆ. ಆದರಂತೆ ಇದೂ ಸತ್ಯವಿರಬಹುದೇ ಎಂದರೆ **ಪರಂ** ಎಂದು ಹೇಳಿರುವರು.

ಮೃದಾದಿಗಳು ಕಾರ್ಯಾಪೇಕ್ಷಯಾ ಸತ್ಯವಾದುವು.(ವ್ಯಾವಹಾರಿಕಸತ್ಯ)ಇದಾದರೂ ಪಾರಮಾರ್ಥಿಕಸತ್ಯವೆಂದರ್ಥ. 'ತತ್ಸತ್ಯಂ ಸ ಆತ್ಮಾ' ಎಂಬ ಶ್ರುತಿಯೇ ಈ ವಿಷಯದಲ್ಲಿ ಪ್ರಮಾಣ. ಪರಸತ್ಯವಾದುದು ವಾಙ್ಮನೋಗೋಚರವಲ್ಲ ಅಂದ ಮೇಲೆ ಧ್ಯಾತೃ ಧ್ಯಾನ ಧ್ಯೇಯ ಎಂಬ ವ್ಯವಹಾರ ವಿಷಯ ಹೇಗೆ ಆಗುವನು ಎಂಬ ಶಂಕೆಗೆ ಉತ್ತರವಾಗಿ **ಜನ್ಮಾದ್ಯಸ್ಯ ಯತಃ** ಎಂದು ಹೇಳಿದೆ. ಈ ಜಗತ್ತಿನ ಜನ್ಮಸ್ಥಿತಿಲಯಗಳು ಯಾವ ಪರಸತ್ಯನಿಂದ ಆಗುವವೋ ಅವನನ್ನು ಧ್ಯಾನಮಾಡೋಣ ಎಂದರ್ಥ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಸಿದ್ಧವಾದ ಜಗತ್ಕಾರಣತ್ವರೂಪದಿಂದ ವಾಙ್ಮನೋಗೋಚರವಲ್ಲದ್ದಕ್ಕೂ ಧ್ಯಾತೃ ಧ್ಯಾನ ಧ್ಯೇಯವೆಂಬ ವ್ಯವಹಾರಗಳು ಸಂಭವಿಸುವವು.

ಬ್ರಹ್ಮನು ಸಿದ್ಧರೂಪನು ಆದ್ದರಿಂದ ಶಬ್ದವಿಷಯನಾಗಲಾರ ಕಿಂತು(ಪ್ರತ್ಯಕ್ಷಾದಿ) ಪ್ರಮಾಣಾಂತರ ವಿಷಯನು. ಆದ್ದರಿಂದ ಅವನ ವಿಷಯದಲ್ಲಿ ವೇದಾಂತಗಳು (ಉಪನಿಷತ್)ಅನುವಾದಕಗಳಾದ್ದರಿಂದ ಅಪ್ರಮಾಣ ಎಂದು ಶಂಕಿಸಿ ಉತ್ತರ ನೀಡಿರುವವರು **ಅನ್ವಯಾತ್** ಎಂದು. ಅಂದರೆ ವೇದಾಂತಗಳಿಗೆ ಬ್ರಹ್ಮನಲ್ಲೇ ತಾತ್ಪರ್ಯವಿರುವದರಿಂದ ಪ್ರಮಾಣಾಂತರ ಸಿದ್ಧನಲ್ಲ ಆದ್ದರಿಂದ ವೇದಾಂತಗಳು ಅನುವಾದಕಗಳಲ್ಲ. ಈ ವಿಷಯವನ್ನು ಶ್ರುತಿಸ್ಮೃತಿಗಳೂ ಸಮ್ಮತಿಸುತ್ತವೆ. ಕೇವಲ ಶ್ರುತಿತಾತ್ಪರ್ಯದಿಂದಲೇ ಅಲ್ಲ ಸ್ಮೃತಿತಾತ್ಪರ್ಯದಿಂದಲೂ ಎಂದು ತಿಳಿಸಲು **ಇತರತಃ ಚ** ಎಂದಿರುವರು. 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ' ಎಂಬ ಸ್ಮೃತಿಯಿಂದ ಎಂದರ್ಥ. ಅರ್ಥಸಿದ್ಧಿಗೆ ಹೇತುವನ್ನು ಹೇಳುವರು **ಅನ್ವಯಾದಿತರತಶ್ಚ** ಎಂದು. ಕಾರ್ಯ ಪ್ರಪಂಚದಲ್ಲಿ(ಘಟಾದಿಗಳಲ್ಲಿ) ಮೃದಾದಿಗಳಂತೆ ಅನ್ವಿತವಾಗುವುದರಿಂದ **ಇತರತಃ** ಅಸ್ತಿತ್ವಪ್ರಕಾಶವಿಲ್ಲದೇ ಎಂದೂ ಯಾರಿಗೂ ಯಾವ ವಸ್ತುವೂ ತೋರದಿರುವದರಿಂದ ಮಣ್ಣಿಲ್ಲದೇ ಘಟ ತೋರದಿರುವಂತೆ ಎಂದು ಅನ್ವಯ-ವ್ಯತಿರೇಕಗಳು ತೋರಿಸಲ್ಪಟ್ಟಿವೆ. 'ಸನ್ ಘಟಃ ಸನ್ ಪಟಃ' ಮುಂತಾಗಿ **ಸಚ್ಛಬ್ದದಿಂದ ಬ್ರಹ್ಮನು** ವೇಧವಿರುವುದರಿಂದ ಮೃದ್ಘಟಃ ಎಂಬಂತೆ ಮೃದ್ ವ್ಯತಿರೇಕೇಣ ಘಟ ಇಲ್ಲದಿರುವಂತೆ ಬ್ರಹ್ಮ ವ್ಯತಿರೇಕೇಣ ಪ್ರಪಂಚವಿಲ್ಲವೆಂದು ಭಾವ. ಬ್ರಹ್ಮನ ಮಹದಾದಿಕಾರ್ಯಗಳು ಕಾಣುವವು. ಇಲ್ಲವಾದರೆ ಇಲ್ಲ ಎಂದು ಸತ್ತಾ-ಸ್ಥಿತಿಗಳಲ್ಲಿ ಅನ್ವಯವ್ಯತಿರೇಕ ತೋರಿಸಿರುವರು. ಹಾಗಾದರೆ ಸಾಂಖ್ಯರು ಹೇಳುವ ಪ್ರಧಾನವೇ ಜಗತ್ಕಾರಣವಾಗಲಿ ಬ್ರಹ್ಮನೇ ಏಕಾಗಬೇಕು ಎಂದರೆ **ಅರ್ಥೇಷ್ವಭಿಜ್ಞಃ** ಹುಟ್ಟುವ ಎಲ್ಲಾ

ಪದಾರ್ಥಗಳನ್ನು ತಿಳಿದವನೇ ಕಾರಣವಾಗಬೇಕು. ತಿಳುವಳಿಕೆ ಇಲ್ಲದ ಪ್ರಧಾನ ಕಾರಣವಾಗಲಾರದು. ಹಾಗಾದರೆ ಅರ್ಥಜ್ಞಾನವುಳ್ಳ ಜೀವನು ಜಗತ್ಕಾರಣನಾಗಲಿ ಎಂದರೆ ಹೇಳುವರು **ಸ್ವರಾಟ್** ಎಂದು. ತಾನೇ ರಾಜಿಸುವುದರಿಂದ ಎಂದರ್ಥ. ಅಂದರೆ ಸ್ವತಂತ್ರನಾದ್ದರಿಂದ ಬ್ರಹ್ಮ ಕಾರಣ. ಜೀವರು ಪರಿಚ್ಛಿನ್ನ ಜ್ಞಾನವುಳ್ಳವರಾದ್ದರಿಂದ ಪರಾಧೀನ ಕಾರಣರು. ಜೀವರಿಗೆ ಸ್ವತಂತ್ರಜಗತ್ಕಾರಣತ್ವವು ಕೂಡಲಾರದು. 'ಏಷಃ ಸರ್ವೇಶ್ವರಃ ಏಷ ಲೋಕಪಾಲಃ' ಎಂದು ಶ್ರುತಿಯಿದೆ. 'ನ ತಸ್ಯ ಕಾರ್ಯಕರಣಂ ಚ ವಿದ್ಯತೇ'ಎಂಬ ಶ್ರುತಿಯು ಇರುವುದರಿಂದ ಕಾರ್ಯಕಾರಣಗಳೇ ಇಲ್ಲದಿರುವಾಗ ಬ್ರಹ್ಮನಿಗಾದರೂ ಸರ್ವಜ್ಞತ್ವ ಹೇಗೆ ಬರುವದು ಎಂದರೆ ಹೇಳುವರು 'ತೇನೇ ಬ್ರಹ್ಮ' ಎಂದು. ಆದಿಕವಿಯಾದ ಬ್ರಹ್ಮದೇವರಿಗೆ ಋಗ್ವೇದ ಮೊದಲಾದ ಸಾಂಗವಾದ ವೇದವನ್ನು ಯಾವನು **ಹೃದಾ** ಮನಸ್ಸಿನಿಂದ ಮನೋಮಾತ್ರದಿಂದ, ದೇಹೇಂದ್ರಿಯಗಳಿಲ್ಲದೇ **ತೇನೇ** ಪೂರ್ವ ಪ್ರಲಯದಲ್ಲಿ ಸೂಕ್ಷ್ಮರೂಪದಿಂದ ತನ್ನಲ್ಲಿರುವ ವೇದವನ್ನು ಸೃಷ್ಟಿಯ ಆದಿಯಲ್ಲಿ ಸ್ವರ, ಮಾತ್ರಾ, ವರ್ಣ, ಪದ, ವಾಕ್ಯ ಮುಂತಾದ ಕ್ರಮದಿಂದ ವಿಸ್ತಾರಗೊಳಿಸಿದನು. ಅಥವಾ **ಹೃದಾ** ಸಂಕಲ್ಪಮಾತ್ರದಿಂದ ಕಾರ್ಯಕಾರಣಸಂಬಂಧವಿಲ್ಲದಿದ್ದರೂ ಭಗವಂತನು ಸರ್ವಾಂತರ್ಯಾಮಿಯು ಬ್ರಹ್ಮಾದಿಕಾರ್ಯಕಾರಣಸಾಕ್ಷಿಯಾದ್ದರಿಂದ ಸರ್ವಜ್ಞನೆಂದರ್ಥ. ಹೀಗೆ ಜಗತ್ಕಾರಣನಾದ ಸಚ್ಚಿದಾನಂದಾತ್ಮಕನಾದ ವೇದೈಕವೇದ್ಯನಾದ ನಿರವದ್ಯನಾದ (ದೋಷರಹಿತ) ಸರ್ವೇಶ್ವರನಲ್ಲಿ ಪರರು ಹೇಳುವ ದೋಷಲೇಶವೂ ಇಲ್ಲವೆಂದು ಹೇಳುತ್ತಾರೆ. **ಮುಹ್ಯಂತಿ** ಎಂದು ಯಾವನ ವಿಷಯದಲ್ಲಿ ಕಪಿಲಋಷಿಯೇ ಮೊದಲಾದ ಶಾಸ್ತ್ರಪ್ರಣೇತೃಗಳು ಮೋಹಗೊಳ್ಳುತ್ತಾರೋ ಎಂಬುವುದರಿಂದ ಅವರು ಮಾಡಿದ ಶಾಸ್ತ್ರ ನಿರ್ಮೂಲವಾದ್ದರಿಂದ ಅಪ್ರಮಾಣವಾದದ್ದು. ಕಾರಣ ಅವುಗಳ ವಿರೋಧ ಸ್ವಲ್ಪವೂ ಇಲ್ಲ ಎಂದರ್ಥ.

ಅನೇಕ ಕುತರ್ಕಗಳಿಂದ ತುಂಬಿದ, ಮನಸ್ಸಿನ ದುರಾಗ್ರಹದಿಂದ ವಾದ ಮಾಡುವವರ ವಿವಾದಕ್ಕೆ ಸಿಲುಕದ, ಎಲ್ಲ ಮಾಯೆಯಿಂದ ಉಪರತನಾದ ಭಗವಂತನಲ್ಲಿ ಯಾವುದು ತಾನೇ ದುರ್ಘಟವಾದುದು ಎಂದು ಅವರ ಮಾತು ಇದೆ. ಆದ್ದರಿಂದ ಪರಮ ಸತ್ಯನಾದವನಿಂದ ಜನಿಸಿದ ಪ್ರಪಂಚಕ್ಕೆ ಸತ್ಯತ್ವವು ಎಲ್ಲಿ ? ಕಿಂತು ಮಿಥ್ಯಾತ್ವವೇ ಎಂದು ತೋರಿಸಲು(ತೇಜೋವಾರಿ)ಮುಂತಾಗಿ ಹೇಳುವರು. ವಿನಿಮಯ ಎಂದರೆ ಕಾರ್ಯ. ತೇಜೋವಿನಿಮಯ ಬಿಸಿಲಲ್ಲಿ ಕಾಣುವ ಕೂದಲಿನ

ಸುರಳಿ.(ಕೇಶೋಂಡ್ರಕ)ವಾರಿ ಅಂದರೆ ನೀರು. ನೀರಿನ ಕಾರ್ಯ ಹಿಮ, ಗಿಡ ಮೊದಲಾದವು. ಮೃತ್ ಅಂದರೆ ಮಣ್ಣು. ಮಣ್ಣಿನ ಕಾರ್ಯ ಘಟಾದಿಗಳು ಹೇಗೋ ಹಾಗೆ ಅಂದರೆ ಕಾರಣ ಸತ್ತಾ ಪ್ರತೀತಿಯನ್ನು ಬಿಟ್ಟು ಕಾರ್ಯಕ್ಕೆ ಪ್ರತ್ಯೇಕ ಸತ್ತಾ ತೋರದಿರುವದು ಎಂಬ ಮಿಥ್ಯಾತ್ವವು ಎಂದರ್ಥ. ಮತ್ತು ತ್ರಿವೃತ್ಕೃತ ಅತ್ರಿವೃತ್ಕೃತ ಎರಡಕ್ಕೂ ದೃಷ್ಟಾಂತ ದಾರ್ಷ್ಟಾಂತಿಕಭಾವ ಹೇಳುವ ಮೂಲಕ ಮಿಥ್ಯಾತ್ವ ಹೇಳಲಾಗಿದೆ ಎಂದು ಸಂಪ್ರದಾಯ ತಿಳಿದವರ ಅಭಿಪ್ರಾಯ.

ಬ್ರಹ್ಮನು ಜಗತ್ಕಾರಣವೆಂದರೆ ಕ್ರಿಯಾಕಾರಕಗಳ ಸಂಬಂಧ ಬರುವುದು ಎಂದು ಅರ್ಥ. ಹೀಗೆ ಹೇಳಿದರೆ 'ಅಸಂಗೋಹ್ಯಯಂ ಪುರುಷಃ' ಎಂಬ ಶ್ರುತಿ ವಿರೋಧ ಬರುವದು ಎಂದರೆ ಅದಕ್ಕೂ ಉತ್ತರ 'ತೇಜೋವಾರಿ' ಎಂದು. **ತ್ರಿಸರ್ಗಃ** ತೇಜೋವಾರಿಮೃದಾಂ ಸರ್ಗಃ, ತೇಜಸ್ಸು ನೀರು ಮಣ್ಣು(ಪೃಥಿವಿ) ಇವುಗಳ ಸೃಷ್ಟಿಯು ಉಪಲಕ್ಷಣಯಾ ಪ್ರಪಂಚ ಭೂತಗಳ ಸೃಷ್ಟಿಯು **ಯತ್ರ ಮೃಷಾ** ಯಥಾ ತೇಜೋವಾರಿಮೃದಾಂ ವಿನಿಮಯಃ ಮಿಥ್ಯಾ ತಥಾ ಜಗದಪಿ ಮಿಥ್ಯಾ ಎಂದರ್ಥ. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂದು ಶ್ರುತಿ ಇದೆ. ಈ ರೀತಿ ಪ್ರಪಂಚಕಾರಣತ್ವೇನ ಕಲ್ಪಿತಮಾಯಾಸಂಬಂಧ ನಿಮಿತ್ತವಾದದ್ದು ಯಾವುದೂ ಚಿದ್ರೂಪನಾದ ಪರಮಸತ್ಯಾತ್ಮಕನಾದ ಈಶ್ವರನಲ್ಲಿ ಇಲ್ಲವೆಂದು ತಿಳಿಸುವರು.

ಧಾಮ್ನಾ ಮುಂತಾಗಿ ಅಂದರೆ ಪ್ರಕಾಶೇನ ಸ್ವರೂಪಭೂತವಾದ ಆತ್ಮಚೈತನ್ಯದಿಂದ, ಔಪಚಾರಿಕವಾಗಿ ಕಾರಣತ್ವೇನ ಕಲ್ಪಿತವಾದ, ಸರ್ವದಾ ನಿರಾಕೃತವಾದ ಮಾಯಾಖ್ಯಕಪಟತನಉಳ್ಳವನು ಎಂದು ಜೀವ ವೈಲಕ್ಷಣ್ಯ ತೋರಿಸಿರುವರು. ಅರ್ಥಾತ್ ಅಸಂಗತ್ವ ಕೂಟಸ್ಥತ್ವ ಹೇಳಿದಂತಾಯಿತು. ಆದ್ದರಿಂದ 'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ' ಎಂಬ ಶ್ರುತಿಯಿಂದ ಹೇಳಲ್ಪಡುವನು. ಅದರಲ್ಲಿ ಸಗುಣಬ್ರಹ್ಮೋಪಾಸನೆಯಿಂದುಂಟಾದ ಜ್ಞಾನದಿಂದ ಶುದ್ಧಾಂತಃಕರಣನಾದವನಾಗಿ ನಿರ್ಗುಣ ಬ್ರಹ್ಮೋಪಾಸನೆಯಲ್ಲಿ ಬುದ್ಧಿಯುಂಟಾಗುವುದು. ನಂತರ ಎಲ್ಲವೂ ತಾನೇ ಎಂದು ತಿಳಿದು ತನ್ನಿಂದ(ಆತ್ಮನಿಂದ)ಭಿನ್ನವಾದ ಯಾವುದನ್ನೂ ಕಾಣದೆ ನಿರ್ಗುಣನಲ್ಲೇ ನೆಲೆಸುವನು ಎಂದು ಈ ಶ್ಲೋಕದಲ್ಲಿ ಪ್ರತಿಪಾದಿತವಾಗಿದೆ. ಬೇರೆ ಯಾವದೂ ಪ್ರಮಾಣಿಕವಾದುದಲ್ಲ ಎಂದು ಹೇಳುವರು.

ಇದೆಲ್ಲವೂ ಕಂಠಶೋಷಣೆ ಮಾತ್ರ. ಹುಲ್ಲಿನ ಮೇಲೆ ಬಿದ್ದ ಬೆಂಕಿಯಂತೆ ಎಂದು ಪರೀಕ್ಷಕಾರರು ಒಂದು ಕ್ಷಣವೂ ಕಣ್ಣಿನಿಂದ ನೋಡಲಾರರು. ಪೂರ್ವಾಪರ ವಿಚಾರ ಮಾಡಿದರಾಗಲಿ ತಮ್ಮ ಯುಕ್ತಿಯಿಂದಲೇ ವಿರುದ್ಧವಾದ್ದರಿಂದಲೂ ಶ್ರುತಿ ಸ್ಮೃತಿಗಳ ತಾತ್ಪರ್ಯಾರ್ಥವಿಲ್ಲದ್ದರಿಂದಲೂ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾದದ್ದರಿಂದಲೂ, ಆಚಾರ್ಯರಿಂದ ಅಲ್ಲಲ್ಲಿ ನಿರಾಕೃತವಾದ್ದರಿಂದಲೂ, ಶ್ರುತಿ ಮುಂತಾದವು ಮಿಥ್ಯಾತ್ವ ಹೇಳುವದಕ್ಕೆ ವಿರುದ್ಧವಾದುದರಿಂದಲೂ, ನಾವು ಹೇಳುವ ಅರ್ಥಕ್ಕೆ ಬಹಳ ಪ್ರಮಾಣ ಸಂವಾದವಿರುವದರಿಂದಲೂ, ಗ್ರಂಥ ಬಹಳವಾಗುವದೆಂಬ ಭಯದಿಂದಲೂ, ನಿರಾಕರಣವನ್ನು ವಿವರಿಸುವದಿಲ್ಲ. 'ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಂ' ಎಂದು ಹೇಳುವವರು ಸಂಪ್ರದಾಯಜ್ಞರು ಹೇಗಾದರು?

ಆನಂದೋದ್ರೇಕದಿಂದಲೇ ಭಗವಂತ ಜಗತ್ತಿನ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತನಾಗುವದರಿಂದ ಈಶ್ವರನಿಗೆ ಸೃಷ್ಟಿಯಿಂದ ಸ್ವಪ್ರಯೋಜನವಿಲ್ಲ ಪರಪ್ರಯೋಜನಕ್ಕಾಗಿ ಈ ಸೃಷ್ಟ್ಯಾದಿಗಳು ಎಂದು ಹೇಳಿದಂತಾಯಿತು.

**ಭಗವತ್ಸೃಷ್ಟಿಯ ವೈವಿಧ್ಯತೆಗಳು**

1. ಒಂದೇ ಮೂಲತೇಜಸ್ಸು ತನ್ನ ಕಾರ್ಯವಾದ ಅರಣಿಯೇ ಮೊದಲಾದ ಪಾರ್ಥಿವ ಪದಾರ್ಥಗಳಲ್ಲಿ ಹೇಗೆ ಅನೇಕ ಬಗೆಯಾಗಿ ಪ್ರವೇಶಿಸುತ್ತದೆಯೋ ಮತ್ತು ಘರ್ಷಣೆಯಿಂದ ವ್ಯಕ್ತವಾಗುವದೋ ಹಾಗೆ ಶ್ರೀಪತಿಯು ಜಗತ್ತನ್ನು ಸೃಷ್ಟಿಸಿ ತಾನು ಅನೇಕ ರೂಪಗಳಿಂದ ಜಗತ್ತಿನಲ್ಲಿ ಎಲ್ಲ ಪದಾರ್ಥಗಳಲ್ಲಿ ಪ್ರವೇಶಿಸುವನು ಮತ್ತು ಜೀವರ ಮೇಲೆ ದಯೆ ತೋರಿ ವಾಸುದೇವಾದಿರೂಪಗಳಿಂದ ಹೊರಗೆ ವ್ಯಕ್ತನಾಗುವನು. ಇದೇ ಈಶ್ವರ ಸೃಷ್ಟಿ. ಅಥವಾ ದೀಪದಿಂದ ಮತ್ತೊಂದು ದೀಪ ಹಚ್ಚಿದಂತೆ ಪರಮಾತ್ಮನ ಒಂದು ರೂಪದಿಂದ ಮತ್ತೊಂದು ರೂಪದ ಸೃಷ್ಟಿಯಾಗುವುದು(ಅಭಿವ್ಯಕ್ತಿ).

2. ಸೂರ್ಯನೇ ಮೊದಲಾದ ತೇಜಃ ಪದಾರ್ಥಗಳಿಗೆ ನೀರೇ ಮುಂತಾದ ಉಪಾಧಿಗಳನ್ನು ನಿಮಿತ್ತ ಮಾಡಿಕೊಂಡು ಅನೇಕ ಪ್ರತಿಬಿಂಬಗಳು ಸೂರ್ಯನೇ ಮೊದಲಾದವುಗಳಿಂದ ಹುಟ್ಟುವ ಹಾಗೆ ಸೂಕ್ಷ್ಮ ಸ್ಥೂಲ ಮೊದಲಾದ ಶರೀರಗಳೆಂಬ ಉಪಾಧಿಗಳ ನಿಮಿತ್ತದಿಂದ ಪ್ರತಿಬಿಂಬರಾದ ಜೀವರು ಶ್ರೀಹರಿಯಿಂದ ಜನಿಸುವರು. ಇದು ಜೀವ ಸೃಷ್ಟಿ.

3.ಕುಂಬಾರನು ಮಣ್ಣಿನಿಂದ ಮಡಿಕೆ ಮಾಡುವಂತೆ ಈಶ್ವರನು ಜಡಪ್ರಕೃತಿಯಿಂದ ಮಹತ್ತತ್ತ್ವ ಅಂಹಕಾರತತ್ತ್ವ ಮುಂತಾದ ಎಲ್ಲ ಜಡಪದಾರ್ಥಗಳನ್ನು ಸೃಷ್ಟಿಸುವನು. ಇದು ಜಡ ಸೃಷ್ಟಿ.

### *ಭಾಗವತತಾತ್ಪರ್ಯ*

**ಆಚಾರ್ಯರು ನಿಬಂಧಿಸಿದ ಮಂಗಲಪದ್ಯ**

ಭಗವಾನ್ ಬಾದರಾಯಣರು ಯೋಗ್ಯರಿಗೆ ಮುಕ್ತಿಯಾಗಲೆಂದು ಶ್ರೀಮದ್ಭಾಗವತ ಪುರಾಣವನ್ನು ರಚಿಸಿದ್ದರೂ ಅಸಜ್ಜನರ ಅಪವ್ಯಾಖ್ಯಾನಗಳಿಂದ ಶ್ರೀಮದ್ಭಾಗವತವು ತನ್ನ ಯಥಾರ್ಥಜ್ಞಾನಸಾಮರ್ಥ್ಯವನ್ನು ಕಳೆದುಕೊಂಡದ್ದರಿಂದ (ಪ್ರತಿಬದ್ಧವಾದ್ದರಿಂದ)ರಚಿಸದಂತೆಯಾಗಿದೆ ಎಂದು ತಿಳಿದ ಪೂರ್ಣಪ್ರಜ್ಞರು ವೇದವ್ಯಾಸದೇವರಿಗೆ ಅಭಿಪ್ರೇತವಾದ ತಾತ್ಪರ್ಯವನ್ನು ಬರೆಯುವ ಇಚ್ಛೆಯಿಂದ ದಗ್ಧಪಟಾಯಮಾನ ಪ್ರಕೃತಿ ಬಂಧವುಳ್ಳವರಾದ್ದರಿಂದ ತಮಗೆ ವಿಘ್ನಗಳು ಬಾರದಿದ್ದರೂ ಸರ್ವದಾ ಭಗವಂತನಲ್ಲಿಯೇ ಆಸಕ್ತವಾದ ನಮ್ರವಾದ ದೇಹೇಂದ್ರಿಯಪ್ರವೃತ್ತಿ ಉಳ್ಳವರಾಗಿದ್ದರೂ ಅವಿರುದ್ಧವಾದ ಎಲ್ಲ ಶಿಷ್ಟಾಚಾರದಿಂದ ಪ್ರಾರಂಭಿಸಿದ ಕಾರ್ಯದ ನಿರ್ವಿಘ್ನ ಪರಿಸಮಾಪ್ತಿ ಮತ್ತು ಪ್ರಸಿದ್ಧಿಗಳಿಗೆ ಕಾರಣವೆಂದು ತಿಳಿಯಲ್ಪಟ್ಟ ಪರಬ್ರಹ್ಮಚಿಂತನರೂಪ ಮಂಗಲವನ್ನು ಅವಶ್ಯಮಾಡಬೇಕೆಂದು ಶಿಷ್ಯರಿಗೆ ತಿಳಿಸಲು ತಾವು ಅನುಷ್ಠಾನ ಮಾಡಿ ಗ್ರಂಥಾರಂಭದಲ್ಲಿ ನಿಬಂಧನೆ ಮಾಡುವರು.

**ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿದೃಶಿತಮೋ ಬಂಧಮೋಕ್ಷಾಶ್ಚ ಯಸ್ಮಾತ್**
**ಅಸ್ಯ ಶ್ರೀಬ್ರಹ್ಮರುದ್ರಪ್ರಭೃತಿಸುರನರದ್ವೇಶಶತ್ವಾತ್ಮಕಸ್ಯ ।**
**ವಿಷ್ಣೋರ್ವರ್ಯಾಸ್ತಾಃ ಸಮಸ್ತಾಃ ಸಕಲಗುಣನಿಧಿಃ ಸರ್ವದೋಷವ್ಯಪೇತಃ**
**ಪೂರ್ಣಾನಂದೋಽವ್ಯಯೋ ಯೋ ಗುರುರಪಿ ಪರಮಶ್ಚಿಂತಯೇ ತಂ ಮಹಾಂತಂ ॥**

ಈ ಶ್ಲೋಕವು ಶ್ರೀಮದ್ಭಾಗವತದ ಮೊದಲನೆಯ ಶ್ಲೋಕದಲ್ಲಿರುವ ವಿಶೇಷಣಗಳ ವಿವರಣೆಯನ್ನೇ ತಿಳಿಸುವದರಿಂದ ಮುಂದೆ ಶ್ರೀಮದಾಚಾರ್ಯರು ಅವುಗಳಿಗೆ ಏನು ಪ್ರಯೋಜನ ಹೇಳುವರೋ ಆ ಪ್ರಯೋಜನಗಳು ಇಲ್ಲಿಯ ವಿಶೇಷಣಗಳಿಗಿವೆ ಎಂದು ತಿಳಿಯಬೇಕು.

**ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿದೃಶಿತಮೋಬಂಧಮೋಕ್ಷಾಃ** ಲಕ್ಷ್ಮೀದೇವಿ, ಬ್ರಹ್ಮ, ರುದ್ರಾದಿದೇವತೆಗಳು, ಮನುಷ್ಯರು, ದೈತ್ಯರು, ರಾಜರು, ಋಷಿಗಳು, ಗಂಧರ್ವರು,

ಪಿತ್ರಾದಿಗಳು ಜಡಮುಂತಾದ ಚೇತನಾಚೇತನಾತ್ಮಕ ಎಲ್ಲ ಪ್ರಪಂಚಕ್ಕೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಇಚ್ಛೆ ಅಥವಾ ಪ್ರವೃತ್ತಿ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವೆಲ್ಲವೂ ಶ್ರೀಹರಿಯಿಂದ ಆಗುತ್ತವೆಯೋ(ಜಡಕ್ಕೆ ಜ್ಞಾನವಿಲ್ಲ, ಲಕ್ಷ್ಮೀದೇವಿಗೆ ಭಾವರೂಪ ಅಜ್ಞಾನಾದಿಗಳಿಲ್ಲ.)ಆದಕಾರಣ ಸೃಷ್ಟ್ಯಾದಿಗಳುಂಟು ಎಲ್ಲೆಡೆ ಒಂದೇ ರೀತಿ ಇಲ್ಲ. ಕೆಲವು ಕಡೆ **ವ್ಯಸ್ತಾಃ** ವಿಸ್ತೃತವಾಗಿ ಇವೆ.(ಚೇತನಗಳಿಗೆ ಎಂಟು ಇವೆ) ಕೆಲವೆಡೆ **ಸಮಸ್ತಾಃ** ಸಂಕುಚಿತವಾಗಿವೆ. (ಜಡಗಳಿಗೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ ನಾಲ್ಕೇ ಇವೆ.) ಯಾವ ಶ್ರೀಹರಿಯು ಸಮಸ್ತಗುಣಗಳಿಗೆ ಆಶ್ರಯನೋ, ಸರ್ವದೋಷದೂರನೋ, ನಿರತಿಶಯನಿತ್ಯಾನಂದಸ್ವರೂಪನೋ, ನಾಶರಹಿತನೋ, ಬ್ರಹ್ಮಾದಿಗಳಿಗೆ ತತ್ತ್ವೋಪದೇಶಕನೋ, ದೋಷವಿಲ್ಲದ್ದರಿಂದ ಉತ್ತಮವಾದ ಶ್ರುತ್ಯಾದಿಗಳಿಂದ ಪ್ರತಿಪಾದ್ಯನೋ ಅಂತಹ ಸರ್ವೋತ್ತಮನಾದ ಶ್ರೀಹರಿಯನ್ನು ಸರ್ವದಾ ಧ್ಯಾನಿಸುವೆವು.

**ಭಾಗವತ ಮಂಗಲಪದ್ಯದ ವ್ಯಾಖ್ಯಾನ**

**ಜನ್ಮಾದ್ಯಸ್ಯಯತಃ** ಎಂಬುದರ ವ್ಯಾಖ್ಯಾನವೇ **ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿ ದೃಶಿತಮೋ ಬಂಧಮೋಕ್ಷಾಶ್ಚ ಯಸ್ಮಾತ್** ಎಂಬುದು. ಅಸ್ಯ ಎಂದು ಅನುವಾದಿಸಿ **ಶ್ರೀಬ್ರಹ್ಮರುದ್ರಪ್ರಭೃತಿಸುರನರದ್ವೀಪಶತ್ಸ್ವಾತ್ಮಕಸ್ಯ** ಎಂದು ವ್ಯಾಖ್ಯಾನಿಸಿರುವರು. **ಪರ**ಶಬ್ದದ ವ್ಯಾಖ್ಯಾನವೇ **ಸಕಲಗುಣನಿಧಿಃ** ಎಂಬುದು. **ಸದಾ ನಿರಸ್ತಕುಹಕಂ** ಎಂಬುದರ ಅರ್ಥ **ಸರ್ವದೋಷವ್ಯಪೇತಃ** ಎಂದು. **ಕುಹಕ** ಎಲ್ಲ ದೋಷಗಳಿಗೆ ಉಪಲಕ್ಷಕವೆಂದು ಭಾವ. **ಸತ್ಯ** ಶಬ್ದದ ವಿವರಣೆಯೇ **ಪೂರ್ಣಾನಂದಾವ್ಯಯಃ** ಎಂಬುದು. ಅಂದರೆ ನಿರತಿಶಯನಿತ್ಯಾನಂದನು ಎಂದರ್ಥ. **ತೇನೇ ಬ್ರಹ್ಮ** ಎಂಬುದರ ವಿವರಣೆಯೇ **ಪರಮಃ** ಎಂಬುದು. ಪರಾ ಸರ್ವವಿಷಯಾ ಮಾ ಜ್ಞಾನಂ ಯಸ್ಯ ಎಂದು ವಿಗ್ರಹ. **ಧೀಮಹಿ** ಎಂಬುದರ ವಿವರಣೆ **ಚಿಂತಯೇ** ಎಂಬುದು. **ಸ್ವರಾಟ್** ಎಂಬುದರ ತಾತ್ಪರ್ಯವು **ಮಹಾಂತಂ** ಎಂಬುದು. ಪೂರ್ಣಾನಂದತ್ವ ಹೇಳುವದರಿಂದ **ಯತ್ರ ತ್ರಿಸರ್ಗೋ ಮೃಷಾ** ಎಂಬುದರ ತಾತ್ಪರ್ಯ ಸೂಚಿತವಾಗಿದೆ ಎಂದು ತಿಳಿಯಬೇಕು. **ಪರಮಃ** ಎಂಬುವುದೇ **ಅನ್ವಯಾದಿತರತಃ** ಎಂಬುದಕ್ಕೂ ವಿವರಣೆ ನೀಡುತ್ತದೆ. **ಪರಾ** ನಿರ್ದೋಷತ್ವೇನ ಉತ್ತಮಾ **ಮಾ** ಶ್ರುತ್ಯಾದ್ಯಾಃ ಯಸ್ಮಿನ್ ಎಂದು ವಿಗ್ರಹ ಮಾಡುವದರಿಂದ ಶ್ರುತಿತಾತ್ಪರ್ಯವಿಷಯ ತದನುಕೂಲಅನುಮಾನವಿಷಯ ಎಂದರ್ಥವಾಗುವದು ಎಂದು ಭಾವ. ಈ ರೀತಿ ಸಂಕ್ಷೇಪವಾಗಿ ಶ್ಲೋಕರೂಪದಿಂದ

ಮೊದಲನೆಯ ಶ್ಲೋಕವನ್ನು ವ್ಯಾಖ್ಯಾನಿಸಿ ವಿಸ್ತಾರವಾಗಿ ವ್ಯಾಖ್ಯಾನಿಸಲು ಪ್ರತೀಕಗಳನ್ನು ಸ್ವೀಕರಿಸುವರು ಜನ್ಮಾದ್ಯಸ್ಯ ಇತ್ಯಾದಿಯಾಗಿ.

**ಭಾಗವತತಾತ್ಪರ್ಯ-**

> **ಜನ್ಮಾದ್ಯಸ್ಯೇತ್ಯಾದಿ । ತಂ ಪರಂ ಧೀಮಹಿ । ಅನ್ವಯಾತ್ । 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿಶ್ರುತಿಸ್ಮೃತಿಭ್ಯಃ । ಇತರತಃ ತರ್ಕತಃ ಚೇತನಾದ್ಧಿ ಪಿತ್ರಾದೇಃ ಪುತ್ರಾದಿರುತ್ಪದ್ಯತೇ । ಅಭಿಜ್ಞಃ ಸರ್ವಜ್ಞಃ । ಅತೋ ಯುಜ್ಯತೇ..... ।**

ಜನ್ಮಾದ್ಯಸ್ಯ ಯತಃ ಎಂಬುವಲ್ಲಿ ಯಚ್ಛಬ್ದವಿರುವದರಿಂದ ತಂ ಎಂಬ ತಚ್ಛಬ್ದವನ್ನು ಅಧ್ಯಾಹಾರ ಮಾಡಿಕೊಂಡು ಅದಕ್ಕೆ ವಿಶೇಷ್ಯ ದ್ವಾರಾ ಕ್ರಿಯಾನ್ವಯ ತೋರಿಸುವರು. **ತಂ ಪರಂ ಧೀಮಹಿ** ಸರ್ವಗುಣಪರಿಪೂರ್ಣನಾದ ಆ ಪರಮಾತ್ಮನನ್ನು ಧ್ಯಾನಿಸುತ್ತೇವೆ. ಪರಶಬ್ದದಿಂದ ತಿಳಿಸಿದ ಗುಣಪೂರ್ಣತ್ವಲಕ್ಷಣ ಸಾಧನ ಮಾಡಲು **ಜನ್ಮಾದ್ಯಸ್ಯ ಯತಃ** ಎಂಬ ಸೃಷ್ಟ್ಯಾದಿಕರ್ತೃತ್ವರೂಪವಾದ ಮತ್ತೊಂದು ಲಕ್ಷಣ ಹೇಳಲಾಗಿದೆ. ಈ ಎರಡೂ ಲಕ್ಷಣಗಳು ಭಗವಂತನಲ್ಲಿವೆ ಎನ್ನಲು ಏನು ಪ್ರಮಾಣ ಎಂಬ ಪ್ರಶ್ನೆಗೆ ಉತ್ತರ **ಅನ್ವಯಾದಿತರತಃ** ಎಂಬುದು. ಈ ಪದಗಳಿಗೆ ಕಾರ್ಯಗಳಲ್ಲಿ ಸದ್ರೂಪದಿಂದ **ಅನ್ವಯಾತ್** ಅಂದರೆ ಅನುವೃತ್ತನಾದುದರಿಂದ ಮಣ್ಣು, ಸುವರ್ಣಗಳಂತೆ ಬ್ರಹ್ಮನು ಕಾರಣನು. **ಇತರತಃ** ವ್ಯಾವೃತ್ತವಾದ್ದರಿಂದ ವಿಶ್ವವು ಕಾರ್ಯವು ಮುಂತಾಗಿ ತಪ್ಪು ಅರ್ಥಗಳಾಗದಿರಲೆಂದು ಆ ಎರಡು ಪದಗಳನ್ನು ವ್ಯಾಖ್ಯಾನಿಸಿರುವರು. 'ಯತೋ ವಾ' ಮುಂತಾದ ಎಲ್ಲ ಶ್ರುತಿ ಸ್ಮೃತಿಗಳಿಗೆ ಶ್ರೀಹರಿಯಲ್ಲಿಯೇ ಶಕ್ತಿತಾತ್ಪರ್ಯರೂಪ ಸಂಬಂಧವಿರುವದರಿಂದಲೂ ಈ ಚೇತನಾಚೇತನಾತ್ಮಕ ಪ್ರಪಂಚವು ಯಾರಿಂದ ಹುಟ್ಟುವದೋ ಇವೇ ಮೊದಲಾದ 'ಸ ಇದಂ ಸರ್ವಮಸೃಜತ' 'ಯೋ ನಃ ಪಿತಾ ಜನಿತಾ' ಮುಂತಾದ ಶ್ರುತಿಗಳಿಂದಲೂ 'ಸೃಷ್ಟಾ ಪಾತಾ ಚ ಸಂಹರ್ತಾ' 'ಯತೋ ಜಗತ್ಸ್ಥಾನನಿರೋಧಸಂಭವಃ' 'ಯತಃ ಸರ್ವಾಣಿ ಭೂತಾನಿ ಭವಂತ್ಯಾದಿ ಯುಗಾಗಮೇ' 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ' ಇವೇ ಮೊದಲಾದ ಸ್ಮೃತಿಗಳಿಂದಲೂ ಶ್ರೀಹರಿಯು ಜಗಜ್ಜನ್ಮಾದಿಕಾರಣನು ಗುಣಪರಿಪೂರ್ಣನೂ ಎಂದು ಸಿದ್ಧವಾಗುವದು. **ಇತರತಃ** ಅನುಮಾನದಿಂದ ಚೇತನರಾದ ಪಿತ್ರಾದಿಗಳಿಂದಲೇ ಪುತ್ರಾದಿಗಳು ಹುಟ್ಟುತ್ತಾರಷ್ಟೇ (ವಿಷ್ಣುವು ಚೇತನನಾದುದರಿಂದ ಕರ್ತೃ ಆಗಲಾರನು ಎಂದು ಸಿದ್ಧವಾಗುವಾಗ

ಶ್ರುತಿಸ್ಮೃತಿಗಳಿಗೆ ಅನುಕೂಲವಾದ ಅನುಮಾನದಿಂದ ಶ್ರೀಹರಿಗೆ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ. ಶ್ರೀಹರಿಯು ನಮ್ಮಂತೆ ಅಸರ್ವಜ್ಞನಾದರೆ ಚೇತನನಾದರೂ ಶ್ರೀಹರಿಗೆ ಜಗತ್ಕರ್ತೃತ್ವವು ಕೂಡಲಾರದು ಎಂದರೆ **ಅರ್ಥೇಷ್ವಭಿಜ್ಞಃ** ಎಂದು ಹೇಳಿದ್ದು ಎಲ್ಲ ಪದಾರ್ಥಗಳನ್ನೂ ಚೆನ್ನಾಗಿ ತಿಳಿದವನಾದುದರಿಂದ ಶ್ರೀಹರಿಗೆ ಕರ್ತೃತ್ವ ಮುಂತಾದವು ಉಪಪನ್ನವಾಗುತ್ತವೆ ಎಂದರ್ಥ. ಮತ್ತೊಬ್ಬರ ಅಧೀನನಾದವನಿಗೆ ನಮ್ಮಂತೆ ಸರ್ವಕರ್ತೃತ್ವ ಕೂಡಲಾರದು ಎಂಬ ಶಂಕೆ ಪರಿಹರಿಸಲು **ಸ್ವರಾಟ್** ಸ್ವತಂತ್ರ ಎಂದು ಹೇಳಿರುವರು. ಅದನ್ನು ಪ್ರಮಾಣದಿಂದ ಉಪಪಾದನೆ ಮಾಡುತ್ತ ವ್ಯಾಖ್ಯಾನಿಸುವರು.

*ಭಾಗವತತಾತ್ಪರ್ಯ-*

**ಭಗವಂತ ಸ್ವತಂತ್ರ**

> **- ...... ..... 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' । 'ಮಮ ಯೋನಿಃ' ಇತ್ಯನ್ಯೇಷಾಂ ತದಪೇಕ್ಷತ್ವಾತ್ । ನ ಚ ಅನ್ಯಾಪೇಕ್ಷೋಽಸೌ ಸ್ವರಾಟ್ ಕುತಃ ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಸ ಹಿ 'ವಿಶ್ವಾ ಜಾತಾನಿ ಪರಿತಾ ಬಭೂವ' । ನಾನ್ಯಃ । ಹೃದಾ ಸ್ನೇಹೇನ (ಸ್ನೇಹಾತ್)**

ಅಂಭೃಣೀ ಸೂಕ್ತದಲ್ಲಿ ಲಕ್ಷ್ಮೀದೇವಿಯು ಯಾರನ್ನು ರುದ್ರನನ್ನಾಗಿ ಮಾಡಲು ಇಚ್ಛಿಸುತ್ತೇನೋ ಅವನನ್ನು ರುದ್ರನನ್ನಾಗಿ ಮಾಡುತ್ತೇನೆ.(ಮುಂತಾಗಿ ಬ್ರಹ್ಮರುದ್ರಾದಿಗಳಿಗೆ ತನ್ನ ಅಧೀನತೆಯನ್ನು ಹೇಳಿ) ನನಗೆ ಕಾರಣನು ಕ್ಷೀರಾಬ್ಧಿಶಾಯಿಯು ಎಂದು. ತಾನು ಭಗವದಧೀನಳು ಎಂದು ಹೇಳಿರುವದರಿಂದ 'ರಮಾಬ್ರಹ್ಮಾದಿಗಳು ಈಶ್ವರಾಧೀನರು ಶ್ರೀಹರಿಯಾದರೂ ಅನ್ಯಾಧೀನನಲ್ಲ ಎಂದು ಸಿದ್ಧವಾಗುವದು.

ಅನ್ಯಾಧೀನನಲ್ಲ ಎಂದ ಮಾತ್ರಕ್ಕೆ ಶ್ರೀಹರಿಯು ಸರ್ವಜ್ಞನು, ಸರ್ವಸ್ವತಂತ್ರನು ಎಂಬುದು ಹೇಗೆ ಸಿದ್ಧಿಸುತ್ತದೆ ಎಂದರೆ ಯಾವ ಶ್ರೀಹರಿಯು ಚತುರ್ಮುಖನಿಗೆ ವೇದವನ್ನು ಸ್ನೇಹದಿಂದ ಸಂಪೂರ್ಣ ಉಪದೇಶಿಸಿರುವನೋ(ಇದರಿಂದ ಸರ್ವಜ್ಞತ್ವ ಸಿದ್ಧಿಸುವುದು) ಆ ಚತುರ್ಮುಖನೇ ಈ ಕಲ್ಪದಲ್ಲಿ ಹುಟ್ಟಿರುವ ಎಲ್ಲ ವಸ್ತುಗಳಿಗೆ ಅಧಿಪತಿಯಾಗಿರುತ್ತಾನೆ. ಇದನ್ನೇ 'ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ' ಎಂಬ ಶ್ರುತಿಯು ಸ್ಪಷ್ಟಪಡಿಸುತ್ತದೆ. ಸರ್ವಾಧಿಪತಿಯಾದ ಚತುರ್ಮುಖನಿಗೆ ಶ್ರೀಹರಿಯು ಉಪದೇಶಕನೆಂದ ಮೇಲೆ ಸರ್ವಸ್ವತಂತ್ರನೆಂದು ಸಿದ್ಧವಾಗುತ್ತದೆ.

ಮೇಲೆ ಉದಾಹರಿಸಿದ ಶ್ರುತಿಯು ಹೇಳುವ ಅರ್ಥ ಹೀಗಿದೆ. 'ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ' **ಹೇ ಪ್ರಜಾಪತೇ** ಎಲೋ ಬ್ರಹ್ಮನೇ **ತ್ವತ್**ನಿನ್ನಿಂದ **ಅನ್ಯಃ** ಭಿನ್ನವಾದ **ವಿಶ್ವಾ** ಎಲ್ಲ **ಏತಾನಿ** ಪ್ರತ್ಯಕ್ಷಸಿದ್ಧವಾದ **ತಾ**(ತಾನಿ)ಪರೋಕ್ಷವಾದ **ಜಾತಾನಿ** ಈ ಕಲ್ಪದಲ್ಲಿ ಜನಿಸಿದ ಯಾವನೂ **ಪರಿತಾ ಬಭೂವ** ನಿನ್ನನ್ನು ಸೋಲಿಸಿಲ್ಲ, ಕಿಂತು ನೀನೇ **ಸರ್ವಾನ್ ಪರಿಭವಸಿ** ಸೋಲಿಸಿರುವಿ ಎಂದು ಸರ್ವಾಧಿಕತ್ವವನ್ನು ಬ್ರಹ್ಮನಿಗೆ ಹೇಳಿದೆ.

ಋಗ್ಭಾಷ್ಯದಲ್ಲಿ 'ಜಾತಾ ಪರಿತಾ ಬಭೂವೇತಿ ಮರ್ಯಾದಾಂ ಬ್ರಹ್ಮಣೋಽಪಿ ಹಿ' ಎಂದು ಚತುರ್ಮುಖ ಸಾಮರ್ಥ್ಯಕ್ಕೆ ಮರ್ಯಾದಾ ಹೇಳಿದೆ. ಅಂತೂ ಈ ಕಲ್ಪದಲ್ಲಿಯ ಸರ್ವನಿಯಮನ ಸಮರ್ಥ ಚತುರ್ಮುಖಬ್ರಹ್ಮ. ಅವನಿಗೆ ಉಪದೇಶಕನಾದ ಭಗವಂತ ಅನನ್ಯಾಧಿಪತಿ ಎಂದೂ ಸರ್ವಜ್ಞನೆಂದೂ ಸಿದ್ಧವಾಗುವದು.

ಸಾರ್ವಜ್ಞ ಸ್ವಾತಂತ್ರ್ಯ ಸಿದ್ಧಿಗಾಗಿ ತೇನೇ ಮುಂತಾಗಿ ಹೇಳಿರುವರು ಎಂಬುದು ಸರಿಯಲ್ಲ. ಏಕೆಂದರೆ ಇವೆರಡೂ ಹೇಗೆ ಎಂಬ ಪ್ರಶ್ನೆಯೇ ಸರಿಯಲ್ಲ. ಶ್ರುತಿಸ್ಮೃತಿಸಿದ್ಧಜಗತ್ಕರ್ತೃತ್ವಾನ್ಯಥಾನುಪಪತ್ತಿಯಿಂದ ಸಾರ್ವಜ್ಞಸಿದ್ಧವಾಗುವದು ಎಂಬುದು ಅಭಿಜ್ಞ ಎಂಬಲ್ಲಿ ಅಭಿಪ್ರೇತವಾಗಿದೆ. ಅಲ್ಲವಾದರೆ ಪ್ರತಿಜ್ಞಾ ಮಾಡುವ ಮಾತ್ರದಿಂದ ಶಂಕೆ ಹೋಗಲಾರದು. ಸ್ವತಂತ್ರತ್ವವು ಸಹ ಅಂಭ್ರಣಿಸೂಕ್ತ ಪರ್ಯಾಲೋಚನದಿಂದ ಸಿದ್ಧವಾಗುವದು. ಆದ್ದರಿಂದ ಪ್ರಶ್ನೆ ಸರಿಯಲ್ಲ ಎನ್ನುವದು ಸರಿಯಲ್ಲ. ಏಕೆಂದರೆ ಜಗತ್ಕರ್ತೃತ್ವಾನ್ಯಥಾನುಪಪತ್ತಿಯಿಂದ ಸಿದ್ಧವಾದ ಸರ್ವಜ್ಞತ್ವವು ಜಗದ್ವಿಷಯಕವಾದಸರ್ವಜ್ಞತ್ವವು ಮಾತ್ರ. ಎಲ್ಲ ವಿಷಯದಲ್ಲಿ ಅಲ್ಲ. ಇದು ಚತುರ್ಮುಖನಿಗೂ ಬರುವದು. ಅವನ ಜ್ಞಾನವೂ ಈಶಾದನ್ಯತ್ರ ಆಲೋಚನೆ ಸರ್ವವಿಷಯಕವಾಗಿದೆ. ಕಾರಣ ಮೊದಲನೆ ಪ್ರಶ್ನೆಗೆ ಭಗವಂತ ಸರ್ವಜ್ಞನೇಕೆ ಎಂದಿಷ್ಟೇ ಅರ್ಥವಲ್ಲ ಬ್ರಹ್ಮನಿಗಿಂತ ಸರ್ವಜ್ಞನೇಕೆ ಎಂದರ್ಥ ವಿವಕ್ಷಿತವಾಗಿದೆ. ಇನ್ನು ಎರಡನೆಯ ಪ್ರಶ್ನೆಯಲ್ಲಿಯೂ ತಂ ಬ್ರಹ್ಮಾಣಂ ಎಂಬುವಲ್ಲಿ ಬ್ರಹ್ಮಶಬ್ದಕ್ಕೆ ಬೃಹಸ್ಪತಿ ಎಂದು ಅರ್ಥ ಮಾಡಿ ಲಕ್ಷ್ಮೀದೇವಿಗೆ ಚತುರ್ಮುಖಬ್ರಹ್ಮಾಧಿಕತ್ವ ಸಿದ್ಧವಾಗದ ಕಾರಣ ತೇನೆ ಎಂಬುದರಿಂದ ಸರ್ವಾಧಿಕಬ್ರಹ್ಮಾಧಿಕತ್ವವನ್ನು ಹೇಳಿದ್ದರಿಂದ ಅನನ್ಯಾಧೀನತ್ವ ಅತ್ಯಂತ ಯುಕ್ತವಾಗುವದು. ಇನ್ನು ಇದರಿಂದ ಲಕ್ಷ್ಮೀದೇವಿ ಭಗವದಧೀನವೆಂದು ತಿಳಿಯುವದಿಲ್ಲ ಕಾರಣ 'ಯಂ ಕಾಮಯೇ' ಮುಂತಾದ ಉಪಪಾದನೆಯು ಸಾರ್ಥಕ. (ನ ಚ ಪ್ರಸಿದ್ಧಾರ್ಥಂ ವಿನಾ ಅನ್ಯೋ ಅರ್ಥೋ ಯುಜ್ಯತೇ) ಎಂದು ಭಾವ.

**ಶ್ರೀಹರಿಗೆ ಬ್ರಹ್ಮೋಪದೇಷ್ಟೃತ್ವವನ್ನು ತಿಳಿಸುವ ಪ್ರಮಾಣ.**

**ಭಾಗವತತಾತ್ಪರ್ಯ- 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' ಇತಿ ಚ । ಸ್ವಾತ್ಮತ ಏವ ಹಿ ತಸ್ಯ ಬುದ್ಧಿಪ್ರಕಾಶಃ । ನ ಚ ಪ್ರಸಾದಂ ವಿನಾ ಜ್ಞಾತುಂ ಶಕ್ಯಃ । ಮುಹ್ಯಂತಿ ಯಂ ಸೂರಯಃ । ನ ಚಾತೃಪ್ತಃ ಪ್ರವರ್ತತೇ । ಕಿಂತು ಮೃಷಾ ವೃಥೈವ । ಭಿತ್ವಾ ಮೃಷಾಶ್ರುಃ ಇತಿವತ್ ।**

ಯಾವನು ಮೊದಲಿಗೆ ಬ್ರಹ್ಮನನ್ನು ಸೃಷ್ಟಿಸಿ ವೇದಗಳನ್ನು ಉಪದೇಶಿಸಿದ ಶ್ರೀಹರಿಯನ್ನು ಮೋಕ್ಷಕ್ಕಾಗಿ ಶರಣು ಹೊಂದುವನೋ ಎಂದು ಹೇಳುವ ಮೂಲಕ ಶ್ರೀಹರಿಯು ಬ್ರಹ್ಮನಿಗೆ ಸರ್ವವೇದೋಪದೇಶಕನೆಂದು ಸಿದ್ಧಿಸುವದು. (ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ, ತಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ' ಎಂದು ಶ್ರುತಿ ಇದೆ.)'ಆತ್ಮಬುದ್ಧಿ ಪ್ರಕಾಶಂ' ಎಂಬುದರ ಅರ್ಥ ಆ ಶ್ರೀಹರಿಗೆ ತನ್ನಿಂದಲೇ ಬುದ್ಧಿಯ ಆವಿರ್ಭಾವವು. ಇದರಿಂದ ಶ್ರೀಹರಿಗೆ ಇನ್ನೊಬ್ಬ ಉಪದೇಶಕನಿಲ್ಲವೆಂದು ಸಿದ್ಧಿಸುವದು. ಜ್ಞಾನಿಯೂ ಕೂಡ ಶ್ರೀಹರಿಯ ವಿಷಯದಲ್ಲಿ ಮೋಹಪಡುವುದರಿಂದ ಅವನ ಅನುಗ್ರಹವಿಲ್ಲದೆ ಅವನನ್ನು ತಿಳಿಯಲು ಸಾಧ್ಯವಿಲ್ಲ. ಕಾರಣ ಶ್ರೀಹರಿಯನ್ನು ತಿಳಿಯಲು ಶ್ರೀಹರಿಯ ಪ್ರಸಾದವು ಆವಶ್ಯಕವು ಆದ್ದರಿಂದಲೇ **ಹೃದಾ** ಎಂದು ಅವನ ಅನುಗ್ರಹವನ್ನು ತಿಳಿಸಿದ್ದು. ಶ್ರೀಹರಿಯು ತನ್ನ ಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುವದಾದರೆ ಅಪೂರ್ಣತ್ವ ಬರಬೇಕಾಗುವದು. ಪ್ರಯೋಜನವಿಲ್ಲದೇ ಲೋಕದಲ್ಲಿ ಪ್ರವೃತ್ತಿ ಕಂಡಿಲ್ಲ. ಹಾಗೆ ಮಾಡಿದರೆ ಅಜ್ಞಾನಿ ಎನಿಸುವನು. **ತೃಪ್ತಃ** ಪೂರ್ಣನಾದವನು ತನ್ನ ಪ್ರಯೋಜನಕ್ಕಾಗಿ ಪ್ರವರ್ತಿಸುವುದಿಲ್ಲ. ಹಾಗಾದರೆ ಯಾರಿಗಾಗಿ ಈ ಪ್ರವೃತ್ತಿ? ಎಂದರೆ ತನಗೆ ಪ್ರಯೋಜನವಿಲ್ಲದಿದ್ದರೂ ಸ್ವಭಾವದಿಂದ ಇತರರಿಗಾಗಿ ಸೃಷ್ಟ್ಯಾದಿಗಳಲ್ಲಿ ಪ್ರವರ್ತಿಸುವನು. **ನ ಚ ಅತೃಪ್ತಃ** ಎಂದು ಪಾಠವಿದ್ದಾಗ ಅಪೂರ್ಣನು ಸೃಷ್ಟ್ಯಾದಿಗಳಲ್ಲಿ ಪ್ರವರ್ತಿಸಲಾರನು ಪ್ರವರ್ತಿಸಿದ್ದಾನೆ ಎಂದರೆ ಪೂರ್ಣನೇ ಇರಬೇಕು. ಹಾಗಾದರೆ ಪ್ರವೃತ್ತಿ ಏಕೆಂದರೆ **ಮೃಷಾ** ಎಂದು ಯೋಜಿಸಬೇಕು. ಶ್ರೀಮದ್ಭಾಗವತದಲ್ಲಿ (10-10-6) ಹೇಳಿದ **ಭಿತ್ವಾ ಮೃಷಾಶ್ರುದೃಷದಶ್ಮ ನಾರದೋ ಜಹಾಸ ಹೈಯಂಗವಮಂತರಂಗತಃ** ಎಂಬಲ್ಲಿಯ ಮೃಷಾಶಬ್ದಕ್ಕೆ ಶ್ರೀಕೃಷ್ಣನ ಕಣ್ಣೀರು ಸುಳ್ಳು ಎನ್ನಲಾಗದು ಯಶೋದೆ ಕಣ್ಣಾರೆ ಕಂಡಿರುವಳು ಕಾರಣ ವ್ಯರ್ಥವೆಂದು ಹೇಗೆ ಅರ್ಥಮಾಡಿದೆಯೋ ಹಾಗೆಯೇ ತ್ರಿಸರ್ಗೋ ಮೃಷಾ ಎಂಬಲ್ಲಿಯ ಮೃಷಾ ಶಬ್ದಕ್ಕೂ ಪರಮಾತ್ಮನ ವಿಷಯದಲ್ಲಿ **ಮೃಷಾ** ಪ್ರಯೋಜನವಿಲ್ಲದ್ದು ಎಂದೇ ಅರ್ಥ ಮಾಡಬೇಕು.

**ಶ್ರೀಹರಿಯ ಪ್ರವೃತ್ತಿ ಸ್ವಾಭಾವಿಕವೆನ್ನಲು ಪ್ರಮಾಣ**

ಭಾಗವತತಾತ್ಪರ್ಯ- ''ದೇವಸ್ಯೈಷ ಸ್ವಭಾವೋಽಯಮಿತಿ ಚ । ಯತ್ರೇತಿ ವಿಶೇಷಣಾನ್ನಾನ್ಯತ್ರ । ಸ್ವವಿಷಯೇ ಏವ ವೃಥಾ । ಜೀವೇಶ್ವರಜಡಾನಾಂ ಸರ್ಗಃ ತ್ರಿಸರ್ಗಃ । ಏಕಸ್ಯ ತೇಜಸೋ ಬಹುತ್ವವತ್ ಈಶ್ವರಸರ್ಗಃ । ವಾರಿನಿಮಿತ್ತಪ್ರತಿಬಿಂಬವಜ್ಜೀವಸರ್ಗಃ । ಮೃದೋ ಘಟಾದಿವದ ವ್ಯಕ್ತಾಜ್ಜಡಸರ್ಗಃ । ನ ಚ ಮಾಯಾಮಯೀ ಸೃಷ್ಟಿಃ ।

ಧಾಮ್ನಾ ಸ್ವೇನ ಸದಾ ನಿರಸ್ತಕುಹಕಮ್ । ತದ್ಧಾಮ್ನಾ ಶ್ರೀಯೋ ನಿರಸ್ತಕುಹಕತ್ವಂ ಮುಕ್ತಾನಾಂ ಚ । ನ ಚ ಮುಕ್ತವತ್ ಪೂರ್ವಬಂಧಭಾಕ್ತ್ವಮ್ । ಸದಾ ನಿರಸ್ತಕುಹಕತ್ವಾತ್ । ಸತ್ಯಂ ನಿತ್ಯನಿರ್ದುಃಖನಿರತಿಶಯಾನಂದಾನುಭವರೂಪಂ ಪರಂ ಸಂಪೂರ್ಣಗುಣಮ್ । ಪರತ್ವಸಾಧಕಂ ಜನ್ಮಾದೀತ್ಯಾದಿ ॥

**ಏಷಃ** ಇಚ್ಛಾರೂಪವಾದ **ಅಯಂ** ಜಗತ್ಸೃಷ್ಟ್ಯಾದಿವ್ಯಾಪಾರವು **ದೇವಸ್ಯ** ಶ್ರೀಹರಿಯ **ಸ್ವಭಾವಃ** ಸ್ವಭಾವವು ಸಕಲಪ್ರಾಪ್ತವ್ಯನಿಗೆ ಎಲ್ಲಿ ಪ್ರಯೋಜನಾಪೇಕ್ಷೆ ಎಂದು ಮಾಂಡೂಕಶ್ರುತಿಯಲ್ಲಿದೆ. ಯತ್ರ ಎಂದು ವಿಶೇಷಣ ಕೊಟ್ಟಿದ್ದರಿಂದ ಅನ್ಯತ್ರ ವ್ಯರ್ಥವಲ್ಲ ತನ್ನ ವಿಷಯದಲ್ಲಿಯೇ ವ್ಯರ್ಥ. ಅಂದರೆ ಜಗತ್ಸೃಷ್ಟ್ಯಾದಿಗಳಿಂದ ತನಗೆ ಪ್ರಯೋಜನವಿಲ್ಲ. ಪರರ ಪ್ರಯೋಜನಕ್ಕಾಗಿ ಪ್ರವೃತ್ತಿಯು ಎಂದು ಹೇಳಿದಂತಾಯಿತು. ತ್ರಿಸರ್ಗಃ ಎಂಬುದಕ್ಕೆ ಅನೇಕರು ಅನೇಕಾರ್ಥಗಳನ್ನು ಮಾಡಿರುವರು ಅದು ಸರಿಯಲ್ಲ ಎಂದು ತಿಳಿಸಲು ಅರ್ಥ ಹೇಳುವರು. **ತ್ರಿಸರ್ಗಃ** ಜೀವ, ಈಶ್ವರ, ಜಡಗಳ, ಸೃಷ್ಟಿಯು.

1.**ಈಶ್ವರಸೃಷ್ಟಿ**-ಮೂಲಭೂತ ತೇಜಸ್ಸು ಪಾರ್ಥಿವಪದಾರ್ಥಗಳಲ್ಲಿ ಬಹಳಕಡೆ ಪ್ರವೇಶ ಮಾಡಿದ್ದು ಅರಣಿಮಂಥನದಿಂದ ಕ್ವಚಿತ್ ಕಾಣಿಸಿಕೊಳ್ಳುವದೋ ಹಾಗೆಯೇ ಜಗತ್ತನ್ನು ಸೃಷ್ಟಿಸಿ ಸರ್ವಕಾರ್ಯಗಳಲ್ಲಿ ಪ್ರವೇಶಿಸಿ ವಾಸುದೇವಾದಿರೂಪಗಳಿಂದ ಕಾಣಿಸಿಕೊಳ್ಳುವನು. ಇದೇ ಈಶ್ವರ ಸೃಷ್ಟಿಯು.

2.**ಜೀವಸೃಷ್ಟಿ**- ಜಲಮುಂತಾದ ಉಪಾಧಿನಿಮಿತ್ತಗಳಿಂದ ಸೂರ್ಯಕಮೊದಲಾದ ಪ್ರತಿಬಿಂಬಗಳು ಸೂರ್ಯಾದಿಗಳಿಂದ ಉಂಟಾಗುವವೋ ಹಾಗೆಯೆ ಸೂಕ್ಷ್ಮ-ಸ್ಥೂಲದೇಹರೂಪಉಪಾಧಿನಿಮಿತ್ತಗಳಿಂದ ಪ್ರತಿಬಿಂಬರಾದ ಜೀವರು ಶ್ರೀಹರಿಯಿಂದ ಹುಟ್ಟುವರು. ಇದೇ ಜೀವಸೃಷ್ಟಿ.

3.**ಜಡಸೃಷ್ಟಿ**-ಕುಂಬಾರನು ಮಣ್ಣಿನಿಂದ ಮಡಿಕೆ ಮುಂತಾದವುಗಳನ್ನು ಮಾಡುವಂತೆ ಶ್ರೀಹರಿಯು ಜಡಪ್ರಕೃತಿಯನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ಜಡಪದಾರ್ಥಗಳನ್ನು ಸೃಷ್ಟಿಸುತ್ತಾನೆ. ಇದು ಜಡ ಸೃಷ್ಟಿ.

ಐಂದ್ರಜಾಲಿಕದಂತೆ ಜಗತ್ಸೃಷ್ಟಿಯು ಮಾಯಿಕವಲ್ಲ(ಸುಳ್ಳಲ್ಲ) ಸ್ವರೂಪಭೂತವಾದ ಜ್ಞಾನದ ಮಹಿಮೆಯಿಂದ ನಿತ್ಯದಲ್ಲಿಯೂ ಇಂದ್ರಜಾಲ ಮುಂತಾದ ಮಾಯೆಗಳ ಸಂಪರ್ಕವಿಲ್ಲದಿರುವವನು. ಶ್ರೀಹರಿಯ ಸಾಮರ್ಥ್ಯದಿಂದಲೇ ಲಕ್ಷ್ಮೀದೇವಿಗೂ, ಲಕ್ಷ್ಮೀನಾರಾಯಣರ ಅನುಗ್ರಹದಿಂದ ಮುಕ್ತರಿಗೂ ಮಾಯಾ ಸಂಪರ್ಕವಿಲ್ಲ. ಶ್ರೀಹರಿಯು ಸದಾದೋಷ ಸಂಪರ್ಕವಿಲ್ಲದವನಾದ್ದರಿಂದ ಮುಕ್ತರಿಗೆ ಮೊದಲು ಸಂಸಾರಬಂಧವಿದ್ದಂತೆ ಶ್ರೀಹರಿಗೆ ಮೊದಲೂ ಸಂಸಾರಬಂಧವಿಲ್ಲ (ನಿತ್ಯಮುಕ್ತನು) **ಸತ್ಯ**-ನಿತ್ಯದಲ್ಲಿಯೂ ದುಃಖಲೇಶವಿಲ್ಲದ ನಿರತಿಶಯ ಆನಂದಾನುಭವ ರೂಪನು. **ಪರಂ**-ಪ್ರತ್ಯೇಕವಾಗಿ ಪೂರ್ಣಗುಣಗಳುಳ್ಳವನು. ಹೀಗೆ ಜನ್ಮಾದ್ಯಸ್ಯ ಇತ್ಯಾದಿಗಳಿಂದ ಶ್ರೀಹರಿಯು ಸರ್ವೋತ್ತಮನೆಂದು ಸಿದ್ಧವಾಗುವದು.

*ಭಾಗವತತಾತ್ಪರ್ಯ-*

ತಾವು ಹೇಳಿದ ಅರ್ಥವನ್ನು ಸಮರ್ಥಿಸಲು ತಂತ್ರಭಾಗವತದ ಸಮ್ಮತಿಯನ್ನು ತಿಳಿಸುವರು.

ತಂತ್ರಭಾಗವತೇ ಚ -

ಸೃಷ್ಟಿಸ್ಥಿತ್ಯಪ್ಯಯೇಹಾದೇಃ ಶ್ರುತಿಸ್ಮೃತಿಸಮನ್ವಯಾತ್ ।
ಯುಕ್ತಿತಶ್ಚೇತಿ ಪೂರ್ವಾದೇಃ ಶ್ರೀಬ್ರಹ್ಮಭವಪೂರ್ವಿಣಃ ॥

ಸುರಗಂಧರ್ವಮನುಜಪಿತೃದೈತ್ಯಾತ್ಮನಃ ಪೃಥಕ್ ।
ಕರ್ತಾ ವಿಷ್ಣುರಜೋ ನಿತ್ಯಃ ಸರ್ವಜ್ಞತ್ವಾನ್ನ ಚಾಪರಃ ॥

ಅನನ್ಯಾಧಿಪತಿಶ್ಚಾಸೌ ಗರೀಯಾನ್ ಬ್ರಹ್ಮಣೋ ಯತಃ ।
ತತ್ಪ್ರಸಾದಮೃತೇ ತಸ್ಯ ನಾನ್ಯೋವೇತ್ತಾಽಸ್ತಿ ಕಶ್ಚನ ॥

ತೇಜಸೋ ರೂಪವದ್ರೂಪಂ ಬಹುಧಾ ಕುರುತೇ ಹರಿಃ ।
ವಾರಿಸ್ಥತೇಜಃ ಪ್ರತಿಮಾ ಜೀವಾಸ್ತಸ್ಮಾದ್ವಿನಿರ್ಗತಾಃ ॥

ಕುಲಾಲೇನ ಮೃದಾ ಯದ್ವನ್ನಿರ್ಮೀಯಂತೇ ಘಟಾದಯಃ ।
ವಿಷ್ಣುನೈವಂ ಪ್ರಕೃತ್ಯೈವ ನಿರ್ಮ್ಯತೇ ಜಗದೀದೃಶಮ್ ॥

ಏಷ ತ್ರಿಸರ್ಗೋ ವಿಷ್ಣೋಸ್ತು ವೃಥಾ ಲೋಕಸ್ಯ ಚಾವೃಥಾ ।
ಇಂದ್ರಜಾಲವಿಧಾಂ ಸೃಷ್ಟಿಂ ಮನ್ಯಂತೇ ಜ್ಞಾನದುರ್ಬಲಾಃ ॥

ನಿತ್ಯಂ ನಿರಸ್ತೇಽನ್ದ್ರಜಾಲೇ ಸ್ವತ ಏವ ಕಥಂ ಭವೇತ್ ।
ಅಕ್ಷಮಾ ಸತ್ಯಸೃಷ್ಟೌ ಹಿ ಮಾಯಾಸೃಷ್ಟಿಂ ವಿತನ್ವತೇ ॥

ಅನಂತಾಚಿಂತ್ಯವಿಭವಃ ಕಥಂ ವಾ ಮೀಹತೇ ಹರಿಃ ।
ನಿರ್ದುಃಖಪೂರ್ಣಾನಂದತ್ವಾತ್ ಯಾಮಾಹುಃ ಸತ್ಯಮಚ್ಯುತಮ್ ॥

ನಿರ್ದೋಷಗುಣಪೂರ್ಣತ್ವಾತ್ ಪರಂ ಚಾಹುರ್ಜನಾರ್ದನಮ್ ।
ಏವಂ ವಿಧಾನುಭಾವೋ ಯಃ ಸ ಕಥಂ ನಿಂದಿತಂ ಸೃಜೇತ್ ॥

ಸ್ವಾಪ್ನಾದಿಕಂ ಪರೋ ದೇವಃ ಪ್ರಾಣಾದಿಸ್ಥಸ್ತನೋತ್ಯಸೌ ।
ಕೇವಲಸ್ಯ ಪರಸ್ಯಾಸ್ಯ ಮಾಯಾಸೃಷ್ಟಿರ್ನಯುಜ್ಯತೇ ॥

ತಸ್ಮಾದ್ಬಾಧಾಯುತಾ ಸರ್ವೇ ಸ್ವಪ್ನಾದ್ಯಾ ಯೇ ತ್ವಕೇವಲಾಃ ।
ಇದಂ ನ ಭಾಧ್ಯತೇ ಸರ್ವಂ ಜಗತ್ಕೇವಲಜಂ ಯತಃ ॥

ಮೋಕ್ಷವತ್ಕೇವಲಸ್ಯಾಸ್ಯ ಶಕ್ತ್ಯಾ ಸಮ್ಯಗ್ವಿಜೃಂಭಿತಮ್ ।
ಏತದ್ರಹಸ್ಯಂ ಪರಮಂ ಬ್ರಹ್ಮಸೂತ್ರಪದೋದಿತಮ್ ॥

ಯೇ ತ್ವೇವಂ ನ ವಿಜಾನಂತಿ ತೇ ಹಿ ಯಾಂತ್ಯಧರಂ ತಮಃ ।
ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಸ್ತಾನ್ವಿದ್ಧಿ ನಷ್ಟಾನಚೇತಸಃ ॥

ಯೇ ತ್ವೇತದನುತಿಷ್ಠಂತಿ ಪಾರಂಪರ್ಯಾಗತಂ ಮಮ ॥
ತೇ ಯಾಂತಿ ಪರಮಂ ಸ್ಥಾನಂ ಮಯ್ಯೈವೋದಿತಮಂಜಸಾ । ಇತ್ಯಾದಿ

'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' 'ಪ್ರ ಘಾನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಮ್'' ಬ್ರಹ್ಮಸೂತ್ರ-ಮಹಾಭಾರತ, ಗಾಯತ್ರೀ-ವೇದಸಂಬಂಧಶ್ಚಾಯಂ । ಇತ್ಯಾದಿ ಗ್ರಂಥಃ ॥

ಉಕ್ತಂ ಚ ಗಾರುಡೇ-

ಅರ್ಥೋಽಯಂ ಬ್ರಹ್ಮ ಸೂತ್ರಾಣಾಂ ಭಾರತಾರ್ಥವಿನಿರ್ಣಯಃ ।
ಗಾಯತ್ರೀಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ ॥

ಪುರಾಣಾನಾಂ ಸಾರರೂಪಃ ಸಾಕ್ಷಾದ್ಭಗವತೋದಿತಃ ।
ದ್ವಾದಶಸ್ಕಂಧಸಂಯುಕ್ತೋಽಯಂ ಶತವಿಚ್ಛೇದಸಂಯುತಃ ॥
ಗ್ರಂಥೋಽಷ್ಟಾದಶಸಾಹಸ್ರಃ ಶ್ರೀಮದ್ಭಾಗವತಾಭಿಧಃ ॥ ಇತಿ

**ತಾತ್ಪರ್ಯದಲ್ಲಿ ಉದಾಹರಿಸಿದ ತಂತ್ರಭಾಗವತಾದಿಗಳ ಭಾವಾರ್ಥ**

ತಂತ್ರಭಾಗವತದಲ್ಲಿಯೂ ಭಾಗವತದ ಒಂದನೇ ಶ್ಲೋಕಕ್ಕೆ ನಾವು ಹೇಳಿದಂತೆ ಅರ್ಥ ಹೇಳಿರುತ್ತಾರೆ. ಶ್ರುತಿ ಸ್ಮೃತಿಗಳ ಶಕ್ತಿತಾತ್ಪರ್ಯಸಂಬಂಧವಿರುವದರಿಂದಲೂ ವಿಮತಂ ಕಾರ್ಯಂ ಚೇತನಪೂರ್ವಕಂ ಕಾರ್ಯತ್ವಾತ್, ಘಟವತ್ ಎಂಬುವ ಅನುಮಾನದಿಂದ ಸಾಮಾನ್ಯವಾಗಿ ಒಬ್ಬ ಚೇತನನು ಕರ್ತೃವೆಂದು ಸಿದ್ಧವಾದಾಗ ಬ್ರಹ್ಮಾದಿಗಳಿಗೆ ಅಲ್ಪಶಕ್ತಿ,ಅಸಾರ್ವಜ್ಞ್ಯಾದಿಗಳಿರುವದರಿಂದ ಸರ್ವಕರ್ತೃತ್ವ ಬಾಧಿತವಾಗುತ್ತಿರಲು ವಿಮತಂ ಭಗವತ್ಕರ್ತೃತ್ವಂ ಅಸಂಭವದಿತರಚೇತನಕತ್ವೇ ಸತಿ ಚೇತನ ಕರ್ತೃಕತ್ವಾತ್, ಮುಂತಾದ ಯುಕ್ತಿಗಳಿಂದಲೂ ಲಕ್ಷ್ಮೀ ಬ್ರಹ್ಮ ರುದ್ರ ಮೊದಲಾದ ದೇವತೆಗಳು, ಗಂಧರ್ವರು, ಮನುಷ್ಯರು, ಪಿತೃಗಳು, ದೈತ್ಯರು ಮೊದಲಾದ ಚೇತನಾಚೇತನಾತ್ಮಕಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ, ಪ್ರವೃತ್ತಿ (ಪ್ರೇರಣ) ಮುಂತಾದವುಗಳನ್ನು ಶ್ರೀಹರಿಯು ಸರ್ವಜ್ಞನಾದುದರಿಂದ ಯಥಾಯೋಗ್ಯವಾಗಿ ಪ್ರತ್ಯೇಕವಾಗಿ ಮಾಡುವವನು. ತಾನು ಯಾರಿಂದಲೂ ಹುಟ್ಟದಿರುವವನು ಸರ್ವಥಾ ನಾಶವಿಲ್ಲದವನು. ಬ್ರಹ್ಮರುದ್ರಾದಿಗಳು ಸ್ವತಂತ್ರವಾಗಿ ಜಗತ್ಕಾರಣರಲ್ಲ. ಶ್ರೀಹರಿಯು ರಮಾಬ್ರಹ್ಮಾದಿಗಳಿಗಿಂತ ಉತ್ತಮನಾದುದರಿಂದ ಬೇರೊಬ್ಬ ಅಧಿಪತಿಯಿಲ್ಲದವನು. ಆ ಶ್ರೀಹರಿಯ ಅನುಗ್ರಹವಿಲ್ಲದೇ ಯಾವನೊಬ್ಬನೂ ಶ್ರೀಹರಿಯನ್ನು ತಿಳಿದವನಿಲ್ಲ. ಮೂಲತೇಜಸ್ಸು ಅಲ್ಲಲ್ಲಿ ವ್ಯಕ್ತವಾಗುವಂತೆ ಶ್ರೀಹರಿಯು ತನ್ನ ಸ್ವರೂಪವನ್ನು ವಾಸುದೇವಾದಿಬಹುರೂಪದಿಂದ ವ್ಯಕ್ತಪಡಿಸುತ್ತಾನೆ. ಇದೇ ಈಶ್ವರ ಸೃಷ್ಟಿಯು.

ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಂತೆ ಈಶ್ವರ ಪ್ರತಿಬಿಂಬರಾದ ಜೀವರು ಶ್ರೀಹರಿಯಿಂದ ಹುಟ್ಟುತ್ತಾರೆ. ಇದು ಜೀವಸೃಷ್ಟಿಯು. ಕುಂಬಾರನಿಂದ ಮಡಿಕೆ ಮೊದಲಾದವುಗಳು ಮಣ್ಣಿನಿಂದ ಮಾಡಲ್ಪಡುವಂತೆ ಶ್ರೀಹರಿಯು ಜಡಪ್ರಕೃತಿಯಿಂದ(ಮಣ್ಣಿದ್ದಂತೆ)ಲೇ ಜಗತ್ತನ್ನು(ಜಡ) ಸೃಷ್ಟಿಸುತ್ತಾನೆ. ಇದು ಜಡಸೃಷ್ಟಿಯು. ಜಗತ್ಸೃಷ್ಟ್ಯಾದಿಗಳಿಂದ ಶ್ರೀಹರಿಗೆ ಪ್ರಯೋಜನವಿಲ್ಲ ಪರರಿಗೆ ಪ್ರಯೋಜನವಿದೆ. ಶ್ರೀಹರಿಯ ಸಾಮರ್ಥ್ಯದಿಂದಲೇ ಸತ್ಯಜಗತ್ಸೃಷ್ಟಿಯಾಗುವದು. ಅದು ಹೇಗೆ ಸುಳ್ಳಾಗಲು ಸಾಧ್ಯ? ಸತ್ಯಜಗತ್ಸೃಷ್ಟಿಯಲ್ಲಿ ಶಕ್ತಿ ಇಲ್ಲದವರು ಮಾಯಾಸೃಷ್ಟಿಯನ್ನು ಮಾಡುತ್ತಾರೆ. ಅನಂತ ಅಚಿಂತ್ಯ ಶಕ್ತಿಯುಳ್ಳ ಶ್ರೀಹರಿಯು ಮಾಯಾಸೃಷ್ಟಿಯನ್ನು ಇಚ್ಛಿಸುವನೇಕೆ, ಮಾಡುವನೇಕೆ? ಯಾವ ಶ್ರೀಹರಿಯನ್ನು ಕಿಂಚಿತ್ತೂ ದುಃಖವಿಲ್ಲದ, ಪೂರ್ಣಾನಂದಸ್ವರೂಪನಾದುದರಿಂದ ಸತ್ಯನೆಂದು,

ಹೇಳುತ್ತಾರೆ. ದೋಷವಿಲ್ಲದೆ ಗುಣಪೂರ್ಣನಾದುದರಿಂದ ಶ್ರೀಜನಾರ್ದನನನ್ನು ಪರನೆಂದು ಹೇಳುತ್ತಾರೆ. ಇಂಥ ಸಾಮರ್ಥ್ಯವುಳ್ಳ ಶ್ರೀಹರಿಯು ನಿಂದಿತವಾದ ಇಂದ್ರಜಾಲದಂತಿರುವ ಪ್ರಪಂಚವನ್ನು ಏಕೆ ಸೃಷ್ಟಿ ಮಾಡುವನು?

ಸ್ವಾಪ್ನಪದಾರ್ಥವೆಂದರೆ ಕನಸಿನಲ್ಲಿ ಕಾಣುವ ವಾಸನಾಮಯಪದಾರ್ಥಗಳಲ್ಲಿ ಬಾಹ್ಯಪದಾರ್ಥಗಳ ಅಭೇದವು. ಬೇರೆ ಅಧಿಷ್ಠಾನದಲ್ಲಿದ್ದು ಸುಳ್ಳು ತೋರಿಸುವನು. ಆದರೆ ಬೇರೆ ಅಧಿಷ್ಠಾನದಲ್ಲಿರದೆ ಕೇವಲ ಶ್ರೀಹರಿಯ ಶಕ್ತಿಯಿಂದಲೇ ಸೃಷ್ಟವಾದ ಜಗತ್ತು ಮಾಯಾಸೃಷ್ಟಿಯಾಗುವುದಿಲ್ಲ, ಆದ್ದರಿಂದ ಇಂದ್ರಿಯ ಮಾಯಾವಿ ಮುಂತಾದ ಅಧಿಷ್ಠಾನಗಳಲ್ಲಿದ್ದು ತೋರಿಸಿದ ಸ್ವಾಪ್ನ ಜಾಗ್ರತ್ವ ಇಂದ್ರಜಾಲಿಕಪದಾರ್ಥ ಮುಂತಾದವು ಬಾಧ್ಯವಾಗಿವೆ.(ಇವುಗಳು ಇಲ್ಲವೆಂದು ಮುಂದೆ ತೋರುತ್ತವೆ) ಆದಕಾರಣ ಅವು ಸುಳ್ಳು. ಜಗತ್ತು ಕೇವಲ ಶ್ರೀಹರಿಯಿಂದಲೇ ಹುಟ್ಟಿದ್ದು ಆದ ಕಾರಣ ಮೋಕ್ಷದಂತೆಯೇ ಸತ್ಯವಾದುದು ಸುಳ್ಳಲ್ಲ, ಕೇವಲ ಶ್ರೀಹರಿಯ ಶಕ್ತಿಯಿಂದಲೇ ಸೃಷ್ಟಿತ್ರಯ ಉಂಟಾದದ್ದು. ಆದ ಕಾರಣ ಜಗತ್ತು ಮಾಯಾಮಯವಲ್ಲ ಮುಂತಾದ ಪ್ರಮೇಯವು **ರಹಸ್ಯಂ** ಎಲ್ಲಾ ಆಗಮಗಳ ಮಹಾತಾತ್ಪರ್ಯವಿಷಯವು.

ಯಾರು ಹೀಗೆ ಜ್ಞಾನಿಗಳ ಉಪದೇಶದಿಂದಲೂ ತಿಳಿಯುವದಿಲ್ಲವೋ ಅವರು ಅಂಧಂತಮಸ್ಸನ್ನು ಹೊಂದುತ್ತಾರೆ. ಇದು **'ಅಸುರಾಣಾಂ ತಮಃ ಪ್ರಾಪ್ತಿಃ ತದಾ ನಿಯಮತೋ ಭವೇತ್ । ಯದಾ ತು ಜ್ಞಾನಿಸದ್ಭಾವೇ ನೈವ ಗೃಹ್ಣಂತಿ ತತ್ಪರಂ'** ಎಂದು ಹೇಳಿದೆ. ಯಾರು ಅಸೂಯೆಯಿಂದ ನನ್ನ ಮಾತನ್ನು ಒಪ್ಪುವದಿಲ್ಲವೋ ಅಂಥವರನ್ನು ತತ್ವಜ್ಞಾನರಹಿತರೆಂದು ದುಷ್ಟರೆಂದು ಅಶುದ್ಧಮನಸ್ಸಿನವರೆಂದೂ ತಿಳಿ. ಯಾರು ಪರಂಪರಾಗತವಾಗಿ ನನ್ನಿಂದ ಹೇಳಲ್ಪಟ್ಟ ಪ್ರಮೇಯವನ್ನು ತಿಳಿಯುತ್ತಾರೆ ಅವರು ನನ್ನ ಸ್ಥಾನವನ್ನು ಹೊಂದುತ್ತಾರೆ ಎಂದು ತಂತ್ರಭಾಗವತದಲ್ಲಿ ಹೇಳಿದೆ.

ಸತ್ಯವೆಂದು ತಿಳಿಯುವ ಜಗತ್ತು ಸ್ವಪ್ನಪದಾರ್ಥಗಳಲ್ಲಿ ತೋರುವ ಬಾಹ್ಯತೆಯಂತೆ ಸುಳ್ಳೆಂದು ಶಂಕಿಸಬಾರದು. ಏಕೆಂದರೆ ಎಚ್ಚತ್ತ ಮೇಲೆ ಇದು ಕನಸು ಜಾಗ್ರತ್ತಲ್ಲ ಎಂದು ಬರುವದಿಲ್ಲ, ಹೀಗೆ ಬಾಧಾಬಾಧರೂಪವೈಲಕ್ಷ್ಯಣ್ಯ(ವೈಧರ್ಮ್ಯ) ಇರುವುದರಿಂದ ಸುಳ್ಳಲ್ಲ, ಶ್ರುತಿಗಳು ಸರ್ವೋತ್ತಮನಾದ ಶ್ರೀಹರಿಯ ಶ್ರೇಷ್ಠವಾದ ಜಗತ್ಸ್ರಷ್ಟ್ರ್ಯಾದಿ ಕರ್ಮಗಳನ್ನು ಸತ್ಯವೆಂದು ಹೇಳುವವು. ಶ್ರುತಿಗಳಿಂದ ಜಗತ್ತಿಗೆ ಸತ್ಯತ್ವ ಸಿದ್ಧಿಸುವದು.

ಪ್ರಮಾಣಗಳೆಂದು ನಿರ್ಣೀತಗಳಾಗಿರುವ ಬ್ರಹ್ಮಸೂತ್ರಗಳು, ಮಹಾಭಾರತ, ಗಾಯತ್ರೀ, ವೇದ ಇವುಗಳ ಅರ್ಥವನ್ನು ಈ ಭಾಗವತವು ಪ್ರತಿಪಾದಿಸುವದರಿಂದ ಪ್ರಮಾಣವೂ, ಆದರಣೀಯವು ಆಗಿದೆ. ಈ ವಿಷಯ ಗರುಡಪುರಾಣದಲ್ಲಿಯೂ ಇದೆ.

ಭಾಗವತ ಹೇಳಿದ್ದನ್ನು ಬ್ರಹ್ಮಸೂತ್ರಗಳು ಹೇಳಿವೆ. ಇದು ಭಾರತಾರ್ಥ ನಿರ್ಣಾಯಕವೂ. ಗಾಯತ್ರೀಅರ್ಥವಿವರಣರೂಪವೂ ಆಗಿದೆ. ಇಲ್ಲಿರುವ ಒಂದೊಂದು ಪದಗಳು ವೇದಾರ್ಥವನ್ನು ಹೇಳುತ್ತವೆ. ಎಲ್ಲಾ ಪುರಾಣಗಳ ಸಾರವನ್ನು ಸಾಕ್ಷಾತ್ ವೇದವ್ಯಾಸದೇವರು ಇಲ್ಲಿ ಹೇಳಿದ್ದಾರೆ. ಈ ಭಾಗವತದಲ್ಲಿ 12 ಸ್ಕಂಧಗಳು ಸೂತ-ಶೌನಕರ ಪ್ರಶ್ನೋತ್ತರ ರೂಪದ 100 ಕಥೆಗಳು, 18 ಸಾವಿರ ಶ್ಲೋಕಗಳು ಇಲ್ಲಿ ಕಾಣಸಿಗುತ್ತವೆ.

**ವಿರೋಧೋದ್ಧಾರ ಪ್ರಕಾರ ಕೆಲವು ವಿಶೇಷಾರ್ಥ**

1.**ಅನ್ವಯಾತ್** 'ಅಯಃ ಶುಭಾವಹೋ ವಿಧಿಃ' ಎಂದು ಅಭಿಧಾನ ವಿರುವದರಿಂದ ಅನನುಗತವಾದ **ಅಯಃ** ಶುಭದಾಯಕವಾದ ವಿಧಿಯುಳ್ಳ **ಇತರತಃ** ಆತ್ಮೇತರ ಸರ್ವಭಿನ್ನನಾದ ಯತಃ ಎಂದು ಅನ್ವಯ.

2.**ಇತರತಃ** ಅನ್ವಯಾನುಮಾನ, ಕೇವಲ ವ್ಯತಿರೇಕ್ಯನುಮಾನಗಳಿಂದ ಅಥವಾ **ಇತರತಃ** 'ಇ ವಿಚಿತ್ರೇ ಸ್ಮರೇ ಪುಮಾನ್' ಎಂದು ಯಾದವಕೋಶವಿರುವುದರಿಂದ **ಇಃ** ಆಶ್ಚರ್ಯವು **ತರಂ** ಅತಿಶಯಿತವಾದದು ಯಸ್ಯ ತತ್ ಇತರಂ ತಸ್ಮಾತ್ **ಇತರತಃ** ಅತ್ಯಾಶ್ಚರ್ಯಗಮನಾದ **ಯತಃ** ಯಾವನಿಂದ **ಅಸ್ಯ** ಜಗತ್ತಿಗೆ ಜನ್ಮಾದಿಗಳು **ಅನ್ವಯಾತ್** ಅನುಗತವಾಯಿತು.(ಜ್ಞಾನಾನುಸಾರವಾಗಿ ಆಯಿತು)ಅಥವಾ ಕ್ರಮವಾಗಿ ಎಂದರ್ಥ.

3.**ಅರ್ಥೇಷ್ವಭಿಜ್ಞಃ** ಸಕಲಪದಾರ್ಥ ವಿಷಯಕ ಸಾಕಲ್ಯೇನ ಜ್ಞಾನವಿದ್ದವನು. ಅರ್ಥಾಃ - ಐದು ಸಂಖ್ಯಾವುಳ್ಳ ಇಷವಃ- ಬಾಣವುಳ್ಳವನು ಎಂದರೆ ಕಾಮ ಅವನಿಂದ ನ ಭಿದ್ಯತೆ ಇತಿ - ನಾಶ ಹೊಂದದಿರುವದರಿಂದ ಅರ್ಥೇಷ್ವಭಿತ್ ಎಂದರೆ ಮುಕ್ತಗಣವು ತಂ ಜಾನಾತಿ ಇತಿ ಅಭಿಜ್ಞಃ- ಸೃಷ್ಟಿಕಾಲದಲ್ಲಿ ಮುಕ್ತಾಮುಕ್ತರ ಮಧ್ಯದಲ್ಲಿ ಮುಕ್ತರಿವರು ಎಂದು ತಿಳಿದು ಅವರನ್ನು ಬಿಟ್ಟು ಅಮುಕ್ತರನ್ನು ಮಾತ್ರ ದೇಹ ಬದ್ಧರನ್ನಾಗಿ ಮಾಡುವನು ಎಂದರ್ಥ. (ಜ್ಯೋತಿಶ್ಶಾಸ್ತ್ರದಲ್ಲಿ ಬಾಣವೃದ್ಧಿರಸಕ್ಷಯಃ ಎಂಬಲ್ಲಿ ಬಾಣಶಬ್ದಕ್ಕೆ ಐದು ಎಂದು ಅರ್ಥಮಾಡಿದ್ದಾರೆ)

**ಸ್ವರಾಟ್** 1.ಸ್ವತಂತ್ರನು 2.ಧನಪತಿಯು 3.ಸುತರಾಂ ಅರಾಟ್- ನಿಯಂತೃ ರಹಿತನೆಂದರ್ಥ. 4.ಪರಸ್ಸೋಹರಿರುದ್ದಾಮ ಇತಿ ನಾಮ ಚತುಷ್ಟಯಃ । ವಿಷ್ಣೋರ್ಗುಹ್ಯಂ ತು ಯೋ ವೇದ ನ ಸ ಪಾಪೈಃ ಪ್ರಲಿಪ್ಯತೇ ।। ಎಂದು ಭಾಗವತ ತಾತ್ಪರ್ಯದಲ್ಲಿರುವದರಿಂದ ಸ್ವೇತಿ ನಾಮ್ನಾ ರಾಜತೇ ಇತಿ ಸ್ವರಾಟ್ ಸ್ವ ಎಂಬ ಹೆಸರಿನಿಂದ ಶೋಭಿಸುವ ಎಂದರ್ಥ. ಇಲ್ಲಿ 'ಮನಸೋ ಜವೀಯಃ' ಎಂದು ಶ್ರುತಿ ಇರುವುದರಿಂದ **ಸು** ಸುತರಾಂ **ಅರಂ** ಶೀಘ್ರವಾಗಿ **ಅಟತಿ** ಸಂಚರಿಸುವದರಿಂದ ಸ್ವರಾಟ್ (ಅಟ ಗತೌ ಎಂದು ಧಾತು) ನಿರುಕ್ತತ್ವಾದಲೋಪಃ 6.ಸುಖರಾಜ 7.ಸ್ವಾತಂತ್ರ್ಯ ಶೋಭಿತ 8.ಸ್ವಭಕ್ತರಿಗೆ ಸುಖವನ್ನುಂಟುಮಾಡುವವ ಹೀಗೆ ಅನೇಕ ರೀತಿಯ ಅರ್ಥಗಳನ್ನು ತಿಳಿಯಬಹುದು.

ಇದೆಲ್ಲವು ಸೃಷ್ಟ್ಯಾದಿಗಳನ್ನು ಮಾಡುವ ಚತುರ್ಮುಖನಿಗೆ ಬರಬಹುದಲ್ಲ ಎಂದರೆ ಅವನಿಗೂ ಗುರು ಎಂದು ಹೇಳುವರು. 'ತೇನೇ' ಮುಂತಾಗಿ **ಆದಿಕವಯೇ** ಪ್ರಥಮಜ್ಞಾನಿಗೆ ಅಥವಾ **ಆದೌ** ಸೃಷ್ಟಿಕಾಲದಲ್ಲಿ , **ಕವಯೇ** ಜ್ಞಾನಿಯಾದ ಬ್ರಹ್ಮನಿಗೆ ಅಥವಾ ಅಃ ಆದಿಃ ಯಸ್ಯ ಸಃ ಆದಿಃ । ಆದಿಶ್ಚಾಸೌ ಕವಿಶ್ಚ **ತಸ್ಮೈ** ಕಾರಣನಾದ ಪರಬ್ರಹ್ಮನಿಂದ **ಕಂ** ಸುಖವನ್ನು **ವಯತಿ** ಹೊಂದುತ್ತಾನೆ. ಅದಕ್ಕಾಗಿ ಆದಿಕವಿ ಎಂದರೆ ಬ್ರಹ್ಮ. ಅವನಿಗೆ ಹೀಗೂ ಅರ್ಥ. ವಿ ಗತೌ ಎಂದು ಧಾತು ಇದೆ. ನಿರುಕ್ತವಾದ್ದರಿಂದ ಹ್ರಸ್ವವಾಗಿ ಕವಿ ಎಂದಾಗಿದೆ. **ಹೃದಾ** ಸ್ನೇಹೇನ **ಬ್ರಹ್ಮ** ವೇದಗಳನ್ನು **ತೇನೇ** ನಾಲ್ಕು ಸಲ ಉಪದೇಶಿಸಿದನು. 'ವಕ್ತವ್ಯಂ ಬ್ರಹ್ಮಗುರುಣಾ ಚತುರ್ವಾರಮಥಾಪಿ ವಾ' ಎಂದಿದೆ ಉಪದೇಶದ ರೀತಿ. ಅಥವಾ ಬ್ರಹ್ಮನಿಗೆ ನಾಲ್ಕು ಮುಖಗಳಾದ್ದರಿಂದ ನಾಲ್ಕು ವೇದಗಳನ್ನು ಏಕಕಾಲಕ್ಕೆ ಸ್ವೀಕರಿಸುವ ಸಾಮರ್ಥ್ಯವನ್ನು ಕಂಡು ಹೇಳುವ ತನಗೆ ಸಾವಿರ ಮುಖವಿದ್ದರೂ ಒಂದೇ ಮುಖದಿಂದ ನಾಲ್ಕೂ ವೇದಗಳನ್ನು ಏಕಕಾಲದಲ್ಲಿ ಉಪದೇಶಿಸಿದನು. ಇದರಿಂದಲೂ ಬ್ರಹ್ಮನಿಗಿಂತ ಶ್ರೀಹರಿಯ ಶಕ್ತಿ ಹೆಚ್ಚೆಂದು ತಿಳಿಯುವದು.

ಇಲ್ಲಿ ಯತ್ಸೂರಯಃ ಎಂದು ಪಾಠವೋ ಯಂ ಸೂರಯಃ ಎಂಬ ಪಾಠವೋ ಎಂದು ವಿಚಾರಮಾಡಿ ಯಂ ಸೂರಯಃ ಎಂಬುದು ಸರಿಯೆಂದು ಹೇಳಿರುವರು.

ಸರ್ವೋತ್ತಮನಾದ ಭಗವಂತನನ್ನು **ಧೀಮಹಿ** ಧ್ಯಾನಿಸೋಣ. ಇಲ್ಲಿ ಪ್ರತಿಪಾದ್ಯನಾದ ಭಗವಂತನಿಂದ ಭಿನ್ನರೇ ವೇದವ್ಯಾಸರು? ಅದು ಹೇಗೆ

ಮಂಗಲಪದ್ಯದಲ್ಲಿ ಭಗವಂತನನ್ನು ಧ್ಯಾನಿಸುವ ಪ್ರತಿಜ್ಞೆ ಮಾಡಿದರು. ಎಲ್ಲ ಕಡೆಗೆ ತನಗಿಂತ ಉತ್ತಮರ ಧ್ಯಾನಾದಿಗಳಿಂದ ವಿಘ್ನನಾಶಸಮಾಪ್ತಿಗಳಾಗಿದ್ದು ಕಂಡಿದೆ. ಎಂಬ ಶಂಕೆಗೆ ಪರಸ್ಮೈಪದಪ್ರಯೋಗವೇ ಉತ್ತರ. ಪರರಿಗೆ ಧ್ಯಾನವನ್ನು ಕಲಿಸಲು ಎಂದು ಅಭಿಪ್ರಾಯ. ಇಲ್ಲವಾದರೆ ಧೀಮಹೇ ಎನ್ನುತ್ತಿದ್ದರು. ಈ ವಿಧವಾದ ಪ್ರಯೋಗ ಅಸಾಧುವಲ್ಲ. ''ವಿದ್ಮಹೇ ಧೀಮಹೇ ತಥಾ'' ಎಂದು ತಂತ್ರಸಾರ ಗಾಯತ್ರಿ ಮಂತ್ರ ಉದ್ಧಾರದಲ್ಲಿ ಪ್ರಯೋಗ ಮಾಡಿರುವರು.

**ಗಾರುಡ ವಚನ -**

**ಅರ್ಥೋऽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥವಿನಿರ್ಣಯಃ । ಗಾಯತ್ರೀ ಭಾಷ್ಯರೂಪೋऽಸೌ ವೇದಾರ್ಥಪರಿಬೃಂಹಿತಃ । ಪುರಾಣಾನಾಂ ಸಾರರೂಪಃ ಸಾಕ್ಷಾದ್ಭಾಗವತೋದಿತಃ । ದ್ವಾದಶಸ್ಕಂಧಸಂಯುಕ್ತಃ ಶತವಿಚ್ಛೇದಸಂಯುತಃ । ಗ್ರಂಥೋऽಷ್ಟಾದಶಸಾಹಸ್ರಃ ಶ್ರೀಮದ್ಭಾಗವತಾಭಿಧಃ । ಇತಿ ।**

ಶತವಿಚ್ಛೇದಸಂಯುತಃ ಎನ್ನುವಲ್ಲಿ 'ಸಮಾನೇ ಲೋಪಃ' ಎಂಬ ಸೂತ್ರದ ಪ್ರಕಾರ ವಿ ವಿಚ್ಛೇದ ಎಂದು ಮಾಡಿಕೊಂಡರೆ ಶತಾನಿ ವಿಚ ವಿಚ ವಿವಿ । ಇದು ಅವ್ಯಯ । ಬಹುವಚನಾಂತ ಶತಶಬ್ದವು ಮೂರುನೂರು ಎಂಬರ್ಥ ಕೊಡುವದು. ಅಪರ್ಯವಸಿತ ಬಹುತ್ವವು ಅಸ್ತಿತ್ವದಲ್ಲಿ ಪರ್ಯವಸಾನವಾಗುವದು ಕಪಿಂಜಲಾಧಿ ಕರಣದಲ್ಲಿ ಸಿದ್ಧವಾಗಿದೆ. ವಕಾರವು ಅಂತಸ್ಥವರ್ಣಗಳಲ್ಲಿ ನಾಲ್ಕನೆಯದಾದ್ದರಿಂದ ನಾಲ್ಕರ ಸಂಕೇತವಾದುದರಿಂದ ನಾಲ್ಕು ನಾಲ್ಕು ಎಂದರೆ ನಲವತ್ತಾ ಲ್ಕು ಅಂತು ಮೂರು ನೂರಾ ನಲವತ್ತಾ ಲ್ಕು ಅಧ್ಯಾಯಗಳಿಂದ ಕೂಡಿದ್ದು ಎಂದರ್ಥವಾಗುವದು.

ಒಂದನೆಯ ಸ್ಕಂಧಕ್ಕೆ ಇಪ್ಪತ್ತು ಅಧ್ಯಾಯಗಳು, ಎರಡನೆಯ ಸ್ಕಂಧಕ್ಕೆ ಹತ್ತು ಅಧ್ಯಾಯ, ಮೂರನೆಯ ಸ್ಕಂಧ ಮೂವತ್ಮೂರು, ನಾಲ್ಕನೆಯ ಸ್ಕಂಧ ಮೂವತ್ತೊಂದು, ಐದನೆಯ ಸ್ಕಂಧ ಇಪ್ಪತ್ನಾಲ್ಕು, ಆರನೆಯ ಸ್ಕಂಧ ಹತ್ತೊಂಭತ್ತು, ಏಳನೆಯ ಸ್ಕಂಧಕ್ಕೆ ಹದಿನಾರು, ಎಂಟನೆಯ ಸ್ಕಂಧಕ್ಕೆ ಇಪ್ಪತ್ತೆರಡು, ಒಂಭತ್ತನೆಯ ಸ್ಕಂಧಕ್ಕೆ ಇಪ್ಪತ್ತೊಂದು, ಹತ್ತಕ್ಕೆ ಒಂದುನೂರಾಮೂರು, ಹನ್ನೊಂದಕ್ಕೆ ಮೂವತ್ತೊಂದು, ಹನ್ನೆರಡಕ್ಕೆ ಹದಿಮೂರು, ಹೀಗೆ ಒಟ್ಟು ಮೂರುನೂರಾನಲವತ್ನಾಲ್ಕು ಅಧ್ಯಾಯಗಳಿಂದ ಕೂಡಿದ್ದೆಂದರ್ಥ.

ಈ ಗ್ರಂಥಪ್ರತಿಪಾದ್ಯವಾದುದು ಮಂಗಲಪದ್ಯದಲ್ಲಿ ಸಂಕ್ಷೇಪವಾಗಿ ಪ್ರತಿಪಾದಿತವಾಗಿರುವುದರಿಂದ ಮಂಗಲಪದ್ಯ ಬ್ರಹ್ಮಸೂತ್ರ ಸಮಾನಾರ್ಥಕವಾಗುತ್ತದೆ. ಮಂಗಲಪದ್ಯ ಬ್ರಹ್ಮಸೂತ್ರಸಮಾನಾರ್ಥಕವಾದ ಮೇಲೆ ಸಮಗ್ರ ಭಾಗವತವು ಬ್ರಹ್ಮಸೂತ್ರ ಸಮಾನಾರ್ಥಕವೆಂದಂತೆಯೇ ಸರಿ. ಇದಲ್ಲದೆ ಮಂಗಲಪದ್ಯದಿಂದ ಎಲ್ಲ ಸ್ಕಂಧಗಳ ಅರ್ಥವೂ ಬರುವದು ಎಂದು ತಿಳಿಯಬಹುದು.

**ಮಂಗಲಪದ್ಯದಿಂದ ಸ್ಕಂಧಗಳ ಅರ್ಥ**

*ಪ್ರಥಮಸ್ಕಂಧ-*

**ಯತಃ** ಯಾವ ಭಗವಂತನಿಂದ **ಆದ್ಯಸ್ಯ** ಸನತ್ಕುಮಾರ ಮುಂತಾದ ಅವತಾರಗಳಿಗೆ ಮೂಲಭೂತಪುರುಷರೂಪದ **ಜನ್ಮ** ಪ್ರಾದುರ್ಭಾವವು ಆಯಿತೋ ಅಥವಾ **ಆತ್** ವೇದವ್ಯಾಸರಿಂದ **ಯಸ್ಯ** ಯಾವನಿಗೆ **ಜನ್ಮ** ಉತ್ಪತ್ತಿಆಯಿತೋ ಅವನು ಎಂದರೆ ಶುಕಾಚಾರ್ಯರು **ಯತಃ** (ಯದರ್ಥಂ)ಯಾವನ ಪ್ರೀತಿಗಾಗಿ **ಅನ್ವಯಾತ್** ಪರೀಕ್ಷಿತನನ್ನು ಕುರಿತು ಹೋದರು ಎಂದು ತಿಳಿಸುವದರಿಂದ ಪ್ರಥಮಸ್ಕಂಧದ ಸಂಕ್ಷೇಪವಾದ ಅರ್ಥ ತಿಳಿಸಿದಂತಾಯಿತು. 'ಜಗೃಹೇ ಪೌರುಷಂ ರೂಪಂ ಭಗವಾನ್ ಮಹದಾದಿಭಿಃ । ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ'।। ಎಂದು ಪುರುಷರೂಪಾವಿರ್ಭಾವವನ್ನು ''ತತ್ರ ತಾವದ್ಭಗವಾನ್ ವ್ಯಾಸಪುತ್ರಃ'' ಎಂದು ಶುಕಾಗಮನವನ್ನೂ ಪ್ರಥಮಸ್ಕಂಧದಲ್ಲಿ ಹೇಳಿದೆ.

*ದ್ವಿತೀಯಸ್ಕಂಧ-*

ಪರೀಕ್ಷಿತನು **ಯತಃ**(ಸಾರ್ವವಿಭಕ್ತಿಕಃ ತಸಿಃ)ಯಾವ ಭಗವಂತನನ್ನು **ಅನ್ವಯಾತ್** ಸ್ಥೂಲಸೂಕ್ಷ್ಮಧಾರಣಾನುಸಾರವಾಗಿ ತಿಳಿಯುತ್ತಿದ್ದನು (ಗತ್ಯರ್ಥಕವಾದವು ಜ್ಞಾನಾರ್ಥಕವಾದ್ದರಿಂದ) ಎಂದು ಅನ್ವಯಾತ್ ಎಂಬುವುದರಿಂದ ದ್ವಿತೀಯ ಸ್ಕಂಧದ ಅರ್ಥ ಹೇಳಿರುವರು ''ವೈಯಾಸಕೇರಿತಿ ವಚಃ ತತ್ತ್ವನಿಶ್ಚಯಮಾತ್ಮನಃ । ಉಪಧಾರ್ಯ ಮತಿಂ ಕೃಷ್ಣೇ ಔತ್ತರೇಯಃ ಸತಿಂ ವದೇತ್'' ಎಂದು ಎರಡನೆಯ ಸ್ಕಂಧದ 4ನೇ ಅಧ್ಯಾಯದಲ್ಲಿ ಹೇಳಿದೆ.

*ತೃತೀಯಸ್ಕಂಧ-*

ಯತಃ ಎಂದು ಅನುವೃತ್ತಿಮಾಡಿಕೊಂಡು ಯತಃ ಇತರತಃ ಎಂಬುದರಿಂದ ಮೂರನೆಯ ಸ್ಕಂಧದ ಅರ್ಥ ಹೀಗೆ ಹೇಳಬೇಕು. **ಯತಃ** ಯಾರ ಆಜ್ಞೆಯಿಂದ **ಇತೇ**

ಗಮನದಲ್ಲಿ **ರತಃ** ಆಸಕ್ತನಾದನು ಉದ್ಧವನು. ಅಥವಾ **ಯತಃ** ಯಾವನ ಜ್ಞಾನಕ್ಕಾಗಿ **ಇತೇ** ಗಮನದಲ್ಲಿ ಜ್ಞಾನದಲ್ಲಿ **ರತಃ** ಆಸಕ್ತನಾದವನು ವಿದುರನು.

ಅಥವಾ **ಯತಃ-ಯಃ** ಯಾವನು ಅತಿವಿಚಿತ್ರವಾದುದರಿಂದ ಇತರ ಎನಿಸುವ ವರಾಹರೂಪವನ್ನು **ತನೋತೀತಿ ತಃ** ಎಂದು ವರಾಹರೂಪ ಸ್ವೀಕಾರ. **ಯಃ ಇತೇ ಸಾಂಖ್ಯಜ್ಞಾನರತಃ ಕಪಿಲಃ ಅಭೂತ್** ಎಂದು ತಿಳಿಸುವ **ಇತರತಃ** ಎಂಬ ಪದದಿಂದ ತೃತೀಯಸ್ಕಂಧಾರ್ಥ ಹೇಳಿದಂತಾಗುವುದು.

*ಚತುರ್ಥಸ್ಕಂಧ-*

ಅತ್ರಿ-ದಕ್ಷ-ಧ್ರುವ-ಪೃಥು-ಪ್ರಚೇತಸರುಗಳ ಕಾಮನೆಗಳನ್ನು ತಿಳಿದವ ಎಂದು ತಿಳಿಸುವ **ಅರ್ಥೇಷು** ಅರ್ಥನೀಯೇಷು ಕಾಮೇಷು **ಅಭಿಜ್ಞಃ** ಜ್ಞಾನಿಯಾದ ಎಂಬ ಅರ್ಥೇಷ್ವಭಿಜ್ಞ ಎಂಬ ಪದದಿಂದ ನಾಲ್ಕನೆಯ ಸ್ಕಂಧದ ಅರ್ಥ ಹೇಳಿದಂತಾಗುವುದು.

*ಪಂಚಮಸ್ಕಂಧ-*

**ಸ್ವರಾಟ್** ಎಂಬ ಪದದಿಂದ ಐದನೆಯ ಸ್ಕಂಧದ ಸಂಗ್ರಹ ಹೀಗೆ ಮಾಡಲಾಗಿದೆ. **ಸ್ವಾನ್** ಸ್ವಕೀಯರಾದ ಪ್ರಿಯವ್ರತಾದಿಗಳನ್ನು **ರಾಜಯತೀತಿ ಸ್ವರಾಟ್** ಪ್ರಕಾಶಗೊಳಿಸುವನು ಅಥವಾ **ಸ್ವೇನ ಋಷಭರೂಪೇಣ ರಾಜತೇ ಇತಿ ಸ್ವರಾಟ್** ಸ್ವರೂಪಭೂತಋಷಭಾವತಾರ ತಿಳಿದನೆಂದರ್ಥ ಅಥವಾ ಸ್ವೇಷು ತನ್ನದೆ ಆದ 14ಲೋಕಗಳಲ್ಲಿ 9ಖಂಡಗಳಲ್ಲಿ ರಾಜತೇ ಪ್ರಕಾಶಿಸುವನಾದ್ದರಿಂದ ಸ್ವರಾಟ್.

*ಷಷ್ಠಸ್ಕಂಧ-*

**ಆದಿಕವಯೇ ಬ್ರಹ್ಮ ತೇನೆ** ಎಂಬ ಮಾತಿನಿಂದ ಆರನೆಯ ಸ್ಕಂಧಾರ್ಥವನ್ನು ತಿಳಿಸುವರು. **ಆದೌ** ದಾಸೀಸಂಗವಾಗುವ ಮೊದಲು ಜ್ಞಾನಿಯಾದ ಅಜಾಮಿಲನಿಗೆ ತತ್ವ ತಿಳಿಸಿದ. 'ಅಕಾರಸ್ತು ಪಿತಾಮಹೇ' ಎಂದಿರುವದರಿಂದ ಆ ಚತುರ್ಮುಖ ಬ್ರಹ್ಮನೇ **ಆದಿಃ** ಕಾರಣನಾಗಿವುಳ್ಳವನು ಆದಿಃ **ಆದಿಶ್ಚಾಸೌ ಕಶ್ಚ ಆದಿಕಃ** ಬ್ರಹ್ಮಪುತ್ರನಾದ ದಕ್ಷ ಪ್ರಜಾಪತಿಯೇ **ವಯತಿ** ಜನ್ಮಾಂತರ ಪಡೆಯುವನು ಅವನೇ ಪ್ರಾಚೇತಸ ದಕ್ಷನು **ತಸ್ಮೈ** ಅವನಿಗೆ ಅಥವಾ **ಆದಿಕವಯೇ ಆದೌ** ಚಿತ್ರಕೇತು ಜನ್ಮದಲ್ಲಿ ಜ್ಞಾನಿಯಾದ ವೃತ್ರಾಸುರನಿಗೆ ಮತ್ತು **ಆದಿಃ** ಕಾರಣನಾದ ಮುಖ್ಯಪ್ರಾಣನು **ಕವಿಃ** ಜ್ಞಾನಿಯು **ಯಸ್ಯ** ಯಾವ ಗಣಕ್ಕೆ ಉಂಟೋ ಅದು ಎಂದರೆ ಮರುದ್ಗಣಕ್ಕೆ ಬ್ರಹ್ಮಜ್ಞಾನವನ್ನು ತಪಸ್ಸನ್ನು ಹೇಗೆ ತಿಳಿಸಿದನು ಎಂದು ತಿಳಿಸಿರುವರು.

## *ಸಪ್ತಮಸ್ಕಂಧ-*

**ಯಂ** ಯಾವ ನರಸಿಂಹಾವತಾರ ವಿಷಯದಲ್ಲಿ **ಸೂರಯಃ** ರಮಾ ಬ್ರಹ್ಮಾದಿಗಳು **ಮುಹ್ಯಂತೀವ** ಮೋಹಗೊಳ್ಳುವರು ಮತ್ತು **ಯಂ** ಭಗವತ್ ಪ್ರಾಪಕ ಧರ್ಮವಿಷಯದಲ್ಲಿ ಜ್ಞಾನಿಗಳು ಮೋಹಗೊಳ್ಳುವರು ಎಂದು ಹೇಳುವ **ಮುಹ್ಯಂತಿ ಯಂ ಸೂರಯಃ** ಎಂಬುವುದರಿಂದ ಏಳನೆಯ ಸ್ಕಂಧಾರ್ಥ ತಿಳಿಯುವದು.

## *ಅಷ್ಟಮಸ್ಕಂಧ-*

**ತೇಜೋವಾರಿಮೃದಾಂ ಯಥಾ ವಿನಿಮಯಃ** ಎಂಬ ವಾಕ್ಯದಿಂದ ಎಂಟನೆಯ ಸ್ಕಂಧದ ಸಂಗ್ರಹವಾಗುವದು. 'ತಕಾರಃ ಕೀರ್ತಿತಶ್ಚೋರೇ ಮೋಹೇ ಯುದ್ಧೇ ಚ ಕೀರ್ತಿತಃ' ಎಂದು ಅಭಿಧಾನವಿರುವುದರಿಂದ ಅಲುಕ್ ಸಮಾಸವೆಂದು ಇಟ್ಟುಕೊಂಡು **ತೇ** ಆನೆ ಮೊಸಳೆಗಳ ಯುದ್ಧದಲ್ಲಿ ಮತ್ತು ಸ್ವಾಯಂಭುವಮನು ಭಕ್ಷಕರಾದ ಅಸುರಗಣದಲ್ಲಿ **ಜಾಯತೇ** ಅವತರಿಸುವದರಿಂದ **ತೇಜವಾರಿಣಾಂ ಮಧ್ಯೇ** ಕ್ಷೀರಾಬ್ಧಿ ಮಧ್ಯದಲ್ಲಿ ಕೂರ್ಮರೂಪದಿಂದ ಮತ್ಸ್ಯರೂಪದಿಂದ **ಮೃದ್** ಪೃಥಿವಿ ವಿಷಯದಲ್ಲಿ ವಾಮನರೂಪದಿಂದ ಮಾಡಲ್ಪಡುವ **ವಿನಿಮಯಃ ಕ್ರೀಡಾನಕ್ರರಾಕ್ಷಸಹನನಂ** ಮೊಸಳೆ ಮತ್ತು ರಾಕ್ಷಸ ಸಂಹಾರರೂಪವಾದ **ಮಂದರೋದ್ಧರಣಂ** ಮಂದರಪರ್ವತ ಎತ್ತುವದು ನೌಕಾಕರ್ಷಣ ಮಾಡುವ ಸತ್ಯವ್ರತನನ್ನು ನೌಕೆಯಲ್ಲಿ ಕರದೊಯ್ಯುವುದು **ಬಲಿಛಲೇನ** ಬಲಿಚಕ್ರವರ್ತಿಯಿಂದ ಮೂರುಪಾದ ಭೂಮಿ ಕೇಳುವ ನೆಪದಿಂದ ಮೂರು ಲೋಕ ವ್ಯಾಪಿಸಿದ್ದು. ಈ ವಿಧವಾದ ಕ್ರಿಡೆಯು **ಯಥಾ** ಯಥಾವತ್ತಾಗಿ ಮಾಡಿದ್ದು ಎಂದು ಹೇಳುವುದರಿಂದ ಎಂಟನೆಯ ಸ್ಕಂಧ ಸಂಗ್ರಹವಾಯಿತು.

## *ನವಮಸ್ಕಂಧ-*

**ಯತ್ರ** ಯಾವನ ವಿಷಯದಲ್ಲಿ **ತ್ರಿಸರ್ಗಃ** ಬ್ರಹ್ಮ, ಸೂರ್ಯ, ಸೋಮ, ವಂಶಗಳು **ಮೃಷಾ** ನಿಷ್ಪ್ರಯೋಜನಗಳು ಎಂದು ಹೇಳುತ್ತಾ **ಯತ್ರ ತ್ರಿಸರ್ಗೋ ಮೃಷಾ** ಎಂಬುವುದರಿಂದ 9ನೆಯ ಸ್ಕಂಧ ಸಂಗ್ರಹವಾಗುವುದು.

## *ದಶಮಸ್ಕಂಧ-*

**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ** ತನ್ನ ಸಾಮರ್ಥ್ಯದಿಂದ ಬಹಳವಾಗಿ ಸಂಹರಿಸಲ್ಪಟ್ಟ ಭೂಮಿಗೆ ಭಾರರಾದ ಪೂತನಾದಿರಾಕ್ಷಸರುಳ್ಳವನು ಎಂದು ಹೇಳುವುದರಿಂದ ಹತ್ತನೆಯ ಸ್ಕಂಧ ಸಂಗ್ರಹವಾಯಿತು.

*ಏಕಾದಶಸ್ಕಂಧ-*

**ಸತ್ಯಂ** ಸ್ವರೂಪಾನಂದರೂಪಮುಕ್ತಿಯನ್ನು **ಯಾಪಯತಿ** ಹೊಂದಿಸುವನು ಎಂದು ಹೇಳುವುದರಿಂದ ಹನ್ನೊಂದನೆಯ ಸ್ಕಂಧವನ್ನು ಸಂಗ್ರಹಿಸಿದಂತಾಗುತ್ತದೆ.

*ದ್ವಾದಶಸ್ಕಂಧ-*

ಪೃ ಪಾಲನ ಪೂರಣಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಪರಂ ಶಬ್ದದಿಂದ ಹನ್ನೆರಡನೆಯ ಸ್ಕಂಧದ ತಾತ್ಪರ್ಯವನ್ನು ಹೇಳುತ್ತಾರೆ. ಕಲಿಕಾಲದ ಕೊನೆಗೆ ಕಲ್ಕಿರೂಪದಿಂದ ಧರ್ಮರಕ್ಷಣೆ ಮಾಡಿದ್ದರಿಂದ, ದುರ್ಮರಣಜನ್ಯ ಅಧೋಗತಿಯಿಂದ ಪರೀಕ್ಷಿತನನ್ನು ರಕ್ಷಿಸಿದ್ದರಿಂದ, ಸರ್ಪಯಾಗದಿಂದ ತಕ್ಷಕನನ್ನು ಬದುಕಿಸಿದ್ದರಿಂದ, ಬ್ರಾಹ್ಮಣಮಂತ್ರದಿಂದ ಇಂದ್ರನನ್ನು ಪಾಲನಮಾಡಿದ್ದರಿಂದ, ಮಾಯಾದರ್ಶನ ಭೀತಿಯಿಂದ ಮಾರ್ಕಾಂಡೇಯ ಪಾಲನದಿಂದ ಎಂದರ್ಥವಾಗುವದು. ಈ ಎಲ್ಲ ವೃತ್ತಾಂತಗಳಿಂದ ಹನ್ನೆರಡನೆಯ ಸ್ಕಂಧದ ಭಾವವನ್ನು ಪರಂ ಎಂಬ ಒಂದೇ ಶಬ್ದದಿಂದ ತಿಳಿಸಿದ್ದಾರೆ.

**ಬ್ರಹ್ಮಸೂತ್ರಾರ್ಥವನ್ನೂ ತಿಳಿಸುವ ಮಂಗಲಪದ್ಯವಿದು**

**ಓಂ** ಎಂಬುದರ ವಿವರಣವೇ **ಸತ್ಯಂ** ಎಂಬುದು. ಮೊದಲನೆಯ ಸೂತ್ರದ ವಿವರಣೆ **ಪರಂ ಧೀಮಹೀ** ಎಂಬುದು. **ಪರಂ** ಎಂದರೆ ಪೂರ್ಣ, ಬ್ರಹ್ಮ ಎಂದರೂ ಪೂರ್ಣವೆಂದೇ ಅರ್ಥ. ಶ್ರವಣ ಮನನ ಧ್ಯಾನಗಳೇ ಜಿಜ್ಞಾಸಾ ಶಬ್ದದ ಅರ್ಥ. ಆದ್ದರಿಂದ **ಧೀಮಹಿ** ಎಂಬುದು ಜಿಜ್ಞಾಸಾ ಶಬ್ದದ ವಿವರಣೆ ಎನಿಸಿದೆ. ಎರಡನೆಯ ಸೂತ್ರದ ವಿವರಣವೇ **ಜನ್ಮಾದ್ಯಸ್ಯ ಯತಃ** ಎಂಬುದು. ಮೂರನೆಯ ಸೂತ್ರದ ವಿವರಣೆಯೇ **ಅರ್ಥೇಷ್ವಭಿಜ್ಞಃ** ಎಂಬುದು. ಅರ್ಷ ಆದ್ಯಚ್‌ಪ್ರತ್ಯಯ ಮಾಡಿ **ಅರ್ಥೇಷು ಅರ್ಥವತ್ಸು** ಅರ್ಥಪ್ರತಿಪಾದಕಶಾಸ್ತ್ರಗಳಲ್ಲಿ **ಅಭಿ** ಮುಖ್ಯವಾಗಿ **ಜ್ಞ** ಜ್ಞೇಯನು ಎಂದರ್ಥ. ಇದನ್ನೇ **ಓಂಶಾಸ್ತ್ರಯೋನಿತ್ವಾತ್‌ಓಂ** ಎಂಬಲ್ಲಿ ಹೇಳಿದೆ. ಅತಿವ್ಯಾಪ್ತಿಶಂಕಾ(ವ್ಯಭಿಚಾರಶಂಕಾ)ಪರಿಹರಿಸಲು ನಾಲ್ಕನೆಯ ಸೂತ್ರ **ಓಂ ತತ್ತು ಸಮನ್ವಯಾತ್ ಓಂ** ಅದರ ಅರ್ಥ ಅನ್ವಯಾತ್ ಎಂಬುದು. ಶಾಸ್ತ್ರ ಪ್ರತಿಪಾದ್ಯತ್ವಕ್ಕೆ ಅಸಿದ್ಧಿಶಂಕಾವನ್ನು ಐದನೆಯ ಈಕ್ಷತ್ಯಧಿಕರಣದಲ್ಲಿ ಹೇಳಿದೆ. ಅದರ ವಿವರಣೆ **ಇತರತಃ** ಎಂದು. ಈಕ್ಷಣೀಯತ್ವವಿರುವದರಿಂದ ವಾಚ್ಯತ್ವವಿದೆ ಎಂದರ್ಥ. ಅಣುಭಾಷ್ಯದ ಪ್ರಕಾರ ಶಕ್ತಿತಾತ್ಪರ್ಯಗಳಿರುವದರಿಂದ ಮತ್ತೊಂದಾದ ವಾಚ್ಯತ್ವವೂ ಇದೆ ಎಂಬ

ಅರ್ಥವನ್ನೂ ತಿಳಿಯಬಹುದು. ಅಧ್ಯಾಯ ಪಾದಪೀಠಗಳಾದ ಸೂತ್ರಾರ್ಥ ಹೇಳಿ ಸಮನ್ವಯಾಧ್ಯಾಯಾರ್ಥ ಹೇಳುವರು **ಸ್ವರಾಟ್** ಎಂದು. **ಸ್ವೇ** ಸ್ವವಾಚಕಗಳಾದ ಅನ್ಯತ್ರ ಪ್ರಸಿದ್ಧವಾದ, ಉಭಯತ್ರ ಪ್ರಸಿದ್ಧ, ಅನ್ಯತ್ರೈವ ಪ್ರಸಿದ್ಧವಾದ ನಾಮಾತ್ಮಕ, ಲಿಂಗಾತ್ಮಕ, ಶಬ್ದಗಳಿಂದ ವಾಚ್ಯತ್ವೇನ ರಾಜತೇ ಇತಿ ಸ್ವರಾಟ್.

### *ಎರಡನೆಯ ಅಧ್ಯಾಯಾರ್ಥ*

**ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ**

ಎಂಬುದು. ಯತ್ರ ಎಂಬ ಪದದಿಂದ ಅನುಕರ್ಷ ಮಾಡಿಕೊಂಡು **ಯಂ** ಯಾವ ಪರಬ್ರಹ್ಮನನ್ನು ಉದ್ದೇಶಿಸಿ **ಯತ್ರ** ವೇದವಿಷಯದಲ್ಲಿ **ಸೂರಯಃ** ಪಂಡಿತಾಭಾಸರು (ಯುಕ್ತ್ಯಾಭಾಸೋಪೇತಶ್ರುತಿಗಳಿಂದ ವಿಪರೀತಜ್ಞಾನ ಬಂದಿರುವ- ದರಿಂದ) **ಮುಹ್ಯಂತಿ** ಮುಖ್ಯಾರ್ಥವನ್ನು ತಿಳಿಯಲಾರರು **ತದ್** ಆ ವೇದವನ್ನು **ಆದಿಕವಯೇ** ಬ್ರಹ್ಮದೇವರಿಗೆ **ಯಃ** ಯಾರು **ಹೃದಾ** ಅನುಗ್ರಹಪೂರ್ವಕ **ತೇನೇ** ವಿಸ್ತಾರಮಾಡಿದನು ಎಂದು ಹೇಳಿದ್ದರಿಂದ **ಬ್ರಹ್ಮ** ಎಂಬುವುದರಿಂದ ಅಪೌರುಷೇಯತ್ವವನ್ನು **ಆದಿಕವಯೇ** ಎಂಬುದರಿಂದ ಶ್ರೋತ್ರಾನುಕೂಲ್ಯವನ್ನು **ಹೃದಾ ಯಃ ತೇನೇ** ಎಂಬುವುದರಿಂದ ವಿಪ್ರಲಂಭಾಭಾವವನ್ನು **ಯಸ್ತೇನೇ** ಎಂಬುವುದರಿಂದ ವಕ್ತ್ರಾದ್ಯಾನುಕೂಲ್ಯವನ್ನು ವೇದಕ್ಕೆ ಸೂಚಿಸಿದ್ದರಿಂದ ಮಹಾಪ್ರಾಮಾಣ್ಯವು ಸಿದ್ಧವಾಗಿ ದೋಷರಹಿತವೇದದಿಂದ ಪ್ರತಿಪಾದ್ಯನಾದ ವಿಷ್ಣುವಿಗೆ ನಿರ್ದೋಷತ್ವ ತಿಳಿಯುವದು.

### *ಮೂರನೆಯ ಅಧ್ಯಾಯದ ಅರ್ಥ*

**ತೇಜೋವಾರಿಮೃದಾಂ ವಿನಿಮಯಃ** ತೇಜಸ್ಸು-ನೀರು-ಅನ್ನರೂಪವಾದ ಮನುಷ್ಯದೇಹವು ಹೇಗೆ ಸಾಧನವಾದುದು ತ್ರಯಾಣಾಂ ಸರ್ಗಃ ಯಸ್ಮಾತ್ ಸಃ ತ್ರಿಸರ್ಗಃ ಎಂದರೆ ವೈರಾಗ್ಯ, ಭಕ್ತಿ, ಉಪಾಸನಾಗಳ ಉತ್ಪತ್ತಿಯು ಯಾವ ಜ್ಞಾನಯೋಗದಿಂದ ಆಗುವದೋ. ಆ ಜ್ಞಾನಯೋಗವು ಯತ್ರ ಭಗವಂತನ ವಿಷಯದಲ್ಲಿ **ಅಮೃಷಾ** ವ್ಯರ್ಥವಲ್ಲ ಸಾಧನವಾಗಿದೆ ಹೀಗೆ ಮೂರನೆಯ ಅಧ್ಯಾಯಾರ್ಥವನ್ನೂ ಇಲ್ಲಿ ಹೇಳಲಾಗಿದೆ.

### *ನಾಲ್ಕನೆಯ ಅಧ್ಯಾಯದ ಅರ್ಥ*

**ಸ್ವೇ** ಮನುಷ್ಯರು **ಇನಾಃ** ಒಡೆಯರಾದ ದೇವತೆಗಳು ಇವರಿಂದ ಹೊಂದಲ್ಪಡುವ (ಸಾಧ್ಯತೇ ಪ್ರಾಪ್ಯತೇ ಇತಿ ಸದಾ) **ಧಾಮ್ನಾ** ತನ್ನ ಸ್ಥಾನವನ್ನು ಕೊಡುವ ಕಾರಣ

**ನಿರಸ್ತಕುಹಕಂ** ಕರ್ಮಬಂಧ, ಪುನರಾವರ್ತನ ಮುಂತಾದ ದೋಷಸಮೂಹವನ್ನು ಪರಿಹರಿಸುವ ಎಂಬುದರಿಂದ ನಾಲ್ಕನೆಯ ಅಧ್ಯಾಯದ ಅರ್ಥ ಹೇಳಿದಂತಾಯಿತು.

**ಈ ಪದ್ಯದಲ್ಲಿ ಭಾರತಾರ್ಥವೂ ಅಡಗಿದೆ**

**1. ಯತಃಆದ್ಯಸ್ಯ-ಆದಿಪರ್ವ**

**ಯತಃ** ಯಾವನಿಂದ **ಆದ್ಯಸ್ಯ** ಎಲ್ಲರಿಗೂ ಮೊದಲಿಗನಾದ ಸರ್ವಶ್ರೇಷ್ಠನಾದ ಬ್ರಹ್ಮನಿಗೆ ಅಥವಾ ಆದ್ಯಶಬ್ದವಾಚ್ಯನಾದ ಚತುರ್ಮುಖನು **ಆದಿಃ** ಆವೇಶನಿಮಿತ್ತದಿಂದ ಕಾರಣನು ಯಾವನಿಗೋ ಅವನು ಸೋಮ. ಅವನ ಸಂಬಂಧಿ ಯಾದದ್ದು (ತಸ್ಯಾಯಂ) ಆದ್ಯ ಎಂದರೆ ಸೋಮವಂಶ. ಅದಕ್ಕೆ **ಯತಃ** ಭಗವಂತನಿಂದ ಜನ್ಮವಾಯಿತು ಎಂದು ಹೇಳುವ ಮೂಲಕ ಆದಿಪರ್ವವನ್ನು ವಿವರಿಸಲಾಗಿದೆ.

**2.ಅನ್ವಯಾತ್-ಸಭಾಪರ್ವ**

**ಯಃ** ಭಗವಂತನು **ಅನ್ವಯಾತ್** ವನಕ್ಕೆ ಹೋಗಲು ಅನುಮೋದಿಸಿದನು. ಇದರಿಂದ ಸಭಾ ಪರ್ವವನ್ನು ಸಂಗ್ರಹಿಸಲಾಗಿದೆ.

**3.ಇತರತಃ-ವನಪರ್ವ**

**ಇತಾಃ** ವನಕ್ಕೆ ತೆರಳಿದ ಪಾಂಡವರು **ಯಸ್ಮಿನ್ ರತಾಃ** ಯಾವ ಹರಿಯಲ್ಲಿ ಆಸಕ್ತರಾಗಿದ್ದಾರೋ ಎಂಬುದರಿಂದ ಅರಣ್ಯಪರ್ವ.

**4.ಅರ್ಥೇಷ್ವಭಿಜ್ಞಃ-ವಿರಾಟಪರ್ವ**

**ಅರ್ಥೇಷ್ವಭಿಜ್ಞಃ ಅರ್ಥಂ** ರಾಜ್ಯವೆಂಬ ಪುರುಷಾರ್ಥವನ್ನು **ಇಷತೀತಿ ಇಷುಃ** ಇಚ್ಛಿಸುವದರಿಂದ ಅರ್ಥೇಷುಗಳು ಪಾಂಡವರು. ಗುಪ್ತವೇಷದಲ್ಲಿರುವ ಪಾಂಡವರನ್ನು ತಿಳಿಯುವುದರಿಂದ ಅರ್ಥೇಷ್ವಭಿಜ್ಞಃ ಕೃಷ್ಣನು. ಇದರಿಂದ ವಿರಾಟಪರ್ವದ ಅರ್ಥ.

**5.ಸ್ವರಾಟ್-ಉದ್ಯೋಗಪರ್ವ**

**ಸ್ವರಾಟ್ ಸ್ವಾನ್** - ಭಕ್ತರಾದ ಪಾಂಡವರನ್ನು ಯುದ್ಧಸಾಮಗ್ರಿ ಸಂಪಾದಿಸಿ ಕೊಟ್ಟು **ರಾಜಯತಿ** ಶೋಭಿಸುವಂತೆ ಮಾಡುವನು ಸ್ವರಾಟ್ ಇದರಿಂದ ಉದ್ಯೋಗಪರ್ವ.

**6. ತೇನೇ ಬ್ರಹ್ಮ ಹೃದಾಯ ಆದಿಕವಯೇ ಮುಹ್ಯಂತಿ ಯಂ ಸೂರಯಃ**
**- ಭೀಷ್ಮದ್ರೋಣಕರ್ಣಶಲ್ಯಸೌಪ್ತಿಕಪರ್ವ**

**ತೇನೇ ಬ್ರಹ್ಮ ಹೃದಾಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ಆದಿಕವಯೇ** ಪೂರ್ವರೂಪದಲ್ಲಿ ಜ್ಞಾನಿಗಳಾದ ಭೀಷ್ಮದ್ರೋಣಕರ್ಣರಿಗೆ **ಬ್ರಹ್ಮ** ವಿದ್ಯೆಯನ್ನು **ತೇನೆ** ಪರಶುರಾಮರೂಪದಿಂದ ಉಪದೇಶಿಸಿದನು. ಆ ಭೀಷ್ಮಾದಿಗಳು **ಯೇ ಚ ಹೃದಾಃ** (ಹೃಞ ಹರಣೇ, ದೋ ಅವಖಂಡನೆ, ಉಭಾಭ್ಯಾಂ ಡಃ) ಪ್ರಾಣವನ್ನು ಅಪಹರಿಸುವ ಶರೀರ, ಖಂಡಕರಾದ ಶಲ್ಯ, ಅಶ್ವತ್ಥಾಮ ಕೃಪ ಕೃತವರ್ಮ ಮುಂತಾದವರು **ಸೂರಯಃ ಅಪಿ** ಜ್ಞಾನಿಗಳಾಗಿದ್ದರೂ **ಯಂ ದೃಷ್ಟ್ವಾ** ಯಾರನ್ನು ನೋಡಿ **ಮುಹ್ಯಂತಿ** ಮೋಹಗೊಳ್ಳುತ್ತಿದ್ದರು ಇದರಿಂದ ಭೀಷ್ಮದ್ರೋಣಕರ್ಣಶಲ್ಯಸೌಪ್ತಿಕಪರ್ವ ಸಂಗ್ರಹವಾಯಿತು.

**7. ತೇಜೋವಾರಿಮೃದಾಂವಿನಿಮಯಃ - ಅನುಶಾಸನಪರ್ವ**

**ತೇಜೋವಾರಿ ಮೃದಾಂ ವಿನಿಮಯಃ ತೇಜಸಾಂ** ತೈಜಸವಾದ ಕಣ್ಣು **ವಾರಿ** ನೀರು **ಮೃದಃ** ಭೂಮಿ **ವಿನಿಮಯಃ** ಇವುಗಳು ಮಿಶ್ರವಾಗುವದು ಅರ್ಥಾತ್ ಸತ್ತವರ ಹೆಂಡಂದಿರ ಮತ್ತು ಧೃತರಾಷ್ಟ್ರನ ಕಣ್ಣೀರು ಭೂಮಿಯಲ್ಲಿ ಬೀಳುವದೆಂದರ್ಥ. ಅಥವಾ **ತೇಜಸಾಂ** ತೇಜೋಮಯಲೋಕಗಳು **ವಾರಿಣಾಂ** ತಿಲೋದಕಗಳ **ಮೃದಾಂ** ಕ್ರಿಮಿವಿಟ್‌ಭಸ್ಮರೂಪಮೃತ್ತಿಕೆಗಳ **ವಿನಿಮಯಃ** ಯೋಗ್ಯತಾನುಗುಣವಾಗಿ ಯಥಾವತ್ ಮಾಡಲ್ಪಟ್ಟವೆ **ಯತ್ರ** ಯಾರ ವಿಷಯದಲ್ಲಿ **ತ್ರಿಸರ್ಗಃ** ಮೋಕ್ಷಆಪದ್‌ರಾಜಧರ್ಮ ಸರ್ಗಃ ವಾಗ್ವಿಸರ್ಗಗಳು **ಅಮೃಷಾಃ** ಸಫಲವಾದವು ಹೀಗೆ ಅನುಶಾಸನಪರ್ವವನ್ನು ವಿವರಿಸಲಾಗಿದೆ.

**8. ನಿರಸ್ತಕುಹಕಂ - ಅಶ್ವಮೇಧಿಕಪರ್ವ**

**ನಿರಸ್ತಕುಹಕಂ** ಅಶ್ವಮೇಧ ನಿಮಿತ್ತ ಸೋಲಿಸಲ್ಪಟ್ಟ ಕಪಟಿಗಳಾದ ರಾಜರುಳ್ಳ ಎಂದು ಹೇಳುವ ಮೂಲಕ ಆಶ್ವಮೇಧಿಕಪರ್ವವನ್ನು ಸಂಗ್ರಹಿಸಲಾಗಿದೆ.

**9. ಸತ್ಯಂ - ವ್ಯಾಸಾಶ್ರಮಮೌಸಲಪರ್ವಗಳು**

**ಸತ್ಯಂ ಸತ್** ನಿರ್ದುಷ್ಟವಾದ ಸ್ಥಾನವನ್ನು **ಯಂ** ಯಥಾಯೋಗ್ಯವಾಗಿ **ಯಾಪಯತಿ** ಹೊಂದಿಸುವನು. ಧೃತರಾಷ್ಟ್ರ ಯಾದವರಿಗೆ ಯೋಗ್ಯವಾದ ಸ್ಥಾನವನ್ನು ಕಲ್ಪಿಸುವನು ಎನ್ನುವದನ್ನು ವ್ಯಾಸಾಶ್ರಮಮೌಸಲಪರ್ವಗಳಲ್ಲಿ ಹೇಳಲಾಗಿದೆ.

## 10. ಪರಂ-ಮಹಾಪ್ರಾಸ್ಥಾನಿಕ ಸ್ವರ್ಗಾರೋಹಣಪರ್ವ

**ಪರಂ** ಪೃಥ್ವೀ ರೂಪಸ್ಥಾನವು ಗಮಕವಾಗಿದ್ದ ಮಹಾಪ್ರಾಸ್ಥಾನಿಕ ಸ್ವರ್ಗಾರೋಹಣಪರ್ವ.

**ಈ ಶ್ಲೋಕವು ಗಾಯತ್ರೀಭಾಷ್ಯರೂಪವೂ ಹೌದು.**

ವ್ಯಾಪ್ತ್ಯರ್ಥಕವಾದ **ತತ್** ಶಬ್ದವ್ಯಾಖ್ಯಾನವೇ **ಪರಂ** ಎಂಬುದು. ಪರಶಬ್ದಕ್ಕೆ ಪೂರ್ಣವೆಂದರ್ಥ. ದೇಶತಃ ಪೂರ್ಣ ಮತ್ತು ವ್ಯಾಪ್ತ ಇವೆರಡಕ್ಕೂ ಒಂದೇ ಅರ್ಥ.

**ಸವಿತುಃ** ಎಂಬುದರ ವ್ಯಾಖ್ಯಾನವೇ **ಜನ್ಮಾದ್ಯಸ್ಯ ಯತಃ** ಎಂಬುವದು. **ಸವಿತಾ** ಎಂದರೆ **ಜಗತ್ಪ್ರಸವಿತಾ** ಎಂದರ್ಥ. ಇವನಿಂದಲೇ ಜಗತ್ತಿನ ಜನ್ಮಾದಿಗಳಾಗುವವು ಎಂದರೂ ಒಂದೇ.

ಸೇವ್ಯತ್ವಾರ್ಥಕವಾದ ವರೇಣ್ಯಶಬ್ದಾರ್ಥವೇ ಸೇವ್ಯತ್ವಪ್ರಯೋಜಕವಾದ ನಿರ್ದೋಷತ್ವ ಗುಣಪೂರ್ಣತ್ವ ತಿಳಿಸುವ **ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ** ಎಂಬುದು. ಭೃಞ್ ಭರಣೇ, ಗಮಲ್ಲ ಗತೌ, ಎಂಬ ಧಾತುವಿನಿಂದ ನಿಷ್ಪನ್ನವಾದ ಪೋಷಣ ಮತ್ತು ಜ್ಞಾನಾರ್ಥಕವಾದ ಭರ್ಗಶಬ್ದದ ವ್ಯಾಖ್ಯಾನವೇ **ಸ್ವರಾಟ್** ಮತ್ತು **ಅರ್ಥೇಷ್ವಭಿಜ್ಞಃ** ಎಂಬುದು. **ಸ್ವಾನಾಂ** ಭಕ್ತರಿಗೆ **ರಾಟ್** ರಂಜಕನಾಗಿ ಪೋಷಕ ಎಂಬುದು ಮೊದಲನೆಯ ಧಾತ್ವರ್ಥ. ಗತ್ಯರ್ಥಕಗಳು ಜ್ಞಾನಾರ್ಥಕವಾದ್ದರಿಂದ ಅದರ ಅರ್ಥ **ಅರ್ಥೇಷ್ವಭಿಜ್ಞಃ** ಎಂಬುದು.

**ದೇವ** ಶಬ್ದದ ವ್ಯಾಖ್ಯಾನವೇ **ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ** ಎಂಬುದು. 'ದಿವು ಕ್ರೀಡಾ-ವಿಜಗೀಷಾ- ವ್ಯವಹಾರ-ಸ್ತುತಿ-ಮುದ-ಮೋದ-ಸ್ವಪ್ನ-ಕಾಂತಿ-ಗತಿಷು' ಎಂಬ ಧಾತು ಪ್ರಕೃತದಲ್ಲಿ ಕ್ರೀಡಾ ಎಂಬ ಅರ್ಥದಲ್ಲಿ ದೇವಶಬ್ದಾರ್ಥವನ್ನು ವಿವರಿಸುತ್ತದೆ. ದೇವರು ಸ್ವಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುವದಿಲ್ಲ.

**ಮುಹ್ಯಂತಿ ಯಂ ಸೂರಯಃ** ಇಲ್ಲಿ ದೇವಶಬ್ದಕ್ಕೆ ಮೋಹಕೊಡುವವನು ಎಂದು ಅರ್ಥ ಮಾಡಬೇಕು. ಅಂತರ್ಣೀತ ಣಿಚ್ ಸ್ವಾಪ್ನಾರ್ಥಕ ದೇವಶಬ್ದದ ವ್ಯಾಖ್ಯಾನವನ್ನು ಇಲ್ಲಿ ವಿವರಿಸಿದ್ದಾರೆ. ತನ್ನ ವಿಷಯದಲ್ಲಿ ಸ್ವಾಪ್ನಪರ್ಯಾಯ ಮೋಹಕೊಡುವವನು ಶ್ರೀಹರಿಯೇ ಎಂದರ್ಥ.

**ಧಿಯೋ ಯೋ ನಃ ಪ್ರಚೋದಯಾತ್** ಎಂಬುದರ ವ್ಯಾಖ್ಯಾನವೇ **ತೇನೇ ಬ್ರಹ್ಮ ಹೃದಾಯ ಆದಿಕವಯೇ** ಎಂಬುದು. ಬಹುವಚನಾಂತವಾದ **ನಃ** ಎಂಬುದಕ್ಕೆ ಬ್ರಹ್ಮಾದಿ ಸರ್ವಚೇತನರು ಎಂದರ್ಥ. ಧೀಶಬ್ದಕ್ಕೆ ಲಕ್ಷಣಯಾ ಜ್ಞಾನಸಾಧನವೆಂದರ್ಥ. ಅಲ್ಲಿರುವ ಬಹುವಚನಕ್ಕೆ ವೇದಾದಿಪ್ರಮಾಣತ್ರಯಗಳು ಎಂದರ್ಥ. **ಪ್ರಚೋದಯಾತ್** ಎಂದರೆ ಪ್ರೇರಣಾರೂಪ ಉಪದೇಶವೆಂದರ್ಥ. ಒಟ್ಟಿನಲ್ಲಿ ಬ್ರಹ್ಮಾದಿಸಮಸ್ತಚೇತನರ ಜ್ಞಾನಸಾಧನಗಳನ್ನು ಪ್ರೇರಿಸಲಿ ಎಂದು ಗಾಯತ್ರಿ ಮೂರನೆಯ ಪಾದದ ಅರ್ಥ. ಚೇತನರಲ್ಲಿ ಮುಖ್ಯರಾದ ಬ್ರಹ್ಮದೇವರಿಗೆ ಜ್ಞಾನಸಾಧನಕ್ಕೆ ಮುಖ್ಯವಾದ ವೇದವನ್ನು ಉಪದೇಶ ಮಾಡಿದನು ಎಂದು ಹೇಳಿದ್ದರಿಂದ ಅಮುಖ್ಯರಾದ ನಮ್ಮೆಲ್ಲರಿಗೆ ಉಪದೇಶ, ಇಂದ್ರಿಯಾದಿ ಪ್ರೇರಣ ಎಂಬ ಅರ್ಥವೂ ಬರುವುದರಿಂದ ಸಮಾನಾರ್ಥಕಗಳಾಗುವವು.

**ವೇದಸಮಾಖ್ಯೆಯಾಗಿದೆ ಈ ಮಂಗಲಪದ್ಯ**

'**ಯತೋ ವಾ ಇಮಾನಿ ಭೂತಾನಿ ಜಾಯಂತೇ**' ಎಂಬ ಶ್ರುತಿಯ ವಿಷಯವನ್ನೇ **ಜನ್ಮಾದ್ಯಸ್ಯ ಯತಃ** ಎಂಬುವದು ಹೇಳುತ್ತದೆ. ಸಮಾನಾ ಆಖ್ಯಾ ಸಮಾಖ್ಯಾ (ಏಕಾರ್ಥಪ್ರತಿಪಾದಿಕಾ)ಒಂದೇ ವಿಷಯವನ್ನು ಹೇಳುವದು ಎಂದರ್ಥ.

'**ಯಃ ಸರ್ವಜ್ಞಃ ಸ ಸರ್ವವಿತ್**' ಎಂಬ ಶ್ರುತಿಯ ಸಮಾಖ್ಯೆಯೇ '**ಅರ್ಥೇಷ್ವಭಿಜ್ಞಃ**' ಎಂಬುದು. '**ಏಷ ಸರ್ವೇಶ್ವರ ಏಷ ಭೂತಾಧಿಪತಿಃ**' ಎಂಬ ಶ್ರುತಿಗೆ **ಸ್ವರಾಟ್** ಎಂಬುದು ಸಮಾಖ್ಯಾ. '**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ ಪ್ರಹಿಣೋತಿ**' ಎಂಬುದರ ಸಮಾಖ್ಯೆಯೇ '**ತೇನೇ ಬ್ರಹ್ಮ ಹೃದಾ**' ಎಂಬುದು. '**ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ**' '**ಅಥೈನಮಾಹುಃ ಸತ್ಯಕರ್ಮೇತಿ**' **ವಿಶ್ವಂ ಸತ್ಯಂ** ಮುಂತಾದ ಶ್ರುತ್ಯರ್ಥವೇ '**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ** ಎಂಬುದು. '**ಯ ಆತ್ಮಾ ಅಪಹತಪಾಪ್ಮಾ**, ಎಂಬುದರ ಅರ್ಥವೇ '**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**, '**ವಿಜ್ಞಾನಮಾನಂದಂ ಬ್ರಹ್ಮ**, ಎಂಬ ಶ್ರುತಿಸಮಾಖ್ಯಾ ಸರ್ವೋತ್ಕೃಷ್ಟ ಜ್ಞಾನಾನಂದಾರ್ಥಕವಾದ **ಸತ್ಯಂ** ಎಂಬುದು. '**ಸ ಪರೋ ವರೀಯಾನ್**' ಎಂಬ ಶ್ರುತಿಸಮಾಖ್ಯಾ **ಪರಂ** ಎಂಬುದು. '**ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್**' ಎಂಬ ಶ್ರುತಿಗೆ ಧೀಮಹಿ ಎಂಬುದು.

ಶ್ರೀಮದ್ವೇದವ್ಯಾಸದೇವರು ಮಹಾಭಾರತರಚನೆ ಮಾಡಿದರೂ ಮನಃ ಸಮಾಧಾನವಾಗದೇ ಶ್ರೀಮದ್ಭಾಗವತವನ್ನು ರಚಿಸಿದರು ಎಂಬುದು ಪ್ರಸಿದ್ಧ. ಭಾಗವತದಲ್ಲಿ ವ್ಯಾಸರು '**ಪರೀಕ್ಷಿತೋಽಥ ರಾಜರ್ಷೇರ್ಜನ್ಮ ಕರ್ಮವಿಲಾಪನಂ । ಸಂಸ್ಥಾನಂ ಚ ಪಾಂಡುಪುತ್ರಾಣಾಂ ವಕ್ಷ್ಯೇ ಕೃಷ್ಣಕಥೋದಯಂ ॥** ಎಂದು ಪ್ರತಿಜ್ಞೆ ಮಾಡಿದ್ದರಿಂದ ಭಾರತ ಭಾಗವತಗಳಿಗೆ ವಿಷಯ ಒಂದೇ ಆದುದರಿಂದ ವಿಶೇಷವಿಲ್ಲದಿದ್ದರೂ ಕೃಷ್ಣ ಕಥೋದಯಂ ಎಂದದ್ದರಿಂದ ಭಾಗವತದಲ್ಲಿ ವಿಶೇಷ ಕೃಷ್ಣಕಥಾ ಇದೆ ಎಂದು ತಿಳಿಯುವುದರಿಂದ ಭಾಗವತ ಪ್ರತಿಪಾದ್ಯನು ಶ್ರೀಕೃಷ್ಣನೆಂದು ಸಿದ್ಧವಾಗುವುದು. ಭಾರತದಲ್ಲಿ ಮತ್ತು ಅದರ ಅಂಗವಾದ ಹರಿವಂಶದಲ್ಲಿಯೂ ಶ್ರೀಕೃಷ್ಣಕಥಾವರ್ಣನೆ ಮಾಡುವದರಿಂದ ಅಲ್ಲಿ ಕೃಷ್ಣನೇ ಅಧಿಕೃತ. ಕೃಷ್ಣದೇವತಾಕ ಮಂಗಲಾಚರಣವಿಲ್ಲ. ಆದ್ದರಿಂದ ಯುಕ್ತವಲ್ಲ ಎಂದು ಶಂಕಿಸಬಾರದು. ಅಧಿಕೃತ ದೇವತೆಗೆ ಹೇಗೆ ನಮಸ್ಕರಿಸಬೇಕೋ ಹಾಗೆಯೇ ವಿಶಿಷ್ಟ ಇಷ್ಟ ದೇವತೆಗೂ ನಮಸ್ಕಾರ ಮೊದಲಾದ ಮಂಗಲ ಮಾಡಲೇಬೇಕು. ಆದುದರಿಂದ ಸ್ವರೂಪತಃ ಕೃಷ್ಣನಾರಾಯಣರು ಒಂದೇ ಆಗಿದ್ದರೂ ನಾಮಮಾತ್ರಭೇದವಿದ್ದರೂ ನಾರಾಯಣನಾಮದಲ್ಲಿದ್ದಂತೆ ಸಂಜ್ಞಾ ಇಲ್ಲದಿರುವುದರಿಂದ ಣಕಾರ ಬೇರೆ ಕಡೆ ಇಲ್ಲದಿರುವುದರಿಂದ ಅಸಾಧಾರಣ ವೈಶಿಷ್ಟ್ಯ ನಾರಾಯಣನಾಮಕ್ಕಿರುವುದರಿಂದ ನಾರಾಯಣನಾಮಕದೇವತಾ ವಂದನವನ್ನು ಭಾರತದಲ್ಲಿ ಮಾಡಿದ್ದಾರೆ.

**ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕ ನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥**

ಈ ಶ್ಲೋಕದಲ್ಲಿರುವ ವಿಶೇಷಣಗಳು ನಾರಾಯಣಶಬ್ದಾರ್ಥವನ್ನೇ ಹೇಳುವವು **ನರಃ** ಪುರುಷರೂಪಿ ವಿಷ್ಣುವು ಬ್ರಹ್ಮನಿಗೆ ಉಪದೇಶಕತ್ವೇನ ಆಯನನಾದವನು ನಾರಾಯಣ. ಇದರ ಅರ್ಥವೇ **ಸುರಗುರುಂ** ಎಂಬುದು. ಸುರರಲ್ಲಿ ಶ್ರೇಷ್ಠನಾದ್ದರಿಂದ ಸುರತಿವುಳ್ಳವನಾದ್ದರಿಂದ ಸುರ ಎಂದರೆ ಬ್ರಹ್ಮಾ. ಅವನ ತಂದೆ ಎಂದರ್ಥ. ಭಾಗವತದಲ್ಲಿಯೂ ಇದನ್ನೇ **ಜನ್ಮಾದ್ಯಸ್ಯ ಯತೋ ಅನ್ವಯಾತ್ ಇತರತಶ್ಚ** ಎಂದು ಹೇಳಿದ್ದಾರೆ. **ಯತಃ**-ಯಾವ ನಾರಾಯಣನಿಂದ **ಆದ್ಯಸ್ಯ** ಮೊದಲಿಗನಾದ ಬ್ರಹ್ಮನ **ಜನ್ಮ** ಉತ್ಪತ್ತಿಯು ಆಯಿತೋ ಅದೂ ಕೂಡ **ಅನ್ವಯಾತ್** ಸಾಧಾರಣವಾಗಿಯೇ

(ಎಲ್ಲಕಡೆ ಮಾತಾಪಿತೃಗಳಿಂದಲೇ)ಲಕ್ಷ್ಮೀದ್ವಾರಾ ಎಂದರ್ಥ. ಮತ್ತು **ಇತರತಃ**-ಅಸಾಧಾರಣವಾಗಿರುವ ತನ್ನನಾಭಿಕಮಲದಿಂದ

1. ನರೋತ್ಪನ್ನತ್ವಾತ್ ನಾರಂ-ಜಗತ್, ಅದನ್ನು ಹೊಂದುವದರಿಂದ ನಾರ ಭಗವಂತ. 'ಯೇತಿ ಜ್ಞಾನಂ ಸಮುದ್ದಿಷ್ಟಂ' ಎಂದಿರುವದರಿಂದ ಯಂ ಎಂದರೆ ಜ್ಞಾನ. ಅದರಿಂದ ಕೂಡಿದ **ಣ** ಸುಖ. ಅದಕ್ಕಾಗಿ ಜಗದ್ವ್ಯಾಪಿಯು ಜ್ಞಾನಾನಂದರೂಪನು ಎಂಬುದು ನಾರಾಯಣಶಬ್ದಾರ್ಥ. ಇದನ್ನೇ **ಜಗದೇಕನಾಥಂ** ಎಂಬ ವಿಶೇಷಣ ತಿಳಿಸುವದು. ಅಂದರೆ ವಿಭಿನ್ನಜಗತ್ತಿನಲ್ಲಿ ವ್ಯಾಪ್ತನಾದರೂ ಸ್ವಗತಭೇದವಿಲ್ಲ. ಆದ್ದರಿಂದ ಜಗದೇಕನು. ಅ-ಸರ್ವಥಾ ತಿಷ್ಠತೀತಿ ಅಥಂ ಸ್ಥಾವರವು. ಅಥಂ ನ ಇತಿ ನಾಥಂ ಸ್ಥಾವರದಿಂದ ಭಿನ್ನವಾದದ್ದು ಅಂದರೆ ಜ್ಞಾನಸುಖವುಳ್ಳವನೆಂದರ್ಥ. ಜಗದೇಕಶ್ಚಾಸೌ ನಾಥಶ್ಚ ಜಗದೇಕನಾಥಃ । ತಂ ಜಗದೇಕನಾಥಂ ಎಂದು ವಿಗ್ರಹ. ಇದನ್ನೇ ಭಾಗವತದಲ್ಲಿ **ಅರ್ಥೇಷ್ವಭಿಜ್ಞಃ** ಎಂದು ಹೇಳಿರುವರು. ಅರ್ಥೇಷು ಎಲ್ಲ ಪದಾರ್ಥಗಳಲ್ಲಿ ಇದ್ದರೂ ಅಭಿತ್- ಸ್ವಗತಭೇದಶೂನ್ಯನೆಂದರ್ಥ. ಜ್ಞ-ಜ್ಞಾನರೂಪನು ಅರ್ಥೇಷ್ವಭಿತ್‌ಚಾಸೌ ಜ್ಞಶ್ಚ ಅರ್ಥೇಷ್ವಭಿಜ್ಞಃ ।

2. 'ಅಕಾರೋ ವಾಸುದೇವಃ ಸ್ಯಾತ್', ಎಂಬ ಸ್ಮೃತಿ. 'ಅ ಇತಿ ಬ್ರಹ್ಮ', ಎಂಬ ಶ್ರುತಿ ಇರುವುದರಿಂದಲೂ ಔ ಯೇ ನ ರಮಂತೇ ತೇ ಅರಾಃ । ಅರಾ ನ ಭವಂತೀತಿ ನಾರಾಃ-ಭಗವದ್ಭಕ್ತಾಃ ತೇಭ್ಯಃ 'ಅಯಃ ಶುಭಾವಹೋ ವಿಧಿಃ' ಣಃ ಸುಖಂ ಯಸ್ಮಾತ್ ಸಃ ನಾರಾಯಣಃ-ಭಕ್ತರಿಗೆ ಶುಭದೈವ-ಸುಖಗಳನ್ನು ನೀಡುವವನು ಎಂಬುದು ನಾರಾಯಣಶಬ್ದಾರ್ಥ. ಅದನ್ನು **ಭಕ್ತಪ್ರಿಯಂ** ಎಂಬ ವಿಶೇಷಣ ತಿಳಿಸುವದು. ಅದನ್ನೇ ಭಾಗವತದಲ್ಲಿ ಸ್ವರಾಟ್ ಎಂದು ಹೇಳಿರುವರು ಸ್ವಾನ್ ರಂಜಯತೀತಿ **ಸ್ವರಾಟ್** ಭಕ್ತರನ್ನು ಸಂತೋಷಗೊಳಿಸುವ ಎಂದರ್ಥ.

3. **ನಾರಾಯ** ಬ್ರಹ್ಮನಿಗೆ **ಅಯತಿ** ಜ್ಞಾಪಯತಿ ಸ್ವಾತ್ಮಾನಂ ಇತಿ ನಾರಾಯಣಃ (ಅಯ ಗತೌ ಯೇ ಗತ್ಯರ್ಥಾಃ ತೇ ಜ್ಞಾನಾರ್ಥಾಃ) ಬ್ರಹ್ಮನಿಗೆ ತನ್ನ ಜ್ಞಾನ ಮಾಡಿಕೊಡುವವನು ನಾರಾಯಣನು. ಅದನ್ನೇ **ಸಕಲಲೋಕನಮಸ್ಕೃತಂ ಚ** ಎಂದು ಹೇಳಿದ್ದಾರೆ. **ಕ**-ಸುಖ **ಲಂ**-ಐಶ್ವರ್ಯ ಇವುಗಳಿಂದ ಸಹಿತನಾದ್ದರಿಂದ ಅಥವಾ ಎಲ್ಲ ಕೌಶಲಗಳಿಂದ ಕೂಡಿದವನಾದ್ದರಿಂದ ಸಕಲ ಎಂದರೆ ವಿಷ್ಣು. ಅವನ ಲೋಕ-ಜ್ಞಾನ (ಲುಕ್ ಪ್ರಕಾಶೆ)ಅದಕ್ಕಾಗಿ ನಮಸ್ಕೃತನಾದ ಎಂದರ್ಥ

4. ಇದನ್ನೇ **ತೇನೇ ಬ್ರಹ್ಮ ಹೃದಾಯ ಆದಿಕವಯೇ** ಎಂಬುವದರಿಂದ ತಿಳಿಸುವರು. **ಬ್ರಹ್ಮ** ಪರಿಪೂರ್ಣನಾದ ತನ್ನನ್ನು **ಹೃದಾ** ನಮಸ್ಕರಿಸುವ ನೆಪದಿಂದ ಚತುರ್ಮುಖನಿಗೆ **ತೇನೆ** ತಿಳಿಸಿದನು.(ತಂತ್ರಸಾರದಲ್ಲಿ ಹೃದಾಶಬ್ದ ನಮಸ್ಕಾರವಾಚಕ ಎಂದು ಹೇಳಿದೆ.)

5. **ಆರಾಃ** ಪ್ರಪಂಚವೃಕ್ಷಕ್ಕೆ ಮೂಲಭೂತವಾದ ತ್ರಿಗುಣಗಳು, ಅವುಗಳ ಸಂಬಂಧಿ **ಅಯನ** ಜ್ಞಾನವು ಆರಾಯನಂ ನಾಸ್ತಿ ಅಸ್ಯ ಇತಿ ನಾರಾಯಣಃ । ಸತ್ವ-ರಜ-ತಮೋಗುಣಗಳಿಂದ ಜನ್ಯವಾದ ಜ್ಞಾನವಿಲ್ಲದವನೆಂದರ್ಥ. ಇದನ್ನೇ **ತ್ರೈಗುಣ್ಯವರ್ಜಿತಂ** ಎಂದಿದ್ದಾರೆ. ಅಸಾರ್ವತ್ರಿಕವಾದ ಯಥಾರ್ಥಜ್ಞಾನ ಸಾತ್ವಿಕ, ಸಂಶಯಜ್ಞಾನ ರಾಜಸ, ವಿಪರೀತಜ್ಞಾನ ತಾಮಸ, ಈ ರೀತಿಯ ಗುಣತ್ರಯಸಂಬಂಧಿ ಜ್ಞಾನಗಳು. ಇವುಗಳಿಂದ ವರ್ಜಿತನೆಂದರ್ಥ. ಇದನ್ನೇ **ಮುಹ್ಯಂತಿ ಯಂ ಸೂರಯಃ** ಎಂದು ಭಾಗವತದಲ್ಲಿ ಹೇಳಿದೆ. **ಸೂರಯಃ** ತ್ರಿಗುಣಜನ್ಯಜ್ಞಾನವುಳ್ಳವರು. ಯಾತಿ ಪ್ರಾಪ್ನೋತಿ ಸ್ವನಂದಂ ಅನೇನೇತಿ ಯಃ । ತಂ ಯಂ । **ಯಂ** ಜ್ಞಾನಾನಂದ ರೂಪನಾದ ನಾರಾಯಣನನ್ನು ತಿಳಿಯಲು **ಮುಹ್ಯಂತಿ** ವಿಪರೀತಜ್ಞಾನವುಳ್ಳವರಾಗುತ್ತಾರೆ. ಸತ್ವಾದಿಗುಣಶೂನ್ಯನಾದವನನ್ನು ಜ್ಞಾನಾದಿಗುಣರಹಿತನೆಂದು ವಿಪರೀತವಾಗಿ ತಿಳಿಯುವರು ಎಂದರ್ಥ.

6. ನ ರತಿಃ ಸುಖಂ ಅನೇನ ಇತಿ **ಅರಂ** ಜನ್ಮ । ತದಯತೀತಿ ಅರಾಯನಃ । ಸಃ ನ ಭವತೀತಿ ನಾರಾಯಣಃ । ಅಂದರೆ ಸುಖಜನಕವಲ್ಲದ ಜನ್ಮವಿಲ್ಲದವನು ನಾರಾಯಣ. ಇದನ್ನೇ **ಅಜಂ** ಎಂದು ಹೇಳಿದ್ದಾರೆ. ಇದನ್ನೇ **ತೇಜೋವಾರಿಮೃದಾಂ ಯಥಾವಿನಿಮಯಃ** ಎಂದಿದೆ ಭಾಗವತ. ತೇಜೋಬನ್ನಾತ್ಮಕಗಳ ಅವಿನಿಮಯ ಕಾರ್ಯವಾದ ಜಡಶರೀರಾಭಾವವು **ಯಥಾ** ಪ್ರಮಾಣೋಪೇತವಾಗಿದೆ ಎಂದರ್ಥ.

7. ನ ರಮತೇ ಅನೇನ ಇತಿ **ಅರಂ** ಲಿಂಗಶರೀರಂ । ತತ್ ಅಯನಂ ಯಸ್ಯ ಸಃ ಅರಾಯನಃ ಸಃ ನ ಭವತೀತಿ ನಾರಾಯಣಃ । ಅಂದರೆ ಯಾವ ಲಿಂಗಶರೀರವಿದ್ದರೆ ನಿರ್ದುಃಖಾನಂದ ದೊರಯಲಾರದೋ ಅಂಥಹ ಲಿಂಗಶರೀರವಿದ್ದವನಲ್ಲ ಎಂದು ಅರ್ಥ. ಅದನ್ನೇ **ವಿಭುಂ** ಎಂದಿದೆ ಭಾರತ. ಭವತಿ ಅಸ್ಮಾತ್ ಸ್ಥೂಲದೇಹಂ ಇತಿ ಭೂಃ ಲಿಂಗಶರೀರಂ ವಿಗತಂ ಭೂಃ ಯಸ್ಮಾತ್ ತಂ ವಿಭುಂ । ಸ್ಥೂಲದೇಹ ಬರುವುದಕ್ಕೆ ಕಾರಣವಾದ ಲಿಂಗಶರೀರವಿಲ್ಲದವನು ಎಂದರ್ಥ. ಇದನ್ನೇ ಭಾಗವತದಲ್ಲಿ **ಯತ್ರ ತ್ರಿಸರ್ಗೋ ಮೃಷಾ** ಎಂಬುವದರಿಂದ

ಕಾಣಬಹುದು. **ಯತ್ರ** ಯಾವ ನಾರಾಯಣನಲ್ಲಿ **ತ್ರಿಸರ್ಗಃ** ತ್ರಿಗುಣಾತ್ಮಕರಾದ ಜೀವರಿಗೆ ದೇಹಸಂಬಂಧರೂಪವಾದ **ಸರ್ಗಃ** ಉತ್ಪತ್ತಿಯಾಗುವುದರಿಂದ ಬರುವದೋ ಅಂತಹ ಲಿಂಗದೇಹವು **ಮೃಷಾ** ಅತ್ಯಂತಸುಳ್ಳು ಎಂದರ್ಥ.

8. ನರ ಎಂದರೆ ಮಹಾ ಪುರುಷನಾದ ಶ್ರೀಹರಿ ಅವನಿಂದ ಉತ್ಪನ್ನನಾದವನು **ನಾರಃ** ಎಂದರೆ ಬ್ರಹ್ಮಾ, ಅವನನ್ನು(ಅವನಿಗೆ)**ಅಯಯತಿ** ಜನ್ಮ ಹೊಂದಿಸುವವನು ನಾರಾಯಣ. ಇದನ್ನೇ **ಆದ್ಯಂ** ಎಂದಿತು ಭಾರತ. ಆಕಾರಸ್ತು ಪಿತಾಮಹೇ ಎಂದಿರುವದರಿಂದ ಅಶಬ್ದವಾಚ್ಯ ಬ್ರಹ್ಮನಿಗೂ ಆದ್ಯಃ ಕಾರಣನಾದವನೆಂದರ್ಥ. ಇದನ್ನೇ ಧಾಮ್ನಾ ಸ್ವೇನ ಸದಾ ಎಂದಿತು ಭಾಗವತ. **ಸ್ವೇ** ಸ್ವಕ್ರಿಯರಾದ ಭಕ್ತರಿಗೆ **ಇನಃ** ಸ್ವಾಮಿಯಾದ ಬ್ರಹ್ಮನು ಸ್ವನನು. ಅವನನ್ನು (ಅವನಿಗೆ)**ಸಾದಯತೀತಿ** ಜನ್ಮ ಪ್ರಾಪಯತೀತಿ ಸ್ವೇನಃ ತನ್ನ ಭಕ್ತರಿಗೆ ಒಡೆಯನಾದ ಬ್ರಹ್ಮನಿಗೆ ಜನಕನೆಂದರ್ಥ. ಧಾಮ್ನಾ ಯುಕ್ತಂ ಸ್ವರೂಪದಿಂದ ಕೂಡಿದವನು ಎಂದರ್ಥ. 'ತೇಜಃಸ್ವರೂಪಂ ಗೇಹಂ ಚ ಪ್ರಾಜ್ಞೈರ್ಧಾಮೇತಿ ಗೀಯತೇ' ಇತಿ ಶಬ್ದನಿರ್ಣಯೇ.

9.ಆಸಮಂತಾತ್ ರತಿಃ ಸುಖಂ ಯಸ್ಮಾತ್ ಸಃ ಆರೋ ಧರ್ಮಃ ತದ್ವಿರುದ್ಧತ್ವಾತ್ ನಾರಾಃ ಕಾಮಾದಯಃ ತಾನ್ ಅಯಯತಿ ಇತಿ ನಾರಾಯಣಃ ಸುಖದಾಯಕ ಧರ್ಮವಿರುದ್ಧ ಕಾಮಕ್ರೋಧಾದಿಗಳನ್ನು ಹೋಗಲಾಡಿಸುವವನು ನಾರಾಯಣ. ಇದನ್ನೇ **ಈಶಂ** ಎಂಬುದರಿಂದ ತಿಳಿಸಿತು ಭಾರತ. 'ಇಕಾರೋ ಮದನಃ ಪ್ರೋಕ್ತಃ' ಎಂದಿದ್ದಾರೆ. **ಇಃ** ಕಾಮ ತದುಪಲಕ್ಷಿತಕ್ರೋಧಾದಿಗಳು ಅವುಗಳನ್ನು **ಈಷ್ಟೇ** ಕೊಡಲು ಕಳಿಯಲು ಸಮರ್ಥ(ಶಕ್ತ)ನಾದವನು ಈಶನು ಎಂದರ್ಥ. ಅದನ್ನು ಹೇಳಿತು ಭಾಗವತ ನಿರಸ್ತಕುಹಕಂ ಎಂದು.

ಕುಂ ಕುತ್ಸಾಂ ಹಂತಿ ಪ್ರಾಪ್ನೋತಿ ಕುಹಂ(ಹನ ಹಿಂಸಾಗತ್ಯೋಃ)ಕುಹಂ ಕಂ ಯೇಭ್ಯಸ್ತೇ ಕುಹಕಾಃ ಕಾಮಾದಯಃ, ನಿರಸ್ತಾಃ ಕುಹಕಾಃ ಯೇನ ಸಃ ತಂ **ನಿರಸ್ತಕುಹಕಂ** ಎಂದರೆ ನಿಂದಿತವಾದ ಸುಖದಾಯಕ ಕಾಮಾದಿಗಳನ್ನು ಪರಿಹರಿಸಿದನೆಂದರ್ಥ.

10. **ಆರಾಃ** ದೋಷಾಃ **ತದಯನಂ** ಅಶ್ರಯಃ ಸಂಸಾರ ಸಃ ನ ಭವತಿ ಅಸ್ಮಾದಿತಿ ನಾರಾಯಣಃ । ಅದನ್ನೇ **ಭವಘ್ನಂ** ಎಂದಿತು ಭಾರತ. ಸಂಸಾರ ನಾಶಕನೆಂದರ್ಥ. ಅಥವಾ ಭವಂ ಮಹಾಕಲ್ಯಾಣರೂಪವಾದ ಮೋಕ್ಷಂ ಹಾಪಯತಿ ಗಮಯತೀತಿ **ಭವಘ್ನಂ** ಮೋಕ್ಷಪ್ರದನೆಂದರ್ಥ.(ಹನಹಿಂಸಾಗತ್ಯೋಃ ಎಂಬ ಧಾತು ಅಂತರ್ಣೀತ

ಣಿಚ್) ಇದನ್ನು **ಸತ್ಯಂ** ಎಂಬ ಪದದಿಂದ ಭಾಗವತದಲ್ಲಿ ಕಾಣಬಹುದು. **ಸತ್** ಪುನರಾವರ್ತಿ ಮೊದಲಾದ ದೋಷ ಶೂನ್ಯವಾದ ಸ್ಥಾನವನ್ನು **ಯಾಪಯತೀತಿ** ಹೊಂದಿಸುವನು. ಆದ್ದರಿಂದ ಸತ್ಯ ಎಂದರ್ಥ. ಸಂಸಾರನಾಶಕನೆಂದೂ ಭಾವ.

11. ನಯಂತೀತಿ **ನಾಃ** ದೇವಾಃ ಶಿಷ್ಯರಿಗೆ ಭಗವದ್ರೂಪ ಉಪದೇಶಿಸುವವರು. **ಆ** ಈಕ್ಷತ್ **ಅರಾಃ** ಶಾಪಾದಿದೋಷಾಃ **ಯೇಷಾಂ ಅಸ್ತೀತಿ ಅರಾಃ** ಪ್ರಲ್ಹಾದಾದಯಃ ಅಸುರಾಃ ಆ ಅತಿಶಯೇನ ಯಾಂತಿ ಸಿದ್ಧಿಂ ಇತಿ **ಆಯಾಃ** ಸಿದ್ಧರು ತ್ಯೈಃ ನೂಯತೇ ಸ್ತೂಯತೇ ಇತಿ ನಾರಾಯಣಃ ದೇವಾಸುರಸಿದ್ಧರಿಂದ ಸ್ತುತಿಸಲ್ಪಡುವವನು ನಾರಾಯಣ. ಇದನ್ನೇ **ಅಮರಾಸುರಸಿದ್ಧವಂದ್ಯಂ** ಎಂದು ಭಾರತದಲ್ಲಿ ಹೇಳಿದೆ. 'ದೇವಾ ಶಾಪಾಭಿಭೂತತ್ವಾತ್ ಪ್ರಲ್ಹಾದಾದ್ಯಾ ಭಭೂವಿರೇ' ಎಂದಿದೆ ಇದನ್ನೇ **ಪರಂ** ಎಂದು ಭಾಗವತ ಹೇಳಿತು. ಸರ್ವೋತ್ತಮ ಸರ್ವಪಾಲಕನೆಂದರ್ಥ. ಸರ್ವಪಾಲಕನೇ ಸ್ತುತ್ಯನಾಗುವನು ಎಂದು ಭಾವ.

ನಾರಾಯಣಂ ಎಂಬ ಕರ್ಮವು ಕ್ರಿಯಾಸಾಪೇಕ್ಷವಾದ್ದರಿಂದ ವಂದೇ ಎಂದಿದ್ದಾರೆ. ಸ್ತುತಿಸುವವನೆಂದರ್ಥ. 'ವದಿ ಅಭಿವಾದನಸ್ತುತ್ಯೋಃ' ಎಂದು ಧಾತು ಇದೆ ನಿಜ ಆದರೆ ಇಲ್ಲಿ ಅಭಿವಾದನ ಎಂದರ್ಥವನ್ನು ತೆಗೆದು ಕೊಳ್ಳಬಾರದು. ಏಕೆಂದರೆ ಗ್ರಂಥಕರ್ತೃವಾದ ವೇದವ್ಯಾಸರು ವಂದ್ಯನಾದ ನಾರಾಯಣನಿಂದ ಅಭಿನ್ನನಾಗಿದ್ದಾನೆ ತನಗೆ ತಾನೇ ನಮಸ್ಕರಿಸುವದು ಎಲ್ಲಿಯೂ ಕಂಡಿಲ್ಲ.

ಭಾಗವತದಲ್ಲಿ 'ನಮಸ್ತೇ ಭಾರ್ಗವ ಶ್ರೀಮನ್ ಜಾಮದಗ್ನ್ಯ ತಪೋಧನ । ರಾಮಕೃಷ್ಣೌ ಸ್ಮೃತಾವಾವಾಂ ಕಚ್ಚಿತ್ತೇ ಶ್ರವಣಂ ಗತೌ ॥ ಎಂದು ಪರಶುರಾಮನಿಗೆ ಬಲರಾಮ-ಕೃಷ್ಣನು ನಮಸ್ಕಾರ ಮಾಡಿದ್ದು ಇದೆಯಲ್ಲ ಎಂದರೆ ಅಲ್ಲಿ ವರ್ಣಧರ್ಮಗಳನ್ನು ನಡೆಸುವದು ಆವಶ್ಯಕ ಎಂದು ತೋರಿಸಲು ಬ್ರಾಹ್ಮಣರಿಗೆ ಕ್ಷತ್ರಿಯರು ನಮಸ್ಕಾರ ಮಾಡುವದು ಧರ್ಮ. ಎನ್ನುವದನ್ನು ತಿಳಿಸುವದಕ್ಕಾಗಿ ಶ್ರೀಕೃಷ್ಣನ ನಮಸ್ಕಾರ.

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ । ದೇವಿಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ಎಂಬ ಶ್ಲೋಕದಲ್ಲಿ ನಮಿಸಿದ್ದಾರೆ ಎಂದರೆ ಉದೀರಯೇತ್ ಎಂಬುದರಿಂದ ಇಷ್ಟು ಜನರಿಗೆ ನಮಸ್ಕರಿಸಬೇಕೆಂಬ ವಿಧಿಯನ್ನು ತಿಳಿಸುವದು ಉದ್ದೇಶವಾಗಿದೆ.

ತಸ್ಮೈ ನಮೋ ವ್ರಜಜನೈಃ ಸಂಚಕ್ರೇ ಹ್ಯಾತ್ಮನಾಽಽತ್ಮನೇ ।
ಅಹೋ ಪಶ್ಯತ ಶೈಲೇಶೋ ರೂಪೀ ನೋಽನುಗ್ರಹಂ ವ್ಯಧಾತ್ ॥

ಎಂದು ಗೋವರ್ಧನಪರ್ವತ ಪೂಜೆ ಮಾಡಿದಾಗ ತನ್ನನ್ನು ತಾನು ನಮಸ್ಕರಿಸಿದನೆಂದು ಶಂಕಿಸಬಾರದು.

ಸವಾವತಾರಾಭಿನ್ನೋಽಪಿ ಸರ್ವಶಕ್ತಿರಪಿ ಸ್ವಯಂ ।
ಪೂಜ್ಯಪೂಜಕನೀಚೋಚ್ಚಂ ನೋಹನಾಯ ಗುರಾತ್ಮನಾಂ ॥
ಅಖಂಡೈಕರಸೋ ವಿಷ್ಣುರ್ದರ್ಶಯೇತ್ತತ್ರ ತತ್ರ ಹಿ ।

ಎಂದು ಷಾಡ್ಗುಣ್ಯದಲ್ಲಿ ಹೇಳಿರುವದರಿಂದ ಅದು ದುಷ್ಟರ ಮೋಸಕ್ಕಾಗಿ ಮಾಡಿದ್ದು ಹಾಗಾದರೆ ಇಲ್ಲಿ ಹಾಗೆ ಮಾಡಲಿ ಎಂದರೆ ಮಂಗಲವೇ ಮೋಹಕವಾದರೆ ಗ್ರಂಥವೂ ಮೋಹಕಾರ್ಥಕವೆಂದಾಗಿ ಅಸ್ವೀಕಾರ್ಯವಾಗಬೇಕಾಗುವದು. ಕಾರಣ ವಂದೇ ಎಂಬುದು ಆತ್ಮನೇ ಪದವಾಗಿದ್ದರೂ ತನಗಾಗಿ ಸ್ತೋತ್ರ ಮಾಡಿದ್ದಲ್ಲ ಎಂದು ಸೂಚಿಸಲು ವಂದೇ ಎಂಬುದರ ತಾತ್ಪರ್ಯವನ್ನು **ಧೀಮಹೀ** ಎಂಬುವದರಿಂದ ಹೇಳಿರುವರು. ಇಲ್ಲಿ ಬಹುವಚನದಿಂದಲೇ ತಮ್ಮ ಶಿಷ್ಯರಿಗೆ ಶಿಕ್ಷಣದ ಅಭಿಪ್ರಾಯ ಧ್ವನಿತವಾಗುವುದು. ವದ ಧಾತುವಿಗೆ ಧ್ಯಾನಾರ್ಥಕತ್ವವಿಲ್ಲ ಎಂದು ಶಂಕಿಸಬಾರದು. ತಮ್ಮ ವಾಕ್ಯ ಛಂದಸ್ತುಲ್ಯವಾದ್ದರಿಂದ ಎಲ್ಲವೂ ಉಪಪನ್ನವೆಂದು ತಿಳಿಸಲು ಛಾಂದಸಪ್ರಯೋಗ ಮಾಡಿರುವರು.

'ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಕೀರ್ತನಂ (ಲಕ್ಷಣಂ) । ಎಂದು ಶ್ಲೋಕವಿದೆ ಭಾಗವತದಲ್ಲಿ, ಅದರ ಅರ್ಥ 'ಇಹ ಅತ್ರ ಸರ್ಗೋ ವಿಸರ್ಗಶ್ಚ ಜ್ಞಾನಂ ಪೂಷಣಮೂತಯಃ' ಮುಂತಾಗಿ ಹೇಳಿದ ಹತ್ತು ಲಕ್ಷಣವಿದ್ದ ಭಾಗವತದಲ್ಲಿ ದಶಮಸ್ಯ-ಹತ್ತನೆಯ ಅವತಾರವಾದ ಕಲ್ಕಿಯ ವಿಶುದ್ಧ್ಯರ್ಥಂ-ವಿಶೇಷವಾಗಿ ಶೋಧಿಸಲು ನವನಾಂ-ಮತ್ಸ್ಯಾವತಾರದಿಂದಾರಂಭಗೊಂಡು ಬುದ್ಧಾವತಾರದವರೆಗೆ ಅವತಾರಲಕ್ಷಣಂ-ದಶಾವತಾರ ಪರವಾಗಿಯೂ ಹೇಳಬಹುದು.

### *ದಶಾವತಾರ*

#### 1. ಮತ್ಸ್ಯಾವತಾರ

**ಯತಃ** ಮೂಲ ರೂಪದಿಂದ **ಆದ್ಯಸ್ಯ** ದಶಾವತಾರಗಳಲ್ಲಿಯ ಮೊದಲಿಗನಾದ ಮತ್ಸ್ಯನ ಜನ್ಮ ಪ್ರಾದುರ್ಭಾವವು **ಅಭೂತ್** ಆಯಿತು. ಯತಃ, ಅನು, ಎಂಬೆರಡು

ಪದಗಳನ್ನು ಎಲ್ಲೆಡೆ ಅನುವೃತ್ತಿ ಮಾಡಿಕೊಳ್ಳಬಹುದು. **ಯತಃ** ಅನು ಮತ್ಸ್ಯಾವತಾರಾನಂತರ

2. **ಕೂರ್ಮಾವತಾರ**

**ಕಂ ಜನ್ಮ** ಜಲಚರಂ ಕೂರ್ಮಾವತಾರವನ್ನು **ಯಃ** ಯಾವನು **ಆಯಾತ್** ಹೊಂದಿದನು.

3. **ವರಾಹಾವತಾರ**

**ಯಃ ಇತರತಃ** ಯಾವನು **ಇತರೇಣ** ವಿರೋಧಿಯಾದ ಹಿರಣ್ಯಾಕ್ಷನೊಡನೆ **ತಃ** ಯುದ್ಧ(ಯಸ್ಯಸಃ)ಮಾಡಿದ ವರಾಹನು **ಅಭೂತ್** ಅವತರಿಸಿದನು.(ತಕಾರಃ ಕೀರ್ತಿತಶ್ಚೋರೇ ಮೋಹೇ ಯುದ್ಧೇ ಚ ಕೀರ್ತಿತಃ ಎಂದು ಏಕಾಕ್ಷರಕೋಶ)

4. **ನರಸಿಂಹಾವತಾರ**

**ಅರ್ಥೇಷ್ವಭಿಜ್ಞಃ** ಅರ್ಥಾ ಏವ ಇಷಃ ತೈಃ ನ ಭಿದ್ಯತೇ ಇತಿ ಅರ್ಥೇಷ್ವಭಿತ್ । ತಂ ಜಾನಾತೀತಿ ಅರ್ಥೇಷ್ವಭಿಜ್ಞಃ । ವಿಷಯಗಳೆಂಬ ಬಾಣಗಳಿಂದ ಭೇದಿಸದಿರುವವನು ಎಂದರೆ ಪ್ರಹ್ಲಾದ. ಅವನನ್ನು ತಿಳಿದ ನರಸಿಂಹನು ಅವತರಿಸಿದನು. 'ಕಾಮಾನಾಂ ಹೃದ್ಯಸಂರೋಹಂ ಭವತಸ್ತು ವೃಣೇ ವರಂ' ಎಂದು ಕಾಮನೆಗಳು ಹುಟ್ಟದಂತೆ ಮಾಡಿರಿ ಎಂದು ಪ್ರಹ್ಲಾದನು ನರಸಿಂಹದೇವರಿಗೆ ವರವನ್ನು ಬೇಡಿದನು. ಅಥವಾ **ಅರ್ಥೇಷು** ವಿಷಯೇಚ್ಛುವಾದ ಹಿರಣ್ಯಕಶಿಪುವು ಅವನಿಂದ **ನ ಭಿದ್ಯತೇ** ವಧಿಸಲ್ಪಡದವನು ಪ್ರಹ್ಲಾದ. ಅವನನ್ನು ತಿಳಿದವ ನರಸಿಂಹ ಹೀಗೂ ಅರ್ಥ.

5. **ವಾಮನಾವತಾರ**

**ಸ್ವರಾಟ್ ಸ್ವಃ** ಸ್ವರ್ಗಲೋಕವನ್ನು **ಆ** ಕಾಂತಿಯಿಂದ ಅತಿಶಯವಾಗಿ ವ್ಯಾಪಿಸುವವನು ಸ್ವರಾಟ್ ವಾಮನ ಅಥವಾ **ಸ್ವಃ** ತನ್ನ ಅಣ್ಣನಾದ ಇಂದ್ರನನ್ನು **ರಾಜಯತೀತಿ ಸ್ವರಾಟ್** ಸ್ವರ್ಗಪಾಲಕನನ್ನಾಗಿ ಮಾಡಿ ಶೋಭೆತರುವವನು ಆದ್ದರಿಂದಲೂ ವಾಮನನೆಂದರ್ಥ.

6. **ಪರಶುರಾಮಾವತಾರ**

**ತೇನೇ ಬ್ರಹ್ಮ ಹೃದಾಯ ಆದಿಕವಯೇ ಯಃ** ಯಾವನು **ಆದಿಃ** ತನಗೆ ಕಾರಣನು **ಕವಿಃ** ಜ್ಞಾನಿಯೂ ಆದ ಜಮದಗ್ನಿಗಾಗಿ **ಹೃದಾ** ಸ್ನೇಹದಿಂದ ಆವಶ್ಯಕವಾದ್ದರಿಂದ **ಬ್ರಹ್ಮ**

ಬ್ರಾಹ್ಮಣ ಜಾತಿಯನ್ನೂ **ತೇನೇ** ವಿಸ್ತರಿಸಿದನು. ಅಂದರೆ ಕ್ಷತ್ರಿಯರನ್ನು ನಾಶಗೊಳಿಸಿದನು ಎಂದು ಭಾವ. ಅಥವಾ **ಬ್ರಹ್ಮಹೃತ್ ಆಃ** ಎಂದು ಪದಚ್ಛೇದ. ಆದ್ಯರ್ಥೇ ಬಹುವಚನ. ಅಂದರೆ ಅಕಾರಾದಿಸ್ವರಗಳು ಎಂದರ್ಥ. **ಸ್ವರಾಃ** ವಿಂಶತಿರೇಕಶ್ಚ ಎಂದಿರುವದರಿಂದ **ಆಃ** ಎಂದರೆ ಇಪ್ಪತ್ತೊಂದು ಬಾರಿ **ಅಬ್ರಹ್ಮಹೃತ್** ಬ್ರಹ್ಮವಿರೋಧಿ ಕ್ಷತ್ರಿಯರನ್ನು ಸಂಹರಿಸುವವನಾಗಿ **ಆದಿಕವಯೇ** ಜಮದಗ್ನಿಗೆ **ತೇನೇ** ಸಪ್ತಋಷಿಸ್ಥಾನವನ್ನು ಇತ್ತನೆಂದರ್ಥ.

7. **ರಾಮಾವತಾರ**

**ಮುಹ್ಯಂತಿ ಯಂ ಸೂರಯಃ ಯಂ** ಯಾವ ರಾಮನ ವಿಷಯದಲ್ಲಿ **ಸೂರಯಃ** ವಸಿಷ್ಠಾದಿಜ್ಞಾನಿಗಳು **ಮುಹ್ಯಂತಿ** ಮೋಹಗೊಳ್ಳುವರು ಎಂದರೆ ಅವನ ಇಚ್ಛೆಯನ್ನು ತಿಳಿಯಲಾರರೆಂದರ್ಥ. ಏಕೆಂದರೆ ಯಾವನ ರಾಜ್ಯದಲ್ಲಿ ವಸಿಷ್ಠರು ಅಭಿಷೇಕಕ್ಕೆ ಇಟ್ಟ ಮುಹೂರ್ತಕ್ಕೆ ವಿಘ್ನಬಂತು. ಅದು ಆ ಪ್ರಭು ಶ್ರೀರಾಮನ ಇಚ್ಛೆಯಾಗಿತ್ತು.

8. **ಕೃಷ್ಣಾವತಾರ**

ಯತ್ರ ತ್ರಿಸರ್ಗೋ ಮೃಷಾ ತೇಜೋವಾರಿಮೃದಾಂ ಯಥಾ ವಿನಿಮಯಃ **ಯತ್ರ** ಯಾವ ಕೃಷ್ಣನಲ್ಲಿ **ತೇಜೋವಾರಿಮೃದಾಂ** ಈ ಮೂರರ **ಅವಿನಿಮಯಃ** ಮಿಶ್ರೀಭಾವವಿಲ್ಲದ ದೇಹವು **ಯಥಾ** ಯಥಾರ್ಥವಾಗಿದೆ ಸತ್ಯವಾಗಿದೆ ಎಂದು ಭಾವ. **ತ್ರಿಸರ್ಗಃ** ಭೂತತ್ರಯಗಳಿಂದ ಸೃಷ್ಟವಾದ ದೇಹವು **ಯತ್ರ** ಯಾವನ ವಿಷಯದಲ್ಲಿ **ಮೃಷಾ** ಮಾಯಿಕವು. ಮಾಯಯಾ ಮೃತಕಂ ಕೃಷ್ಣಃ ತದಾ ಸೃಷ್ಟ್ವಾ ಪ್ರಕಾಶಯೇತ್ । ಕುತೋ ಹಿ ಮೃತಕಸ್ತಸ್ಯ ಮೃತ್ಯುಭಾವಾತ್ ಪರಾತ್ಮನಃ ।। ಎಂದಿದೆ. ಪರಂಧಾಮಕ್ಕೆ ಹೋಗುವಾಗ ತನ್ನ ಇಚ್ಛೆಯಿಂದ ಒಂದು ದೇಹ ಸೃಷ್ಟಿಸಿ ಜನರಿಗೆ ತೋರಿಸಿದನಷ್ಟೇ. ಮೃತ್ಯುತ್ವವನ್ನು ಮೀರಿದ ಅವನಿಗೆ ಮರಣಶೀಲದೇಹ ಹೇಗೆ ಬಂದೀತು ಎಂದು ಹೇಳಿದೆ.

9. **ಬುದ್ಧಾವತಾರ**

**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸ್ವೇನ** ನಿಜವಾದ ತನ್ನದೇ ಆದ **ಧಾಮ್ನಾ** ಸ್ವರೂಪದಿಂದ **ಅವತೀರ್ಣಂ** ಅವತರಿಸಲ್ಪಟ್ಟದ್ದು. **ಸದಾ ಅನಿರಸ್ತಕುಹಕಂ** ಯಾವಾಗಲೂ ಕಪಟಶಾಸ್ತ್ರವನ್ನು ಸ್ವೀಕರಿಸಿದವನು ಬುದ್ಧನು. ಅಥವಾ **ಸ್ವೇನ ಧಾಮ್ನಾ**

ತನ್ನ ಸ್ವರೂಪರಾದ ವೇದವ್ಯಾಸರಿಂದ **ನಿರಸ್ತಾಃ** ನಿರಾಕರಿಸಲ್ಪಟ್ಟ ಕುತ್ಸಿತಂ ಘ್ನಂತೀತಿ (ಜಾನಂತೀತಿ)**ಕುಹಕಾಃ** ಜೈನಾಃ ಯೇನ ತಂ- ನಿಂದಿತವಾದ ತತ್ತ್ವವನ್ನು ತಿಳಿದ ಜೈನರನ್ನು ವ್ಯಾಸರೂಪದಿಂದ ನಿರಾಕರಿಸಿದ ಎಂದರ್ಥ.

10. **ಕಲ್ಕಿ ಅವತಾರ**

**ಸತ್ಯಂ ಪರಂ ಸತ್** ಸತ್ಯಯುಗವನ್ನು(ಕೃತಯುಗವನ್ನು)ಪ್ರಶಸ್ತಕರ್ಮವನ್ನು ಯಾಪಯತೀತಿ **ಸತ್ಯಂ** ಪ್ರವರ್ತಿಸುವ **ಪರಂ** ಕಾಲಿಕಪರತ್ವವುಳ್ಳ ಅಂದರೆ ಮುಂದೆ ಅವತರಿಸುವ ಕಲ್ಕಿ **ಪರಂ** ಲೋಕವಿಲಕ್ಷಣನಾದ ಸರ್ವೋತ್ಕೃಷ್ಟನಾದ ಸರ್ವಪಾಲಕನಾದ, ಸರ್ವಗುಣಪೂರ್ಣನಾದ ನಾರಾಯಣನನ್ನು **ಧೀಮಹಿ** ಧ್ಯಾನಿಸೋಣ.

**ಈ ಶ್ಲೋಕವು ರಾಮಾಯಣದ ಕಥಾ ಸಂಗ್ರಾಹಕವೂ ಆಗಿದೆ.**

**ಯತಃ** ಯಾವ ಕಾರಣ ಅ ಇತಿ ಬ್ರಹ್ಮ ಎಂದು ಶ್ರುತಿ ಇರುವುದರಿಂದ **ಆತ್** ಪರಬ್ರಹ್ಮನಿಂದ **ಯಸ್ಯ** ರಾಮನ **ಜನ್ಮ** ಅವತಾರವು **ಅನ್ವಯಾತ್** ಲೋಕಸಾಧಾರಣವಾಗಿಯೂ **ಇತರತಃ** ಶುಕ್ರ ಶ್ರೋಣಿತ ಸಂಬಂಧವಿಲ್ಲದೇ ವಿಲಕ್ಷಣವಾಗಿಯೂ **ಆಸೀತ್** ಆಯಿತು(ಪೂರ್ಣಾತ್ ಪೂರ್ಣಮದುಚ್ಯತೇ) **ಸಃ** ರಾಮನು **ಅರ್ಥೇಷ್ವಭಿಜ್ಞಃ** ಸರ್ವಜ್ಞನು ಇದರಿಂದ ಬಾಲಕಾಂಡ ಕಥಾ ತಿಳಿಯಿತು.

2. **ಅರ್ಥೇಷ್ವಭಿಜ್ಞಃ** ಪ್ರಾರ್ಥನೀಯಗಳಾದ ಪಿತ್ರಾಜ್ಞಾಪಾಲನ ಅವನ ತಂದೆಯ ಮಾತನ್ನು ಸತ್ಯ ಮಾಡುವದು ಬಂಧುವಾತ್ಸಲ್ಯ ಇತ್ಯಾದಿಗಳಿಂದ ಅಯೋಧ್ಯಾಕಾಂಡದ ಅರ್ಥವನ್ನು ಹೇಳಲಾಗಿದೆ.

3. **ಸ್ವರಾಟ್ ಸ್ವಾನ್** ಭರದ್ವಾಜ, ಅಗಸ್ತ್ಯ ಶಬರಿ ಮುಂತಾದ ತನ್ನ ಭಕ್ತರನ್ನು ರಂಜಯತೀತಿ **ರಾಟ್** ತನ್ನ ದರ್ಶನದಿಂದ ಸಂತೋಷಗೊಳಿಸುವನು. ಈ ಮಾತಿನಿಂದ ಅರಣ್ಯಕಾಂಡಾರ್ಥ.

4. **ತೇನೇ ಬ್ರಹ್ಮ ಹೃದಾಯ ಆದಿಕವಯೇ ಯಃ** ರಾಮನು **ಆದಿಕವಯೇ** ಜ್ಞಾನಿಶ್ರೇಷ್ಠನಾದ ಹನುಮಂತನಿಗೆ **ಹೃದಾ** ಸ್ನೇಹದಿಂದ **ಬ್ರಹ್ಮ** ಗುಹ್ಯಸಂದೇಶವನ್ನು ಮುದ್ರಿಕೆಯಲ್ಲಿ ಬರೆದ ರಾಮ ಎಂಬುದನ್ನು ಅಥವಾ ವೇದರೂಪಶಬ್ದರಾಶಿಯನ್ನು **ತೇನೇ** ಕೊಟ್ಟನೆಂದರ್ಥ. ಈ ಮಾತಿನಿಂದ ಕಿಷ್ಕಿಂಧಾಕಾಂಡಾರ್ಥ.

5. **ಮುಹ್ಯಂತಿ ಯಂ ಸೂರಯಃ** ಯಸ್ಯ ಯಾವನ ಶಿಷ್ಯನಾದ **ಯಂ** ಹನುಮಂತನನ್ನು **ಯಂ ಯಾಂತಂ** ಸಮುದ್ರವನ್ನು ದಾಟಿ ಹೋಗುತ್ತಿರುವವನನ್ನೂ **ದೃಷ್ಟ್ವಾ** ನೋಡಿ **ಸೂರಯಃ** ಆಕಾಶಮಾರ್ಗದಲ್ಲಿರುವ ಇಂದ್ರಾದಿಗಳು **ಮುಹ್ಯಂತಿ** ಹೇಗೆ ಸಮುದ್ರ ದಾಟಿಯಾನು, ಸೀತೆಯನ್ನು ಹೇಗೆ ನೋಡಿಯಾನು ರಾವಣನಿಂದ ಭಯ ಬರದಿರುವದು ಹೇಗೆ ಲಂಕೆಯಿಂದ ಮತ್ತೇ ಶ್ರೀರಾಮನನ್ನೂ ಹೇಗೆ ತಲುಪುವನು ಎಂದು ಸಂದೇಹವನ್ನು ಹೊಂದುವರು. ಸುಂದರಕಾಂಡದ ಅರ್ಥ.

**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ** ಇದರಿಂದ ಯುದ್ಧಕಾಂಡಾರ್ಥ. **ಯತ್ರ** - ರಾಮೇ ಅಂದರೆ ರಾಮನು ಬಂದಾಗ **ತ್ರಿಸರ್ಗಃ** ಮೂರು ಜನ್ಮವುಳ್ಳ ರಾವಣನು (ಪ್ರಥಮಾ ಷಷ್ಠಿಯ ಅರ್ಥದಲ್ಲಿ) ರಾವಣನ **ತೇಜೋವಾರಿಮೃದಾಂ** ತೇಜಸಃ ಬಂಗಾರದ **ವಿನಿಮಯಃ** ಕಾರ್ಯವಾದ ಲಂಕಾಪಟ್ಟಣವೆಂಬ ದುರ್ಗ **ವಾರಿವಿನಿಮಯಃ** ಸಮುದ್ರ ಪರಿಖಾರೂಪಕಾರ್ಯ **ಮೃದಃ** ತ್ರಿಕೂಟ ಪರ್ವತರೂಪಕಾರ್ಯವೂ **ಯಥಾ** ಚೆನ್ನಾಗಿ ನಿರ್ಮಿಸಿದ್ದರೂ **ಮೃಷಾ** ವ್ಯರ್ಥವಾಯಿತು. ರಾವಣನ ಜೀವರಕ್ಷಣೆಗೆ ಉಪಯೋಗವಾಗಲಿಲ್ಲ.

7. **ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ** ಸ್ವರೂಪಸಾಮರ್ಥ್ಯದಿಂದ **ಕುಂ** ಕುತ್ಸಿತವಾದ ಶರೀರವನ್ನು **ಘ್ನಂತಿ** ಹೊಂದಿರುವ ಸ್ವಾರ್ಥೇ ಕಪ್ರತ್ಯಯ **ಕುಹಕಾಃ** ನೃತಿರ್ಯಗಾದಿಗಳು **ಅನಿರಸ್ತಾಃ** ತಿರಸ್ಕರಿಸಲಿಲ್ಲ ಅಂಗೀಕರಿಸಿದನು. ಅಂದರೆ ತನ್ನ ಆಜ್ಞೆಯಿಂದ ಬಂದ ಮುಕ್ತಿಯೋಗ್ಯರ ಕರ್ಮಗಳನ್ನು ಲೆಕ್ಕಿಸದೆ ತನ್ನ ಸಾಮರ್ಥ್ಯದಿಂದ ಕೀಟಾದಿಗಳಿಗೂ ಮೋಕ್ಷ ಕೊಟ್ಟವನೆಂದರ್ಥ. ಉತ್ತರಕಾಂಡ.

**ಯತಃ ಆತ್** ಎಂದೇನು ಹೇಳಿತೋ **ತತ್ ಸತ್ಯಂ** ಮೂಲರೂಪವು ಪೂರ್ಣಾನಂದ ಜ್ಞಾನಾತ್ಮಕವು.

> **ಸಚ್ಛಬ್ದ ಉತ್ತಮಂ ಬ್ರೂಯಾತ್ ದಾನಂ ದಂತೀತಿ ವೈ ವದೇತ್ ।**
> **ಯೇತಿ ಜ್ಞಾನಂ ಸಮುದ್ದಿಷ್ಟಂ ಪೂರ್ಣಾನಂದದೃಶಿಸ್ತತಃ ॥**

ಎಂದು ದಶಮತಾತ್ಪರ್ಯದಲ್ಲಿ ಹೇಳಿದೆ. **ಪರಂ** ಮೂಲರೂಪದಿಂದ ಬೇರೆ ಎಂದು. ರಾಮವೆಂಬ ಅವತಾರವನ್ನು ಧೀಮಹಿ **ಧೀಃ** ಜ್ಞಾನವು ಉಪಲಕ್ಷಣತಯಾ ಆನಂದದ **ಮಹಿ** ಮಹಿಮಾ ಯಸ್ಮಿನ್ ತತ್ ರಾಮನು ಜ್ಞಾನಾನಂದಾತ್ಮಕನೆಂದರ್ಥ. 'ಪೂರ್ಣಮದಃ ಪೂರ್ಣಮಿದಂ' ಎಂದು ಶ್ರುತಿ ಇದೆ ಅಥವಾ **ಧಿಯಃ** ಜ್ಞಾನಾದಿಗಳ

**ಮಹಃ** ಉತ್ಸವವು ಅಸ್ತಿ ಅಸ್ಮಿನ್ ಇತಿ ಧೀಮಹಿ । **ಧಿಯಃ** ಭಾರತಿಗೂ **ಇಯಃ** ಲಕ್ಷ್ಮಿಗೂ **ಮಹಿ** ಮಹಿಮೆಯು ಯಾವನಿಂದ ಇದೆಯೋ. ಅವನು ಎಂದರ್ಥ. ಗ್ರಂಥಕರ್ತೃಗಳಾದ ವೇದವ್ಯಾಸರು ಪ್ರತಿಪಾದ್ಯನಾದ ಬ್ರಹ್ಮನಿಂದ ಅಭಿನ್ನರಾದ್ದರಿಂದ ನಮಸ್ಕಾರ ಮಾಡುವುದು ಕೂಡುವುದಿಲ್ಲ. ಜಯವು ಆಶೀರ್ವಚನಗಳಲ್ಲಿ ಒಂದಾಗಿದ್ದರಿಂದ ಮಂಗಲ ಎನ್ನುವಂತಿಲ್ಲ, ಉತ್ಕರ್ಷವನ್ನು ವರ್ಣಿಸುವುದರಿಂದಲೇ ಮಂಗಲವಾಗುವುದು. ಧೀಮಹೀ ಶಬ್ದ ಉತ್ಕರ್ಷವನ್ನು ತಿಳಿಸುತ್ತದೆಯೇ ಎಂದರೆ? 'ಜಯೇರ್ಜಯಾಭಿಭವಯೋಃ ಆದ್ಯೇಽರ್ಥೇಽ ಸಾವಕರ್ಮಕಃ । ಉತ್ಕರ್ಷಪ್ರಾಪ್ತಿ-ರಾದ್ಯೋಽರ್ಥೇ ದ್ವಿತಿಯೇಽರ್ಥೇ ಸಕರ್ಮಕಃ' ॥ ಎಂದಿದೆ. ಇನ್ನೂ ಅನೇಕಾರ್ಥಗಳಿವೆ. ನಮ್ಮ ಬುದ್ಧಿಮಾಂದ್ಯದಿಂದ ಇಲ್ಲಿಗೆ ನಿಲ್ಲಿಸುವೆವು ಎನ್ನುವರು ಗ್ರಂಥಕರ್ತೃಗಳು.

ಮಂಗಲಾಚರಣೆ ಮಾಡುವದು ತಾವು ಪ್ರಾರಂಭಿಸಲಿಚ್ಛಿಸಿದ ಗ್ರಂಥವು ವಿಘ್ನವಿಲ್ಲದೇ ಸಮಾಪ್ತಿಯಾಗಲೆಂದು. ಗ್ರಂಥ ಆರಂಭಣೀಯವಾಗಬೇಕಾದರೆ ಅದಕ್ಕೆ ಪ್ರಾಮಾಣ್ಯವಿರಬೇಕು. ಪೌರುಷೇಯವಾಕ್ಯ ಪ್ರಮಾಣವಾಗಬೇಕಾದರೆ ಆಪ್ತರಚಿತವಾಗಬೇಕು ಮತ್ತು ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳೆಂಬ ಅನುಬಂಧ ಚತುಷ್ಟಯಗಳಿರಬೇಕು. ಇಲ್ಲವಾದರೆ ಆರಂಭಣೀಯವಾಗಲಾರದು. ಆದ್ದರಿಂದ ಈ ಗ್ರಂಥಕ್ಕೆ ಆಪ್ತಪ್ರಣೀತತ್ವ ಮತ್ತು ಅನುಬಂಧಚತುಷ್ಟಯ ಇಲ್ಲವೆಂದು ಶಂಕಿಸಿ ತಾವು ಮಾಡಿದ ಮಂಗಲಕ್ಕೆ ಆಪ್ತವಾಕ್ಯತ್ವ ಅನುಬಂಧಚತುಷ್ಟಯವತ್ವ ಇದೇ ಎಂದು ತಿಳಿಸುತ್ತ ಗ್ರಂಥದ ಹೆಸರು ಅನ್ವರ್ಥಕವೆಂದೂ ತಿಳಿಸುವರು. ಇತರ ಪುರಾಣಗಳಿಗಿಂತ ಉತ್ತಮತೆಯನ್ನು ತಿಳಿಸುವರು.

**ಭಗವಂತನನ್ನು ಹೊಂದಲು ಸಾಧನವಾದದ್ದು ನಿವೃತ್ತಧರ್ಮವು**

**ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ**
**ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಮ್ ।**
**ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ**
**ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ಕ್ಷಣಾತ್ ॥೨॥**

**ಅತ್ರ** ಈ **ಶ್ರೀಮದ್ಭಾಗವತೇ** ಕಿವಿಗಿಂಪಾದ, ಗಂಭೀರವಾದ ಭಾಗವತದಲ್ಲಿ **ಪ್ರೋಜ್ಝಿತಕೈತವಃ** ಸಕಾಮಕರ್ಮದಿಂದ ಭಿನ್ನವಾದ ಮೋಕ್ಷಫಲಕವಾದ ವೇದವನ್ನು

ಸ್ವರ್ಗಾದಿಫಲಕವೆಂದು ಹೇಳುವ ಕಿತವರ ಸಂಬಂಧಿಯಾದ ಸ್ವರ್ಗಾದಿಗಳು ಅಥವಾ ಮನಸ್ಸಿನಲ್ಲಿ ಒಂದನ್ನು ತಿಳಿದು, ಮಾತಿನಿಂದ ಮತ್ತೊಂದು ಹೇಳಿ, ಕೈಯಿಂದ ಇನ್ನೊಂದನ್ನು ಮಾಡುವವರು ಕಿತವರು ಅವರ ಸಂಬಂಧಿಯಾದದ್ದು ಕೈತವ ಅಂದರೆ ಇಲ್ಲಿ ಭಗವತ್ಪ್ರೀತಿಯನ್ನು ಬಿಟ್ಟು ಸ್ವರ್ಗಾದಿಫಲಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಭಗವಂತನ ಗುಣಗಳನ್ನೇ ಪ್ರತಿಪಾದಿಸುವ ವೇದಗಳಿಗೆ ಬೇರೆ ಅರ್ಥ ಹೇಳುವದು, ತಾನು ತನ್ನ ದೇಹೇಂದ್ರಿಯಗಳು ಭಗವದಧಿಷ್ಠಿತ ಅವನಿಂದ ನಿಯಮ್ಯ ಎಂಬುದನ್ನು ಮುಚ್ಚಿಟ್ಟು ಶ್ರೀಹರಿಯೇ ಮಾಡಿಸುವವನು ಫಲಕೊಡುವವನು ಎಂಬುದನ್ನು ಲೆಕ್ಕಿಸದೇ ನಾನೇ ಸ್ವತಂತ್ರವಾಗಿ ಮಾಡುವೆನು ಎಂದು ತಿಳಿಯುವವನು ಕಿತವ. ಅವನು ಮಾಡುವುದು ಕೈತವ. **ಪರಮಃ** ಫಲಕಾಮನೆ ಇಲ್ಲದೇ ಈಶ್ವರಾರ್ಪಣ ಬುದ್ಧಿಪೂರ್ವಕ ಮಾಡಿದ್ದರಿಂದ ಉತ್ತಮವಾದ ಅಥವಾ ಪರಃ ಪರಮಾತ್ಮನು ಮೀಯತೇ ಕರ್ತೃತ್ವೇನ ತಿಳಿಯಲ್ಪಡುವವನು ಯಾವುದರಿಂದ ಅದು ಪರಮ. ಪರಮಾತ್ಮನ ಜ್ಞಾನವನ್ನು ಮಾಡಿಸುವ ಎಂದು ಅರ್ಥ. ಅಥವಾ ಶತ್ರುವಿನಂತಿರುವ ಸಂಸಾರವನ್ನು ನಾಶಪಡಿಸುವ **ಧರ್ಮಃ** ಕೆಳಗೆ ಬೀಳುವವನನ್ನು ಮೇಲೆತ್ತುವ (ಧಾರಕತ್ವಾತ್) ಸರ್ವಧಾರಕನಾದ ಭಗವಂತನ ಜ್ಞಾನವನ್ನು ಸಂಪಾದಿಸುವ ಅಧಿಕಾರಿಗೆ ಆನಂದ ನೀಡುವ ನಿವೃತ್ತಧರ್ಮವು ಅಥವಾ ಪಾಪನಾಶಕವಾದ, ಭಗವಂತನನ್ನು ಹೊಂದಲು ಸಾಧನವಾದ ನಿವೃತ್ತಧರ್ಮವು ಅಮುಖ್ಯವಾಗಿ ಪ್ರತಿಪಾದಿತವಾಗಿದೆ.

**ಅತ್ರ** ಈ ಶ್ರೀಮದ್ಭಾಗವತದಲ್ಲಿ **ನಿರ್ಮತ್ಸರಾಣಾಂ** ಸ್ವೋತ್ತಮ ಸಜ್ಜನರಲ್ಲಿ ಮಾತ್ಸರ್ಯವಿಲ್ಲದ **ಸತಾಂ** ಪ್ರಶಸ್ತ ಕರ್ಮವನ್ನು ಮಾಡುವ ಸಜ್ಜನರಾದ ಭಗವದ್ಭಕ್ತರಿಂದ **ವೇದ್ಯಂ** ಶ್ರವಣ, ಮನನ, ನಿಧಿಧ್ಯಾಸನಗಳಿಂದ ಅಪರೋಕ್ಷಜ್ಞಾನ ವಿಷಯನಾಗುವ **ವಾಸ್ತವಂ** ನಿತ್ಯದಲ್ಲಿಯೂ ದೋಷದೂರನಾದ ಗುಣಪೂರ್ಣನೂ ಆದ **ವಸ್ತು** ದೇಶ ಕಾಲ ಗುಣಗಳಿಂದ ಪರಿಚ್ಛಿನ್ನನಾಗದೇ ಎಲ್ಲ ದೇಶಕಾಲಗಳಲ್ಲಿರುವ **ಅತ್ರ** ಮಾತ್ಸರ್ಯವಿಲ್ಲದ ಸಜ್ಜನರಿಗೆ **ಶಿವದಂ** ಜ್ಞಾನ ಕೊಡುವ ಮೂಲಕ ಪರಮಾನಂದವನ್ನು ಉಣಬಡಿಸುವ **ತಾಪತ್ರಯೋನ್ಮೂಲನಂ** ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ, ಪಾಪಗಳನ್ನು ಆದ್ಯಂತಿಕವಾಗಿ ನಾಶಗೊಳಿಸುವ(ಮತ್ತೆಂದೂ ಬರದಂತೆ ಮಾಡುವ) ಪರಮಾತ್ಮನು **ವೇದ್ಯಂ** ಪ್ರಧಾನ ಪ್ರತಿಪಾದ್ಯನಾಗಿದ್ದಾನೆ **ಅತ್ರ** ಈ **ಮಹಾಮುನಿಕೃತೇ** ತಿಳಿಯಬೇಕಾದದ್ದನ್ನೆಲ್ಲ ತಿಳಿದಿದ್ದರಿಂದ ಮಹಾಮುನಿಯೆನಿಸಿದ (ನಿರುಪಚರಿತ ಸರ್ವಜ್ಞನಾದ) ಬಾದರಾಯಣರಿಂದ ರಚಿತವಾದ (ಶೈವಾದಿಪುರಾಣಗಳನ್ನೂ

ವ್ಯಾಸರೇ ರಚನೆಮಾಡಿದ್ದರೂ ಮೋಹಗೊಳಿಸಲು ಮಾಡಿದ್ದು ಇದಾದರು ಮಹಾಮುನಿಗಳಾದ ನಾರದರಿಂದ ಪ್ರಾರ್ಥಿತನಾಗಿ ಮನುಷ್ಯೋತ್ತಮರನ್ನು ಅನುಗ್ರಹಿಸಲು ಬರೆದ ಗ್ರಂಥ.) ಈ ಭಾಗವತದಲ್ಲಿ **ಅಪರೈಃ** ಶ್ರೀಹರಿಯ ಪರೋಕ್ಷಜ್ಞಾನ ಉಂಟು ಮಾಡುವದರಿಂದ ಅವನ ಪ್ರಸಾದಕ್ಕೆ ಅಂತರಂಗ ಸಾಧನವಾದ ಶಾಶ್ವತವಾದ ಮೋಕ್ಷರೂಪ ಫಲಕ್ಕೆ ಕಾರಣವಾದ ಭಕ್ತಿಯೋಗವನ್ನು ಬಿಟ್ಟು ಅದರಿಂದ ಭಿನ್ನವಾದ ಬಹಿರ್ಮುಖವಾದ ಮನೋರಂಜಕವಾದ ಸ್ವರ್ಗ ಮುಂತಾದ ಅಲ್ಪ ಮತ್ತು ನಶ್ವರ ಫಲವನ್ನಿತ್ತು ಮತ್ತೇ ಸಂಸಾರಕ್ಕೆ ಕಾರಣವಾದ ಸಕಾಮಧರ್ಮವನ್ನಾಗಲೀ, ಅದಕ್ಕೂ ಕಡಿಮೆಯಾದ ಧರ್ಮಾರ್ಥಕಾಮಾದಿ ಗಳನ್ನಾಗಲೀ ಪ್ರತಿಪಾದಿಸುವದರಿಂದ **ಕಿಂ ವಾ** ಏನು ಪ್ರಯೋಜನ? ಏನೂ ಪ್ರಯೋಜನವಿಲ್ಲ. ಆದ್ದರಿಂದ ಅವುಗಳನ್ನು ಬಿಟ್ಟು ಭಕ್ತಿಯೋಗರೂಪಧರ್ಮವೂ ಅದಕ್ಕೆ ವಿಷಯನಾದ ಶ್ರೀಹರಿಯು ಪ್ರತಿಪಾದ್ಯನಾಗಿರುವನು.

**ದೃಷ್ಟಫಲದ್ವಾರಾ ಅದೃಷ್ಟಫಲವಾಗುವುದು ಕಂಡಿದೆ. ಇಲ್ಲಿ ದೃಷ್ಟಫಲ ಯಾವುದು ಎಂದರೆ ಹೇಳುವರು.**

**ಅತ್ರ ಶ್ರೀಮದ್ಭಾಗವತೇ** ಈ ಭಾಗವತವು ಅಭ್ಯಸಿಸಲ್ಪಟ್ಟರೆ **ಕೃತಿಭಿಃ** ಹಿರಿಯರಿಂದ(ಶಿಕ್ಷಿತಬುದ್ಧಿಗಳಿಂದ)**ಶುಶ್ರೂಷುಭಿಃ** ಮನೋವಾಕ್ ಕಾಯಗಳಿಂದ ಗುರು-ಹಿರಿಯರ ಸೇವೆಯಲ್ಲಿ ಕುಶಲರಾದ ತ್ರಿಕರಣಶುದ್ಧಿಯುಳ್ಳ ಶ್ರವಣೇಚ್ಛುಗಳಿಂದ **ಈಶ್ವರಃ** ಲಕ್ಷ್ಮಿ ಬ್ರಹ್ಮಾದಿಗಳಿಗಿಂತ ಶ್ರೇಷ್ಠನಾದ ಅವರನ್ನು ನಿಯಮಿಸುವ ಶ್ರೀಹರಿಯು **ಹೃದಿ** ಭಕ್ತರ ಹೃದಯಕಮಲದಲ್ಲಿ **ಸದ್ಯಃ** ಬೇಗನೇ **ತಕ್ಷಣಾತ್** ಕೂಡಲೇ (ಕಾಲವ್ಯವಧಾನವಿಲ್ಲದೇ) **ಅವರುಧ್ಯತೇ** ಭಕ್ತಿಪಾಶದಿಂದ ಕಟ್ಟಲ್ಪಡುವನು. ಹೃದಯದಲ್ಲಿ ಕಾಣಿಸಿಕೊಂಡು ಅಲ್ಲೇ ನೆಲೆಸುವನು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಅಸಂಗತವಾಗಿ ಏನು ಹೇಳುತ್ತಿದ್ದಾರೆ ಎಂಬ ಶಂಕೆಗೆ ಉತ್ತರಿಸುವರು

**ಅಧಿಕಾರಿವಿಷಯಫಲಾನಿ ಉಚ್ಯಂತೇ ಧರ್ಮ ಇತಿ ।**

ಈ 2ನೇ ಶ್ಲೋಕದಲ್ಲಿ ಅಧಿಕಾರಿವಿಷಯಪ್ರಯೋಜನಗಳನ್ನು ತಿಳಿಸುವರು ಪ್ರವೃತ್ತಧರ್ಮ ವ್ಯಾವೃತ್ತಿಮಾಡಲು **ಪ್ರೋಜ್ಝಿತಕೈತವಃ ಪರಮಃ** ಎಂದು ವಿಶೇಷಣವಿತ್ತಿರುವರು.

''ಪ್ರೋಜ್ಝಿತಕೈತವ ಃ ಫಲಾನ್ಯಪೇಕ್ಷಯಾ' 'ಈಶ್ವರಾರ್ಪಣೇನ ಪರಮಃ' ।

ಸ್ವರ್ಗಾದಿ ಫಲಗಳನ್ನಪೇಕ್ಷಿಸದೇ ಮಾಡಿದ ನಿಷ್ಕಾಮಕರ್ಮವು ಪ್ರೋಜ್ಝಿತಕೈತವ ಎನಿಸುವುದು. 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ' ಮುಂತಾಗಿ ಅನುಸಂಧಾನದಿಂದ ಶ್ರೀಹರಿಗೆ ಅರ್ಪಿಸಿದ ಕರ್ಮ ಶ್ರೇಷ್ಠ ಎನಿಸುವುದು. ಅಂತೂ ಈ ಎರಡೂ ವಿಶೇಷಣದಿಂದ ನಿವೃತ್ತಕರ್ಮಲಕ್ಷಣ ತಿಳಿಸಿದಂತಾಯಿತು. 'ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿತಿ ಚೋಚ್ಯತೇ' ಎಂದಿದೆ. ಅಧಿಕಾರಿಗಳನ್ನು ತಿಳಿಸಲು **ನಿರ್ಮತ್ಸರಾಣಾಂ ಸತಾಂ** ಎಂದಿದ್ದಾರೆ.

**ಆದರಲ್ಲಿ ಸಜ್ಜನರ ಲಕ್ಷಣವೇನೆಂದು ಕಪಿಲನು ದೇವಹೂತಿಗೆ ಹೇಳುವ ಸಜ್ಜನರ ಲಕ್ಷಣ ತಿಳಿಸುವರು-**

**ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।**
**ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥**
**ಮಯ್ಯನನ್ಯಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಮ್ ।**

**ಇತ್ಯಾದಿ ಸತಾಂ ಲಕ್ಷಣವ್ ವಕ್ಷ್ಯತಿ** ಎಂದು ಶೇಷಮಾಡಿಕೊಳ್ಳಬೇಕು. ತಾತ್ಪರ್ಯದಲ್ಲಿ ಸಹನಶೀಲರು, ಕರುಣಾಳುಗಳು, ಸಮಸ್ತಪ್ರಾಣಿಗಳಿಗೆ ಮಿತ್ರರು, ಯಾರಲ್ಲಿಯೂ ಶತ್ರುಭಾವನೆ ಮಾಡದವರು, ಶ್ರೀಹರಿಯಲ್ಲೇ ಮನಸ್ಸಿಟ್ಟವರು, ಸತ್ವಭಾವದವರು, ಯಾರು ನನ್ನಲ್ಲಿ ಅನನ್ಯಭಾವದಿಂದ ದೃಢಭಕ್ತಿ ಮಾಡುತ್ತಾರೋ ಅವರು ಸಜ್ಜನರು ಮುಂತಾಗಿ ಸಜ್ಜನರ ಲಕ್ಷಣವನ್ನು ತೃತೀಯ ಸ್ಕಂಧದಲ್ಲಿ ದೇವಹೂತಿಗೆ ಕಪಿಲನಾಮಕ ಪರಮಾತ್ಮನು ಹೇಳುವನು.

ಹಾಗಾದರೆ ಇಂಥವರಿಗೆ ಮಾತ್ಸರ್ಯವೇ ಇರುವದಿಲ್ಲ ಕಾರಣ ವಿಶೇಷಣ ವ್ಯರ್ಥ ಎಂದರೆ ಪ್ರಯೋಜನ ತಿಳಿಸುವರು. 'ಸತಾಂ ಚ ಮಾತ್ಸರ್ಯಂ ಅರ್ಜುನಸ್ಯ ಏಕಲವ್ಯ ಇವ ಕುತ್ರಚಿದ್ ದೃಶ್ಯತೇ । ತದ್ವರ್ಜನೀಯಮ್ । ಉತ್ತಮೇಷು ಜ್ಞಾನಾರ್ಥಿನಾ' ಏಕಲವ್ಯನಲ್ಲಿ ಅರ್ಜುನನಿಗೆ ಇದ್ದಂತೆ ಸಜ್ಜನರಿಗೆ ಮಾತ್ಸರ್ಯವು ಕೆಲವು ಕಡೆ ಕಂಡು ಬರುವದು.(ಅಸಂಭಾವಿತವಲ್ಲ)ಮಾತ್ಸರ್ಯವನ್ನು ಜ್ಞಾನಾಪೇಕ್ಷಿಯಾದವನು ಉತ್ತಮರ ವಿಷಯದಲ್ಲಿ ಮಾಡಕೂಡದು. ಏಕಲವ್ಯನು ಮಣಿಮಾನ್ ಎಂಬ ಅಸುರನು ಅವನಲ್ಲಿ ಮಾತ್ಸರ್ಯ ಅರ್ಜುನನಿಗೆ ಯುಕ್ತವೇ.

ಅದನ್ನೇ ಉತ್ತಮರಾದ ಸಜ್ಜನರಲ್ಲಿ ಮಾಡಬಾರದು ಎಂದು ತಿಳಿಸಲು **ನಿರ್ಮತ್ಸರಾಣಾಂ** ಎಂಬ ವಿಶೇಷಣವನ್ನು ನೀಡಿದ್ದಾರೆ ಎಂದು ಅಭಿಪ್ರಾಯ. ತಾವು ಹೇಳಿದ ವಿಷಯದಲ್ಲಿ ಪ್ರಮಾಣ ಹೇಳುವರು

**ಮಹಾಸಂಹಿತಾಯಾಂ ಚ-**

**ಉತ್ತಮೇಷ್ವಾತ್ಮನೋ ನಿತ್ಯಂ ಮಾತ್ಸರ್ಯಂ ಪರಿವರ್ಜಯೇತ್ ।**
**ಕುರುತೇ ಯತ್ರ ಮಾತ್ಸರ್ಯಂ ತತ್ತತ್ತಸ್ಯ ವಿಹೀಯತೇ ॥ಇತಿ**

ತಮಗಿಂತ ಉತ್ತಮರ ಜ್ಞಾನಾದಿವಿಷಯದಲ್ಲಿ ಯಾರು ಮಾತ್ಸರ್ಯ ಮಾಡುವರೋ ಆವರ ಜ್ಞಾನಭಕ್ತ್ಯಾದಿಗಳು ನಾಶವಾಗುವವು. ಕಾರಣ ಉತ್ತಮರಲ್ಲಿ ಮಾತ್ಸರ್ಯವನ್ನು ಎಂದೂ ಮಾಡಬಾರದು ಎಂದು ಮಹಾಸಂಹಿತೆಯಲ್ಲಿ ಹೇಳಿದೆ.

ಅವಾಂತರವಿಷಯ ಹೇಳಿ ಪ್ರಧಾನವಿಷಯ ತಿಳಿಸಲು **ವೇದ್ಯಂ ವಾಸ್ತವಂ** ಎಂದಿದ್ದಾರೆ. ಇದಕ್ಕೆ ವಸ್ತುವಾದ ಬ್ರಹ್ಮಸಂಬಂಧಿಯಾದ ಜಗತ್ತು **ವಾಸ್ತವಂ** ಆದು ವಸ್ತುವೇ ಬ್ರಹ್ಮನಾದ್ದರಿಂದ ಭಿನ್ನವಾದದು ಇಲ್ಲ ಎಂದು ಮತ್ತು ವೇದ್ಯಂ ಎಂದರೆ ಪ್ರಯತ್ನವಿಲ್ಲದೆ ತಿಳಿಯಲು ಶಕ್ಯವಾದದ್ದು ಎಂಬ ವ್ಯಾಖ್ಯಾನ ಪ್ರಮಾಣವಿರುದ್ಧ ಮತ್ತು ಅಪ್ರಾಮಾಣಿಕ ಎಂಬ ಅಭಿಪ್ರಾಯದಿಂದ ವಾಸ್ತವಂ ಮತ್ತು ವಸ್ತು ಈ ಎರಡು ಶಬ್ದಗಳ ಅರ್ಥವನ್ನು ಪ್ರಮಾಣ ಸಹಿತವಾಗಿ ಹೇಳುವರು.

**'ನಿತ್ಯನಿರಸ್ತದೋಷಪೂರ್ಣಗುಣಂ ವಾಸ್ತವಮ್ ।**

**ನಿತ್ಯಸಂಹಿತಾಯಾಂ ಚ-**

**ನಿರಸ್ತಾಖಿಲದೋಷಂ ಯದಾನಂದಾದಿಮಹಾಗುಣಮ್ ॥**
**ಸರ್ವದಾ ಪರಮಂ ಬ್ರಹ್ಮ ತಸ್ಮಾದ್ವಾಸ್ತವ ಮೀಯತೇ' ॥ ಇತಿ ।**

ಸರ್ವದಾ ಕಿಂಚಿತ್ತೂ ದೋಷವಿಲ್ಲದ ಗುಣಪೂರ್ಣವಾಗಿರುವದಕ್ಕೆ ವಾಸ್ತವ ಎಂದು ಕರೆಯುತ್ತಾರೆ. ಯಾವ ಕಾರಣ ದೋಷವಿಲ್ಲದವನು ಆನಂದ ಮೊದಲಾದ ಮಹಾಗುಣವುಳ್ಳವನು ಆದ್ದರಿಂದ ಪರಬ್ರಹ್ಮನು ವಾಸ್ತವನೆಂದು ಹೇಳಲ್ಪಡುವನು ಎಂದು ನಿತ್ಯಸಂಹಿತೆಯಲ್ಲಿ ಹೇಳಿದೆ.

**'ವಸ್ತು ಅಪ್ರತಿಹತಂ ನಿತ್ಯಂ ಚ'**

**ಸ್ಕಾಂದೇ ಚ -**

> **ವಸನಾದ್ವಾಸನಾದ್ವಸ್ತು ನಿತ್ಯಾಪ್ರತಿಹತಂ ಯತಃ ।**
> **ವಾಸೇನೇದಂ ಯತಸ್ತುನ್ನಮತಸ್ತದ್ಬ್ರಹ್ಮ ಶಬ್ದ್ಯತೇ ।। ಇತಿ ।।**

**ಅಪ್ರತಿಹತಂ** ದೇಶತಃ ಅಪರಿಚ್ಛಿನ್ನಂ ಅಂದರೆ ಎಲ್ಲ ದೇಶದಲ್ಲಿರುವ (ವ್ಯಾಪ್ತ)**ನಿತ್ಯಂ** ಕಾಲತಃ ಅಪರಿಚ್ಛಿನ್ನಂ, ಅಂದರೆ ಎಲ್ಲ ಕಾಲಗಳಲ್ಲಿರತಕ್ಕದ್ದು ವಸ್ತು ಎನಿಸುವದು. (ಅನಾದಿನಿತ್ಯವೆಂದರ್ಥ.)ಹೀಗೆ ಪೌರಾಣಿಕರೂಢಿಯಿಂದ ಅರ್ಥ. ಪರಬ್ರಹ್ಮನು ಜಗತ್ತಿನಲ್ಲಿ ವಾಸಮಾಡುವದರಿಂದಲೂ, ಜಗತ್ತನ್ನು ತನ್ನಲ್ಲಿ ಇಟ್ಟುಕೊಂಡಿದ್ದರಿಂದಲೂ, ವಸ್ತು(ಯೌಗಿಕ)ಸರ್ವದೇಶಕಾಲಗಳಲ್ಲಿ ಅಪರಿಚ್ಛಿನ್ನನಾದುದರಿಂದಲೂ ಯಾವಕಾರಣ ಈ ಜಗತ್ತು **ತುನ್ನಮ್** ವನವಿಷಯೀ ಕೃತಂ, ಸಂಸಾರಿಯಾಗಿ ಮಾಡಲ್ಪಟ್ಟಿದೆಯೋ ಆದ್ದರಿಂದಲೂ **ವಸ್ತು** ಎಂದು ಕರೆಯಲ್ಪಡುವದು ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

ಧರ್ಮಾರ್ಥಕಾಮಮೋಕ್ಷಗಳ ಮಧ್ಯದಲ್ಲಿ ನಿವೃತ್ತಧರ್ಮ ಪ್ರತಿಪಾದ್ಯ ಎಂದು ಹೇಳಿತು. ಪ್ರವೃತ್ತಧರ್ಮ-ಅರ್ಥಕಾಮಗಳನ್ನೇಕೆ ಹೇಳಲಿಲ್ಲ? ಎಂದರೆ ಹೇಳುವರು ಕಿಂ ವಾ ಪರೈಃ ಅರ್ಥಕಾಮಾದಿಕಥನೈಃ ।

**ಗಾರುಡೇ ಚ -**

> **ಧರ್ಮಾರ್ಥಕಾಮಮೋಕ್ಷಾಣಾಮೇಕಮೇವ ಪದಂ ಯತಃ ।**
> **ಅವರೋಧೋ ಹೃದೀಶಸ್ಯ ಪೃಥಗುಕ್ತ್ಯೋ ನ ತಾನಹಮ್ ।। ಇತಿ ।।**

ಹೃದಯದಲ್ಲಿ ಶ್ರೀಹರಿಯನ್ನು ಚೆನ್ನಾಗಿ ಇರಿಸಿಕೊಳ್ಳುವುದೇ ಧರ್ಮಾರ್ಥಕಾಮ ಮೋಕ್ಷಗಳನ್ನು ಹೇಳುವುದಕ್ಕೆ ಮುಖ್ಯಫಲವು. ಆ ಫಲವು ನಿವೃತ್ತಧರ್ಮವನ್ನು ಹೇಳುವ ಈ ಪುರಾಣಶ್ರವಣದಿಂದಲೇ ಆಗುತ್ತಿರುವಾಗ ಅರ್ಥಕಾಮಾದಿಗಳನ್ನು ವಿಸ್ತಾರವಾಗಿ ಹೇಳಿರುವದಿಲ್ಲ ಎಂದು ಗರುಡಪುರಾಣದಲ್ಲಿ ಹೇಳಿದೆ.

ಇಲ್ಲಿ ಸದ್ಯಃ ಎಂದು ಹೇಳಿದ್ದರಿಂದ ತಕ್ಷಣಾತ್ ಎಂಬುದು ವ್ಯರ್ಥ ಎಂದರೆ ಹೇಳುವರು-

> **ಸದ್ಯಃ ಶಬ್ದಃ ಅಪೇಕ್ಷಿಕಃ' ಇತಿ ತಕ್ಷಣಾದಿತಿ ।**

ಹಾಗಾದರೆ ಸದ್ಯಶಬ್ದವ್ಯರ್ಥವೆಂದರೆ ಆದಕ್ಕೂ ಪ್ರಯೋಜನ ಹೇಳುವರು.

'ನ ಚಾಸಂಪೂರ್ಣಾಧಿಕಾರಿಣಾಂ ತತ್ಕ್ಷಣಾದವರುಧ್ಯತೇ ಇತಿ ಸದ್ಯಃ ಶಬ್ದಃ ।

ವರ್ಷಕ್ಕಿಂತ ತಿಂಗಳು, ತಿಂಗಳಿಗಿಂತ ದಿವಸವು ಸದ್ಯ ಎನಿಸುವದು. ಕಾರಣ ಸದ್ಯಃ ಎಂದರೆ ಯಾವಾಗ ಎಂಬ ಶಂಕೆ ಬರುವದು. ಆದ್ದರಿಂದ ಕಾಲವಿಶೇಷ ತಿಳಿಸಲು ತತ್ ಕ್ಷಣಾತ್ ಎಂದರು. ಕಾಲವ್ಯವಧಾನವಿಲ್ಲದೇ ಎಂದರ್ಥ. ಇನ್ನು ಅಸಂಪೂರ್ಣ ಅಧಿ ಕಾರಿಗಳಿಗೆ ತತ್ಕ್ಷಣದಲ್ಲಿ ಶ್ರೀಹರಿಯು ಭಕ್ತಿವಶನಾಗುವದಿಲ್ಲ ಕಾರಣ ಸದ್ಯಃ ಎಂದರು. ಶೀಘ್ರದಲ್ಲಿ ಎಂದರ್ಥ. ಭಕ್ತ್ಯಾದಿಗಳಿಂದ ಭಾಗವತ ಶ್ರವಣ ಮಾಡಿದವರ ಮನಸ್ಸಿನಲ್ಲಿ ಕ್ಷಣದಲ್ಲೇ ನಿಲ್ಲುವನು. ಸಾಮಗ್ರಿ ಇಲ್ಲದವರಿಗೆ ಶೀಘ್ರದಲ್ಲಿ ಎಂದರೆ ಇತರ ಪುರಾಣಗಳ ಅಭ್ಯಾಸ ಮಾಡುವವರಂತೆ ತಡವಾಗಿ ಅಲ್ಲ ಬೇಗನೆ ಎಂದರ್ಥ.

ಇಲ್ಲಿ **ಸದ್ಯಃ ತತ್ಕ್ಷಣಾತ್** ಎಂಬ ಶಬ್ದಗಳನ್ನು ಅಧಿಕಾರಿಭೇದದಿಂದ ಹೇಳಿರುವರು ಯಾರು ಸಾಧನಸಾಮಾಗ್ರಿಸಂಪನ್ನರೋ ಅವರಿಗೆ ಭಾಗವತ ಓದಲಾರಂಭಿಸಿದ ಕ್ಷಣದಲ್ಲಿಯೇ ಭಗವಂತ ಹೃದಯದಲ್ಲಿ ನೆಲೆಸುವನು. ಯಾರು ಸಾಧನ ಸಂಪನ್ನರಲ್ಲ ಅವರಿಗೂ ಶೀಘ್ರದಲ್ಲಿಯೇ ಭಗವಂತ ಹೃದಯದಲ್ಲಿ ನೆಲೆಸುವನು.

ಅಧಿಕಾರಿ ಮುಂತಾದವರನ್ನು ಏಕೆ ಹೇಳಬೇಕು ಎಂದರೆ

'ಅಧಿಕಾರಿವಿಷಯಫಲಾನಾಂ ಸ್ಮರಣಾತ್ ಫಲಾಧಿಕ್ಯಂ ಭವತಿ ।

ವಾಮನೇ ಚ -

ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ಫಲಮ್ ॥ ಇತಿ

ಶಾಸ್ತ್ರದ ಅಧಿಕಾರಿವಿಷಯಫಲಗಳನ್ನು ಸ್ಮರಿಸಿದವರಿಗೆ ಹೆಚ್ಚು ಫಲವಾಗುವದು. ಅಧಿಕಾರಿವಿಷಯಫಲಗಳನ್ನು ಸ್ಮರಿಸಿ ಗ್ರಂಥಪ್ರಾರಂಭಮಾಡುವವರಿಗೆ ಶ್ರೀಹರಿಯು ಮಹಾಫಲವನ್ನು ಕೊಡುತ್ತಾನೆ. ಎಂದು ವಾಮನ ಪುರಾಣದಲ್ಲಿದೆ.

**ವಿಶೇಷಾರ್ಥ-** ಈ ಭಾಗವತ ಪುರಾಣಕ್ಕೆ **ಶ್ರೀಮತ್** ಎಂಬ ವಿಶೇಷಣ ವಿರುವದರಿಂದ ಎಲ್ಲ ಪುರಾಣಗಳಿಗಿಂತ ಇದು ಶ್ರೇಷ್ಠವೆಂದು ತಿಳಿಸಿದಂತಾಯಿತು.

'ರಾಜಂತೇ ತಾವದನ್ಯಾನಿ ಪುರಾಣಾನಿ ಸತಾಂ ಗಣೇ ।
ಯಾವನ್ನ ದೃಶ್ಯತೇ ಸಾಕ್ಷಾತ್ ಶ್ರೀಮದ್ಭಾಗವತಂ ಪರಮ್' ॥

ಶ್ರೀಮದ್ಭಾಗವತ ಕಣ್ಣಿಗೆ ಕಾಣುವವರೆಗೆ ಇತರ ಪುರಾಣಗಳು ಶೋಭಿಸುವವು ಎಂದು ತಿಳಿಸಿರುವರು.

**ಪ್ರೋಜ್ಝಿತಕೈತವಃ ಪರಮಃ** ಎಂಬ ವಿಶೇಷಣದಿಂದ. ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಮಾಡುವುದು ಎಂದು ತಿಳಿಸಿದ್ದರಿಂದ ನಿವೃತ್ತಧರ್ಮಸ್ವರೂಪ ಹೇಳಿದಂತಾಯಿತು. ಈ ಭಾಗವತದಲ್ಲಿ ಹೇಳುವ ನಿವೃತ್ತಧರ್ಮ ವಿಷ್ಣುಪುರಾಣದಲ್ಲಿ 'ತತ್ಕರ್ಮ ಯನ್ನ ಬಂಧಾಯ' 'ಸಾ ವಿದ್ಯಾ ಯಾ ವಿಮುಕ್ತಯೇ' ಎಂದು ಬಂಧಕ್ಕೆ ಕಾರಣವಾಗದಿರುವದೇ ಕರ್ಮ. ಮೋಕ್ಷಕ್ಕೆ ಕಾರಣವಾದುದೇ ವಿದ್ಯೆ ಎಂದು ಹೇಳಿದೆ.

**'ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥**

ಎಂಬ ಶ್ರೀಕೃಷ್ಣನ ಗೀತೆಯ ನುಡಿಯಂತೆ ಭಗವದರ್ಪಣ ಮಾಡಿದ ಧರ್ಮವು ಅತ್ಯಂತ ಶ್ರೇಷ್ಠ. ಭಕ್ತಿಯೋಗವೇ ಪರಮಧರ್ಮ ಎಂದು ಭಾರತದಲ್ಲಿ ಭೀಷ್ಮರು ಹೇಳಿರುವರು. 'ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ । ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಸ್ಸದಾ' ಎಂದು.

ವಕ್ತೃಶ್ರೋತೃಗಳಿಗೆ ಶ್ರೀಕರವಾದುದರಿಂದ(ಸಂಪತ್ತುದಾಯಕವಾದುದರಿಂದ) ಶ್ರೀಶಬ್ದವನ್ನು ಮೊದಲಿಗೆ ಇಡುವದು ಮಂಗಳವೇ. ಆ ಕಾರಣಕ್ಕಾಗಿ ಮೊದಲಿಗೆ ಶ್ರೀಶಬ್ದವನ್ನು ಇಡೋಣವೆಂದರೆ ಶ್ರೀಕಾರವಾಚ್ಯಳಾದ ರಮಾದೇವಿಗೆ ಪ್ರಾಧಾನ್ಯ ತಿಳಿಸಿದಂತಾಗುವುದು. ಹಾಗೆ ತಿಳಿಯಬಾರದೆಂದು ಸರ್ವಾಧಾರಕನಾದ ಭಗವಂತನನ್ನು ತಿಳಿಸುವ ಧರ್ಮ ಶಬ್ದವನ್ನು ಮೊದಲಿಗೆ ಹೇಳಿರುತ್ತಾರೆ. ನಂತರ ಶ್ರೀಶಬ್ದವನ್ನೂ ಪ್ರಯೋಗಿಸುವ ಇಚ್ಛೆಯಿಂದ ಅನ್ವಯ ಹೇಳುವಾಗ ಧರ್ಮ ಕಥನಕ್ಕೆ ಅಧಿಕರಣವಾದ ಸಪ್ತಮ್ಯಂತಭಾಗವತಶಬ್ದವನ್ನು ಮೊದಲಿಗೆ ಹೇಳಿದ್ದರೂ(ಭಾಗವತೇ ಧರ್ಮ ನಿರೂಪ್ಯತೇ)'ಆದೌ ವಿಶೇಷಣಂ ಯೋಜ್ಯಂ ವಿಶೇಷ್ಯಂ ತದನಂತರಂ' ಎಂಬ ನ್ಯಾಯದಂತೆ ಭಾಗವತಕ್ಕೆ ವಿಶೇಷಣವಾದ ಶಬ್ದದಲ್ಲಿ ಶ್ರೀಶಬ್ದವನ್ನು ಮೊದಲಿಗೆ ಹೇಳಿದ್ದಾರೆ. ಇದರಿಂದ ಧರ್ಮ ಶಬ್ದವನ್ನು ಮೊದಲಿಗೆ ಇಟ್ಟಿದ್ದರೂ ಅರ್ಥ ಹೇಳುವಾಗ ಶ್ರೀಮದ್ಭಾಗವತೇ ಧರ್ಮಃ ನಿರೂಪ್ಯತೇ ಎಂದು ಶ್ರೀಶಬ್ದವನ್ನೇ ಮೊದಲಿಗೆ ಹೇಳಿದ್ದರಿಂದ ವಕ್ತೃ ಶ್ರೋತೃಗಳಿಗೆ ಶ್ರೀಕರವಾದ ಗ್ರಂಥ ಎಂದು ಸೂಚಿಸಿದಂತಾಯಿತು. ಆದ್ದರಿಂದಲೇ ಭಾಗವತದಲ್ಲಿ ಉವಾಚ ಎಂಬಲ್ಲಿ ಎಲ್ಲ ಕಡೆಗೆ ಭಗವಂತ ಶುಕ ನಾರದರಿಗೆ ಶ್ರೀ ಶಬ್ದ ಪ್ರಯೋಗ ಕಂಡಿದೆ. (ಶ್ರೀಶುಕ ಉವಾಚ, ಶ್ರೀಭಗವಾನುವಾಚ, ಶ್ರೀನಾರದ ಉವಾಚ ಮುಂತಾಗಿ) ಮೂರು ಜನರು ವಕ್ತೃಶ್ರೋತೃಗಳಾಗಿದ್ದಾರೆ.

ಇಲ್ಲಿ ಹೀಗೊಂದು ಶಂಕೆ. ಭಗವಂತನಿಗೆ ಬೇರೊಬ್ಬ ಹೇಳುವವನಿಲ್ಲವಾದ್ದರಿಂದ ಶ್ರೋತೃ ಹೇಗಾಗುವನು ಎಂದು? ಆದಕ್ಕೆ ಬೇರೊಬ್ಬ ಇಲ್ಲದಿದ್ದರೂ ಭಗವಂತನಿಂದ ಅಭಿನ್ನವಾದ ವ್ಯಾಸರೇ ವಕ್ತೃಗಳಾದುದರಿಂದ ಭಗವಂತನಿಗೆ ಶ್ರೋತೃತ್ವ ಉಪಪನ್ನವೇ. ಬ್ರಹ್ಮನಲ್ಲಿ ವಕ್ತೃತ್ವ ಶ್ರೋತೃತ್ವಗಳೆರಡೂ ಇದ್ದರೂ **ಶ್ರೀ**ಶಬ್ದ ಏಕಿಲ್ಲವೆಂದು ಶಂಕಿಸಬಾರದು. ತಂದೆ ಇರುವಾಗ ಮಗನು ಹೇಗೆ ರಾಜನೆಂದು ಕರೆಸಿಕೊಳ್ಳುವುದಿಲ್ಲವೋ ಹಾಗೆ(ಹಿರಿಯರ ಗೌರವಕ್ಕಾಗಿ)ಬ್ರಹ್ಮದೇವರು **ಶ್ರೀ**ಶಬ್ದ ಸ್ವೀಕರಿಸಿಲ್ಲ. ಪರಮಾತ್ಮನು ಬ್ರಹ್ಮನಲ್ಲಿ ಪ್ರೇಮಾತಿಶಯ ತೋರಿಸಲು ಬ್ರಹ್ಮನ ಮಗನಾದ ನಾರದನಿಗೆ **ಶ್ರೀ**ಶಬ್ದವನ್ನಿತ್ತಿರುವನು. ವಕ್ತೃವಾಗದಿರುವದರಿಂದಲೇ ಪರೀಕ್ಷಿತನಿಗೆ **ಶ್ರೀ**ಶಬ್ದವನ್ನು ವಿಶೇಷಣವಾಗಿ ಕೊಟ್ಟಿಲ್ಲ.

1. **ಶ್ರೀಮದ್ಭಾಗವತೇ**-ಪ್ರಾಮಾಣ್ಯಾತಿಶಯಕಾರಣರೂಪವಾದ ಸಂಪತ್ ಯಸ್ಯ ತತ್ **ಶ್ರೀ**ಮತ್ 2. **ಶ್ರೀ**ಃಲಕ್ಷ್ಮೀದೇವಿಯು(ಭಗವಂತನನ್ನಾಶ್ರಯಿಸಿದ್ದರಿಂದ) **ಯಸ್ಯ** ಯಾವ ಭಾಗವತಪ್ರತಿಪಾದ್ಯಳೋ ಆ ಭಾಗವತದಲ್ಲಿ ಎಂದರ್ಥ.

ಭಗವತ್ಪ್ರಣೀತವಾದುದರಿಂದ, ಭಗವತ್ಪ್ರತಿಪಾದಕವಾದುದರಿಂದ ಭಾಗವತವೆಂಬ ಪುರಾಣದ ಹೆಸರು ಅನ್ವರ್ಥಕವಾದುದು. ಇದರಿಂದಲೇ ಕೆಲವರು ವೇದಪುರಾಣಗಳು ನಿರ್ಗುಣನನ್ನು ಪ್ರತಿಪಾದಿಸುವವು ಎಂದು ಹೇಳುವರು ಅದು ಸರಿಯಲ್ಲ ಎಂದೂ ತಿಳಿಸಿದಂತಾಯಿತು. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನ ವಿಜ್ಞಾನಯೋಶ್ಚೈವ(ವೈರಾಗ್ಯಯೋಶ್ಚೈವ) ಷಣ್ಣಾಂ ಭಗ ಇತೀರಣಾ (ಇತೀರ್ಯತೇ)' ಎಂದು ಹೇಳಿರುವದರಿಂದ ಪೂರ್ಣೈಶ್ವರ್ಯಾದಿಷಡ್ಗುಣ(ಭಗಶಬ್ದವಾಚ್ಯ)ಶ್ರೀಹರಿ ಪ್ರತಿಪಾದಕವೆಂದರ್ಥ. ಭಾಗವತದಲ್ಲೇ ನಿರ್ಗುಣನೆಂದು ಕೆಲವೆಡೆ ಹೇಳುವರಲ್ಲ ಎಂದರೆ ಅದು ಸತ್ವಾದಿಗುಣತ್ರಯರಹಿತನಾದ್ದರಿಂದ ಹೊರತು ಐಶ್ವರ್ಯಾದಿಗುಣ-ವಿಲ್ಲದ್ದರಿಂದಲ್ಲ ಎಂದು ತಿಳಿಸಲು ಭಗವತ್ ಎಂದಿರುವರು.(ಭಗವತಃ ಇದಂ ಭಾಗವತಂ) ಇದಕ್ಕೆ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯ ತಿಳಿಸಲು **ಮಹಾಮುನಿಕೃತೇ** ಎಂದಿರುವರು. ಇಲ್ಲಿ ಒಂದು ಸಂಶಯ ಮೇಲೆ ಹೇಳಿದಂತೆ ವಿಶೇಷಣವಾಚಕ ಪದವನ್ನು ಮೊದಲು ಇಡಬೇಕು ಎಂಬ ನ್ಯಾಯವನ್ನು ಇಲ್ಲಿ ಅನುಸರಿಸಲಾಗದು. ಅನುಸರಿಸಿದರೆ **ಶ್ರೀ**ಶಬ್ದಕ್ಕೆ ಪ್ರಾಥಮ್ಯ ಬರುವುದಿಲ್ಲ. ಮುಂದೇ ಇಟ್ಟರೆ ವಿಶೇಷಣ ಪ್ರಾಥಮ್ಯ ಕೂಡುವುದಿಲ್ಲವಲ್ಲ ಎಂದರೆ ಅದು ಸರಿಯಲ್ಲ. **ಮಹಾಮುನಿಕೃತೇ** ವಿಚಾರಪೂರ್ವಕವಾಗಿ ರಚಿಸಿದ ಎಂದರ್ಥ. ಸಾಮಾನ್ಯವಾಗಿ ಯಾವುದು

ವಿಚಾರಪೂರ್ವಕ ವಾಕ್ಯವೋ ಅದೇ ಪ್ರಮಾಣವಾಗುವದು. ಇಲ್ಲವಾದರೆ 'ಭಟ್ಟಸ್ಯ ಕಟ್ಯಾಂ ಶರಃ ಪ್ರವಿಷ್ಟ' ಎಂಬ ವಿಚಾರರಹಿತವಾಕ್ಯವೂ ಪ್ರಮಾಣವಾಗಬೇಕಾಗುವದು. ಆದ್ದರಿಂದ ವಿಚಾರಾರ್ಥಕ ಮನನಶೀಲತ್ವವಿರುವ ಪ್ರವೃತ್ತಿ ನಿಮಿತ್ತವುಳ್ಳ ಮುನಿಶಬ್ದಪ್ರಯೋಗವು. ಅದರಲ್ಲೂ ಮಹಾ ಎಂಬ ವಿಶೇಷಣ ಇರುವದರಿಂದ ಕೂಲಂಕುಷ ವಿಚಾರಿಸಿ ಬರೆದ ಗ್ರಂಥ ಎಂದರ್ಥವಾಗುವದು. ಈ ಮಹಾಮುನಿತ್ವ ವೇದವ್ಯಾಸರಿಗೇನೇ ಉಚಿತವಾದುದು. 'ಮುನೀನಾಮಪ್ಯಹಂ ವ್ಯಾಸಃ' ಎಂದಿದ್ದಾರೆ. ಶ್ರೀಕೃಷ್ಣನ ವಿಭೂತಿರೂಪಗಳನ್ನು ತಿಳಿಸುವಾಗ

**ಯದ್ಯದ್ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥**

ವಿಭೂತಿಮತ್ ಸತ್ವಂ ಯತ್ ಶ್ರೀಮತ್ ಐಶ್ವರ್ಯವುಳ್ಳ ಯಾವ ವಸ್ತುವು ಶ್ರೀಪತಿತ್ವ ಮುಂತಾದ ಗುಣವುಳ್ಳದ್ದೋ **ತತ್**ಅದು **ಮಮ ತೇಜಃ** ನನ್ನ ಸ್ವರೂಪವು **ಯತ್** ಯಾವುದು **ಊರ್ಜಿತಂ** ಬಲಾದಿಗಳಿಂದ ತನ್ನ ಜಾತಿಯಲ್ಲಿ ಅಧಿಕವಾಗಿದೆ **ತತ್** ಅದು **ಮಮ ಅಂಶಸಂಭವಂ** ನನ್ನ ಭಿನ್ನಾಂಶವೆಂದು ಭಾವ.

ವ್ಯಾಸರಿಗೆ ಭಗವಂತನಿಂದ ಅಭೇದವಿರುವದು. ಶ್ರೀಪತಿತ್ವಮುಂತಾದ ಗುಣಗಳಿಂದ ಕೂಡಿದವರು. ಮಹಾಮುನಿಗಳಾದ ಪ್ರಯುಕ್ತ ಪರಮಾಪ್ತರು. ಅದಕ್ಕಾಗಿ ವೇದವ್ಯಾಸರು ರಚಿಸಿದ ಭಾಗವತ ಪರಮ ಪ್ರಮಾಣವಾಗಿದೆ.

ಭಾಗವತವನ್ನು ರಚಿಸಿದವರು ವೇದವ್ಯಾಸರೇ ಆದ್ದರಿಂದ ಈ ಶ್ಲೋಕ ರಚಿಸಿದವರೂ ವೇದವ್ಯಾಸರೇ. ಆದರೆ(ಅಸ್ಮತ್ಕೃತೇ)ನಾನು ಮಾಡಿದೆ ಎಂದು ಹೇಳದೆ ಪರೋಕ್ಷವಾಗಿ ಮಹಾಮುನಿಕೃತೇ ಎಂಬುದು ಸರಿಯಲ್ಲ ಎಂದರೆ ಅದು ಸರಿಯಲ್ಲ. ವಿವಕ್ಷೆಯೇ ಬೇರೆಯಿದೆ. ಅದೇನೆಂದರೆ ವೇದವ್ಯಾಸರು ಈ ಶ್ಲೋಕ ಹೇಳುವಾಗ (ಅತ್ರ)ಶ್ರೀಮತ್ ಎಂಬುದು ಪ್ರತ್ಯೇಕ ಪದ. ಅದರ ಅರ್ಥ **ಶ್ರೀಃ**ವಿದ್ಯಾರೂಪಳಾದ ಲಕ್ಷ್ಮೀದೇವಿಯು ಹೆಂಡತಿಯಾಗಿವುಳ್ಳ ನನ್ನಿಂದ ಎಂದರ್ಥ. **ಮಹಾಮುನಿಕೃತೇ** ಈಗ ಕೃತೇ ಎಂಬುದು ಅವ್ಯಯ. ತಾದರ್ಥ್ಯೇ. **ಮಹಾಮುನಿಃ** ನಾರದರು **ತತ್ ಕೃತೇ** ಅವರಿಗಾಗಿ ಅಂದರೆ ಅವರ ಪ್ರಾರ್ಥನೆ ಸಫಲ ಮಾಡಲು ಎಂದರ್ಥ. ಅಥವಾ ಮಹಾಮುನಿ ಎಂದರೆ ಶುಕಾಚಾರ್ಯರು **ತತ್ಕೃತೇ** ಅವರ ಅಧ್ಯಾಪನಕ್ಕಾಗಿ ಅಥವಾ ಮಹಪೂಜಾಯಾಂ ಎಂದು ಧಾತು ಇರುವುದರಿಂದ ಮಹಶಬ್ದಕ್ಕೆ ಮಹಾ ಎಂದು

ಆದೇಶವಾದಾಗ ಮಹಾನ್ ಮುನಿಃ ಯಸ್ಯ ಸಃ ಮುನಿಗಳಾದ ಶುಕಾಚಾರ್ಯರೇ ಪೂಜ್ಯರಾಗಿವುಳ್ಳವನು ಪರೀಕ್ಷಿತನು **ತತ್ಕೃತೇ** ಅವನ ಮುಕ್ತಿಗಾಗಿ ಎಂದರ್ಥ. **ಉದ್ಘೂಯಮಾನೇ** ಎಂದು ಶೇಷಮಾಡಿ ನಾರದರಿಗಾಗಿ, ಶುಕಾಚಾರ್ಯರಿಗಾಗಿ, ಪರೀಕ್ಷಿತನಿಗಾಗಿ, ನಿರ್ಮಿತವಾದ ಭಗವತ್ಪ್ರತಿಪಾದಕವಾದ ಪುರಾಣದಲ್ಲಿ ಎಂದು ಅರ್ಥ ಹೊರತು **ವ್ಯಾಸಕೃತೇ** ಎಂದರ್ಥವಲ್ಲ. ಶುಕಾದಿಗಳು ಹೇಳುವಾಗ ಮಹಾವಿಚಾರಶೀಲವ್ಯಾಸಪ್ರಣೀತವೆಂದು ವಿವಕ್ಷಾ ಎಂದು ತಿಳಿಯಬೇಕು. ಆದ್ದರಿಂದ ಯುಕ್ತವೇ. ಈ ರೀತಿ ಆಪ್ತವಾಕ್ಯತ್ವದಿಂದ ಪ್ರಾಮಾಣ್ಯ ಹೇಳಿ ಇದರಿಂದಲೇ ಅನುಬಂಧಚತುಷ್ಟಯವನ್ನು ಸಂಕ್ಷೇಪವಾಗಿ ಹೇಳಿದ್ದರೂ ಅಜ್ಞಾನಿಗಳಿಗೆ ತಿಳಿಯಲಸಾಧ್ಯ. ಆದಕ್ಕಾಗಿ ವಿಸ್ತೃತವಾಗಿ ಹೇಳಲು ಅಧಿಕಾರಿಗಳನ್ನು ಹೇಳುವರು. **ನಿರ್ಮತ್ಸರಾಣಾಂ ಸತಾಂ** (ಮತ್ಸರ ಎಂದರೆ ಮತ್ತೊಬ್ಬರ ಅಭಿವೃದ್ಧಿಯನ್ನು ಸಹಿಸದಿರುವವರು) ಸಾಧುಗುಣವುಳ್ಳವರು ಪುಣ್ಯವಂತರು ಎಂದರ್ಥ. ಇದು ಸಾಮಾನ್ಯ ಲಕ್ಷಣ ಎಂದು ತಿಳಿಯಬೇಕು. ಇಲ್ಲಿ ಜ್ಞಾನಿಯು ಅಧಿಕಾರಿಯೋ ಅಜ್ಞಾನಿಯು ಅಧಿಕಾರಿಯೋ ಜ್ಞಾನಿಯೇ ಅಧಿಕಾರಿ ಎಂಬ ಮೊದಲನೆಯ ಉತ್ತರ ಸರಿಯಲ್ಲ. ಜ್ಞಾನ ಸಾಧನವಾದ ಭಾಗವತ ಜ್ಞಾನಿಗೆ ಉಪಯೋಗವಿಲ್ಲ. ಅಜ್ಞಾನಿ ಅಧಿಕಾರಿ ಎಂಬುದೂ ಸರಿಯಲ್ಲ. ಅಜ್ಞಾನಿಗೆ ಇದರಲ್ಲಿ ಪ್ರವೇಶವೇ ಕೂಡಲಾರದು. ಆದ್ದರಿಂದ ಇಬ್ಬರಿಗೂ ಅಧಿಕಾರವಿಲ್ಲ ಎಂದು ಶಂಕಿಸಿದರೆ ಅದಕ್ಕೆ **ನಿರ್ಮತ್ಸರಾಣಾಂ ಸತಾಂ** ಎಂದು ಉತ್ತರ. ಸೃ ಗತೌ ಎಂದು ಧಾತು ಇರುವುದರಿಂದ ಗತ್ಯರ್ಥಕವಾದವು ಜ್ಞಾನಾರ್ಥಕವಾದ್ದರಿಂದ **ಮಮ** ನನ್ನ **ಸರಂ** ಜ್ಞಾನವು **ಮತ್ಸರಃ ನಿಃ** ನಿಶ್ಚಯನಿಷೇಧಯೋಃ ಎಂದಿರುವದರಿಂದ ನಿರ್ಮತ್ಸರವೆಂದರೆ ನನ್ನ ಜ್ಞಾನವಿಲ್ಲದವರು **ಸತಾಂ** ಶಕ್ತರಾದ ಎಂದರ್ಥ. ತಾತ್ಪರ್ಯದಲ್ಲಿ 'ಶಕ್ತಂ ಸದಿತಿ ಸಂಪ್ರೋಕ್ತಂ ಅಶಕ್ತಂ ಅಸದುಚ್ಯತೇ' ಎಂದು ಹೇಳಿದೆ. ಒಟ್ಟಿನಲ್ಲಿ ಗ್ರಂಥವನ್ನೋದಲು ಪರಮಾತ್ಮನ ಜ್ಞಾನವಿಲ್ಲದ ಅಧಿಕಾರಿಗಳು ಸಮರ್ಥರೇ ಎಂದು ಹೇಳಿದಂತಾಯಿತು.

ವೇದವ್ಯಾಸರ ಮಾತಿಗೆ ಅಧಿಕಾರಿ ಹೇಳಿದ್ದು ಸರಿ. ಉಳಿದವರ ಮಾತಿಗೆ ಅಧಿಕಾರಿ ಯಾರು ಎಂದರೆ ನಿರ್ಮಾತಾ ಇತಿ ನಿರ್ಮನ್(ಆರ್ಷ) **ತಂ ಸರಂತಿ** ಅನುಸರಂತಿ ಇತಿ ನಿರ್ಮತ್ಸರಾಃ ಈ ಪುರಾಣನಿರ್ಮಾತೃತ್ವವನ್ನು ಅನುಸರಿಸುವ ಅಂದರೆ ತಮ್ಮ ಗುರುಗಳು ರಚಿಸಿದ ಗ್ರಂಥವನ್ನನುಸರಿಸುವ ಸ್ವಭಾವದವರಿಗೆ ಇದರಿಂದ ಉಪಯೋಗವಿದ್ದೇ ಇದೆ ಎಂದು ಭಾವ.

ಅಥವಾ ಬ್ರಹ್ಮನಿಂದ ಭಿನ್ನವಾದುದೆಲ್ಲ ಮಿಥ್ಯಾ ಎಂದು ಹೇಳುವ ಮತ ನಿರಾಸೆ ಮಾಡಲು **ಸತಾಂ** ಎಂದಿರುವರು. ಅಧಿಕಾರಿಗಳು ಮಿಥ್ಯಾ ಅಲ್ಲವೆಂದು ಭಾವ. ಚೈತನ್ಯೈಕ್ಯ ಮತ ನಿರಾಕರಿಸಲು ಬಹುವಚನವೆಂದು ತಿಳಿಯಬೇಕು. ಅಥವಾ ಅಧಿಕಾರಿಗಳನ್ನು ಉದ್ದೇಶಿಸಿ(ಅಭಿಮುಖೀಕೃತ್ಯ)ವೇದವ್ಯಾಸರು ಹೇಳುವರು. ನಿರ್ಮತ್ಸರರಾದ ಸಜ್ಜನರಾದ ನಿಮಗೆ ಎಂದು. ಮುಂದೆ ಕ್ರಮವಾಗಿ ತಾಪತ್ರಯೋನ್ಮೂಲನಂ ಶಿವದಂ ಯಥಾ ಸ್ಯಾತ್ ತಥಾ ವಿಷಯದ್ವಯಂ ನಿರೂಪ್ಯತೇ ಎಂದು ಅನ್ವಯ.

ಅಧಿಕಾರಿಗಳನ್ನು ಹೇಳಿ ಎರಡು ವಿಷಯ ಹೇಳುವವರಾಗಿ ಕಾರ್ಯಕಾರಣಗಳ ಮಧ್ಯದಲ್ಲಿ ಕಾರಣ ಮುಖ್ಯವಾದುದರಿಂದ ಕಾರಣವಾದ ವಿಷಯವನ್ನು ಹೇಳುವರು **ಧರ್ಮಃ** ಎಂದು. ಇದು ವ್ಯಾಸರ ಮಾತು ಎಂಬ ಪಕ್ಷದಲ್ಲಿ **ಶ್ರೀಮತ್** ನನ್ನಿಂದ **ಮಹಾಮುನಿಕೃತೇ** ಶುಕನಾರದರಿಗಾಗಿ **ಭಾಗವತೇ** ಭಾಗವತವು **ಉದ್ಭೂಯಮಾನೇ ಸತಿ** ಉತ್ಪನ್ನವಾಗುತ್ತಿರಲು **ಮಯಾ** ನನ್ನಿಂದ ಧರ್ಮವು ಹೇಳಲ್ಪಡುವದು. ಇದು ಶುಕಾಚಾರ್ಯರೇ ಮೊದಲಾದವರ ಮಾತೆಂಬ ಪಕ್ಷದಲ್ಲಿ **ಶ್ರೀಮದ್ಭಾಗವತೇ ಮಹಾಮುನಿಕೃತೇ** ವ್ಯಾಸರಿಂದ ಮಾಡಲ್ಪಡುತ್ತಿರಲು **ವ್ಯಾಸೇನ** ವೇದವ್ಯಾಸದೇವರಿಂದ **ಅತ್ರ** ಭಾಗವತದಲ್ಲಿ **ಪರಮಃ ಪ್ರೋಜ್ಝಿತಕೈತವಃ ಧರ್ಮಃ ವೇದ್ಯಂ ವಸ್ತು ವಾಸ್ತವಂ ಚ ನಿರ್ಮತ್ಸರಾಣಾಂ ಸತಾಂ ಶಿವದಂ ತಾಪತ್ರಯೋನ್ಮೂಲನಂ ಚ ಯಥಾ ಸ್ಯಾತ್ ತಥಾ ನಿರೂಪ್ಯತೇ** ಎಂದು ಅನ್ವಯ. ಇಲ್ಲಿ **ನಿರೂಪ್ಯತೇ** ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಬೇಕು. ಅಧ್ಯಾಹಾರವು ನಿರಂಕುಶವಾದ್ದರಿಂದ ನ ನಿರೂಪ್ಯತೇ ಎಂದೂ ಅಧ್ಯಾಹಾರ ಮಾಡಬಹುದೇ ಎಂದು ಶಂಕಿಸಬಾರದು. ಅಂಕುಶ ಉಂಟು.

> ಯತ್ರಾನವಸರೋಽನ್ಯತ್ರ ಪದಂ ತತ್ರ ಪ್ರತಿಷ್ಠಿತಮ್ ।
> ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶೇನ ತದ್ಭವೇತ್ ॥

ಅಂದರೆ ಯಾವ ವಾಕ್ಯದಲ್ಲಿ ಯಾವ ಪದ ಅಧ್ಯಾಹಾರ ಮಾಡದಿದ್ದರೆ ವಾಕ್ಯಾರ್ಥ ಪೂರ್ಣವಾಗಲಾರದೋ ಆ ಪದವನ್ನು ಅಧ್ಯಾಹಾರ ಮಾಡಬೇಕು. ಯಾವ ಮಹಾವಾಕ್ಯದಲ್ಲಿ ಅವಾಂತರವಾಕ್ಯ ಅಧ್ಯಾಹಾರ ಮಾಡದಿದ್ದರೆ ಮಹಾವಾಕ್ಯಾರ್ಥ ಆಗುವದಿಲ್ಲ ಅಲ್ಲಿ ಆ ಅವಾಂತರ ವಾಕ್ಯವನ್ನು ಅಧ್ಯಾಹಾರ ಮಾಡಬೇಕು. ಪದವಾಗಲಿ ಅವಾಂತರ ವಾಕ್ಯವಾಗಲಿ ಇಲ್ಲದೆ ವಾಕ್ಯಾರ್ಥ ಮಹಾವಾಕ್ಯಾರ್ಥವಾಗುತ್ತಿದ್ದರೆ ಅಧ್ಯಾಹಾರ ಮಾಡಬಾರದು ಎಂದು ಭಾವ. ಪ್ರಕೃತದಲ್ಲಿ ಆರಂಭಣೀಯತ್ವ ಹೇಳಲು

ಹೊರಟ ಈ ಶ್ಲೋಕದಲ್ಲಿ ವಿಷಯ ಅಧಿಕಾರಿ ಪ್ರಯೋಜನ ನಿರೂಪಿಸಿದರೆ ಆರಂಭಣೀಯತ್ವ ಸಿದ್ಧವಾಗುವದು. ಆದಕ್ಕಾಗಿ ನಿರೂಪತೇ ಎಂದೇ ಅಧ್ಯಾಹಾರ ಮಾಡಬೇಕು.(ನ ನಿರೂಪ್ಯತೇ ಎಂದರೆ ಅಂಸಗತವಾಗುವದು. ಆದಕ್ಕಾಗಿ ಹಾಗೆ ಮಾಡಬಾರದು.)

**ಅತ್ರ** ಪ್ರಾರಂಭಿಸಬೇಕೆಂದು ಪ್ರಕೃತವಾದ ಭಾಗವತದಲ್ಲಿ ಎಂದರ್ಥ. ಭಾಗವತೇ ಎಂದು ಹೇಳಿದರೆ ಅಧಿಕರಣವು ತಿಳಿಯುವುದರಿಂದ ಮತ್ತೇ ಅತ್ರ ಎಂಬುದು ವ್ಯರ್ಥ ಎಂದರೆ ದೇವೀಭಾಗವತವನ್ನು ವ್ಯಾವೃತ್ತಿಗೊಳಿಸಲು ಪ್ರಾರಭ್ಯತ್ವೇನ ಪ್ರಕೃತ ಎಂಬ ಅರ್ಥ ಹೇಳುವ ಪದಬೇಕು. ದೇವೀಭಾಗವತದಲ್ಲಿ ಆದನ್ನನುಸರಿಸುವವರು ದೇವೀಕೃತತ್ವವನ್ನು ಭಗವತ್ಯಾಃ ಇದಂ ಭಾಗವತಂ ಎಂದು ಭಾಗವತ ಶಬ್ದವಾಚ್ಯತ್ವವು ಸಿದ್ಧವಾಗಿದ್ದರೂ ದೇವೀ ಭಾಗವತವು ಪ್ರಾರಂಭಿಸಬೆಕೆಂದು ಪ್ರಕೃವಾಗಿರುವುದಿಲ್ಲ. ಆದ್ದರಿಂದ ವ್ಯಾವೃತ್ತವಾಗುವದು. ಇದರಂತೆ ಭಾರತದಲ್ಲಿ ಭಗವತ್ಪ್ರತಿಪಾದಕವಾದುದ-ರಿಂದ ಯೌಗಿಕ ಭಾಗವತ ಶಬ್ದವಾಚ್ಯತ್ವವಿದ್ದರೂ ಮಹಾಮುನಿಕೃತತ್ವವಿದ್ದರೂ ಪ್ರಕೃತತ್ವಾರ್ಥ ಅತ್ರ ಎಂದಿದ್ದರಿಂದ ಆದನ್ನು ವ್ಯಾವೃತ್ತಿ ಮಾಡಬಹುದು.

**ಧರ್ಮಃ** 'ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ' ಎಂದು ವಿಷ್ಣು ಸಹಸ್ರನಾಮದಲ್ಲಿ ಹೇಳಿದ್ದರಿಂದ ರೂಢಿಯಿಂದಲೂ ಧಾರಣಾದ್ಧರ್ಮಃ ಎಂದು ಉಪನಿಷದ್ಭಾಷ್ಯದಲ್ಲಿ ಹೇಳಿದ ಯೋಗದಿಂದಲೂ ಧರ್ಮ ಎಂದರೆ ಭಗವಂತನು ಎಂದರ್ಥ.

> **ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
> **ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

ಎಂದಿರುವದರಿಂದ ಎಲ್ಲ ಕಾಲದಲ್ಲಿಯೂ ಎಲ್ಲ ಪುರಾಣಗಳಲ್ಲಿಯೂ ಆದಿಮಧ್ಯಾಂತಗಳಲ್ಲಿ ವಿಷ್ಣುವನ್ನೇ ಪ್ರತಿಪಾದಿಸುವದರಿಂದ ಭಾಗವತಕ್ಕೇನು ವಿಶೇಷವೆಂದರೆ ಉತ್ತರ **ಪರಮಃ** ಎಂದು. ಅಂದರೆ ಬೇರೆಲ್ಲ ಕಡೆಗೆ ಸಾಮಾನ್ಯವಾಗಿ ಪ್ರತಿಪಾದಿಸಿದರೂ ಇಲ್ಲಿ ಸರ್ವೋತ್ಕೃಷ್ಟರೂಪವಿಶೇಷಣವಿಶಿಷ್ಟನೆಂದು ಹೇಳುವದರಿಂದ ವಿಶೇಷವಿದೆ ಎಂದು ಭಾವ. ಇನ್ನು ಪರತ್ವವು ಬೇರೆ ಕಡೆಗೂ ಹೇಳಿದೆ. ಆದರೆ ಅದು ಮಿಥ್ಯಾತ್ವವನ್ನು ನಿರಾಕರಿಸದೆ ಪಾರಮಾರ್ಥಿಕವಾಗಲಾರದು ಕಾರಣ **ಪ್ರೋಜ್ಝಿತಕೈತವಃ** ಎಂದರು. ನಿರಸ್ತಮಿಥ್ಯಾತ್ವವುಳ್ಳ ಎಂದರ್ಥ.

ಸವಿಶೇಷಣೇ ಹಿ ವಿಧಿನಿಷೇಧೌ ವಿಶೇಷಣಮುಪಸಂಕ್ರಾಮತಃ । ಎಂಬ ನ್ಯಾಯದಿಂದ ಭಗವಂತನಲ್ಲಿ ನಿರಸ್ತಮಿಥ್ಯಾತ್ವ ಸರ್ವೋತ್ತಮತ್ವಗಳನ್ನು ಹೇಳುವರು ಎಂದರ್ಥ. ಬೇರೆ ಸ್ಥಳದಲ್ಲಿ ಉತ್ತಮತ್ವ ಹೇಳಿದ್ದರೂ ಮಿಥ್ಯಾತ್ವ ನಿರಾಸಮಾಡಿಲ್ಲ ಆದರೆ ಇಲ್ಲಿ ಅದನ್ನೂ ಮಾಡಿದ್ದು ವಿಶೇಷ.

ಇಲ್ಲಿ ಇನ್ನೊಂದು ವಿಷಯವಿಶೇಷವಿದೆ. ಪುರುಷಾರ್ಥಗಳು ಎರಡು. ಒಂದು ಇಷ್ಟಪ್ರಾಪ್ತಿ ಮತ್ತೊಂದು ಅನಿಷ್ಟಪರಿಹಾರ. ಈ ಎರಡನ್ನೂ ಕೊಡುವ ಶ್ರೀಹರಿಯೇ ವಿಷಯ. ಎಂದು ತಿಳಿಸಲು ಈ ಎರಡು ವಿಶೇಷಣಗಳಿವೆ. ಈಗ **ಅತ್ರ ಪರಮಃ** ಎಂಬುದು ಒಂದೇ ಪದ. 'ಗಾಯನ್ ವಿಲಜ್ಜೋ ವಿಚರೇದಸಂಗಃ' ಎಂದು ಹೇಳಿದಂತೆ ತನ್ನನ್ನು ಭಜಿಸುವದರಲ್ಲಿ ನಿರ್ಲಜ್ಜರಾದವರನ್ನು ಅಥವಾ ಅನಾಥರನ್ನು ಸುಖಪಡಿಸುವವನು ಎಂದರ್ಥ. 'ನ ವಿದ್ಯತೇಽತ್ರಪಾ ಲಜ್ಜಾ ಯೇಷಾಂ ತೇ ಅತ್ರಪಾಃ ನಿರ್ಲಜ್ಜಾಃ । ತಾನ್ ರಮಯತಿ ಇತಿ ಅತ್ರಪರಮಂ ಎಂದು ವಿಗ್ರಹ. ತ್ರೈಜ ಪಾಲನೇ, ಪಾ ಪಾಲನೇ ಎಂದು ಎರಡು ಧಾತು ಇರುವದರಿಂದ ತ್ರಪ ರಕ್ಷಕನು. ನ ವಿದ್ಯತೇ ಇತಿ **ಅತ್ರಪ** ಅನಾಥ. **ಪ್ರೋಜ್ಝಿತಾಃ** ನಿರಾಕರಿಸಲ್ಪಟ್ಟ **ಕೈತವಾಃ** ದುಷ್ಟರು ಮಾಡುವ ಉಪದ್ರವಗಳು ಯಾವನಿಂದಲೋ ಅವನು. ಅಂದರೆ ದುಷ್ಟರು ನೀಡುವ ಉಪದ್ರವಗಳನ್ನು ಪರಿಹರಿಸುವ ಎಂದರ್ಥ. ಅಥವಾ **ಪ್ರೋಜ್ಝಿತಕಾಃ** ನಿರಸ್ತಸುಖವುಳ್ಳವರು **ಏತವಃ ಇತಂ** ಗತಂ ನಷ್ಟಂ ವಂ ಜ್ಞಾನಂ ಯೇಷಾಂ ತೇ ಅಸುರಾ ಯಸ್ಮಾತ್ ಸಃ (ಅಕಾರವಾಚ್ಯಭಗವದ್ವಿಷಯದಲ್ಲಿ) ಅಂದರೆ ಅಸುರರಿಗೆ ಸುಖವಿಲ್ಲದಂತೆ ತನ್ನ ಜ್ಞಾನವಿಲ್ಲದಂತೆ ಮಾಡುವವನು ಪ್ರೋಜ್ಝಿತಕೈತವನು ಅಥವಾ ಮಾಯಾವಾದಿಗಳು ಭಗವಂತ ಸ್ವಾಭಾವಿಕವಾಗಿ ನಿರ್ಧರ್ಮಕನು ಅಲ್ಲಿ ಕಾಣುವ ಧರ್ಮಗಳು ಸುಳ್ಳು ಎಂದು ಹೇಳುವರು. ಅದನ್ನು ನಿವಾರಿಸಲು **ಧರ್ಮಃ ಪ್ರೋಜ್ಝಿತಕೈತವಃ ಪರಮಃ** ಎಂದಿರುವರು. ಅತ್ರಪಾ ನಿರ್ಲಜ್ಜಾ ರಮಾ ಯಸ್ಮಿನ್ ಸಃ ಅತ್ರಪರಮಃ ಎಂದರೆ ಲಕ್ಷ್ಮೀಪತಿ ಎಂದರ್ಥ.(ಗಂಡನಲ್ಲಿ ಹೆಂಡತಿಗೆ ಲಜ್ಜೆ ಇರುವದಿಲ್ಲವಷ್ಟೇ) 'ಸಪ್ತಸು ಪ್ರಥಮಾ' ಎಂದು ಸೂತ್ರವಿರುವದರಿಂದ ಪ್ರಥಮಾ ಷಷ್ಠ್ಯರ್ಥೇ ಎಂದಿಟ್ಟುಕೊಂಡು ಲಕ್ಷ್ಮೀಪತೇಃ ಧರ್ಮಃ ಲಕ್ಷ್ಮೀಪತಿತ್ವಾದಿ ಧರ್ಮಸಮೂಹವು **ಪ್ರೋಜ್ಝಿತಕೈತವಃ** ಭಗವದ್ಧರ್ಮಗಳ ಮಿಥ್ಯಾತ್ವದ ನಿರಾಸವು ವಿಷಯವೆಂದಾಯಿತು. ಅಥವಾ ಮಹಾಭಾರತದಲ್ಲಿಯೂ ಭಗವಂತ ಭಗವದ್ಧರ್ಮಗಳೂ ಪ್ರತಿಪಾದಿತವೇ ಆಗಿವೆ. ಮತ್ತೆ ಇಲ್ಲಿ ಹೇಳುವದೇನು ವಿಶೇಷ

ಎಂಬುದಕ್ಕೂ ಉತ್ತರ (ಧರ್ಮಮುಂತಾದುದು.) **ಅತ್ರ** ಭಾಗವತದಲ್ಲಿ ಈಗ **ಪರಮಃ ಅತ್ರ** ಎಂದು ಭಿನ್ನ ಪದಗಳು **ಪರಾ** ಅಪೌರುಷೇಯವಾದ್ದರಿಂದ ಉತ್ಕೃಷ್ಟವಾದ ವೇದರೂಪವೂ ಪ್ರಮಾಣವು ಯಸ್ಯ ಸಃ **ಪರಮಃ ಧರ್ಮಃ** ವೇದ ವಿಹಿತವಾದ ಧರ್ಮವು ರಮಂತಿ ಸುಖಂ ಪ್ರಾಪ್ನುವಂತಿ ಅನೇನ ಇತಿ ರಮಃ ಧರ್ಮ. ಸುಖಜನಕವಾದ ಧರ್ಮವು ಮತ್ತು **ಪ್ರೋಜ್ಝಿತಕೈತವಃ** ದುಃಖರಹಿತವಾದ ಮೋಕ್ಷವು ಎಂದರ್ಥ.(ಅಕಯಪ್ರವಿಸಂಭೂಮಸಖಹಾಃ ವಿಷ್ಣುವಾಚಕಾಃ)ಎಂದಿರುವದರಿಂದ **ಪ್ರೇಣ** ವಿಷ್ಣುವಿನಿಂದ **ಉಜ್ಝಿತಃ** ಪರಿಹೃತವಾದ **ಕೈತವಃ** ಅಂದರೆ ಭಾಗವತದಲ್ಲಿ ವೇದೋಕ್ತಧರ್ಮ ಮೋಕ್ಷ ಎರಡೇ ಹೇಳಲ್ಪಡುವವು. ಭಾರತದಲ್ಲಿ ಚತುರ್ವಿಧಪುರುಷಾರ್ಥಗಳೂ ಸಂಪಾದ್ಯವೆಂದು ಹೇಳಿದೆ. ಇಲ್ಲಿ ಅರ್ಥ ಕಾಮಗಳು ಪರಮಾರ್ಥ ವಿರೋಧಿ. ಆದ್ದರಿಂದ ಅವುಗಳನ್ನೂ ಬಿಟ್ಟು ಕೇವಲ ಧರ್ಮ, ಮೋಕ್ಷ ಹೇಳಿರುವುದೆ ವಿಶೇಷವೆಂದು ಭಾವ. ಧರ್ಮಮೋಕ್ಷಗಳೆಂಬ ಎರಡು ಪುರುಷಾರ್ಥಗಳೆ ವಿಷಯ ಎಂದು ಸೂಚಿಸಿದಂತಾಯಿತು. ಅಥವಾ **ಅತ್ರ ಪರಮಃ** ಎಂದು ಪ್ರತ್ಯೇಕ ಪದವಾದಾಗ **ಅತ್ರ** ಭಾಗವತದಲ್ಲಿ (**ಪರಮಃ ಪಾ** ಪೂರ್ಣಮಾ ಯಸ್ಮಿನ್ (ಭಗವಂತನಲ್ಲಿ ) (ಪೃ ಪಾಲನ ಪೂರಣಯೋಃ ಎಂದು ಧಾತು)ಸಃ ಅಂದರೆ ಗೋಪಿಯಾದ ಕುಬ್ಜೆಯಲ್ಲಿ ವ್ಯಾಪ್ತಳಾದ ಲಕ್ಷ್ಮಿಯು ಭಗವಂತನಿಂದ ಸಂತೋಷಪಟ್ಟಳು.)

ಒಂದೇ ಪದವಾದಾಗ **ಅತ್ರಪಃ** ಗೋಪಿಕಾಸ್ತ್ರೀಯರ ಗಣವು (ತ್ರಪಯಾ ಚ ಹಾಪಿತಾಃ)ಎಂದು ಹೇಳುವರು. ಗೋಪಿಕೆಯರ ಗಣವನ್ನು ರಮಯತೀತಿ ಅತ್ರ ಪರಮಃ **ಪ್ರೋಜ್ಝಿತಾಃ ಕೈತವಾಃ** ದುಷ್ಟರಾದ ಪೂತನಾದಿಗಳು ಯೇನ ಸಃ ತಥಾ **ತಾದೃಶಧರ್ಮಃ** ಅಸಾಧಾರಣಕರ್ಮವಿಶೇಷಗಳು ನಿರೂಪಿಸಲ್ಪಡುವವು. ಭಾಗವತದಲ್ಲಿ ಲಕ್ಷ್ಮಿಸನ್ನಿಧಾನವುಳ್ಳ ಕುಬ್ಜಾದಿಗಳನ್ನು ಉದ್ಧರಿಸಿದ್ದು, ಗೋಪಿಕಾಸ್ತ್ರೀಯರನ್ನು ಸಂತೋಷಪಡಿಸಿದ್ದು ಪೂತನಾದಿ ದುಷ್ಟಸಂಹಾರ ಮುಂತಾದ ಅನೇಕ ಅಸಾಧಾರಣ ಕರ್ಮಗಳನ್ನು ನಿರೂಪಿಸುವರು. ಇದನ್ನು ಹದಿನೆಂಟು ಪರ್ವಗಳಿರುವ ಭಾರತದಲ್ಲಿ ಹೇಳಿಲ್ಲ ಎಂಬುದೇ ವಿಶೇಷ. ಅಥವಾ **ಅತ್ರ** ಭಾಗವತದಲ್ಲಿ **ಪರಮಃ ಧರ್ಮಃ**

ಕೇವಲ ಯಮಧರ್ಮ ಅವತಾರ ಯುಧಿಷ್ಠರ ಪ್ರತಿಪಾದಿತವಾಗಿದೆ. ಭಾರತದಲ್ಲಿ ಹೇಳಿದ್ದನ್ನೇ ಏನು ಹೇಳುವದು ಎಂದರೆ **ಪ್ರೋಜ್ಝಿತಕೈತವಃ** ಕಿತವ ಎಂದರೆ

ದುರ್ಯೋಧನ. ಅವನ ಚರಿತ್ರೆ ಕೈತವ. **ಪ್ರೋಜ್ಝಿತಂ** ತ್ಯಕ್ತಂ ಕೈತವಂ ದುರ್ಯೋಧನ ಚರಿತ್ರೆ ಯಸ್ಮಿನ್ ಯುಧಿಷ್ಠಿರಕಥಾನಕಕ್ಕೆ **ತತ್** ತಥಾ ಭಾರತದಲ್ಲಿ ದುರ್ಯೋಧನನ ಕಥಾಸಹಿತ ಯುಧಿಷ್ಠಿರ ಕಥಾ ಇದೆ. ಇಲ್ಲಿ ದುರ್ಯೋಧನ ಕಥಾ ಇಲ್ಲವೆಂಬುದೇ ವಿಶೇಷ ಎಂದು ಭಾವ.

ಕಾರಣರೂಪ ವಿಷಯ ಹೇಳಿದ ಮೇಲೆ ಕಾರ್ಯರೂಪ ವಿಷಯ ಹೇಳುವರು

**ವೇದ್ಯಂ** ಮುಂತಾಗಿ. ಇಲ್ಲಿ ಯತ್ತದ ಅಧ್ಯಾಹಾರ ಮಾಡಿ ಯೋಜಿಸಬೇಕು. **ಅತ್ರ ಭಾಗವತೇ ಯದ್ವಸ್ತು ಶಿವದಂ** ಮೋಕ್ಷಪ್ರದವು **ತಾಪತ್ರಯೋನ್ಮೂಲನಂ** ತಾಪತ್ರಯ ನಾಶಕವು ಆದ ಧರ್ಮನಾಮಕ ವಿಷಯ ಹೇಳಿತೋ **ತಸ್ಯ** ಅದರ **ವೇದ್ಯಂ** ಕಾರ್ಯವಾದ ಜಗತ್ತು(ವಿದ ಕೃತೌ ಎಂದು ಧಾತುವಿದೆ) **ವಾಸ್ತವಂ** ಯಥಾರ್ಥವಾಗಿದೆ ಎಂದು **ನಿರುಪ್ಯತೇ** ಹೇಳಲ್ಪಡುವದು ಜಗತ್ತು ಮಿಥ್ಯೆಯಲ್ಲ ಏಕೆಂದರೆ ಜಗತ್ತಿಗೆ ಸುಖದುಃಖ ಕೊಡಬೇಕಾದರೆ(ಪರಿಹಾರ ಮಾಡಬೇಕಾದರೆ) ಸತ್ಯವೇ ಆಗಬೇಕು. ಇದರಿಂದ **ಯಸ್ಮೈ ಶಿವದಂ ಸತ್ಯಂ ತಾಪತ್ರಯೋನ್ಮೂಲನಂ ವಸ್ತು ಉಕ್ತಂ ತತ್ ಜಗತ್ ವಾಸ್ತವಂ** ಎಂದು ಯೋಜನೆ ತಿಳಿಸಿದಂತಾಯಿತು. ಶ್ರೀಹರಿಯು ಯಾವ ಜಗತ್ತಿಗೆ ಸುಖ ಕೊಡುವನು ದುಃಖ ಪರಿಹರಿಸುವನು ಎಂದು ಹೇಳಿದೆಯೋ ಆ ಜಗತ್ತು ಸತ್ಯವೇ ಎಂದು ಭಾವ. ಅಸತ್ಯಕ್ಕೆ ಸುಖದುಃಖಕೊಡಲಾಗದು ಎಂದು. ಸುಖದುಃಖ ದಾನಪರಿಹಾರವನ್ನಾಗಲಿ ಕಾರ್ಯತ್ವವನ್ನಾಗಲಿ ಚೇತನ ಪ್ರಪಂಚಕ್ಕೆ ಹೇಳುತ್ತೇವೆ ಹೊರತು ಅಚೇತನಕ್ಕೂ ಜೀವವಿದೆ ಎಂದು ಹೇಳಲಾಗದು. ನಿತ್ಯನಾದ್ದರಿಂದ ಕಾರ್ಯತ್ವ ಕೂಡುವದಿಲ್ಲ. ಜಡಕ್ಕೆ ಸುಖದುಃಖಾನುಭವ ಇಲ್ಲ. ಅವುಗಳಿಗೆ ಕೊಡುವಿಕೆಬಿಡುವಿಕೆಗಳನ್ನು ಹೇಳಲಾಗದು ಎಂಬ ಶಂಕೆ ಸರಿಯಲ್ಲ. ಜಡದೇಹ ಸಂಬದ್ಧನಾದ ಜೀವನೇ ಕಾರ್ಯ. ಅವನಿಗೆ ಸುಖದುಃಖಕೊಡುವಿಕೆ ಬಿಡುವಿಕೆಗಳು ಯುಕ್ತವೆಂದು ವಿವಕ್ಷಿತವಾಗಿದೆ. ಅಥವಾ ಮಾಯಾವಾದಿಗಳು ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಎಂಬ ಅನುಮಾನದಿಂದ ಜಗತ್ತಿಗೆ ಸತ್ಯತ್ವವನ್ನು ನಿರಾಕರಿಸಲು ಹೇಳುವರು **ವೇದ್ಯಂ** ಎಂದು. ಮಾಯಾವಾದಿಗಳು ಹೇಳಿದ ದೃಶ್ಯತ್ವವು ಚಕ್ಷುರ್ಮಾತ್ರಗ್ರಾಹ್ಯತ್ವವೆಂದಾದರೆ ಭೂಮಿಯ ಪರಮಾಣು, ಆಕಾಶಗಳಿಗೆ ಚಕ್ಷುಗ್ರಾಹ್ಯತ್ವವಿಲ್ಲದಿರುವದರಿಂದ ಅವುಗಳು ಸತ್ಯವಾಗಬೇಕಾಗುವದು. ಪಂಚೇಂದ್ರಿಯ ಗ್ರಾಹ್ಯತ್ವವೆಂದರೆ ಮನೋಗ್ರಾಹ್ಯಸುಖದುಃಖಾದಿಗಳು ಸತ್ಯವಾಗಬೇಕಾಗುವದು. ಆದ್ದರಿಂದ ದೃಶ್ಯತ್ವವೆಂದರೆ ಜ್ಞೇಯತ್ವವೇ ಪರಾಭಿಮತವೆಂದು

ತಿಳಿದು ವೇದ್ಯಂ ಎಂದಿರುವರು. **ವೇದ್ಯಂ** ಜ್ಞೇಯಂ ವಸ್ತು ಅನನ್ಯಾತ್ಮರೂಪಂ ವಿಯದಾದಿ. **ವಾಸ್ತವಂ ಸತ್ಯಂ ಇತಿ ಅತ್ರ ನಿರುಪ್ಯತೇ** (ಅನಾರೋಪಿತ) ಶುಕ್ತಿರಜತವ್ಯಾವೃತ್ತಿ ಮಾಡಲು ವಸ್ತು ಎಂದಿರುವರು.

'ದೃಶ್ಯತೇ ತ್ವಗ್ರಯಾ ಬುದ್ಧ್ಯಾ' ಎಂದು ಶ್ರುತಿ ಇರುವದರಿಂದ ಮಿಥ್ಯಾತ್ವವಿಲ್ಲದಿರುವ ಬ್ರಹ್ಮನಲ್ಲಿ ನಿನ್ನ ಜ್ಞೇಯತ್ವ ಹೇತು ಬಂತು ವ್ಯಭಿಚಾರವೆಂದು ತಿಳಿಸಿದಂತಾಯಿತು. ಜಗತ್ತು ಸತ್ಯವೆಂದು ನಿರೂಪಿಸಿದರೇನು ಫಲ ಎಂದರೆ ಹೇಳುವರು **ಶಿವದಂ** ಎಂದು. **ಇದಂ** ಎಂದು ಶೇಷ. **ಇದಂ** ಸತ್ಯತ್ವ ನಿರೂಪಣವು **ಶಿವದಂ** ಮೋಕ್ಷಪ್ರದವು(ಶಿವಂ ಭದ್ರಂ ಶಿವಾ ಗೌರೀ ಎಂದು ಕೋಶವಿದೆ. ಸರ್ವಕಲ್ಯಾಣರೂಪ ಮೋಕ್ಷವೇ ಶಿವಶಬ್ದಾರ್ಥ) ಇದರಿಂದ ಇಷ್ಟಪ್ರಾಪ್ತಿರೂಪ ಪುರುಷಾರ್ಥಹೇತುತ್ವವು ಸೂಚಿತವಾಯಿತು.

**ತಾಪತ್ರಯೋನ್ಮೂಲನಂ** ತಾಪಾನಾಂ ತ್ರಯಂ ಯಸ್ಮಿನ್ ತಸ್ಯ । **ಉನ್ಮೂಲನಂ** ನಾಶಕಂ ಸಂಸಾರನಾಶಕ ಎಂದರ್ಥ. ಅನಿಷ್ಟನಿವೃತ್ತಿರೂಪಪುರುಷಾರ್ಥ ಸೂಚಿತವಾಯಿತು. ಪ್ರಯೋಜನ ತಿಳಿಸಿದಂತಾಯಿತು. ಹಿಂದೆ ಜಗತ್ಸತ್ಯತ್ವವು ವಿಷಯ. ಈಗ ದೃಶ್ಯತ್ವ ಹೇತು ದುಷ್ಟವೆಂದು ಹೇಳುವದೇ ವಿಷಯ.

**ವಸ್ತುಶಿವದಂ** ಎಂಬುದು ಒಂದೇ ಪದ. **ವಸತಿ ಅಸ್ಮಿನ್ ಭಗವಾನ್ ಇತಿ ವಸ್ತು** ಯೋಗ್ಯಜೀವಸಮುದಾಯಕ್ಕೆ ಸುಖಕೊಡುವವನು ಎಂದರ್ಥ. ಭಗವಂತ ವ್ಯಾಪ್ತನಾದ್ದರಿಂದ ಎಲ್ಲೆಡೆ ಇದ್ದರೂ ವಾಸ ಎಂದರೆ ಸನ್ನಿಧಾನ ವಿಶೇಷ ಎಂದಿಟ್ಟುಕೊಳ್ಳುವದು ಸೂಕ್ತ.

**ತಾಪತ್ರಯೋನ್ಮೂಲನಂ ತಕಾರಃ ಕೀರ್ತಿತಶ್ಚೋರೇ ಮೋಹೇ ಯುದ್ಧೇ ಚ ಕೀರ್ತಿತಃ** ಎಂದು ಏಕಾಕ್ಷರಕೋಶವಿರುವುದರಿಂದ **ತಂ** ಮೋಹಂ ಆಪ್ನುವಂತೀತಿ **ತಾಪಾಃ** ಅಯೋಗ್ಯಜೀವರು ಅಸುರಾದಿಗಳು **ತೇಷಾಂ ತ್ರಯಂ** ಸಾತ್ವಿಕ ರಾಜಸ ತಾಮಸ ಸುಖತ್ರಯಗಳನ್ನು ಉನ್ಮೂಲಯತಿ ಉಚ್ಚೇ ಅಸಂವೃಣೋತಿ. ಮೂಲಸಂವರಣೆ ಎಂದು ಧಾತು ಇದೆ. ಆವಿರ್ಭಾವಗೊಳಿಸುವದಿಲ್ಲವೆಂದು ಭಾವ ಯೋಗ್ಯರಿಗೆ ಮೋಕ್ಷ, ಅಯೋಗ್ಯರಿಗೆ ಅಂಧಂತಮಸ್ಸು ಪ್ರಯೋಜನ ಎಂದಂತಾಯಿತು.

**'ವಸ್ತುಶಿವದಂ ತಾಪತ್ರಯೋನ್ಮೂಲನಂ'** ಎಂಬುದು ಒಂದೇ ಪದ. ಅಂತರ್ಣೀತ ಣಿಜಂತವಾದ ವಾ ಗತಿಗಂಧನಯೋಃ ಎಂಬ ಧಾತು ಗತ್ಯರ್ಥಾನಾಂ

ಜ್ಞಾನಾರ್ಥಕತ್ವಂ ಎಂದಿರುವುದರಿಂದ ಜಾಗ್ರದವಸ್ಥಾ ನಿಯಾಮಕನಾಗಿ ಜ್ಞಾನಕೊಡುವವನು.(ಜ್ಞಾಪಕ)ಆದ್ದರಿಂದ **ವ** ಎಂದರೆ ವಿಶ್ವ. ಅವನನ್ನು **ಸ್ತೌತೀತಿ ವಸ್ತು** (ವಂ ಸ್ತೌತೀತಿ ವಸ್ತು)ಗಣಪತಿ(ವಿನಾಯಕೋಽಥ ವಿಶ್ವಸ್ಯ ಧ್ಯಾನಾದ್ವೈ ಗಜವಕ್ತ್ರತಾಂ ಎಂದಿದೆ.) **ಶಿವಃ** ರುದ್ರ **ದಂ** ಪಾರ್ವತಿದೇವಿ(ದಂ ಕಲತ್ರೇ ಚ ಎಂದು ಧಾತುವಿರುವುದರಿಂದ ಶಿವಪದಸನ್ನಿಧಾನದಿಂದ ರುದ್ರಕಲತ್ರಳು ದಂ) ತಾಪಃ ಅಸ್ಯ ಅಸ್ತೀತಿ ತಾಪಃ(ಅರ್ಶಾದ್ಯಚ್) **ತಾಪಯತೀತಿ ತಾಪಃ** ಸೂರ್ಯ ಈ ನಾಲ್ಕು ಜನರು **ತ್ರ** ರಕ್ಷಿತರು ಎಂಬ **ಯಂ** ಜ್ಞಾನದ **ಉನ್ಮೂಲನಂ** ನಿರಾಸವು **ನಿರುಪ್ಯತೇ** ಹೇಳಲ್ಪಡುವದು. ಈ ನಾಲ್ವರು ಅಲ್ಲಿ ರಕ್ಷಕರು ಎಂದರೆ ಐದನೆಯವನು ವಿಷ್ಣುವೇ ರಕ್ಷಕ ಎಂದು ಸಿದ್ಧವಾಗುವದು. ಇದರಿಂದ ಪಂಚಾಯತನನಿರಾಸವೂ ವಿಷಯ ಎಂದಾಯಿತು. ಇವರಿಗೇಕೆ ಪ್ರಾಣಕರ್ತೃತ್ವ (ರಕ್ಷಕತ್ವ )ಒಪ್ಪಬಾರದು ಎಂದರೆ **ಕಿಂ ವಾ ಅಪರೈಃ** ಆ ಶ್ರೇಷ್ಠರಾದವರಿಂದ ಏನಾಗುವದಿದೆ. ಅಸ್ವತಂತ್ರರು ರಕ್ಷಿಸಲಾರರು ಎಂದರ್ಥ. **ವಾ** ಶಬ್ದದಿಂದ ಬೇರೆ ವಿಷಯ ಪ್ರಯೋಜನ ಅಧಿಕಾರಿ ಎಲ್ಲ ನಿಷ್ಫಲವೆಂದು ಸೂಚಿಸಿರುವರು. ಹಾಗಾದರೆ ವಿಷ್ಣುವನ್ನು ಸ್ವೀಕರಿಸಿದ ಫಲವನ್ನು ಹೇಳುವರು. ಈಶ್ವರ **ಸದ್ಯಃ** ಎಂದು.

> **ಈಶೇಭ್ಯೋ ಬ್ರಹ್ಮಶರ್ವಾದಿದೇವೇಭ್ಯೋಽಪಿ ವರೋ ಯತಃ ।**
> **ಅತಸ್ತೇ ಈಶ್ವರಾಖ್ಯಾತಿಂ ಮುನಯಃ ಸಂಪ್ರಚಕ್ಷತೇ ॥**

ಎಂದಿರುವುದರಿಂದ ಸರ್ವಶ್ರೇಷ್ಠ ವಿಷ್ಣುವು **ಸತ್** ಮೋಕ್ಷವೆಂಬ **ಹರಿರೇವೈಕಃ** ಎಂದಿರುವದರಿಂದ (ಯಾ ಪ್ರಾಪಣೇ ಅಂತರ್ಣೀತ)ಮೋಕ್ಷದೋ ಹರಿರೇವೈಕಃ ಎಂದಿರುವುದರಿಂದ ಸರ್ವಶ್ರೇಷ್ಠನಾದ್ದರಿಂದ ಶ್ರೀಹರಿಯೇ ರಕ್ಷಕನೆಂದು ತಿಳಿದರೆ ಮೋಕ್ಷಪ್ರಾಪ್ತಿಯೇ ಫಲವೆಂದು ಭಾವ.(ಇಂಥ ವಿಷ್ಣುವಿನ ಜ್ಞಾನಕ್ಕೆ ಉಪಾಯವೇನು ಎಂದರೆ ಹೇಳುವರು **'ಹೃದ್ಯವರುಧ್ಯತೇ'** ಎಂದು. **ಚೇತ್** ಎಂದು ಶೇಷಪೂರ್ಣ ಮಾಡಿಕೊಳ್ಳಬೇಕು. ಪರಮಾತ್ಮನನ್ನು **ಹೃದಿ** ಮನಸ್ಸಿನಲ್ಲಿ **ಅವರುಧ್ಯತೇ ಚೇತ್** ಅನವರತವಾಗಿ ಸ್ಥಾಪಿಸಿಕೊಂಡರೆ ಅವನ ಜ್ಞಾನ ಸುಲಭವಾಗಿ ಆಗುವದು. **ಧ್ಯಾನಜಜ್ಞಾನಯೋಗಾತ್ ಗಮ್ಯಂ** ಎಂದು ಹೇಳಿದೆ. ಇದೆಲ್ಲ ಇರಲಿ ಇದರಿಂದ ಪುರಾಣಕ್ಕೇನು ಹೇಳಿದಂತಾಯಿತು ಎಂದರೆ ಹೇಳುವರು **ಅತ್ರ** ಎಂದು **ಅತ್ರ** ಭಾಗವತದಲ್ಲಿ **ಕೃತಿಭಿಃ** ಶ್ರವಣ, ಅರ್ಥಾವಧಾರಣ, ವಚನ, ವ್ಯಾಖ್ಯಾನ, ಅಧ್ಯಯನ, ಅಧ್ಯಾಪನ, ಅಭ್ಯಾಸವೆಂಬ ಪ್ರಯತ್ನಗಳಿಂದ **ಶುಶ್ರೂಷುಭಿಃ** ಸೇವನೋತ್ಸಕರಿಂದ

ತತ್- ಶ್ರೀಹರಿಯ **ಹೃದ್ಯವರೋಧನಂ** ಹೃದಯದಲ್ಲಿ ನೆಲೆಸುವದು **ಕ್ಷಣಾತ್** ಕಾಲವಿಳಂಬವಿಲ್ಲದೇ ಸಾಧ್ಯವಾಗುವದು. ಅಥವಾ **ಈಶ್ವರಃ** ಪರಮಾತ್ಮನು **ಪರೈಃ** ಬ್ರಹ್ಮಾದಿಗಳಂತೆ(ಉಮಾಯಾಂ ವಿಕಲ್ಪೇ ವಾ ಎಂದು ಅಮರವಿದೆ.) **ಸದ್ಯಃ** ಶೀಘ್ರದಲ್ಲಿ **ಅವರುಧ್ಯತೇ ಕಿಂ** ಮನಸ್ಸಿನಲ್ಲಿ ನಿಲ್ಲುವನೇನು (ಆಕ್ಷೇಪ)ಇಲ್ಲವೆಂದು ಭಾವ. ಕಿಂತು **ಅತ್ರ** ಈಶ್ವರನಲ್ಲಿ **ಹೃದಿ** ಸ್ನೇಹವಿಷಯದಲ್ಲಿ (ಹೃತ್ ಸ್ನೇಹೇ ಸ್ವಾಂತವಕ್ಷಸೋಃ) ಎಂದು ಶಬ್ದನಿರ್ಣಯವಿದೆ **ತತ್ ಕ್ಷಣಾತ್** ವಿಷ್ಣುಭಕ್ತನಾದ ಗುರುವಿನಿಂದ(ತಸ್ಮಿನ್ ಈಶ್ವರೇ ಕ್ಷಣಃ ಉದ್ಧರ್ಷಃ ಯಸ್ಮಾತ್ ತತ್ ಕ್ಷಣಾತ್ ಕಂಪೋऽಥ ಕ್ಷಣ ಉದ್ಧರ್ಣಃ ಎಂದು ಅಮರವಿದೆ.) ಶುಶ್ರೂಷುಭಿಃ ಶ್ರವಣೇಚ್ಛುಗಳಿಂದ ಏತತ್ ಭಾಗವತವನ್ನು ಕೃತಿಭಿಃ ಕುಶಲಪುರುಷರಿಂದ ಹೃದ್ಯವರೋಧನ ಸಾಧ್ಯವೆಂದು ಭಾವ.

**ಅತ್ರ ಕೃತಿಭಿಃ** ಎಂಬುದು ಒಂದೇ ಪದ. **ನಾಸ್ತಿ ತ್ರಃ ಅನ್ಯಃ ತ್ರಾತಾ ಯಸ್ಯ ಇತಿ ಅತ್ರಃ** ವಿಷ್ಣು ಅವನಿಗಾಗಿಯೇ **ಕೃತಂ** ಕರ್ಮಸಮೂಹವು **ಯೇಷಾಂ ತೇ ಅತ್ರಕೃತಿಭಿಃ** ಭಗವದುದ್ಯೇಶ್ಯಕ ಕರ್ಮಮಾಡುವವರಿಂದಲೂ **ಅವರುಧ್ಯತೇ** ಮನಸ್ಸಿನಲ್ಲಿ ನಿಲ್ಲುವನು.

**ಅತ್ರ** ಭಾಗವತದಲ್ಲಿ ಪ್ರತಿಪಾದಿತವಾದ ಭಗವಂತನ ಕಾರ್ಯವಾದ ಜಗತ್ತು ಸತ್ಯವೆಂದಾದರೆ ಜಗತ್ತಿಗೂ ಭಗವಂತನಿಗೂ ಭೇದವಿಲ್ಲ ಎಂದರೆ ಹೇಳುವರು **ಕಿಂ ವಾ** ಎಂದು. ಭಾಗವತಕ್ಕೆ ವಿಷಯನಾದ ಜಗತ್ಕಾರಣನು ಸತ್ ಸತ್ಯರೂಪನು **ಜಗತ್ ಕಿಂ** ಜಗತ್ತು ಏನು ? ಏನೂ ಅಲ್ಲ. ಎಂದು ಭಾವ. ಕಿಂತು ಈಶ್ವರಃ ಜಗತ್ಸ್ವಾಮಿಯು ಎಂದರ್ಥ. ಯಾರವನು ಎಂದರೆ **ಯಃ** ಈಶ್ವರಃ **ಅತ್ರ** ಭಾಗವತದಲ್ಲಿ **ಅಹೃದಿ** ಭಗವಂತನ ಸ್ನೇಹವಿಷಯದಲ್ಲಿ ಅಂದರೆ ಭಕ್ತಿವಿಷಯದಲ್ಲಿ (ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋऽಧಿಕಃ ಸ್ನೇಹೋ ಭಕ್ತಿರಿತೀರ್ಯತೇ)**ಕೃತಿಭಿಃ** ಭಾಗವತವಿಷಯಕಅಭ್ಯಾಸಾದಿ ವ್ಯಾಪಾರಗಳಿಂದ ಭಗವಂತನ ಸ್ನೇಹವಿಷಯದಲ್ಲಿ **ಕೃತಿಭಿಃ** ಪೂಜಾದಿಗಳಿಂದ **ಪರೈಃ** ತತ್ಪರರಾದವರಿಂದ **ಶುಶ್ರೂಷೂಭಿಃ** ಸೇವನೇಚ್ಛುಗಳಿಂದ **ಕ್ಷಣಾತ್** ಅಲ್ಪಕಾಲದಲ್ಲಿ **ಅವರುಧ್ಯತೇ** ಈಶ್ವರನು ಸ್ಥಿರೀಕೃತನಾಗುವನು. ಹಿಂದೆ ರುದ್ರಾದಿಗಳು ಜಗದ್ರಕ್ಷಕರಲ್ಲವೆಂದು ತಿಳಿಯಬಾರದೆಂದು ಹೇಳಿದೆ. ಅದು ಹೇಗೆ ಎಂದರೆ ಹೇಳುವರು **ಕಿಂ ವಾ** ಎಂದು. **ಈಶ್ವರಃ** ರುದ್ರ ಉಪಲಕ್ಷಣಯಾ ದುರ್ಗಾದಿಗಳು ಸತ್ ಕಿಂ(ಸದೇವ ಸೋಮ್ಯೇದಮಗ್ರ ಆಸೀತ್ ಎಂದು ಶ್ರುತಿ ಇರುವದರಿಂದ) ಜಗತ್ಕಾರಣರೇನು? ಅಲ್ಲ. **ಅತ್ರ** ರುದ್ರಾದಿಗಳ

ವಿಷಯದಲ್ಲಿ **ಕೃತಿಭಿಃ** ಯಂ ಕಾಮಯೇ ತಂತಮುಗ್ರಂ ಕೃಣೋಮಿ ಮುಂತಾದ ಶ್ರುತಿ ಇರುವದರಿಂದ ಜನ್ಮಾದಿಗಳನ್ನು ಮಾಡುವದರಿಂದ **ಏಃ** ಅಕಾರವಾಚ್ಯ ಭಗವಂತನ **ಈ** ಲಕ್ಷ್ಮೀ **ಅಸ್ಯ** ಎಂಬ ಷಷ್ಠಿಯಿಂದ ಅಧೀನತ್ವ ಹೇಳುವದು ಕಂಡಿದೆ. ಪರೈಃ ಎಂಬಲ್ಲಿ ಈ ಪದವಿಶ್ಲೇಷ ತಿಳಿಯಬೇಕು. ಪರಾ ಶ್ರೇಷ್ಠಾ ಪರಾ ಏ ಇತಿ. ಕಾ ಭಗವದಧೀನಾ ಯಾರು ಭಗವದಧೀನಳು(ಯಃ ಎಂದು ಸದ್ಯದಲ್ಲಿಯೆ)ಯಯಾ ಎಂದು ಅಧ್ಯಾಹಾರ **ಯಯಾ** ಯಾವ ಲಕ್ಷ್ಮೀದೇವಿಯಿಂದ **ಯಃ** ಜ್ಞಾನರೂಪನಾದ ಭಗವಂತನು **ಹೃದಿ** ತನ್ನ ವಕ್ಷಸ್ಥಳದಲ್ಲಿ **ಅವರುಧ್ಯತೇ** ಬಾಹುಪಾಶದಿಂದ ಬಂಧಿಸಲ್ಪಡುವನೋ. **ಸಾ** ಆ ಲಕ್ಷ್ಮೀದೇವಿಯು ಈ ಪ್ರಮೇಯವನ್ನು **ಅತ್ರ** ಭಾಗವತದಲ್ಲಿ **ಶುಶ್ರೂಷುಭಿಃ** ಕೇಳಲು ಉತ್ಸುಕರಾದವರಿಂದ **ಕ್ಷಣಾತ್** ಅಲ್ಪಕಾಲದಲ್ಲಿ ತಿಳಿಯಲ್ಪಡುವದು. ಕಿಂ ವಾ ಅಥವಾ **ಪರೈಃ** ಮಾಯಾವಾದಿಗಳಿಂದ(ನಾಸ್ತಿ ಪರಃ ಪರಮಾತ್ಮಾ ಯೇಷಾಂ ತೈಃ) ತಾವೇ ಪರಬ್ರಹ್ಮರೆಂಬ ಭಾವನೆಯಿಂದ ಬೇರೆ ಪರಬ್ರಹ್ಮನನ್ನು ಒಪ್ಪದಿರುವವರು. ಅಥವಾ ನಾಸ್ತಿಕರಿಂದ **ಅತ್ರಕೃತಿಭಿಃ** ಭಗವಂತನ ವಿಷಯದಲ್ಲಿ ಅಲಂಭಾವವುಳ್ಳವರು ಅವರಿಂದ **ಮಹಾಮುನಿಕೃತೇ** ಮಹಾ ವಿಚಾರಶೀಲ ಪುರಾಷಾರ್ಥಕ್ಕೆ ಹೇಳಲ್ಪಟ್ಟ ಭಗವಂತನು **ಅವರುಧ್ಯತೇ ಕಿಂ** ಮನಸ್ಸಿನಿಂದ ತಿಳಿಯಲ್ಪಡುವನೇ? ಸರ್ವಥಾ ಇಲ್ಲ. ಆದರೆ **ಈಶ್ವರಃ** ಸರ್ವೋತ್ಕೃಷ್ಟನು(ಏಕವಚನದಿಂದ ಒಬ್ಬನೇ) **ಸದ್ಯಃ ಸತ್** ಇಷ್ಟವನ್ನು **ಯಾಪಯತಿ** ಹೊಂದಿಸುವನು.

ಅಥವಾ ''ಸದಭಿವ್ಯಕ್ತರೂಪತ್ವಾತ್ ಕಾರ್ಯಮಿತ್ಯುಚ್ಯತೇ ಬುಧೈಃ'' ಎಂಬ ಮಾತಿನಂತೆ **ಸತ್** ಕಾರ್ಯವಾದ ದೇಹಾದಿಗಳನ್ನು **ಯಾಪಯತಿ** ತೊಲಗಿಸುವನು ಆದ್ದರಿಂದ **ಸದ್ಯಃ** ಅನಿಷ್ಟನಿವಾರಕ. ಹೃದಿ ಅಜ್ಞಾನಂ ಹರತಿ ಇತಿ **ಹೃತ್** ಜ್ಞಾನ ತಸ್ಮಿನ್ ಹೃದಿ ವಿಷಯಸಪ್ತಮೀ ಇದು ತೃತೀಯಾರ್ಥದಲ್ಲಿದೆ. ಕಾರಣ ಜ್ಞಾನದಿಂದ **ಶುಶ್ರೂಷುಭಿಃ** ಸೇವಿಸಲ್ಪಡುವುದರಿಂದ **ಅವರುಧ್ಯತೇ** ತತ್ ಎಂಬ ಪದವಿದೆ. ಶ್ರೀಮದ್ಭಾಗವತೇ ಕ್ಷಣಾತ್ ಜಾಯತೇ 'ದ್ವಿತೀಯಾರ್ಥೇ ತೃತೀಯಾರ್ಥೇ ಪಂಚಮ್ಯರ್ಥೇ ಚ ಸಪ್ತಮೀ । ಚತುರ್ಥ್ಯರ್ಥೇ ಚ ವಿಜ್ಞೇಯಾ ವಿವಯೇ ಇತಿ ಯಾ ವಿದುಃ । ಎಂದು ಮಹಾ ವ್ಯಾಕರಣದಲ್ಲಿದೆ.

> ಅಯಂ ಸರ್ವೇಷ್ಟದಾತಾ ಮೇ ಸರ್ವಾರಿಷ್ಟನಿವಾರಕಃ
> ಸರ್ವೋತ್ಕೃಷ್ಟೋಽಯಮೇವೈಕಃ ತದಿಯೋಽಹಂ ಸ ಮೇ ಪತಿಃ ।
> ಇತಿ ಜ್ಞಾನಂ ನಿಶ್ಚಿತಂ ಯತ್ ಸಾದೀಕ್ಷಾಭ್ಯಂತರಾ ಮತಾ ॥

ಎಂದು ಪರಮಶ್ರುತಿ ಇದೆ. ಇಲ್ಲಿ ಅತ್ರ ಎಂದು ಮೂರು ಸಲ ಹೇಳಿದ್ದು ಗ್ರಂಥಕರ್ತೃ ವಿಷಯ ಪ್ರಯೋಜನಗಳಿಗೆ ಐಕ್ಯ ತಿಳಿಸಲು.

ಈ ರೀತಿ ಆಪ್ತವಾಕ್ಯತ್ವ ವಿಷಯ ಪ್ರಯೋಜನ ಅಧಿಕಾರಿಗಳಿಗೆ ಮಹತ್ವ ಇರುವದರಿಂದ ಮಹಾಪ್ರಮಾಣ್ಯವಿದೆಯಾದ್ದರಿಂದ ಆರಂಭಣೀಯ ಎಂದು ಸಿದ್ಧಿಸುವದು. ಆದ್ದರಿಂದ ಪೂರ್ವ ಶ್ಲೋಕದಲ್ಲಿ ಮಾಡಿದ ಮಂಗಳವು ಯುಕ್ತವೇ.

ಒಟ್ಟಿನಲ್ಲಿ ವಿಷಯಾದಿಗಳನ್ನು ಹೀಗೆ ತಿಳಿಯಬಹುದು. ಶ್ರೀಮದ್ಭಾಗವತಕ್ಕೆ ಪ್ರಧಾನ ವಿಷಯನಾದವನು ಶ್ರೀಹರಿಯು ತದನಂತರ ನಿವೃತ್ತಧರ್ಮ ವಿಷಯ ನಿರ್ಮತ್ಸರರಾದ ಸಜ್ಜನರು ಅಧಿಕಾರಿಗಳು ಮೋಕ್ಷನೇ ಪರಮ ಪ್ರಯೋಜನ. ಇವುಗಳಿಗೆ ಯಥಾಯೋಗ್ಯಸಂಬಂಧವು ಗ್ರಂಥದ ವಿಷಯಗಳಿಗೆ.

1. (ಗ್ರಂಥಕ್ಕೆ ವಿಷಯ)ಪ್ರತಿಪಾದ್ಯಪ್ರತಿಪಾದಕತ್ವವೇ.

2. ಗ್ರಂಥ ಅಧಿಕಾರಿಗಳಿಗೆ ಶ್ರಾವ್ಯ ಶ್ರೋತೃತ್ವರೂಪವು.

3. ಗ್ರಂಥ ಪ್ರಯೋಜನಗಳಿಗೆ ಪ್ರಾಪ್ಯಪ್ರಾಪಕತ್ವರೂಪ.

4. ಅಧಿಕಾರಿ ವಿಷಯಗಳಿಗೆ ಜ್ಞಾತೃಜ್ಞೇಯತ್ವರೂಪ.

5. ಅಧಿಕಾರಿಪ್ರಯೋಜನಗಳಿಗೆ ಅಪೇಕ್ಷ್ಯಅಪೇಕ್ಷಕತ್ವ ರೂಪ.

6. ವಿಷಯ ಪ್ರಯೋಜನಗಳಿಗೆ ಸಾಧ್ಯಸಾಧನತ್ವರೂಪ ಸಂಬಂಧ. ಅದು ಸ್ವನಿರ್ವಾಹಕ ಅದಕ್ಕೆ ಬೇರೆ ಸಂಬಂಧ ಬೇಕಾಗುವದಿಲ್ಲ.

**ಮಹಾಮುನಿಕೃತೇ** ಸರ್ವಜ್ಞರಾದ ಬಾದರಾಯಣರಿಂದ ರಚಿತವಾಗಿದೆ ಆದ್ದರಿಂದ ವಕ್ತ್ರಾನೂಕೂಲ್ಯ(ವಿವಕ್ಷಿತಾರ್ಥತತ್ವಜ್ಞಾನ ವಿವಕ್ಷಾ ಕರಣಪಾಟವಗಳೆಂಬ ಆಪ್ತಿಯು ಸಿದ್ಧವಾದಂತಾಯಿತು.) ಇದಕ್ಕೆ ಇನ್ನೊಂದರ್ಥ ನಾರದರ ಪ್ರಾರ್ಥನಾನುಸಾರ ಎಂದು. ಇದರಿಂದ ಪರೀಕ್ಷಿತನ ಮೋಕ್ಷಕ್ಕಾಗಿ ಎಂಬುದರಿಂದ ಶುಕಾಚಾರ್ಯರ ಅಧ್ಯಾಪನಕ್ಕಾಗಿ ಎಂದದ್ದರಿಂದ ಶುಕಮಹರ್ಷಿಗಳು ರುದ್ರದೇವರಾದ್ದರಿಂದ ಶ್ರೋತ್ರಾನುಕೂಲ್ಯ. (ತತ್ವಜ್ಞಾನಯೋಗ್ಯತಾ ವಕ್ತೃ ಪ್ರೇಮಾಸ್ಪದತ್ವ)ಮೋಕ್ಷಕ್ಕಾಗಿ ಎಂದದ್ದರಿಂದ ಪ್ರಸಂಗಾನುಕೂಲ್ಯ,ಶ್ರೋತೃ ಪ್ರಯೋಜನೋದ್ದೇಶ್ಯತ್ವಗಳು ಇರುವುದರಿಂದ ಆಪ್ತಪ್ರಣೀತಭಾಗವತ ಪರಮ ಪ್ರಮಾಣವೆಂದಾಯಿತು.

ವಿಷಯದಲ್ಲಿ **ಕೃತಿಭಿಃ** ಯಂ ಕಾಮಯೇ ತಂತಮುಗ್ರಂ ಕೃಣೋಮಿ ಮುಂತಾದ ಶ್ರುತಿ ಇರುವದರಿಂದ ಜನ್ಮಾದಿಗಳನ್ನು ಮಾಡುವದರಿಂದ **ಏಃ** ಅಕಾರವಾಚ್ಯ ಭಗವಂತನ **ಈ** ಲಕ್ಷ್ಮೀ **ಅಸ್ಯ** ಎಂಬ ಷಷ್ಠಿಯಿಂದ ಅಧೀನತ್ವ ಹೇಳುವದು ಕಂಡಿದೆ. ಪರೈಃ ಎಂಬಲ್ಲಿ ಈ ಪದವಿಶ್ಲೇಷ ತಿಳಿಯಬೇಕು. ಪರಾ ಶ್ರೇಷ್ಠಾ ಪರಾ ಏ ಇತಿ. ಕಾ ಭಗವದಧೀನಾ ಯಾರು ಭಗವದಧೀನಳು(ಯಃ ಎಂದು ಸದ್ಯದಲ್ಲಿಯೆ)ಯಯಾ ಎಂದು ಅಧ್ಯಾಹಾರ **ಯಯಾ** ಯಾವ ಲಕ್ಷ್ಮೀದೇವಿಯಿಂದ **ಯಃ** ಜ್ಞಾನರೂಪನಾದ ಭಗವಂತನು **ಹೃದಿ** ತನ್ನ ವಕ್ಷಸ್ಥಳದಲ್ಲಿ **ಅವರುಧ್ಯತೇ** ಬಾಹುಪಾಶದಿಂದ ಬಂಧಿಸಲ್ಪಡುವನೋ. **ಸಾ** ಆ ಲಕ್ಷ್ಮೀದೇವಿಯು ಈ ಪ್ರಮೇಯವನ್ನು **ಅತ್ರ** ಭಾಗವತದಲ್ಲಿ **ಶುಶ್ರೂಷುಭಿಃ** ಕೇಳಲು ಉತ್ಸುಕರಾದವರಿಂದ **ಕ್ಷಣಾತ್** ಅಲ್ಪಕಾಲದಲ್ಲಿ ತಿಳಿಯಲ್ಪಡುವದು. ಕಿಂ ವಾ ಅಥವಾ **ಪರೈಃ** ಮಾಯಾವಾದಿಗಳಿಂದ(ನಾಸ್ತಿ ಪರಃ ಪರಮಾತ್ಮಾ ಯೇಷಾಂ ತೈಃ) ತಾವೇ ಪರಬ್ರಹ್ಮರೆಂಬ ಭಾವನೆಯಿಂದ ಬೇರೆ ಪರಬ್ರಹ್ಮನನ್ನು ಒಪ್ಪದಿರುವವರು. ಅಥವಾ ನಾಸ್ತಿಕರಿಂದ **ಅತ್ರಕೃತಿಭಿಃ** ಭಗವಂತನ ವಿಷಯದಲ್ಲಿ ಅಲಂಭಾವವುಳ್ಳವರು ಅವರಿಂದ **ಮಹಾಮುನಿಕೃತೇ** ಮಹಾ ವಿಚಾರಶೀಲ ಪುರಾಷಾರ್ಥಕ್ಕೆ ಹೇಳಲ್ಪಟ್ಟ ಭಗವಂತನು **ಅವರುಧ್ಯತೇ ಕಿಂ** ಮನಸ್ಸಿನಿಂದ ತಿಳಿಯಲ್ಪಡುವನೇ? ಸರ್ವಥಾ ಇಲ್ಲ. ಆದರೆ **ಈಶ್ವರಃ** ಸರ್ವೋತ್ಕೃಷ್ಟನು(ಏಕವಚನದಿಂದ ಒಬ್ಬನೇ) **ಸದ್ಯಃ ಸತ್** ಇಷ್ಟವನ್ನು **ಯಾಪಯತಿ** ಹೊಂದಿಸುವನು.

ಅಥವಾ ''ಸದಭಿವ್ಯಕ್ತರೂಪತ್ವಾತ್ ಕಾರ್ಯಮಿತ್ಯುಚ್ಯತೇ ಬುಧೈಃ'' ಎಂಬ ಮಾತಿನಂತೆ **ಸತ್** ಕಾರ್ಯವಾದ ದೇಹಾದಿಗಳನ್ನು **ಯಾಪಯತಿ** ತೊಲಗಿಸುವನು ಆದ್ದರಿಂದ **ಸದ್ಯಃ** ಅನಿಷ್ಟನಿವಾರಕ. ಹೃದಿ ಅಜ್ಞಾನಂ ಹರತಿ ಇತಿ **ಹೃತ್** ಜ್ಞಾನ ತಸ್ಮಿನ್ ಹೃದಿ ವಿಷಯಸಪ್ತಮೀ ಇದು ತೃತೀಯಾರ್ಥದಲ್ಲಿದೆ. ಕಾರಣ ಜ್ಞಾನದಿಂದ **ಶುಶ್ರೂಷುಭಿಃ** ಸೇವಿಸಲ್ಪಡುವುದರಿಂದ **ಅವರುಧ್ಯತೇ** ತತ್ ಎಂಬ ಪದವಿದೆ. ಶ್ರೀಮದ್ಭಾಗವತೇ ಕ್ಷಣಾತ್ ಜಾಯತೇ 'ದ್ವಿತೀಯಾರ್ಥೇ ತೃತೀಯಾರ್ಥೇ ಪಂಚಮ್ಯರ್ಥೇ ಚ ಸಪ್ತಮೀ । ಚತುರ್ಥ್ಯರ್ಥೇ ಚ ವಿಜ್ಞೇಯಾ ವಿವಯೇ ಇತಿ ಯಾ ವಿದುಃ । ಎಂದು ಮಹಾ ವ್ಯಾಕರಣದಲ್ಲಿದೆ.

ಅಯಂ ಸರ್ವೇಷ್ಟದಾತಾ ಮೇ ಸರ್ವಾರಿಷ್ಟನಿವಾರಕಃ
ಸರ್ವೋತ್ಕೃಷ್ಟೋಽಯಮೇವೈಕಃ ತದಿಯೋಽಹಂ ಸ ಮೇ ಪತಿಃ ।
ಇತಿ ಜ್ಞಾನಂ ನಿಶ್ಚಿತಂ ಯತ್ ಸಾದೀಕ್ಷಾಭ್ಯಂತರಾ ಮತಾ ॥

ಎಂದು ಪರಮಶ್ರುತಿ ಇದೆ. ಇಲ್ಲಿ ಅತ್ರ ಎಂದು ಮೂರು ಸಲ ಹೇಳಿದ್ದು ಗ್ರಂಥಕರ್ತೃ ವಿಷಯ ಪ್ರಯೋಜನಗಳಿಗೆ ಐಕ್ಯ ತಿಳಿಸಲು.

ಈ ರೀತಿ ಆಪ್ತವಾಕ್ಯತ್ವ ವಿಷಯ ಪ್ರಯೋಜನ ಅಧಿಕಾರಿಗಳಿಗೆ ಮಹತ್ವ ಇರುವದರಿಂದ ಮಹಾಪ್ರಮಾಣ್ಯವಿದೆಯಾದ್ದರಿಂದ ಆರಂಭಣೀಯ ಎಂದು ಸಿದ್ಧಿಸುವದು. ಆದ್ದರಿಂದ ಪೂರ್ವ ಶ್ಲೋಕದಲ್ಲಿ ಮಾಡಿದ ಮಂಗಳವು ಯುಕ್ತವೇ.

ಒಟ್ಟಿನಲ್ಲಿ ವಿಷಯಾದಿಗಳನ್ನು ಹೀಗೆ ತಿಳಿಯಬಹುದು. ಶ್ರೀಮದ್ಭಾಗವತಕ್ಕೆ ಪ್ರಧಾನ ವಿಷಯನಾದವನು ಶ್ರೀಹರಿಯು ತದನಂತರ ನಿವೃತ್ತಧರ್ಮ ವಿಷಯ ನಿರ್ಮತ್ಸರರಾದ ಸಜ್ಜನರು ಅಧಿಕಾರಿಗಳು ಮೋಕ್ಷನೇ ಪರಮ ಪ್ರಯೋಜನ. ಇವುಗಳಿಗೆ ಯಥಾಯೋಗ್ಯಸಂಬಂಧವು ಗ್ರಂಥದ ವಿಷಯಗಳಿಗೆ.

1. (ಗ್ರಂಥಕ್ಕೆ ವಿಷಯ)ಪ್ರತಿಪಾದ್ಯಪ್ರತಿಪಾದಕತ್ವವೇ.

2. ಗ್ರಂಥ ಅಧಿಕಾರಿಗಳಿಗೆ ಶ್ರಾವ್ಯ ಶ್ರೋತೃತ್ವರೂಪವು.

3. ಗ್ರಂಥ ಪ್ರಯೋಜನಗಳಿಗೆ ಪ್ರಾಪ್ಯಪ್ರಾಪಕತ್ವರೂಪ.

4. ಅಧಿಕಾರಿ ವಿಷಯಗಳಿಗೆ ಜ್ಞಾತೃಜ್ಞೇಯತ್ವರೂಪ.

5. ಅಧಿಕಾರಿಪ್ರಯೋಜನಗಳಿಗೆ ಅಪೇಕ್ಷ್ಯಅಪೇಕ್ಷಕತ್ವ ರೂಪ.

6. ವಿಷಯ ಪ್ರಯೋಜನಗಳಿಗೆ ಸಾಧ್ಯಸಾಧನತ್ವರೂಪ ಸಂಬಂಧ. ಅದು ಸ್ವನಿರ್ವಾಹಕ ಅದಕ್ಕೆ ಬೇರೆ ಸಂಬಂಧ ಬೇಕಾಗುವದಿಲ್ಲ.

**ಮಹಾಮುನಿಕೃತೇ** ಸರ್ವಜ್ಞರಾದ ಬಾದರಾಯಣರಿಂದ ರಚಿತವಾಗಿದೆ ಆದ್ದರಿಂದ ವಕ್ತ್ರಾನೂಕೂಲ್ಯ(ವಿವಕ್ಷಿತಾರ್ಥತತ್ವಜ್ಞಾನ ವಿವಕ್ಷಾ ಕರಣಪಾಟವಗಳೆಂಬ ಆಪ್ತಿಯು ಸಿದ್ಧವಾದಂತಾಯಿತು.) ಇದಕ್ಕೆ ಇನ್ನೊಂದರ್ಥ ನಾರದರ ಪ್ರಾರ್ಥನಾನುಸಾರ ಎಂದು. ಇದರಿಂದ ಪರೀಕ್ಷಿತನ ಮೋಕ್ಷಕ್ಕಾಗಿ ಎಂಬುದರಿಂದ ಶುಕಾಚಾರ್ಯರ ಅಧ್ಯಾಪನಕ್ಕಾಗಿ ಎಂದದ್ದರಿಂದ ಶುಕಮಹರ್ಷಿಗಳು ರುದ್ರದೇವರಾದ್ದರಿಂದ ಶ್ರೋತ್ರಾನುಕೂಲ್ಯ. (ತತ್ವಜ್ಞಾನಯೋಗ್ಯತಾ ವಕ್ತೃ ಪ್ರೇಮಾಸ್ಪದತ್ವ)ಮೋಕ್ಷಕ್ಕಾಗಿ ಎಂದದ್ದರಿಂದ ಪ್ರಸಂಗಾನುಕೂಲ್ಯ,ಶ್ರೋತೃ ಪ್ರಯೋಜನೋದ್ದೇಶ್ಯತ್ವಗಳು ಇರುವುದರಿಂದ ಆಪ್ತಪ್ರಣೀತಭಾಗವತ ಪರಮ ಪ್ರಮಾಣವೆಂದಾಯಿತು.

**ದುರ್ಘಟಭಾವದೀಪಿಕಾ ವಿಶೇಷಾರ್ಥ**

**ವಾಸ್ತವಂ** ನಿತ್ಯನಿರಸ್ತದೋಷಪೂರ್ಣಗುಣಂ ಎಂದರ್ಥ ಹೇಳಿದೆಯಷ್ಟೇ. ಅದು ವಾಸ್ತವ ಶಬ್ದದಿಂದ ಹೇಗೆ ಬರುವದು ಎಂದರೆ ಇದರಲ್ಲಿ ವಾಶಬ್ದವು ಗತ್ಯರ್ಥಕ ವಾ ಧಾತುವಿಗೆ ಕರ್ಮಣಿ ಕ್ವಿಪ್ ಪ್ರತ್ಯಯದಿಂದ ಸಿದ್ಧವಾಗಿದೆ. ಆದ್ದರಿಂದ ಗತ ಎಂದರ್ಥ. ಸಂಕೋಚಕಾರಣವಿಲ್ಲದ್ದರಿಂದ ನಿತ್ಯಾಪಗತತ್ವವನ್ನು ತಿಳಿಸುವದಾಗಿ ನಿತ್ಯನಿರಸ್ತತ್ವವನ್ನು ತಿಳಿಸುವದು. ಅಸ ಎಂಬ ಶಬ್ದವು ಅಸುಕ್ಷೇಪಣೆ ಎಂಬ ಧಾತುವಿನ ಕರ್ಮಣಿ ಕ್ವಿಪ್ ಪ್ರತ್ಯಾಯಾಂತರೂಪವು. ಆದ್ದರಿಂದ ನಿರಸನೀಯವಾದ ದೋಷವನ್ನು ತಿಳಿಸುವದು. ವಾ ಅಸು ಯಸ್ಯ ಸಃ ವಾಸುಃ ಎಂದರೆ ನಿತ್ಯನಿರಸ್ತದೋಷಂ ಎಂಬ ಅರ್ಥ. ತ ಶಬ್ದವು ತನು ವಿಸ್ತಾರೆ ಎಂಬ ಧಾತುವಿನಿಂದ ಭಾವಾರ್ಥೇ ಡ ಪ್ರತ್ಯಯಮಾಡಿದಾಗ ಸಿದ್ದವಾದುದು. ಆದ್ದರಿಂದ ವಿಸ್ತಾರವಾಚಕವಾಗಿದೆ. ಯೋಗ್ಯತಯಾ ಗುಣಗಳ ಸಂಬಂಧವಾದಾಗ ಗುಣ ವಿಸ್ತಾರವನ್ನು ತಿಳಿಸುವದು ವ ಶಬ್ದವು ಅಂತರ್ಣೀತ ಣ್ಯರ್ಥಕವಾದ ವೃತು ವರ್ತನೆ ಎಂಬ ಧಾತುವಿನ ಕರ್ತರಿ ಡಪ್ರತ್ಯಯದಿಂದ ಆದದ್ದು. ಅಂತು ತವಂ ಎಂದರೆ ಗುಣವಿಸ್ತಾರವನ್ನು ತನ್ನಲ್ಲಿರಿಸಿಕೊಳ್ಳುವ ಎಂದರ್ಥವಾಗುವದು. ಈಗ ವಾಸ್ ಶಬ್ದಕ್ಕೆ ತವಶಬ್ದದೊಡನೆ ಕರ್ಮಧಾರಯ ಮಾಡಿದರೆ ವಾಸ್ ಚ ತತ್ತ್ವಂ ಚ ವಾಸ್ತವಂ ಎಂಬುದರಿಂದ 'ನಿತ್ಯನಿರಸ್ತದೋಷಪೂರ್ಣಗುಣಂ' ಎಂಬರ್ಥ ಲಭಿಸುವುದು.

2. **ವಸ್ತು** ಅಪ್ರತಿಹತಂ ನಿತ್ಯಂ ಈ ಅರ್ಥ ಹೇಗೆ ಲಭಿಸುವುದು. ವ್ ಎಂಬ ಶಬ್ದ ಗತ್ಯರ್ಥಕ ವಾಧಾತುವಿಗೆ ಕರ್ಮಣಿ ಡ್ವಿ ಪ್ರತ್ಯಯದಿಂದ ಆದುದು. ಆದ್ದರಿಂದ ಅಪಗತ ಎಂದರ್ಥವಾಗುವದು. ಅ ಶಬ್ದವು ಅಜ ಹರಣೇ ಎಂಬ ಧಾತುವಿಗೆ ಭಾವೇ ಡ ಪ್ರತ್ಯಯ ಮಾಡಿದಾಗ ಆದುದು. ಕಾರಣ ಅ ಶಬ್ದಕ್ಕೆ ಹರಣ ಪ್ರಹರಣ ಅರ್ಥಾತ್ ಪ್ರತಿಹತಿ ಎಂಬರ್ಥವಾಗುವದು. ಈಗ ವ್ ಅಪಗತಾ ಅ - ಪ್ರತಿಹತಿಃ ಯಸ್ಯ ಸಃ ವಃ ಎಂದು ಬಹುವ್ರೀಹಿ ಮಾಡಿದಾಗ ಅಪ್ರತಿಹತಂ ಎಂಬ ಅರ್ಥ ದೊರೆಯುವುದು. ಸ್ತು ಶಬ್ದವು ಸತ್ತಾರ್ಥಕ ಅಸ ಧಾತುವಿಗೆ ಕರ್ತರಿ ತುನ್ ಪ್ರತ್ಯಯ ಮಾಡಿ ಅಕಾರಲೋಪವಾಗಿ ಆದ ರೂಪ. ಸಂಕೋಚ ಕಾರಣವಿಲ್ಲದ್ದರಿಂದ ಸಾರ್ವಕಾಲಿಕ ಸತ್ತಾವನ್ನು ತಿಳಿಸುವದು. ಕಾರಣ ಸ್ತು ಶಬ್ದದಿಂದ ನಿತ್ಯಂ ಎಂಬ ಅರ್ಥ ಲಭಿಸುವುದು ಎಂದು ತಿಳಿಯಬೇಕು.

**ಶ್ರೀಮದ್ಭಾಗವತ ಪ್ರಶಂಸೆ**

ಶ್ರೀಮದ್ಭಾಗವತದ ಅಧ್ಯಯನದ ಪ್ರಯೋಜನವೇನೆಂದು ತಿಳಿದರೂ ಭಾಗವತದ ಪ್ರಶಂಸೆ ಹಾಗು ಅಧ್ಯಯನ ಮಾಡಬೇಕೆಂಬ ವಿಧಿಯನ್ನು ತಿಳಿದಾಗಲೇ ಶೀಘ್ರದಲ್ಲಿ ಪ್ರವರ್ತರಾಗುವರು ಕಾರಣ ಪ್ರಶಂಸೆ ಮಾಡಿ ವಿಧಿ ಮಾಡುವರು.

**ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಮ್ ।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ ॥೩॥**

**ಭುವಿ** ಭೂಲೋಕದಲ್ಲಿ(ಮರ್ತ್ಯಲೋಕದಲ್ಲಿ **ಭಾವುಕಾಃ** ಇರುವ ಸ್ವಭಾವದವರಾದ **ರಸಿಕಾಃ** ರಸಜ್ಞರಾದ ಸಜ್ಜನರಾದ ನೀವು **ನಿಗಮಕಲ್ಪತರೋಃ** ವೇದವೆಂಬ ಕಲ್ಪವೃಕ್ಷದಿಂದ(ಸರ್ವಪುರುಷಾರ್ಥಪ್ರದವಾದ್ದರಿಂದ) **ಭಗವತಾ** ವೇದವ್ಯಾಸರಿಂದ **ಗಲಿತಂ** ಬೀಳಿಸಲ್ಪಟ್ಟ **ಫಲಂ** ವೇದಾರ್ಥಸಾರವಾದ್ದರಿಂದ ಫಲದಂತಿರುವ **ಶುಕಮುಖಾತ್** ಶುಕಾಚಾರ್ಯರೇ ಪ್ರಧಾನರಾಗಿವುಳ್ಳ ಸೂತ ವೊದಲಾದವರಿಂದ **ಅಮೃತದ್ರವಸಂಯುತಂ** ಮೋಕ್ಷಕ್ಕಾಗಿ ಗುರುಗಳ ಉಪದೇಶಾನುಸಾರ ವೇದವ್ಯಾಖ್ಯಾನಪ್ರದರ್ಶನದಿಂದ ಕೂಡಿದ ಯಾವ **ಭಾಗವತಂ** ಭಾಗವತವಿದೆಯೋ ಅದರ **ರಸಂ** ರಸಸ್ಥಾನೀಯವಾದ ತಾತ್ಪರ್ಯವಿಷಯೀಭೂತ ಅರ್ಥವನ್ನು **ಮುಹುಃ** ಪುನಃ ಪುನಃ **ಆಲಯಂ** ಮೋಕ್ಷದಲ್ಲಿಯೂ **ಪಿಬತ** ಪಾನ ಮಾಡಿರಿ ಶ್ರವಣಾದಿಗಳಿಂದ ಆಸ್ವಾದನೆ ಮಾಡಿರಿ. ಇದು ಗ್ರಂಥಪಕ್ಷದಲ್ಲಿ ಹಣ್ಣು ಎಂದಾಗ ಶುಕ ಎಂದರೆ ಗಿಳಿ ಅದರ ಮುಖ ಸ್ಪರ್ಶದಿಂದ **ಅಮೃತಃ** ಅಮೃತತುಲ್ಯವಾದ **ದ್ರವಃ** ರಸದಿಂದ ಕೂಡಿದ ಎಂದರ್ಥ. **ಅಹೋ** ಎಂದು ಆಸ್ವಾದನದಿಂದ ವ್ಯಾಸರು ನನ್ನಿಂದ ಉದರಿದ ಹಣ್ಣಿನ ರಸಪಾನ ಮಾಡುವವರಿಗೆ ನಿಮ್ಮನ್ನು ನೋಡಿ ನನಗೆ ನಿಮ್ಮಲ್ಲಿ ಬಹಳ ಪ್ರೀತಿ ಉಂಟಾಗುವದು. ನಿಮಗೆ ಎಲ್ಲ ಪುರುಷಾರ್ಥಗಳು ಲಭಿಸುವವು. ಎಂದು ಸೂಚಿಸುವರು.

ಹಿಂದಿನ ಶ್ಲೋಕದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದರಿಂದ ಪ್ರೇಕ್ಷಾವಂತರಿಗೆ ಪ್ರವೃತ್ತಿ ಉಂಟಾಗುವುದು. ಮತ್ತೇಕೆ ಈ ಶ್ಲೋಕದಲ್ಲಿ ಭಾಗವತದ ಪ್ರಶಂಸೆ ಮಾಡಿ ಅದರ ಶ್ರವಣ ವಿಧಾನ ಮಾಡುವರು ಎಂಬ ಶಂಕೆಯನ್ನು ನಿರಾಕರಿಸುವವರಾಗಿ ಶ್ರೀಮದಾಚಾರ್ಯರು ಈ ಶ್ಲೋಕಕ್ಕೆ ಅವತಾರಿಕೆಯನ್ನು ಕೊಡುವರು .

*ಭಾಗವತತಾತ್ಪರ್ಯ-*

ಜ್ಞಾತಫಲಸ್ಯಾಪಿ ಪ್ರಶಂಸಾವಿಧಿಭ್ಯಾಂ ಕ್ಷಿಪ್ರಪ್ರವೃತ್ತಿರ್ಭವತೀತಿ ಪ್ರಶಸ್ಯ ವಿಧತ್ತೇ । ನಿಗಮಕಲ್ಪತರೋರಿತಿ । ಭಗವತಾ ಗಲಿತಂ । ಶುಕೇನ ದ್ರವೀಕೃತಂ । ಉಕ್ತಂ ಚ ಬ್ರಹ್ಮಾಂಡೇ -

''ಧರ್ಮಪುಷ್ಪಸ್ತ್ವರ್ಥಪತ್ರಃ ಕಾಮಪಲ್ಲವಸಂಯುತಃ ।
ಮಹಾಮೋಕ್ಷಫಲೋ ವೃಕ್ಷೋ ವೇದೋಽಯಂ ಸಮುದೀರಿತಃ ॥

ಶಾತಿತಾನಿ ಫಲಾನೀಹ ಕೃಷ್ಣದ್ವೈಪಾಯನೇನ ತು ।
ಭಾರತಾದೀನಿ (ಭಾರತಾಖ್ಯಾನಿ)ಯಾನೀಹ ತಥಾ ಭಾಗವತಂ ಭುವಿ ॥

ಅದ್ರೀಕೃತಾನಿ ತಾನೀಹ ಶುಕ ಪ್ರಭೃತಿಭಿರ್ಜನೈಃ ।
ಖ್ಯಾಪಯದ್ಭಿರ್ಗುರುಪ್ರೋಕ್ತಾನ್ ವೇದಾರ್ಥಾನ್ ಗ್ರಂಥನಿಷ್ಠಿತಾನ್ ॥

ಕಾನಿಚಿದ್ದರ್ಶಯಾಮಾಸ ವೃಕ್ಷಸ್ಯಾಗ್ರೇ ಫಲಾನಿ ತು ।
ವ್ಯಾಚಕ್ಷಮಾಣೋ ವೇದಾರ್ಥಂ ಭಗವಾಂಲ್ಲೋಕಪೂಜಿತಃ ॥

ಏತೇಷಾಮಥ ತೇಷಾಂ ವಾ ರಸಾನ್ ಪಿಬತ ಸಜ್ಜನಾಃ ।
ಆ ಮೋಕ್ಷಾನ್ಮಹತೀ ತೃಪ್ತಿರಹೋ ಮೇ ಪಶ್ಯತೋ ಭವೇತ್ ॥ ಇತಿ ॥

ವಿಷಯ ಪ್ರಯೋಜನಾದಿಗಳನ್ನು ತಿಳಿದವನಿಗೂ ಗ್ರಂಥದ ಪ್ರಶಂಸೆ ಗ್ರಂಥ ಶ್ರವಣಾದಿವಿಧಿಗಳಿಂದ ಶೀಘ್ರದಲ್ಲಿ ಪ್ರವೃತ್ತಿಯುಂಟಾಗುತ್ತದೆ. ಆದಕಾರಣ ನಿಗಮಕಲ್ಪತರುವಿನ ಫಲವೆಂದು ಭಾಗವತವನ್ನು ಹೊಗಳಿ ಶ್ರವಣ ಮಾಡಬೇಕೆಂದು ವಿಧಿಸುತ್ತಾರೆ. ವೇದವ್ಯಾಸರಿಂದ ಆಯಾಸವಿಲ್ಲದೇ ಆವಿರ್ಭೂತವಾದುದು. ಶುಕಾಚಾರ್ಯರೇ ಮೊದಲಾದವರಿಂದ ಪರೀಕ್ಷಿತ್ ಮೊದಲಾದ ಶಿಷ್ಯಪರಂಪರೆಗೆ ವ್ಯಾಖ್ಯಾನ ಮಾಡಲ್ಪಟ್ಟದ್ದು. ಧರ್ಮವು ಮೋಕ್ಷಕ್ಕೆ, ಪುಷ್ಪ ಫಲಕ್ಕೆ ಕಾರಣವಾದ್ದರಿಂದ ವೇದವೆಂಬ ವೃಕ್ಷವು ಧರ್ಮವೇ ಪುಷ್ಪವಾಗಿ ಉಳ್ಳದ್ದು.(ಅರ್ಥವು ಧರ್ಮಕ್ಕೆ, ಪತ್ರಗಳು ಪುಷ್ಪಕ್ಕೆ ಕಾರಣವಾದಂತೆ)ಅರ್ಥವೇ ಪತ್ರ(ಎಲೆ)ವಾಗಿವುಳ್ಳದ್ದು ಕಾಮಗಳೆಂಬ ಚಿಗುರೆಲೆಗಳಿಂದ ಕೂಡಿದ್ದು ಶ್ರೇಷ್ಠವಾದ ಮೋಕ್ಷವೇ ಮುಖ್ಯ ಫಲವಾಗಿವುಳ್ಳದ್ದು. ವೇದಾರ್ಥಗಳನ್ನು ಹೇಳುವ ಭಾರತ-ಭಾಗವತಾದಿಗಳು ಭೂಮಿಯಲ್ಲಿ ಬಾದರಾಯಣರಿಂದ ಆವಿರ್ಭೂತವಾಗಿವೆ. ಅಂತಹ ಭಾಗವತಾದಿ ಗ್ರಂಥಗಳಲ್ಲಿ ಹೇಳಿದ ವೇದಾರ್ಥಗಳನ್ನು ಗುರುಗಳ ಉಪದೇಶಾನುಸಾರ ವ್ಯಾಖ್ಯಾನಿಸಿದ ಶುಕಾಚಾರ್ಯರೇ ಮೊದಲಾದವರಿಂದ ದ್ರವೀಕೃತವಾಗಿವೆ. ವೇದಾರ್ಥಗಳನ್ನು

ಉಪದೇಶಮಾಡುವ ಲೋಕಪೂಜಿತರಾದ ವೇದವ್ಯಾಸರು ವೇದವೆಂಬ ವೃಕ್ಷದ ಫಲರೂಪಗಳಾದ(ವೇದಾರ್ಥ ಹೇಳುವ)ಪಂಚರಾತ್ರ ಮೂಲರಾಮಾಯಣಾದಿಗಳಿಂದ ಮೊದಲೇ ಮಾಡಲ್ಪಟ್ಟವುಗಳನ್ನು ಉಪದೇಶಿಸಿದರು. ಭಾರತ ಭಾಗವತಾದಿ ಗ್ರಂಥಗಳನ್ನು ತಾವು ಮಾಡಿ ಶಿಷ್ಯರಿಗೆ ಉಪದೇಶಿಸಿದರು. ಎಲೇ ಸಜ್ಜನರೇ ಈ ಭಾರತಾದಿ ಗ್ರಂಥಗಳ ಮತ್ತು ಪಂಚರಾತ್ರಾದಿ ಗ್ರಂಥಗಳ ತಾತ್ಪರ್ಯಾರ್ಥಗಳ ಶ್ರವಣಾದಿಗಳನ್ನು ಯಾವಾಗಲು ಮಾಡಬೇಕು. ಶ್ರವಣಮಾಡುವವರನ್ನು ನೋಡಿ ನನಗೆ ಮಹಾಪ್ರೀತಿಯುಂಟಾಗುತ್ತದೆ ಎಂದು ಬ್ರಹ್ಮಾಂಡದಲ್ಲಿದೆ.

(ವಿರೋಧಪರಿಹಾರರೂಪವಾದ ವಿಶೇಷಾರ್ಥ) ಮೊದಲನೆಯ ಶ್ಲೋಕದಿಂದ ಮಂಗಲಾಚರಣೆ ಮಾಡಿ ಎರಡನೆಯ ಶ್ಲೋಕದಿಂದ ಗ್ರಂಥದ ಪ್ರಾಮಾಣ್ಯವನ್ನೂ (ವಿಷಯಾದಿಗಳನ್ನು)ಹೇಳಿದ್ದಾಯಿತು. ಶ್ರೀಹರಿಯು ಮೂಲರೂಪದಿಂದ ಉಪದೇಶ ಮಾಡುವದು ಚತುರ್ಮುಖ ಬ್ರಹ್ಮನಿಗೆ ಮಾತ್ರ ಎಂಬ ನಿಯಮವಿದೆ. ಮೂಲರೂಪದಿಂದ ಬ್ರಹ್ಮನಿಗೆ ಈ ಭಾಗವತವನ್ನು ಉಪದೇಶ ಮಾಡಿ ಅವತಾರರೂಪದಲ್ಲಿ ಈ ನಿಯಮವಿಲ್ಲವೆಂದು ತಿಳಿಸಲು ಬಾಲಕರ ರೀತಿಯಂತೆ ಬ್ರಹ್ಮದೇವರಿಂದ ಕಲಿತ ನಾರದರಿಂದ ಪರೀಕ್ಷೆಗಾಗಿ ತಾವು ಹೇಳಿದ ಭಾಗವತವನ್ನು ಅವತಾರರೂಪದಿಂದ ಕೇಳಿ ರುದ್ರಾವತಾರರಾದ ಶುಕಾಚಾರ್ಯರಿಗೆ ಹೇಳಿದ್ದರಿಂದ ಮೂರುದೇವತೆಗಳ ಸಂಬಂಧವಿದ್ದುದರಿಂದ ಗಂಗಾನದಿಯಂತೆ ಭಾಗವತಕ್ಕೆ ಮಹಾಫಲವಿದೆ ಎಂದು ತಿಳಿಸುತ್ತಾ ಗಂಗಾದೇವಿಯು ನಾರದರಿಗೆ ''ಮಜ್ಜಂತಿ ಮುನಯಃ ಸರ್ವೇ ತ್ವಮೇಕಃ ಕಿಂ ನ ಮಜ್ಜಸಿ'' ಎಲ್ಲ ಮುನಿಗಳು ನನ್ನಲ್ಲಿ ಮುಳುಗುವಾಗ ನೀನು ಮಾತ್ರ ಏಕೆ ಮುಳುಗುವದಿಲ್ಲ ಎಂದು ಪ್ರಶ್ನಿಸಿದಾಗು ''ಅಂಬತ್ವದ್ದರ್ಶನಾನ್ಮುಕ್ತಿಃ ನ ಜಾನೇ ಸ್ನಾನಜಂ ಫಲಂ'' ತಾಯಿಯೇ ಕೇವಲ ನಿನ್ನನ್ನು ನೋಡುವುದರಿಂದಲೇ ಮುಕ್ತಿಯಾಗುವುದು ಇನ್ನು ಸ್ನಾನದಿಂದ ಬರುವ ಫಲ ಎಷ್ಟೆಂದು ತಿಳಿಯೇನು ಎಂದು ನಾರದರು ಉತ್ತರಿಸಿದ್ದನ್ನೂ ನೋಡಿದಾಗ ಗಂಗೆಯಲ್ಲಿ ನಾರದರು ಸ್ನಾನ ಮಾಡಿಲ್ಲವೆಂದು ತಿಳಿಯುವದು. ಈ ಭಾಗವತದಲ್ಲಿಯಾದರೂ ಪರಮಭಾಗವತೋತ್ತಮರಾದ ನಾರದರು ಸ್ನಾನ ಮಾಡಿದ್ದರಿಂದ ಗಂಗೆಗಿಂತ ಭಾಗವತ ಹೆಚ್ಚೆಂದು ತಿಳಿಸುತ್ತಾ ಭಾಗವತದ ಶ್ರವಣ ಮನನ ಉಪದೇಶಗಳಿಂದ ವ್ಯಾಖ್ಯಾನಾದಿಗಳಲ್ಲಿ ಪ್ರವೃತ್ತರಾಗಲು ಸತ್ಕಾರಪೂರ್ವಕವಾಗಿ ನಿಯೋಜಿಸುವರು. 'ನಿಗಮ' ಮುಂತಾಗಿ **ಅಹೋ ಭಾವುಕಾಃ** ಕುಶಲರಾದ ಪುರುಷರೇ.

1. **ಭಾಗವತಂ** ಷಡ್ಗುಣಗಳಿಂದ ಕೂಡಿದ ನಾರಾಯಣನಿಂದ ಉತ್ಪನ್ನವಾದ 2. **ಭ** ಭಾಸಕವಾದ **ಗಾವಃ** ಕಿರಣಗಳು ಅಥವಾ ಮಾತುಗಳುಳ್ಳವನು **ಭಗಃ** ವಿಷ್ಣುವು ಅವನ **ವಂ** ಸ್ವರೂಪವು (**ಭಾಗವಂ** ವಿಷ್ಣುಸ್ವರೂಪವು) ಅದು **ತನ್ಯತೇ** ವಿಸ್ತಾರವಾಗಿ ಹೇಳಲ್ಪಡುವದು ಯಾವುದರಲ್ಲಿ ಅದು **ಭಾಗವತಂ** ಭಗವಂತನ ಸ್ವರೂಪ ಪ್ರತಿಪಾದಕವಾದುದು ಎಂದರ್ಥ. ಅಥವಾ 3. ಭಗೋ ಅಯಂ ಭಾಗವಃ ಭಾಗವೇನ ತನ್ಯತೇ ಇತಿ **ಭಾಗವತಂ** ವಿಷ್ಣುವಿನ ಅವತಾರನಾದ ವ್ಯಾಸನಿಂದ ವಿಸ್ತಾರವಾಗಿ ರಚಿತವಾದ ಎಂದರ್ಥ.

1. **ನಿಗಮಕಲ್ಪತರೋಃ** ಚತುರ್ಮುಖನಿಂದ ಎಂದರ್ಥ. 'ನಿರ್ನ್ಯಗ್‌ಭಾವ ನಿಕಾಮಯೋಃ' ಎಂದು ಯಾದವಕೋಶವಿದೆ. ನಿ ಎಂಬ ಅವ್ಯಯಕ್ಕೆ ನ್ಯಕ್‌ಭಾವ ಅಂದರೆ ಕೆಳಗೆ ಬರುವದು ಎಂದರ್ಥ. **ನಿ** ಅಧಃ **ಗಮಃ** ಐಂದ್ರಿಕಂ ಜ್ಞಾನಂ ಯಸ್ಮಾತ್ ಸಃ ನಿಗಮಃ ವಿಷ್ಣುವು ಅಧೋಕ್ಷಜನಾದ್ದರಿಂದ ಅವನಿಗಿಂತ ಸ್ವಲ್ಪ ಕಡಿಮೆಯಾದವನು (ಇಷನ್ನ್ಯೂನೇ ಕಲ್ಪಪ್ ಪ್ರತ್ಯಯ) ನಿಗಮಕಲ್ಪಃ ಸಃ ಏವ ತರು ಸ್ವಯಂ ಸಂಸಾರತರಣ ಮಾಡುವುದರಿಂದಲೂ(ಅಂತರ್ಣೀತ ಣಿಚ್)ಬೇರೆ ಅಧಿಕಾರಿಗಳನ್ನು ಸಂಸಾರದಿಂದ ದಾಟಿಸುವುದರಿಂದಲೂ ತರು ಶಬ್ದವಾಚ್ಯನಾದ ಚತುರ್ಮುಖನು ಅವನಿಂದ ಎಂದರ್ಥ.(ನಿಗಮಕಲ್ಪಶ್ಚಾಸೌ ತರುಶ್ಚ ನಿಗಮಕಲ್ಪತರುಃ ತಸ್ಮಾತ್).

2. ಅಥವಾ ವೇದಗಳು ಅದಕ್ಕಿಂತ ಸ್ವಲ್ಪ ಕಡಿಮೆಯಾದುದು **ನಿಗಮಕಲ್ಪಂ** ಭಾರತ, ಬ್ರಹ್ಮಸೂತ್ರ ಅದರಿಂದ ಸಂಸಾರತರಣಶೀಲಃ ಆದ್ದರಿಂದ ನಿಗಮಕಲ್ಪೇನ ತರಣಶೀಲಃ ನಿಗಮಕಲ್ಪತರುಃ ತಸ್ಮಾತ್ ತರೋಃ (ತಾಚ್ಛೀಲ್ಯಾರ್ಥಾದುನಸ್ತಥಾ) ಎಂದು ಹೇಳಿದೆ. ಚತುರ್ಮುಖನಿಂದ ಗಲಿತಂ ಗಲಂ ಅಸ್ಯ ಅಸ್ತೀತಿ ಗಲೀ ಕಂಠಮಾಧುರ್ಯವುಳ್ಳ ಗಾಯನಶೀಲನಾದ ನಾರದಮುನಿಯಿಂದ ತನ್ಯತೇ ವ್ಯಾಸಾಯ ವಿಸ್ತಾರ್ಯ್ಯತೇ ಬ್ರಹ್ಮೋಪದಿಷ್ಟಾಪೇಕ್ಷಯಾ ಸಂವರ್ಧ್ಯತೆ ಇತಿ ಯಾವತ್ ಬ್ರಹ್ಮದೇವರಿಂದ ಕೇಳಿದ್ದನ್ನು ಹೇಳಿಸಿ ವ್ಯಾಸರಿಗೆ ನಾರದರು ಹೇಳಿದರು ಎಂದರ್ಥ.

ಗುರುಗಳಿಂದ ಕೇಳಿದ್ದನ್ನು ಶಿಷ್ಯರಿಗೆ ಹೇಳುವದು ಯುಕ್ತವೇ ಆದ್ದರಿಂದ ಸಂವರ್ಧನ ಮಾಡಿದ್ದು ಹೇಗೆ ? ಎಂದರೆ ಉತ್ತರ ''ತ್ವಮೇತದ್ ವಿಪುಲೀಕುರು'' ನೀನು ಇದನ್ನು ವಿಸ್ತರಿಸು ಎಂಬ ಗುರುಗಳ ಆಜ್ಞಾಪಾಲನೆ ನ್ಯಾಯವಾದ್ದರಿಂದ ಸಂವರ್ಧನ (ಬೆಳಿಸುವದು) ಯುಕ್ತವೇ. ಹಾಗಾದರೆ ಇವರು ಹೇಳಿಸಿದ ಭಾಗ ಭಾಗವತವಾಗಲಿಲ್ಲ

ಎನ್ನುವಂತಿಲ್ಲ. ಭಗವಂತನ ಪಾದದಿಂದ ಹೊರಟ ಗಂಗೆಯಲ್ಲಿ ಸೇರಿದ ನೀರಿನಂತೆ (ನೀರನ್ನು ಗಂಗೆ ಎನ್ನುವರು)ಹಾಗೆ ಶುಕಾದಿಗಳು ಹೇಳಿದ್ದನ್ನು ಭಾಗವತ ಎನ್ನಬಹುದು. ಅಂದರೆ ಮೊದಲಿನ ನೀರಿನಲ್ಲಿ ಸೇರಿದ ನೀರು ಮೊದಲಿನ ನೀರೇ ಆಗುವದೇ(ಐಕ್ಯ ಬರುವದೇ) ಹಾಗೇನಿಲ್ಲ ಹಾಗೆ ವ್ಯವಹಾರ ಮಾಡಿದರು ನೀರಿನಲ್ಲಿ ಹೆಚ್ಚಳ ಕಂಡು ಬರುವದರಿಂದ ನೀರುಗಳಿಗೆ ಭೇದವೇ ಇದೆ. ಹಾಗಾದರೆ ಇಲ್ಲಿಯೂ ಸಂವರ್ಧಿತ ಗ್ರಂಥಕ್ಕೆ ಭಾಗವತತ್ವ ಬರಲೇ ಇಲ್ಲವಲ್ಲ ಎಂದರೆ ಹಾಗಲ್ಲ ಭಾಗವತ ಎಂದು ಕರೆಯಲು ಎರಡು ಕಾರಣ, ಭಗವಂತ ರಚಿಸಿದ್ದು ಒಂದು ಭಗವಂತನನ್ನು ಪ್ರತಿಪಾದಿಸುವದು ಮತ್ತೊಂದು (ಭಗವತ್ಪ್ರಣೀತತ್ವ ಭಗವತ್ಪ್ರತಿಪಾದಕತ್ವ) ಶ್ರೀಮದ್ವ್ಯಾಸಕೃತವಾದ ಹದಿನೆಂಟುಸಾವಿರ ಸಂಖ್ಯಾಕವಾದ ಸಮಸ್ತ ಗ್ರಂಥಕ್ಕೆ ಎರಡೂ ಕಾರಣಗಳಿರುವದರಿಂದ ಭಾಗವತ ಎಂಬ ಹೆಸರು ಯುಕ್ತವೆ. ವ್ಯಾಸಕೃತವಾದ ಭಾಗವತಕ್ಕೆ ಬ್ರಹ್ಮದೇವರು ನಾರದರು ಬೆಳಿಸಿದ ಗ್ರಂಥಕ್ಕೆ ಭಗವತಣೀತತ್ವ ಇಲ್ಲದಿರುವದರಿಂದ ಎರಡೂ ಪ್ರವೃತ್ತಿ ನಿಮಿತ್ತ ಇಲ್ಲವಲ್ಲ ಎಂದರೆ ಹಾಗೆನಿಲ್ಲ. ಸಂವರ್ಧಿತಗ್ರಂಥವನ್ನೂ ವ್ಯಾಸರೇ ಅನುವಾದಿಸಿ ನಿಂಬಂಧನೆ ಮಾಡಿದ್ದಾರೆ. ಬ್ರಹ್ಮನಾರದರ ವರ್ಣಗಳೇ ಇಲ್ಲದಿದ್ದರೂ ಅವರ ಮಾತಿನ ಅರ್ಥಾನುವಾದವು ವಿವಕ್ಷಿತವಾಗಿವೆ ಪೌರುಷೇಯ ಗ್ರಂಥದಲ್ಲಿ ಆದ್ದರಿಂದ ಯಾವ ತೊಂದರೆಯಿಲ್ಲ. ಗಲಿತಂ ಎಂದದ್ದರಿಂದ ನಾರಾಯಣನು ಬ್ರಹ್ಮನಿಗೆ ಬ್ರಹ್ಮನು ನಾರದರಿಗೆ ಉಪದೇಶಿಸಿದಂತೆ ನಾರದರು ವ್ಯಾಸರಿಗೆ ಉಪದೇಶಿಸಿದ್ದಲ್ಲ ಎಂದು ಸೂಚಿತವಾಗುವದು. ಮಧುರಕಂಠವಿದ್ದ ನಾರದರಿಂದ ಕೇಳಿದರೇ ಹೊರತು ಗುರುಗಳು ಎಂಬ ಬುದ್ಧಿಯಿಂದಲ್ಲ. ಏನೇ ಆಗಲಿ ಕೇಳಿಸಿದ್ದರಿಂದ ಗುರುತ್ವ ಬಂತು ಎನ್ನುವುದಾದರೆ ಗಂಧರ್ವರಿಂದ ಗಾನ ಕೇಳುವ ಇಂದ್ರನಿಗೆ ಗಂಧರ್ವ ಗುರುವಾಗಬೇಕಾಗುವದು. ಗುರುವಾಗಲು ಕಂಠಮಾಧುರ್ಯ ಪ್ರಯೋಜಕವಲ್ಲ. ಕೇಳಿದವನಿಗಿಂತ ಹೆಚ್ಚು ಜ್ಞಾನವಿರಬೇಕು ಎಂಬ ತತ್ತ್ವ ತಿಳಿಯಲಿಚ್ಛಿಸುವವರು ಗುರುವಿನ ಕಂಠಮಾಧುರ್ಯವನ್ನು ಅಪೇಕ್ಷಿಸುವುದಿಲ್ಲ.

ನಾರಾಯಣನೇ ವ್ಯಾಸ ಅಂದ ಮೇಲೆ ನಾರಾಯಣನ ಶಿಷ್ಯ ಎಂದರೆ ಬ್ರಹ್ಮನು ವ್ಯಾಸ ಶಿಷ್ಯನು. ಆ ಬ್ರಹ್ಮದೇವರ ಶಿಷ್ಯರು ನಾರದರು. ಆ ನಾರದರು ವ್ಯಾಸರಿಗೆ ಗುರುಗಳು ಹೇಗಾಗುವರು. ಅವತಾರ ಭೇದವಿರುವದರಿಂದ ಕೂಡಿಸಬಹುದು ಎನ್ನಲು ಆಗಲಾರದು. ಧನ್ಯೋಪಾಖ್ಯಾನದ ಕೊನೆಗೆ ವ್ಯಾಸಶಿಷ್ಯೋ ಯತೀಶ್ವರಃ ಎಂದು ವ್ಯಾಸಾವತಾರದಲ್ಲಿಯೂ ಬ್ರಹ್ಮದೇವರು ವ್ಯಾಸರ ಶಿಷ್ಯ ಎಂದು ಹೇಳಿದ್ದರಿಂದ

ವ್ಯಾಸಶಿಷ್ಯಶಿಷ್ಯ ನಾರದರಾಗುವರು. ಆದಕ್ಕಾಗಿ ಇನ್ನುಳಿದ ಪ್ರಯೋಗ ಮಾಡಲು ಬರುತ್ತಿದ್ದರೂ ಗಲಿತಂ ಎಂದಿದ್ದಾರೆ.

**ರಸಮಾಲಯಂ** 1.ರಸಾನಾಂ ಭಕ್ತಿ ಜ್ಞಾನ ವೈರಾಗ್ಯ ದಯಾ ವೀರ ಶೃಂಗಾರ ಮುಂತಾದ ಕವಿತಾಲಂಕಾರಗಳಾದ ಇವುಗಳ ಮೂಲಾ ಪಂಕ್ತಿಃ ಯಸ್ಮಾತ್ ಸಃ ರಸಮಾಲೇ ವಿಷ್ಣುವು. ಅವನಿಂದ ಯಾತೀತಿ ಯಂ ರಸಮಾಲಯಂ.

2. ರಸಾನಾಂ ಹಿಂದೆ ಹೇಳಿದ ಭಕ್ತಿ ಜ್ಞಾನಾದಿಗಳು **ಮಾ** ಜ್ಞಾನಂ **ಆ** ಸಾಕಲ್ಯೇನ **ಆಲಾತಿ** ಸ್ವೀಕರೋತಿ **ರಸಮಾಲಃ** ವ್ಯಾಸಃ ತಸ್ಮಾತ್ ಯಾತಿ ಇತಿ ರಸಮಾಲಯಂ 'ರಸಃ ಸಾರೋ ವರಃ ಶ್ರೇಷ್ಠಃ' ಎಂದು ಅಭಿಧಾನ.

3. **ರಸಃ** ಸರ್ವಜೀವಶ್ರೇಷ್ಠರಾದ ಬ್ರಹ್ಮದೇವರು **ಮಾ** ಲಕ್ಷ್ಮೀಶ್ಚ ತೇ ಸುತಾದಾರತ್ವೇನ ಲಾತೀತಿ ರಸಮಾಲಃ ವಿಷ್ಣುಃ ತಸ್ಯ **ಯಂ** ಜ್ಞಾನಂ ಯೇನ ತತ್

4. ರಸ ಶಬ್ದೇ ಎಂದು ಧಾತುವಿರುವದರಿಂದ **ರಸಸ್ಯ** ಶಬ್ದರೂಪವೇದದ **ಮಾ** ಜ್ಞಾನಂ ಆದಕ್ಕನುಕೂಲಜ್ಞಾನಕ್ಕೆ **ಆಲಯಂ** ಸ್ಥಾನವಾದ.

5. **ರಸ** ಮಧುರಾದಿಷಡ್ರಸಗಳು ಅವುಗಳಿಗೆ ಸಮಾನವಾದ **ಮಾ** ಪರಿಮಾಣವುಳ್ಳವು **ರಸಮಾಃ** ಕಾಮಾದಿಅರಿಷಡ್ವರ್ಗಗಳು ಅವುಗಳ **ಆ** ಸಮಂತಾತ್ **ಲಯಃ** ಯೇನ ತತ್ ರಸಮಾಲಯಂ ಕಾಮಾದಿ ಅರಿಷಡ್ವರ್ಗನಾಶಕನಾದ ಎಂದರ್ಥ.

6. **ರಸ್ಯ** ರತಿರೂಪ(ಸುಖರೂಪ)ನಾದ ವಿಷ್ಣುವಿನ **ಸಂ** ಸನ್ನಿಧಾನಕ್ಕೆ **ಆಲಯಂ** ಸ್ಥಾನವಾದ.

1. **ಶುಕಮುಖಾದಮೃತದ್ರವಸಂಯುತಂ** ಎಂಬಲ್ಲಿ (ದ್ವಿತೀಯಾ ಷಟ್‌ಸು ಎಂಬ ಸೂತ್ರದಿಂದ ದ್ವಿತೀಯಾ ಪಂಚಮ್ಯರ್ಥೇ) ಪದಚ್ಛೇದ ಶುಕಂ ಉಖಾದಮೃತದ್ರವ ಸಂಯುತಂ ಎಂದು ಅರ್ಥ. **ಶು** ಶೀಘ್ರವಾಗಿ **ಕಂ** ಸುಖವು (ವೈದಿಕ ನಿಘಂಟುವಿನಲ್ಲಿ ಶು ಶಬ್ದ ಶೀಘ್ರನಾಮದಲ್ಲಿ ಪಠಿತವಾಗಿದೆ.) **ಯಸ್ಮಾತ್ ತತ್ ಶುಕಂ** ಶೀಘ್ರಸುಖಕೊಡುವದು 'ಸದ್ಯೋ ಹೃದ್ಯವರುಧ್ಯತೇ, ಎಂದೂ ಹೇಳಿದೆ. ಉಕಾರಃ ಶಂಕರಪ್ರೋಕ್ತಃ ಎಂದಿರುವದರಿಂದ ಉಖಾದ ಎಂದರೆ ವಿಷ(ಅರ್ಶಾದ್ಯಚ್) ಉಖಾದಂ ಅಸ್ಯ ಅಸ್ತೀತಿ ಉಖಾದಃ ಸರ್ಪಃ ತಕ್ಷಕಃ ತಸ್ಮಾತ್ **ಮೃತಂ** ಮರಣವು ಯಸ್ಯ ಸಃ ಯಾವನಿಗಾಗಿದೆಯೋ ಅವನು ಉಖಾದಮೃತಃ ತಕ್ಷಕನಿಂದ ಸತ್ತ

ಪರೀಕ್ಷಿತನು **ದ್ರವೇನ** ಜ್ಞಾನೇನ ಸಂಯುತಃ ಯೇನ ತತ್ ಯಾವದರಿಂದ ಜ್ಞಾನ ಪಡೆದನೋ ಅದು ಉಖಾದಮೃತದ್ರವಸಂಯುತಂ(ದ್ರು ಗತೌ ಎಂದು ಧಾತು, ಗತ್ಯರ್ಥವಾದದ್ದು ಜ್ಞಾನಾರ್ಥಕವಾಗಿರುತ್ತದೆ. ಆದಕ್ಕಾಗಿ ದ್ರವ -ಜ್ಞಾನ) **ಉ** ಏವ ಎಂದರ್ಥ ಇದು ಮುಹುಃ ಎಂಬುದರ ಜೊತೆಗೆ ಅನ್ವಿತವಾಗುವದು. **ಖಾದಮೃತಸಂಯುತಂ ಖೈಃ** ಇಂದ್ರಿಯೈಃ ಆದ್ಯಂತೇ ಇತಿ **ಖಾದಾಃ** ವಿಷಯಾಃ ತೇಷಾಂ ಮೃತಂ ನಾಶಂ ಪಲಾಯನಂ ಚ ಖಾದಮೃತದ್ರವಃ ತೇನ ಸಹಿತಃ ಸಂಯುತಃ **ಖಾದಮೃತದ್ರವಸಂಯುತಃ** ಯಸ್ಮಾತ್ ತಂ 'ಅ ಕ ಯ ಪ್ರವಿ ಸಂ ಭೂ ಮ ಸ ಖ ಹಾ ವಿಷ್ಣುವಾಚಕಾಃ, ಎಂದಿರುವದರಿಂದ ಸಂ ಎಂದರೆ ವಿಷ್ಣು ಅವನಿಂದ **ಯುತ** ಕೂಡಿರುವನು. ಇಂದ್ರಿಯಗಳಿಂದ ಅನುಭವಿಸುವದರಿಂದ ಖಾದವೆನಿಸುವ ವಿಷಯಗಳ ನಾಶ. ವಿಷ್ಣು ಪ್ರಾಪ್ತಿಯಾವುದರಿಂದಾಗುವದೋ ಅದು ಎಂದರ್ಥ. ಅಥವಾ ಶಃ ತನೂಕರಣೇ ಎಂದು ಧಾತು ಇರುವದರಿಂದ **ಶು** ಅಲ್ಪಬಲವುಳ್ಳವರು. ಅದಕ್ಕಾಗಿ **ಕಃ** ಬ್ರಹ್ಮದೇವರೇ **ಮುಖಃ** ಪ್ರಮುಖರಾದ ದೇವತೆಗಳು **ಕ** ಮುಖರು. ಅವರಿಂದ **ಅದಃ** ಅಪಾಲಿತನಾದ ಗಜೇಂದ್ರನು **ಕ** ಮುಖಾದನು.(ದೇಜ ಪಾಲನೇ ಎಂದು ಧಾತು) ಅವನ **ಮೃತಂ** ಮರಣನಿಮಿತ್ತವಾದ **ದ್ರವಃ** ಕೃಪಾರಸದಿಂದ ಸಹಿತನಾದ ಸಂಶಬ್ದವಾಚ್ಯನಾದ ಭಗವಂತನು **ಯುತಃ** ಯೋಗಪ್ರಾಪ್ತಃ ಯಸ್ಮಿನ್ ತತ್ **ಕಮುಖಾದಮೃತದ್ರವಸಂಯುತಃ** ಬ್ರಹಾದಿದೇವತೆಗಳಿಂದ ರಕ್ಷಿತನಾಗದ ಗಜೇಂದ್ರನ ಮರಣನಿಮಿತ್ತಕ ದಯೆಯಿಂದ ಭಗವಂತನು ಬಂದು ಕಾಪಾಡಿದ ಕಥೆಯಿಂದ ಕೂಡಿದ್ದು ಎಂದರ್ಥ.

> **ಏವಂ ಗಜೇಂದ್ರಮುಪವರ್ಣಿತನಿರ್ವಿಶೇಷಂ**
> **ಬ್ರಹ್ಮಾದಯೋ ವಿವಿಧಲಿಂಗಭಿದಾಭಿಮಾನಾಃ ।**
> **ನೈತೇ ಯದೋಪಸಸೃಪುರ್ನಿಖಿಲಾತ್ಮಕತ್ವಾತ್**
> **ತತ್ರಾಖಿಲಾಮರವರೋ ಹರಿರಾವಿರಾಸೀತ್ ॥**

ಎಂದು ಹೇಳಿದೆ. ರಸಿಕಾ ಭುವಿ ಎಂದು ಪದಚ್ಛೇದ. 'ರಸೋ ವೈ ಸಃ, ಎಂದು ಶ್ರುತಿ ಇರುವದರಿಂದ **ರಸಃ** ಶ್ರೇಷ್ಠನಾದ ವಿಷ್ಣುವು ಪ್ರತಿಪಾದ್ಯನಾಗಿ **ಅಸ್ತಿ** ಅಸ್ಮಿನ್ ಇತಿ ರಸಿ-ಮಲ್ಲನಾಶಕತ್ವ(ಫಲ)ರಸಭರಿತತ್ವ ಎಂಬ ಎರಡರ್ಥ. ಇದರಿಂದ ಅನಿಷ್ಟನಾಶಮಾಡುವದರಲ್ಲಿ ಇಷ್ಟಪ್ರಾಪ್ತಿಗೂ ಸಮರ್ಥವಾದ ಭಾಗವತಂ ಆ ಹೆಸರಿನ ಪುರಾಣವು. **ಕಾಭುವಿ ಕೇ** ಸುಖರೂಪವಾದ **ನ ಭವತಿ ಅಸ್ಮಾದಿತಿ ಅಭೂ ಮೋಕ್ಷಃ**

**ತಸ್ಮಿನ್ ಅಭುವಿ** ಮೋಕ್ಷ ವಿಷಯದಲ್ಲಿ **ಪಿಬತ** ಪರಮಾದರದಿಂದ ಶ್ರವಣಾದಿಗಳಿಂದ ಸೇವಿಸಿರಿ. ಹೃದಯಗತವಾಗುವಂತೆ ಮಾಡಿರಿ ಎಂದು ತಿಳಿಸಲು **ಪಿಬತ** ಎಂದಿರುವರು. ಅದು ಒಮ್ಮೆಯಲ್ಲ. ಮತ್ತೆ ಮತ್ತೆ ಎಂದು ತಿಳಿಸಲು ಮುಹುಃ ಎಂದಿದ್ದಾರೆ.(ಆವೃತ್ತಿರಸಕೃದುಪದೇಶಾತ್ ಸೂತ್ರವಿದೆ)

**ನಿಗಮಕಲ್ಪತರೋಃ** ವೇದವೆಂಬ ಕಲ್ಪವೃಕ್ಷವನ್ನು **ತರೋಃ** ಪ್ರಕಾಶಗೊಳಿಸುವ **ಶುಕಮುಖಾತ್** ಶುಕಾಚಾರ್ಯರ ಮುಖದಿಂದ **ಗಲಿತಂ** ಪರೀಕ್ಷಿತನಿಗೆ ವ್ಯಾಖ್ಯಾನ ಮಾಡಲ್ಪಟ್ಟ ಎಂದು ಅರ್ಥ. ಇದು ಶ್ರೀಮದಾಚಾರ್ಯರು ಹೇಳಿಲ್ಲವೆಂದು ಉದಾಸೀನ ಮಾಡಬೇಕಿಲ್ಲ. ಬ್ರಹ್ಮದೇವರೇ ಮೊದಲಾದ ದೇವತೆಗಳಿಗೆ ತೋರುವ ಅನಂತಅರ್ಥಗಳನ್ನೊಳಗೊಂಡ ಭಾಗವತತಾತ್ಪರ್ಯವನ್ನು ಹೇಳುವ ಆಚಾರ್ಯರಿಗೆ ಇದು ಸಮ್ಮತವೇ. ಆದಕ್ಕಾಗಿ ಯಾವ ಬಾಧಕವಿಲ್ಲ. ಭುವಿ ಗಲಿತಂ ಎಂದು ಅನ್ವಯ ಮಾಡಿದಲ್ಲಿ ದೇವಲೋಕದಲ್ಲಿ ದೇವತೆಗಳೇ ಮನನ ಮಾಡುತ್ತಿದ್ದ ಈ ಭಾಗವತವನ್ನು ಸಜ್ಜನರ ಮೇಲಿನ ಕೃಪೆಯಿಂದ ಬಾದರಾಯಣರು ಭೂಲೋಕಕ್ಕೆ ತಂದಿತ್ತು ಅನುಗ್ರಹಿಸಿರುವರು ಎಂದು ತಿಳಿಯುವದು.

> ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।
> **ಅಥವಾ ಸ್ನಾನಮಾತ್ರೇಣ ಗೌತಮ್ಯಾಂ ಕೃಷ್ಣಸನ್ನಿಧೌ ॥**

ಎಂದು ಪುರಾಣವಚನವಿರುವುದರಿಂದ ಇದರಲ್ಲಿ ಬ್ರಹ್ಮಜ್ಞಾನ, ಪ್ರಯಾಗಮರಣ, ಗೋಮತಿಸ್ನಾನ ಇವುಗಳು ಪ್ರತ್ಯೇಕ ಮೋಕ್ಷಸಾಧನವೆಂದು ಹೇಳುವುದರಿಂದ ಮೋಕ್ಷ ಲಭಿಸುವದು. ಬ್ರಹ್ಮಜ್ಞಾನಜನಕವಾದ ಈ ಭಾಗವತವನ್ನೇ ಏಕೆ ಓದಬೇಕು ಎಂಬ ಶಂಕೆಗೆ ಉತ್ತರ. ಬ್ರಹ್ಮಜ್ಞಾನದಿಂದಲೇ ಮೋಕ್ಷ, ಕೇವಲ ಸ್ನಾನಾದಿಕರ್ಮಗಳಿಂದಲ್ಲ, ಶೌನಕರು ಶ್ರೀಹರಿಮಾಹಾತ್ಮ್ಯೆಯನ್ನು ತಿಳಿಸಿ ಎಂದು ಕೇಳುತ್ತಿರಲಿಲ್ಲ. ಕೇಳುತ್ತಾನೆ ಅಂದಮೇಲೆ ಕರ್ಮವೂ ಜ್ಞಾನಹುಟ್ಟಿಸಿಯೇ ಮೋಕ್ಷಸಾಧನವಾಗುವದು ಎಂದು ತಿಳಿಸಲು ಶಿಷ್ಯರು ಈ ಭಾಗವತಶ್ರವಣ ಮಾಡಿರುವರು. ಭಾಗವತವನ್ನು ಹೇಳುವವರಿಗೆ ಕೇಳುವವರಿಗೆ ಮಹಾಪುಣ್ಯದಾಯಕವು ಎಂದು ತಿಳಿಸಲು ಶೌನಕಾದಿಗಳು ಪ್ರಶ್ನೆ ಮಾಡುವರು.

**ಶ್ರೀಮದ್ಭಾಗವತ ಕಥಾಪ್ರಾರಂಭ**

ಆದಕ್ಕೆ ಸೂತರು ಉತ್ತರರೂಪವಾಗಿ ಭಾಗವತಕಥೆಯನ್ನು ಪ್ರಾರಂಭಿಸುವರು.

**ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।**
**ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ ॥೪॥**

**ಶೌನಕಾದಯಃ** ಶುನಕನ ಮಗನಾದ ಶೌನಕರೆ ಮೊದಲಾದ **ಋಷಯಃ** ತ್ರಿಕಾಲಜ್ಞಾನಿಗಳು ಮಂತ್ರದ್ರಷ್ಟ್ರುಗಳೂ **ಅನಿಮಿಷಕ್ಷೇತ್ರೇ** ನರಹರಿಯೇ ಮೊದಲಾದ ದೇವತೆಗಳ ಆವಾಸಸ್ಥಾನವಾದ **ನೈಮಿಷೇ** ಕ್ಷಣದಲ್ಲಿ ದಾನವರೆಲ್ಲ ಸಂಹೃತರಾದ್ದರಿಂದ, ಋಷಿಗಳಿಂದ ಸೇವಿಸಲು ಯೋಗ್ಯವಾದ ಹಣ್ಣುಗಳು. ಆ ಹಣ್ಣುಗಳಿಂದ ಕೂಡಿದ ಗಿಡಗಳು ಅಲ್ಲಿ ಕಂಗೊಳಿಸುತ್ತಿದ್ದುದ್ದರಿಂದ, ಅಥವಾ ನಿಮಿಷರೆಂಬ ಮೂರು ಋಷಿಗಳು ತಪಸ್ಸು ಮಾಡಿದ ಸ್ಥಳವಾದ್ದರಿಂದ ನೈಮಿಷವೆನಿಸಿದ ಅರಣ್ಯದಲ್ಲಿ **ಸ್ವರ್ಗಾಯ** ಸ್ವರತನಾದ ಸದಾನಂದಮೂರ್ತಿಯಾದ(ವಿಷ್ಣುವು ಸ್ವರ್ಗದಲ್ಲಿ ವಾಸಿಸುವುದರಿಂದ ಸ್ವರ್ಗವೆಂದು ವಿಷ್ಣುವನ್ನು ಕರೆದಿದ್ದಾರೆ.) **ಲೋಕಾಯ** ಸ್ವರ್ಗಲೋಕಕ್ಕೆ ಆಶ್ರಯವಾಗುವುದಕ್ಕಾಗಿ, ಅಥವಾ (ಸ್ವರ್ಶಬ್ದವಾಚ್ಯನಾದ ವಿಷ್ಣುವನ್ನು ಹೊಂದಿಸುವದು ಸ್ವರ್ಗ-ವೈಕುಂಠ) **ಲೋಕಾಯ** ವೈಕುಂಠ ಲೋಕವನ್ನು ಹೊಂದುವದಕ್ಕಾಗಿ, ಅಥವಾ ವಿಷ್ಣುಜ್ಞಾನಕ್ಕಾಗಿ **ಸಹಸ್ರಸಮಂ** ಒಂದು ಸಾವಿರವರ್ಷದಲ್ಲಿ ಮುಗಿಸಬೇಕೆಂಬ **ಸತ್ರಂ** ಸಜ್ಜನರನ್ನು ಕಾಪಾಡುವ, ಪರಮಾತ್ಮನಿಂದ ರಕ್ಷಿತವಾದ, ಅತ್ಯಂತ ಪ್ರಶಸ್ತವಾದ, ಕರ್ಮಗಳಲ್ಲಿ ಶ್ರೇಷ್ಠವಾದ, ಅನೇಕ ಯಜಮಾನರುಳ್ಳ ಯಾಗವಿಶೇಷವನ್ನು **ಆಸತ** ಮಾಡಲುದ್ದೇಶಿಸಿ ಕುಳಿತರು.(ಸತ್ರಯಾಗದಲ್ಲಿ ದೀಕ್ಷಿತರಾದರು ಎಂದರ್ಥ.)

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಅಸಂಗತವಾಗಿ ಏನೋ ಕಥೆ ಹೇಳುವರಲ್ಲ ಎಂದರೆ ಅದಕ್ಕೆ ಆಚಾರ್ಯರು ಪ್ರಯೋಜನ ಹೇಳುವರು.

ಪ್ರಕಾರಾಂತರೇಣ ಪುರುಷಾರ್ಥಶಂಕಾ ನಿವೃತ್ಯರ್ಥಂ ಆಖ್ಯಾಯಿಕಾ । ಪಾದ್ಮೇ ಚ -

ಆಖ್ಯಾಯಿಕಾಃ ಪ್ರದರ್ಶ್ಯಂತೇ ಸರ್ವವೇದೇಷು ಸರ್ವಶಃ ।
ದ್ಯೋತಯಂತಸ್ತು ಮಹತಾಂ ತಾತ್ಪರ್ಯಂ ತತ್ರ ತತ್ರ ಹ ॥

ಅಲಾಭಃ ಪುರುಷಾರ್ಥಸ್ಯ ಪ್ರೋಕ್ತಮರ್ಥಮೃತೇ ಕ್ವಚಿತ್ ।
ದ್ಯೋತನಾಯ ಮಹಾರಾಜ ಶ್ರದ್ಧಾ ವೃದ್ಧ್ಯರ್ಥಮೇವ ಚ ॥ ಇತಿ

ಭಗವಂತನ ಜ್ಞಾನವು ಮೋಕ್ಷಸಾಧನವೆಂದು ಹೇಳಿದೆ. ಜ್ಞಾನವಿಲ್ಲದೇ ಕರ್ಮದಿಂದಲೇ ಮೊಕ್ಷವಾಗುತ್ತದೆ ಎಂಬ ಶಂಕೆಯನ್ನು ಹೋಗಲಾಡಿಸಲು ನೈಮಿಷೇ ಮುಂತಾಗಿ ಆಖ್ಯಾಯಿಕೆಯನ್ನು ಹೇಳುವರು. ಆಯಾ ಪ್ರಮೇಯಗಳಲ್ಲಿ ಮಹಾತ್ಮರಿಗೆ ಮುಖ್ಯ ತಾತ್ಪರ್ಯವಿದೆ ಎಂದು ತಿಳಿಸಲು, ನಾವು ಹೇಳಿದ ಜ್ಞಾನವೇ ಮೋಕ್ಷಸಾಧನ ಅದನ್ನು ಹೊರತುಪಡಿಸಿ ಮೋಕ್ಷವು ದೊರೆಯಲಾರದು ಎಂದು ತಿಳಿಸುವದಕ್ಕಾಗಿ, ಅಥವಾ ಹೇಳಿದ ಅರ್ಥದಲ್ಲಿ ಶ್ರದ್ಧೆಯುಂಟು ಮಾಡಲು ವೇದಗಳಲ್ಲಿ ಎಲ್ಲ ಕಡೆಗೆ ಆಖ್ಯಾಯಿಕೆಗಳನ್ನು ಹೇಳುತ್ತಾರೆ ಎಂದು ಪದ್ಮಪುರಾಣದಲ್ಲಿ ಹೇಳಿದೆ.

ನಿಮಿಷಮಾತ್ರದಲ್ಲಿ ದಾನವಸೈನ್ಯ ಸಂಹರಿಸಿದ್ದರಿಂದ ನೈಮಿಷಾರಣ್ಯ ಎಂಬ ಹೆಸರು ಬಂದಿದೆ. ಎಂಬ ವಿಷಯವನ್ನು ವರಾಹಪುರಾಣವು ಹೀಗೆ ಉಲ್ಲೇಖಿಸುತ್ತದೆ.

> ಏವಂ ಕೃತ್ವಾ ತತೋ ದೇವೋ ಮುನಿಂ ಗೌರಮುಖಂ ತದಾ ।
> ಉವಾಚ ನಿಮಿಷೇಣೇದಂ ನಿಹತಂ ದಾನವಂ ಬಲಮ್॥
>
> ಅರಣ್ಯೇಽಸ್ಮಿನ್ ತತಸ್ತ್ವೇತತ್ ನೈಮಿಷಾರಣ್ಯಸಂಜ್ಞಿತಮ್ ।
> ಭವಿಷ್ಯತಿ ಯಥಾರ್ಥಂ ವೈ ಬ್ರಾಹ್ಮಣಾನಾಂ ವಿಶೇಷಕಮ್ ॥ ಇತಿ

**ತ ಏಕದಾ ತು ಮುನಯಃ ಪ್ರಾತರ್ಹುತಹುತಾಶನಾಃ ।**
**ಸತ್ಕೃತಂ ಸೂತಮಾಸೀನಂ ಪಪ್ರಚ್ಛುರಿದಮಾದೃತಾಃ ॥೫॥**

ಸತ್ರಯಾಗದಲ್ಲಿ ದೀಕ್ಷಿತರಾದ **ತೇ ಮುನಯಃ** ಆ ಋಷಿಗಳು(ಸರ್ವಜ್ಞ ರಾಗಿದ್ದರೂ) **ಏಕದಾ ತು** ಒಂದು ಸಲ ತಮ್ಮ ಆಶ್ರಮಕ್ಕೆ ಬಂದ **ಸತ್ಕೃತಂ** ಅವರಿಗೆ ಯೋಗ್ಯವಾದ ಪೂಜೆಯನ್ನು ಹೊಂದಿದ **ಆಸೀನಂ** ತಾವು ಕೊಟ್ಟ ಪೀಠದಲ್ಲಿ ಕುಳಿತ **ಸೂತಂ** ಸೂತರನ್ನು **ಪ್ರಾತರ್ಹುತಹುತಾಶನಾಃ** ಪ್ರಾತಃಕಾಲದ ಅಗ್ನಿಹೋತ್ರಾದಿಗಳನ್ನು ಮುಗಿಸಿದವರಾಗಿ **ಆದೃತಾಃ** ಸೂತರಿಂದ ಪೂಜಿತರಾಗಿ **ಇದಂ** ಮುಂದೆ ಹೇಳುವುದನ್ನು **ಪಪ್ರಚ್ಛ** ಕೇಳಿದರು.

**ಬಾದರಾಯಣರು ಬರೆದದ್ದನ್ನು ಸೂತರು ತಿಳಿದಿದ್ದರು**

ನಾವು ಕೇಳುವ ಪ್ರಶ್ನೆಗೆ ಉತ್ತರಿಸಲು ನಿಮಗೆ ಜ್ಞಾನವಿದೆ ಎಂಬ ಅಭಿಪ್ರಾಯದಿಂದ ಚೆನ್ನಾಗಿ ಉತ್ತರಿಸಲು ಸೂತರನ್ನು ಪ್ರಶಂಸೆ ಮಾಡುವರು.

**ಋಷಯಃ ಊಚುಃ -**

**ತ್ವಯಾ ಖಲು ಪುರಾಣಾನಿ ಸೇತಿಹಾಸಾನಿ ಚಾನಘ ।**
**ಆಖ್ಯಾತಾನ್ಯಪ್ಯಧೀತಾನಿ ಧರ್ಮಶಾಸ್ತ್ರಾಣಿ ತಾನ್ಯುತ ॥೬॥**

**ಹೇ ಅನಘ** ಪಾಪರಹಿತನೇ ಅಥವಾ ಕಾರ್ಯವ್ಯಸನರಹಿತನೇ **ತ್ವಯಾ** ನಿನ್ನಿಂದ **ಸೇತಿಹಾಸಾನಿ** ಭಾರತಾದಿ ಇತಿಹಾಸಗಳಿಂದ ಸಹಿತವಾದ **ಪುರಾಣಾನಿ** ಪುರಾಣಗಳು **ಚ** ಮತ್ತು ಉಪಪುರಾಣಗಳು **ತಾನ್ಯುತ ಧರ್ಮಶಾಸ್ತ್ರಾಣಿ** ಮನುಮೊದಲಾದವರು ರಚಿಸಿದ ಎಲ್ಲ ಧರ್ಮಶಾಸ್ತ್ರಗಳು **ಅಧೀತಾನಿ** ಕಲಿಯಲ್ಪಟ್ಟಿವೆ **ಆಖ್ಯಾತಾನಿ ಅಪಿ** ಹೇಳಿಯೂ ಆಗಿದೆ.

**ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ ।**
**ಅನ್ಯೇ ಚ ಮುನಯಃ ಸೂತ ಪರಾವರವಿದೋ ವಿದುಃ ॥೭॥**

**ವೇತ್ಥ ತ್ವಂ ಸೌಮ್ಯ ತತ್ಸರ್ವಂ ತತ್ತ್ವತಃ ತದನುಗ್ರಹಾತ್ ।**
**ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥೮॥**

**ಗುರವಃ** ಗುರುಗಳು **ಸ್ನಿಗ್ಧಸ್ಯ** ಭಕ್ತಿಸಂಪನ್ನರಾದ ಪ್ರೀತ್ಯಾಸ್ಪದರಾದ **ಶಿಷ್ಯಸ್ಯ** ಶಿಷ್ಯನಿಗೆ **ಗುಹ್ಯಂ ಅಪಿ** ಗೌಪ್ಯವಾಗಿದ್ದರೂ **ಬ್ರೂಯುಃ ಉತ** ಹೇಳಿಯೇ ಹೇಳುವರು ಆದಕಾರಣ **ವಿದಾಂ** ಸರ್ವಜ್ಞರಲ್ಲಿ **ಶ್ರೇಷ್ಠಃ** ಉತ್ತಮರಾದ ಅಂದರೆ ನಿರುಪಚರಿತ ಸರ್ವಜ್ಞರಾದ **ಭಗವಾನ್** ಷಡ್ಗುಣ್ಯೈಶ್ವರ್ಯಸಂಪನ್ನರಾದ **ಬಾದರಾಯಣಃ** ವೇದವ್ಯಾಸದೇವರು **ಯಾನಿ** ಯಾವ ಪ್ರಮೇಯಗಳನ್ನು **ವೇದ** ತಿಳಿದಿರುವರು ಮತ್ತು **ಪರಾವಿದಃ** ಪರಾಪರತತ್ವಗಳನ್ನು ತಿಳಿದ ಅಥವಾ ಅತೀತಾನಾಗತವನ್ನು ತಿಳಿದ **ಅನ್ಯೇ ಚ ಮುನಯಃ** ಬೇರೆ ಮುನಿಗಳು ಬ್ರಹ್ಮಾದಿಗಳು, ಶುಕಾದಿಗಳು, ಕೂಡ **ತದನುಗ್ರಹಾತ್** ಬಾದರಾಯಣರ ಅನುಗ್ರಹದಿಂದ **ತಾನ್ಯೇವ** ಬಾದರಾಯಣರು ತಿಳಿದವುಗಳನ್ನೇ ತಮ್ಮ ತಮ್ಮ ಯೋಗ್ಯತಾನುಸಾರವಾಗಿ **ತತ್ತ್ವತಃ** ಯಥಾರ್ಥವಾಗಿ **ವಿದುಃ** ತಿಳಿದಿರುವರು. ಅವರು ತಿಳಿದುದನ್ನೆಲ್ಲ **ಹೇ ಸೌಮ್ಯ** ಎಲೋ ಸಾಧುವೇ **ತ್ವಂ** ನೀನು **ತತ್ಸರ್ವಂ** ಮುನಿಗಳು ತಿಳಿದಿರುವುದರ ಮಧ್ಯದಲ್ಲಿ **ಸರ್ವಂ** ವೇದ ವ್ಯತಿರಿಕ್ತವಾದ ಪುರಾಣಾದಿಗಳನ್ನು **ತದನುಗ್ರಹಾತ್** ಆ ಮುನಿಗಳ ಅನುಗ್ರಹದಿಂದ **ತತ್ತ್ವತಃ** ಯಥಾವತ್ತಾಗಿ ತಿಳಿದಿರುವಿ.

**ವಿಶೇಷ :-** ಈ ಶ್ಲೋಕದಲ್ಲಿ **'ಯಾನಿ ಬಾದರಾಯಣೋ ವೇದ ಅನ್ಯೇ ಮುನಯಃ ಯಾನಿ ವಿದುಃ ತತ್ಸರ್ವಂ ತ್ವಂ ವೇತ್ಥ'** ಎಂದು ಹೇಳಿದರು. ಬಾದರಾಯಣರು

ತಿಳಿಯದಿರುವದನ್ನು ಮುನಿಗಳು ತಿಳಿದಿರುವರು ಎಂದರ್ಥ ತೋರುವುದು. ಅದು ಸರಿಯಲ್ಲ. 'ವಿದ ಕೃತೌ' ಎಂಬ ಧಾತುವಿನ ರೂಪ ವೇದ ಎಂದಿಟ್ಟುಕೊಂಡು ಭಗವಾನ್ ಯಾನಿ ವೇದ ಚಕಾರ, । ಮುನಯಃ ಯಾನಿ ವಿದುಃ ಚಕ್ರುಃ, ತತ್ಸರ್ವಂ ಜಾನಾಸಿ ಎಂದರೆ ವೇದವ್ಯಾಸರು ಹಾಗೂ ಮುನಿಗಳು ರಚಿಸಿದ ಪೌರುಷೇಯ ಗ್ರಂಥಗಳನ್ನೆಲ್ಲ ಇವರು (ಸೂತಾಚಾರ್ಯರು)ತಿಳಿದಿರುವರು ಎಂದು ಅರ್ಥವಾಗುವುದು.

*ಭಾಗವತತಾತ್ಪರ್ಯ-*

**ಯಾನಿ ಭಗವಜ್ಞಾತಾನಿ ಅನ್ಯೈರಪಿ ಋಷಿಭಿಃ ಜ್ಞಾಯಂತೇ ತಾನಿ ವೇತ್ಥ। ಉಕ್ತಂ ಹಿ ಬ್ರಹ್ಮಾಂಡೇ 'ದ್ವೈಪಾಯನೇನ ಯದ್ಬುದ್ಧಂ ಬ್ರಹ್ಮಾದ್ಯೈಸ್ತನ್ನ ಬುಧ್ಯತೇ। ಸರ್ವಬುದ್ಧಂ ಸ ವೈ ವೇದ ತದ್ಬುದ್ಧಂ ನಾನ್ಯಗೋಚರಮ್ ॥ ಇತಿ ॥**

ಯಾವ ಪ್ರಮೇಯಗಳು ವೇದವ್ಯಾಸರಿಂದ ತಿಳಿಯಲ್ಪಟ್ಟಿವೆಯೋ ಅವುಗಳೇ ಬೇರೆ ಮುನಿಗಳಿಂದ ತಿಳಿಯಲ್ಪಡುವವು. ಅವುಗಳನ್ನೇ ಅವರಿಬ್ಬರ ಅನುಗ್ರಹದಿಂದ ನೀನು ತಿಳಿದಿರುವಿ.

ವೇದವ್ಯಾಸರು ತಿಳಿದಿದ್ದನ್ನು ಬ್ರಹ್ಮಾದಿಗಳು ತಿಳಿಯಲಾರರು. ಎಲ್ಲರೂ ತಿಳಿದಿದ್ದನ್ನು ವೇದವ್ಯಾಸರು ತಿಳಿದಿರುವರು. ಅವರು ತಿಳಿದಿದ್ದು ಬೇರೆಯವರಿಗೆ ತಿಳಿಯಲಾರದು. ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ.

**ಶೌನಕರ ಪ್ರಶ್ನೆಗಳು**

ಈಗ ತಮಗೆ ಬೇಕಾದುದನ್ನು ಕೇಳುವೆವುಎಂದು ಹೇಳುವರು.

**ತತ್ರ ತತ್ರಾಂಜಸಾऽऽಯುಷ್ಮನ್ ಭವತಾ ಯದ್ವಿನಿಶ್ಚಿತಮ್ ।**
**ಪುಂಸಾಮೇಕಾಂತತಃ ಶ್ರೇಯಸ್ತನ್ನಃ ಶಂಸಿತುಮರ್ಹಸಿ ॥೯॥**

**ಹೇ ಆಯುಷ್ಮನ್** ಪ್ರಶಸ್ತ ಆಯುಷ್ಯವುಳ್ಳವನೇ **ತತ್ರ ತತ್ರ** ಆ ಆ ಗ್ರಂಥಗಳಲ್ಲಿ **ಅಂಜಸಾ** ಉಪಕ್ರಮಾದಿ ತಾತ್ಪರ್ಯಲಿಂಗಾನುಸಾರವಾಗಿ **ಪುಂಸಾಂ** ಅಧಿಕಾರಿಗಳಿಗೆ **ಏಕಾಂತತಃ ಶ್ರೇಯಃ** ನಿಯಮೇನ ಶ್ರೇಯಸ್ಸಾಧನವು **ಭವತಾ** ನಿಮ್ಮಿಂದ **ಯದ್ವಿನಿಶ್ಚಿತಂ** ಯಾವುದು ನಿಶ್ಚಯಿಸಲ್ಪಟ್ಟಿದೆಯೋ **ತತ್** ಅದನ್ನು **ನಃ ಶಂಸಿತುಂ ಅರ್ಹಸಿ** ನಮಗೆ ತಿಳಿಸಲು ಯೋಗ್ಯರಾಗಿರುವಿ.

ಅಧಿಕಾರಿಗಳು ಅನೇಕ ಕಾಲ ಅನೇಕ ಶಾಸ್ತ್ರಗಳ ಶ್ರವಣಮಾಡಿ ಶ್ರೇಯಸ್ಸಾಧನ ನಿರ್ಣಯ ಮಾಡಿಕೊಳ್ಳುವರು. ನಾನೇಕೆ ಅದನ್ನು ಹೇಳಬೇಕು ಎಂದರೆ ಹಾಗೆ ನಿರ್ಣಯಿಸಿಕೊಳ್ಳುವುದು ಸಾಧ್ಯವಿಲ್ಲವೆಂದು ಹೇಳುವರು.

**ಪ್ರಾಯೇಣಾಲ್ಪಾಯುಷೋ ಮರ್ತ್ಯಾಃ ಕಲಾವಸ್ಮಿನ್ ಯುಗೇ ಜನಾಃ ।**
**ಮಂದಾ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥೧೦॥**

**ಅಸ್ಮಿನ್ ಕಲೌ ಯುಗೇ** ಈ ಕಲಿಯುಗದಲ್ಲಿ **ಜನಾಃ** ಜನರು **ಪ್ರಾಯೇಣ** ಬಹಳವಾಗಿ **ಅಲ್ಪಾಯುಷಃ** ಸ್ವಲ್ಪವೇ ಆಯುಷ್ಯವುಳ್ಳವರು ಆದ್ದರಿಂದಲೇ **ಮರ್ತ್ಯಾಃ** ಮರಣಶೀಲರು ಅದರಲ್ಲಿಯೂ **ಮಂದಾಃ** ಆಲಸಿಗಳು, ಕೆಲಸ ಮಾಡುವ ಶಕ್ತಿಯಿಲ್ಲದವರು ಅದರಲ್ಲಿಯೂ **ಸುಮಂದಮತಯಃ** ಅತ್ಯಲ್ಪಬುದ್ಧಿಯುಳ್ಳವರು **ಮಂದಭಾಗ್ಯಾಃ** ಸ್ವಲ್ಪ ಪುಣ್ಯವುಳ್ಳವರು(ಅನೇಕ ವಿಘ್ನಗಳಿಂದ ಕೂಡಿದವರೆಂದು ಭಾವ)ಅಲ್ಲದೇ **ಉಪದ್ರುತಾಃ** ಅನೇಕ ರೋಗಗಳಿಂದ ಪೀಡಿತರು.

ವಿಶೇಷ :- **ಪ್ರಾಯೇಣ** ಎಂಬುದನ್ನು ಪ್ರತ್ಯೇಕವಾಗಿ ಅನ್ವಯಿಸಬೇಕು. ಬಹಳವಾಗಿ ಮೇಲೆ ಹೇಳಿದಂತೇನೇ ಇರುವರು ಕ್ವಚಿತ್ ಇಲ್ಲದಿರಬಹುದು ಎಂದರ್ಥ.

ಆದುದರಿಂದ ತಾವೇ ಬಹುಕಾಲ ಶ್ರವಣ ಮಾಡಿ ನಿಶ್ಚಯಿಸುವುದು ಸಾಧ್ಯವಿಲ್ಲವೆಂದು ಭಾವ.

ಶ್ರೇಯಸ್ಸಾಧನಗಳಲ್ಲಿ ವಿವಾದವೇ ಇಲ್ಲದಿರುವುದರಿಂದ ನಾನೇನು ಹೇಳುವ ಆವಶ್ಯಕತೆ ಇಲ್ಲ ಎಂದರೆ ಹೇಳುವರು

**ಭೂರೀಣಿ ಭೂರಿಕರ್ಮಾಣಿ ಶ್ರೋತವ್ಯಾನಿ ವಿಭಾಗಶಃ ।**
**ಅತಃ ಸಾಧೋಽತ್ರ ಯತ್ಸಾರಂ ಸಮುದ್ಧೃತ್ಯ ಮನೀಷಯಾ ॥**
**ಬ್ರೂಹಿ ಭದ್ರಾಯ ಭೂತಾನಾಂ ಯೇನಾತ್ಮಾಽಽಶು ಪ್ರಸೀದತಿ ॥೧೧॥**

**ಸಾಧೋ** ಹೀನ ಜಾತಿಯಲ್ಲಿ ಜನಿಸಿದ್ದರೂ ನಿರ್ದುಷ್ಟ ಸ್ವಭಾವದವನೇ **ವಿಭಾಗಶಃ** ಶೈವಾದಿವಾದಿಗಳ ವಿಭಾಗದಿಂದ **ಭೂರೀಣಿ** ಬಹಳವಾದ **ಭೂರಿಕರ್ಮಾಣಿ** ಅನೇಕ ಕಾರ್ಯಗಳುಳ್ಳ ಅಂದರೆ ಕಷ್ಟಸಾಧ್ಯವಾದ ವ್ಯಾಪಾರವುಳ್ಳ **ಶ್ರೋತವ್ಯಾನಿ** ಕೇಳಬೇಕಾದ ಅರ್ಥಾದಿವಿಷಯಕಶಾಸ್ತ್ರಗಳು ಇವೆ **ಅತಃ** ಆದಕಾರಣ **ಅತ್ರ** ಅವುಗಳಲ್ಲಿ (ಆ ಶಾಸ್ತ್ರಗಳಲ್ಲಿ) **ಯತ್ಸಾರಂ** ಯಾವುದು ಶ್ರೇಷ್ಠ ಗ್ರಾಹ್ಯ, ಸುಲಭವಾಗಿ ಮಾಡಲು ಸಾಧ್ಯ,

ತಪ್ಪದೇ ಮೋಕ್ಷವನ್ನು ಕೊಡುವುದೋ **ತತ್** ಅಂತಹ ಶ್ರೇಯಸ್ಸಾಧನವನ್ನು **ಮನೀಷಯಾ** ತಮ್ಮ ಬುದ್ಧಿಯಿಂದ **ಸಮುದ್ಧೃತ್ಯ** ನಿಶ್ಚಯಿಸಿ **ಭೂತಾನಾಂ** ಮುಮುಕ್ಷುಗಳಾದ ಜೀವರ **ಭದ್ರಾಯ** ಕಲ್ಯಾಣಕ್ಕಾಗಿ (ಮೋಕ್ಷಕ್ಕಾಗಿ) **ಬ್ರೂಹಿ** ಹೇಳಿರಿ **ಯೇನ** ಯಾವ ನೀವು ಹೇಳುವ ಸಾರವನ್ನು ಕೇಳುವುದರಿಂದ **ಆತ್ಮಾ** ಮನಸ್ಸು **ಪ್ರಸೀದತಿ** ನಿರ್ಮಲವಾಗುವುದು. ಮತ್ತು ಪರಮಾತ್ಮನು ಪ್ರಸನ್ನನಾಗಿ ಅನುಗ್ರಹಿಸುವನು.

**ಶ್ರೀಹರಿಯ ನಾಮದ ಉಚ್ಚಾರಣೆಯು ಸಂಸಾರಮೋಚಕವು**

ಮತ್ತೊಂದು ಪ್ರಶ್ನೆ ಕೇಳುವರು -

**ಸೂತ ಜಾನಾಸಿ ಭದ್ರಂ ತೇ ಭಗವಾನ್ ಸಾತ್ವತಾಂ ಪತಿಃ ।**
**ದೇವಕ್ಯಾಂ ವಸುದೇವಸ್ಯ ಜಾತೋ ಯಸ್ಯ ಚಿಕೀರ್ಷಯಾ ॥೧೨॥**

**ತನ್ನಃ ಶುಶ್ರೂಷಮಾಣಾನಾಮರ್ಹಸ್ಯಂಗಾನುವರ್ಣಿತುಮ್ ।**
**ಯಸ್ಯಾವತಾರೋ ಭೂತಾನಾಂ ಕ್ಷೇಮಾಯ ವಿಭವಾಯ ಚ ॥೧೩॥**

**ಹೇ ಸೂತ** ಪೂಜ್ಯ ಸೂತಾಚಾರ್ಯರೇ **ಜಾನಾಸಿ** ಕೃಷ್ಣಾವತಾರ ಕೃತ್ಯವನ್ನು ತಿಳಿದಿದ್ದೀರಿ **ತೇ ಭದ್ರಂ** ನಿಮಗೆ ಮಂಗಲವಾಗಲಿ(ಅಥವಾ **ತೇ** ನಿಮ್ಮ ಬಿಂಬನಾಗಿರುವ **ಭದ್ರಂ** ಸರ್ವಮಂಗಲನಾದ ಭಗವಂತನನ್ನು **ಜಾನಾಸಿ** ತಿಳಿದಿದ್ದೀರಿ. (ಇದು ಆಶೀರ್ವಾದವಲ್ಲ ಔತ್ಸುಕ್ಯದಿಂದ ಹೇಳಿದ್ದು) **ಸಾತ್ವತಾಂ ಪತಿಃ** ಪಂಚರಾತ್ರೋಕ್ತ ಕರ್ಮಗಳನ್ನು ಮಾಡುವ ಯಾದವರೇ ಮೊದಲಾದವರಿಗೆ ಪಾಲಕನಾದ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು **ಯಸ್ಯ ಚಿಕೀರ್ಷಯಾ** ಯಾವ ವಿಶೇಷ ಕಾರ್ಯಮಾಡುವ ಇಚ್ಛೆಯಿಂದ **ವಸುದೇವಸ್ಯ** ವಸುದೇವನ ಮೂಲಕ **ದೇವಕ್ಯಾಂ** ದೇವಕೀ ದೇವಿಯಲ್ಲಿ **ಜಾತಃ** ಅವತರಿಸಿದನು.

**ಯಸ್ಯ** ಯಾವ ಪರಮಾತ್ಮನ **ಅವತಾರಃ** ಪ್ರಾದುರ್ಭಾವವು **ಭೂತಾನಾಂ** ಜೀವರ **ಕ್ಷೇಮಾಯ** ಐಹಿಕಾಮುಷ್ಮಿಕ ಸುಖಕ್ಕೂ **ವಿಭವಾಯ** ಅಭಿವೃದ್ಧಿಗೂ **ಭವತಿ** ಕಾರಣವಾಗುವುದು **ಅಂಗ** ಪ್ರಿಯನೇ **ತಸ್ಯ** ಆ ಕೃಷ್ಣನ **ತಂ** ಆ ಕಾರ್ಯ ವಿಶೇಷವನ್ನು **ಶುಶ್ರೂಷಮಾಣಾನಾಂ** ಕೇಳಲಿಚ್ಛಿಸುವ **ನಃ** ನಮಗೆ **ಅನುವರ್ಣಿತುಂ** ಚೆನ್ನಾಗಿ ಹೇಳಲು **ಅರ್ಹಸಿ** ಯೋಗ್ಯರಾಗಿದ್ದೀರಿ.

**ವಿಶೇಷಾರ್ಥ :- ಸತ್** ಕೃಷ್ಣನೆಂಬ ಗುಣಪೂರ್ಣನಾದ ಪರಬ್ರಹ್ಮನನ್ನು ಉಪಾಸನೆ ಮಾಡುವವರು ಸಾತ್ವತರು. ಅವರ ಪಾಲಕ ಶ್ರೀಕೃಷ್ಣನು 2. **ಸತ್** ಸುಖಿಯಾದ ಪರಮಾತ್ಮನು ಏಷಾಮಸ್ತಿ ಸ್ನೇಹವಿಷಯನಾಗಿರುವನೋ ಅವರು ಸಾತ್ವತರು ಭಕ್ತರು ಅವರ ಪತಿ ಪರಮಾತ್ಮನು ಅವತರಿಸುವುದು ಎಂದರೆ ವ್ಯಕ್ತವಾಗುವುದು ಮಾತ್ರ. ಭೌತಿಕ ದೇಹಯುಕ್ತನಾಗಿ ಗರ್ಭದಲ್ಲಿ ಬೆಳೆದು ಬರುವುದಿಲ್ಲ. ಗರ್ಭದಲ್ಲಿ ಬೆಳೆದು ಬಂದವರಂತೆ ತೋರಿಸುವುದು ಅಯೋಗ್ಯರ ಮೋಹನಕ್ಕಾಗಿ ಎಂಬುದನ್ನು ಯಾವಾಗಲೂ ನೆನಪಿನಲ್ಲಿಟ್ಟು ಕೊಳ್ಳಬೇಕು. ಕ್ಷೇಮವೆಂದರೆ ಪ್ರಾಪ್ತವಾದುದನ್ನು ರಕ್ಷಿಸುವುದು ವಿಭವವೆಂದರೆ ಅಪ್ರಾಪ್ತ ಐಶ್ವರ್ಯಾದಿಗಳ ಪ್ರಾಪ್ತಿ.

ಯಸ್ಯಾವತಾರೋ ಎಂದಾರಂಭಿಸಿ ಕಲಿಮಲಾಪಹಂ ವರೆಗೆ ಪರಮಾತ್ಮನ ಮೂಲರೂಪ ಅವತಾರರೂಪಗಳ ಯಶಸ್ಸನ್ನು ಅವಶ್ಯ ತಿಳಿಯಬೇಕೆಂದು ಹೇಳುವರು.

ಕೈಮುತ್ಯ ನ್ಯಾಯದಿಂದ ಶ್ರೀಹರಿಯ ಚರಿತ್ರೆಯ ಶ್ರವಣವು ಶುದ್ಧಿಕರವೆಂದು ಹೇಳುವರು.

**ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್ ।**
**ತತಃ ಸದ್ಯೋ ವಿಮುಚ್ಯೇತ ಯಂ ಬಿಭೇತಿ ಸ್ವಯಂ ಭವಃ ॥೧೪॥**

**ಘೋರಾಂ** ಭಯಾನಕವಾದ **ಸಂಸೃತಿಂ** ಸಂಸಾರವನ್ನು **ಆಪನ್ನಃ** ಹೊಂದಿದ ಅಧಿಕಾರಿಯು **ವಿವಶಃ** ವಿಷಯಾಸಕ್ತಿ ಇಲ್ಲದವನಾಗಿ **ಯನ್ನಾಮ** ಯಾವ ಶ್ರೀಹರಿಯ ನಾಮವನ್ನು **ಗೃಣನ್** ಅರ್ಥಾನುಸಂಧಾನ ಪೂರ್ವಕ ಉಚ್ಚಾರ ಮಾಡುವವನಾಗಿ **ತತಃ** ಸಂಸಾರದಿಂದ **ಸದ್ಯಃ** ಶೀಘ್ರದಲ್ಲಿ **ವಿಮುಚ್ಯೇತ** ಮುಕ್ತನಾಗುತ್ತಾನೆ ಏಕೆಂದರೆ **ಯಂ ಪ್ರತಿ** ಯಾವ ಹರಿಯನ್ನು ಕುರಿತು (ಶ್ರೀಹರಿಗೆ) **ಭವಃ** ಸಂಸಾರವು **ಸ್ವಯಂ ಬಿಭೇತಿ** ತಾನು ಹೆದರುವದು

**ವಿಶೇಷಃ**- ಹರಿಯ ನಾಮದ ಉಚ್ಚಾರಣೆಯು ಸಂಸಾರಮೋಚಕವು. ಸಂಸಾರಭೀಷಕನಾಮೋಚ್ಚಾರಣವಾದುದರಿಂದ. ಯಾವ ಭಗವಂತನ ನಾಮೋಚ್ಚಾರಣೆಯು ಯಾರ ಸಂಸಾರಕ್ಕೆ ಭೀಷಕವಾಗಿದೆ ಆ ನಾಮೋಚ್ಚಾರಣೆಯು ಅವರ ಸಂಸಾರಕ್ಕೆ ಮೋಚಕ. ಸರ್ಪಭೀಷಕ ಗರುಡ ನಾಮೋಚ್ಚಾರಣವು ಸರ್ಪಮೋಚಕವಾದಂತೆ ಎಂಬ ಅನುಮಾನವನ್ನು ಹೇಳುವ ಅಭಿಪ್ರಾಯವಿದೆ.

ವಿಷಯಾಸಕ್ತಿ ಇಲ್ಲದವನಿಗೆ ನಾಮೋಚ್ಚಾರಣೆಯೇ ಸಂಸಾರ ನಿವರ್ತಕವೆಂದ ಮೇಲೆ ಅವನ ಕೀರ್ತಿ, ಕಥಾಶ್ರವಣ ಶುದ್ಧಿಕರವೆಂದೇನು ಹೇಳುವುದು ಎಂದು ಕೈಮುತ್ಯ. **ಭವಃ** ಅಹಂಕಾರ ರೂಪದಿಂದ ಬಂಧಿಸುವ ರುದ್ರನು **ಯಂ ಪ್ರತಿ ಬಿಭೇತಿ** ಯಾರನ್ನು ನೋಡಿ ಹೆದರಿ ಓಡಿದನು ಎಂದೂ ಅರ್ಥ.

*ಭಾಗವತತಾತ್ಪರ್ಯ-*

ಇಲ್ಲಿ ವಿವಶನಾಗಿ ಹರಿನಾಮಸ್ಮರಣೆ ಮಾಡಿದವನು ಮುಕ್ತನಾಗುವನು ಎಂದು ಹೇಳುವರು. ಇದು ಅಸಂಭಾವಿತ. ಪರವಶನಾದವನು ನಾಮಗ್ರಹಣ ಮಾಡಲಾರ. ಒಂದು ವೇಳೆ ಮಾಡಿದರೂ ಅದರಿಂದ ಶೀಘ್ರ ಮುಕ್ತಿಸಿಗುವದಿಲ್ಲ ಎಂದು ಶಂಕೆ ಬಂದರೆ ಅದನ್ನು ಪರಿಹರಿಸುವರು.

**ವಿವಶಃ ಬಹ್ವಭ್ಯಾಸಾತ್ । ಉಕ್ತಂ ಚ ಬ್ರಹ್ಮವೈವರ್ತೇ –**

**ಶಾರೀರಾದ್ವಾಚಿಕಾಭ್ಯಾಸೋ ವಾಚಿಕಾನ್ಮಾನಸೋ ಭವೇತ್ ।**
**ಮಾನಸಾದ್ವಿವಶಾನ್ಮುಚ್ಯೇನ್ನಾನ್ಯಥಾ ಮುಕ್ತಿರಿಷ್ಯತೇ ॥ಇತಿ**

ನಿರಂತರ ಹರಿಸ್ಮರಣರೂಪವಾದ ಕಾಯಿಕಾಭ್ಯಾಸದಿಂದ(ಶಾರೀರಾತ್) ಅಧ್ಯಯನ ವ್ಯಾಖ್ಯಾನರೂಪ ವಾಚಿಕಾಭ್ಯಾಸವು. ಅದರಿಂದ ನಿರಂತರ ಹರಿಸ್ಮರಣ ರೂಪವಾದ ಮಾನಸಾಭ್ಯಾಸ ಉಂಟಾಗುವುದು. ಆ ಮಾನಸಾಭ್ಯಾಸದಿಂದ ವಿಷಯಾಸಕ್ತಿಯನ್ನು ತೊರೆದು ಮುಕ್ತನಾಗುವನು. ಬೇರೆ ರೀತಿಯಿಂದ ಮುಕ್ತಿಯಾಗಲಾರದು ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

**ಯತ್ಪಾದಸಂಶ್ರಯಾಃ ಸೂತ ಮುನಯಃ ಪ್ರಶಮಾಯನಾಃ ।**
**ಸದ್ಯಃ ಪುನಂತ್ಯುಪಸ್ಪೃಷ್ಟಾಃ ಸ್ವರ್ಧುನೀ ವಾನುಸೇವಯಾ ॥೧೫॥**

**ಹೇ ಸೂತ** ಎಲೋ ಸೂತನೇ **ಯತ್ಪಾದಸಂಶ್ರಯಾಃ** ಯಾವ ಶ್ರೀಹರಿಯ ಪಾದವನ್ನು ಆಶ್ರಯಿಸಿದ **ಪ್ರಶಮಾಯನಾಃ** ಪ್ರಕೃಷ್ಟವಾದ ಭಗವನ್ನಿಷ್ಠೆಯುಳ್ಳ **ಮುನಯಃ** ಮುನಿಗಳು **ಸ್ವರ್ಧುನಿ** ಇವ ಗಂಗೆಯು **ಸೇವಯಾ ಅನು** ಸ್ನಾನಾದಿಗಳಿಂದ ಸೇವಿತಳಾಗಿ ಗುರೂಪದೇಶ ಮಾಡಿಸಿ **ಪುನಾತಿ** ಪವಿತ್ರಗೊಳಿಸುವಂತೆ **ಸದ್ಯಃ** ಶೀಘ್ರದಲ್ಲಿ **ಪುನಂತಿ** ಪವಿತ್ರಗೊಳಿಸುವರು. ಇಲ್ಲಿ ಯಾವ ಭಕ್ತರ ಸೇವೆಯು ಶುದ್ಧಿಕಾರಕವೋ ಅವರ ಕೀರ್ತಿಶ್ರವಣ ರೂಪ ಸೇವೆ ಶುದ್ಧಿಕರವೆಂದೇನು ಹೇಳುವುದು ಎಂದು ಕೈಮುತ್ಯ

ತಿಳಿಯಬೇಕು. (ಗಂಗಾನದಿಯು ಪಾದಸಂಶ್ರಯಾ ಎಂದರೆ ಅಲ್ಲಿ ಜನಿಸಿದ್ದು ಎಂದರ್ಥ. ಕೆಲವೆಡೆ **ಪಾದಸಂಶ್ರಯಾತ್** ಎಂದು ಪಾಠವಿದೆ. ಯಾರ ಪಾದಾಶ್ರಯದಿಂದ ಪವಿತ್ರಗೊಳಿಸುವರು ಎಂದರ್ಥ) **ಸ್ವರ್ಧುನ್ಯಾಪಃ** ಎಂಬ ಪಾಠದಲ್ಲಿ ಗಂಗೋದಕದಂತೆ ಎಂದು ಲುಪ್ತೋಪಮಾ.

**ಕೋ ವಾ ಭಗವತಸ್ತಸ್ಯ ಪುಣ್ಯಶ್ಲೋಕೇಡ್ಯಕರ್ಮಣಃ ।**
**ಶುದ್ಧಿಕಾಮೋ ನ ಶೃಣುಯಾದ್ಯಶಃ ಕಲಿಮಲಾಪಹಮ್ ॥೧೬॥**

**ಪುಣ್ಯಶ್ಲೋಕೇಡ್ಯಕರ್ಮಣಃ** ಬ್ರಹ್ಮಾದಿಗಳಿಂದ ಸ್ತುತ್ಯವಾದ ಕಂಸಹನನಾದಿ ಕರ್ಮವುಳ್ಳ **ತಸ್ಯ ಭಗವತಃ** ಆ ಭಗವಂತನ **ಕಲಿಮಲಾಪಹಂ** ಕಲಿಯ ನಿಮಿತ್ತಕ ಪಾಪ ಪರಿಹರಿಸುವ **ಯಶಃ** ಕೀರ್ತಿಯನ್ನು **ಶುದ್ಧಿಕಾಮಃ** ಮನಃಶುದ್ಧಿಯನ್ನಿಚ್ಛಿಸುವ **ಕೋ ವಾ ನ ಶೃಣುಯಾತ್** ಯಾವನು ತಾನೇ ಕೇಳಲಿಕ್ಕಿಲ್ಲ.

**ವಿಶೇಷ**ಃ- ಪುಣ್ಯ ಶ್ಲೋಕನು ಈಡ್ಯಕರ್ಮನು ಹೀಗೂ ಅರ್ಥ ಮಾಡಬಹುದು. ಪುಣ್ಯಶ್ಲೋಕಶ್ಚಾಸೌ ಈಡ್ಯಕರ್ಮಾ ಚ ತಸ್ಯ । ಪುಣ್ಯಶ್ಲೋಕೇಡ್ಯಕರ್ಮಣಃ ।

ಮತ್ತೊಂದು ಪ್ರಶ್ನೆ ಕೇಳುವರು.

**ತಸ್ಯ ಕರ್ಮಾಣ್ಯುದಾರಾಣಿ ಪರಿಗೀತಾನಿ ಸೂರಿಭಿಃ ।**
**ಬ್ರೂಹಿ ನಃ ಶ್ರದ್ದಧಾನಾನಾಂ ಲೀಲಯಾ ದಧತಃ ಕಲಾಃ ॥೧೭॥**

**ಲೀಲಯಾ** ಲೀಲಾರೂಪವಾಗಿ(ಅನಾಯಾಸವಾಗಿ)**ಕಲಾಃ** ವಿಶ್ವಾದಿ ನಾಲ್ಕು, ಅನಿರುದ್ಧಾದಿ ಪಂಚ, ಮತ್ಸ್ಯಾದಿ ದಶ, ವಿಶ್ವಾದಿ ಸಹಸ್ರರೂಪಗಳನ್ನು **ದಧತಃ** ಸ್ವೀಕರಿಸುವ ಭಗವಂತನ **ಸೂರಿಭಿಃ** ಬ್ರಹ್ಮಾದಿ ಜ್ಞಾನಿಗಳಿಂದ **ಪರಿಗೀತಾನಿ** ಗಾನಮಾಡಲ್ಪಡುವ **ಉದಾರಾಣಿ** ಉತ್ಕೃಷ್ಟವಾದ, ದೋಷರಹಿತವಾದ **ಕರ್ಮಾಣಿ** ಚರಿತ್ರೆಗಳನ್ನು **ಶ್ರದ್ಧಧಾನಾನಾಂ** ವಿಶ್ವಾಸಮಾಡುವ **ನಃ** ನಮಗೆ **ಬ್ರೂಹಿ** ಹೇಳಿರಿ.

**ಅಥಾಖ್ಯಾಹಿ ಹರೇರ್ಧೀಮನ್ನವತಾರಕಥಾಃ ಶುಭಾಃ ।**
**ಲೀಲಾ ವಿದಧತಃ ಸ್ವೈರಮೀಶ್ವರಸ್ಯಾತ್ಮಮಾಯಯಾ ॥೧೮॥**

**ಅಥ** ಕಥಾಶ್ರವಣವು ಮನಶ್ಶುದ್ಧಿಕರ ಮತ್ತು ಕಲ್ಮಶನಾಶಕವಾದ್ದರಿಂದ **ಆತ್ಮಮಾಯಯಾ** ತನ್ನ ಸ್ವರೂಪೇಚ್ಛೆಯಿಂದ **ಸ್ವೈರಂ** ಯಥೇಷ್ಟವಾಗಿ **ಶುಭಾಃ** ಮಂಗಲಕರವಾದ **ಲೀಲಾಃ** ಪ್ರಲಯ ಜಲವಿಹಾರ ಮುಂತಾದ ಕ್ರೀಡೆಗಳನ್ನು **ವಿದಧತಃ**

ಮಾಡುವ **ಈಶ್ವರಸ್ಯ** ಸರ್ವಸಮರ್ಥನಾದ **ಹರೇಃ** ಶ್ರೀಹರಿಯ **ಅವತಾರಕಥಾಃ** ಅವತಾರ ಚರಿತ್ರೆಗಳನ್ನು **ಹೇ ಧೀಮನ್** ಜ್ಞಾನಿಯೇ **ಆಖ್ಯಾಹಿ** ಹೇಳು.

ಶ್ರೀಹರಿಗೆ ಜಡ ಅಂತಃಕರಣವಿಲ್ಲದ್ದರಿಂದ ಅದರ ಕಾರ್ಯವಾದ ಇಚ್ಛೆ ಇರುವದಿಲ್ಲ.ಅಂದಮೇಲೆ **ಯಥೇಷ್ಟಂ** ಎಂದು ಹೇಗೆ ಹೇಳಿದ್ದು ಎಂಬ ಶಂಕೆಗೆ ಉತ್ತರ **ಆತ್ಮಮಾಯಯಾ** ಎಂಬುದು. ಇದರಿಂದ ಶಂಕಾಪರಿಹಾರವಾಗುವಂತೆ ಅನುವಾದ ಮಾಡಿ ವ್ಯಾಖ್ಯಾನಿಸುವರು.

*ಭಾಗವತತಾತ್ಪರ್ಯ-*

**ಆತ್ಮಮಾಯಯಾ ಸ್ವರೂಪಭೂತೇಚ್ಛಯಾ ।**

ತನ್ನ ಇಚ್ಛಾನುಸಾರ ಮಾಡುವವನಾದ್ದರಿಂದ **ಸ್ವೈರಂ** ಎಂಬುದು ಯುಕ್ತವೇ ಎಂದು ಭಾವ. ಮಾಯಾಶಬ್ದ ಇಚ್ಛಾವಾಚಕ ಎನ್ನಲು ಪ್ರಮಾಣ ಹೇಳುವರು

**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವ ತವೇಚ್ಛಾಽನಂತ ಕಥ್ಯತೇ ॥ -ಇತಿ ಸ್ಕಾಂದೇ**

ಹೇ ಅನಂತನೆ **ಮಹಾಮಾಯಾ** ಎಂದು **ಅವಿದ್ಯಾ** ಎಂದು **ನಿಯತಿ** ಎಂದು **ಮೋಹಿನೀ** ಎಂದೂ **ಪ್ರಕೃತಿ, ವಾಸನಾ** ಎಂದು ನಿನ್ನ ಇಚ್ಛೆ ಹೇಳಲ್ಪಡುವುದು ಎಂದು ಸ್ಕಾಂದ ಪುರಾಣದಲ್ಲಿದೆ. ಯದ್ಯಪಿ ಈ ಪ್ರಮಾಣದಲ್ಲಿ ಮಾಯಾ ಶಬ್ದವಿಲ್ಲ. ಆದರೂ ಮಾಯಾಂ ತು ಪ್ರಕೃತಿಂ ವಿದ್ಯಾತ್, ಎಂಬ ಪ್ರಮಾಣಾನುಸಾರ ಮಾಯಾಶಬ್ದ ಪರ್ಯಾಯ ಪ್ರಕೃತಿಶಬ್ದ. ಇಚ್ಛಾವಾಚಕವೆಂದು ತಿಳಿಸಿದರೆ ಮಾಯಾಶಬ್ದವೂ ಇಚ್ಛಾರ್ಥಕ. ಈ ಅಭಿಪ್ರಾಯದಿಂದ ಪ್ರಮಾಣ ಹೇಳಿದ್ದಾರೆ.

ಇಚ್ಛೆಯು ಭಗವತ್ಸ್ವರೂಪ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು.

**ವಿಷ್ಣುಸಂಹಿತಾಯಾಂ ಚ -**

**ಇಚ್ಛಾಶಕ್ತಿರ್ಜ್ಞಾನಶಕ್ತಿಃ ಕ್ರಿಯಾಶಕ್ತಿರಿತಿ ತ್ರಿಧಾ ।**
**ಶಕ್ತಿಶಕ್ತಿಮತೋಶ್ಚಾಪಿ ನ ಭೇದಃ ಕಶ್ಚನೇಷ್ಯತೇ ॥ -ಇತಿ**

ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂದು ಮೂರುವಿಧ ಶಕ್ತಿಗಳು. ಶಕ್ತಿಯುಳ್ಳವ್ಯಕ್ತಿಗೂ ವೈಲಕ್ಷಣ್ಯವಾಗಲಿ, ಅನ್ಯೋನ್ಯಾಭಾವರೂಪವಾದ ಭೇದವಾಗಲಿ ಇರುವದಿಲ್ಲ ಎಂದು ವಿಷ್ಣುಸಂಹಿತೆಯಲ್ಲಿದೆ.

ಅನೇಕ ಬಾರಿ ಶ್ರೀಹರಿಯ ಪರಾಕ್ರಮಗಳನ್ನು ಕೇಳಿದ ನಿಮಗೇಕೆ ಈ ರೀತಿಯ ಪ್ರಶ್ನೆ. ಅದಕ್ಕೆ ಉತ್ತರಿಸುವರು

**ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೈಃ ।**
**ಯಚ್ಛೃಣ್ವತಾಂ ರಸಜ್ಞಾನಾಂ ಸ್ವಾದು ಸ್ವಾದು ಪದೇ ಪದೇ ॥೧೯॥**

**ವಯಂ ತು** ನಾವಾದರೂ **ಉತ್ತಮಶ್ಲೋಕವಿಕ್ರಮೈಃ** ತಮಸ್ಸನ್ನು ಕಳೆಯುವ ಕೀರ್ತಿಯುಳ್ಳ ಶ್ರೀಹರಿಯ ಚರಿತ್ರೆ ಕೇಳುವದರಿಂದ **ನ ವಿತೃಪ್ಯಾಮ** ಅಲಂಬುದ್ಧಿ ಹೊಂದಲಾರೆವು(ಸಾಕೆನ್ನಲಾರೆವು)**ಯತ್ ಶೃಣ್ವತಾಂ** ಯಾವ ಚರಿತ್ರೆಗಳನ್ನು ಕೇಳುವ **ರಸಜ್ಞಾನಾಂ** ಸಾರವನ್ನು ತಿಳಿದವರಿಗೆ(ಶೃಂಗಾರಾದಿನವರಸಗಳನ್ನರಿತವರಿಗೆ) **ಸ್ವಾದು ಸ್ವಾದು** ಅತ್ಯಂತ ಸ್ವಾದುವಾದುದು. **ಪದೇ ಪದೇ** ಪ್ರತಿಪದದಲ್ಲಿ ಪ್ರತಿವಾಕ್ಯದಲ್ಲಿ ಪ್ರತಿಶ್ಲೋಕದಲ್ಲಿಯೂ ಸ್ವಾದವಿದೆ ಎಂದು ಭಾವ.

೧೨ ನೆಯ ಶ್ಲೋಕದಲ್ಲಿ ವಸುದೇವನಿಂದ ದೇವಕಿಯಲ್ಲಿ ಏತಕ್ಕೆ ಅವತರಿಸಿದನೆಂದು ಸಾಮಾನ್ಯವಾಗಿ ಕೇಳಿದ ಕೃಷ್ಣಾವತಾರ ಚರಿತ್ರೆಯನ್ನೇ ಉತ್ಸಾಹದಿಂದ ವಿಶೇಷವಾಗಿ ಹೇಳುವರು.

**ಕೃತವಾನ್ ಕಿಲ ವೀರ್ಯಾಣಿ ಸಹ ರಾಮೇಣ ಕೇಶವಃ ।**
**ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ ॥೨೦॥**

**ಕಪಟಮಾನುಷಃ** ಜನರಿಗೆ ಮನುಷ್ಯದೇಹವೆಂದು ಭ್ರಾಂತಿ ಬರುವಂತಿರುವ (ಅಥವಾ ಮನುಷ್ಯರಂತಿರುವ ದೇಹದಲ್ಲಿಯು **ಕಂ** ಸುಖವನ್ನು **ಪಟತಿ** ಹೊಂದುವ ಎಂದು ಅರ್ಥ.) **ಗೂಢಃ** ಯಾರಿಗೂ ತಿಳಿಯದ ಮಹಿಮೆಯುಳ್ಳ **ಭಗವಾನ್ ಕೇಶವಃ** ಐಶ್ವರ್ಯಶಾಲಿಯಾದ ಶ್ರೀಕೃಷ್ಣನು **ರಾಮೇಣ ಸಹ** ಬಲರಾಮನೊಡನೆ **ಅತಿಮರ್ತ್ಯಾನಿ** ಮನುಷ್ಯರಿಗೆ ಮಾಡಲಾಗದ **ವೀರ್ಯಾಣಿ** ಪರಾಕ್ರಮಗಳನ್ನು **ಕೃತವಾನ್ ಕಿಲ** ಮಾಡಿದನಷ್ಟೇ.

ಯಜ್ಞ-ಅಧ್ಯಯನದಲ್ಲಿ ತೊಡಗಿದ ನಿಮಗೆ ಕಥಾಶ್ರವಣಕ್ಕೆಲ್ಲಿ ಅವಕಾಶ ಎಂದರೆ ಹೇಳುವರು

**ಕಲಿಮಾಗತಮಾಜ್ಞಾಯ ಕ್ಷೇತ್ರೇಽಸ್ಮಿನ್ ವೈಷ್ಣವೇ ವಯಮ್ ।**
**ಆಸೀನಾ ದೀರ್ಘಸತ್ರೇಣ ಕಥಾಯಾಂ ಸಕ್ಷಣಾ ಹರೇಃ ॥೨೧॥**

**ಆಗತಂ ಕಲಿಂ** ಪ್ರವೇಶಮಾಡಿದ ಕಲಿಯನ್ನು **ಆಜ್ಞಾಯ** ಚೆನ್ನಾಗಿ ತಿಳಿದು **ವಯಂ** ನಾವು **ಅಸ್ಮಿನ್ ವೈಷ್ಣವೇ ಕ್ಷೇತ್ರೇ** ಈ ವಿಷ್ಣುಕ್ಷೇತ್ರದಲ್ಲಿ **ದೀರ್ಘಸತ್ರೇಣ ಆಸೀನಾಃ** ಎಲ್ಲ ವ್ಯಾಪಾರಗಳನ್ನು ಬಿಟ್ಟು ಬಹುಕಾಲ ಮಾಡುವ ಸತ್ರದಲ್ಲಿ ದೀಕ್ಷಿತರಾಗಿ ಕುಳಿತಿರುವವು ಆದ್ದರಿಂದ **ಹರೇಃ ಕಥಾಯಾಃ** ಶ್ರೀಹರಿಕಥಾಶ್ರವಣದಲ್ಲಿ **ಸಕ್ಷಣಾಃ** ಅವಕಾಶವುಳ್ಳವರಾಗಿದ್ದೇವೆ.

**ನಾವಿಕನಂತೆ ಇರುವ ರೌಮಹರ್ಷಣಿಗಳು**

ಈ ಸಮಯದಲ್ಲಿ ದೇವರೆ ನಿನ್ನ ದರ್ಶನ ಮಾಡಿಸಿದನೆಂದು ಹೇಳುವರು

**ತ್ವನ್ನಃ ಸಂದರ್ಶಿತೋ ಧಾತ್ರಾ ದುಸ್ತರಂ ನಿಸ್ತಿತೀರ್ಷತಾಮ್ ।**
**ಕಲಿಂ ಸತ್ವಹರಂ ಪುಂಸಾಂ ಕರ್ಣಧಾರ ಇವಾರ್ಣವಮ್ ॥೨೨॥**

**ದುಸ್ತರಂ** ದಾಟಲಾಗದ **ಅರ್ಣವಂ** ಸಮುದ್ರವನ್ನು **ನಿಸ್ತಿತೀರ್ಷತಾಂ** ದಾಟಿ ದ್ವೀಪಾಂತರಕ್ಕೆ ಹೋಗುವ ಸಂಯಾತ್ರಿಕರಿಗೆ **ಕರ್ಣಧಾರ** ಇವ ನಾವಿಕನಂತೆ (1.ಕರ್ಣಧಾರಃ ನಾವಿಕಃ ಯಾದುಪತ್ಯಕೋಶಃ, 2.ಕರ್ಣಧಾರಃ ಕೂಪಕಾಗ್ರಸ್ಥಾಯಿ ವಿಜಯಧ್ವಜೀಯ. ಕೂಪಕ ಎಂಬ ಹಡಗಿನ ಧ್ವಜಸ್ತಂಭ ಅದರ ಮುಂದಿರುವ ಅರ್ಥಾತ್ ನಾವಿಕ.) **ಪುಂಸಾಂ ಸತ್ವಹರಂ** ಜನರ ಸತ್ವಕಾರ್ಯಜ್ಞಾನಾದಿಗಳನ್ನು ನಾಶಮಾಡುವ **ದುಸ್ತರಂ** ದಾಟಲಾಗದ ಕಲಿಯನ್ನು **ನಿಸ್ತಿತೀರ್ಷತಾಂ** ಚೆನ್ನಾಗಿ ದಾಟಲಪೇಕ್ಷಿಸುವ **ನಃ** ನಮಗೆ **ಧಾತ್ರಾ** ದೈವದಿಂದ **ತ್ವಂ** ನೀನು **ಸಂದರ್ಶಿತಃ** ತೋರಿಸಲ್ಪಟ್ಟಿರುವಿ.

**ಬ್ರೂಹಿ ಯೋಗೇಶ್ವರೇ ಕೃಷ್ಣೇ ಬ್ರಹ್ಮಣ್ಯೇ ಧರ್ಮಕರ್ಮಣಿ ।**
**ಸ್ವಾಂ ಕಾಷ್ಠಾಮಧುನೋಪೇತೇ ಧರ್ಮಃ ಕಂ ಶರಣಂ ಗತಃ ॥೨೩॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಪ್ರಥಮೋಽಧ್ಯಾಯಃ ॥

**ಧರ್ಮಕರ್ಮಣಿ** ಧರ್ಮರೂಪವಾದ ಕರ್ಮಗಳುಳ್ಳ **ಬ್ರಹ್ಮಣ್ಯೇ** ಬ್ರಾಹ್ಮಣರಿಗೆ ಹಿತಮಾಡುವ **ಯೋಗೇಶ್ವರೇ** ಅಣಿಮಾದಿಯೋಗಗಳಿಗೆ ನಿಯಾಮಕನಾದ ಅಥವಾ ಭಕ್ತಿಜ್ಞಾನರೂಪ ಯೋಗಗಳಿಗೆ ಈಶ್ವರನಾದ **ಕೃಷ್ಣೇ** ಸಚ್ಚಿದಾನಂದರೂಪನಾದ ಶ್ರೀಕೃಷ್ಣನು **ಸ್ವಾಂ ಕಾಷ್ಠಾಂ** ತನ್ನ ಮೂಲರೂಪವನ್ನು **ಉಪೇತೇ ಸತಿ** ಹೊಂದುತ್ತಿರಲು **ಧರ್ಮಃ** ಭಕ್ತಿಜ್ಞಾನಾದಿಧರ್ಮವು **ಕಂ ಶರಣಂ ಗತಃ** ಯಾರನ್ನು ಮೊರೆ ಹೋಯಿತು?

ಇಲ್ಲಿಗೆ ಮೊದಲನೆಯ ಅಧ್ಯಾಯವು ಮುಗಿಯಿತು

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ದ್ವಿತೀಯೋऽಧ್ಯಾಯಃ

**ಅಧ್ಯಾಯ ಸಾರಾಂಶ**

ಹಿಂದೆ ಶೌನಕರು ಕೇಳಿದ ಸಮೀಚೀನವಾದ ಆರು ಪ್ರಶ್ನೆಗಳಿಗೆ ರೋಮಹರ್ಷಣರ ಪುತ್ರರಾದ ಸೂತರು ಉತ್ತರ ರೂಪವಾಗಿ ಶ್ರೀಮದ್ಭಾಗವತವನ್ನು ಹೇಳಲು ಪ್ರಾರಂಭಿಸಿದರು.

ಅಜ್ಞಾನವನ್ನು ಕಳೆದುಕೊಳ್ಳಲು ಇಚ್ಛಿಸುವ ಸಂಸಾರಿಗಳಿಗೆ ಅನನ್ಯಾಧೀನ ಸಾಮರ್ಥ್ಯವುಳ್ಳ, ಸಮಸ್ತ ವೇದಗಳಿಂದ ಮುಖ್ಯಪ್ರತಿಪಾದ್ಯನಾದ, ಸರ್ವೋತ್ತಮನಾದ, ಜೀವನ ಶರೀರದಲ್ಲಿ ದೀಪದಂತಿರುವ, ಭಾಗವತಾದಿ ಪುರಾಣಗಳ ರಹಸ್ಯನಾದ ಪರಬ್ರಹ್ಮನನ್ನು ಯಾರು ದಯೆಯಿಂದ ಉಪದೇಶ ಮಾಡಿದರೋ ಅಂತಹ ವ್ಯಾಸಪುತ್ರರಾದ ನನ್ನ ಗುರುಗಳಾದ ಶುಕಾಚಾರ್ಯರನ್ನು ಶರಣು ಹೋಗುವೆನು. ಗ್ರಂಥ ಪ್ರತಿಪಾದ್ಯ ದೇವತೆಯಾದ ವೇದವ್ಯಾಸದೇವರನ್ನು, ಭಾಗ್ಯಾತ್ಮಕಳಾದ ಲಕ್ಷ್ಮೀದೇವಿಯನ್ನು, ವಿದ್ಯಾಭಿಮಾನಿನಿ ಸರಸ್ವತಿಯನ್ನು, ಉಪಸಾಧಕರಾದ ಶೇಷದೇವರನ್ನು ನಮಸ್ಕಾರ ಮಾಡಿಯೇ ಅವರ ಪ್ರಸಾದದಿಂದ ಭಾಗವತವನ್ನು ನಿಮ್ಮ ಪ್ರಶ್ನೆಗೆ ಉತ್ತರವಾಗಿ ಹೇಳುವೆನು.

ಭಗವಂತನ ಪ್ರಸಾದದ ಹೊರತಾಗಿ ಬೇರೆ ಫಲಾನುಸಂಧಾನರೂಪ ಕಾರಣ ಇಲ್ಲದಿರುವ, ವಿಷಯಾಸಕ್ತಿ ಮೊದಲಾದ ವ್ಯವಧಾನವಿಲ್ಲದ, ಯಾವ ಭಕ್ತಿಯಿಂದ ಪರಮಾತ್ಮನು ಬೇಗನೆ ಪ್ರಸನ್ನನಾಗುವನೋ ಅಂತಹ ಭಕ್ತಿಯು ಅಧಿಕಾರಿಗಳಿಗೆ ಪರಮಧರ್ಮವು.

ಭಗವಂತನ ಬಗ್ಗೆ ಶ್ರವಣ ಮನನ ಕೀರ್ತನ ಧ್ಯಾನಗಳನ್ನು ಮಾಡುತ್ತಲೇ ಧರ್ಮಾಚರಣೆ ಮಾಡಬೇಕು. ಹಾಗೆ ಶ್ರವಣ ಮಾಡುವವರ ಹೃದಯದಲ್ಲಿ ಕೃಷ್ಣ ಬಂದು ನೆಲೆಸಿ ಮೈದೋರಿ ಅವಿದ್ಯೆಯನ್ನು ದೂರಮಾಡುತ್ತಾನೆ. ಅದಕ್ಕಾಗಿ ಮುಮುಕ್ಷುಗಳು ತಮ್ಮಲ್ಲಿ ಸತ್ವಗುಣವನ್ನು ಬೆಳೆಸಿಕೊಳ್ಳಬೇಕು. ಸತ್ವಗುಣಕ್ಕೆ ಭಗವಂತ ಒಲಿಯುತ್ತಾನೆ. ಸತ್ವಗುಣದಿಂದ ಲೋಕವನ್ನು ಪಾಲಿಸುವದಕ್ಕಾಗಿ ಅವನು ಅನೇಕ ಅವತಾರಗಳನ್ನು ತಾಳುತ್ತಾನೆ.

**ಇತಿ ಸಂಪ್ರಶ್ನಸಂಪೃಷ್ಟೋ ವಿಪ್ರಾಣಾಂ ರೌಮಹರ್ಷಣಿಃ ।**
**ಪ್ರತಿಪೂಜ್ಯವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥೧॥**

**ವಿಪ್ರಾಣಾಂ** ಶೌನಕಾದಿಬ್ರಾಹ್ಮಣರ **ಇತಿ** ಹಿಂದೆ ಹೇಳಿದ **ಸಂಪ್ರಶ್ನಸಂಪೃಷ್ಟಃ** ಭಗವದ್ವಿಷಯಕವಾದ್ದರಿಂದ ಸಮೀಚೀನವಾದ ಆರು ಪ್ರಶ್ನೆಗಳನ್ನು ಶ್ರದ್ಧೆಯಿಂದ ಕೇಳಲ್ಪಟ್ಟವನಾಗಿ **ರೌಮಹರ್ಷಣಿಃ** ರೋಮಹರ್ಷಣರ ಪುತ್ರರಾದ ಸೂತರು **ತೇಷಾಂ** ಶೌನಕಾದಿಗಳ **ವಚಃ** ಮಾತುಗಳನ್ನು **ಪ್ರತಿಪೂಜ್ಯ** ಸತ್ಕರಿಸಿ **ಪ್ರವಕ್ತುಂ** ಉತ್ತರ ರೂಪವಾಗಿ ಶ್ರೀಮದ್ಭಾಗವತವನ್ನು ಹೇಳಲು **ಉಪಚಕ್ರಮೇ** ಪ್ರಾರಂಭಿಸಿದರು.

ಮೊದಲಿಗೆ ಶಿಷ್ಟಾಚಾರ ಪರಿಪಾಲನೆಗಾಗಿ ಸೂತರು ತಮ್ಮ ಗುರುಗಳಾದ ಶುಕಾಚಾರ್ಯರ ಮಾಹಾತ್ಮ್ಯವನ್ನು ತಿಳಿಸುತ್ತ ಅವರನ್ನು ನಮಸ್ಕರಿಸುವರು.

**ಗ್ರಂಥಾರಂಭದಲ್ಲಿ ಗುರುಸ್ಮರಣೆ**

**ಸೂತ ಉವಾಚ -**

**ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ**
**ದ್ವೈಪಾಯನೋ ವಿರಹಕಾತರ ಆಜುಹಾವ ।**
**ಪುತ್ರೇತಿ ತನ್ಮಯತಯಾ ತರವೋಽಪಿ ನೇದು-**
**ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥೨॥**

**ಅನುಪೇತಂ** ದೇಹಾಭಿಮಾನವಿಲ್ಲದ(ಅಭಿಮಾನವಿಲ್ಲದ ದೇಹಾದಿಗಳಿಂದ ಕೂಡಿರುವ ಎಂದರ್ಥ)**ಅಪೇತಕೃತ್ಯಂ** ಗೃಹಸ್ಥಾಶ್ರಮೋಚಿತ ಕಾರ್ಯರಹಿತರಾದ **ಪ್ರವ್ರಜಂತಂ** ಸನ್ಯಾಸಾಶ್ರಮವನ್ನು ಸ್ವೀಕರಿಸಿರುವ **ಯಂ** ಯಾವ ಶುಕಾಚಾರ್ಯರನ್ನು **ವಿರಹಕಾತರಃ** ಮಗನಾದ ಶುಕನ ವಿರಹದಿಂದ ಧೈರ್ಯ ಕಳೆದುಕೊಂಡವನಂತೆ ತೋರುವ **ದ್ವೈಪಾಯನಃ** ದ್ವೀಪವೇ ಆಶ್ರಯವಾಗಿವುಳ್ಳ ವೇದವ್ಯಾಸರು **ಪುತ್ರ ಇತಿ**

**ಆಜುಹಾವ** ಮಗನೇ ಎಂದು ಕರೆದರು ಆಗ **ತನ್ಮಯತಯಾ** ಶುಕಾಚಾರ್ಯರಿಂದ ಪ್ರೇರಿತವಾದ **ತರವಃ ಅಪಿ** ಶರೀರವಿಲ್ಲದ ವೃಕ್ಷಗಳೂ(ಶರೀರವಿದ್ದ ಮನುಷ್ಯರು ಉತ್ತರಿಸಿದರು ಎಂದೇನು ಹೇಳುವುದು ಮನುಷ್ಯರು ಉತ್ತರಿಸಿದರು ಎಂಬುವುದು ಕೈಮುತ್ಯ ಸಿದ್ಧ. ಅದನ್ನು ತಿಳಿಸಲು ಅಪಿ ಶಬ್ದ) **ನೇದುಃ** ಪ್ರತ್ಯುತ್ತರ ಕೊಟ್ಟವೋ **ತಂ** ಅಂತಹ **ಸರ್ವಭೂತಹೃದಯಂ** ಎಲ್ಲಪ್ರಾಣಿಗಳ ಹೃದಯದಲ್ಲಿರುವ **ಮುನಿಂ** ಶುಕಾಚಾರ್ಯರನ್ನು **ಆನತಃ ಅಸ್ಮಿ** ನಮಸ್ಕಾರ ಮಾಡುವೆನು.

**ವಿಶೇಷ-** ನಾನು ಎಲ್ಲ ಪ್ರಾಣಿಗಳ ದೇಹದಲ್ಲಿರುವದರಿಂದ ನನ್ನ ವಿಯೋಗ ನಿನಗಿಲ್ಲ. ಆದ್ದರಿಂದ ಕಾತರಿಸಬೇಕಿಲ್ಲ ಎಂದು ತಂದೆಗೆ ಸಾಂತ್ವನ ಹೇಳಲು ತಾನು ಎಲ್ಲಡೆ ಇರುವುದನ್ನು ತಿಳಿಸುತ್ತಾ ಶುಕಾಚಾರ್ಯರು ತಾವೇ ಎಲ್ಲ ಪ್ರಾಣಿಗಳಲ್ಲಿದ್ದು ಉತ್ತರ ಕೊಟ್ಟರೆಂದು ಭಾವ.

ದ್ವೀಪಸ್ಯ ಅಪತ್ಯಂ ದ್ವೈಪಾಯನಃ ಎಂದು ವಿಗ್ರಹ ಮಾಡಿ ನದೀ ದ್ವೀಪದಲ್ಲಿ ಹುಟ್ಟಿದ್ದರಿಂದ ಔಪಚಾರಿಕವಾಗಿ ದ್ವೀಪದ ಮಗನೆಂದು ಕರೆಯಬಹುದು. ಇದರಂತೆ ಪರಾಶರ ಸುತನೆಂಬುದು ಔಪಚಾರಿಕವೆಂದು ಸೂಚಿಸಲು ದ್ವೈಪಾಯನ ಎಂಬ ಹೆಸರನ್ನು ಪ್ರಸಿದ್ಧಗೊಳಿಸಿದರು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಅನುಪೇತಂ 'ಮಾಂ ಉಪನಯಸ್ವ ಇತ್ಯನುಪಸನ್ನಂ' ನನಗೆ ಉಪನಯನ ಮಾಡೆಂದು ಸಮೀಪಿಸದಿರುವ ಅರ್ಥಾತ್ ಉಪನಯನವಿಲ್ಲದವ ಎಂದರ್ಥ ಮಾಡುವರು ಅದು ಸರಿಯಲ್ಲ. ಮುಂದೆ ಪ್ರವ್ರಜಂತಂ ಎಂದು ಸನ್ಯಾಸಸ್ವೀಕಾರ ಹೇಳುವರು. ಉಪನಯನವಿಲ್ಲದೇ ಸನ್ಯಾಸ ಯುಕ್ತವಲ್ಲ. ಆದ ಕಾರಣ ಶಬ್ದವನ್ನು ಅಧ್ಯಾಹಾರ ಮಾಡಿ ಸರಿಯಾಗಿ ವ್ಯಾಖ್ಯಾನಿಸುವರು.

ಅನುಪೇತಂ ದೇಹಾದಿಭಿಃ । ಅನಭಿಮಾನಾತ್ । ಅಕಾತರಃ ಕಾತರವದ್ದರ್ಶಯನ್ ।

ಉಕ್ತಂ ಚ ಸ್ಕಾಂದೇ -

ನಿತ್ಯತೃಪ್ತಃ ಪರಾನಂದೋ ಯೋಽವ್ಯಯಃ ಪರಮೇಶ್ವರಃ ।
ಯಸ್ಯ ಪುತ್ರಫಲಂ ನೈವ ಯಜ್ಜಾತಂ ಜಗದೀದೃಶಮ್ ॥

ಯದಧೀನಶ್ರಿಯೋಽಪಾಂಗಾದ್ ಬ್ರಹ್ಮರುದ್ರಾದಿಸಂಸ್ಥಿತಿಃ ।
ಸಪುತ್ರಾರ್ಥಂ ತಪಸ್ತೇಪೇ ವ್ಯಾಸೋ ರುದ್ರಸ್ಯ ಚೇಶ್ವರಃ ॥

ಕಾತರ್ಯಂ ದರ್ಶಯಾಮಾಸ ವಿಯೋಗೇ ಲೌಕಿಕಂ ಹರಿಃ ।
ಕುತಃ ಕಾತರತಾ ತಸ್ಯ ನಿತ್ಯಾನಂದಮಹೋದಧೇಃ ॥ ಇತಿ ।
ಈಶನ್ನಪಿ ಹಿ ಲೋಕಸ್ಯ ಸರ್ವಸ್ಯ ಜಗತೋ ಹರಿಃ ।
ಕರ್ಮಾಣಿ ಕುರುತೇ ವಿಷ್ಣುಃ ಕೀನಾಶ ಇವ ದುರ್ಬಲಃ ॥ -ಇತಿ ಚೋದ್ಯೋಗೇ
ದೇವತ್ವೇ ದೇವವಚ್ಚೇಷ್ಟಾ ಮಾನುಷತ್ವೇ ಚ ಮಾನುಷೀ । -ಇತಿ ವಿಷ್ಣುಧರ್ಮೇ
ಸರ್ವಭೂತಹೃದಯಮ್ । ಅಹಂಕಾರಾತ್ಮಕತ್ವಾತ್ ।
ಅಹಂಕಾರಾತ್ಮಕೋ ರುದ್ರಃ ಶುಕೋ ದ್ವೈಪಾಯನಾತ್ಮಜಃ ॥ಇತಿ ಸ್ಕಾಂದೇ

ದೇಹಾದಿಗಳಿದ್ದರೂ ಅವುಗಳಲ್ಲಿ ಅಭಿಮಾನವಿಲ್ಲದಿರುವುದರಿಂದ ಶುಕಾಚಾರ್ಯರು ದೇಹಾದಿಗಳಿಲ್ಲದವರು ಎನಿಸುವರು. ಮಹಾಧೈರ್ಯಶಾಲಿಗಳಾದ ವೇದವ್ಯಾಸದೇವರು ಅಯೋಗ್ಯ ಜನರನ್ನು ಮೋಹಗೊಳಿಸಲು ಧೈರ್ಯವಿಲ್ಲದವರಂತೆ ತೋರಿಸಿದರು.

ಶ್ರೀಹರಿಯು ನಿತ್ಯತೃಪ್ತ, ಪೂರ್ಣಾನಂದಸ್ವರೂಪ, ನಾಶವಿಲ್ಲದವನಾದ್ದರಿಂದ ಅವನಿಗೆ ಮಕ್ಕಳಿಂದಾಗುವ ಯಾವ ಫಲವೂ ಇಲ್ಲ. ಇಂತಹ ಜಗತ್ಕಾರಣನಾದ ಶ್ರೀಹರಿಯ ಅಧೀನಳಾದ ಲಕ್ಷ್ಮೀದೇವಿಯ ಕಟಾಕ್ಷವೀಕ್ಷಣಮಾತ್ರದಿಂದಲೇ ಬ್ರಹ್ಮರುದ್ರಾದಿಗಳು ಅವರವರ ಸ್ಥಾನದಲ್ಲಿರುವರು. ಈ ವಿಧವಾದ ಅನೇಕ ಮಹಾಮಹಿಮೆಗಳುಳ್ಳ ಭಗವಂತನು ರುದ್ರನಿಗೂ ನಿಯಾಮಕನಾಗಿದ್ದಾನೆ. ಅಂತಹ ಸರ್ವಜ್ಞಮೂರ್ತಿಯಾದ ಶ್ರೀವೇದವ್ಯಾಸದೇವರು ಮಕ್ಕಳಾಗಬೇಕೆಂದು(ರುದ್ರನನ್ನು ಕುರಿತು)ತಪಸ್ಸು ಮಾಡಿದಂತೆ ತೋರಿಸಿದ್ದು ಮತ್ತು ಶುಕಾಚಾರ್ಯರು ಸನ್ಯಾಸಾಶ್ರಮವನ್ನು ಸ್ವೀಕರಿಸಲು ಹೋದಾಗ ಲೌಕಿಕ ಜನರಂತೆ ಅಧೈರ್ಯವನ್ನು ತೋರಿಸಿದ್ದು ಅಜ್ಞಜನರ ಮೋಹನಕ್ಕಾಗಿ ಎಂದು ಸ್ಕಾಂದ ಪುರಾಣವು ಹೇಳುತ್ತದೆ.

ಇದರಂತೆ ಮಹಾಭಾರತದ ಉದ್ಯೋಗಪರ್ವವು ಹೀಗೆ ಹೇಳುತ್ತದೆ. ವ್ಯಾಸಾದಿ ರೂಪನಾದ ಶ್ರೀಹರಿಯು ಎಲ್ಲ ಜಗತ್ತಿಗೆ ನಿಯಾಮಕನಾದರೂ ಮೋಹಕ್ಕಾಗಿ ಸಾಮಾನ್ಯನಾದ, ದುರ್ಬಲನಾದ ವಕ್ಕಲಿಗನಂತೆ ಅಧೈರ್ಯ ತೋರಿಸುವನು ಎಂದು. ದೇವತೆಗಳು ಮೂಲರೂಪದಿಂದ ಇರುವಾಗ ದೇವತೆಗಳಂತೆಯೇ ಇರುತ್ತಾರೆ. ಮನುಷ್ಯರಾಗಿ ಅವತರಿಸಿದಾಗ ಮನುಷ್ಯರಂತೆ ವರ್ತಿಸುವರು. ಎಂದು ವಿಷ್ಣು ಧರ್ಮದಲ್ಲಿ ಹೇಳಿದ್ದನ್ನು ದೇವತೆಗಳಿಗೆ ಶಿಕ್ಷಿಸಲು ಕಾತರನಾದಂತೆ ತೋರಿಸಿದನು ಎಂದು ಆ ಮಾತಿನ ಭಾವ.

ರುದ್ರದೇವರು ಮನಸ್ಸಿನ ಪ್ರಭೇದವಾದ ಅಹಂಕಾರಕ್ಕೆ ಅಭಿಮಾನಿಗಳು. ಆದ್ದರಿಂದ ಸರ್ವ ಪ್ರಾಣಿಗಳ ಮನೋವಿಶೇಷರೂಪವಾದ ಅಹಂಕಾರಕ್ಕೆ ವೇದವ್ಯಾಸಪುತ್ರರಾದ ಶುಕಾಚಾರ್ಯರು ಪ್ರೇರಕರು. ಆ ಶುಕಾಚಾರ್ಯರು ರುದ್ರಸ್ವರೂಪರೆಂದು ಸ್ಕಾಂದಪುರಾಣವು ಹೇಳುತ್ತದೆ.

ಇದು ಎಲ್ಲ ತತ್ವಾಭಿಮಾನಿಗಳಿಗೆ ಸಾಧಾರಣವಾದುದು ಆದ್ದರಿಂದ ಅಸಾಧರಣವಾದ ಅವರ ಮಾಹಾತ್ಮ್ಯವನ್ನು ಹೇಳುತ್ತಾ ಭಕ್ತ್ಯುದ್ರೇಕದಿಂದ ಮತ್ತೊಂದು ಮಂಗಲಾಚರಣವನ್ನು ಮಾಡುವರು.

**ಯಃ ಸ್ವಾನುಭಾವಮಖಿಲಶ್ರುತಿಸಾರಮೇಕ-**
**ಮಧ್ಯಾತ್ಮದೀಪಮತಿತಿತೀರ್ಷತಾಂ ತಮೋಽಂಧಮ್ ।**
**ಸಂಸಾರಿಣಾಂ ಕರುಣಯಾಽಽಹ ಪುರಾಣಗುಹ್ಯಂ**
**ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಮ್ ॥೩॥**

**ಅಂಧಂ** ಕುರುಡನನ್ನಾಗಿ ಮಾಡುವ **ತಮಃ** ಅಜ್ಞಾನವನ್ನು **ಅತಿತಿತೀರ್ಷತಾಂ** ಅತಿಶಯವಾಗಿ ದಾಟಲಿಚ್ಛಿಸುವ **ಸಂಸಾರಿಣಾಂ** ನಾನೇ ಮೊದಲಾದ ಸಂಸಾರಿಗಳಿಗೆ **ಸ್ವಾನುಭಾವಂ** ಅನನ್ಯಾಧೀನ ಸಾಮರ್ಥ್ಯವುಳ್ಳ **ಅಖಿಲಶ್ರುತಿಸಾರಂ** ಸಮಸ್ತ ವೇದಗಳಿಂದ ಮುಖ್ಯ ಪ್ರತಿಪಾದ್ಯನಾದ **ಏಕಂ** ಸರ್ವೋತ್ತಮನಾದ **ಅಧ್ಯಾತ್ಮದೀಪಂ** ಜೀವನ ಶರೀರದಲ್ಲಿ **ದೀಪಂ** ದೀಪದಂತಿರುವ **ಪುರಾಣಗುಹ್ಯಂ** ಭಾಗವತಾದಿ ಪುರಾಣಗಳ ರಹಸ್ಯನಾದ ಪರಬ್ರಹ್ಮನನ್ನು **ಯಃ** ಯಾರು **ಕರುಣಯಾ** ದಯೆಯಿಂದ **ಆಹ** ಉಪದೇಶ ಮಾಡಿದರೋ **ತಂ ಮುನೀನಾಂ** ಮುನಿಗಳಿಗೆ **ಗುರುಂ ವ್ಯಾಸಸೂನುಂ** ಗುರುವಾದ ವ್ಯಾಸಪುತ್ರನನ್ನು **ಉಪಯಾಮಿ** ಶರಣು ಹೋಗುವೆನು.

**ವಿಶೇಷ :-**ಇಲ್ಲಿ **ಸ್ವಾನುಭಾವಂ** ಎಂಬಲ್ಲಿ ಸ್ವಸ್ಯ ಅನುಭಾವಃ ಎಂದು ವಿಗ್ರಹಮಾಡಿ ಶುಕಾಚಾರ್ಯರ ಸಾಮರ್ಥ್ಯ ಎಂದು ಅರ್ಥ ಮಾಡಿದರೆ ಅದರಲ್ಲಿ ಅಖಿಲಶ್ರುತಿಸಾರತ್ವ ಮುಂತಾದ ವಿಶೇಷಣಗಳು ಉಪಪನ್ನವಾಗುವದಿಲ್ಲ. ಕಾರಣ ವಿವಕ್ಷಿತಾರ್ಥ ತಿಳಿಸುವರು ಸ್ವಾನುಭಾವಂ ಬ್ರಹ್ಮ ಎಂದು ತಾತ್ಪರ್ಯವಾಕ್ಯ. ಇತರಾನಧೀನಸಾಮರ್ಥ್ಯವುಳ್ಳ ಪರಬ್ರಹ್ಮನೆಂದರ್ಥ. ಇದರಿಂದ ಸ್ವಂ ಸ್ವೀಯಃ ಅನನ್ಯಾಧೀನಃ ಅನುಭಾವಃ ಯಸ್ಯ ಸಃ ಎಂದು ವ್ಯಾಖ್ಯಾನ ಸೂಚಿತವಾಗುವುದು.

**ದುರ್ಘಟ ಭಾವದೀಪಿಕಾ-**

**ಅಖಿಲಶ್ರುತಿಸಾರಂ ಏಕಂ ಸ್ವಾನುಭಾವಂ ಚ ಉಪಯಾಮಿ ಎಂದು ಅನ್ವಯ ಮಾಡಬೇಕು.**

ಇಲ್ಲಿ ಪರಮಾತ್ಮಪರ ಅರ್ಥವನ್ನು ಹೀಗೆ ತಿಳಿಯುವುದು. ಈ ಶ್ಲೋಕದಲ್ಲಿ ಶುಕಾಚಾರ್ಯರಿಗೆ ನಮಸ್ಕಾರರೂಪ ಶರಣಾಗತಿಯನ್ನು ಹೇಳಿದ್ದರೂ ಮುಂದಿನ ಶ್ಲೋಕದಲ್ಲಿ 'ನಾರಾಯಣಂ ನಮಸ್ಕೃತ್ಯ' ಎಂದು ನಾರಾಯಣನಿಗೆ ನಮಸ್ಕಾರ ಮಾಡಿರುತ್ತಾರೆ. ಶುಕಾಚಾರ್ಯರಿಗೆ ಮಾತ್ರ ಅವಶ್ಯವಾಗಿ ಮೊರೆಹೋಗಬೇಕು ನಾರಾಯಣನಿಗೆ ಮಾಡಬೇಕಿಲ್ಲ ಎಂಬ_ಶಂಕೆಗೆ ಅವಕಾಶವಿಲ್ಲ. ಪರಬ್ರಹ್ಮನನ್ನು ಶರಣು ಹೋಗುವೆನು ಎಂದರ್ಥವು ಇಲ್ಲಿ ಹೇಳಲ್ಪಟ್ಟಿದೆ.

**ಗ್ರಂಥಾರಂಭದಲ್ಲಿ ಇತರ ದೇವತೆಗಳಿಗೆ ನಮಸ್ಕಾರ**

ಗುರು ನಮಸ್ಕಾರಾನಂತರ ಅವಶ್ಯ ನಮ್ಯರಾದ ದೇವಾದಿಗಳನ್ನು ನಮಿಸಿ ಗ್ರಂಥಾರಂಭವನ್ನು ಪ್ರತಿಜ್ಞೆ ಮಾಡುವರು.

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇ ॥೪॥**

**ನಾರಾಯಣಂ** ಗ್ರಂಥ ಪ್ರತಿಪಾದ್ಯ ದೇವತೆಯನ್ನು **ವ್ಯಾಸಂ** ನಾರಾಣಾಭಿನ್ನ ಗ್ರಂಥಕರ್ತೃ ವೇದವ್ಯಾಸದೇವರನ್ನು **ದೇವೀಂ** ಭಾಗ್ಯಾತ್ಮಕಳಾದ ಲಕ್ಷ್ಮೀದೇವಿಯನ್ನು **ಸರಸ್ವತೀಂ** ವಿದ್ಯಾಭಿಮಾನಿನಿ ಸರಸ್ವತಿಯನ್ನು **ನರಂ** ಉಪಸಾಧಕರಾದ ಶೇಷದೇವರನ್ನು **ನಮಸ್ಕೃತ್ಯ** ಏವ ನಮಸ್ಕಾರ ಮಾಡಿಯೇ **ತತಃ** ಅವರ ಪ್ರಸಾದದಿಂದ **ಗ್ರಂಥಂ** ಭಾಗವತವನ್ನು **ಉದೀರಯೇ** ನಿಮ್ಮ ಪ್ರಶ್ನೆಗೆ ಉತ್ತರವಾಗಿ ಹೇಳುವೆನು.

ವಿಶೇಷ-ನಮಸ್ಕೃತ್ಯೇವ ಎಂದದ್ದರಿಂದ ಭಾಗವತಾದಿಶಾಸ್ತ್ರ ಹೇಳುವವರು ಕೇಳುವವರು ಇವರೆಲ್ಲರಿಗೆ ನಮಸ್ಕಾರ ಮಾಡುವುದು ಆವಶ್ಯಕ. ಎಂದು ತಿಳಿಸಿರುವರು.

'ಪ್ರತಿಪೂಜ್ಯವಚಸ್ತೇಷಾಂ' ಎಂದು ಹೇಳಿದ ಪ್ರತಿಪೂಜನವನ್ನು ಮಾಡುವರು -

**ಮುನಯಃ ಸಾಧುಪೃಷ್ಟೋಽಹಂ ಭವದ್ಭಿರ್ಲೋಕಮಂಗಲಮ್ ।**
**ಯತ್ಕೃತಃ ಕೃಷ್ಣಸಂಪ್ರಶ್ನಃ ಯೇನಾತ್ಮಾಽಽಶು ಪ್ರಸೀದತಿ ॥೫॥**

**ಹೇ ಮುನಯಃ** ಮುನಿಗಳೇ **ಭವದ್ಭಿಃ** ನಿಮ್ಮಿಂದ **ಲೋಕಮಂಗಲಂ** ಸಜ್ಜನರ ಕಲ್ಯಾಣಕ್ಕಾಗಿ(ಮೋಕ್ಷಕ್ಕಾಗಿ)**ಯತ್** ಯಾವಕಾರಣ **ಕೃಷ್ಣಸಂಪ್ರಶ್ನಃ ಕೃತಃ** ಮೂಲರೂಪ ಕೃಷ್ಣ ಮತ್ತು ದೇವಕೀಸುತ ಕೃಷ್ಣರ ಚರಿತ್ರೆ ವಿಷಯವಾಗಿ ಪ್ರಶ್ನೆಯು ಮಾಡಲ್ಪಟ್ಟಿತ್ತೋ **ತತ್ ಸಾಧು ಪೃಷ್ಟಃ** ಅದು ಒಳ್ಳೆಯ ಪ್ರಶ್ನೆಯೇ(ಮಾಡಲ್ಪಟ್ಟಿದೆ) **ಯೇನ** ಯಾವುದರಿಂದ **ಆತ್ಮಾ** ಪರಮಾತ್ಮನ ಮನಸ್ಸು **ಆಶು** ಬೇಗನೆ **ಪ್ರಸೀದತಿ** ಪ್ರಸನ್ನವಾಗುವದು ನಿರ್ಮಲವಾಗುವುದು.

'ಅತಃ ಸಾಧೋऽತ್ರ ಯತ್ಸಾರಂ' ಎಂಬ ಪ್ರಶ್ನೆಯು ಕೃಷ್ಣನಲ್ಲೇ ಪರ್ಯವಸಾನ ವಾಗುವದೆಂಬ ಅಭಿಪ್ರಾಯದಿಂದ 'ಯತ್ಕೃತಃ ಕೃಷ್ಣಸಂಪ್ರಶ್ನಃ' ಎಂದಿದ್ದಾರೆ. ಮೊದಲು ಕೇಳಿದ ಏಕಾಂತತೆ ಶ್ರೇಯಸ್ಸಾಧನವೇ ಎಂಬುದು ನಮ್ಮ ಪ್ರಶ್ನೆ. ಅದಕ್ಕೆ ಉತ್ತರಿಸುವರು.

**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ।**
**ಅಹೈತುಕ್ಯವ್ಯವಹಿತಾ ಯಯಾತ್ಮಾऽऽಶು ಪ್ರಸೀದತಿ ॥೬॥**

**ಅಹೈತುಕೀ** ಭಗವಂತನ ಪ್ರಸಾದದ ಹೊರತಾಗಿ ಬೇರೆ ಫಲಾನುಸಂಧಾನ ರೂಪ ಹೇತು(ಕಾರಣ)ಇಲ್ಲದಿರುವ **ಅವ್ಯವಹಿತಾ** ವಿಷಯಾಸಕ್ತಿ ಮೊದಲಾದ ವ್ಯವಧಾನವಿಲ್ಲದ **ಯಯಾ** ಯಾವ ಭಕ್ತಿಯಿಂದ **ಆತ್ಮಾ** ಪರಮಾತ್ಮನು **ಆಶು** ಬೇಗನೆ **ಪ್ರಸೀದತಿ** ಪ್ರಸನ್ನನಾಗುವನೋ **ಅಧೋಕ್ಷಜೇ** ಪ್ರತ್ಯಕ್ಷಕ್ಕೆ ಅವಿಷಯನಾದ ಶ್ರೀಹರಿಯಲ್ಲಿ **ಭಕ್ತಿಃ** ಭಕ್ತಿಯು **ಯತಃ** ಯಾವುದರಿಂದ ಉಂಟಾಗುವುದೋ **ಸಃ ವೈ** ಅದೇ **ಪುಂಸಾಂ** ಅಧಿಕಾರಿಗಳಿಗೆ **ಪರಃ ಧರ್ಮಃ** ಪರಮಧರ್ಮವು.

'ತಮೇನಮಾತ್ಮಾನಂ ವೇದಾನುವಚನೇನ ಬ್ರಹ್ಮಣಾ ವಿವಿದಷಂತಿ ಯಜ್ಞೇನ ದಾನೇನ ತಪಸಾ ಅನಾಶಕೇನ' ಮುಂತಾದ ಶ್ರುತಿಗಳಿಂದ ಧರ್ಮವು ಜ್ಞಾನಕ್ಕೆ ಕಾರಣವೆಂದು ತಿಳಿಯಬಹುದು.

**ಭಕ್ತಿಯು ವೈರಾಗ್ಯವನ್ನು ತಂದು ಕೊಡುವ ಮೂಲಕ ಅಪರೋಕ್ಷಜ್ಞಾನಕ್ಕೆ ಸಾಧನ**

ಇಲ್ಲಿ ಧರ್ಮವು ಭಕ್ತಿಗೆ ಕಾರಣವೆಂದೇಕೆ ಹೇಳಿದ್ದು ಎಂದರೆ ಭಕ್ತಿಯು ವಿಷಯದಲ್ಲಿ ವೈರಾಗ್ಯವನ್ನು ತಂದು ಕೊಡುವ ಮೂಲಕ ಅಪರೋಕ್ಷಜ್ಞಾನಕ್ಕೆ ಸಾಧನ. ಎಂದು ಹೇಳುವರು.

**ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।**
**ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್ ॥೭॥**

**[illegible]ಗವತಿ ವಾಸುದೇವೇ** ಐಶ್ವರ್ಯಶಾಲಿಯಾದ ಪರಮಾತ್ಮನಲ್ಲಿ **ಪ್ರಯೋಜಿತಃ** [illegible]ದ **ಭಕ್ತಿಯೋಗಃ** ಭಕ್ತಿರೂಪ ಉಪಾಯವು **ಆಶು** ಬೇಗನೆ **ವೈರಾಗ್ಯಂ ಜನಯತಿ** ವೈರಾಗ್ಯ ಹುಟ್ಟಿಸುವುದು **ಚ** ಮತ್ತು **ಅಹೈತುಕಂ ಜ್ಞಾನಂ ಚ** ಶುಷ್ಕತರ್ಕಾದಿಗಳಿಂದ ಜನ್ಯವಲ್ಲದ ಉಪನಿಷತ್ತಿನಿಂದ ಹುಟ್ಟಿದ **ಜ್ಞಾನಂ** ಜ್ಞಾನವನ್ನು **ಜನಯತಿ** ಹುಟ್ಟಿಸುವುದು.

**ವಿಶೇಷ :-** ಅವತಾರಿಕೆಯಲ್ಲಿ ಉದಾಹರಿಸಿದ ಶ್ರುತಿಗಳಲ್ಲಿ ಭಕ್ತಿ ವೈರಾಗ್ಯಗಳ ದ್ವಾರಾ ಯಜ್ಞಾದಿ ಧರ್ಮಗಳು ಜ್ಞಾನಕ್ಕೆ ಸಾಧನವೆಂದು ಅಭಿಪ್ರಾಯವೇ ಹೊರತು ಸಾಕ್ಷಾತ್ ಅಲ್ಲ. ಆದ್ದರಿಂದ ಧರ್ಮವು ಭಕ್ತಿಸಾಧನ ಎಂದು ಹೇಳಿದ್ದೇನು ವಿರುದ್ಧವಲ್ಲವೆಂದು ಭಾವ.

ಕೇವಲ ಚೆನ್ನಾಗಿ ಅನುಷ್ಠಾನ ಮಾಡಿದ ಮಾತ್ರಕ್ಕೆ ಧರ್ಮಪರವೆನಿಸುವುದಿಲ್ಲ ಎಂದು ಹೇಳುವರು.

**ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಶ್ರಯಾಮ್ ।**
**ನೋತ್ಪಾದಯೇದ್ಯದಿ ರತಿಂ ಶ್ರಮ ಏವ ಹಿ ಕೇವಲಮ್ ॥೮॥**

**ಪುಂಸಾಂ** ಅಧಿಕಾರಿಗಳಿಗೆ **ಸ್ವನುಷ್ಠಿತಃ** ಚೆನ್ನಾಗಿ ಮಾಡಿದ **ಧರ್ಮಃ** ಧರ್ಮವು **ವಿಷ್ವಕ್ಸೇನಕಥಾಶ್ರಯಾಂ** ಸುತ್ತಲೂ ಬ್ರಹ್ಮಾದಿರೂಪಸೇನಾಉಳ್ಳ ಶ್ರೀಹರಿಯ ಕಥಾವಿಷಯಕವಾದ **ರತಿಂ** ಆಸಕ್ತಿಯನ್ನು **ಯದಿ ನೋತ್ಪಾದಯೇತ್** ಒಂದು ವೇಳೆ ಹುಟ್ಟಿಸದಿದ್ದರೆ **ಕೇವಲಂ ಶ್ರಮ ಏವ** ಪುಣ್ಯಕಾರ್ಯ ಮಾಡುವಾಗ ದುಃಖ. ಕಾರಣ ಮುಂದೆಯೂ ಭಯಸಹಿತ ಅಲ್ಪಫಲ. ಅದಕ್ಕಾಗಿ ಶ್ರಮವಷ್ಟೇ. (ಏವಕಾರದಿಂದ ಮಾಡುವಾಗ ಸುಖವಿಲ್ಲವೆಂದು ಕೇವಲ ಶಬ್ದದಿಂದ ನಿತ್ಯವಾದ ಬಹು ಸುಖವೂ ಇಲ್ಲವೆಂದು ತಿಳಿಸಿದ್ದರಿಂದ ಪೌನರುಕ್ತ್ಯವಿಲ್ಲವೆಂದು ಭಾವ.) **ವಿಷ್ವಕ್ಸೇನಕಥಾಶ್ರಯಾಮ್** ಯಾವನ ನಾಮೋಚ್ಚಾರಣದಿಂದ ದೈತ್ಯಸೇನಾ ದಿಕ್ಕು ದಿಕ್ಕಿಗೆ ಹೋಗುವುದೋ ಅವನು ಶ್ರೀ ಹರಿ ಎಂದರ್ಥ.

ಭಗವಂತನ ಜ್ಞಾನಪರ್ಯಂತ ಯಾವ ಧರ್ಮವೋ ಅದೇ ಪರಮ ಧರ್ಮ ಎಂದು ತಾವು ಹೇಳಿ ಅದನ್ನು ದೃಢಪಡಿಸಲು ಈ ಧರ್ಮಕ್ಕೆ ಅರ್ಥ, ಅರ್ಥಕ್ಕೆ ಕಾಮ,

ಕಾಮಕ್ಕೆ ಇಂದ್ರಿಯ ಪ್ರೀತಿ, ಇಂದ್ರಿಯ ಪ್ರೀತಿಯಿಂದಲೇ ಧರ್ಮ ಮುಂತಾದ ಪರಂಪರೆಯೆಂದು ಹೇಳುವವರನ್ನು ನಿರಾಕರಿಸುವರು -

**ಧರ್ಮಸ್ಯ ಹ್ಯಾಪವರ್ಗಸ್ಯ ನಾರ್ಥೋಽರ್ಥಾಯೇಹ ಕಲ್ಪತೇ ।**
**ನಾರ್ಥಸ್ಯ ಧರ್ಮೈಕಾಂತಸ್ಯ ಕಾಮೋ ಲಾಭಾಯ ಹಿ ಸ್ಮೃತಃ ॥೯॥**

**ಕಾಮಸ್ಯ ನೇಂದ್ರಿಯಪ್ರೀತಿರ್ಲಾಭೋ ಜೀವೇತ ಯಾವತಾ ।**
**ಜೀವಸ್ಯಾತತ್ವಜಿಜ್ಞಾಸೋರ್ನಾರ್ಥೋ ಯಶ್ಚೇಹ ಕರ್ಮಭಿಃ ॥೧೦॥**

**ಆಪವರ್ಗಸ್ಯ** ಮೋಕ್ಷಸಾಧನವಾದ **ಧರ್ಮಸ್ಯ** ಧರ್ಮಕ್ಕೆ **ಇಹ** ಅಧಿಕಾರಿ ವರ್ಗದಲ್ಲಿ **ಅರ್ಥಃ** ಚಿನ್ನ, ಬೆಳ್ಳಿ, ಮುಂತಾದವು **ನ ಅರ್ಥಾಯ ಕಲ್ಪತೇ** ಫಲವಾಗಲಾರದು.(ಆಪವರ್ಗ್ಯ ಎಂಬ ವಿಶೇಷಣದಿಂದ ಮಹಾಫಲ ಸಾಧನವಾದುದಕ್ಕೆ ಅಲ್ಪಫಲ ಫಲವಲ್ಲ. ಒಂದು ಪದ್ಮರಾಗ ಮಣಿಗೆ ಒಂದು ಮುಷ್ಟಿ ಅಕ್ಕಿ ಹೇಗೆ ಫಲವಲ್ಲವೋ ಹಾಗೆ ಎಂದು ಸೂಚಿಸುವರು ಹೀಗೆ ಮುಂದೆಲ್ಲ ತಿಳಿಯಬೇಕು) **ಧರ್ಮೈಕಾಂತಸ್ಯ** ಮೋಕ್ಷಫಲಕ ಧರ್ಮವೇ ನಿಯತಫಲವಾಗಿವುಳ್ಳ **ಅರ್ಥಸ್ಯ** ದ್ರವ್ಯಕ್ಕೆ **ಕಾಮಃ** ವಿಷಯಭೋಗವು **ಲಾಭಾಯ ನ ಹಿ ಸ್ಮೃತಃ** ಫಲವೆಂದು ವಿದ್ವಾಂಸರು ಹೇಳುವುದಿಲ್ಲ. ಮಹಾ ಫಲಸಾಧನವಾದುದಕ್ಕೆ ಅಲ್ಪ ಫಲ ಫಲವಲ್ಲ ನಿಜ ಆದರೆ ವಿಷಯ ಭೋಗರೂಪ ಕಾಮವು ಮಹಾಫಲ ಕಾರಣ ಹೇಗೆ ಅಂದರೆ ಕಾಮಕ್ಕೆ ಮಹಾಫಲಸಾಧನವಾದ ಹರಿಗುರುಸೇವೋಪಯುಕ್ತ ಜೀವನವೇ ಮಹಾಫಲ. ಅದಕ್ಕಿಂತ ಹೆಚ್ಚು ಇಂದ್ರಿಯ ಪ್ರೀತಿರೂಪವಾದುದು ಅಲ್ಪ ಫಲ. **ಜೀವೇತ ಯಾವತಾ** ಶ್ರೀಹರಿಗೆ ಅರ್ಪಿತವಾದ ಎಷ್ಟು ವಿಷಯಭೋಗರೂಪಕಾಮದಿಂದ ವಿಷ್ಣು ವೈಷ್ಣವರ ಸೇವೆಗಾಗಿ ಬದುಕುವನೋ ಅಷ್ಟು ಮಾತ್ರ ಹರ್ಯರ್ಪಿತವಿಷಯ ಭೋಗ ಸಂಪಾದ್ಯವೆಂದು ಭಾವ. ಧರ್ಮವು ಭಕ್ತಿ ವೈರಾಗ್ಯದ್ವಾರಾ ಜ್ಞಾನಜನಕವೆಂದು ಹೇಳಿದ್ದನ್ನೇ ಇನ್ನೊಂದು ದ್ವಾರವನ್ನು ವ್ಯತಿರೇಕ ಮುಖವಾಗಿ ಹೇಳುವರು. **ಕರ್ಮಭಿಃ** ಯಜ್ಞಾದಿಧರ್ಮಗಳಿಂದ **ಇಹ** ಹಿಂದೆ **ಯಃ ಅರ್ಥಃ ಉಕ್ತಃ** ಭಕ್ತಿ ವೈರಾಗ್ಯದ್ವಾರಾ ಜ್ಞಾನವೆಂಬ ಫಲವು ಹೇಳಲ್ಪಟ್ಟಿದೆಯೋ **ಸಃ** ಆ ಫಲವು **ಅತತ್ವಜಿಜ್ಞಾಸೋಃ** ತತ್ವಜಿಜ್ಞಾಸೆ ಇಲ್ಲದವನಿಗೆ **ನ** ಆಗಲಾರದು ಅರ್ಥಾತ್ ಯಜ್ಞಾದಿ ಧರ್ಮಗಳಿಂದ ಭಗವದ್ಭಕ್ತಿ ಭಕ್ತಿಯಿಂದ ವೈರಾಗ್ಯ ವೈರಾಗ್ಯದಿಂದ ಶ್ರವಣ ಮನನ ನಿದಿಧ್ಯಾಸನರೂಪ ಜಿಜ್ಞಾಸಾ(ವಿಚಾರ)ಅಂದರೆ ಈ ಮಾತಿನಿಂದ ಜ್ಞಾನವೆಂದು ಹೇಳಿದಂತಾಯಿತು.

ತತ್ತ್ವಜಿಜ್ಞಾಸೆ ಇಲ್ಲದವನಿಗೆ ಜ್ಞಾನವಾಗುವುದಿಲ್ಲ ಎಂದು ಹೇಳಿತಷ್ಟೇ ಆ ತತ್ತ್ವ ಯಾವುದು ಯಾವುದರಿಂದ ಜಿಜ್ಞಾಸೆಯು ಧರ್ಮದ ಫಲವಾಗುತ್ತದೆ ಎಂದರೆ ಹೇಳುವರು -

**ವದಂತಿ ತತ್ತತ್ತ್ವವಿದಸ್ತತ್ವಂ ಯಜ್ಞಾನಮದ್ವಯಮ್ ।**
**ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥೧೧॥**

**ತತ್ತ್ವವಿದಃ** ತತ್ತ್ವವನ್ನು ತಿಳಿದ ಕಪಿಲಾದಿಗಳು **ಅದ್ವಯಂ** ಸಮಾಧಿಕರಹಿತವಾದ **ಯತ್** ಯಾವುದು **ಜ್ಞಾನಂ** ಜ್ಞಾನರೂಪವು **ಯಚ್ಚ** ಯಾವುದು **ಯತ್ಕಿಂಚಿತ್** ಲೋಕಸಿದ್ಧವಲ್ಲವೋ **ತತ್** ಅದೇ **ತತ್ತ್ವಂ** ಸರ್ವದಾ ಏಕಪ್ರಕಾರವಾಗಿ ಇರುವುದರಿಂದ ತತ್ತ್ವವೆಂದು ಕರಿಸಿಕೊಳ್ಳುವುದು ಎಂದು **ವದಂತಿ** ಹೇಳುವರು(ಹೊರತು ಘಟಾದಿಗಳಂತೆ ಅನಾರೋಪಿತವಾದ್ದರಿಂದ ಅಲ್ಲ) ಶ್ರುತಿಗಳಲ್ಲಿ ಕೆಲವು ಕಡೆ ಬ್ರಹ್ಮನನ್ನು ಕೆಲವು ಕಡೆ ಪರಮಾತ್ಮನನ್ನು ಕೆಲವು ಕಡೆ ಭಗವಂತನನ್ನು ಜಿಜ್ಞಾಸೆ ಮಾಡೆಂದು ಹೇಳಿದೆ ಕಾರಣ ವಿರೋಧವೆಂದರೆ ಉತ್ತರ **ಬ್ರಹ್ಮ ಇತಿ ಪರಮಾತ್ಮ ಇತಿ ಭಗವಾನ್ ಇತಿ ಶಬ್ದ್ಯತೇ** ಮೇಲೆ ಹೇಳಿದ ತತ್ತ್ವವೇ ಬ್ರಹ್ಮ, ಪರಮಾತ್ಮ, ಭಗವಂತ, ಎಂಬ ಶಬ್ದಗಳಿಂದ ಕರಿಸಿಕೊಳ್ಳಲ್ಪಡುವುದು ಕಾರಣ ವಿರೋಧವಿಲ್ಲ.

ಜ್ಞಾನವು ವಿಷಯಸಾಪೇಕ್ಷವಾದ್ದರಿಂದ ಭಗವದ್ರೂಪತ್ವ ಯುಕ್ತವಲ್ಲ ಹಾಗೆ ಹೇಳಿದಲ್ಲಿ ಭಗವಂತನಿಗೆ ಸ್ಮೃತ್ಯಾದಿಗಳಲ್ಲಿ ಹೇಳಿದ ಕೇವಲತ್ವ ಔಪಚಾರಿಕವಾಗಬೇಕಾಗುವುದು ಎಂಬ ಸಂಶಯವನ್ನು ಪರಿಹರಿಸುತ್ತಾರೆ.

**ಸತ್ತಾಮಾತ್ರಂ ತು ಯತ್ಕಿಂಚಿತ್ ಸದಸಚ್ಚಾವಿಶೇಷಣಮ್ ।**
**ಉಭಾಭ್ಯಾಂ ಭಾಷ್ಯತೇ ಸಾಕ್ಷಾದ್ಭಗವಾನ್ ಕೇವಲಃ ಸ್ಮೃತಃ ॥೧೨॥**

(ಸದಸಚ್ಚಾವಿಶೇಷಣಂ ಯತ್ ಎಂಬುದನ್ನು ಅನುವೃತ್ತಿ ಮಾಡಬೇಕು) **ಯತ್** ಯಾವ ಕಾರಣ **ಸತ್** ಮಹದಾದಿಕಾರ್ಯವು **ಅಸತ್** ಅವ್ಯಕ್ತವು ಏತದಾತ್ಮಕ ವಿಷಯಸಮೂಹವು **ಯತ್** ಯಾವ ಜ್ಞಾನದಲ್ಲಿ **ಅವಿಶೇಷಣಂ** ಸ್ವಸನ್ನಿಕೃಷ್ಟ ಕರಣಜನ್ಯತ್ವರೂಪ ವಿಶೇಷಾಪಾದಕವಲ್ಲ(ವಿಷಯ ಜನ್ಯವಲ್ಲ ಎಂದರ್ಥ)ಆದರೆ ಕೇವಲಮೇವ ತಜ್ಞಾನಂ ಮುಖ್ಯವಾಗಿಯೇ ಕೇವಲನೆಂದು ಸ್ಮೃತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಹೊರತು ಔಪಚಾರಿಕವಲ್ಲ. ಭಗವಂತನ ಜ್ಞಾನವು ವಿಷಯಸಂಬಂಧವಿಲ್ಲದ್ದು ಎಂದರೆ ಭಗವಂತನಿಗೆ ಸೃಷ್ಟಿಕರ್ತೃತ್ವವು ಕೂಡುವದಿಲ್ಲ.

ನಿರ್ವಿಷಯಕಜ್ಞಾನ ಸೃಷ್ಟಿಗೆ ಉಪಯೋಗವಿಲ್ಲ ಎಂದರೆ ಹೇಳುವರು **ಉಭಾಭ್ಯಾಂ ಭಾಷ್ಯತೇ** ಕಾರ್ಯಕಾರಣಾತ್ಮಕವಿಷಯಗಳಿಂದ ತಟಸ್ಥವಾದವುಗಳಿಂದ ವ್ಯಾವೃತ್ತವಾಗಿ ವ್ಯವಹರಿಸಲ್ಪಡುವುದು ವಿಷಯ ಸನ್ನಿಕರ್ಷಜನ್ಯತ್ವ ರೂಪ ಸಾಪೇಕ್ಷಿತತ್ವ ಭಗವಂತನ ಜ್ಞಾನಕ್ಕೆ ಇಲ್ಲದ್ದರಿಂದ ಅದಕ್ಕೆ ನಿರ್ವಿಷಯತ್ವ ಇಲ್ಲ ವಿಷಯಗಳು ತಟಸ್ಥವಾಗಿ ವ್ಯಾವರ್ತಕವಾದ್ದರಿಂದ ವಿಷಯ ವ್ಯಾವರ್ತಿತ್ವರೂಪವಿಷಯತ್ವವಿದೆ. ಭಗವಂತನ ಸ್ವರೂಪವು ಸರ್ವಾವಭಾಸಕವಾದ್ದರಿಂದ ಅಭೇದಾನುಪಪತ್ತಿ ಇಲ್ಲ.

*ಭಾಗವತತಾತ್ಪರ್ಯ-*

೧೧ನೇ ಶ್ಲೋಕದಲ್ಲಿ ಅದ್ವಯಂ ಶಬ್ದಕ್ಕೆ ಪರಮಾತ್ಮನಿಂದ ಭಿನ್ನವಾದ ಎರಡನೇ ವಸ್ತುವೇ ಇಲ್ಲವೆಂದರ್ಥವಾಗಬಾರದೆಂದು ವಿವಕ್ಷಿತಾರ್ಥ ಹೇಳುವರು.

**ಅದ್ವಯಮ್ ಅಸಮಾಧಿಕಮ್ । ತಥಾ ಚ ಭಾಲ್ಲವೇಯ ಶ್ರುತಿಃ ಸ ಪುರುಷಃ ಸೋಽದ್ವಯ ಇತಿ ನ ಹ್ಯೇನಮಭಿ ಕಶ್ಚನ ನ ಹ್ಯೇನಮಪಿ ಕಶ್ಚನ ಇತಿ । ಸೋಽದ್ವಯಃ ಪುರುಷಸ್ತಸ್ಮಾನ್ನ ಸಮೋ ನಾಧಿಕೋ ಹ್ಯತಃ ಇತಿ ಮಹಾಸಂಹಿತಾಯಾಮ್ । ತತ್ತ್ವಶಬ್ದಾರ್ಥಸ್ತತ್ರೈವೋಕ್ತಃ ।**

**ಅತೀತಾನಾಗತೇ ಕಾಲೇ ಯತ್ತಾದೃಶಮುದೀರ್ಯತೇ ।**
**ಕುತಶ್ಚಿದನ್ಯಥಾ ನೇಯಾತ್ತತ್ತತ್ತ್ವಂ ತತ್ತ್ವತೋ ವಿದುಃ ॥ ಇತಿ**

ಶ್ರೀಹರಿಯು ಅದ್ವಯಂ ಎಂದರೆ ತನಗೆ ಸಮಾನರು ಮತ್ತು ಅಧಿಕರು ಇಲ್ಲದವನು. ಶ್ರೀಹರಿಯು ಎಲ್ಲದರಲ್ಲಿಯೂ ನಿಯಾಮಕನಾಗಿರುವನು ಸಮರು ಯಾರೂ ಇಲ್ಲವೆಂದು ಭಾಲ್ಲವೇಯ ಶ್ರುತಿಯಲ್ಲಿದೆ. ಶ್ರೀವಿಷ್ಣುವಿಗೆ ಸಮರು ಅಧಿಕರು ಯಾರೂ ಇಲ್ಲ, ಅದಕ್ಕಾಗಿ ಆ ಶ್ರೀಹರಿಯು ಅದ್ವಯನೆಂದು ಕರೆಸಿಕೊಳ್ಳುವನು. ಎಂದು ಮಹಾಸಂಹಿತೆಯಲ್ಲಿ ಹೇಳಿದೆ. ವರ್ತಮಾನ ಕಾಲದಲ್ಲಿರುವಂತೆ ಭೂತಭವಿಷ್ಯತ್ಕಾಲಗಳಲ್ಲಿ ಇರುವದು.(ಅಂದರೆ ಕಾಲತ್ರಯದಲ್ಲಿಯೂ ಏಕಪ್ರಕಾರವಾದುದು) ಯಾವುದೇ ಕಾರಣದಿಂದ ವ್ಯತ್ಯಾಸವಾಗದಿರುವುದು ಯಾವದೋ ಅದೇ ತತ್ತ್ವವೆಂದು ಯಥಾರ್ಥವಾಗಿ ತಿಳಿಯುತ್ತಾರೆ. ಎಂದು ತತ್ತ್ವಶಬ್ದಾರ್ಥವನ್ನು ಮಹಾಸಂಹಿತೆಯಲ್ಲಿ ಹೇಳಿದೆ.

೧೨ನೇ ಶ್ಲೋಕದಲ್ಲಿ **ಸತ್ತಾಮಾತ್ರಂ** ಎಂಬುದಕ್ಕೆ ಸತ್ವವ ಸತ್ತಾ ಮಾತ್ರಂ ಎಂದು ವಿಗ್ರಹ ಮಾಡಿ ಸ್ವರೂಪಸತ್ವ ಒಂದೇ ಇದೆ ಅದರಿಂದ ಭಿನ್ನವಾದ ಧರ್ಮಗಳಾವೂ ಇಲ್ಲ ಎಂಬ ಅರ್ಥವಾಗದಿರಲೆಂದು ಆ ಪದವನ್ನು ವ್ಯಾಖ್ಯಾನಿಸುವರು

**ಸತ್ತಾಮಾತ್ರಮಾನಂದಮಾತ್ರಮ್ । ತಥಾ ಚ ಪೈಂಗಿಶ್ರುತಿಃ 'ಅಥ ಕಸ್ಮಾದುಚ್ಯತೇ ಸತ್ತೇತಿ ನಂದತಿ ನಂದಯತಿ ಚೇತಿ ಇತಿ । ನ ಕಾರ್ಯಕಾರಣವಿಷಯವಿಶೇಷಿತ-ವೈಷಯಿಕಜ್ಞಾನಮ್ । ಕೇವಲಮೇವ ತಜ್ಞಾನಂ ಸ್ರಷ್ಟೃತ್ವಾದಿಭಿಃ ಕಾರ್ಯಕಾರಣ-ವಿಶೇಷಿತಂ ಚ ।**

**ತಂತ್ರ ಭಾಗವತೇ ಚ -**

> **ವಿಷಯಾಪೇಕ್ಷಿ ನ ಜ್ಞಾನಂ ವಿಷಯೈಶ್ಚ ವಿಶೇಷಿತಮ್ ।**
> **ಯತ್ತದಾನಂದಮಾತ್ರಂ ಚ ತದ್ ಬ್ರಹ್ಮೇತ್ಯವಧಾರ್ಯತಾಮ್ ।।ಇತಿ**
> **ಯತ್ಕಿಂಚಿದಲೋಕಸಿದ್ದಮ್ ।**

ಆನಂದಾತ್ಮಕದೇಹವುಳ್ಳ ಇತರರಿಗೆ ಆನಂದ ಕೊಡುವ ಪರಮಾತ್ಮನಿಗೆ ಸತ್ತಾ ಎಂದು ಕರೆಯುವುದೇಕೆ ಎಂದು ಪ್ರಶ್ನೆ ಮಾಡಿಕೊಂಡು ಸಂತೋಷ ಹೊಂದುತ್ತಾನೆ. ಆದಕಾರಣ ಸತ್ತಾ ಎನ್ನುತ್ತಾರೆ. ಎಂದು ಪೈಂಗಿ ಶ್ರುತಿಯಲ್ಲಿದೆ. ಭಗವಂತನ ಜ್ಞಾನವು ಕಾರ್ಯಕಾರಣರೂಪ ವಿಷಯಗಳಿಂದ ಸಂಬದ್ಧಇಂದ್ರಿಯಗಳಿಂದ ಹುಟ್ಟಿದ್ದಲ್ಲ ಮತ್ತು ಜಡಾಮಿಶ್ರವಾದುದು ಜಗತ್ಸ್ರಷ್ಟೃತ್ವ ಮೊದಲಾದ ಹೇತುಗಳಿಂದ ಭಗವಂತನ ಜ್ಞಾನವು ಕಾರ್ಯಕಾರಣರೂಪ ಜಗದ್ವಿಷಯಕವೆಂದು ತಿಳಿಯಲ್ಪಡುತ್ತದೆ. ಯಾವ ಶ್ರೀಹರಿಯ ಜ್ಞಾನವು ವಿಷಯ ಸನ್ನಿಕೃಷ್ಟಗಳಾದ ಕಾರಣಗಳಿಂದ ಹುಟ್ಟಿದ್ದಲ್ಲ. ಅವ್ಯಕ್ತ ಮಹದಾದಿ ಕಾರ್ಯರೂಪ ವಿಷಯವನ್ನು ವಿಷಯೀಕರಿಸುವುದು ಮತ್ತು ಯಾವನು ಕೇವಲ ಆನಂದಾತ್ಮಕ ದೇಹವುಳ್ಳವನೋ ಅವನು ಬ್ರಹ್ಮ ಎಂದು ನಿಶ್ಚಯಿಸಲ್ಪಟ್ಟಿದೆ. ಮತ್ತು ಯತ್ಕಿಂಚಿತ್ ಎಂದರೆ ಲೋಕವಿಲಕ್ಷಣವು ಎಂದು ತಂತ್ರ ಭಾಗವತದಲ್ಲಿ ಹೇಳಿದೆ.

ಶ್ರವಣಾದಿರೂಪ ಜಿಜ್ಞಾಸಾದಿಂದ ಆಗುವ ಫಲವನ್ನು ತಿಳಿಸುವರು-

> **ತಚ್ಛ್ರದ್ದಧಾನಾ ಮುನಯೋ ಜ್ಞಾನವೈರಾಗ್ಯಯುಕ್ತಯಾ ।**
> **ಪಶ್ಯಂತ್ಯಾತ್ಮನಿ ಚಾತ್ಮಾನಂ ಭಕ್ತ್ಯಾ ಶ್ರುತಿಗೃಹೀತಯಾ ।।೧೨।।**

**ಯಸ್ಮಾತ್** ಯಾವಕಾರಣ ಪರಮಾತ್ಮನೇ ತತ್ತ್ವವೋ **ತತ್** ಆದ್ದರಿಂದ **ಮುನಯಃ** ಜ್ಞಾನಿಗಳು **ಶ್ರದ್ದಧಾನಾಃ** ಶಾಸ್ತ್ರದಲ್ಲಿ ಹೇಳಿದ ವಸ್ತುಗಳಲ್ಲಿ ಆಸ್ತಿಕ್ಯ ಬುದ್ಧಿಯುಳ್ಳವರಾಗಿ **ಜ್ಞಾನವೈರಾಗ್ಯಯುಕ್ತಯಾ** ಶ್ರವಣಾದಿರೂಪ ಜಿಜ್ಞಾಸಾಜನ್ಯವಾದ ಪರೋಕ್ಷ ಜ್ಞಾನ ಮತ್ತು ವೈರಾಗ್ಯದಿಂದ ಕೂಡಿದ **ಶ್ರುತಿಗೃಹೀತಯಾ** ಹರಿಮಾಹಾತ್ಮ್ಯಶ್ರವಣದಿಂದ ದೃಢೀಕೃತವಾದ **ಭಕ್ತ್ಯಾ ಚ** ಭಕ್ತಿಯಿಂದಲೇ **ಆತ್ಮಾನಂ ಚ** ಪರಮಾತ್ಮನನ್ನೇ **ಆತ್ಮನಿ** ಹೃದಯದಲ್ಲಿ **ಪಶ್ಯಂತಿ** ನೋಡುವರು.

*ಭಾಗವತತಾತ್ಪರ್ಯ-*

ಹಿಂದೆ ತತ್ತ್ವಜಿಜ್ಞಾಸೆ ಹೇಳಿದ್ದರಿಂದ ತತ್ತ್ವವನ್ನು ನೋಡುವರು ಎಂದು ಹೇಳಬೇಕು. ಆತ್ಮಾನಂ ಪಶ್ಯಂತಿ ಎಂದಲ್ಲವಲ್ಲ ಎಂಬ ಶಂಕೆಗೆ ಮೂಲದಲ್ಲಿ ತತ್ ಎಂದು ಹೇತು ಹೇಳಿರುವರು. ಆದರೆ ಹಿಂದೆ ಹೇಳಿದ ಹೇತು ಯಾವುದು. ಈ ತತ್ ಶಬ್ದದಿಂದ ಏನು ಪರಾಮರ್ಶ ಮಾಡಿರುವರು ಎಂದು ಶಂಕೆ ಬರಬಹುದು. ಕಾರಣ ಅದನ್ನು ತಿಳಿಸುತ್ತಾ ಶಂಕೆ ಪರಿಹರಿಸುವರು.

ನ ಯಸ್ಮಾತ್ಪರಮಾತ್ಮೈವ ತತ್ತ್ವಂ ತಸ್ಮಾತ್ ತಮೇವ ಪಶ್ಯಂತಿ ಮುನಯಃ ।

ಯಾವ ಕಾರಣ ಪರಮಾತ್ಮನೇ ತತ್ತ್ವವೋ ಆದ ಕಾರಣ ಅವನನ್ನೇ ಮುನಿಗಳು ಕಾಣುವರು ಎಂದು ಭಾವ.

ಈ ರೀತಿ ಪರಂಪರೆಯಿಂದ ಉಂಟಾದ ಪರಮಾತ್ಮಸಾಕ್ಷಾತ್ಕಾರದ ಫಲ ಹೇಳುವರು

**ಅತಃ ಪುಂಭಿರ್ದ್ವಿಜಶ್ರೇಷ್ಠಾಃ ವರ್ಣಾಶ್ರಮವಿಭಾಗಶಃ ।**
**ಸ್ವನುಷ್ಠಿತಸ್ಯ ಧರ್ಮಸ್ಯ ಸಂಸಿದ್ಧಿರ್ಹರಿತೋಷಣಮ್ ॥೧೪॥**

**ಹೇ ದ್ವಿಜಶ್ರೇಷ್ಠಾಃ** ಎಲೋ ಬ್ರಾಹ್ಮಣ ಶ್ರೇಷ್ಠರೇ **ವರ್ಣಾಶ್ರಮವಿಭಾಗಶಃ** ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದಿ ಆಶ್ರಮಗಳ ವಿಭಾಗಕ್ಕೆ ಅನುಗುಣವಾಗಿ **ಸ್ವನುಷ್ಠಿತಸ್ಯ** ಚೆನ್ನಾಗಿ ಅಚರಿಸಿದ **ಧರ್ಮಸ್ಯ** ಧರ್ಮಕ್ಕೆ **ಅತಃ** ಭಕ್ತಿಯಿಂದ ಆರಂಭಮಾಡಿ ಅಪರೋಕ್ಷಜ್ಞಾನ ಪರ್ಯಂತ ಎಲ್ಲದಕ್ಕೂ **ಹರಿತೋಷಣಂ** ಪರಮಾತ್ಮನ ಪ್ರೀತಿಯೇ **ಸಂಸಿದ್ಧಿಃ** ಫಲವು.

ಶ್ರವಣಾದಿರೂಪ ಜಿಜ್ಞಾಸೆಗೆ ಹರಿಪ್ರಸಾದಪರ್ಯಂತ ಫಲವಿರುವುದರಿಂದ ಶ್ರವಣಾದಿಗಳು ನಿತ್ಯ ಕರ್ತವ್ಯಗಳೆಂದು ಹೇಳುವರು-

**ತಸ್ಮಾದೇಕೇನ ಮನಸಾ ಭಗವಾನ್ ಸಾತ್ವತಾಂ ಪತಿಃ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ ॥೧೫॥**

**ತಸ್ಮಾತ್** ಹರಿ ಪ್ರಸಾದವೇ ಮುಖ್ಯ ಫಲವಾದುದರಿಂದ **ಏಕೇನ ಸಾತ್ವತಾಂ** ಏಕಾಗ್ರಚಿತ್ತದಿಂದ **ಭಗವಾನ್** ಐಶ್ವರ್ಯಶಾಲಿಯಾದ **ಸಾತ್ವತಾಂ ಪತಿಃ** ಶ್ರೀಕೃಷ್ಣನು ನಿತ್ಯದಾ ಸರ್ವಕಾಲದಲ್ಲಿಯೂ **ಶ್ರೋತವ್ಯಃ** ಕೇಳಲ್ಪಡಬೇಕು. **ಕೀರ್ತಿತವ್ಯಃ**

ಹೇಳಲ್ಪಡಬೇಕು. **ಧ್ಯೇಯಃ** ಧ್ಯಾನಿಸಲ್ಪಡಬೇಕು. **ಪೂಜ್ಯಃ** ಪೂಜಿಸಲ್ಪಡಬೇಕು. ಶ್ರೀಕೃಷ್ಣನ ಶ್ರವಣಕೀರ್ತನಧ್ಯಾನಪೂಜಾಗಳು ನಿತ್ಯಕರ್ತವ್ಯವೆಂದು ಭಾವ.

ಪರಮಾತ್ಮನ ಪ್ರಸಾದದಿಂದ ಆಗುವ ಫಲವನ್ನು ತಿಳಿಸುತ್ತಾ ನಿತ್ಯ ಶ್ರೋತವ್ಯ ಎಂಬುದನ್ನು ಉಪಪಾದಿಸುವರು-

**ಯದನುಧ್ಯಾಯಿನೋ ಯುಕ್ತಾಃ ಕರ್ಮಗ್ರಂಥಿನಿಬಂಧನಮ್ ।**
**ಛಿಂದಂತಿ ಕೋವಿದಾಸ್ತಸ್ಯ ಕೋ ನ ಕುರ್ಯಾತ್ ಕಥಾರತಿಮ್ ॥೧೬॥**

**ಯದನುಧ್ಯಾಯಿನಃ** ಯಾವ ಪರಮಾತ್ಮರೂಪತತ್ತ್ವವನ್ನು ನಿರಂತರ ಧ್ಯಾನ ಮಾಡುವ ಸ್ವಭಾವವುಳ್ಳವರು **ಯುಕ್ತಾಃ** ಯೋಗಫಲವನ್ನು ಪಡೆದವರಾಗಿ ದರ್ಶನಜನ್ಯ ಹರಿ ಪ್ರಸಾದವುಳ್ಳವರು **ಕರ್ಮಗ್ರಂಥಿನಿಬಂಧನಂ** ಕರ್ಮಗಳೆಂಬ ಪಾಶಗಳಿಂದ ಅತಿಯಾದ ಬಂಧನವನ್ನು **ಛಿಂದಂತಿ** ಛೇದಿಸುವರು. ಅಂದರೆ ಕರ್ಮಕ್ಷಯರೂಪ ಮುಕ್ತಿ ಪಡೆಯುವರೆಂದರ್ಥ. **ಕೋವಿದಾಃ** ಕೃತಜ್ಞರಾದವರು **ತಸ್ಯ** ಈ ರೀತಿ ಪರಮೋಪಕಾರ ಮಾಡಿದ ಹರಿಯ **ಕಥಾರತಿಂ** ಕಥೆಗಳಲ್ಲಿ ಆಸಕ್ತಿಯನ್ನು **ಕಃ ನ ಕುರ್ಯಾತ್** ಯಾವನು ಮಾಡಲಿಕ್ಕಿಲ್ಲ. ಎಲ್ಲರೂ ಮಾಡುತ್ತಾರೆ.

ಹರಿಕಥಾಶ್ರವಣದಲ್ಲಿ ರತಿ ಯಾವುದರಿಂದ ಬರುವದು ಎಂದು ಹೇಳುವರು -

**ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾರತಿಃ ।**
**ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್ ॥೧೭॥**

**ಹೇ ವಿಪ್ರಾಃ** ಬ್ರಾಹ್ಮಣರೇ **ಪುಣ್ಯತೀರ್ಥನಿಷೇವಣಾತ್** ಗಂಗಾದಿ ಪುಣ್ಯನದಿಗಳ ಸ್ನಾನಾದಿರೂಪ ಸೇವೆಯಿಂದ **ಮಹತ್ಸೇವಯಾ** ಜ್ಞಾನಿಗಳ ಸೇವೆಯಿಂದ **ಶ್ರದ್ದಧಾನಸ್ಯ** ಆಸ್ತಿಕ್ಯ ಬುದ್ಧಿಯುಳ್ಳ **ಶುಶ್ರೂಷೋಃ** ಶ್ರವಣೇಚ್ಛಾವುಳ್ಳವನಿಗೆ **ವಾಸುದೇವಕಥಾರತಿಃ ಸ್ಯಾತ್** ಭಗವಂತನ ಕಥೆಗಳಲ್ಲಿ ಆಸಕ್ತಿಯುಂಟಾಗುವದು.

ಆಸಕ್ತಿ ಹುಟ್ಟಿದ ಮೇಲೆ ಕೇಳುವವರಿಗೆ ಫಲ ಹೇಳುವರು -

**ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।**
**ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥೧೮॥**

**ಪುಣ್ಯಶ್ರವಣಕೀರ್ತನಃ** ಪುಣ್ಯಕರವಾದ ಶ್ರವಣ ಮತ್ತು ಕೀರ್ತನವುಳ್ಳ **ಕೃಷ್ಣಃ** ಶ್ರೀ ಕೃಷ್ಣನು **ಸ್ವಕಥಾಂ ಶ್ರೃಣ್ವತಾಂ** ತನ್ನ ಕಥಾ ಶ್ರವಣ ಮಾಡುವವರ **ಅಭದ್ರಾಣಿ** ಪಾಪಗಳನ್ನು **ಹೃದ್ಯಂತಸ್ಥಃ** ಹೃದಯದಲ್ಲಿದ್ದು **ವಿಧುನೋತಿ** ಪರಿಹರಿಸುವನು ಆದ್ದರಿಂದಲೇ **ಸತಾಂ** ಸಜ್ಜನರಿಗೆ **ಸುಹೃತ್** ಅನಿಮಿತ್ತೋಪಕಾರಕನು.

ಪಾಪನಾಶಕವಾದ ಮೇಲೆ ಆಗುವ ಫಲ ಹೇಳುವರು.

**ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ ।**
**ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥೧೯॥**

**ನಿತ್ಯಂ** ಯಾವಾಗಲೂ **ಭಾಗವತಸೇವಯಾ** ಭಗವದ್ಭಕ್ತರ ಸೇವೆಯಿಂದ **ಅಭದ್ರೇಷು ನಷ್ಟಪ್ರಾಯೇಷು** ಬಹುಶ ಪಾಪಗಳೆಲ್ಲ ನಾಶವಾಗುತ್ತಿರಲು **ಉತ್ತಮಶ್ಲೋಕೇ** ಬ್ರಹ್ಮಾದಿಗಳಿಂದ ಕೀರ್ತ್ಯನಾದ **ಭಗವತಿ** ಶ್ರೀಹರಿಯಲ್ಲಿ **ನೈಷ್ಠಿಕೀ ಭಕ್ತಿಃ ಭವತಿ** ಅಚಲವಾದ ಭಕ್ತಿ ಉಂಟಾಗುವುದು.

**ಭಕ್ತಿಯ ಫಲ**

ಭಕ್ತಿಯ ಫಲ ಹೇಳುವರು.

**ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚಯೇ ।**
**ಚೇತ ಏತೈರನಾವಿದ್ಧಂ ಸ್ಥಿತಂ ಸತ್ವೇ ಪ್ರಸೀದತಿ ॥೨೦॥**

**ತದಾ** (ಯಾವಾಗ ಶ್ರೀಹರಿಯಲ್ಲಿ ಅಚಲವಾದ ಭಕ್ತಿ ಹುಟ್ಟುವದೋ) ಆವಾಗ **ರಜಸ್ತಮೋಭಾವಾಃ** ರಜೋಗುಣತಮೋಗುಣಗಳಿಂದ ಉಂಟಾಗುವ ರಜಸ್ತಮೋಭ್ಯಾಂ ಭಾವಃ ಉತ್ಪತ್ತಿಃ ಯೇಷಾಂ ತೇ ತಥೋಕ್ತಾಃ ಅಥವಾ ರಜ ಆದಿ ಪದಾರ್ಥಗಳು **ಯೇ** ಯಾವ **ಕಾಮಲೋಭಾದಯಃ** ಕಾಮ, ಲೋಭ, ಪ್ರಮಾದ ಮುಂತಾದವುಗಳು ಉಂಟೋ **ಏತೈಃ** ಇವುಗಳಿಂದ **ಅನಾವಿದ್ಧಂ** ತಿರಸ್ಕರಿಸಲ್ಪಡದ **ಚೇತಃ** ಮನಸ್ಸು **ಸತ್ವೇ** ಬಲ ಜ್ಞಾನ ಸ್ವರೂಪನಾದ ಶ್ರೀಹರಿಯಲ್ಲಿ **ಸ್ಥಿತಂ ಸತ್** ಇರುವದಾಗಿ **ಪ್ರಸೀದತಿ** ಸರ್ವದಾ ಹರಿಸ್ಮರಣ ಮಾಡಲು ಸಮರ್ಥವಾಗುವದು.

ಭಕ್ತಿಯಿಂದ ವೈರಾಗ್ಯ ಆದರಿಂದ ಶ್ರವಣಾದಿ ರೂಪ ಜಿಜ್ಞಾಸಾ ಎಂದು ಹೇಳಿದ್ದನ್ನು ವಿವರಿಸಿದಂತಾಯಿತು. ನಿರಂತರ ಹರಿಸ್ಮರಣದ ಫಲ ಹೇಳುವರು-

ಹೇಳಲ್ಪಡಬೇಕು. **ಧ್ಯೇಯಃ** ಧ್ಯಾನಿಸಲ್ಪಡಬೇಕು. **ಪೂಜ್ಯಃ** ಪೂಜಿಸಲ್ಪಡಬೇಕು. ಶ್ರೀಕೃಷ್ಣನ ಶ್ರವಣಕೀರ್ತನಧ್ಯಾನಪೂಜಾಗಳು ನಿತ್ಯಕರ್ತವ್ಯವೆಂದು ಭಾವ.

ಪರಮಾತ್ಮನ ಪ್ರಸಾದದಿಂದ ಆಗುವ ಫಲವನ್ನು ತಿಳಿಸುತ್ತಾ ನಿತ್ಯ ಶ್ರೋತವ್ಯ ಎಂಬುದನ್ನು ಉಪಪಾದಿಸುವರು-

**ಯದನುಧ್ಯಾಯಿನೋ ಯುಕ್ತಾಃ ಕರ್ಮಗ್ರಂಥಿನಿಬಂಧನಮ್ ।**
**ಛಿಂದಂತಿ ಕೋವಿದಾಸ್ತಸ್ಯ ಕೋ ನ ಕುರ್ಯಾತ್ ಕಥಾರತಿಮ್ ॥೧೬॥**

**ಯದನುಧ್ಯಾಯಿನಃ** ಯಾವ ಪರಮಾತ್ಮರೂಪತತ್ತ್ವವನ್ನು ನಿರಂತರ ಧ್ಯಾನ ಮಾಡುವ ಸ್ವಭಾವವುಳ್ಳವರು **ಯುಕ್ತಾಃ** ಯೋಗಫಲವನ್ನು ಪಡೆದವರಾಗಿ ದರ್ಶನಜನ್ಯ ಹರಿ ಪ್ರಸಾದವುಳ್ಳವರು **ಕರ್ಮಗ್ರಂಥಿನಿಬಂಧನಂ** ಕರ್ಮಗಳೆಂಬ ಪಾಶಗಳಿಂದ ಅತಿಯಾದ ಬಂಧನವನ್ನು **ಛಿಂದಂತಿ** ಛೇದಿಸುವರು. ಅಂದರೆ ಕರ್ಮಕ್ಷಯರೂಪ ಮುಕ್ತಿ ಪಡೆಯುವರೆಂದರ್ಥ. **ಕೋವಿದಾಃ** ಕೃತಜ್ಞರಾದವರು **ತಸ್ಯ** ಈ ರೀತಿ ಪರಮೋಪಕಾರ ಮಾಡಿದ ಹರಿಯ **ಕಥಾರತಿಂ** ಕಥೆಗಳಲ್ಲಿ ಆಸಕ್ತಿಯನ್ನು **ಕಃ ನ ಕುರ್ಯಾತ್** ಯಾವನು ಮಾಡಲಿಕ್ಕಿಲ್ಲ. ಎಲ್ಲರೂ ಮಾಡುತ್ತಾರೆ.

ಹರಿಕಥಾಶ್ರವಣದಲ್ಲಿ ರತಿ ಯಾವುದರಿಂದ ಬರುವದು ಎಂದು ಹೇಳುವರು -

**ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾರತಿಃ ।**
**ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್ ॥೧೭॥**

**ಹೇ ವಿಪ್ರಾಃ** ಬ್ರಾಹ್ಮಣರೇ **ಪುಣ್ಯತೀರ್ಥನಿಷೇವಣಾತ್** ಗಂಗಾದಿ ಪುಣ್ಯನದಿಗಳ ಸ್ನಾನಾದಿರೂಪ ಸೇವೆಯಿಂದ **ಮಹತ್ಸೇವಯಾ** ಜ್ಞಾನಿಗಳ ಸೇವೆಯಿಂದ **ಶ್ರದ್ದಧಾನಸ್ಯ** ಆಸ್ತಿಕ್ಯ ಬುದ್ಧಿಯುಳ್ಳ **ಶುಶ್ರೂಷೋಃ** ಶ್ರವಣೇಚ್ಛಾವುಳ್ಳವನಿಗೆ **ವಾಸುದೇವಕಥಾರತಿಃ ಸ್ಯಾತ್** ಭಗವಂತನ ಕಥೆಗಳಲ್ಲಿ ಆಸಕ್ತಿಯುಂಟಾಗುವದು.

ಆಸಕ್ತಿ ಹುಟ್ಟಿದ ಮೇಲೆ ಕೇಳುವವರಿಗೆ ಫಲ ಹೇಳುವರು -

**ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।**
**ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥೧೮॥**

**ಪುಣ್ಯಶ್ರವಣಕೀರ್ತನಃ** ಪುಣ್ಯಕರವಾದ ಶ್ರವಣ ಮತ್ತು ಕೀರ್ತನವುಳ್ಳ **ಕೃಷ್ಣಃ** ಶ್ರೀ ಕೃಷ್ಣನು **ಸ್ವಕಥಾಂ ಶೃಣ್ವತಾಂ** ತನ್ನ ಕಥಾ ಶ್ರವಣ ಮಾಡುವವರ **ಅಭದ್ರಾಣಿ** ಪಾಪಗಳನ್ನು **ಹೃದ್ಯಂತಸ್ಥಃ** ಹೃದಯದಲ್ಲಿದ್ದು **ವಿಧುನೋತಿ** ಪರಿಹರಿಸುವನು ಆದ್ದರಿಂದಲೇ **ಸತಾಂ** ಸಜ್ಜನರಿಗೆ **ಸುಹೃತ್** ಅನಿಮಿತ್ತೋಪಕಾರಕನು.

ಪಾಪನಾಶಕವಾದ ಮೇಲೆ ಆಗುವ ಫಲ ಹೇಳುವರು.

**ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ ।**
**ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥೧೮॥**

**ನಿತ್ಯಂ** ಯಾವಾಗಲೂ **ಭಾಗವತಸೇವಯಾ** ಭಗವದ್ಭಕ್ತರ ಸೇವೆಯಿಂದ **ಅಭದ್ರೇಷು ನಷ್ಟಪ್ರಾಯೇಷು** ಬಹುಶ ಪಾಪಗಳೆಲ್ಲ ನಾಶವಾಗುತ್ತಿರಲು **ಉತ್ತಮಶ್ಲೋಕೇ** ಬ್ರಹ್ಮಾದಿಗಳಿಂದ ಕೀರ್ತ್ಯನಾದ **ಭಗವತಿ** ಶ್ರೀಹರಿಯಲ್ಲಿ **ನೈಷ್ಠಿಕೀ ಭಕ್ತಿಃ ಭವತಿ** ಅಚಲವಾದ ಭಕ್ತಿ ಉಂಟಾಗುವುದು.

**ಭಕ್ತಿಯ ಫಲ**

ಭಕ್ತಿಯ ಫಲ ಹೇಳುವರು.

**ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚಯೇ ।**
**ಚೇತ ಏತೈರನಾವಿದ್ಧಂ ಸ್ಥಿತಂ ಸತ್ವೇ ಪ್ರಸೀದತಿ ॥೨೦॥**

**ತದಾ** (ಯಾವಾಗ ಶ್ರೀಹರಿಯಲ್ಲಿ ಅಚಲವಾದ ಭಕ್ತಿ ಹುಟ್ಟುವದೋ) ಆವಾಗ **ರಜಸ್ತಮೋಭಾವಾಃ** ರಜೋಗುಣತಮೋಗುಣಗಳಿಂದ ಉಂಟಾಗುವ ರಜಸ್ತಮೋಭ್ಯಾಂ ಭಾವಃ ಉತ್ಪತ್ತಿಃ ಯೇಷಾಂ ತೇ ತಥೋಕ್ತಾಃ ಅಥವಾ ರಜ ಆದಿ ಪದಾರ್ಥಗಳು **ಯೇ** ಯಾವ **ಕಾಮಲೋಭಾದಯಃ** ಕಾಮ, ಲೋಭ, ಪ್ರಮಾದ ಮುಂತಾದವುಗಳು ಉಂಟೋ **ಏತೈಃ** ಇವುಗಳಿಂದ **ಅನಾವಿದ್ಧಂ** ತಿರಸ್ಕರಿಸಲ್ಪಡದ **ಚೇತಃ** ಮನಸ್ಸು **ಸತ್ವೇ** ಬಲ ಜ್ಞಾನ ಸ್ವರೂಪನಾದ ಶ್ರೀಹರಿಯಲ್ಲಿ **ಸ್ಥಿತಂ ಸತ್** ಇರುವದಾಗಿ **ಪ್ರಸೀದತಿ** ಸರ್ವದಾ ಹರಿಸ್ಮರಣ ಮಾಡಲು ಸಮರ್ಥವಾಗುವದು.

ಭಕ್ತಿಯಿಂದ ವೈರಾಗ್ಯ ಅದರಿಂದ ಶ್ರವಣಾದಿ ರೂಪ ಜಿಜ್ಞಾಸಾ ಎಂದು ಹೇಳಿದ್ದನ್ನು ವಿವರಿಸಿದಂತಾಯಿತು. ನಿರಂತರ ಹರಿಸ್ಮರಣದ ಫಲ ಹೇಳುವರು-

**ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ ।**
**ಭಗವತ್ತತ್ತ್ವವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥೨೦॥**

**ಏವಂ** ಈ ರೀತಿ **ಭಗವದ್ಭಕ್ತಿಯೋಗತಃ** ಭಗವದ್ಭಕ್ತಿರೂಪ ಉಪಾಯದಿಂದ **ಮುಕ್ತ ಸಂಗಸ್ಯ** ವಿಷಯವನ್ನೇ ಬಿಟ್ಟವನಿಗೆ **ಪ್ರಸನ್ನಮನಸಃ** ನಿತ್ಯದಲ್ಲಿಯೂ ಶ್ರೀಹರಿಯ ಸ್ಮರಣರೂಪಜಿಜ್ಞಾಸಾ ಮಾಡುವವನಿಗೆ **ಭಗವತ್ತತ್ತ್ವವಿಜ್ಞಾನಂ ಜಾಯತೇ** ಭಗವಂತನೆಂಬ ತತ್ತ್ವದ ಸ್ವಯೋಗ್ಯ ಅಪರೋಕ್ಷಜ್ಞಾನವು ಉಂಟಾಗುವದು.

**ಅಪರೋಕ್ಷಜ್ಞಾನದ ಫಲ**

ಅಪರೋಕ್ಷಜ್ಞಾನದ ಫಲ ಹೇಳುವರು.

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥೨೧॥**

**ಆತ್ಮನಿ** ಅಂತರ್ಯಾಮಿಯಾದ (ತನ್ನ ಬಿಂಬರೂಪನಾದ) **ಈಶ್ವರೇ** ಸರ್ವೇಶ್ವರನಾದ ಶ್ರೀಹರಿಯು **ಆತ್ಮನಿ** ಹೃತ್ಕಮಲಕರ್ಣಿಕಾಮಧ್ಯದಲ್ಲಿ **ದೃಷ್ಟೇ ಏವ** ಕಾಣಿಸಿದ ಕ್ಷಣದಲ್ಲಿಯೇ **ಹೃದಯಗ್ರಂಥಿಃ** ಜಡಮನಸ್ಸಿನಿಂದ ಕೂಡಿದ ಲಿಂಗದೇಹವು **ಭಿದ್ಯತೇ** ಸುಟ್ಟಕಟ್ಟಿಗೆಯಂತಾಗುವುದು **ಸರ್ವಸಂಶಯಾಃ ಛಿದ್ಯಂತೇ** ಪರಾಪರತತ್ತ್ವ ವಿಷಯಕ ಸಂಶಯಗಳು ದೂರವಾಗುವವು. **ಅಸ್ಯ** ಅಧಿಕಾರಿಯ **ಕರ್ಮಾಣಿ** ಅಪ್ರಾರಬ್ಧ ಅನಭೀಷ್ಟವಾದವುಗಳು **ಕ್ಷೀಯಂತೇ** ಹಿಂದಿನವು ನಾಶವಾಗುವವು ಮುಂದಿನವು ಲೇಪವಾಗಲಾರವು.

*ಭಾಗವತತಾತ್ಪರ್ಯ-*

ಕೆಲವರು ಈ ಶ್ಲೋಕವನ್ನು ಜೀವೇಶ್ವರ ಐಕ್ಯ ಪರತಯಾ ವ್ಯಾಖ್ಯಾನಿಸುವರು. ಆತ್ಮನಿ ಜೀವನಲ್ಲಿ **ಈಶ್ವರೇ ಬ್ರಹ್ಮಣಿ ದೃಷ್ಟೇ** (ಈಶ್ವರೇ ಬ್ರಹ್ಮಣಿ ಆತ್ಮನಿ ದೃಷ್ಟೇ) ಎಂದು ಯೋಜಿಸಿ ಜೀವನನ್ನು ಬ್ರಹ್ಮನೆಂದು ಬ್ರಹ್ಮನನ್ನು ಜೀವನೆಂದು ತಿಳಿದರೆ ಎಂದು ಅರ್ಥ ಮಾಡುವರು. ಅದನ್ನು ನಿರಾಕರಿಸುವರು.

ಆತ್ಮನೀಶ್ವರೇ ಇತಿ ನ ಜೀವೈಕ್ಯಮುಚ್ಯತೇ । ಪರೇಷಾಮಪಿ ಬ್ರಹ್ಮಾದೀನಾಂ ಯತೋಽವರತ್ವಂ ಸ ಪರಾವರಃ । 'ಭೇದದೃಷ್ಟ್ಯಾಽಭಿಮಾನೇನ' ಇತಿ ಹಿ ಕಾಪಿಲೇಯೇ । 'ಬ್ರಹ್ಮ ಪ್ರಧಾನಮುಪಯಾಂತ್ಯಗತಾಭಿಮಾನಾಃ' ಇತಿ ಚ । 'ವಿದ್ಯಾಽಽತ್ಮನಿ

ಭಿದಾಭೋಧಃ' 'ಯತ್ರ ಹಿ ದ್ವೈತಮಿವ ಭವತಿ' 'ಅನ್ಯಮೀಶಮಸ್ಯ ಮಹಿಮಾನಂ' ಇತಿ । 'ಅನಶ್ನನ್ನನ್ಯೋ ಅಭಿಚಾಕಶೀತಿ' 'ಛಾಯಾತಪೌ ಬ್ರಹ್ಮವಿದೋ ವದಂತಿ' 'ಏಕೋ ಬಹೂನಾಂ ವಿದಧಾತಿ ಕಾಮಾನ್' 'ಸತ್ಯಃ ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ' 'ಸತ್ಯಮೇನಮನು ವಿಶ್ವೇ ಮದಂತಿ' 'ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' 'ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್' ಇತ್ಯಾದಿ ಚ । ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ । 'ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು । ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ । ಇತ್ಯಾದಿ ಮೋಕ್ಷಧರ್ಮೇ । ಭೇದದೃಷ್ಟ್ಯಾಽಭಿಮಾನೇನ ಪಶ್ಯಂತೋ ಯಾಂತಿ ತತ್ಪದಮ್ ಇತ್ಯಾದಿ ವಾಯುಪ್ರೋಕ್ತೇ । 'ಅನುಪಪತ್ತೇಸ್ತು ನ ಶಾರೀರಃ' 'ಭೇದವ್ಯಪದೇಶಾಚ್ಚ' 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ' 'ಪೃಥುಗುಪದೇಶಾತ್' ಇತ್ಯಾದಿ ಚ । ಸತ್ಯತ್ವಂ ಚ ಭೇದಸ್ಯೋಕ್ತಂ ಭಾಲ್ಲವೇಯಶ್ರುತೌ । ಸ್ಥಾಣುರ್ಹೋಚ್ಚಕ್ರಾಮ ಸ ಪ್ರಜಾಪತಿಮುವಾಚ ಕೋಽಸಿ ಕೇ ಸ್ಮಃ ಕಃ ಸ ಇತಿ ಹೋವಾಚ । ಯೋಽಸ್ಮಿ ಯೇ ಸ್ಥ ಯಃ ಸ ಇತಿ । ಅಥ ಹೈನಮುಪಾಕ್ರೋಶತ್ । ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದೇತಿ । ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯ ಇತಿ । ಇತಿ 'ಸತ್ಯಮೇನಂ' 'ಸತ್ಯಃ ಸೋ ಅಸ್ಯ ಮಾಹಿಮಾ' ಇತಿ ಚ ಉಕ್ತಂ ।।

ಮಹಾಸಂಹಿತಾಯಾಂ ಚ –

ತ್ರಿವಿಧಂ ಜೀವಸಂಘಂ ಚ ಪರಮಾತ್ಮಾ ನಮವ್ಯಯಮ್ ।
ತೇಷಾಂ ಭೇದಂ ಚ ಯೇ ಸತ್ಯಂ ವಿದುರ್ಮೋಹವಿವರ್ಜಿತಾಃ ।।

ತೇ ಯಾಂತಿ ಪರಮಂ ಸ್ಥಾನಂ ವಿಷ್ಣೋರೇವಾಚಲಂ ಧ್ರುವಂ ।
ಜೀವೇಶ್ವರಭಿದಾಂ ಭ್ರಾಂತಿಂ ಕೇಚಿದಾಹುರಪಂಡಿತಾಃ ।।

ಅನಾರತಂ ತಮೋ ಯಾಂತಿ ಪರಮಾತ್ಮವಿನಿಂದನಾತ್ ।
ಪರಾಧೀನಶ್ಚ ಬದ್ಧಶ್ಚ ಸ್ವಲ್ಪಜ್ಞಾನಸುಖೇಹಿತಃ ।।

ಅಲ್ಪಶಕ್ತಿಃ ಸದೋಷಶ್ಚ ಜೀವಾತ್ಮಾಽನೀದೃಶಃ ಪರಃ ।
ವದತಾ ತು ತಯೋರೈಕ್ಯಂ ಕಿಂ ತೇನಾದುಷ್ಕೃತಂ ಕೃತಂ ।।

ಅಂತರ್ಯಾಮ್ಯೈಕ್ಯವಾಚೀನಿ ವಚನಾನೀಹ ಯಾನಿ ತು ।
ತಾನಿ ದೃಷ್ಟ್ವಾ ಭ್ರಮಂತೀಹ ದುರಾತ್ಮಾನೋಽಲ್ಪಚೇತಸಃ ।।

ಅಸ್ಯಾಸ್ಮಿ ತ್ವಮಹಂ ಸ್ವಾತ್ಮ್ಯಭಿಧಾಗೋಚರೋ ಯತಃ ।
ಸರ್ವಾಂತರತ್ವಾತ್ ಪುರುಷಸ್ತ್ವಂತರ್ಯಾಮಿ ನಿಯಾಮಯನ್ ।।

**ಅತೋ ಭ್ರಮಂತಿ ವಚನೈರಾಸುರಾ ಮೋಹತತ್ಪರೈಃ ।**
**ತನ್ಮೋಹನೇ ಪರಾ ಪ್ರೀತಿರ್ದೇವಾನಾಂ ಪರಮಸ್ಯ ಚ ॥**
**ಅತೋ ಮಹಾಂಧಕಾರೇಷು ಪತಂತ್ಯಜ್ಞಾನಮೋಹಿತಾಃ ॥ ಇತ್ಯಾದಿ ॥೨೨॥**

ಆತ್ಮನಿ ಈಶ್ವರೇ ಎಂಬುವಲ್ಲಿ ಜೀವಬ್ರಹ್ಮೈಕ್ಯವು ಹೇಳಲ್ಪಡುವದಿಲ್ಲ. (ಜೀವಾಂತರ್ಯಾಮಿಯಾದ ಹರಿಯೆಂದರ್ಥ) ತಸ್ಮಿನ್ ದೃಷ್ಟೇ ಪರಾವರೇ ಎಂಬ ಸಮಾಖ್ಯಾ ಶ್ರುತಿಯಲ್ಲಿದ್ದ ಪರಾವರಶಬ್ದವೂ ಕೂಡ ಜೀವಬ್ರಹ್ಮೈಕ್ಯ ಹೇಳುವದಿಲ್ಲ. ನಮಗಿಂತ ಉತ್ತಮರಾದ ಬ್ರಹ್ಮಾದಿಗಳೂ ಶ್ರೀಹರಿಗಿಂತ ಅಧಮರಾಗಿರುವದರಿಂದ ಶ್ರೀಹರಿಯು ಪರಾವರನೆನಿಸುತ್ತಾನೆ ಎಂದು ಸರ್ವೋತ್ತಮತ್ವವನ್ನೇ ಹೇಳಿದೆ. ಜೀವೇಶ್ವರ ಭೇದ ಜ್ಞಾನದಿಂದಲೂ ಶ್ರೀಹರಿಯಲ್ಲಿ ಅತಿಶಯ ಭಕ್ತಿಯಿಂದ ಬ್ರಹ್ಮನನ್ನು ಹೊಂದುತ್ತಾನೆಂದು 3ನೇ ಸ್ಕಂಧದಲ್ಲಿ ಕಪಿಲನಾಮಕ ಭಗವಂತ ಹಾಗು ದೇವಹೂತಿಯ ಸಂವಾದ. ಈ ಸಂವಾದವು ಭೇದಜ್ಞಾನ ಮೋಕ್ಷಸಾಧನ ಎಂದು ಹೇಳಿದೆ. ನಾನು ಜೀವನೇ ಆಗಿದ್ದೇನೆ ಎಂದು ತಿಳಿದವರು ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದುತ್ತಾರೆಂದು ಜೀವರಿಗೆ ಬ್ರಹ್ಮ ಪ್ರಾಪ್ತಿ ಹೇಳಿದೆ. ಜೀವೇಶ್ವರ ಭೇದಜ್ಞಾನವೇ ತತ್ತ್ವಜ್ಞಾನ. ಅದೇ ಮೋಕ್ಷಸಾಧನ ಐಕ್ಯ ಜ್ಞಾನವಲ್ಲ ಎಂದು ಹೇಳಿರುವನು. ಭೇದ ವಿಷಯದಲ್ಲಿ ಶ್ರುತಿ ಹೇಳುವರು.

ಪರಾಧೀನವಾದ ಭೇದವು ಇದ್ದರೇನೇ ಆಗ ಒಬ್ಬನು ಮತ್ತೊಬ್ಬನನ್ನು ನೋಡುತ್ತಾನೆ ಇತ್ಯಾದಿಗಳಿಂದ ಹೇಳುವ ದರ್ಶನಾದಿ ಭೋಗಗಳು ಕೂಡುತ್ತವೆ. ಐಕ್ಯ ಹೇಳಿದರೆ ದರ್ಶನಾದಿಗಳು ಕೂಡಲಾರವು. ಇದರಿಂದ ಮೋಕ್ಷದಲ್ಲಿ ಭೇದವಿದೆ ಎಂದು ಸಿದ್ಧವಾಯಿತು. ಶ್ರೀಹರಿಯನ್ನು ಜೀವರಿಂದ ಭಿನ್ನನೆಂದು, ಜೀವನು ಶ್ರೀಹರಿಯ ಜಗತ್ಸೃಷ್ಟ್ಯಾದಿ ಮಹಿಮೆಯನ್ನು ತಿಳಿದರೆ ಶೋಕರಹಿತನಾಗುತ್ತಾನೆ ಈ ಶ್ರುತಿಯಿಂದಲೂ ಭೇದಜ್ಞಾನ ಮೋಕ್ಷಸಾಧನವೆಂದು ಸಿದ್ಧವಾಗುವದು.

ಜೀವರಿಂದ ಭಿನ್ನನಾದ ಶ್ರೀಹರಿಯು ಪಾಪಕರ್ಮ ಫಲಗಳಾದ ನೀರಸವಾದ ಭಾಗಗಳನ್ನು ಸ್ವೀಕರಿಸದೇ ಚೆನ್ನಾಗಿ ಪ್ರಕಾಶಿಸುತ್ತಾನೆ. ಬ್ರಹ್ಮಜ್ಞಾನಿಗಳು ಆತ್ಮಅಂತರಾತ್ಮ ಎಂಬುವ ಭಗವದ್ರೂಪಗಳು 'ಸಜ್ಜನರಿಗೆ ಸುಖವನ್ನೂ ದುರ್ಜನರಿಗೆ ದುಃಖವನ್ನೂ' ಕೊಡತಕ್ಕವುಗಳೆಂದು ಹೇಳುತ್ತಾರೆ. ಇಲ್ಲಿ ಜೀವರಿಗೆ ಸುಖದುಃಖ ದಾತಾ ಭಗವಂತ. ಅವುಗಳನ್ನು ಅನುಭವಿಸುವವ ಜೀವ ಎಂದು ಭೇದ ತಿಳಿಯುವದು. ಒಬ್ಬನೇ ಬಹು

ಜನರಿಗೆ ಅಭೀಷ್ಟ ಕೊಡುತ್ತಾನೆ. ಇದರಿಂದಲೂ ಜೀವ ಜೀವ ಭೇದ ಜೀವೇಶ್ವರ ಭೇದ ತಿಳಿಯುವದು. ಈ ಭೇದ ಸತ್ಯ, ಮಿಥ್ಯಾ ಅಲ್ಲಯೆನಲು ಪ್ರಮಾಣ -

ಶ್ರೀಹರಿಯ ಜಗತ್ಸೃಷ್ಟ್ಯಾದಿಮಹಿಮೆಯು ಸತ್ಯವು, ಸುಖಕ್ಕಾಗಿ ವಿಪ್ರರೇ ಪ್ರಧಾನರಾಗಿವುಳ್ಳ ಯಜ್ಞಗಳಲ್ಲಿ ಸ್ತೋತ್ರ ಮಾಡುತ್ತೇನೆ(ಸ್ತುತ್ಯ ಪರಮಾತ್ಮ, ಸ್ತೋತ್ರಮಾಡುವವರು ಜೀವರು ಎಂದದ್ದರಿಂದ ಭೇದ ಸಿದ್ಧವಾಗುವದು.) ಎಲ್ಲ ಪ್ರಾಣಿಗಳು ನಿರ್ದುಃಖಪೂರ್ಣಸುಖಾನುಭವರೂಪನಾದ ಶ್ರೀಹರಿಯನ್ನು ಉಪಜೀವಿಸಿಕೊಂಡು ಸಂತೋಷಗೊಳ್ಳುತ್ತಾರೆ. ನಿರ್ದುಃಖ ಸುಖರೂಪನಾದ ಯಾವ ಶ್ರೀಹರಿಯ ಆಧೀನರಾಗಿ ಪೂರ್ವಕಾಲದಲ್ಲಿ ಅಮುಕ್ತರಾದ ದೇವತೆಗಳು ಇರುತ್ತಾರೋ ಅಂತಹ ದೇವತೆಗಳು ಈ ಕಲ್ಪದಲ್ಲಿ ಮುಕ್ತರಾಗಿ ಶ್ರೀಹರಿಯನ್ನು ಹೊಂದುವರು. ಆರಬ್ಧಾಂತಗಾಮಿಯಾದ ಶ್ರೀಹರಿಯು ಅತಿಕ್ರೂರರಾದ ದೈತ್ಯರನ್ನು ನಿಗ್ರಹಿಸುತ್ತಾ, ದೇವತೆಗಳಿಗೆ ಮೋಕ್ಷವನ್ನು ಕೊಡುತ್ತಾನೆ ಎಂದು ವೇದದಲ್ಲಿ ಹೇಳುತ್ತದೆ. ದರ್ಶನಾದಿಭೋಗವಿಲ್ಲದವನಿಗೆ ದುಃಖಾತಿಶಯ ಆಗೇ ಆಗುವದು. ವೈಶಂಪಾಯನಾಚಾರ್ಯರಿಗೆ ಜನಮೇಜಯನ ಪ್ರಶ್ನೆ ಜೀವರು ಅನೇಕರೋ ಒಬ್ಬನೆಯೋ ಎಂದು. ಆಗ ವೈಶಂಪಾಯನಾಚಾರ್ಯರು ಎಲೋ ರಾಜನೇ ಜೀವನೊಬ್ಬನೆ ಎಂಬುವ ಜೀವಬ್ರಹ್ಮರ ಐಕ್ಯವನ್ನು ಒಪ್ಪುವದಿಲ್ಲವೆಂದು ಮೋಕ್ಷಧರ್ಮದಲ್ಲಿ ಹೇಳಿದೆ. ಎಂದು ತಿಳಿಸಿದರು.

ಭೇದಜ್ಞಾನದಿಂದಲೂ ಭಕ್ತಿವಿಶೇಷದಿಂದಲೂ ಈಶ್ವರಮಹಿಮೆ ತಿಳಿದವರು ಮೋಕ್ಷವನ್ನು ಹೊಂದುತ್ತಾರೆ. ಮುಂತಾದ ವಿಷಯ ವಾಯುಪುರಾಣದಲ್ಲಿ ಹೇಳಿದೆ. ಒಬ್ಬನೇ ಜೀವನು ಎಲ್ಲರ ಶರೀರದಲ್ಲಿ ಇದ್ದಾನೆಂಬ ಮಾತು ಸರಿಯಲ್ಲ ಸರ್ವಗತನಾದ ಶ್ರೀಹರಿಯು ಜೀವನಲ್ಲಿ ಆನಂದಮಯನಾದ ಶ್ರೀಹರಿಯಿಂದ ಚತುರ್ಮುಖಾದಿಗಳಿಗೆ ಭೇದ ಹೇಳಿರುವರು. ಆ ಆನಂದಮಯನಾದ ಶ್ರೀಹರಿಯು ಬ್ರಹ್ಮಾದಿಜೀವರಾಶಿ-ಯಿಂದ ಅಭಿನ್ನನಲ್ಲ. ಕಾಣ್ವ ಮಾಧ್ಯಂದಿನ ಶಾಖಿಗಳಿಬ್ಬರೂ ಅಂತರ್ಯಾಮಿಯಾದ ಶ್ರೀಹರಿಯಿಂದ ಜೀವನು ಬೇರೆ ಎಂದು ಹೇಳುತ್ತಾರೆ. 'ಭಿನ್ನೋಽಚಿಂತ್ಯೋ ಪರಮೋ ಜೀವಸಂಘಾತ್' ಇತ್ಯಾದಿ ಪ್ರಮಾಣಗಳಿಂದ ಜೀವನು ಶ್ರೀಹರಿಯಿಂದ ಭಿನ್ನನೇ ಆಗಿರುತ್ತಾನೆ ಇತ್ಯಾದಿ ಸೂತ್ರಗಳಲ್ಲಿ ಜೀವಬ್ರಹ್ಮರಿಗೆ ಸ್ಪಷ್ಟವಾಗಿ ಭೇದವನ್ನೇ ಹೇಳಿದೆ.

ರುದ್ರನು ಶೀಘ್ರ ಬಂದು ಚತುರ್ಮುಖನ ಹತ್ತಿರ ನೀನು ಯಾರಾಗಿದ್ದೀ(ಅಂದರೆ ನನ್ನಿಂದಲೂ ಶ್ರೀಹರಿಯಿಂದಲೂ ನೀನು ಭಿನ್ನನಲ್ಲ) ನಾವು ಯಾರಾಗಿರುವೆವು (ನಿನ್ನಿಂದಲೂ ಶ್ರೀಹರಿಯಿಂದಲೂ ನಾವು ಭಿನ್ನರಲ್ಲ) ಆದಕಾರಣ ತೋರುವ ಭೇದವೆಲ್ಲವೂ ಸುಳ್ಳು ಹೀಗೆ ಆಕ್ಷೇಪ ಮಾಡಿದಾಗ ಚತುರ್ಮುಖನು ಉತ್ತರಿಸಿದನು. ನಾನು ಯಾರಿಂದ ಭೇದವುಳ್ಳವನಾಗಿರುತ್ತೇನೋ ಆತನಿಂದ ಭೇದವುಳ್ಳವನೇ ಆಗಿರುತ್ತೇನೆ. ಯಾರಿಗೆ ಯಾರಿಂದ ಭೇದವಿದೆ ಎಂದು ಪ್ರತೀತಿ ಇದೆಯೋ ಅವರಿಗೆ ಅವರಿಂದ ಭೇದವಿದ್ದೇ ಇದೆ. ಹೀಗೆಯೇ ಆ ಶ್ರೀಹರಿಯು ಯಾರಿಂದ ಭೇದವುಳ್ಳವನೆಂದು ಸಿದ್ಧನಾಗಿರುತ್ತಾನೋ ಆತನಿಂದ ಭೇದವುಳ್ಳವನೇ ಆಗಿದ್ದಾನೆ. ಅಂದಮೇಲೆ ಪ್ರತೀತಿಗೆ ಅನುಸಾರವಾಗಿ ಸರ್ವರೂ ಭಿನ್ನರೇ. ಸರ್ವಥಾ ಅಭಿನ್ನರಲ್ಲ. ಆದುದರಿಂದ ಭೇದಕ್ಕೆ ಮಿಥ್ಯಾತ್ವವನ್ನು ಸರ್ವಥಾ ಕಲ್ಪಿಸಬಾರದು ಎಂದು ರುದ್ರನ ಸಮೀಪದಲ್ಲಿ ಶಪಥ ಪೂರ್ವಕವಾಗಿ ಭೇದವು ಸತ್ಯವೇ ಸತ್ಯವೇ ಸತ್ಯವೇ ಎಂದು ಉತ್ತರಕೊಟ್ಟನು. ಮತ್ತು ಅದ್ವೈತಿಗಳು ಮಿಥ್ಯಾಜ್ಞಾನ ಮೊದಲಾದ ದೋಷವುಳ್ಳವರಾದ್ದರಿಂದ ಅವರು ಹೇಳುವ ಪ್ರಕಾರ ಸರ್ವಥಾ ಶ್ರೀಹರಿಯನ್ನು ತಿಳಿಯಕೂಡದು ಎಂದು ಶಪಥಪೂರ್ವಕ ಮೂರುಸಲ ಹೇಳಿದನು. ಹೀಗೆ ಭಾಲ್ಲವೇಯ ಶ್ರುತಿಯಲ್ಲಿ ಭೇದವು ಸತ್ಯವೇ ಎಂದು ಹೇಳಿದೆ.

ಶ್ರೀಹರಿಯನ್ನು ಅನುಸರಿಸಿ ಎಲ್ಲ ದೇವತೆಗಳೂ ಸಂತೋಷಗೊಳ್ಳುತ್ತಾರೆ ಎಂಬುದೂ ಸತ್ಯವೇ. ಶ್ರೀಹರಿಯ ಮಹಿಮೆಯೂ ಸತ್ಯವೇ. ಶ್ರೀಹರಿಯ ಮಹಿಮೆಗೆ ಸತ್ಯತ್ವವು ಹೇಳಲ್ಪಟ್ಟಿದೆ.

**ಭೇದ ಸತ್ಯ ಅದನ್ನು ತಿಳಿಸುವ ಸ್ಮೃತಿಗಳ ಅರ್ಥ.**

ಯಾರು ಮೋಹಿತರಾಗಿ ಉತ್ತಮ ಮಧ್ಯಮ ಅಧಮ ಎಂಬ ಮೂರು ವಿಧ ಜೀವರಾಶಿಯನ್ನು ನಾಶರಹಿತನಾದ ಶ್ರೀಹರಿಯಿಂದ ಭಿನ್ನ ಸತ್ಯವೆಂದು ತಿಳಿಯುತ್ತಾರೋ ಅವರು ಶ್ರೀಹರಿಯ ಶಾಶ್ವತವಾದ ವೈಕುಂಠಾದಿ ಉತ್ತಮ ಸ್ಥಾನವನ್ನು ಹೊಂದುತ್ತಾರೆ. ಕೆಲವು ಅಜ್ಞಾನಿಗಳು ಜೀವೇಶ್ವರಭೇದಜ್ಞಾನವನ್ನು ಭ್ರಮೆಯನ್ನುತ್ತಾರೆ. ಜೀವನು ಪರಾಧೀನನು ಸಂಸಾರಬದ್ಧನು ಅಲ್ಪಜ್ಞಾನ, ಅಲ್ಪಸುಖ, ಅಲ್ಪಶಕ್ತಿಯುಳ್ಳವನು ದೋಷಯುಕ್ತನು. ಶ್ರೀಹರಿಯು ಅಂತಹ ಯಾವ ದೋಷಗಳಿಲ್ಲದವನು ಅಂದಮೇಲೆ ಸದೋಷರಾದ ಜೀವರಿಂದ ನಿರ್ದೋಷನಾದ ಶ್ರೀಹರಿಗೆ ಐಕ್ಯವನ್ನು ಹೇಳುವವನು ಮಹಾಪಾಪಿಯು. ಭಗವದ್ರೂಪಗಳಿಗೆ ಐಕ್ಯವಿದೆ ಎಂಬಲ್ಲಿ

ಮಹಾತಾತ್ಪರ್ಯದಿಂದ ರೂಪಗಳಿಗೆ ಐಕ್ಯವನ್ನು ಹೇಳುವ ತತ್ತ್ವಮಸಿ' ಅಹಂ ಬ್ರಹ್ಮಾಸ್ಮಿ' ಮೊದಲಾದ ವಾಕ್ಯಗಳನ್ನು ಅಭೇದಪರವೆಂದು ತಿಳಿದು ಅನಾದಿದೋಷದೂಷಿತವಾಗಿ ಅಂತಃಕರಣವುಳ್ಳ ಅಲ್ಪಬುದ್ಧಿಯುಳ್ಳವರು ಜೀವಪರಮಾತ್ಮರಿಗೆ ಐಕ್ಯವೆಂದು ಭ್ರಮಿಸುವರು. ಸರ್ವಾಂತರ್ಗತನಾಗಿ ಸರ್ವನಿಯಾಮಕನಾಗಿ ಶ್ರೀಹರಿಯು ದುರ್ಜನರನ್ನು ನಿರಾಕರಿಸುವದರಿಂದ ಅಸಿ ಎಂದೂ ನಿರಂತರದಲ್ಲಿಯೂ ಇರುವುದರಿಂದ ಅಸ್ಮಿ ಎಂದೂ ಕಣ್ಣಿಗೆ ಗೋಚರನಾಗದಿರುವುದರಿಂದ ತ್ವಂ ಎಂದೂ ಅಹೇಯನಾದುದರಿಂದ ಅಹಂ ಎಂದೂ ಸ್ವಾತಂತ್ರ್ಯವಿರುವದರಿಂದ ಸ್ವಂ ಎಂದೂ ಎಲ್ಲ ಕಡೆಗೆ ವ್ಯಾಪ್ತವಾದ ಗುಣಗಳುಳ್ಳವನಾದುದರಿಂದ ಆತ್ಮಾ ಎಂದೂ ಸರ್ವರಲ್ಲಿಯೂ ಅಂತರ್ಗತನಾಗಿ ಇರುವದರಿಂದ ಪುರುಷನೆಂದೂ ಹೀಗೆ ಎಲ್ಲ ಶಬ್ದಗಳಿಂದ ಮುಖ್ಯ ವೃತ್ತಿಯಿಂದ ಹೇಳಲ್ಪಡುವನು. ಹಾಗಿದ್ದರೂ ಅಸುರರನ್ನು ಮೋಹಿಸುವದರಲ್ಲಿಯೇ ಮಹಾತಾತ್ಪರ್ಯವುಳ್ಳ ಆಪತತಃ ಐಕ್ಯಪ್ರತಿಪಾದಕವೆಂದು ತೋರುವ ತತ್ತ್ವಮಸಿ ಮುಂತಾದ ವಚನಗಳಿಂದ ಜೀವೈಕ್ಯವು ಹೇಳಲ್ಪಡುವದು ಎಂದು ಅಸುರರು ಭ್ರಾಂತರಾಗುವರು. ಅವರನ್ನು ಮೋಹಗೊಳಿಸುವದರಲ್ಲಿಯೇ ವೇದಾಭಿಮಾನಿಗಳಿಗೆ, ವೇದದೃಷ್ಟವಾದ ಶ್ರೀಹರಿಗೆ ಮಹಾಪ್ರೀತಿಯು. ಆ ಕಾರಣಕ್ಕಾಗಿ ಭ್ರಮ ಹುಟ್ಟಿಸುವ ವಾಕ್ಯಗಳ ತತ್ತ್ವಾರ್ಥವನ್ನು ತಿಳಿಯದೇ ಮಿಥ್ಯಾಜ್ಞಾನದಿಂದ ಮೋಹಿತರಾಗಿ ಐಕ್ಯಜ್ಞಾನಿಗಳು ಮಹಾಂಧಕಾರವುಳ್ಳ ಅಂಧಂತಮಸ್ಸುಗಳಲ್ಲಿ ಬೀಳುತ್ತಾರೆ. ಈ ವಿಧವಾಗಿ ಮಹಾಸಂಹಿತೆಯಲ್ಲಿ ಹೇಳಿದೆ.

**ಅತೋ ವೈ ಕವಯೋ ನಿತ್ಯಂ ಭಕ್ತಿಂ ಪರಮಯಾ ಮುದಾ ।**
**ವಾಸುದೇವೇ ಭಗವತಿ ಕುರ್ವಂತ್ಯಾತ್ಮಪ್ರಸಾದಿನೀಮ್ ॥೨೩॥**

**ಅತಃ** ಭಕ್ತಿ ಜನಕವಾದ ಧರ್ಮವೇ ಶ್ರೇಷ್ಠವಾದುದರಿಂದ, ಭಕ್ತಿಯು ಮೋಕ್ಷ ಪರ್ಯಂತ ಫಲಜನಕವಾದ್ದರಿಂದಲೂ **ಕವಯಃ** ಜ್ಞಾನಿಗಳು **ಪರಮಯಾ ಮುದಾ** ಬಹಳ ಸಂತೋಷದಿಂದ **ಆತ್ಮಪ್ರಸಾದಿನೀಂ** ಮನಸ್ಸಿಗೆ ನಿರ್ಮಲತೆಯನ್ನು ಕೊಡುವ ವಿಷ್ಣು ಪ್ರಸಾದಜನಕವಾದ **ವಾಸುದೇವೇ ಭಗವತಿ** ಪರಮಾತ್ಮನಲ್ಲಿ **ಭಕ್ತಿಂ ಕುರ್ವಂತಿ** ಭಕ್ತಿಯನ್ನು ಮಾಡುವರು.

ವಿಷ್ಣುವಿನ ಪ್ರಸಾದದಿಂದಲೇ ಮೋಕ್ಷ ಆಗುವದಾದರೆ ಸಜ್ಜನರಂತೆ ರಾಜಸತಾಮಸರಿಗೂ ಏಕೆ ಮೋಕ್ಷವಾಗುವುದಿಲ್ಲ. ಮೂರೂ ಪ್ರಕೃತಿಗಳು ವಿಷ್ಣುವಿನಲ್ಲಿ

ಆಶ್ರಿತವಾಗಿವೆಯಲ್ಲ ಎಂಬ ಸಂಶಯ ಬಂದರೆ ಸತ್ವಗುಣವು ರಜಸ್ತಮೋಗುಣಗಳಿಗಿಂತ ಉತ್ತಮವಾದುದರಿಂದ ಸಾತ್ವಿಕರಿಗೇನೆ ಮೋಕ್ಷ. ರಾಜಸತಾಮಸರಿಗೆ ಇಲ್ಲವೆಂದು ಹೇಳುವರು.

**ಸತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈ-**
**ರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।**
**ಸ್ಥಿತ್ಯಾದಯೇ ಹರಿವಿರಿಂಚಿಹರೇತಿ ಸಂಜ್ಞಾಃ**
**ಶ್ರೇಯಾಂಸಿ ತತ್ರ ಖಲು ಸತ್ವತನೌ ನೃಣಾಂ ಸ್ಯುಃ ॥೨೪॥**

**ಪುರುಷಃ** ಪೂರ್ಣಷಡ್ಗುಣನಾದ ಶ್ರೀಹರಿಯು **ಪ್ರಕೃತೇಃ ಪರಃ ಅಪಿ** ಅಪ್ರಾಕೃತ ವಿಗ್ರಹನಾಗಿದ್ದರೂ **ಸತ್ವಂ ರಜಸ್ತಮ ಇತಿ** ಸತ್ವ, ರಜಸ್ಸು, ತಮಸ್ಸು ಎಂಬ **ಪ್ರಕೃತೇಃ ಯೇ ಗುಣಾಃ** ಪ್ರಕೃತಿ ಗುಣಗಳೇನುಂಟೋ **ತೈಃ** ಅವುಗಳಿಂದ **ಯುಕ್ತಃ** ಕೂಡಿದವನು ಅಂದರೆ ಅವುಗಳಿಗೆ ಆಶ್ರಯನು ಆಗಿ **ಇಹ** ಜಗತ್ತಿನಲ್ಲಿ **ಏಕ ಏವ** ಒಬ್ಬನೇ **ಸ್ಥಿತ್ಯಾದಯೇ** ಸ್ಥಿತಿ ಉತ್ಪತ್ತಿ ಸಂಹಾರಗಳನ್ನು ಮಾಡಲು **ಹರಿವಿರಿಂಚಿಹರೇತಿ ಸಂಜ್ಞಾಃ ಧತ್ತೇ** ಹರಿ ಬ್ರಹ್ಮ ರುದ್ರ ಎಂಬ ಹೆಸರುಗಳನ್ನು ಪಡೆಯುವನು. ಅಂದರೆ ಆ ಹೆಸರಿನ ಅವತಾರಗಳನ್ನು ಮಾಡಿರುವನೆಂದರ್ಥ. ಹೆಸರು ಮಾತ್ರ ಭೇದ ವ್ಯಕ್ತಿ ಒಬ್ಬನೆ ಎಂದು ತಿಳಿಸಲು ಏಕಃ ಸಂಜ್ಞಾಃ ಧತ್ತೇ ಎಂದಿರುವರು. ಸತ್ವಪ್ರವರ್ತಕನಾಗಿ ಸತ್ವಾಶ್ರಯನಾದ ವಿಷ್ಣುವು ಜಗತ್ತಿನ ಸ್ಥಿತಿಯನ್ನು. ರಜಃಪ್ರವರ್ತಕನಾಗಿ ರಜೋಗುಣಾಶ್ರಯನಾದ ಬ್ರಹ್ಮ ಹೆಸರಿನ ವಿಷ್ಣುವು ಸ್ಥಿತಿಯನ್ನೂ. ತಮಃಪ್ರವರ್ತಕನಾಗಿ ತಮೋಗುಣಾಶ್ರಯನಾದ ಹರನೆಂಬ ಹೆಸರಿನ ಹರಿಯು ಸಂಹರಿಸುವನು. ಆದ್ದರಿಂದ ಈ ರೀತಿ ಹೇಳಿರುವರು. ಈ ರೀತಿ ಮೂರು ಗುಣಗಳು ವಿಷ್ಣುವನ್ನು ಆಶ್ರಯಿಸಿರುವವು ಆದರೂ **ತತ್ರ** ಗುಣಾತ್ಮಕ ಜಗತ್ತಿನಲ್ಲಿರುವ ಮನುಷ್ಯದೇಹಗಳ ಮಧ್ಯದಲ್ಲಿ **ಸತ್ವತನೌ** ಸತ್ವ ಗುಣ ಬಹಳವಾಗಿವುಳ್ಳ ದೇಹವಿರುವ ಜೀವನಲ್ಲಿ **ಶ್ರೇಯಾಂಸಿ ಸ್ಯುಃ** ಮೋಕ್ಷಸಾಧನ ಭಕ್ತ್ಯಾದಿಗಳುಂಟಾಗುವವು. ರಾಜಸತಾಮಸ ದೇಹವುಳ್ಳ ಜೀವರಿಗೆ ಭಕ್ತಿ ಉಂಟಾಗುವದಿಲ್ಲ. **ಖಲು** ಶಬ್ದದಿಂದ ಸತ್ವಗುಣವು ಉತ್ತಮವಾದ್ದರಿಂದ ಎಂಬ ಹೇತುಸೂಚನೆ ಮಾಡುವರು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಪರಮಾತ್ಮನು ಹರಿ-ವಿರಿಂಚಿ-ಹರ ಎಂಬ ಹೆಸರನ್ನು ಧಾರಣ ಮಾಡುವನು ಎಂದು ಹೇಳಿದ್ದು ಹೇಗೆ ವಿರಿಂಚಿ ಹರ ಎಂಬ ಹೆಸರು ಬ್ರಹ್ಮ

ರುದ್ರನಲ್ಲಿವೆಯಲ್ಲ? ಎಂಬ ಶಂಕೆ ಬಂದರೆ ಬ್ರಹ್ಮ ರುದ್ರರಿಗೆ ಆ ಹೆಸರು ಬಂದದ್ದು ಆ ಹೆಸರಿನ ವಿಷ್ಣು ರೂಪ ಅವರಲ್ಲಿದ್ದುದರಿಂದ ಹೊರತು ಮುಖ್ಯವಾಗಿ ಅಲ್ಲ. ಮುಖ್ಯವಾಗಿ ವಿಷ್ಣುವಿನ ಹೆಸರುಗಳೇ ಅವು. ಆದ್ದರಿಂದ ಮೂಲದಲ್ಲಿ ಹೇಳಿದ್ದು ಯುಕ್ತ ಎಂದು ಹೇಳುವರು.

ವಿಷ್ಣೋರೇವ ತ್ರಿಸಂಜ್ಞಾಃ ।

ವಾಮನೇಚ -

ಬ್ರಹ್ಮವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ ।
ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ ॥

ಪೃಥಗೇವ ಸ್ಥಿತೋ ದೇವೋ ವಿಷ್ಣುರೂಪೀ ಜನಾರ್ದನಃ ॥
ಇತಿ ತ್ರಯೋಽಪಿ ಗುಣಾಃ ವಿಷ್ಣ್ವಾಶ್ರಯಾಃ ।
ತಥಾಽಪಿ ಸತ್ವತನೌ ಜೀವೇ ಶ್ರೇಯಾಂಸಿ ಸ್ಯುಃ ॥೨೪॥

ವಿಷ್ಣುವಿಗೇನೇ ಹರಿ-ವಿರಿಂಚಿ-ಹರ ಎಂಬುವ ಸಂಜ್ಞೆಗಳು. ಶ್ರೀವಿಷ್ಣುವಿಗೆ ಬ್ರಹ್ಮ ವಿಷ್ಣು ಶಿವ ಎಂಬ ಮೂರು ರೂಪಗಳು. ಬ್ರಹ್ಮ ಎಂಬ ಶ್ರೀಹರಿಯು (ವಿರಿಂಚಿಯಲ್ಲಿ) ಚತುರ್ಮುಖ ಬ್ರಹ್ಮನಲ್ಲಿ, ಶಿವನಲ್ಲಿ ಶಿವರೂಪಿಯಾಗಿಯೂ ಇದ್ದು ವಿಷ್ಣುರೂಪಿಯೂ ಪ್ರತ್ಯೇಕವಾಗಿಯೇ ಇದ್ದಾನೆ. ಎಂದು ವಾಮನಪುರಾಣದಲ್ಲಿದೆ. ಯದ್ಯಪಿ ಮೂರು ಗುಣಗಳು ಶ್ರೀವಿಷ್ಣುವನ್ನಾಶ್ರಯಿಸಿದ್ದರೂ ಸತ್ವಗುಣಪ್ರಚುರದೇಹವುಳ್ಳ ಜೀವನಲ್ಲಿಯೇ ಶ್ರೇಯಸ್ಸಾಧನವಾದ ಭಕ್ತ್ಯಾದಿಗಳುಂಟಾಗುವವು.

ಎಲ್ಲವೂ ಪ್ರಕೃತಿಗುಣಗಳೇ ಆದ್ದರಿಂದ ಸತ್ವಗುಣ ಉತ್ತಮವೇಕೆ ಎಂಬುದನ್ನು ದೃಷ್ಟಾಂತದ ಮುಖಾಂತರ ತಿಳಿಸುವರು-

**ಪಾರ್ಥಿವಾದ್ದಾರುಣೋ ಧೂಮಸ್ತಸ್ಮಾದಗ್ನಿಸ್ತ್ರಯೀಮಯಃ ।**
**ತಮಸಸ್ತು ರಜಸ್ತಸ್ಮಾತ್ಸತ್ವಂ ಯದ್ ಬ್ರಹ್ಮದರ್ಶನಮ್ ॥೨೫॥**

ಈ ಶ್ಲೋಕದಲ್ಲಿ ಯಥಾ, ತಥಾ, ಉತ್ತಮಃ, ಎಂಬ ಪದಗಳನ್ನು ಅಧ್ಯಾಹಾರ ಮಾಡಿ ವ್ಯಾಖ್ಯಾನ ಮಾಡಬೇಕು.

**ಯಥಾ** ಹೇಗೆ **ಪಾರ್ಥಿವಾತ್** ಪೃಥಿವೀಕಾರ್ಯವಾದ ಪೃಥಿವೀಲೋಕಸಂಬಂಧಿಯಾದ **ದಾರುಣಃ** ಕಟ್ಟಿಗೆಗಿಂತ **ಧೂಮಃ** ಪೃಥಿವೀಕಾರ್ಯವಾದ ಹೊಗೆಯು **ಉತ್ತಮಃ** ಲೋಕೋಪಕಾರಕ ಮೇಘರೂಪವಾದ್ದರಿಂದ ಅಂತರಿಕ್ಷ ಸಂಬಂಧಿಯೂ ಆದುದರಿಂದ

ಉತ್ತಮವ್ರೋ **ತಸ್ಮಾತ್** ಆ ಧೂಮಕ್ಕಿಂತ **ಅಗ್ನಿಃ** ಪಾರ್ಥಿವವೇ ಆದ ಅಗ್ನಿಯು **ತ್ರಯೀಮಯಃ** ವೇದಪ್ರತಿಪಾದ್ಯ ಇಂದ್ರಾದಿದೇವ ಪ್ರದರ್ಶಕವಾದುದು. ಆದ್ದರಿಂದ **ಉತ್ತಮಃ** ಉತ್ತಮವ್ರೋ(ಚೆನ್ನಾಗಿ ಸಂಸ್ಕೃತವಾದ ಅಗ್ನಿಯಲ್ಲಿ ಮಂತ್ರಗಳಿಂದ ಹೋಮ ಮಾಡಿದರೆ ದೇವತೆಗಳು ಪ್ರತ್ಯಕ್ಷರಾಗುವರು ಎಂಬುದು ಪ್ರಸಿದ್ಧ) **ತಥಾ** ಹಾಗೆಯೇ **ತಮಸಃ** ಪ್ರಕೃತಿಕಾರ್ಯವಾದ ಅಧೋಗತಿಗೆ ಸಾಧನವಾದ ತಮೋಗುಣಕ್ಕಿಂತ **ರಜಃ** ರಜೋಗುಣವು **ಉತ್ತಮಂ** ಸ್ವರ್ಗಾದಿಸಾಧನ ಕರ್ಮಜನಕವಾದುದರಿಂದ ಉತ್ತಮವ್ರೋ **ತಸ್ಮಾತ್** ಆ ರಜೋಗುಣಕ್ಕಿಂತ **ಯದ್ ಬ್ರಹ್ಮದರ್ಶನಂ** ಯಾವ ಕಾರಣ ವೇದಾರ್ಥಭೂತ ಪರಬ್ರಹ್ಮಜ್ಞಾನಕ್ಕೆ ಸಾಧನವಾಗಿದೆಯೋ **ತತ್** ಆ ಕಾರಣ **ಸತ್ವಂ** ಸತ್ವಗುಣವು **ಉತ್ತಮಂ** ಉತ್ತಮವು. ಕಟ್ಟಿಗೆ ಹೊಗೆಗಿಂತ ಅಗ್ನಿಯು ವೇದಾರ್ಥ ತಿಳಿಸುವ ಶಕ್ತಿ ಇದ್ದುದರಿಂದ ಹೇಗೆ ಉತ್ತಮವ್ರೋ ಹಾಗೆ ಸತ್ವಗುಣವು ಪ್ರಾಕೃತವಾದರೂ ವೇದಾರ್ಥ ಪ್ರದರ್ಶಕ ಶಕ್ತಿ ಇರುವದರಿಂದ ಇತರ ಎರಡು ಗುಣಕ್ಕಿಂತ ಉತ್ತಮವಾಗಿದೆ ಎಂದು ಭಾವ.

ಅಗ್ನಿಯು ಧೂಮಕ್ಕಿಂತ ಉತ್ತಮ ಎನ್ನುವ ವಿಷಯದಲ್ಲಿ ಅನುಮಾನ ಪ್ರಯೋಗ ಹೀಗೆ ಸತ್ವಂ, ರಜಸ್ತಮೋಭ್ಯಾಂ ತತ್ಕಾರ್ಯಾಪೇಕ್ಷಯಾ ಉತ್ತಮಂ ಉತ್ತಮಕಾರ್ಯಜನನ ಶಕ್ತಿಮತ್ವಾತ್ ಯೋ ಯತ್ಕಾರ್ಯಾಪೇಕ್ಷಯಾ ಉತ್ತಮಕಾರ್ಯಜನನಶಕ್ತಿಮಾನ್ ಸಃ ತಸ್ಮಾದುತ್ತಮಃ । ಯಥಾ ಧೂಮಾಪೇಕ್ಷಯಾ ಉತ್ತಮಕಾರ್ಯಜನನಶಕ್ತಿಮಾನ್ ಅಗ್ನಿಃ ಧೂಮಾಪೇಕ್ಷಯಾ ಉತ್ತಮಃ । ಎಂದು ತಿಳಿಯಬೇಕು. ಈ ಶ್ಲೋಕದಲ್ಲಿ ಅಗ್ನಿಯು ಧೂಮಕ್ಕಿಂತ ಉತ್ತಮವೆನ್ನಲು ತ್ರಯೀಮಯಃ ಎಂದು ಹೇತು ಹೇಳಿದೆ.

ಧೂಮವು ಕಟ್ಟಿಗೆಗಿಂತ ಉತ್ತಮವೆನ್ನಲು ಯಾವ ಹೇತು ಹೇಳಿಲ್ಲ. ಆದ್ದರಿಂದ ಅದನ್ನು ತಿಳಿಸುವರು. ಮೇಘರೂಪತ್ವಾದ್ಧೂಮ ಉತ್ತಮಃ । ಮಳೆಯ ಮೂಲಕ ಲೋಕೋಪಕಾರಕ ಮಾಡಲಿಕ್ಕೆ ಕಾರಣವಾದುದರಿಂದ ಕಟ್ಟಿಗೆಗಿಂತ ಉತ್ತಮವೆಂದು ಅಭಿಪ್ರಾಯ.

ಸತ್ವಗುಣವೇ ಶ್ರೇಯಸ್ಸಾಧನವೆಂಬ ವಿಷಯದಲ್ಲಿ ಶಿಷ್ಟಾಚಾರವನ್ನು ಪ್ರಮಾಣವೆಂದು ತಿಳಿಸುವರು.

**ಭೇಜಿರೇ ಮುನಯೋಽಥಾಗ್ರೇ ಭಗವಂತಮಧೋಕ್ಷಜಮ್ ।**
**ಸತ್ತ್ವಂ ವಿಶುದ್ಧಂ ಕ್ಷೇಮಾಯ ಕಲ್ಪತೇ ನೇತರಾವಿಹ ॥೨೬॥**

**ಅಗ್ರೇ** ಪೂರ್ವದಲ್ಲಿ **ಮುನಯಃ** ಸಾತ್ತ್ವಿಕಪ್ರಕೃತಿಯುಳ್ಳವರು **ಯತಃ** ಯಾವಕಾರಣ **ಭಗವಂತಂ ಅಧೋಕ್ಷಜಂ** ಐಶ್ವರ್ಯ ಶಾಲಿಯಾದ ಇಂದ್ರಿಯ ಗೋಚರನಾದ ಶ್ರೀಹರಿಯನ್ನು **ಭೇಜಿರೇ** ಹೊಂದಿದರು. **ಅಥೋ** ಆದ್ದರಿಂದ **ಇಹ** ಸಂಸಾರಿಗಳಲ್ಲಿ **ವಿಶುದ್ಧಂ** ರಜೋಗುಣತಮೋಗುಣಗಳಿಂದ ಅನಭಿಭೂತವಾದ **ಸತ್ತ್ವಂ** ಸತ್ವಗುಣವು **ಕ್ಷೇಮಯಾ** ಮೋಕ್ಷಕೊಡಲು **ಕಲ್ಪತೇ** ಸಮರ್ಥವಾಗುವದು **ಇತರೌ ನ** ತಮೋಗುಣರಜೋಗುಣಗಳು ಮೋಕ್ಷಕೊಡಲು ಸಮರ್ಥವಲ್ಲ.

ಯಾವಕಾರಣ ಸಾತ್ತ್ವಿಕರಿಗೆ ಭಗವಂತನಲ್ಲಿ ಭಕ್ತಿಯುಂಟಾಗುವದು ಭಕ್ತಿಯಿಂದ ಮೋಕ್ಷವಾಗುವದು ಎಂದು ತಾತ್ಪರ್ಯದ ಭಾವ. ಮೋಕ್ಷಕ್ಕಾಗಿ ಭಗವಂತನೆ ಭಜನೀಯ ಎಂಬ ವಿಷಯದಲ್ಲಿ ಶಿಷ್ಟಾಚಾರ ಪ್ರಮಾಣವೆಂದು ತಿಳಿಸುವರು ಈ ಶ್ಲೋಕದಲ್ಲಿ -

**ಮುಮುಕ್ಷವೋ ಘೋರರೂಪಾನ್ ಹಿತ್ವಾ ಭೂತಪತೀನಥ ।**
**ನಾರಾಯಣಕಲಾಃ ಶಾಂತಾ ಭಜಂತಿ ಹ್ಯನಸೂಯವಃ ॥೨೭॥**

**ಮುಮುಕ್ಷವಃ** ಮೋಕ್ಷೇಚ್ಛುಗಳು **ಘೋರರೂಪಾನ್** ರಾಜಸ ತಾಮಸ ಫಲಪ್ರದರಾದ **ಭೂತಪತೀನ್** ರುದ್ರಾದಿಗಳನ್ನು **ಹಿತ್ವಾ** ಬಿಟ್ಟು **ಅಥ** ಸಾತ್ತ್ವಿಕರಿಗೇನೆ ಹರಿಭಕ್ತಿ ದ್ವಾರಾ ಮೋಕ್ಷವಾಗುವುದರಿಂದ **ಅನಸೂಯವಃ** ಅಸೂಯಾ ಮುಂತಾದ ದೋಷರಹಿತರಾಗಿ **ಶಾಂತಾಃ** ಪರಿಪೂರ್ಣಸುಖಸ್ವರೂಪಗಳಾದ **ನಾರಾಯಣಕಲಾಃ** ಭಗವನ್ಮೂರ್ತಿಗಳನ್ನು **ಹಿ** ಯಾವ ಕಾರಣ **ಭಜಂತಿ** ಭಜಿಸುವರೋ **ಅಥ** ಆದ್ದರಿಂದ ವಾಸುದೇವನೇ ಭಜನೀಯನು.

*ಭಾಗವತತಾತ್ಪರ್ಯ-*

ಸಾತ್ತ್ವಿಕಾನಾಂ ವಾಸುದೇವೇ ಭಕ್ತಿರುತ್ಪದ್ಯತೇ ।

ಶ್ರೇಯಸ್ಸನ್ನು ಅಪೇಕ್ಷಿಸುವವರು ಬೇರೆಯವರನ್ನು ಆರಾಧಿಸುವದು ಕಂಡಿದೆಯಲ್ಲ ಎಂದರೆ ನಿಜ ಆದರೆ ಅವರು ಮೋಕ್ಷಾಪೇಕ್ಷಿಗಳಲ್ಲ ಎಂದು ಹೇಳುವರು.

**ರಜಸ್ತಮಃಪ್ರಕೃತಯಃ ಸಮಶೀಲಾನ್ ಭಜಂತಿ ವೈ ।**
**ಪಿತೃಭೂತಪ್ರಜೇಶಾದೀನ್ ಶ್ರಿಯೈಶ್ವರ್ಯಪ್ರಜೇಪ್ಸವಃ ॥೨೮॥**

**ರಜಸ್ತಮಃಪ್ರಕೃತಯಃ** ರಾಜಸತಾಮಸಸ್ವಭಾವದ ಜನರು **ಸಮಶೀಲಾನ್** ತಮ್ಮ ಸಮಾನಸ್ವಭಾವವುಳ್ಳ **ಪಿತೃಭೂತಪ್ರಜೇಶ್ವರಾನ್** ಪಿತೃಗಳು ಮತ್ತು ಭೂತೇಶ (ರುದ್ರ) ಪ್ರಜೇಶ ಮೊದಲಾದವರನ್ನು **ಶ್ರಿಯೈಶ್ವರ್ಯಪ್ರಜೇಪ್ಸವಃ** ಸಂಪತ್ತು ಐಶ್ವರ್ಯ ಪ್ರಜೆಗಳನ್ನೇಪೇಕ್ಷಿಸುವವರು **ಭಜಂತಿ** ಸೇವಿಸುವರು, (ನಿರ್ದೋಷಂ ಹಿ ಸಮಂ ಬ್ರಹ್ಮ ಎಂದಿರುವದರಿಂದ ಸಮನೆಂದರೆ ಬ್ರಹ್ಮ(ಹರಿ) ಅವನ ಸ್ವಭಾವದವರಾದವರು ಎಂದೂ ಅರ್ಥ.) ಯಾರ ಸೇವಕರಿಗೆ ಯಾವ ಸ್ವಭಾವವಿರುವದೋ ಸೇವ್ಯನಿಗೂ ಅದೇ ಸ್ವಭಾವವಿರುವದು.

ಸಂಪತ್ಕಾಮುಕರು ದಕ್ಷಪ್ರಜೇಶ್ವರನನ್ನು, ಐಶ್ವರ್ಯಕಾಮುಕರು ರುದ್ರಾದಿ ಭೂತಪತಿಗಳನ್ನು, ಪ್ರಜಾಕಾಮುಕರು ಅಗ್ನಿಷ್ವತ್ತಾದಿಪಿತೃಗಳನ್ನು ಭಜಿಸುತ್ತಾರೆ. ಶ್ರಿಯೈಶ್ವರ್ಯಪ್ರಜೇಪ್ಸವಃ ಶ್ರಿಯಾ ಸಹ ಐಶ್ವರ್ಯಂ ಚ ಪ್ರಜಾಶ್ಚ ಈಪ್ಸಂತೀತಿ ಶ್ರಿಯೈಶ್ವರ್ಯಪ್ರಜೇಪ್ಸವಃ ಅಥವಾ ಇಯಜಾದೇಶೇ ಶ್ರಿಯಂ ಚ ಐಶ್ವರ್ಯಂ ಚ ಪ್ರಜಾಶ್ಚ ಹೀಗೂ ಮಾಡಬಹುದು. ಪಿತೃಭೂತಪ್ರಜೇಶಾದೀನ್ ಎಂಬಲ್ಲಿ ದ್ವಂದ್ವಾಂತದಲ್ಲಿ ಶ್ರೂಯಮಾಣ ಈಶ ಪದವನ್ನು ಪ್ರತ್ಯೇಕಸಂಬಂಧ ಮಾಡಿದರೂ ಪಿತೃಗಳಿಗೆ ಭಜನೀಯತ್ವ ಬರುವದಿಲ್ಲ ಕಾರಣ ವಿವಕ್ಷಿತ ವಿಗ್ರಹ ತಿಳಿಸುವರು.

*ಭಾಗವತತಾತ್ಪರ್ಯ–*

**ಭೂತೇಶಪ್ರಜೇಶಾದೀನ್ ।**

ಭೂತೇಶ ಪ್ರಜೆಗಳನ್ನು ಎಂದರ್ಥ. ಈಗ

ಭೂತಾನಿ ಚ ಪ್ರಜಾಶ್ಚ ತಾಸಾಂ ಈಶಃ ಪಿತರಶ್ಚ ಭೂತಪ್ರಜೇಶಾಶ್ಚ

ಎಂದು ವಿಗ್ರಹ ಮಾಡಬೇಕೆಂದು ಭಾವ.

ಮೋಕ್ಷಫಲಕವೇದಾದಿಶಾಸ್ತ್ರ ಪ್ರತಿಪಾದ್ಯನಾದ್ದರಿಂದ ಮೋಕ್ಷಾರ್ಥಿಗಳು ಭಗವಂತನನ್ನೇ ಭಜಿಸಬೇಕು ಎಂದು ಎರಡು ಶ್ಲೋಕದಿಂದ ಹೇಳುವರು-

**ವಾಸುದೇವಪರಾ ವೇದಾ ವಾಸುದೇವಪರಾ ಮಖಾಃ ।**
**ವಾಸುದೇವಪರಾ ಯೋಗಾ ವಾಸುದೇವಪರಾ ಕ್ರಿಯಾಃ ॥೨೯॥**

**ವಾಸುದೇವಪರಂ ಜ್ಞಾನಂ ವಾಸುದೇವಪರಂ ತಪಃ ।**
**ವಾಸುದೇವಪರೋ ಧರ್ಮೋ ವಾಸುದೇವಪರಾ ಗತಿಃ ॥೨೦॥**

**ವೇದಾಃ** ವೇದಗಳು **ವಾಸುದೇವಪರಾಃ** ಶ್ರೀಹರಿಯೇ ಮಹಾತಾತ್ಪರ್ಯ ವಿಷಯನಾಗಿವುಳ್ಳವುಗಳು. **ಮಖಾಃ** ಸಂಸಾರಮದವನ್ನು ನಾಶಮಾಡುವ ಅಗ್ನಿಷ್ಟೋಮಾದಿಗಳು (ಮದಂ ಖನಂತೀತಿ ಮಖಾಃ) **ವಾಸುದೇವಪರಾಃ** ಶ್ರೀಹರಿಯೇ ಉದ್ದೇಶ್ಯವಾಗಿವುಳ್ಳವು **ಯೋಗಾಃ** ಅಷ್ಟಾಂಗಗಳು **ವಾಸುದೇವಪರಾಃ** ಹರಿ ವಿಷಯಕವಾದವು **ಕ್ರಿಯಾಃ** ಶ್ರುತಿ ಸ್ಮೃತಿಗಳಲ್ಲಿ ಮಾಡಬೇಕೆಂದು ಹೇಳುವ ಸಂಧ್ಯಾವಂದನಾದಿ ಕ್ರಿಯೆಗಳು **ವಾಸುದೇವಪರಾಃ** ಶ್ರೀಹರಿಪ್ರೀತಿಗಾಗಿ ಅವನೋದ್ದೇಶ್ಯಕವಾಗಿಯೇ ಮಾಡಲ್ಪಡುವವು. **ಜ್ಞಾನಂ** ಉಪನಿಷತ್ತಿನಿಂದ ಹುಟ್ಟಿದ ಜ್ಞಾನಕ್ಕೆ ವಿಷಯನು **ವಾಸುದೇವಪರಂ** ಶ್ರೀಹರಿಯೇ ಮುಖ್ಯನು (ಜ್ಞಾನವು ಹರಿವಿಷಯಕವು) **ತಪಃ** ಕೃಚ್ಛ್ರಚಾಂದ್ರಾಯಣಾದಿಕಾಯಕ್ಲೇಶಗಳು **ವಾಸುದೇವಪರಂ** ಶ್ರೀಹರಿಯ ಉದ್ದೇಶ್ಯಕವೇ ಆಗಿವೆ. **ಧರ್ಮಃ** ದಾನಮುಂತಾದವು **ವಾಸುದೇವಪರಾಃ** ಶ್ರೀಹರಿಗಾಗಿಯೇ **ಗತಿಃ ವಾಸುದೇವಪರಾ** ಶ್ರೀಹರಿಯೇ ಮುಖ್ಯ ಗಮ್ಯನು. ವೇದಗಳಲ್ಲಿ ಕೆಲವು ಕಡೆ ಯಾಗ, ಯೋಗ, ಕ್ರಿಯಾ, ದೇವತಾತಾರತಮ್ಯ, ಕಾಯಕ್ಲೇಶ ಪೂರ್ತಾದಾನ, ಸತ್ಯಾದಿಲೋಕಗಳು ಇವೆಲ್ಲವು ಹೇಳಲ್ಪಟ್ಟರೂ ಅವಾಂತರ ತಾತ್ಪರ್ಯ ಅವುಗಳಲ್ಲಿ ಎಲ್ಲದಕ್ಕೂ ಹರಿಯೇ ಉದ್ದೇಶ್ಯನಾದ್ದರಿಂದ ಮಹಾತಾತ್ಪರ್ಯ ಶ್ರೀಹರಿಯಲ್ಲಿಯೇ ಎಂದು ತಿಳಿಯಬೇಕು.

ಸೃಷ್ಟ್ಯಾದಿವ್ಯಾಪಾರಶೀಲನಾದವನಲ್ಲಿಯೇ ವೇದಸಮನ್ವಯವು ಮೀಮಾಂಸಾದಲ್ಲಿ ಪ್ರಸಿದ್ಧವಾಗಿದೆ. ಸಕಲವೇದ ವಾಸುದೇವಪರ ಎಂದು ಹೇಗೆ ಹೇಳುವರು ಎಂಬ ಶಂಕೆಗೆ ಉತ್ತರಿಸುತ್ತ 'ತಸ್ಯ ಕರ್ಮಾಣ್ಯುದಾರಾಣಿ ಬ್ರೂಹಿ' ಎಂಬ ಶೌನಕರ ಪ್ರಶ್ನೆಗೂ ಉತ್ತರ ಹೇಳುವರು.

**ಸ ಏವೇದಂ ಸಸರ್ಜಾಗ್ರೇ ಭಗವಾನಾತ್ಮಮಾಯಯಾ ।**
**ಸದಸದ್ರೂಪಯಾ ಚಾಸೌ ಗುಣಮಯ್ಯಾಽಗುಣೋ ವಿಭುಃ ॥೨೧॥**

**ಸಃ ಏವ ಭಗವಾನ್** ಯಾವನು ಎಲ್ಲ ವೇದಶಾಸ್ತ್ರಗಳ ಮಹಾತಾತ್ಪರ್ಯ ವಿಷಯನೆಂದು ಹಿಂದಿನ ಶ್ಲೋಕಗಳಲ್ಲಿ ಹೇಳಿತೋ ಆ ಷಡ್ಗುಣಶಾಲಿಯಾದ ವಾಸುದೇವನೇ **ಅಗುಣಃ** ಸತ್ವಾದಿ ಗುಣಶೂನ್ಯನು **ವಿಭುಃ** ಎಲ್ಲ ಕಾರಣಗಳಲ್ಲಿ

ಪ್ರವರ್ತಕನಾಗಿ, ವ್ಯಾಪ್ತನಾಗಿ **ಅಗ್ರೇ** ಆದಿಕಾಲದಲ್ಲಿ **ಆತ್ಮಮಾಯಯಾ** ನಿಮಿತ್ತಕಾರಣವಾದ ತನ್ನ ಸ್ವರೂಪೇಚ್ಛೆಯಿಂದ **ಸದಸದ್ರೂಪಯಾ** ಕಾರ್ಯಕಾರಣ ರೂಪವಾದ **ಗುಣಮಯ್ಯಾ** ಸತ್ವಾದಿಗುಣಾತ್ಮಕವಾದ **ಮಾಯಯಾ ಚ** ಉಪಾದಾನ ಕಾರಣವಾದ ಜಡಪ್ರಕೃತಿಯಿಂದ **ಇದಂ** ಮಹದಾದಿಕಾರ್ಯವನ್ನು **ಸಸರ್ಜ** ಸೃಷ್ಟಿಸಿದನು.

ಅಗುಣನಾದ ಭಗವಂತನನ್ನು ಗುಣಬದ್ಧನಾದ ಜೀವನಿಂದ ಅಭಿನ್ನನೆಂದು ಕೆಲವರು ಹೇಳುವರಲ್ಲ ಎಂಬ ಶಂಕೆಗೆ ಆ ರೀತಿ ಅವರು ಹೇಳಲು ಕಾರಣ ಭ್ರಾಂತಿ. ಆ ಭ್ರಾಂತಿಗೆ ಕಾರಣ ತಿಳಿಸುತ್ತ ಸೃಷ್ಟಿ ಮಾಡಿದ ಮೇಲೆ ನಿಯಮನಕ್ಕಾಗಿ ಜಗತ್ ಪ್ರವೇಶರೂಪಕಾರ್ಯ ಹೇಳುವರು-

**ತಯಾ ವಿಲಸಿತೇಷ್ವೇಷು ಗುಣೇಷು ಗುಣವಾನಿವ ।**
**ಅಂತಃಪ್ರವಿಷ್ಟ ಆಭಾತಿ ವಿಜ್ಞಾನೇನ ವಿಜೃಂಭಿತಃ ॥೩೧॥**

**ತಯಾ** ಕಾರ್ಯಕಾರಣರೂಪವಾದ ಜಡಪ್ರಕೃತಿಯಿಂದ **ವಿಲಸಿತೇಷು** ಪ್ರಕಾಶಿಸಲ್ಪಟ್ಟ ಭೂತಭೌತಿಕದೇಹೇಂದ್ರಿಯಾದ್ಯಾತ್ಮನಾ ಪರಿಣಾಮ ಹೊಂದಿರುವ **ಏಷು** ಪ್ರತ್ಯಕ್ಷಾದಿಪ್ರಮಾಣ ಸಿದ್ಧವಾದ **ಗುಣೇಷು** ಕಾರ್ಯಗಳಲ್ಲಿ **ಅಂತಃ ಪ್ರವಿಷ್ಟಃ** ಪ್ರೇರಣೆ ಮಾಡಲು ಒಳಗೆ ಪ್ರವೇಶ ಮಾಡಿದ್ದರಿಂದ **ಗುಣವಾನಿವ** ಗುಣಬದ್ಧನಾದ ಜೀವನಂತೆ(ಜೀವನೇ)ಎಂದು **ಆಭಾತಿ** ಅಜ್ಞಾನಿಗಳಿಗೆ ತೋರುವನು. **ವಸ್ತುತಃ** ಜೀವಾಭಿನ್ನನಲ್ಲ ಏಕೆಂದರೆ **ವಿಜ್ಞಾನೇನ ವಿಜೃಂಭಿತಃ** ವಿಶೇಷಜ್ಞಾನದಿಂದ ಪೂರ್ಣನಾದವನು ಜೀವನು ವಿಶೇಷಜ್ಞಾನರಹಿತನು ಎಂದು ಪ್ರಸಿದ್ಧವಾಗಿದೆ.

ಪ್ರೇರಣೆಗಾಗಿ ಎಲ್ಲ ಪದಾರ್ಥಗಳಲ್ಲಿ ಇದ್ದುದಾದರೆ ಸ್ಥಾನ ಭೇದ ನಿಮಿತ್ತಕವಾಗಿ ಪರಮಾತ್ಮನು ಭಿನ್ನನು ಎಂಬ ಶಂಕೆಗೆ ಒಬ್ಬನೇ ಅನೇಕ ರೂಪಗಳಿಂದ ಇರುವವನೇ ಹೊರತು ಪರಮಾತ್ಮನಲ್ಲಿ ಭೇದವಿಲ್ಲ ಎಂದು ಉದಾಹರಣೆ ಕೊಟ್ಟು ಹೇಳುವರು.

**ಯಥಾ ವ್ಯವಹಿತೋ ವಹ್ನಿರ್ದಾರುಷ್ವೇಕಃ ಸ್ವಯೋನಿಷು ।**
**ನಾನೇವ ಭಾತಿ ವಿಶ್ವಾತ್ಮಾ ಭೂತೇಷು ಚ ತಥಾ ಪುಮಾನ್ ॥೩೩॥**

**ಏಕಃ ವಹ್ನಿಃ** ಒಂದೇ ಅಗ್ನಿಯು **ಸ್ವಯೋನಿಷು** ತನ್ನ ಅಭಿವ್ಯಕ್ತಿಸ್ಥಾನವಾದ **ದಾರುಷು** ಕಟ್ಟಿಗೆಗಳಲ್ಲಿ **ವ್ಯವಹಿತಃ** ಅದೃಶ್ಯವಾಗಿದ್ದು **ನಾನೇವ ಭಾತಿ** ಬಹುರೂಪನಾಗಿ ಬೇರೆ ಬೇರೆ

ತೋರುವದು ವಸ್ತುತಃ ಭೇದವಿಲ್ಲ.(ಅಭಿಮಾನಿದೇವತೆ ಒಬ್ಬನೇ ಎಂದು ಭಾವ)**ಯಥಾ** ಹೇಗೋ **ತಥಾ** ಹಾಗೆ **ಏಕಃ ಪುಮಾನ್** ಒಬ್ಬನೇ ಪರಮಪುರುಷನಾದ ಪರಮಾತ್ಮನೂ ಕೂಡ **ವಿಶ್ವಾತ್ಮಾ** ಸಮಗ್ರವಾಗಿ **ಭೂತೇಷು** ಪ್ರಾಣಿಗಳಲ್ಲಿ ಪ್ರವಿಷ್ಟನಾದರೂ **ನಾನೇವ ಭಾತಿ** ಬಹುರೂಪವಾಗಿ ಬೇರೆ ಬೇರೆ ತೋರುವನು ವಸ್ತುತಃ ಬೇರೆ ಅಲ್ಲವೆಂದು ಭಾವ.

ಈ ರೀತಿ ಬಹುರೂಪನಾದ ಶ್ರೀಹರಿಯ ಶುಭವಿಷಯ ಭೋಗರೂಪ ಕರ್ಮವನ್ನು ಹೇಳುವರು.

**ಅಸೌ ಗುಣಮಯೈರ್ಭಾವೈರ್ಭೂತಸೂಕ್ಷ್ಮೇಂದ್ರಿಯಾದಿಭಿಃ ।**
**ಸ್ವನಿರ್ಮಿತೇಷು ನಿರ್ವಿಷ್ಟೋ ಭುಂಕ್ತೇ ಭೂತೇಷು ತದ್ಗುಣಾನ್ ॥೩೩॥**

**ಅಸೌ** ಈ ಪರಮಾತ್ಮನು **ಗುಣಮಯೈಃ** ಸತ್ವಾದಿಗುಣವಿಕಾರಗಳಾದ **ಭೂತಸೂಕ್ಷ್ಮೇಂದ್ರಿಯಾದಿಭಿಃ** ಪಂಚಮಹಾಭೂತಗಳು, ಭೂತಸೂಕ್ಷ್ಮಗಳು ಪಂಚತನ್ಮಾತ್ರಾಗಳು, ಹತ್ತು ಇಂದ್ರಿಯಗಳು, ಆತ್ಮಾ, ಮನಸ್ಸು **ಭಾವೈಃ** ಉಪಾದಾನಗಳಾದ ತತ್ತ್ವಗಳಿಂದ **ಸ್ವನಿರ್ಮಿತೇಷು** ತನ್ನಿಂದ ನಿರ್ಮಿಸಲ್ಪಟ್ಟ **ಭೂತೇಷು** ಪ್ರಾಣಿಗಳ ದೇಹಗಳಲ್ಲಿ **ನಿವಿಷ್ಟಃ** ಅಸಂಗನಾಗಿ ಪ್ರವೇಶ ಮಾಡಿ **ತದ್ಗುಣಾನ್** ಆ ಆ ಇಂದ್ರಿಯಕ್ಕೆ ಗೋಚರಿಸುವ ವಿಷಯಗಳನ್ನು (ಶುಭವಾದವುಗಳನ್ನು ಮಾತ್ರ) **ಭುಂಕ್ತೇ** ಅನುಭವಿಸುವನು.

*ಭಾಗವತತಾತ್ಪರ್ಯ-*

೩೦ ನೇ ಶ್ಲೋಕದಲ್ಲಿ 'ಸದಸದ್ರೂಪಯಾ ಆತ್ಮಮಾಯಯಾ' ಎಂದು ವಿಶೇಷಣ ವಿಶೇಷ್ಯ ಭಾವ ಮಾಡಿ ವ್ಯಾಖ್ಯಾನಿಸಿದರೆ ಚ ಶಬ್ದ ವ್ಯರ್ಥವಾಗುವದು ಕಾರಣ ವ್ಯಾಖ್ಯಾನಿಸುವರು-

ಆತ್ಮಮಾಯಯಾ ಸ್ವೇಚ್ಛಯಾ । ಸದಸದ್ರೂಪಯಾ ಪ್ರಕೃತ್ಯಾಚ ॥

ಆತ್ಮರೂಪಮಾಯೆಯಿಂದ ಸ್ವರೂಪೇಚ್ಛಾರೂಪ ನಿಮಿತ್ತಕಾರಣದಿಂದ ಮಾಯಾಶಬ್ದ ಅನುಕರ್ಷಣ ಮಾಡಿ ಕಾರ್ಯಕಾರಣರೂಪವಾದ ಉಪಾದಾನವಾದ ಜಡಪ್ರಕೃತಿಯಿಂದಲೂ ಎಂದರ್ಥ.

32ನೇ ಶ್ಲೋಕದಲ್ಲಿ ತಯಾ ವಿಲಸಿತೇಷು ಎಂಬಲ್ಲಿ ಹಿಂದೆ ಎರಡು ಮಾಯೆಗಳು ಪ್ರಕೃತವಾದ್ದರಿಂದ ಯಾವುದರ ಪರಾಮರ್ಶವೆಂದು ತಿಳಿಯುವುದಿಲ್ಲ. ಅದಕ್ಕಾಗಿ ವ್ಯಾಖ್ಯಾನಿಸುವರು 'ವಿಜ್ಞಾನೇನ ವಿಜೃಂಭಿತಃ ವಿಜ್ಞಾನೇನೈವ ಸಂಪೂರ್ಣಃ' ವಿಶೇಷಜ್ಞಾನದಿಂದಲೇ ಪರಿಪೂರ್ಣನಾದವನು ಎಂದರ್ಥ.

೩೪ನೇ ಶ್ಲೋಕದಲ್ಲಿ **ತದ್ಗುಣಾನ್ ಭುಂಕ್ತೇ** ಎಂಬುವಲ್ಲಿ ಗುಣಶಬ್ದವು ವಿಷಯ ಎಂಬರ್ಥದಲ್ಲಿರುವದರಿಂದ ಅಶುಭವಿಷಯಭೋಗವು ಪ್ರಾಪ್ತವಾಗುವುದು. ಆ ಕಾರಣಕ್ಕೆ ವಿವಕ್ಷಿತ ಅರ್ಥ ಹೇಳುವರು.

**ತದ್ಗುಣಾನೇವ ಭುಂಕ್ತೇ ನ ದೋಷಾನ್ ।**
**ಸರ್ವತ್ರ ಸಾರಭುಗ್ದೇವೋ ನಾಸಾರಂ ಸ ಕದಾಚನ । -ಇತಿ ವಾಮನಪುರಾಣೇ ।**

**ಅನಶ್ನನ್ನಾತ್ಯಶುಭಾಪೇಕ್ಷಯಾ ಪರವಶತ್ವಾಪೇಕ್ಷಯಾ ಕ್ಲೃಪ್ತ್ಯಪೇಕ್ಷಯಾ ಚ ।**
**ಅಕ್ಲೃಪ್ತ್ಯಾ ಚ ಸ್ವತಂತ್ರತ್ವಾದಶುಭಸ್ಯ ಚ ವರ್ಜನಾತ್ ।**
**ಅಭೋಕ್ತಾ ಶುಭಭೋಕ್ತೃತ್ವಾತ್ ಭೋಕ್ತೇತ್ಯೇವ ಚ ತಂ ವಿದುಃ ॥**

**ಅನ್ಯೂನಾನಧಿಕತ್ವಾಚ್ಚ ಪೂರ್ಣಸ್ವಾನಂದಭೋಜನಾತ್ ।**
**ವಿರಾಗಾಚ್ಚ ಪರಸ್ಯಾಸ್ಯ ಭೋಕ್ತೃತ್ವಪ್ರತಿಷೇಧನಮ್ ॥ಇತಿ ಸ್ಕಾಂದೇ॥**

ಆನಂದಾದಿಶುಭಗುಣಗಳನ್ನೇ ಅನುಭವಿಸುವನು. ದ್ವೇಷನಿಮಿತ್ತದುಃಖಾದಿಗಳನ್ನು ಅನುಭವಿಸುವುದಿಲ್ಲ. ಎಲ್ಲ ಕಡೆಗೂ ಶ್ರೀಹರಿಯು ಸಾರ ಪದಾರ್ಥಗಳನ್ನೇ ಉಣ್ಣುತ್ತಾನೆ. ಯಾವ ಕಾಲದಲ್ಲಿಯೂ ಅಶುಭವನ್ನುಣ್ಣುವದಿಲ್ಲ ಎಂದು ವಾಮನ ಪುರಾಣದಲ್ಲಿದೆ.

ಸರ್ವತ್ರ ಸಾರಪದಾರ್ಥವನ್ನೇ ಉಣ್ಣುತ್ತಿರುವ ಶ್ರೀಹರಿಯು ಅಶುಭವನ್ನು ಉಣ್ಣುವದಿಲ್ಲ ಶುಭವನ್ನೂ ಪರಾಧೀನನಾಗಿ ಉಣ್ಣುವದಿಲ್ಲ ಪ್ರಯತ್ನಮಾಡಿ ಉಣ್ಣುವದಿಲ್ಲ ಎಂಬ ಅಭಿಪ್ರಾಯದಿಂದ 'ಅನಶ್ನನ್' ಎಂದು ಶ್ರುತಿಯು ಹೇಳಿದೆ. ಯತ್ನವಿಲ್ಲದೇ ಸಿದ್ಧವಾದ ಶುಭವಿಷಯವನ್ನು ಸ್ವೀಕರಿಸುತ್ತಾನೆ ಪರಾಧೀನನಾಗಿ ಸ್ವೀಕರಿಸುವುದಿಲ್ಲ, ಅಶುಭವಿಷಯ ಭೋಗಮಾಡದ್ದರಿಂದ ಅಭೋಕ್ತಾ ಎಂದೂ ಶುಭವನ್ನು ಅನುಭವಿಸುವದರಿಂದ ಭೋಕ್ತಾ ಎಂದು ಶ್ರೀಹರಿಯನ್ನು ತಿಳಿಯುತ್ತಾರೆ. ಸರ್ವೋತ್ತಮನಾದ ಶ್ರೀಹರಿಗೆ ವಿಷಯ ಭೋಗದಿಂದ ಉಚ್ಚತ್ವನೀಚತ್ವಗಳಿಲ್ಲದಿರು-ವದರಿಂದಲೂ, ವಿಷಯಭೋಗದಿಂದ ಅನಭಿವ್ಯಕ್ತವಾದ, ಪೂರ್ಣವಾದ,

ಸ್ವರೂಪಭೂತವಾದ ಆನಂದವನ್ನು ಅನುಭಿಸುವುದರಿಂದಲೂ, ವಿಷಯಭೋಗದಲ್ಲಿ ಕಾಮನೆ ಇಲ್ಲದಿರುವದರಿಂದಲೂ ಭೋಕ್ತೃತ್ವವಿಲ್ಲವೆಂದು ಶ್ರುತಿಯಲ್ಲಿ ಹೇಳಿದೆ. ಎಂದು ಸ್ಕಾಂದ ಪುರಾಣದಲ್ಲಿದೆ.

ಆಖ್ಯಾಹಿ ಎಂಬ ಪ್ರಶ್ನೆಗೆ ಉತ್ತರವನ್ನು ಮುಂದಿನ ಅಧ್ಯಾಯದಲ್ಲಿ ಹೇಳಲು ಭೂಮಿಕೆಯನ್ನು ಹೇಳುವರು.

**ಭಾವಯನ್ನೇಷ ಸತ್ವೇನ ಲೋಕಾನ್ ವೈ ಲೋಕಭಾವನಃ ।**
**ಲೀಲಾವತಾರಾನುಗತಸ್ತಿರ್ಯಙ್ನರಸುರಾದಿಷು ॥೩೪॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ದ್ವಿತೀಯೋಽಧ್ಯಾಯಃ ॥

**ಲೋಕಭಾವನಃ** ಜಗತ್ಕರ್ತೃವಾದ **ಏಷಃ** ಪರಮಪುರುಷನು **ಸತ್ವೇನ** ಸತ್ವಗುಣದಿಂದ **ಲೋಕಾನ್** ಸಜ್ಜನರನ್ನು **ಭಾವಯನ್** ಪಾಲಿಸುತ್ತಾ **ತಿರ್ಯಙನರಸುರಾದಿಷು** ತಿರ್ಯಗ್ಯೋನಿಯಲ್ಲಿ ವರಾಹ, ಮತ್ಸ್ಯ ಮುಂತಾಗಿ **ನರೇಷು** ಮನುಷ್ಯರಲ್ಲಿ ಕೃಷ್ಣರಾಮಾದಿಗಳಾಗಿ **ಸುರೇಷು** ದೇವತೆಗಳಲ್ಲಿ(ಯಮಧರ್ಮನಲ್ಲಿ ನಾರಾಯಣನಾಗಿ) ಆದಿಶಬ್ದದಿಂದ ಋಷಿಗಳಾದ ಕಶ್ಯಪರಲ್ಲಿ ವಾಮನನಾಗಿ, ಸ್ವಯಂ ಋಷಿಯಾಗಿ, ಸ್ತಂಭಾದಿಗಳಲ್ಲಿ ನೃಸಿಂಹನಾಗಿ, **ಲೀಲಾವತಾರಾನುಗತಃ** ಕ್ರೀಡಾ ರೂಪವಾಗಿ ಮಾಡಿದ ಅವತಾರಗಳನ್ನು ಅನುಸರಿಸುವನು. ಅಂದರೆ ಯಾವ ಜಾತಿಯಲ್ಲಿ ಅವತರಿಸುವನೋ ಆ ಜಾತಿಗೆ ಅನುಗುಣವಾದ ವ್ಯಾಪಾರವನ್ನು ಮಾಡುವನು.

ಇಲ್ಲಿಗೆ ಎರಡನೇಯ ಅಧ್ಯಾಯವು ಮುಗಿಯಿತು

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ತೃತೀಯೋಽಧ್ಯಾಯಃ

**ಅಧ್ಯಾಯ ಸಾರಾಂಶ**

'ಅಥಾಖ್ಯಾಹಿ'ಎಂದು ಕೇಳಿದ ಪ್ರಶ್ನೆಗೆ ಉತ್ತರವಾಗಿ ಅವತಾರಗಳನ್ನು ಹೇಳುವವರಾಗಿ 'ಭಾವಯನ್ನೇಷ ಸತ್ತ್ವೇನ' ಎಂದು ಎರಡನೆಯ ಅಧ್ಯಾಯದ ಕೊನೆಯಲ್ಲಿ ಸೂಚಿಸಿದ ಅವತಾರಗಳನ್ನು ವಿವರವಾಗಿ ಹೇಳಲು ಹೊರಟು ಮೊದಲು (ಬ್ರಹ್ಮಾಂಡದ ಒಳಗಿರುವ ವಿರಾಜನೆಂಬ)ಪರಮಪುರುಷನೆಂದು ಕರೆಸಿಕೊಳ್ಳುವ ಭಗವದವತಾರದ ಅಭಿವ್ಯಕ್ತಿಯ ರೀತಿಯನ್ನು ಹೇಳುವರು.

ಶ್ರೀಹರಿಯು ಮೊದಲು ಜಗತ್ತನ್ನು ಸಂಹಾರಮಾಡಿ ಸೂಕ್ಷ್ಮರೂಪದಿಂದ ತನ್ನ ಉದರದಲ್ಲಿ ಇಟ್ಟುಕೊಂಡು ಪ್ರಳಯ ಜಲದಲ್ಲಿ ಲಕ್ಷ್ಮೀ ಎಂಬ ಪರ್ಯಂಕದಲ್ಲಿ ಲಕ್ಷ್ಮೀಭುಜಗಳೊಳಗೆ ಸೇರಿಕೊಂಡು ಪ್ರಕೃತಿಮಯವಾದ ತಮಸ್ಸಿನಲ್ಲಿ ಅಡಗಿದ್ದನೋ ಅದೇ ಪರಮಪುರುಷನು ಮತ್ತೆ ಸೃಷ್ಟಿಕಾಲದಲ್ಲಿ ಲೋಕಗಳನ್ನು ಸೃಷ್ಟಿಸುವ ಇಚ್ಛೆಯಿಂದ ಹದಿನಾರು ಕಲೆಗಳಿಂದ ಸಹಿತವಾದ ಪುರುಷರೂಪವನ್ನು ಸ್ವೀಕರಿಸಿದನು. ಲಯಕಾಲದಲ್ಲಿ ಸುಮ್ಮನೆ ಮಲಗಿದ್ದ ನಾರಾಯಣ ಲಯಕಾಲ ಕಳೆದ ಮೇಲೆ ಸೃಷ್ಟಿ ಮಾಡಲು ಬಯಸಿ ಇಪ್ಪತ್ತನಾಲ್ಕು ತತ್ತ್ವಗಳನ್ನು ಬ್ರಹ್ಮಾಂಡವನ್ನೂ ಸೃಷ್ಟಿಮಾಡಿ ಅದರೊಳಗೆ ನೀರಲ್ಲಿ ಶೇಷಶಾಯಿಯಾಗಿ ಮಲಗಿದ. ಆಗ ಅವನ ನಾಭಿಯಿಂದ ಚತುರ್ದಶಲೋಕಾತ್ಮಕವಾದ ಪದ್ಮ ಉದಯಿಸಿತು. ಆ ಪದ್ಮದಲ್ಲಿ ಚತುರ್ಮುಖಬ್ರಹ್ಮ ಜನಿಸಿದ. ಈ ಪದ್ಮನಾಭರೂಪದಿಂದ ಮೂರು ಲೋಕಗಳಲ್ಲಿರುವ (ಶ್ವೇತದ್ವೀಪ-ಅನಂತಾಸನ-ವೈಕುಂಠದಲ್ಲಿರುವ)ನಾರಾಯಣ ವಾಸುದೇವ ವೈಕುಂಠರೂಪಗಳೂ

ಅವುಗಳಿಂದ ಮತ್ಸ್ಯಾದಿ ಅವತಾರಗಳೂ ವ್ಯಕ್ತವಾದವು. ಮೊಟ್ಟ ಮೊದಲಿಗೆ ಸನಕಾದಿಗಳಿಗೆ ಬ್ರಹ್ಮಚರ್ಯವನ್ನು ಉಪದೇಶಿಸಿದ ಸನತ್ಕುಮಾರಾವತಾರ. ಬಳಿಕ ವರಾಹ, ಐತರೇಯ ಮಹಿದಾಸ, ನರ ನಾರಾಯಣ ಕಪಿಲ ದತ್ತ ಯಜ್ಞ ಋಷಭ, ಪೃಥು ಮತ್ಸ್ಯ ಕೂರ್ಮ ಧನ್ವಂತರಿ ಮೋಹಿನಿ ನರಸಿಂಹ ವಾಮನ ಪರಶುರಾಮ ವೇದವ್ಯಾಸ ರಾಮ ಬಲರಾಮ ಕೃಷ್ಣ ಬುದ್ಧ ಕಲ್ಕಿ ಅವತಾರಗಳು. ಇವುಗಳಲ್ಲಿ ನರ ಪೃಥು ಬಲರಾಮ ಈ ಮೂರು ಹರಿಯ ಆವೇಶಾವತಾರಗಳು. ಬೇರೆ ಎಲ್ಲವೂ ಸ್ವರೂಪಾವತಾರಗಳು. ಮೂಲರೂಪ ಅವತಾರರೂಪಗಳಿಗೆ ಏನೂ ವ್ಯತ್ಯಾಸವಿಲ್ಲ. ದೇವತೆ-ಋಷಿ ಮುಂತಾದವರನ್ನೂ ಭಗವಂತನ ಅಂಶಗಳೆಂದು ಕರೆಯುವದುಂಟು ಅದು ಭಿನ್ನಾಂಶಗಳೆಂದು ತಿಳಿಯಬೇಕು. ಭಗವಂತನಿಗೆ ಮೂರು ಬಗೆಯ ರೂಪಗಳಿವೆ. ಮತ್ಸ್ಯಾದಿಗಳು ಸ್ವರೂಪರು. ಜೀವರು ಪ್ರತಿಬಿಂಬರು. ಜಡವಸ್ತುಗಳು ಪ್ರತಿಮಾರೂಪಗಳು ಎಂದು. ಕೃಷ್ಣನೇ ವ್ಯಾಸರೂಪದಿಂದ ಶ್ರೀಮದ್ಭಾಗವತವನ್ನು ರಚಿಸಿದ. ರಚಿಸಿದ ಶ್ರೀಮದ್ಭಾಗವತವನ್ನು ಶುಕಾಚಾರ್ಯರಿಗೆ ಉಪದೇಶಿಸಿದ. ಆ ಶುಕಾಚಾರ್ಯರು ಪ್ರಾಯೋಪವೇಶಕ್ಕೆ ಕುಳಿತ ಪರೀಕ್ಷಿತನಿಗೆ ಉಪದೇಶಿಸಿದರು. ಅದೇ ಸಂದರ್ಭದಲ್ಲಿ ನಾನೂ ಅಲ್ಲಿಯೇ ಇದ್ದು ಶ್ರೀಮದ್ಭಾಗವತವನ್ನು ಕೇಳಿದೆ.

**ವಿರಾಟ್ ನಾಮಕ ಪುರುಷರೂಪಾವತಾರ**

'ಭಾವಯನ್ನೇಷ ಸತ್ವೇನ' ಎಂದು ಎರಡನೆಯ ಅಧ್ಯಾಯದ ಕೊನೆಗೆ ಸೂಚಿತವಾದ ಅವತಾರಗಳನ್ನು ಹೇಳಲು ಮೊದಲಿಗೆ ಪರಮಪುರಷನೆಂಬ ಭಗವಂತನ ಅಭಿವ್ಯಕ್ತಿಯ ರೀತಿಯನ್ನು ಹೇಳುವರು. ಬ್ರಹ್ಮಾಂಡದೊಳಗೆ ವಿರಾಟ್ ನಾಮಕ ಪುರುಷಾವತಾರ ಹೇಳುವರು.

ಸೂತ ಉವಾಚ -

**ಜಗೃಹೇ ಪೌರುಷಂ ರೂಪಂ ಭಗವಾನ್ ಮಹದಾದಿಭಿಃ ।**
**ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ ॥೧॥**

**ಭಗವಾನ್** ಶ್ರೀಹರಿಯು **ಆದೌ** ಸೃಷ್ಟಿಗಿಂತ ಮೊದಲು **ಲೋಕಸಿಸೃಕ್ಷಯಾ** ಲೋಕಗಳನ್ನು ಸೃಷ್ಟಿಸುವ ಇಚ್ಛೆಯಿಂದ **ಮಹದಾದಿಭಿಃ ಸಂಭೂತಂ** ಪ್ರಲಯಕಾಲದಲ್ಲಿ ತನ್ನ ಉದರದಲ್ಲಿ ಇರಿಸಿಕೊಂಡು ಮಹದಾದಿ ಏಳು ಪ್ರಕೃತಿ ವಿಕೃತಿಗಳಿಂದ ಸಹಿತವಾದ **ಷೋಡಶಕಲಂ** ಹದಿನಾರು ಕಲೆಗಳಿಂದ ಸಹಿತವಾದ **ಪೌರುಷಂ ರೂಪಂ** ಪುರುಷರೂಪವನ್ನು **ಜಗೃಹೇ** ಸ್ವೀಕರಿಸಿದನು.

**ವಿಶೇಷ :-** ಯಾವನು ಜಗತ್ತನ್ನು ಸಂಹಾರ ಮಾಡಿ ಸೂಕ್ಷ್ಮರೂಪದಿಂದ ತನ್ನ ಉದರದಲ್ಲಿ ಇರಿಸಿಕೊಂಡು ಪ್ರಲಯೋದಕದಲ್ಲಿ ಲಕ್ಷ್ಮೀಪರ್ಯಂಕದಲ್ಲಿ ಲಕ್ಷ್ಮೀಭುಜಾಂತರ್ಗತನಾಗಿ ಪ್ರಕೃತ್ಯಾತ್ಮಕವಾದ ತಮಸ್ಸಿನಿಂದ ಆವೃತನಾಗಿದ್ದನೋ ಅವನೇ ಪರಮ ಪುರುಷನು ಮತ್ತೆ ಉತ್ಪತ್ತಿ ಕಾಲದಲ್ಲಿ ತನಗೆ ಆಚ್ಛಾದಕವಾದ ತಮಸ್ಸನ್ನು ಪಾನಮಾಡಿ ತನ್ನನ್ನು ಪ್ರಕಾಶ ಗೊಳಿಸಿದನು ಎಂಬುದೇ ಪುರುಷರೂಪ ಸ್ವೀಕಾರ ಹೊರತು ರಾಮಕೃಷ್ಣಾದಿಗಳಂತೆ ಲೋಕಕ್ಕೆ ವ್ಯಕ್ತಗೊಳಿಸಿದನೆಂದಲ್ಲ. ತಮಃಪಾನವೆಂದರೆ ಅವರವರ ಶಕ್ತಿಯನ್ನು ತೆಗೆದವನು ಎಂದರ್ಥ.

*ಭಾಗವತತಾತ್ಪರ್ಯ -*

ಇಲ್ಲಿ ಪೂರ್ವದಲ್ಲಿ ಇಲ್ಲದಿರುವ ರೂಪವನ್ನು ಸ್ವೀಕರಿಸಿದನು ಎಂಬ ಪ್ರತೀತಿಯನ್ನು ನಿರಾಕರಿಸಲು ಯಥವತ್ತಾಗಿ ವ್ಯಾಖ್ಯಾನಿಸುವರು.

ವ್ಯಕ್ತ್ಯಪೇಕ್ಷಯಾ ಜಗೃಹೇ ಇತಿ ।

ತಥಾ ಹಿ ತಂತ್ರಭಾಗವತೇ -

ಅಹೇಯಮನುಪಾದೇಯಂ ಯದ್ರೂಪಂ ನಿತ್ಯಮವ್ಯಯಮ್ ।
ಸ ಏವಾಪೇಕ್ಷ್ಯರೂಪಾಣಾಂ ವ್ಯಕ್ತಿಮೇವ ಜನಾರ್ದನಃ ॥

ಅಗೃಣ್ಹಾತ್ ವ್ಯಸೃಜಚ್ಚೇತಿ ಕೃಷ್ಣರಾಮಾದಿಕಾಮ್ ತನುಮ್ ।
ಪಠ್ಯತೇ ಭಗವಾನೀಶೋ ಮೂಢಬುದ್ಧಿವ್ಯಪೇಕ್ಷಯಾ ॥

ತಮಸಾ ಹ್ಯುಪಗೂಢಸ್ಯ ಯತ್ತಮಃ ಪಾನಮೀಶಿತುಃ ।
ಏತತ್ಪುರುಷರೂಪಸ್ಯ ಗ್ರಹಣಂ ಸಮುದೀರ್ಯತೇ ।
ಕೃಷ್ಣರಾಮಾದಿರೂಪಾಣಾಂ ಲೋಕವ್ಯಕ್ತಿವ್ಯಪೇಕ್ಷಯಾ ॥ ಇತಿ

ಮೊದಲು ಇದ್ದ ರೂಪದ ಅಭಿವ್ಯಕ್ತಿಯ ಅಭಿಪ್ರಾಯದಿಂದ ಜಗೃಹೇ ಎಂದು ಹೇಳಿದ್ದೇ ಹೊರತು ಇಲ್ಲದ ಹೊಸ ರೂಪತೆಗೆದುಕೊಂಡನೆಂದಲ್ಲ. ನಾವು ಹೇಳಿದಂತೆಯೇ ತಂತ್ರ ಭಾಗವತದಲ್ಲಿ ಹೇಳಿದೆ. ಶ್ರೀಹರಿಯ ರೂಪವು(ಶರೀರವು) ನಿತ್ಯವೂ ವಿಕಾರರಹಿತವೂ ಆದ್ದರಿಂದ ಬಿಡಲಾಗದು. ಹೊಸದಾಗಿ ಸ್ವೀಕರಿಸಲಾಗದು. ಆ ರೂಪಗಳ ವ್ಯಕ್ತಿಯನ್ನೇ ಅಪೇಕ್ಷಿಸಿ ಜನಾರ್ದನನು ಸರ್ವಪೂಜ್ಯನು, ಸರ್ವನಿಯಾಮಕನು, ಆದ ಶ್ರೀಹರಿಯು ರಾಮಕೃಷ್ಣಾದಿ ರೂಪಗಳನ್ನು ತೆಗೆದುಕೊಂಡನು. ಮೂರ್ಖರ ಬುದ್ಧಿಗಳಿಗನುಸಾರವಾಗಿ ತ್ಯಜಿಸಿದನು ಎಂದು

ಹೇಳಲ್ಪಡುವನು.(ವಸ್ತುತಃ ಶ್ರೀಹರಿಗೆ ದೇಹಸ್ವೀಕಾರತ್ಯಾಗಗಳಿಲ್ಲ) ಬ್ರಹ್ಮಾಂಡಾಂತರ್ಗತವಾದ, ಪ್ರಲಯಕಾಲದಲ್ಲಿ ತಮಸ್ಸಿನಿಂದ ಆಚ್ಛಾದಿತವಾದ ಶ್ರೀಹರಿಯ ರೂಪಕ್ಕೆ ತಮಸ್ಸಿನ ನಿವೃತ್ತಿಯೇ ಪುರುಷರೂಪದ ವ್ಯಕ್ತಿಯೆನಿಸುತ್ತದೆ. ಕೃಷ್ಣರಾಮಾದಿರೂಪಗಳಿಗೆ ಲೋಕದಲ್ಲಿ ಅಭಿವ್ಯಕ್ತಿಯೆನಿಸುತ್ತದೆ. ಕೃಷ್ಣರಾಮಾದಿ ರೂಪಗಳಿಗೆ ಲೋಕದಲ್ಲಿ ಅಭಿವ್ಯಕ್ತಿಯನ್ನು ಅಪೇಕ್ಷಿಸಿ ಜನ್ಮಾದಿ ವ್ಯವಹಾರ ಮಾಡುವರು. ರಾಮಾದಿರೂಪಗಳೂ ಇದ್ದವುಗಳೇ ವ್ಯಕ್ತವಾಗುವವು ಅಂದರೆ ಜನರ ಕಣ್ಣಿಗೆ ಕಾಣಿಸಿಕೊಳ್ಳುವವು. ಪುರುಷರೂಪಮಾತ್ರ ಆದಿಕಾಲದಲ್ಲಿ ಕೇವಲ ಆವರಣವಿಲ್ಲದಂತಾಗುವುದು. ಅದೇ ವ್ಯಕ್ತಿ ಎನಿಸುವದು. ಅಂತೂ ಭಗವದ್ರೂಪಗಳು ಅನಾದಿನಿತ್ಯವಾದ್ದರಿಂದ ಅಭಿವ್ಯಕ್ತಿಯೇ ಗ್ರಹಣಶಬ್ದಾರ್ಥ ಎಂದು ಹೇಳಿದಂತಾಯಿತು. ಹಾಗಾದರೆ 'ಮಹದಾದಿಭಿಃ ಸಂಭೂತಂ' ಎಂದು ಜನನವನ್ನು ಹೇಗೆ ಹೇಳುವರು. ಎಂದರೆ ಅದರ ತಾತ್ಪರ್ಯ ಹೇಳುವರು 'ಮಹದಾದಿಭಿಃ ಸಂಭೂತಂ' **ಅಂತರ್ಗತಮಹದಾದಿ ನ ಮಹದಾದಿಶರೀರಮ್ ।** ಮಹದಾದಿಗಳಿಂದ ಕೂಡಿದವನು ಎಂದರ್ಥ.

ಅಂದರೆ ಪ್ರಾಣಿಗಳ ದೇಹಾದಿಗಳನ್ನು ಸೃಷ್ಟಿ ಮಾಡಲು ಹೊರಗಿರುವ ಮಹದಾದಿತತ್ತ್ವಗಳ ಅಂಶಗಳನ್ನು ತನ್ನ ಉದರದಲ್ಲಿರಿಸಿಕೊಂಡು ವ್ಯಕ್ತನಾದವನೆಂದರ್ಥ. ಹೊರತು ಮಹದಾತ್ಯಾತ್ಮಕ ಶರೀರವುಳ್ಳವನಲ್ಲ ಇದರಂತೆಯೇ ಷೋಡಶಕಲಂ ಎಂಬುದಕ್ಕೂ ಅರ್ಥಮಾಡಬೇಕೆಂದು ಹೇಳುವರು.

**ಯಸ್ಮಿನ್ನೇತಾ ಷೋಡಶಕಲಾಃ ಪ್ರಭವಂತಿ । ಇತಿ ಶ್ರುತಿಃ ।**

ಯಾರಲ್ಲಿ ಷೋಡಶಕಲೆಗಳು ಪ್ರಕರ್ಷೇಣ ಇರುವವು. ಎಂಬ ಶ್ರುತಿಯ ಅನುಸಾರ. ಷೋಡಶಕಲೆಗೆ ಆಶ್ರಯನೇ ಹೊರತು ಷೋಡಶಕಲಾತ್ಮಕ ಶರೀರವುಳ್ಳವನಲ್ಲ. ಪಂಚಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿ-ಯಗಳು ಮತ್ತು ಮನಸ್ಸು. ಇವು ಷೋಡಶಕಲೆಗಳು.

ಭಗವಂತನಿಗೆ ಪ್ರಾಕೃತಶರೀರವಿಲ್ಲ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು.

**ಯತ್ಕಿಂಚಿದಿಹ ಲೋಕೇ ವೈ ದೇಹಬದ್ಧಂ ವಿಶಾಂಪತೇ ।**
**ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರಬುದ್ಧಿಜೈಃ ॥**

ಈಶ್ವರೋ ಹಿ ಮಹದ್ಭೂತಂ ಪ್ರಭುರ್ನಾರಾಯಣೋ ವಿರಾಟ್ ।
ಭೂತಾಂತರಾತ್ಮಾ ವಿಜ್ಞೇಯಃ ಸಗುಣೋ ನಿರ್ಗುಣೋऽಪಿ ಚ ॥

ಭೂತಪ್ರಲಯಮವ್ಯಕ್ತಂ ಶುಶ್ರೂಷುರ್ನೃಪಸತ್ತಮ ॥ -ಇತಿ ಮೋಕ್ಷಧರ್ಮೇ

ಎಲೋ ರಾಜನೇ ಈ ಲೋಕದಲ್ಲಿ ದೇಹಬದ್ಧರಾದ ಜೀವರು ಎಲ್ಲರೂ ಈಶ್ವರ ಬುದ್ಧಿಯಿಂದ ಜನಿಸಿದ ಪಂಚಭೂತಗಳಿಂದ ಕೂಡಿರುತ್ತಾರೆ. ಶ್ರೀಮನ್ನಾರಾಯಣನು ಸರ್ವನಿಯಾಮಕನು, ಸರ್ವಶ್ರೇಷ್ಠನು, ಅನಾದಿಕಾಲದಿಂದ ಇರುವವನು, ಸರ್ವಸಮರ್ಥನು, ವಿಶೇಷಪ್ರಕಾಶಮಾನನು, ಸರ್ವಾಂತರ್ಯಾಮಿಯು, ಜ್ಞಾನಾನಂದಾದಿಗುಣಗಳಿಂದ ಪೂರ್ಣನು, ಸತ್ವಾದಿಗುಣಶೂನ್ಯನೂ, ಭೂತಗಳಿಗೆ ನಾಶಕಳಾದ, ಅವ್ಯಕ್ತತತ್ತ್ವಾಭಿಮಾನಿನಿಯಾದ, ರಮಾದೇವಿಯು ಶ್ರೀಹರಿಯ ಸೇವೆ ಮಾಡುವ ಸ್ವಭಾವದವಳು ಎಂದು ಮೋಕ್ಷಧರ್ಮದಲ್ಲಿ ಪರಮಾತ್ಮನಿಗೆ ಭೌತಿಕ ಪ್ರಾಕೃತ ದೇಹವಿಲ್ಲವೆಂದು ಹೇಳಿದೆ.

ನಾಸೀದಹೇ ನ ರಾತ್ರಿರಾಸೀನ್ನಾಸದಾಸೀತ್ತನ್ಮಹದ್ವಪುಸ್ತದಾऽಭವದ್ವಿಶ್ವರೂಪಂ ಸಾ ವಿಶ್ವರೂಪಸ್ಯ ರಜನೀ ॥ -ಇತಿ ಭಾಲ್ಲವೇಯಶ್ರುತಿಃ

ಪ್ರಲಯಕಾಲದಲ್ಲಿ ಹಗಲು ರಾತ್ರಿ ಕಾರ್ಯಕಾರಣರೂಪ ಪ್ರಪಂಚ ಯಾವದೂ ಇರಲಿಲ್ಲ. ವ್ಯಾಪ್ತಶರೀರವುಳ್ಳ ವಿಶ್ವರೂಪನಾದ ಶ್ರೀಹರಿ ಇದ್ದನು. ಪ್ರಲಯಾವಸ್ಥೆಯು ವಿಶ್ವರೂಪಿ ಶ್ರೀಹರಿಗೆ ರಾತ್ರಿ ಇದ್ದಂತೆ ಎಂದು ಭಾಲ್ಲವೆಯ ಶ್ರುತಿ ಹೇಳುವದು. (ಇಲ್ಲಿಯೂ ಪ್ರಾಕೃತ ದೇಹವಿಲ್ಲವೆಂದು ತಿಳಿಯುತ್ತದೆ).

ನ ತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋಸ್ಥಿಸಂಭವಾ ।
ನ ಯೋಗಿತ್ವಾದೀಶ್ವರತ್ವಾತ್ತಸ್ಯ ರೂಪಾಚ್ಯುತೋ ವಿಭುಃ ॥ -ಇತಿ ವಾರಾಹೇ

ಶ್ರೀಹರಿಗೆ ಮಾಂಸ, ಮೇದಸ್ಸು, ಎಲಬುಗಳು, ಇವುಗಳಿಂದ ಕೂಡಿದ ಪ್ರಾಕೃತ ಶರೀರವಿಲ್ಲ. ಇದು ಯೋಗಸಾಮರ್ಥ್ಯದಿಂದಲ್ಲ. ಅಘಟಿತಘಟಕ, ಅಚಿಂತ್ಯ ಶಕ್ತಿಯಿಂದ ಶ್ರೀಹರಿಯು ಪರಿಪೂರ್ಣ ಆನಂದಾನುಭವಾತ್ಮಕ ದೇಹವುಳ್ಳವ 'ನಾದುದರಿಂದ ಸರ್ವಥಾ ನಾಶರಹಿತನು, ಸರ್ವಸಮರ್ಥನೆಂದೂ, ವರಾಹಪುರಾಣದಲ್ಲಿದೆ.

ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಪರಾತ್ಮನಃ ।
ಹಾನೋಪಾದಾನರಹಿತಾ ನೈವ ಪ್ರಕೃತಿಜಾಃ ಕ್ವಚಿತ್ ॥

ಪರಮಾನಂದಸಂದೋಹಾ ಜ್ಞಾನಮಾತ್ರಾಶ್ಚ ಸರ್ವಶಃ ।
ಸರ್ವೇ ಸರ್ವಗುಣೈಃ ಪೂರ್ಣಾಃ ಸರ್ವೇ ಭೇದವಿವರ್ಜಿತಾಃ ॥

ಅನ್ಯೂನಾನಧಿಕಾಶ್ಚೈವ ಗುಣೈಃ ಸರ್ವೈಶ್ಚ ಸರ್ವಶಃ ।
ದೇಹದೇಹಿಭಿದಾ ಚೈವ ನೇಶ್ವರೇ ವಿದ್ಯತೇ ಕ್ವಚಿತ್ ॥

ತತ್ಸ್ವೀಕಾರಾದಿಶಬ್ದಸ್ತು ಹಸ್ತಸ್ವೀಕಾರವತ್ಸ್ಮೃತಃ ।
ವೈಲಕ್ಷಣ್ಯಾನ್ನ ವಾ ತತ್ರ ಜ್ಞಾನಮಾತ್ರಾರ್ಥಮೀರಿತಂ ॥

ಕೇವಲೈಶ್ವರ್ಯಸಂಯೋಗಾದೀಶ್ವರಃ ಪ್ರಕೃತೇಃ ಪರಃ ।
ಜಾತೋ ಗತಸ್ತ್ವಿದಂ ರೂಪಂ ತದಿತ್ಯಾದಿ ವ್ಯವಕ್ಷತೇ ॥ -ಇತಿ ಮಹಾವರಾಹೇ

ಭಗವದ್ರೂಪಗಳ ಎಲ್ಲ ಶರೀರಗಳೂ ನಿತ್ಯವಾಗಿವೆ, ಸರ್ವದಾ ಏಕಪ್ರಕಾರವಾದವು, ಬಿಡಲು ತೆಗೆದುಕೊಳ್ಳಲು ಆಗದಿರುವವು, ಪ್ರಕೃತಿಯಿಂದ ಹುಟ್ಟಿದವುಗಳಲ್ಲ, ಪರಮಾನಂತ ಸಮೂಹಾತ್ಮಕಗಳು, ಕೇವಲ ಜ್ಞಾನರೂಪಗಳು, ಎಲ್ಲ ಭಗವದ್ರೂಪಗಳು ಸರ್ವಗುಣಗಳಿಂದ ಪೂರ್ಣವಾದವುಗಳು. ತನ್ನ ಅವಯವ ಗುಣಕ್ರಿಯಾದಿಗಳಿಂದಲೂ ಪರಸ್ಪರವಾಗಿಯೂ ತನ್ನಿಂದಲೂ ಭೇದವಿಲ್ಲದವುಗಳು. ಎಲ್ಲ ಗುಣಗಳಿಂದಲೂ ಹೆಚ್ಚು ಕಡಿಮೆ ಇಲ್ಲದವುಗಳು. ಶ್ರೀಹರಿಗೂ ಆತನ ಶರೀರಕ್ಕೂ ಎಲ್ಲಯೂ ಭೇದ ಇಲ್ಲವೆ ಇಲ್ಲ. ದೇವದತ್ತನ ಶರೀರಕ್ಕೆ ಹಸ್ತದಿಂದ ಅಭೇದವಿದ್ದರೂ ದೇವದತ್ತನ ಶರೀರವು ತನ್ನ ಕೈಯನ್ನು ಸ್ವೀಕರಿಸಿತು ಎಂಬುವಂತೆ ಶ್ರೀಹರಿಗೂ ಆತನ ದೇಹಕ್ಕೂ ಅಭೇದವಿದ್ದರೂ ಶ್ರೀಹರಿಯು ದೇಹವನ್ನು ಸ್ವೀಕರಿಸಿದನೆಂದು ವ್ಯವಹಾರ ಮಾಡುವದು ಸರಿಯಲ್ಲ. ದೃಷ್ಟಾಂತದಲ್ಲಿ ಹಸ್ತದೇಹಗಳಿಗೆ ಭೇದಾಭೇದಗಳು. ದಾರ್ಷ್ಟಾಂತಿಕವಾದ ಶ್ರೀಹರಿಗೂ ಆತನ ಅವಯವಗಳಿಗೂ ಅತ್ಯಂತಾಭೇದವು ಹೀಗೆ ವೈಲಕ್ಷಣ್ಯವಿದೆ ಕಾರಣ ಸಂಪೂರ್ಣ ದೃಷ್ಟಾಂತವಲ್ಲ. ಅಭೇದವಿದ್ದರೂ ವ್ಯವಹಾರ ಕೂಡುವದು ಎಂದು ತಿಳಿಸಲು ಹೇಳಿದ್ದಷ್ಟೇ. ಅತ್ಯಂತಾಭೇದವಿದ್ದರೆ ಹೇಗೆ ವ್ಯವಹಾರವೆಂದರೆ ಪ್ರಕೃತಿಯಿಂದ ಉತ್ತಮನಾದ ಶ್ರೀಹರಿಯು ಇತರ ಅಸಾಧಾರಣವಾದ, ಅಚಿಂತ್ಯ ಐಶ್ವರ್ಯವಿದ್ದ ಪ್ರಯುಕ್ತವೇ ಹುಟ್ಟಿದನೆಂದು, ಈ ರೂಪವನ್ನು ಹೊಂದಿದನೆಂದು ಆ ರೂಪವನ್ನು ಹೊಂದಿದನೆಂದೂ ಭೇದ ವ್ಯವಹಾರವು ಶಾಸ್ತ್ರದಲ್ಲಿ ಉಕ್ತವಾಗಿದೆ. ಎಂದು ಮಹಾವರಾಹ ಪುರಾಣದಲ್ಲಿದೆ.

ಶ್ರೀಹರಿಗೆ ದೇಹಾದಿಗಳಿಂದ ಅಭೇದವಿದೆ ಎಂಬಲ್ಲಿ ಎರಡು ಶ್ರುತಿಗಳನ್ನು ಹೇಳುವರು.

ಏಕಮೇವಾದ್ವಿತೀಯಂ, ನೇಹನಾನಾಸ್ತಿಕಿಂಚನ । ಏವಂ ಧರ್ಮಾನ್ ಪೃಥಕ್ ಪಶ್ಯನ್ ಇತ್ಯಾದಿ ಚ । ತಸ್ಯೈವಾಸ್ಥೂಲತ್ವಾದ್ಯೈಶ್ವರ್ಯಯೋಗಾತ್ ॥

ತಥಾ ಚ ಕೌರ್ಮೇ -

ಅಸ್ಥೂಲಶ್ಚಾನಣುಶ್ಚೈವ ಸ್ಥೂಲೋಽಣುಶ್ಚೈವ ಸರ್ವತಃ ।
ಅವರ್ಣಃ ಸರ್ವತಃ ಪ್ರೋಕ್ತಃ ಶ್ಯಾಮೋ ರಕ್ತಾಂತಲೋಚನಃ ॥

ಐಶ್ವರ್ಯಯೋಗಾದ್ ಭಗವಾನ್ ವಿರುದ್ಧಾರ್ಥೋಽಭಿಧೀಯತೇ ।
ತಥಾಪಿ ದೋಷಾಃ ಪರಮೇ ನೈವಾಹಾರ್ಯಾಃ ಕಥಂಚನ ॥
ಗುಣಾವಿರುದ್ಧಾ ಅಪಿ ತು ಸಮಾಹಾರ್ಯಾಶ್ಚ ಸರ್ವತಃ ॥ ಇತಿ

ಶ್ರೀಹರಿಗೂ ಆತನ ಗುಣಕ್ರಿಯಾದಿಗಳಿಗೂ ಭೇದವಿಲ್ಲ. ಶ್ರೀಹರಿಗೆ ಸದೃಶವಾದ ಇನ್ನೊಬ್ಬ ವ್ಯಕ್ತಿಯಿಲ್ಲ. ಪರಮಾತ್ಮನಿಗೂ ಅವನ ಅವಯವಗಳಿಗೂ ಭೇದವಿಲ್ಲ . ಆದರಂತೆ ಭಗವಂತನ ಧರ್ಮಗಳನ್ನು ಅವನಿಂದ ಭಿನ್ನ ಎಂದು ತಿಳಿದರೆ ಅಂಧತಮಸ್ಸಿಗೆ ಹೋಗುವವನು. ಎಂದು ನಿಂದಿಸಿದ್ದರಿಂದ ಅವನ ಧರ್ಮಗಳಿಗೆ ಅಭೇದ ಸಿದ್ಧವಾಗುವದು. ಶ್ರೀಹರಿಗೇನೇ ಅಪ್ರಾಕೃತ ಸ್ಥೂಲತ್ವ ಅಣುತ್ವ ಮೊದಲಾದ ವಿರುದ್ಧ ಧರ್ಮಗಳು ಅಚಿಂತ್ಯ ಶಕ್ತಿಯಿಂದ ಉಪಪನ್ನವಾಗುವವು. ಇದು ಕೂರ್ಮಪುರಾಣದಲ್ಲಿ ಹೇಳಲ್ಪಟ್ಟಿದೆ. ಎಲ್ಲ ವಸ್ತುಗಳಿಗಿಂತ ಸ್ಥೂಲನಾದವನೇ (ಪ್ರಾಕೃತಸ್ಥೌಲ್ಯವಿಲ್ಲದಿರುವುದ-ರಿಂದ) ಅಣು ಎಂದೂ ಹೇಳಲ್ಪಡುತ್ತಿಲ್ಲವಾದ್ದರಿಂದ ಅರೂಪನೆಂದು ಹೇಳಲ್ಪಡವನು ಅಘಟಿತ ಘಟನಾ ಸಾಮರ್ಥ್ಯದಿಂದ ವಿರುದ್ಧಧರ್ಮವುಳ್ಳವನೆಂದು ಹೇಳಲ್ಪಡುವನು. ಆದರೂ ಯಾವ ದೋಷಗಳನ್ನೂ ಶ್ರೀಹರಿಗೆ ಇವೆ ಎಂದು ಚಿಂತಿಸಬಾರದು.

ಲೋಕದೃಷ್ಟಿಯಿಂದ ವಿರುದ್ಧವಾದರೂ ಗುಣಗಳನ್ನು ಧ್ಯಾನಿಸಬೇಕು ಎಂದು ವಿಷ್ಣುಧರ್ಮೋತ್ತರ ವಚನವು ಹೇಳುತ್ತದೆ.

ಗುಣಾಃ ಸರ್ವೇಽಪಿ ಯುಜ್ಯಂತೇ ಹ್ಯೈಶ್ವರ್ಯಾತ್ ಪುರುಷೋತ್ತಮೇ ।
ದೋಷಾ ಕಥಂಚಿನ್ನೈವಾತ್ರ ಯುಜ್ಯಂತೇ ಪರಮೋ ಹಿ ಸಃ ॥

ಗುಣದೋಷೌ ಮಾಯಯೈವ ಕೇಚಿದಾಹುರಪಂಡಿತಾಃ ।
ನ ತತ್ರ ಮಾಯಾ ಮಾಯಾವೀ ತದೀಯೌ ತೌ ಕುತೋ ಹ್ಯತಃ ॥

ತಸ್ಮಾನ್ನ ಮಾಯಯಾ ಸರ್ವಂ ಸರ್ವಮೈಶ್ವರ್ಯಸಂಭವಮ್ ।
ಅಮಾಯೋ ಹೀಶ್ವರೋ ಯಸ್ಮಾತ್ತಸ್ಮಾತ್ತಂ ಪರಮಂ ವಿದುಃ ॥ ಇತಿ

ವಿರುದ್ಧ ಅವಿರುದ್ಧವಾದ ಎಲ್ಲ ಗುಣಗಳು ಅಚಿಂತ್ಯ ಐಶ್ವರ್ಯದಿಂದ ಶ್ರೀಹರಿಯಲ್ಲಿ ಕೂಡುವವು ದೋಷಗಳು ಸರ್ವಥಾ ಕೂಡಲಾರವು. ಏಕೆಂದರೆ ಶ್ರೀಹರಿಯು ಪರಮೈಶ್ವರ್ಯವೆ ಕೂಡಲಾರದು. ಕೆಲವು ಅಜ್ಞಾನಿಗಳು ಮಾಯೆಯಿಂದಲೇ ಶ್ರೀಹರಿಗೆ ಗುಣ ದೋಷಗಳು ಇವೆ ಎನ್ನುತ್ತಾರೆ. ಆದರೆ ಶ್ರೀಹರಿಯಲ್ಲಿ ಮಾಯೆ ಎಂಬ ದೋಷವೇ ಇಲ್ಲ. ಏಕೆಂದರೆ ದೋಷರೂಪವಾದ ಮಾಯೆಯು ಮಾಯಾವಿಯೂ ಶ್ರೀಹರಿಯ ಅಧೀನರೇ ಹೀಗಾಗಿ **ಮಾಯಯಾ** ಮಾಯೆಯಿಂದ ಶ್ರೀಹರಿಗೆ ಯಾವ ದೋಷವನ್ನೂ ತಂದುಕೊಡಲು ಶಕ್ತರಲ್ಲ. ಆದಕಾರಣ ಶ್ರೀಹರಿಯಲ್ಲಿರುವ ಯಾವ ಗುಣಗಳು ಮಾಯಾ ಕಲ್ಪನೆಗಳಲ್ಲ ಎಲ್ಲ ಗುಣಗಳೂ ಅಚಿಂತ್ಯ ಐಶ್ವರ್ಯ ನಿಮಿತ್ತಕಗಳೇ ಆಗಿವೆ. ಮಾಯಾಕೃತ ಭ್ರಮೆ ಇಲ್ಲದವನಾದ್ದರಿಂದಲೇ ಶ್ರೀಹರಿಯನ್ನು ಪರಮನೆಂದು ಹೇಳುವರು ಎಂದು ವಿಷ್ಣುಧರ್ಮೋತ್ತರದಲ್ಲಿ ಹೇಳಿದೆ.

ಪುರುಷನಾಮಕ ಶ್ರೀಹರಿಯ ಮಹಿಮೆ ಹೇಳುವರು.

**ಯಸ್ಯಾಂಭಸಿ ಶಯಾನಸ್ಯ ಯೋಗನಿದ್ರಾಂ ವಿತನ್ವತಃ ।**
**ನಾಭಿಹೃದಾಂಬುಜಾದಾಸೀದ್ಬ್ರಹ್ಮಾ ವಿಶ್ವಸೃಜಾಂ ಪತಿಃ ॥೨॥**

**ಅಂಭಸಿ** ಪ್ರಲಯ ಸಮುದ್ರದಲ್ಲಿ **ಶಯಾನಸ್ಯ** ವಿಶ್ರಮಿಸುವ **ಯೋಗನಿದ್ರಾಂ ವಿತನ್ವತಃ** ಸಮಾಧಿರೂಪವಾದ ನಿದ್ರೆಯನ್ನು ವಿಸ್ತರಿಸುವ **ಯಸ್ಯ** ಯಾವ ಪುರುಷರೂಪಿ ಪರಮಾತ್ಮನ **ನಾಭಿಹೃದಾಂಬುಜಾತ್** ನಾಭಿ ಎಂಬ ಸರೋವರದಲ್ಲಿ ಜನಿಸಿದ ಕಮಲದಿಂದ **ವಿಶ್ವಸೃಜಾಂಪತಿಃ** ದಕ್ಷಮೊದಲಾದ ಪ್ರಜೇಶ್ವರರಿಗೆ ಪತಿಯಾದ **ಬ್ರಹ್ಮಾ** ಬ್ರಹ್ಮದೇವರು **ಆಸೀತ್** ಪಾದ್ಮಕಲ್ಪದಲ್ಲಿ ಜನಿಸಿದರು.

ಮತ್ತೊಂದು ಮಹಿಮೆಯನ್ನು ಹೇಳುವರು.

**ಯಸ್ಯಾವಯವಸಂಸ್ಥಾನೈಃ ಕಲ್ಪಿತೋ ಲೋಕವಿಸ್ತರಃ ।**
**ತದ್ವೈ ಭಗವತೋ ರೂಪಂ ವಿಶುದ್ಧಂ ಸತ್ವಮೂರ್ಜಿತಮ್ ॥೩॥**

**ಯಸ್ಯ** ಯಾವ ಪುರುಷನಾಮಕ ಶ್ರೀಹರಿಯ **ಅವಯವಸಂಸ್ಥಾನೈಃ** ಪಾದ ಮೊದಲಾದ ಅವಯವಗಳೆಂಬ ಸಮೀಚೀನಸ್ಥಾನಗಳಿಂದ **ಲೋಕವಿಸ್ತರಃ** ಹದಿನಾಲ್ಕು ಲೋಕಗಳ ವಿಸ್ತಾರವು **ಕಲ್ಪಿತಃ** ಅವಯವದಿಂದ ಜನಿಸಿದೆ. ಮತ್ತು ಅವಯವವನ್ನು

ಆಶ್ರಯಿಸಿದೆ ಎಂದು ವಿದ್ವಾಂಸರಿಂದ ನಿರೂಪಿತವಾಗಿದೆಯೋ **ತತ್** ಹಿಂದೆ ಹೇಳಿದ **ಭಗವತಃ ರೂಪಂ** ಭಗವಂತನ ರೂಪವು **ವಿಶುದ್ಧಂ** ನಿರ್ದುಷ್ಟವು **ಊರ್ಜಿತಂ** ಸರ್ವೋತ್ಕೃಷ್ಟವು **ಸತ್ವಂ** ಸಾಧುಗುಣವು ಅಥವಾ ಬಲಜ್ಞಾನರೂಪವು.

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಹೇಳಿದ ಜಗತ್ತಿನ ಸೃಷ್ಟಿ ಯಾವುದರಿಂದ ಎಂಬ ವಿಷಯದಲ್ಲಿ ಪ್ರಮಾಣವೇನು ಎಂದು ಹೇಳುವರು.

ಯಸ್ಯಾವಯವಸಂಸ್ಥಾನೈಃ । 'ನಾಭ್ಯಾ ಆಸೀದಂತರಿಕ್ಷಂ' ಇತ್ಯಾದಿ ।

ಎಂದರೆ ಸತ್ವಗುಣಾತ್ಮಕ ಎಂಬ ಅರ್ಥವಾಗದಿರಲೆಂದು ವ್ಯಾಖ್ಯಾನಿಸುವರು.

ಸತ್ತ್ವಂ ಸಾಧುಗುಣಮ್ । ಜ್ಞಾನಬಲರೂಪಂ ವಾ । ಬಲಜ್ಞಾನಸಮಾಹಾರಃ ಸತ್ತ್ವಮಿತ್ಯಭಿಧೀಯತೇ । -ಇತಿ ಮಾತ್ಸ್ಯೇ ।

ಶ್ರೀಹರಿಯ ಅವಯವ ವಿಶೇಷಗಳಿಂದ 14 ಲೋಕಗಳೂ ಹುಟ್ಟಿದವೆಂಬುದು ನಾಭ್ಯಾ ಆಸೀದಂತರಿಕ್ಷಂ ಹೊಕ್ಕಳಿನಿಂದ ಅಂತರಿಕ್ಷ ಲೋಕ ಹುಟ್ಟಿತು ಎಂದು ವೇದಗಳಿಂದ ಹೇಳಲ್ಪಟ್ಟಿದೆ. ಸತ್ವವೆಂದರೆ ಸಾಧುಗುಣವುಳ್ಳದ್ದು (ಸ್ವಾರ್ಥೇ ತ್ವಪ್ರತ್ಯಯ) ಜ್ಞಾನಬಲಸ್ವರೂಪವು. ಬಲಜ್ಞಾನಗಳ ಕೂಡುವಿಕೆಯು ಸತ್ವವೆನಿಸುವದು ಎಂದು ಮತ್ಸ್ಯ ಪುರಾಣದಲ್ಲಿದೆ.

ಯೋಗಿಗಳ ಪ್ರತ್ಯಕ್ಷಕ್ಕೆ ತಿಳಿಯುವದೆಂಬ ಮಹಿಮಾ ವಿಶೇಷವನ್ನು ಹೇಳುವರು.

**ಪಶ್ಯಂತ್ಯದೋ ರೂಪಮದಭ್ರಚಕ್ಷುಷಃ**
**ಸಹಸ್ರಪಾದೋರುಭುಜಾನನಾದ್ಭುತಮ್ ॥**
**ಸಹಸ್ರಮೂರ್ಧಶ್ರವಣಾಕ್ಷಿನಾಸಿಕಂ**
**ಸಹಸ್ರಮೌಲ್ಯಂಬರಕುಂಡಲೋಲ್ಲಸತ್** ॥೪॥

**ಅದಭ್ರಚಕ್ಷುಷಃ** ಅನಲ್ಪ(ಬಹಳ)ವಾದ ಜ್ಞಾನದೃಷ್ಟಿಯುಳ್ಳ ಬ್ರಹ್ಮಾದಿಗಳು **ಸಹಸ್ರಪಾದೋರುಭುಜಾನನಾದ್ಭುತಂ** ಅನಂತ ಪಾದಗಳು, ಅನಂತ ತೊಡೆ,(ಎದೆ) ಅನಂತಭುಜಗಳು, ಅನಂತ ಮುಖಗಳು, ಇವುಗಳಿಂದ ಆಶ್ಚರ್ಯಕರವಾದ **ಸಹಸ್ರಮೂರ್ಧ ಶ್ರವಣಾಕ್ಷಿನಾಸಿಕಂ** ಅನಂತತಲೆಗಳು ಅನಂತ ಕಿವಿಗಳು ಅನಂತ ಕಣ್ಣುಗಳು ಅನಂತ ಮೂಗುಗಳುಳ್ಳ **ಸಹಸ್ರಮೌಲ್ಯಾಂಬರಕುಂಡಲೋಲ್ಲಸತ್** ಅನಂತ

ಕಿರೀಟ, ವಸ್ತ್ರ ಕುಂಡಲಗಳಿಂದ ಶೋಭಿಸುವ **ಅದಃ ರೂಪಂ** ಈ ಭಗವಂತನ ರೂಪವನ್ನು **ಪಶ್ಯಂತಿ** ನೋಡುವರು.

ಮತ್ತೊಂದು ಮಹಿಮೆ ಹೇಳುವರು -

**ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮ್ ।**
**ಯಸ್ಯಾಂಶಾಂಶೇನ ಸೃಜ್ಯಂತೇ ದೇವತಿರ್ಯಙ್ನರಾದಯಃ ॥೫॥**

**ಏತತ್** ಪುರುಷರೂಪವು **ನಾನಾವತಾರಾಣಾಂ** ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿರುವ ನಾರಾಯಣ, ವಾಸುದೇವ, ವೈಕುಂಠ ಎಂಬ ಅವತಾರಗಳಿಗೆ ಸಾಕ್ಷಾತ್ತಾಗಿಯೂ ರಾಮಕೃಷ್ಣಾದಿ ರೂಪಗಳಿಗೆ ಶ್ವೇತ ದ್ವೀಪದಲ್ಲಿರುವ ಈ ಪುರುಷರೂಪದ ಸ್ವರೂಪಾಂಶ ದ್ವಾರಾ **ಬೀಜಂ** ವ್ಯಂಜಕವು. **ನಿಧಾನಂ** ಅವತಾರಕಾರ್ಯ ಮುಗಿದ ಮೇಲೆ ಸಂಶ್ಲೇಷ ವಿಶೇಷ ಹೊಂದುವ ತಾಣವು (ಒಂದಾಗುವ ಸ್ಥಳ) **ಅವ್ಯಯಂ** ವಿಕಾರರಹಿತವಾದುದು **ಯಸ್ಯ** ಯಾವನ **ಅಂಶಾಂಶೇನ** ಸಾಮರ್ಥ್ಯೇಕದೇಶದಿಂದ **ದೇವರ್ತಿಯಙ್ನರಾದಯಃ** ದೇವತೆಗಳು, ಪ್ರಾಣಿಗಳು, ಮನುಷ್ಯರು ಮುಂತಾದ ಚರಾಚರಪ್ರಪಂಚವು **ಸೃಜ್ಯಂತೇ** ಸೃಷ್ಟಿಸಲ್ಪಡುವದು.

*ಭಾಗವತತಾತ್ಪರ್ಯ -*

ನಿಧೀಯತೇ ಅಸ್ಮಿನ್ ಇತಿ ನಿಧಾನಂ ಪ್ರವೇಶಸ್ಥಾನ ಎಂದು ಹೇಳಿದಾಗ ಆಶ್ರಯಾಶ್ರಿತ ಭಾವ ಹೇಳಿದ್ದರಿಂದ ಭೇದ ತೋರುವದು. ಆದಕ್ಕೆ ತಾತ್ಪರ್ಯದ ಮೂಲಕ ಕಾರಣ ಹೇಳುವರು.

ನಿಧಾನಂ । ಅತ್ರೈಕೀಭವಂತ್ಯಂತ ಇತಿ ।

ಕಾರ್ಯಮುಗಿದ ಮೇಲೆ ಈ ಪದ್ಮನಾಭರೂಪದಲ್ಲಿ ಏಕೀಭಾವವಾಗುವದರಿಂದ ನಿಧಾನ ಹೊರತು ಆಶ್ರಯಾಶ್ರಿತ ಭಾವವಿಲ್ಲವೆಂದು ಭಾವ.

ಯಸ್ಯಾಂಶಾಶೇನ ಎಂಬುದಕ್ಕೆ ಪರಮಾತ್ಮನ ಅಂಶ ಬ್ರಹ್ಮಾ ಅವನ ಅಂಶ ಮರೀಚ್ಯಾದಿಗಳು ಅವರಿಂದ ಎಂದರ್ಥವಾಗದಿರಲೆಂದು ವ್ಯಾಖ್ಯಾನಿಸುವರು. ಅಂಶಾಂಶೇನ ಸಾಮರ್ಥ್ಯೇಕದೇಶೇನ.

ಮೊದಲನೆಯ ಅಂಶಶಬ್ದಕ್ಕೆ ಸಾಮರ್ಥ್ಯವೆಂದರ್ಥ ಎರಡನೆ ಅಂಶಶಬ್ದಕ್ಕೆ ಏಕದೇಶ ವೆಂದರ್ಥ ಎಂದಿಟ್ಟುಕೊಂಡು ಸಾಮರ್ಥ್ಯೈಕದೇಶದಿಂದ ಎಂದರ್ಥ ಮಾಡಿರುವರು. ಹೀಗೇ ಅರ್ಥ ಮಾಡಬೇಕೆನ್ನಲು ಸಮಾಖ್ಯಾ ತಿಳಿಸುವರು.

ಬ್ರಾಹ್ಮೇ ಚ - ಯಚ್ಛಕ್ತ್ಯೈಕಾಂಶಸಂಭೂತಂ ಜಗದೇತತ್ ಚರಾಚರಂ । ಇತಿ ।

ಚೇತನಾ ಚೇತನಾತ್ಮಕ ಜಗತ್ತು ಯಾವ ಶ್ರೀಹರಿಯ ಸಾಮರ್ಥ್ಯದ ಏಕದೇಶದಿಂದ ಜನಿಸಿದೆ ಎಂದು ಬ್ರಾಹ್ಮಪುರಾಣದಲ್ಲಿದೆ. ದೇವತಿರ್ಯಙ್ನರಾದಯಃ ಎಂಬುದರ ಅರ್ಥವೇ ಜಗದೇತತ್ ಚರಾಚರಂ ಎಂದು

**ಪುರುಷನಾಮಕ ಭಗವಂತನೇ ಅನೇಕ ಅವತಾರಗಳನ್ನು ಪ್ರಕಟಿಸಿದ**

ನಾನಾವತಾರಗಳಿಗೆ ಬೀಜವೆಂದು ಹೇಳಿದ್ದನ್ನೇ ವಿವರಿಸಿ ಹೇಳುವರು.

**ಸ ಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ ॥**
**ಚಚಾರ ದುಶ್ಚರಂ ಬ್ರಹ್ಮ ಬ್ರಹ್ಮಚರ್ಯಮಖಂಡಿತಮ್ ॥ ೬॥**

**ಸಃ ಏವ** ಬ್ರಹ್ಮಾಂಡಾಂತರ್ಗತ ಪುರುಷನಾಮಕ **ದೇವಃ** ಶ್ರೀಹರಿಯೇ **ಪ್ರಥಮಂ** ಮೊದಲು **ಕೌಮಾರಂ ಸರ್ಗಂ** ಕುಮಾರನಲ್ಲಿರುವ ಸನತ್ಕುಮಾರವೆಂಬ ಅವತಾರವನ್ನು **ಆಸ್ಥಿತಃ** ಹೊಂದಿದನು. ಬ್ರಹ್ಮ ಪೂರ್ಣನು ಆದರೂ ಶಿಷ್ಟಜನ ಶಿಕ್ಷಣಕ್ಕಾಗಿ **ಅಖಂಡಿತಂ** ಅಪ್ರತಿಹತವಾದ **ದುಶ್ಚರಂ** ಬೇರೆಯವರಿಂದ ಮಾಡಲಾಗದ **ಬ್ರಹ್ಮಚರ್ಯಂ ಚಚಾರ** ಬ್ರಹ್ಮಚರ್ಯವ್ರತಾನುಷ್ಠಾನ ಮಾಡಿದನು. (ಸನಕಾದಿಗಳಲ್ಲಿ ಸೇರಿದ ಸನತ್ಕುಮಾರ ಬೇರೆ)

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಅವತಾರದ ಹೆಸರೇನು ಏಕೆ ಅವತಾರ ಎಂದು ತಿಳಿಯುವದಿಲ್ಲ. ಬ್ರಹ್ಮಪುತ್ರ ಸನತ್ಕುಮಾರನೆಂದೂ ತೋರುವದು. ಕಾರಣ ವಿವಕ್ಷಿತ ಅವತಾರ ಮತ್ತು ಚರಿತ್ರವನ್ನು ಪ್ರಮಾಣದಿಂದ ಹೇಳುವರು.

ಕುಮಾರೋ ನಾಮ ಭಗವಾನ್ ಸ್ವಯಂ ಸ್ವಸ್ಮಾದಜಾಯತ ।
ದಿದೇಶ ಬ್ರಹ್ಮಣೇ ಬ್ರಹ್ಮ ಬ್ರಹ್ಮಚರ್ಯೇ ಸ್ಥಿತೋ ವಿಭುಃ ॥

ಯಸ್ಮಾತ್ ಸನತ್‌ಕುಮಾರಶ್ಚ ಬ್ರಹ್ಮಚರ್ಯಮಪಾಲಯತ್ ।
ಯಸ್ಥಾಣೋ ಸ್ಥಾಣುತಾಂ ಪ್ರಾದಾತ್ ಭಗವಾನವ್ಯಯೋ ಹರಿಃ ॥ -ಇತಿ ಬ್ರಾಹ್ಮೇ

ಕುಮಾರನೆಂಬ ಶ್ರೀಹರಿಯು ತನ್ನಿಂದಲೇ ತಾನು ಅವತರಿಸಿದನು. ಯಾವ ಶ್ರೀಹರಿಯಿಂದ ಶಿಕ್ಷಿತನಾಗಿ ಸನತ್ಕುಮಾರನೂ ಕೂಡ ಬ್ರಹ್ಮಚರ್ಯವನ್ನು ಪಾಲಿಸಿದನು. ಯಾವ ಶ್ರೀಹರಿಯು ರುದ್ರನಿಗೆ ರುದ್ರಪದವಿಯನ್ನಿತ್ತನೋ ಆ ಕುಮಾರ ನಾಮಕ ಶ್ರೀಹರಿಯು ಸಮರ್ಥನಾದವನು ತಾನು ಬ್ರಹ್ಮಚರ್ಯದಲ್ಲಿದ್ದು ಚತುರ್ಮುಖನಿಗೆ ವೇದೋಪದೇಶ ಮಾಡಿದನು ಎಂದು ಬ್ರಾಹ್ಮ ಪುರಾಣದಲ್ಲಿದೆ.

**ದ್ವಿತೀಯಂ ತು ಭವಾಯಾಸ್ಯ ರಸಾತಲಗತಾಂ ಮಹೀಮ್ ।**
**ಉದ್ಧರಿಷ್ಯನ್ನುಪಾದತ್ತ ಯಜ್ಞೇಶಃ ಸೌಕರಂ ವಪುಃ ॥೭॥**

**ಅಸ್ಯ** ಈ ಜಗತ್ತಿನ **ಭವಾಯ** ಸ್ಥಿತಿಗಾಗಿ **ರಸಾತಲಗತಾಂ** ರಸಾತಲದಲ್ಲಿರುವ **ಮಹೀಂ** ಭೂಮಿಯನ್ನು **ಉದ್ಧರಿಷ್ಯನ್** ಮೇಲೆ ತರುವವನಾಗಿ **ಯಜ್ಞೇಶಃ** ಯಜ್ಞಪ್ರವರ್ತಕನಾದ ಪುರುಷನಾಮಕ ಶ್ರೀಹರಿಯು **ದ್ವಿತೀಯಂ** ಎರಡನೇಯದಾಗಿ **ಸೌಕರಂ ವಪುಃ** ವರಾಹ ಸದೃಶವಾದ ರೂಪವನ್ನು **ಉಪಾದತ್ತಃ** ಸ್ವೀಕರಿಸಿದನು.

**ತೃತೀಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ ।**
**ತತ್ರ ಸಾತ್ವತಮಾಚಷ್ಟೇ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥೮॥**

**ತೃತೀಯಂ** ಮೂರನೆಯದಾಗಿ **ದೇವರ್ಷಿತ್ವಂ** ಮಹಿದಾಸನೆಂಬ ಹೆಸರಿನಿಂದ **ಋಷಿಸರ್ಗಂ** ಋಷಿಗಳಲ್ಲಿ ಅವತಾರವನ್ನು **ಉಪೇತ್ಯ** ಹೊಂದಿ **ಯಃ** ಯಾವನು **ಸಾತ್ವತಂ ತಂತ್ರಂ** ಪಂಚರಾತ್ರವನ್ನು **ಆಚಷ್ಟೇ** ನಾರದರಿಗೆ ಹೇಳಿದನು **ಯತಃ** ಯಾವ ಪಂಚರಾತ್ರದಲ್ಲಿ ಹೇಳಿದಂತೆ ಅನುಷ್ಠಾನ ಮಾಡುವದರಿಂದ **ಕರ್ಮಣಾಂ** ಕರ್ಮಗಳಿಗೆ **ನೈಷ್ಕರ್ಮ್ಯಂ** ಮೋಕ್ಷಸಾಧನತ್ವವು ಬರುವುದು. ಈ ಶ್ಲೋಕದಲ್ಲಿ ಹೇಳಿದ ಅವತಾರ ಯಾವುದು ಎಂದು ತಿಳಿಯುವದಿಲ್ಲ ನಾರದನೆಂದೂ ತೋರುವದು(ದೇವರ್ಷಿತ್ವಂ ಎಂದದ್ದರಿಂದ) ಆದ್ದರಿಂದ ಇಲ್ಲಿ ಅಭಿಮತವಾದ ಅವತಾರವನ್ನು ಪ್ರಮಾಣದಿಂದ ತಿಳಿಸುವರು.

*ಭಾಗವತತಾತ್ಪರ್ಯ -*

ಅವತಾರಸ್ತೃತೀಯೋಽಸ್ಯ ದೇವರ್ಷಿಃ ಪ್ರಥಿತೋ ದಿವಿ ।
ಮಹಿದಾಸಸ್ತ್ವೈತರೇಯೋ ಯಸ್ತಂತ್ರಂ ನಾರದೇಽವದತ್ ॥ -ಇತಿ ಚ

ಇತರಾದೇವಿಯಲ್ಲಿ ಅವತರಿಸಿದ ಮಹಿದಾಸನೆಂಬ ಶ್ರೀಹರಿಯು ನಾರದರಿಗೆ ಪಂಚರಾತ್ರವನ್ನು ಉಪದೇಶಿಸಿದನು. ಇವನು ಶ್ರೀಹರಿಯ ಮೂರನೆಯ ಅವತಾರನು ದೇವರ್ಷಿ ಎಂದೂ ಪ್ರಸಿದ್ಧನಾದನು.

**ತುರ್ಯಂ ಧರ್ಮಕಲಾಸರ್ಗೇ ನರನಾರಾಯಣಾವೃಷೀ ।**
**ಭೂತ್ವಾಽಽತ್ಮಶಮೋಪೇತಮಕರೋದ್ದುಶ್ಚರಂ ತಪಃ ॥೯॥**

**ತುರ್ಯೇ** ನಾಲ್ಕನೆಯ **ಧರ್ಮೇ** ಯಮಧರ್ಮನಲ್ಲಿ **ಕಲಾಸರ್ಗೇ** ತನ್ನ ಸ್ವರೂಪಾಂಶದಿಂದ ಆದ ಅವತಾರದಲ್ಲಿ **ನರನಾರಾಯಣೌ** ನರನಾರಾಯಣ ಎಂಬ ಹೆಸರಿನ **ಋಷೀ ಭೂತ್ವಾ** ಋಷಿಗಳಾಗಿ **ಆತ್ಮಶಮೋಪೇತಂ** ಲೋಕದೃಷ್ಟಿಯಿಂದ ಮನಸ್ಸಿಗೆ ಭಗವನ್ನಿಷ್ಠೆಯಿಂದ ಕೂಡಿದ **ದುಶ್ಚರಂ** ಬೇರೆಯವರಿಗೆ ಮಾಡಲಾಗದ **ತಪಃ** ತಪಸ್ಸನ್ನು **ಅಕರೋತ್** ಮಾಡಿದರು. (**ತುರ್ಯಂ** ಎಂಬ ಪಾಠವಿದ್ದಾಗ ವಿತ್ತ ಎಂದು ಅಧ್ಯಾಹಾರ ಮಾಡಿ ಇದನ್ನು ನಾಲ್ಕನೆಯದೆಂದು ತಿಳಿಯಿರಿ ಎಂದರ್ಥ ಮಾಡಬೇಕು.)

*ಭಾಗವತತಾತ್ಪರ್ಯ* -

ಈ ಶ್ಲೋಕದಲ್ಲಿ ಯಮಧರ್ಮನ ಕಲಾರ್ಧಾಂಶ ಅಂದರೆ ಹೆಂಡತಿ. ಅವಳಲ್ಲಿ ಅವತರಿಸಿದ ಎಂದು ವ್ಯಾಖ್ಯಾನಿಸಿದರೆ ಕಲಾಶಬ್ದ ಸ್ವರಸವಾಗಲಾರದು ಯಮಧರ್ಮನೇ ಸ್ವರೂಪಾವತಾರ ಎಂದು ವಿಪರೀತ ಅರ್ಥ ಆಗುವದು. ಅದಕ್ಕೆ ಕಾರಣವನ್ನು ತಿಳಿಸುವರು.

**ಧರ್ಮಕಲಾಸರ್ಗಃ । ಧರ್ಮೇ ಸ್ವಾಂಶಾವತಾರಃ । ಲೋಕದೃಷ್ಟ್ಯಾ ಆತ್ಮಶಮೋಪೇತಮ್ ॥**

ಸಪ್ತಮೀತತ್ಪುರುಷವೇ ವಿವಕ್ಷಿತ ಹೊರತು ಷಷ್ಠಿ ಅಲ್ಲ. ಯಮಧರ್ಮನಲ್ಲಿ ತನ್ನ ಸ್ವರೂಪಭೂತವಾದ ಅಂಶದ ಅವತಾರವು.(ಇಲ್ಲಿ ನಾರಾಯಣನು ಸಾಕ್ಷಾದವತಾರನು ನರನು ಶೇಷನಾದರೂ ಅವನಲ್ಲಿ ಸ್ವರೂಪಾಂಶಾವೇಶವಿದೆ ಎಂದು ತಿಳಿಯಬೇಕು) ಲೋಕದೃಷ್ಟಿಯಿಂದ ಅಂತಃಕರಣವು ಭಗವಂತನ ಶಕ್ತಿಯಿಂದ ಕೂಡಿದ್ದು ಹೇಗಾದೀತೋ ಹಾಗೆ ತಪವಗೈದರು.

**ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।**
**ಪ್ರೋವಾಚಾಽಽಸುರಯೇ ಸಾಂಖ್ಯಂ ತತ್ವಗ್ರಾಮವಿನಿರ್ಣಯಮ್ ॥೧೦॥**

**ಪಂಚಮಃ** ಐದನೇ ಅವತಾರನು **ಕಪಿಲಃ** ಕಪಿಲನು **ಸಿದ್ಧೇಶಃ** ಸಿದ್ಧರಿಗೆ ನಿಯಾಮಕನು **ಕಾಲವಿಪ್ಲುತಂ** ಕಾಲ ಬಲದಿಂದ ತಿರೋಹಿತವಾದ **ತತ್ವಗ್ರಾಮವಿನಿರ್ಣಯಂ** ತತ್ವ ಸಮೂಹದ ವಿಶೇಷ ನಿರ್ಣಯವುಳ್ಳ **ಸಾಂಖ್ಯಂ** ವೇದಾನುಸಾರಿಯಾದ ಸಾಂಖ್ಯಶಾಸ್ತ್ರವನ್ನು **ಆಸುರಯೇ** ಆಸುರಿ ಎಂಬ ಸಚ್ಛಿಷ್ಯನಿಗೆ **ಪ್ರೋವಾಚ** ಹೇಳಿದನು.

*ಭಾಗವತತಾತ್ಪರ್ಯ -*

ಇಲ್ಲಿ ವೇದ ವಿರುದ್ಧ ಸಾಂಖ್ಯಶಾಸ್ತ್ರವೆಂದು ತೋರುವದು ಕಾರಣ ವ್ಯಾಖ್ಯಾನಿಸುವರು

ತಂತ್ರಂ ಸಾಂಖ್ಯಂ ವೇದಾನುಸಾರಿ ।

ಪಾದ್ಮೇ ಚ -

ಕಪಿಲೋ ವಾಸುದೇವಾಖ್ಯಸ್ತಂತ್ರಂ ಸಾಂಖ್ಯಂ ಜಗಾದ ಹ ।
ಬ್ರಹ್ಮಾದಿಭ್ಯಶ್ಚ ದೇವೇಭ್ಯೋ ಭೃಗ್ವಾದಿಭ್ಯಸ್ತಥೈವ ಚ ॥

ತಥೈವಾಸುರಯೇ ಸರ್ವವೇದಾರ್ಥೈರುಪಬ್ರಂಹಿತಮ್ ।
ಸರ್ವವೇದವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ ।

ಸಾಂಖ್ಯಮಾಸುರಯೇಽನ್ಯಸ್ಮೈ ಕುತರ್ಕಪರಿಬೃಂಹಿತಮ್ ॥ಇತಿ॥

ವೇದಾರ್ಥನಿರ್ಣಾಯಕ ಶಾಸ್ತ್ರವೇ ತಂತ್ರವೆನಿಸುತ್ತದೆ. ಕಪಿಲರೂಪೀ ವಾಸುದೇವನು ಬ್ರಹ್ಮಾದಿದೇವತೆಗಳಿಗೂ ಭೃಗು ಮೊದಲಾದ ಋಷಿಗಳಿಗೂ ಆಸುರಿ ಎಂಬ ಸಚ್ಛಿಷ್ಯನಿಗೂ ವೇದಾರ್ಥಗಳಿಂದ ಕೂಡಿದ ಸಾಂಖ್ಯಶಾಸ್ತ್ರವನ್ನು ಉಪದೇಶಿಸಿದನು. ಭಗವಂತನ ಅವತಾರನಲ್ಲದ ಕಪಿಲನು ಶಾಸ್ತ್ರವನ್ನು ನಿರ್ಮಿಸಿದ. ದುಷ್ಟನಾದ ಆ ಆಸುರನು ಕುರ್ತಕಗಳಿಂದ ಕೂಡಿದ ಎಲ್ಲ ವೇದಗಳಿಗೆ ವಿರುದ್ಧವಾದ ಸಾಂಖ್ಯಶಾಸ್ತ್ರವನ್ನು ಉಪದೇಶಿಸಿದನು. ಎಂದು ಪದ್ಮಪುರಾಣದಲ್ಲಿದೆ.

ದತ್ತಾತ್ರೇಯಾವತಾರ ಹೇಳುವರು.

**ಷಷ್ಠಮತ್ರೇರಪತ್ಯತ್ವಂ ವೃತಃ ಪ್ರಾಪ್ತೋಽನಸೂಯಯಾ ।**
**ಆನ್ವೀಕ್ಷಿಕೀಮಲರ್ಕಾಯಪ್ರಲ್ಹಾದಾದಿಭ್ಯ ಊಚಿವಾನ್ ॥೧೧॥**

**ಅತ್ರೇಃ** ಅತ್ರಿಋಷಿಗಳ ದೆಶೆಯಿಂದ **ವೃತಃ** ಅತ್ರಿಗಳಿಂದಲೆ ಪ್ರಾರ್ಥಿತನಾಗಿ **ಅನಸೂಯಯಾ** ಅತ್ರಿಯ ಪತ್ನಿಯಾದ ಅನಸೂಯಾಳಲ್ಲಿ **ಅಪತ್ಯತ್ವಂ ಪ್ರಾಪ್ತಃ** ಮಗನಾದನು **ಅಯಂ ಷಷ್ಠಂ ಅವತಾರಃ** ಇದು ಆರನೇಯ ಅವತಾರವು. **ಅಲರ್ಕಾಯ** ಅಲರ್ಕನೆಂಬ ಸಚ್ಛಿಷ್ಯನಿಗೆ **ಪ್ರಲ್ಹಾದಾದಿಭ್ಯಃ** ಪ್ರಲ್ಹಾದ, ಯದು, ಕಾರ್ತವೀರ್ಯಾರ್ಜುನ ಮುಂತಾದವರಿಗೆ **ಆನ್ವೀಕ್ಷಿಕೀಂ** ತತ್ತ್ವವಿದ್ಯೆಯನ್ನು **ಊಚಿವಾನ್** ಹೇಳಿದನು.(ಅನಸೂಯಯಾ ಎಂಬುದಕ್ಕೆ ನನಗೆ ಸಮಾನ ಮಗನಾಗಬೇಕೆಂಬ ವರದ ನೆಪದಿಂದ ನನ್ನನ್ನೇ ಮಗನಾಗೆಂದು ಕೇಳಿದನು. ಎಂಬ ಅಸೂಯ ಇಲ್ಲದೆ ಅತ್ರಿಯ ಮಗನಾದನು ಹೀಗೂ ಅರ್ಥೈಸಬಹುದು) ಆನ್ವಿಕ್ಷಿಕೀಂ ತತ್ತ್ವವಿದ್ಯಾಂ ಆನ್ವೀಕ್ಷಿಕೀಕುತರ್ಕಾಖ್ಯಾ ತಥೈವಾನ್ವೀಕ್ಷಿಕೀ ಪರಾ । ಇತಿ ಮಾತ್ಸ್ಯೇ । ಆನ್ವೀಕ್ಷಿಕೀಂ ಎಂದರೆ ಪರಾಪರತತ್ತ್ವವಿದ್ಯೆಯನ್ನು ಎಂದರ್ಥ. ಕುತ್ಸಿತತರ್ಕವುಳ್ಳ ವಿದ್ಯೆಯೂ ಸತ್ತರ್ಕಗಳಿಂದ ಪರಾಪರತತ್ತ್ವ ತಿಳಿಸುವ ವಿದ್ಯೆಯೂ ಆನ್ವೀಕ್ಷಿಕೀ ಎನಿಸುವದು ಎಂದು ಮತ್ಸ್ಯಪುರಾಣದಲ್ಲಿದೆ. ಎರಡನೆಯದು ಉತ್ತಮ. ಅದನ್ನೇ ಹೇಳಿದನೆಂದು ಭಾವ.

**ತತಃ ಸಪ್ತಮ ಆಕೂತ್ಯಾಂ ರುಚೇರ್ಯಜ್ಞೋಽಭ್ಯಜಾಯತ ।**
**ಸ ಯಾಮಾದ್ಯೈಃ ಸುರಗಣೈರಪಾತ್ ಸ್ವಾಯಂಭುವಾಂತರಮ್ ॥೧೨॥**

**ತತಃ** ಅನಂತರ **ಆಕೂತ್ಯಾಂ** ಆಕೂತಿ ದೇವಿಯಲ್ಲಿ **ರುಚೇಃ** ರುಚಿ ಎಂಬ ಋಷಿಯಿಂದ **ಯಜ್ಞಃ** ಯಜ್ಞನಾಮಕನಾಗಿ **ಅಭ್ಯಜಾಯತ** ಅವತರಿಸಿದನು. ಇದು **ಸಪ್ತಮಃ** ಏಳನೆಯದು **ಸಃ** ಯಜ್ಞನು **ಯಾಮಾದ್ಯೈಃ** ಯಾಮರೆಂಬ ದೇವತೆಗಳೇ ಮೊದಲಾದ **ಸುರಗಣೈಃ** ಸಹ ದೇವತೆಗಳ ಸಮೂಹದಿಂದ ಸಹಿತನಾಗಿ **ಸ್ವಾಯಂಭುವಾಂತರಂ** ಸ್ವಾಯಂಭುವಮನ್ವಂತರವನ್ನು **ಅಪಾತ್** ರಕ್ಷಿಸಿದನು.

ಋಷಭಾವತಾರ ಹೇಳುವರು.

**ಅಷ್ಟಮೋ ಮೇರುದೇವ್ಯಾಂ ತು ನಾಭೇರ್ಜಾತ ಉರುಕ್ರಮಃ ।**
**ದರ್ಶಯನ್ವರ್ತ್ಮ ಧೀರಾಣಾಂ ಸರ್ವಾಶ್ರಮನಮಸ್ಕೃತಮ್ ॥೧೩॥**

**ಉರುಕ್ರಮಃ** ಪುರುಷನಾಮಕ ಶ್ರೀಹರಿಯು **ನಾಭೇಃ** ಆಗ್ನೀಧ್ರನ ಮಗನಾದ ನಾಭಿರಾಜನಿಂದ **ಮೇರುದೇವ್ಯಾಂ** ಆ ಹೆಸರಿನ ಅವನ ಪತ್ನಿಯಲ್ಲಿ **ಜಾತಃ** ಅವತರಿಸಿದನು. ಇದು **ಅಷ್ಟಮಃ** ಎಂಟನೆಯದು. **ಸರ್ವಾಶ್ರಮನಮಸ್ಕೃತಂ ವರ್ತ್ಮ** ಎಲ್ಲ ಆಶ್ರಮಗಳಿಂದ ವಂದ್ಯವಾದ ನಾಲ್ಕನೆಯದಾದ ಸಂನ್ಯಾಸಾಶ್ರಮದ ಮಾರ್ಗವನ್ನು

**ಧೀರಾಣಾಂ** ಶ್ರೀಹರಿಯ ಜ್ಞಾನದಲ್ಲಿಯೇ ಸಂತೋಷಪಡುವವರಿಗೆ **ದರ್ಶಯನ್** ತೋರಿಸುವವನಾಗಿ ಅವತರಿಸಿದನು.

ಪೃಥುರಾಜನಲ್ಲಿ ಆವಿಷ್ಟನಾದ ಪೃಥುನಾಮಕ ಅವತಾರ ಹೇಳುವರು -

**ಋಷಿಭಿರ್ಯಾಚಿತೋ ಭೇಜೇ ನವಮಂ ಪಾರ್ಥಿವಂ ವಪುಃ ।**
**ದುಗ್ಧವಾನೋಷಧೀರ್ವಿಪ್ರಾಸ್ತೇನಾಯಂ ಚ ಉಶತ್ತಮಃ ॥೧೪॥**

**ಋಷಿಭಿಃ** ಋಷಿಗಳಿಂದ **ಯಾಚಿತಃ** ಪ್ರಾರ್ಥಿತನಾಗಿ **ನವಮಂ** ಒಂಬತ್ತನೆಯದಾದ **ಪಾರ್ಥಿವಂ** ಪೃಥುವಿನಲ್ಲಿ ಆವಿಷ್ಟವಾದ **ವಪುಃ** ರೂಪವನ್ನು **ಭೇಜೆ** ಹೊಂದಿದನು **ಹೇ ವಿಪ್ರಾಃ** ಎಲೋ ಬ್ರಾಹ್ಮಣರೇ **ಓಷಧೀಃ** ಎಲ್ಲ ಸಾರಭೂತ ವಸ್ತುಗಳನ್ನು **ದುಗ್ಧವಾನ್** ಗೋರೂಪಳಾದ ಭೂಮಿಯಿಂದ ದೋಹನ ಮಾಡಿದನು.(ಕರೆದನು) **ತೇನ** ಅದರಿಂದ **ಅಯಂ ಚ** ಈ ರಾಜನೂ ಕೂಡ (ಕೇವಲ ಆವಿಷ್ಟ. ಶ್ರೀಹರಿಯಷ್ಟೇ ಅಲ್ಲ) **ಉಶತ್ತಮಃ** ಸತ್ಯಕಾಮನು.

*ಭಾಗವತತಾತ್ಪರ್ಯ -*

ಪೃಥು ಶರೀರಾವಿಷ್ಟಂ ರೂಪಂ । ಆವಿವೇಶ ಪೃಥುಂ ದೇವಃ ಶಂಖಿಚಕ್ರೀ ಚತುರ್ಭುಜಃ ಇತಿ ಪಾದ್ಮೇ । ಉಶ ಇಚ್ಛಾಯಾಂ । ಸತ್ಯಕಾಮಃ ॥

ಪಾರ್ಥಿವಂ ಎಂದರೆ ಪೃಥು ಶರೀರಾವಿಷ್ಟವಾದ ಪೃಥು ಎಂಬ ಭಗವದ್ರೂಪವು ಶಂಖ ಚಕ್ರಗಳನ್ನು ಧರಿಸಿರುವ ನಾಲ್ಕು ಕೈಗಳುಳ್ಳ ಶ್ರೀಹರಿಯು ಪೃಥುರಾಜನನ್ನು ಪ್ರವೇಶಿಸಿದನು ಎಂದು ಪಾದ್ಮ ಪುರಾಣದಲ್ಲಿದೆ. ಉಶ ಎಂಬ ಧಾತು ಇಚ್ಛಾರ್ಥಕವಾದ್ದರಿಂದ (ಅತಿಶಯೇನ ಉಶನ್ ಉಶತ್ತಮ ಅತಿಶಯ ಇಚ್ಛಾ ಶಕ್ತಿ ಉಳ್ಳನು ಅರ್ಥಾತ್) ಉಶತ್ತಮಃ ಎಂದರೆ ಸತ್ಯಕಾಮನೆಂದರ್ಥ.

**ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷಾಂತರಸಂಪ್ಲವೇ ।**
**ನಾವ್ಯಾರೋಪ್ಯ ಮಹೀಮಯ್ಯಾಮಪಾದ್ವೈವಸ್ವತಂ ಮನುಮ್ ॥೧೫॥**

**ಸಃ** ಪರಮಾತ್ಮನು **ಮಾತ್ಸ್ಯಂ** ಮೀನಿನ **ರೂಪಂ** ರೂಪವನ್ನು **ಜಗೃಹೇ** ಸ್ವೀಕರಿಸಿದನು **ಚಾಕ್ಷುಷಾಂತರಸಂಪ್ಲವೇ** ಚಾಕ್ಷುಷಮನ್ವಂತರ ಪ್ರಲಯದಲ್ಲಿ **ಮಹೀಮಯ್ಯಾಂ** ಭೂಮಿರೂಪವಾದ **ನಾವ್ಯಾ** ನಾವೆಯಲ್ಲಿ **ವೈವಸ್ವತಂ ಮನುಂ** ವೈವಸ್ವತಮನು ಎಂಬ ಹೆಸರಿನ ಸತ್ಯವ್ರತನನ್ನು **ಆರೋಪ್ಯ** ಹತ್ತಿಸಿ **ಅಪಾತ್** ರಕ್ಷಿಸಿದನು. ಇದು ಹತ್ತನೇ ಅವತಾರವೆಂದು ತಿಳಿಯಬೇಕು.

**ಸುರಾಸುರಾಣಾಮುದಧಿಂ ಮಥ್ನತಾಂ ಮಂದರಾಚಲಮ್ ।**
**ದಧ್ರೇ ಕಮಠರೂಪೇಣ ಪೃಷ್ಠ ಏಕಾದಶಂ ವಿದುಃ ॥೧೬॥**

**ಸುರಾಸುರಾಣಾಂ** ದೇವದಾನವರು **ಉದಧಿಂ** ಸಮುದ್ರವನ್ನು **ಮಥ್ನತಾಂ ಸತಾಂ** ಕಡೆಯುತ್ತಿರಲು **ಮಂದರಾಚಲಮ್** ಮಂದರಪರ್ವತವನ್ನು **ಯಃ** ಯಾರು **ಕಮಠರೂಪೇಣ** ಕೂರ್ಮರೂಪದಿಂದ **ಪೃಷ್ಠೇ** ಬೆನ್ನಲ್ಲಿ **ದಧ್ರೇ** ಧರಿಸಿದರೋ **ತಂ** ಅದನ್ನು **ಏಕಾದಶಂ ವಿದುಃ** ಹನ್ನೊಂದನೇ ಅವತಾರ ಎಂದು ತಿಳಿದರು.

**ಧಾನ್ವಂತರಂ ದ್ವಾದಶಮಂ ತ್ರಯೋದಶಮಮೇವ ಚ ।**
**ಅಪಾಯಯತ್ಸುಧಾಮನ್ಯಾನ್ ಮೋಹಿನ್ಯಾ ಮೋಹಯನ್ ಸ್ತ್ರಿಯಾ ॥೧೭॥**

**ಧಾನ್ವಂತರಂ** ಧನ್ವಂತರಿ ಹೆಸರಿನ ಅವತಾರವನ್ನು **ದ್ವಾದಶಮಂ** ಹನ್ನೆರಡನೆಯದೆಂದೂ **ಯಯಾ** ಯಾವ **ಮೋಹಿನ್ಯಾ** ಮೋಹಕ ಶಕ್ತಿಯುಳ್ಳ **ಸ್ತ್ರಿಯಾ** ಸ್ತ್ರೀ ರೂಪದಿಂದ **ಅನ್ಯಾನ್** ಅಸುರರನ್ನು **ಮೋಹಯನ್** ಮೋಹಗೊಳಿಸಿ **ಸುಧಾಂ** ಅಮೃತವನ್ನು **ಅಪಾಯಯತ್** ಪಾನಮಾಡಿಸಿದನೋ **ತಮೇವ ಅವತಾರಂ ತ್ರಯೋದಶಂ ವಿದುಃ** ಹದಿಮೂರನೆಯದೆಂದು ತಿಳಿದರು.

**ಚತುರ್ದಶಂ ನಾರಸಿಂಹಂ ಬಿಭ್ರದ್ದೈತ್ಯೇಂದ್ರಮೂರ್ಜಿತಮ್ ।**
**ದದಾರ ಕರಜೈರೂರಾವೇರಕಾನ್ ಕಟಕೃದ್ಯಥಾ ॥೧೮॥**

**ನಾರಸಿಂಹಂ** ನರ ಮತ್ತು ಸಿಂಹ ಸಂಬಂಧಿಯಾದ ರೂಪವನ್ನು **ಬಿಭ್ರತ್** ಧರಿಸಿದ ಭಗವಂತನು **ದೈತ್ಯೇಂದ್ರಂ** ಹಿರಣ್ಯಕಶಿಪುವನ್ನು **ಊರೌ** ತೊಡೆಯ ಮೇಲೆ ಹಾಕಿಕೊಂಡು **ಕಟಕೃತ್** ಚಾಪೆ ಮಾಡುವನು **ಏರಕಾನ್ ಯಥಾ** ಉದ್ದವಾದ ಹುಲ್ಲು ಕಡ್ಡಿಯನ್ನು ಸೀಳುವಂತೆ **ಕರಜೈಃ** ಉಗುರುಗಳಿಂದ **ದದಾರ** ಸೀಳಿದನೋ **ತಂ** ಆ **ಊರ್ಜಿತಂ** ಉತ್ಕೃಷ್ಟವಾದ ಅವತಾರವನ್ನು **ಚತುರ್ದಶಂ ವಿದುಃ** ಹದಿನಾಲ್ಕು ಎಂದು ತಿಳಿದರು.

**ಪಂಚದಶಂ ವಾಮನಕಂ ಕೃತ್ವಾಗಾದಧ್ವರಂ ಬಲೇಃ ।**
**ಪದತ್ರಯಂ ಯಾಚಮಾನಃ ಪ್ರತ್ಯಾದಿತ್ಸುಸ್ತ್ರಿವಿಷ್ಟಪಮ್ ॥೧೯॥**

**ಪಂಚದಶಂ** ಹದಿನೈದನೆಯ **ವಾಮನಕಂ** ವಾಮನನೆಂಬ ಅವತಾರವನ್ನು **ಕೃತ್ವಾ** ಮಾಡಿ **ತ್ರಿವಿಷ್ಟಪಂ** ಮೂರುಲೋಕವನ್ನು **ಪ್ರತ್ಯಾದಿತ್ಸುಃ** ಬಲಿಯಿಂದ ಕಿತ್ತಿಕೊಳ್ಳಲಿಚ್ಛಿಸಿ

ಅದಕ್ಕಾಗಿ **ಪದತ್ರಯಂ ಯಾಚಮಾನಃ** ಮೂರುಪಾದ ಭೂಮಿಯನ್ನು ಕೇಳುವವನಾಗಿ **ಬಲೇಃ** ಬಲಿಚಕ್ರವರ್ತಿಯ **ಅಧ್ವರಂ ಅಗಾತ್** ಯಾಗಕ್ಕೆ ತೆರಳಿದನು.

ಪರಶುರಾಮಾವತಾರ ಹೇಳುವರು.

**ಅವತಾರೇ ಷೋಡಶಮೇ ಯಚ್ಛನ್ ಬ್ರಹ್ಮದ್ರುಹೋ ನೃಪಾನ್ ।**
**ತ್ರಿಸಪ್ತಕೃತ್ವಕುಪಿತೋ ನಿಃಕ್ಷತ್ರಾಮಕರೋನ್ಮಹೀಮ್ ॥೨೦॥**

**ಷೋಡಶಮೇ ಅವತಾರೇ** ಹದಿನಾರನೇ ಅವತಾರದಲ್ಲಿ ಭಗವಂತನು ಜಮದಗ್ನಿ ಸುತನಾಗಿ **ಬ್ರಹ್ಮದ್ರುಹಃ** ಬ್ರಾಹ್ಮಣದ್ರೋಹಿಗಳಾದ **ನೃಪಾನ್** ರಾಜರನ್ನು **ಕುಪಿತಃ** ಪ್ರತೀಕಾರಬುದ್ಧಿವುಳ್ಳವನಾಗಿ (ಸಿಟ್ಟಾದವನಂತೆ ತೋರಿಸಿ, ತಾಮಸವಾದ ಅಶಕ್ತರಿಗೆ ಬರುವ ಕ್ರೋಧ ಸಿಟ್ಟು ಶ್ರೀಹರಿಗೆ ಇಲ್ಲ) **ಯಚ್ಛನ್** ಸಂಹರಿಸುತ್ತ **ತ್ರಿಃಸಪ್ತಕೃತ್ವಃ** ಇಪ್ಪತ್ತೊಂದು ಬಾರಿ **ಮಹೀಂ** ಭೂಮಿಯನ್ನು **ನಿಃಕ್ಷತ್ರಾಂ ಅಕರೋತ್** ಕ್ಷತ್ರಿಯ ಜಾತಿ ಇಲ್ಲದಂತೆ ಮಾಡಿದನು.

**ವಿಶೇಷ :-** ಪರುಶುರಾಮನು ನಿಕ್ಷತ್ರಭೂಮಿ ಮಾಡಿದನೆಂದರೆ ಸಶೇಷವೋ ನಿಶ್ಶೇಷವೋ ಸಶೇಷವೆಂದರೆ ನಿಕ್ಷತ್ರ ಎಂದಾಗಲಾರದು. ನಿಃಶೇಷ ಎಂದರೆ ಕ್ಷತ್ರಿಯರೇ ಇಲ್ಲದಿರುವಾಗ ಮತ್ತೇನು ಕೊಲ್ಲುವುದು ? 21 ಸಲ ಎಂದು ಹೇಳಿದ್ದು ವ್ಯರ್ಥ ಎನ್ನಬೇಕಾಗುವದು ಎಂಬ ಶಂಕೆ ಬರುವದು. ಅದಕ್ಕೆ ಉತ್ತರ ನಿಃಶೇಷ ನಾಶವನ್ನೇ ಪ್ರತಿಸಲ ಮಾಡಿದನು. ಅದಕ್ಕೆ ಹಿಂದೆ ಹೇಳಿದ ಅನುಪಪತ್ತಿ ಬರುವದಿಲ್ಲ. ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಹೇಳಿದ ಪ್ರಕಾರ ಸ್ತ್ರೀಯರಿಂದ ಪ್ರಾರ್ಥಿತರಾದ ಬ್ರಾಹ್ಮಣರಿಂದ ಕ್ಷತ್ರಿಯರು ಮತ್ತೆ ಮತ್ತೆ ಹುಟ್ಟಿದರು. ಅವರನ್ನು ರಾಮನು ಕೊಂದನು ಎಂದು ಹೇಳಬಹುದು. ಮಹಾಭಾರತದ ಅಶ್ವಮೇಧ ಪರ್ವ -ತತಸ್ತು ಹತವೀರಾಸು ಕ್ಷತ್ರಿಯಾಸು ಪುನಃ ಪುನಃ। ದ್ವಿಜೈರುತ್ಪಾದಿತಂ ಕ್ಷತ್ರಂ ಜಾಮದಗ್ನ್ಯೋ ನ್ಯಕೃಂತತ ॥

ವೇದವ್ಯಾಸಾವತಾರ ಹೇಳುವರು -

**ತತಃ ಸಪ್ತದಶೇ ಜಾತಃ ಸತ್ಯವತ್ಯಾಂ ಪರಾಶರಾತ್ ।**
**ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ ॥೨೧॥**

**ತತಃ** ಅನಂತರ **ಸಪ್ತದಶೇ** ಹದಿನೇಳನೇ ಅವತಾರ ಮಾಡಬೇಕಾದಾಗ **ಪರಾಶರಾತ್** ಪರಾಶರ ಋಷಿಗಳಿಂದ **ಸತ್ಯವತ್ಯಾಂ** ಸತ್ಯವತಿಯಲ್ಲಿ **ಜಾತಃ** ಅವತರಿಸಿದನು **ಅಲ್ಪಮೇಧಸಃ** ಮಂದಮತಿಗಳಾದ **ಪುಂಸಃ** ಜನರನ್ನು **ದೃಷ್ಟ್ವಾ** ಕಂಡು **ವೇದತರೋಃ** ವೇದವೆಂಬ ಗಿಡದ **ಶಾಖಾಃ** ಟೊಂಗೆಗಳನ್ನು **ಚಕ್ರೇ** ಮಾಡಿದನು. (ವೇದವಿಭಾಗ ಮಾಡಿದನೆಂದರ್ಥ)

*ಭಾಗವತತಾತ್ಪರ್ಯ -*

ಗ್ರಂಥಾಂತರದಲ್ಲಿ ರಾಮಾವತಾರಾನಂತರ ವೇದವ್ಯಾಸಾವತಾರ ಹೇಳಿರುವದರಿಂದ ಇಲ್ಲಿ ರಾಮಾವತಾರದ ಮೊದಲು ವ್ಯಾಸಾವತಾರ ಹೇಳಿದ್ದು ಹೇಗೆ ಉಪಪನ್ನವಾಗುವದು ಎಂದರೆ ಹೇಳುವರು.

**ರಾಮಾತ್ಪೂರ್ವಮಪ್ಯಸ್ತಿ ವ್ಯಾಸಾವತಾರಃ । ತೃತೀಯಂ ಯುಗಮಾರಭ್ಯ ವ್ಯಾಸೋ ಬಹುಷು ಜಜ್ಞಿವಾನ್ ।। ಇತಿ ಕೌರ್ಮೇ**

ದಾಶರಥಿರಾಮಾವತಾರಕ್ಕಿಂತ ಪೂರ್ವದಲ್ಲಿಯೂ ವ್ಯಾಸಾವತಾರ ಉಂಟು. ವೈವಸ್ವತ ಮನ್ವಂತರದ ಹದಿನೆಂಟುವರಿಲಕ್ಷಾಧಿಕವಾದ ಎಪ್ಪತ್ತೊಂದು ಮಹಾಯುಗ ಗಳಲ್ಲಿ ಮೂರನೇ ಮಹಾಯುಗವನ್ನಾರಂಭಿಸಿ ಅನೇಕ ಬಾರಿ ವ್ಯಾಸರು ಅವತರಿಸಿದರೆಂದು ಕೂರ್ಮ ಪುರಾಣದಲ್ಲಿದೆ. 'ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ । ಅಷ್ಟಾವಿಂಶೇ ಯುಗೇ ಕೃಷ್ಣಃ ಸತ್ಯವತ್ಯಾಮಜಾಯತ' ।। ಎಂಬ ಪ್ರಮಾಣಾನುಸಾರ ಮೂರು, ಏಳು, ಹದಿನಾರು, ಇಪ್ಪತ್ತೈದು, ಇಪ್ಪತ್ತೆಂಟು ಹೀಗೆ ಐದು ಬಾರಿ ವ್ಯಾಸಾವತಾರ ವಾಗಿದೆ. ರಾಮಾವತಾರವು ವೈವಸ್ವತ ಮನ್ವಂತರ 28ನೇ ಮಹಾಯುಗದಲ್ಲಿ ಸೇರಿದ ತ್ರೇತಾಯುಗದಲ್ಲಿ. ಆದುದರಿಂದ ಆದಕ್ಕಿಂತ ಮೊದಲಿನ ಮಹಾಯುಗಗಳಲ್ಲಿ ಆದ ವ್ಯಾಸಾವತಾರಗಳಿಗೆ ಹದಿನೇಳನೆಯದು ಎಂಬುದು ಯುಕ್ತವೇ.

**ನರದೇವತ್ವಮಾಪನ್ನಃ ಸುರಕಾರ್ಯಚಿಕೀರ್ಷಯಾ ।**
**ಸಮುದ್ರನಿಗ್ರಹಾದೀನಿ ಚಕ್ರೇ ವೀರ್ಯಾಣ್ಯತಃ ಪರಮ್ ।।೨೨।।**

**ಅತಃ ಪರಂ** ಹದಿನೇಳನೆಯದಾದ ನಂತರ ಹದಿನೆಂಟನೆಯ ಅವತಾರದಲ್ಲಿ **ಸುರಕಾರ್ಯಚಿಕೀರ್ಷಯಾ** ದೇವಕಾರ್ಯ ಮಾಡುವ ಇಚ್ಛೆಯಿಂದ **ನರದೇವತ್ವಂ ಆಪನ್ನಃ** ರಾಜನಾಗಿ **ಸಮುದ್ರನಿಗ್ರಹಾದೀನಿ** ಸಮುದ್ರದಲ್ಲಿ ಸೇತು ಬಂಧನ ಮುಂತಾದ **ವೀರ್ಯಾಣಿ** ಪರಾಕ್ರಮದ ಕಾರ್ಯಗಳನ್ನು **ಚಕ್ರೇ** ಮಾಡಿದನು.

**ಏಕೋನವಿಂಶೇ ವಿಂಶತಿಮೇ ವೃಷ್ಣಿಷು ಪ್ರಾಪ್ಯ ಜನ್ಮನೀ ।**
**ರಾಮಕೃಷ್ಣಾವಿತಿ ಭುವೋ ಭಗವಾನಹರದ್ಭರಮ್ ॥೨೩॥**

**ಏಕೋನವಿಂಶೇ** ಹತ್ತೊಂಬತ್ತನೆಯ **ವಿಂಶತಿಮೇ** (ತಕಾರಲೋಪಃ ಛಾಂಧಸಃ) ಇಪ್ಪತ್ತನೆಯ ಅವತಾರ ಮಾಡುವಾಗ **ವೃಷ್ಣಿಷು** ಯಾದವರಲ್ಲಿ **ರಾಮಕೃಷ್ಣೌ** ಬಲರಾಮಕೃಷ್ಣರೆಂಬ **ಇತಿ ಜನ್ಮನೀ** ಅವತಾರಗಳನ್ನು **ಪ್ರಾಪ್ಯ** ಹೊಂದಿ **ಭಗವಾನ್** ಶ್ರೀಹರಿಯು **ಭುವಃ** ಭೂಮಿಯ **ಭಾರಂ** ಭೂ ಭಾರವನ್ನು **ಆಹರತ್** ಪರಿಹರಿಸಿದನು.

*ಭಾಗವತತಾತ್ಪರ್ಯ -*

ಇಲ್ಲಿ ಬಲರಾಮನಿಗೂ ಸಾಕ್ಷಾದವತಾರತ್ವ ಕಂಡು ಬರುವದು ಕಾರಣ.

**ಆವೇಶೋ ಬಲಭದ್ರೇ ।**
**ಶಂಖಚಕ್ರಭೃದೀಶೇಶಃ ಶ್ವೇತವರ್ಣೋ ಮಹಾಭುಜಃ ।**
**ಆವಿಷ್ಟಃ ಶ್ವೇತಕೇಶಾತ್ಮಾ ಶೇಷಾಂಶಂ ರೋಹಿಣೇಸುತಮ್ ।**
**-ಇತಿ ಮಹಾವಾರಾಹೇ ।**

ಬಲರಾಮನಲ್ಲಿ ಶುಕ್ಲಕೇಶಾವೇಶವು ಇರುವದು. ಶಂಖಚಕ್ರಧಾರಿಯಾದ ಬ್ರಹ್ಮಾದಿಗಳಿಗೆ ನಿಯಾಮಕನಾದ ಬಿಳಿಯ ಬಣ್ಣದವನಾದ ರೋಹಿಣೀ ಪುತ್ರನಾದ ಬಲರಾಮನನ್ನು ಪ್ರವೇಶಿಸಿದನು ಎಂದು ಮಹಾವರಾಹ ಪುರಾಣದಲ್ಲಿದೆ.

**ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।**
**ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥೨೪॥**

**ತತಃ** ಕೃಷ್ಣಾವತಾರಾನಂತರ **ಕಲೌ ಸಂಪ್ರವೃತ್ತೇ** ಕಲಿಯುಗದ ಸಂಧಿಕಾಲವು ಪ್ರಾರಂಭವಾದಾಗ **ಸುರದ್ವಿಷಾಂ** ದೈತ್ಯರ **ಸಮ್ಮೋಹಾಯ** ಮೋಹಗೊಳಿಸಲು **ಕೀಕಟೇಷು** ಕೀಕಟದೇಶ ಮಧ್ಯದಲ್ಲಿ ಗಮ್ಯ ಪ್ರದೇಶದಲ್ಲಿ **ನಾಮ್ನಾ ಬುದ್ಧಃ** ಬುದ್ಧನೆಂಬ ಹೆಸರಿನಿಂದ **ಜಿನಸುತಃ ಭವಿಷ್ಯತಿ** ಜಿನನ ಮಗನೆಂದು ಭಾವಿಸಲ್ಪಡುವನು.

*ಭಾಗವತತಾತ್ಪರ್ಯ -*

ಜಿನಸುತ ಶಬ್ದಕ್ಕೆ ವಿವಕ್ಷಿತ ಅರ್ಥ ಹೇಳುವರು.

**ಮೋಹನಾರ್ಥಂ ದಾನವಾನಾಂ ಬಾಲರೂಪಂ ಪಥಿ ಸ್ಥಿತಂ ।**
**ಪುತ್ರಂ ತಂ ಕಲ್ಪಯಾಮಾಸ ಮೂಡಬುದ್ಧಿರ್ಜಿನಸ್ಸ್ವಯಂ ॥**

**ತತಃ ಸಂಮೋಹಮಾಸ ಜಿನಾದ್ಯಾನಸುರಾಂಶಕಾನ್ ।**
**ಭಗವಾನ್ ವಾಗ್ಭಿರುಗ್ರಾಭಿಃ ಹರಿಂ ಸಾ ವಾಚಿಭಿರ್ಹರಿಃ ॥ -ಇತಿ ಬ್ರಹ್ಮಾಂಡೇ**

ದಾನವರನ್ನು ಮೋಹಿಸುವದಕ್ಕಾಗಿ ಬಾಲರೂಪಿಯಾಗಿ ದಾರಿಯಲ್ಲಿದ್ದ ಶ್ರೀಹರಿಯನ್ನು ದುರ್ಬುದ್ಧಿಯಾದ ಜಿನನು ತಾನಾಗಿಯೇ ಮಗನೆಂದು ಕಲ್ಪಿಸಿಕೊಂಡನು. ಆಮೇಲೆ ಶ್ರೀಹರಿಯು ಅಂಹಿಸೆಯು ಮುಖ್ಯಧರ್ಮವೆಂದು ಹೇಳುವ ಕ್ರೂರ ಮಾತುಗಳಿಂದ ಜಿನ ಮುಂತಾದ ಅಸುರಾಂಶರರನ್ನು ವಂಚಿಸಿದನು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ. ಕಲಿಯುಗ ಪ್ರಾರಂಭದ ಮೊದಲು ತ್ರಿಪುರವಾಸಿಗಳಾದ ದೈತ್ಯರು ವೇದಮಾರ್ಗದಲ್ಲಿ ಪ್ರವೃತ್ತರಾದಾಗ ಅವರನ್ನು ಮೋಹಿಸಲು ಮಗಧ ದೇಶದ ಮಧ್ಯವಾದ ಗಯಾ ಪ್ರದೇಶದಲ್ಲಿ ಬುದ್ಧನೆಂಬ ಹೆಸರಿನಿಂದ ಜಿನಸುತನೆಂದು ಕಲ್ಪಿಸಲ್ಪಟ್ಟನೆಂದು ಭಾವ.

ಶ್ರೀಹರಿಗೆ ತ್ರಿಯುಗಹೂತಿ ಎಂದು ಪ್ರಸಿದ್ಧಿ ಇದೆ. ಕಲಿಯುಗದಲ್ಲಿ ಅವತಾರವಿಲ್ಲವೆಂದು ಹೇಳುವ ಅನೇಕ ಮಾತುಗಳಿವೆ. ಅವುಗಳ ವಿರೋಧ ಬರುವದು ಕಲಿಯುಗದಲ್ಲಿ ಅವತಾರ ಹೇಳಿದರೆ. ಕಾರಣ ಸಂಪ್ರವೃತ್ತೇ ಎಂಬಲ್ಲಿ ''ಸಮಭೇದೇ ಸಮೀಚೀನೇ ಸುಷ್ಟುಪೂಜಾಸು ಖೇಷು ಚ'' ಎಂದು ಯಾದವ ಕೋಶವಿರುವುದರಿಂದ ಕಲೌ=ಕಲಿಯುಗವು ಸಂ=ದ್ವಾಪರಾಭೇದದಿಂದ ಪ್ರವೃತ್ತೇ=ಮಿಶ್ರಿತವಾದಾಗ ಅರ್ಥಾತ್ ದ್ವಾಪರಯುಗದ ಸಂಧಿಕಾಲದಲ್ಲಿ ಎಂದು ತಿಳಿಯಬೇಕು. ದ್ವಾಪರಕೃತಯುಗಗಳ ಅಂಶವಿರದ ಶುದ್ಧ ಕಲಿಯುಗದಲ್ಲಿ ಅವತಾರ ನಿಷೇಧವೆಂದು ಭಾವ.

**ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು ।**
**ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕೀ ಜಗತ್ಪತಿಃ ॥೨೫॥**

**ಅಥ** ಬುದ್ಧಾವತಾರಾನಂತರ **ಯುಗಸಂಧ್ಯಾಯಾಂ** ಕಲಿ, ಕೃತಯುಗಗಳ ಸಂಧಿ ಕಾಲದಲ್ಲಿ **ರಾಜಸು** ರಾಜರು **ದಸ್ಯುಪ್ರಾಯೇಷು** ಕಳ್ಳರಂತಾಗುತ್ತಿರಲು(ಬಹಳ ಜನ ರಾಜರು ಕಳ್ಳರಾಗುತ್ತಿರಲು) **ವಿಷ್ಣುಯಶಸಃ** ಈ ಹೆಸರಿನ ಬ್ರಾಹ್ಮಣನಿಂದ **ಜಗತ್ಪತಿಃ** ಜಗದೊಡೆಯನಾದ ಶ್ರೀಹರಿಯು **ನಾಮ್ನಾ ಕಲ್ಕೀ ಜನಿತಾ** ಕಲ್ಕೀ ಎಂಬ ಹೆಸರಿನಿಂದ ಅವತರಿಸುವನು. 22ನೇ ಅವತಾರವಿದು.

ಶ್ರೀಹರಿಯ ಅವತಾರಗಳು ಅನಂತವಾದುದರಿಂದ ಸಂಪೂರ್ಣ ಅವುಗಳನ್ನು ಹೇಳಲಾಗದು ಎಂದು ಹೇಳುವರು -

**ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ವನಿಧೇರ್ದ್ವಿಜಾಃ ।**
**ಯಥಾ ವಿದಾಸಿನಃ ಕುಲ್ಯಾ ಸರಸಃ ಸ್ಯುಃ ಸಹಸ್ರಶಃ ॥೨೬॥**

**ಹೇ ದ್ವಿಜಾಃ** ಶೌನಕಾದಿಬ್ರಾಹ್ಮಣರೇ **ಯಥಾ** ಹೇಗೆ **ವಿದಾಸಿನಃ** ಉನ್ನತಸ್ಥಾನದಲ್ಲಿರುವ ಅಥವಾ ಭಿನ್ನವಾದ **ಸರಸಃ** ಸರೋವರದಿಂದ **ಸಹಸ್ರಶಃ** ಸಾವಿರಾರು **ಕುಲ್ಯಾಃ** ಕಾಲುವೆಗಳು **ಸ್ಯುಃ** ಹೊರಡುವವೋ **ತಥಾ** ಅದರಂತೆ **ಸತ್ವನಿಧೇಃ ಹರೇಃ** ಸಾಧು ಗುಣಪೂರ್ಣನಾದ ಶ್ರೀಹರಿಯ **ಅವತಾರಾಃ** ಅವತಾರಗಳು **ಅಸಂಖ್ಯೇಯಾಃ** ಎಣಿಸಲಾಗದವುಗಳು. ಮಂದಮತಿಗಳಿಗೆ ತಿಳಿಸಲು ನೀಚದೃಷ್ಟಾಂತವಷ್ಟೇ. ಕಾಲುವೆ ಅಸಂಖ್ಯವಲ್ಲ.

*ಭಾಗವತತಾತ್ಪರ್ಯ -*

ಇಲ್ಲಿಯ ವಿದಾಸಿನಃ ಎಂಬ ಶಬ್ದಕ್ಕೆ ಪ್ರಕೃತವಾದ ಎರಡರ್ಥ ತಿಳಿಸುವರು.

**ವಿದಾಸಿನಃ ಉನ್ನತಾತ್ ಭಿನ್ನಾದ್ವಾ ವಿದಾಸಿನಃ ।**

ಎಂದರೆ ಎತ್ತರದಲ್ಲಿರುವ ಅಥವಾ ಭಿನ್ನವಾದ ಎಂದರ್ಥ. ಎರಡೂ ಅರ್ಥದಲ್ಲಿ ಕ್ರಮವಾಗಿ ವಿದಾಸೀನ ಶಬ್ದಪ್ರಯೋಗ ತೋರಿಸುವರು.

**ತ್ರಿವಿಧಾಃ ಪುರುಷಾಲೋಕೇ ನೀಚಮಧ್ಯವಿದಾಸಿನಃ । ಇತಿ ಬ್ರಾಹ್ಮೇ ।**
**ಚತುರ್ಧಾ ವರ್ಣರೂಪೇಣ ಜಗದೇತದ್ವಿದಾಸಿತಂ । ಇತಿ ಚ ।**

ಬ್ರಾಹ್ಮಪುರಾಣದಲ್ಲಿ ಪುರುಷರು ಮೂರು ವಿಧ ನೀಚ, ಮಧ್ಯ, ಉನ್ನತ ಎಂದು ಹೇಳುವಲ್ಲಿ ವಿದಾಸೀನ ಎಂದು ಹೇಳಿದ್ದರಿಂದ ವಿದಾಸಿ ಶಬ್ದವು ಉನ್ನತಾರ್ಥಕ ಎಂದು ತಿಳಿಯುವದು. ಈ ಜಗತ್ತು ಬ್ರಾಹ್ಮಣಾದಿ ನಾಲ್ಕುವಿಧ ವರ್ಣಗಳಿಂದ ವಿಭಿನ್ನ (ಭೇದಿಕ) ಎನ್ನುವ ಬದಲು ವಿದಾಸಿತಂ ಎಂದು ಪ್ರಯೋಗದಿಂದ ವಿದಾಸಿ ಶಬ್ದ ವಿಭೇದ ಪರ್ಯಾಯ ಎಂದು ತಿಳಿಯುವದೆಂದು ಭಾವ.

ಈಗ ಪ್ರತಿಬಿಂಬಾಂಶಗಳನ್ನು ಹೇಳುವರು.

**ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ ।**
**ಕಲಾಃ ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾಃ ॥೨೭॥**

**ಋಷಯಃ** ಮರಿಚಿ ಮುಂತಾದ ಋಷಿಗಳು **ಮನವಃ** ಸ್ವಾಯಂಭುವಾದಿ ಮನುಗಳು **ಸಪ್ರಜಾಪತಯಃ** ದಕ್ಷಮುಂತಾದ ಪ್ರಜಾಪತಿಗಳಿಂದ ಸಹಿತರಾದ **ಮನುಪುತ್ರಾಃ** ಮನುವಿನ ಮಕ್ಕಳಾದ ಪ್ರಿಯವ್ರತ ಮೊದಲಾದವರು **ಮಹೌಜಸಃ** ಮಹಾಪರಾಕ್ರಮವುಳ್ಳವರು **ಹರೇರೇವ ಕಲಾಃ ಸ್ಮೃತಾಃ** ಶ್ರೀಹರಿಯ ಭಿನ್ನಾಂಶರೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವರು.

ಹಾಗಾದರೆ ಇದರಂತೆ ಕುಮಾರನಿಂದಾರಂಭಿಸಿ ಕಲ್ಕಿ ಪರ್ಯಂತ ಹೇಳಿದವರೂ ಭಿನ್ನಾಂಶರೇ ಎಂದರೆ ಅಲ್ಲವೆಂದು ಹೇಳುವರು -

**ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।**
**ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ ॥೨೮॥**

**ಏತೇ** ಹಿಂದೆ ಹೇಳಿದ ಕುಮಾರಾದಿ ಕಲ್ಕಿಪರ್ಯಂತ ಅವತಾರಗಳು **ಪುಂಸಃ** ಪುರುಷನ **ಸ್ವಾಂಶಕಲಾಃ** ಸ್ವರೂಪಾಂಶರೂಪ ವಿಭಾಗಗಳು ಅವತಾರಗಳು. **ಕೃಷ್ಣಃ** ಮೂಲರೂಪಿ ಭಗವಂತನು **ಸ್ವಯಂ ತು** ತಾನೇ ಅಂದರೆ ಅವತಾರಗಳಿಂದ ಅಭಿನ್ನನು **ಯುಗೇ ಯುಗೇ** ಆ ಆ ಯುಗದಲ್ಲಿ ಅವತರಿಸಿ **ಇಂದ್ರಾರಿವ್ಯಾಕುಲಂ** ಇಂದ್ರನ ಶತ್ರುಗಳಾದ ದೈತ್ಯರ ಪೀಡೆಗೆ ಒಳಗಾದ **ಲೋಕಂ** ಜನರನ್ನು **ಮೃಡಯಂತಿ** ಸುಖಿಗಳನ್ನಾಗಿ ಮಾಡುವನು.

ಈ ಶ್ಲೋಕದಲ್ಲಿ ಏತೇ ಎಂಬುದರಿಂದ ಹಿಂದಿನ ಶ್ಲೋಕದಲ್ಲಿ ಪ್ರಕೃತರಾದ ಋಷ್ಯಾದಿಗಳ ಪರಾಮರ್ಶ ಎಂಬ ಪ್ರತೀತಿಯನ್ನು ನಿವಾರಿಸುತ್ತಾ ಕೃಷ್ಣನೆಂದರೆ ದೇವಕೀಪುತ್ರನು ಸ್ವಯಂ ಭಗವಾನ್ ಸಾಕ್ಷಾತ್ ಭಗವಂತನು ಅವನ ಎಲ್ಲ ಶಕ್ತಿಯ ಆವಿರ್ಭಾವ ಇರುವದರಿಂದ ಉಳಿದವರು ಹಾಗೆ ಅಲ್ಲ ಎಂಬ ಪ್ರತೀತಿಯನ್ನು ನಿವಾರಿಸುತ್ತಾ ಯೋಜಿಸುವರು.

*ಭಾಗವತತಾತ್ಪರ್ಯ -*

ಏತೇ ಪ್ರೋಕ್ತಾ ಅವತಾರಾಃ । ಮೂಲರೂಪೀ ಕೃಷ್ಣಃ ಸ್ವಯಮೇವ ।
ಜೀವಾಸ್ತತ್ಪ್ರತಿಬಿಂಬಾಂಶಾ ವರಾಹಾದ್ಯಾಃ ಸ್ವಯಂ ಹರಿಃ ।
ದೃಶ್ಯತೇ ಬಹುಧಾ ವಿಷ್ಣುರೈಶ್ವರ್ಯಾದೇಕ ಏವ ತು । -ಇತಿ ಬ್ರಹ್ಮವೈವರ್ತೇ

**ಏತೇ** ಕುಮಾರನನ್ನಾರಂಭಿಸಿ ಕಲ್ಕಿಪರ್ಯಂತ ಹಿಂದೆ ಹೇಳಿದ ಅವತಾರಗಳು ಮೂಲರೂಪೀ ನೀಲಮೇಘಶ್ಯಾಮನಾದ ಪದ್ಮನಾಭನಿಂದ ಅಭಿನ್ನಗಳೇ. ಬ್ರಹ್ಮಾದಿ

ಜೀವರು ಶ್ರೀಹರಿಯ ಪ್ರತಿಬಿಂಬರೂಪರು. ಭಿನ್ನಾಂಶರು. ವರಾಹಾದಿಗಳು ಮೂಲರೂಪದಿಂದ ಅಭಿನ್ನಗಳೇ. ಒಬ್ಬ ವಿಷ್ಣುವೇ ಅಘಟಿತಘಟನಾಸಾಮರ್ಥ್ಯದಿಂದ ಮತ್ಸ್ಯಾದಿ ಬಹುರೂಪಿಯಾಗಿ ಕಾಣಿಸುವನು ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

**ಜನ್ಮಗುಹ್ಯಂ ಭಗವತೋ ಯ ಏವಂ ಪ್ರಯತೋ ನರಃ ।**
**ಸಾಯಂಪ್ರಾತರ್ಗೃಣಾನ್ ಭಕ್ತ್ಯಾ ದುಃಖಗ್ರಾಮಾದ್ವಿಮುಚ್ಯತೇ ॥೨೯॥**

**ಯಃ** ಯಾವ **ನರಃ** ಮನುಷ್ಯನು **ಏವಂ** ಈ ರೀತಿ **ಭಗವತಃ** ಶ್ರೀಹರಿಯ **ಜನ್ಮಗುಹ್ಯಂ** ಅವತಾರದ ರಹಸ್ಯವನ್ನು **ಪ್ರಯತಃ** ಪ್ರಯತ್ನಪೂರ್ವಕವಾಗಿ **ಸಾಯಂಪ್ರಾತಃ** ಸಾಯಂಕಾಲ ಪ್ರಾತಃಕಾಲಗಳಲ್ಲಿ **ಗೃಣನ್ ಭಕ್ತ್ಯಾ** ಭಕ್ತಿಯಿಂದ ಪಠಿಸುವನೋ **ಸಃ** ಅವನು **ದುಃಖಗ್ರಾಮಾತ್** ದುಃಖ ಸಮೂಹವುಳ್ಳ ಸಂಸಾರದಿಂದ **ವಿಮುಚ್ಯತೇ** ಮುಕ್ತನಾಗುವನು.

ಇಲ್ಲಿಯವರೆಗೆ ಶ್ರೀಹರಿಯ ಸ್ವರೂಪಭೂತವಾದ ಕೌಮಾರಾದಿ ರೂಪಗಳನ್ನೂ ಋಷ್ಯಾದಿ ಜೀವರೆಂಬ ಪ್ರತಿಬಿಂಬ ರೂಪವನ್ನು ಹೇಳಿ ಈಗ ಜಡವೆಂಬ ಆರೋಪಿತ ರೂಪವನ್ನು ಹೇಳುವರು. (ಪ್ರತಿಮಾರೂಪ ಹೇಳುವರು )

**ಏತದ್ರೂಪಂ ಭಗವತೋ ಹ್ಯರೂಪಸ್ಯ ಚಿದಾತ್ಮನಃ ।**
**ಮಾಯಾಗುಣೈರ್ವಿರಚಿತಂ ಮಹದಾದಿಭಿರಾತ್ಮನಿ ॥೩೦॥**

**ಮಾಯಾಗುಣೈಃ** ಪ್ರಕೃತಿವಿಕಾರಗಳಾದ **ಮಹದಾದಿಭಿಃ** ಮಹತತ್ತ್ವ ಅಹಂಕಾರ ತತ್ತ್ವಮುಂತಾದ ಉಪಾದಾನಕಾರಣಗಳಿಂದ **ಆತ್ಮನಿ** ಸರ್ವಗತನಾದ ಹರಿಯಲ್ಲಿ ಆಶ್ರಿತವಾದ ಹರಿಯಿಂದ **ವಿರಚಿತಂ** ನಿರ್ಮಿತವಾದ **ಏತತ್** ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಜಡ ಪ್ರಪಂಚವು **ಅರೂಪಸ್ಯ** ಪ್ರಕೃತಿವಿಕಾರವಾದ (ರೂಪವಿಲ್ಲದ) **ಚಿದಾತ್ಮನಃ** ಕೇವಲ ಜ್ಞಾನರೂಪನಾದ **ಭಗವತಃ** ಶ್ರೀಹರಿಯ **ಏತದ್ರೂಪಂ** ಪ್ರತಿಮಾಸ್ಥಾನೀಯವು ಆರೋಪಿತವೆಂಬ ರೂಪವು(ಜಡವಾದುದರಿಂದ)

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಏತಚ್ಛಬ್ದದಿಂದ ಸನ್ನಿಹಿತವಾದ ಪೂರ್ವಪ್ರಕೃತ ಸ್ವರೂಪಾಂಶ ಪರಾಮರ್ಶವೆಂದು ತೋರದಿರಲು ಪರಾಮೃಶ್ಯವನ್ನು ತಿಳಿಸುತ್ತಾ ವ್ಯಾಖ್ಯಾನಿಸುವರು.

**ಏತತ್ ಜಡರೂಪಂ ।**
**ನಾರಾಯಣವರಾಹಾದ್ಯಾಃ ಪರಮಂ ರೂಪಮೀಶೀತುಃ ।**
**ಜೈವಂತು ಪ್ರತಿಬಿಂಬಾಖ್ಯಂ ಜಡಮಾರೋಪಿತಂ ಹರೇಃ ॥**
**ಏವಂ ಹಿ ತ್ರಿವಿಧಂ ರೂಪಂ ತಸ್ಯ ವಿಷ್ಣೋರ್ಮಹಾತ್ಮನಃ ॥ -ಇತಿ ಪಾದ್ಮೇ**

ಮೂಲದಲ್ಲಿಯ ಏತಚ್ಛಬ್ದ ಪೂರ್ವಪ್ರಕೃತವಾದ ಪರಾಮರ್ಶಕವಲ್ಲ. ಕಿಂತು ಪ್ರತ್ಯಕ್ಷಾದಿಗಳಿಂದ ಬುದ್ಧಿಸನ್ನಿಹಿತವಾದ ಜಡಪರಾಮರ್ಶಕವಾಗಿದೆ ಎಂದು ಭಾವ. ತಾತ್ಪರ್ಯದಲ್ಲಿ ಆಚಾರ್ಯರ ವಾಕ್ಯದಲ್ಲಿ ಆರೋಪಿತಂ ಎಂದು ಶೇಷಪೂರ್ತಿ ಮಾಡಬೇಕು.

**ಏತತ್** ಜಡವು **ಆರೋಪಿತಂ ರೂಪಂ** ಆರೋಪಿತವೆಂಬ ರೂಪವು. ಮೇಲೆ ಹೇಳಿದಂತೆ ಭಗವಂತನಿಗೆ ಮೂರು ವಿಧ ರೂಪಗಳಿವೆ ಎನ್ನಲು ಪ್ರಮಾಣ ಪಾದ್ಮಪುರಾಣ. ಅದರ ಅರ್ಥ - ಧರ್ಮಪುತ್ರನಾದ ನಾರಾಯಣ ವರಾಹ ಮೊದಲಾದವು ಪರಮ ಎಂದರೆ ಅಪ್ರಾಕೃತ ಅರ್ಥಾತ್ ಸ್ವರೂಪಭೂತರೂಪಗಳು. ಜೀವರು ಶ್ರೀಹರಿಗೆ ಪ್ರತಿಬಿಂಬವೆಂಬ ಭಿನ್ನರೂಪಗಳು. ಜಡವು ಆರೋಪಿತವೆಂಬ ಭಿನ್ನವಾದ ಪ್ರತಿಮಾಸ್ಥಾನೀಯವಾದ ರೂಪವು ಹೀಗೆ ಮೂರು ವಿಧರೂಪಗಳು ಮಹಾತ್ಮನಾದ ವಿಷ್ಣುವಿಗೆ ಎನ್ನುತ್ತದೆ ಪದ್ಮಪುರಾಣ. ರೂಪ ಉಪರಿಭಾವೇ ಎಂದು ಧಾತು ಇರುವುದರಿಂದ ಉಪರಿಭೂತ, ಅನಂತರ ಬಂದದ್ದು, ಸದಾತನವಲ್ಲ ಎಂಬರ್ಥದಲ್ಲಿ ಆರೋಪಿತ ಎಂದಿದ್ದಾರೆ. ಹೊರತು ಮಿಥ್ಯಾ ಎಂದಲ್ಲ. ಅಜ್ಞರು ಪ್ರತಿಮೆಯನ್ನು ನೋಡಿ ದೇವರೆಂದು ತಿಳಿಯುವಂತೆ ಜಡ ಜಗತ್ತನ್ನು ಪರಾಮಾತ್ಮನ ರೂಪವೆಂದು ತಿಳಿಯುವರು.

**ಯಥಾ ನಭಸಿ ಮೇಘೌಘಾ ರೇಣುರ್ವಾ ಪಾರ್ಥಿವೋಽನಿಲೇ ।**
**ಏವಂ ದ್ರಷ್ಟರಿ ದೃಶ್ಯತ್ವಮಾರೋಪಿತಮಬುದ್ಧಿಭಿಃ ॥೩೧॥**

**ನಭಸಿ** ಆಕಾಶದಲ್ಲಿ ಆಶ್ರಿತವಾದ **ಮೇಘೌಘಾಃ** ಮೋಡಗಳ ಸಮೂಹಗಳು ಸತತವಾಗಿದ್ದರೂ **ಯಥಾ** ಹೇಗೆ ಆರೋಪಿತವೆನ್ನುವರು. ಮೇಘಗಳ ಚಲನವನ್ನು ಕಂಡು ಆಕಾಶವೇ ಚಲಿಸುವದೆಂದು ಅಜ್ಞರು ತಿಳಿಯುವುದರಿಂದ **ಅನಿಲೇ** ಗಾಳಿಯಲ್ಲಿ **ಪಾರ್ಥಿವಃ ರೇಣುಃ ವಾ** ಪೃಥಿವಿಯ ಕಣಗಳು ಸತ್ಯವಾಗಿದ್ದರೂ ರೇಣುವಿನಲ್ಲಿರುವ ರೂಪ ಕಂಡಾಗ ಗಾಳಿಗೆ ರೂಪವಿದೆ ಎಂದು ಅಜ್ಞರು ತಿಳಿಯುವುದರಿಂದ ರೇಣುವು ಆರೋಪಿತವೆನ್ನುವಂತೆ **ದ್ರಷ್ಟರಿ** ಚೇತನಾತ್ಮಕವಾದ ಶ್ರೀಹರಿಯ ದೇಹದಲ್ಲಿ **ಅಬುದ್ಧಿಭಿಃ**

ಹರಿಯ ದೇಹ ಜ್ಞಾನಾನಂದಾತ್ಮಕವೆಂದು ತಿಳಿಯುವದರಿಂದ **ದೃಶ್ಯತ್ವಂ** ಜಡದೇಹದ ಧರ್ಮವಾದ ಜನ್ಮಾದಿಗಳಿವೆ ಎಂದು ತಿಳಿಯುವರು.

**ವಿಶೇಷ :-** ಹೇಗೆ ಆಕಾಶಾಶ್ರಿತ ಮೋಡ ಸತ್ಯವಾದರೂ ಆಕಾಶದಲ್ಲಿ ಚಲನಾರೋಪಕ್ಕೆ ಪ್ರಧಾನವಾದುದರಿಂದ ಅಜ್ಞಾನಿಗಳು ಆರೋಪಿತವೆನ್ನುವರೋ ಅದರಂತೆ ಶ್ರೀಹರಿಯ ಸ್ವರೂಪ ದೇಹಾಶ್ರಿತವಾದ ಈ ಜಡವು ಸತ್ಯವಾದರೂ ಭಗವಂತನ ಸ್ವರೂಪ ದೇಹದಲ್ಲಿ ಜನ್ಮಾದಿಗಳ ಆರೋಪಕ್ಕೆ ಪ್ರಧಾನವಾದುದರಿಂದ ಬುದ್ಧಿ ಇಲ್ಲದವರು ಆರೋಪಿತವೆನ್ನುವರು. ವಸ್ತುತಃ ಆರೋಪಿತವಲ್ಲ. ಈ ವಿವಕ್ಷೆಯಿಂದಲೇ ಜಡವು ಆರೋಪಿತವೆಂದು ಹೇಳಿದ್ದು.

ಈವರೆಗೆ ಕುಮಾರಾದಿ ಕಲ್ಕ್ಯಂತ ದೇಹಗಳಿಗೆ ಭಗವತ್ಸ್ವರೂಪತ್ವ ಹೇಳಿ ಜಡಕ್ಕೆ ಆರೋಪಿತ ರೂಪತ್ವವನ್ನು ಉಪಪಾದಿಸಿ ಈಗ ಎರಡರಿಂದ ವಿಲಕ್ಷಣವಾದ ಜೀವರೂಪವನ್ನು ತಿಳಿಸುವರು.

**ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।**
**ಅದೃಷ್ಟಾ ಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ ॥೩೨॥**

**ಅತಃ** ಜಡ, ಈಶ್ವರುಗಳಿಂದ **ಪರಂ** ವಿಲಕ್ಷಣನಾದ( ಭಿನ್ನನಾದ) **ಯತ್** ಯಾವುದು **ಅವ್ಯಕ್ತಂ** ಅಕಾರ್ಯವಾದ ಅನಾವಿರ್ಭೂತ ನಿಜರೂಪವುಳ್ಳ **ಅವ್ಯೂಢಗುಣಬೃಂಹಿತಂ** ಅನಾದಿಕಾಲದಲ್ಲಿ ಎಂದೂ ಹೋಗದಿರುವ ಸತ್ವಾದಿ ಗುಣಗಳಿಂದ ಆಚ್ಛಾದಿತವಾದ ಯಾವ ಚೈತನ್ಯ ಉಂಟೋ ಮತ್ತು **ಅದೃಷ್ಟಾಶ್ರುತವಸ್ತುತ್ವಾತ್** ಅಶ್ರುತವಾದ, ಅಮತವಾದ, ಅನುಪಾಸಿತವಾದ, ಅದೃಷ್ಟವಾದ ಪರಮಾತ್ಮನ ಸ್ವರೂಪವುಳ್ಳವನಾದ್ದರಿಂದ **ಯಃ ಪುನರ್ಭವಃ** ಯಾವನು ಮತ್ತೆ ಮತ್ತೆ ಜನನ ಮರಣ ಪಡೆಯುವನೋ **ಸಃ** ಅವನು **ಜೀವಃ** ಜೀವನು.

**ವಿಶೇಷ :-** ಈ ಶ್ಲೋಕದಲ್ಲಿ ಅತಃಶಬ್ದದಿಂದ ಆರೋಪಿತರೂಪವನ್ನೇ ಪರಾಮರ್ಶ ಮಾಡುವರೆಂದು ತೋರದಿರಲು ಪರಾಮೃಶ್ಯವನ್ನು ತಿಳಿಸುವರು.

'ಅತಃ ಪರಂ' ಜಡೇಶ್ವರಯೋಃ ಪರಂ ಜೀವನ ಸ್ವರೂಪವು (ಹಿಂದೆ ಆರೋಪಿತವಾಗಿ ಜಡ, ಅಧಿಷ್ಠಾನವಾಗಿ ಪ್ರಕೃತನಾದವ ಈಶ್ವರ) ಜಡೇಶ್ವರದಿಂದ ವಿಲಕ್ಷಣವು(ಭಿನ್ನವು) ಅವ್ಯೂಢಗುಣಬೃಂಹಿತ ಎಂಬ ಶಬ್ದದ ಅರ್ಥವನ್ನು ಹೇಳುವರು. ಊಢ ಶಬ್ದ ಸ್ವೀಕೃತವಾಚಿಯಾದ್ದರಿಂದ ವ್ಯೂಢಶಬ್ದವು ಅಸ್ವೀಕೃತವಾಚಿ ಎಂದಾಗುವದು.

ಅವ್ಯೂಢ ಶಬ್ದದಿಂದ ಸ್ವೀಕೃತ ಏವ ಎಂಬ ಅರ್ಥ ಸಿದ್ಧ. ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ ಎಂಬ ವಚನಾನುಸಾರ ದೊರೆಯುವದು. ಅದರ ತಾತ್ಪರ್ಯವನ್ನೇ ಕದಾಚಿದಪ್ಯನಪಗತಸತ್ವಾದಿಗುಣಬೃಂಹಿತಂ ಎಂದು ಹೇಳುವರು.

ಜೀವನನ್ನು ಬಿಟ್ಟು ಬೇರೆ ಈಶ್ವರನಿಲ್ಲ. ಜೀವನಾದರೂ ಅಹಂ ಎಂದು ಪ್ರತಿದಿನವೂ ತಿಳಿಯುವನು ಅಂದಮೇಲೆ ಅದೃಷ್ಟವಸ್ತುತ್ವಾತ್ ಎಂದು ಹೇಳಿದುದು ಹೇಗೆ ಎಂದರೆ ಹೇಳುವರು.

**ಯತ್ರೇಮೇ ಸದಸದ್ರೂಪೇ ಪ್ರತಿಷಿದ್ಧೇ ಸ್ವಸಂವಿದಾ ।।**
**ಅವಿದ್ಯಯಾಽಽತ್ಮನಿಕೃತೇ ಇತಿ ತದ್ ಬ್ರಹ್ಮ ದರ್ಶನಮ್ ।।೩೩।।**

**ಯತ್ರ** ಯಾವ ಪರಮಾತ್ಮನಲ್ಲಿ **ಇಮೇ** ಪುನರ್ಭವ ಅವ್ಯೂಢಗುಣ ಬೃಂಹಿತ ಶಬ್ದಲಿಂಗಗಳಿಂದ ಸೂಚಿತಗಳಾದ **ಸದಸದ್ರೂಪೇ** ಸ್ಥೂಲ ಸೂಕ್ಷ್ಮ ಶರೀರಗಳು **ಸ್ವಸಂವಿದಾ ಪ್ರತಿಷಿದ್ಧೇ** ನಿತ್ಯದಲ್ಲಿ ತನ್ನ ಸಾಕ್ಷಾತ್ಕಾರವಿರುವುದರಿಂದ ನಿತ್ಯನಿರಸ್ತವಾಗಿವೆ. (ಈಶ್ವರ ಸಾಕ್ಷಾತ್ಕಾರ ಅವೆರಡಕ್ಕೂ ವಿರೋಧಿ ಆದ್ದರಿಂದ ಸರ್ವದಾ ತನ್ನ ಸಾಕ್ಷಾತ್ಕಾರವುಳ್ಳವರಿಗೆ ಅವುಗಳ ಸಂಬಂಧ ಅಸಂಭಾವಿತವೆಂದು ಭಾವ.) **ಅವಿದ್ಯಯಾ** ಭಗವತ್ಸಾಕ್ಷಾತ್ಕಾರ ಪ್ರತಿಬಂಧಕ ಅಜ್ಞಾನದಿಂದ **ಆತ್ಮನಿ ಕೃತೇ** ಜೀವಸಂಬಂಧಿಯಾಗಿ ಮಾಡಲ್ಪಟ್ಟಿವೆ. **ಇತಿ** ಎಂಬುದು **ಬ್ರಹ್ಮದರ್ಶನಂ** ಬ್ರಹ್ಮಜ್ಞಾನವು ಅಂದರೆ ಹರಿಯು ನಿತ್ಯಮುಕ್ತನು, ಜೀವ ಬಂಧಕನು ಎಂದು ತಿಳಿಯುವುದೇ ಬ್ರಹ್ಮಜ್ಞಾನ ಹೊರತು ಅಹಂ ಎಂಬ ಜ್ಞಾನವಲ್ಲ. ಆದ್ದರಿಂದ ಅದೃಷ್ಟಾಶ್ರುತವಸ್ತುತ್ವಾತ್ ಎಂದು ಹೇಳಿದ್ದು ಯುಕ್ತವೇ ಎಂದು ಭಾವ.

*ಭಾಗವತತಾತ್ಪರ್ಯ -*

ಅವಿದ್ಯಯಾ ಜೀವಕೃತೇ ಪರಮೇಶ್ವರೇ ಪ್ರತಿಷಿದ್ಧೇ ಇತಿ ಬ್ರಹ್ಮ ದರ್ಶನಮ್ ।

ಸ್ಥೂಲ ಸೂಕ್ಷ್ಮ ಶರೀರಗಳ ಸಂಬಂಧಕ್ಕೆ ಶ್ರೀಹರಿಯ ವಿಷಯಕವಾದ ಅಜ್ಞಾನವೇ ಕಾರಣ.

ಹಿಂದಿನ ಶ್ಲೋಕದಲ್ಲಿ ಆರ್ಥಿಕವಾಗಿ ಬ್ರಹ್ಮಜ್ಞಾನ ಸಂಸಾರ ನಿವರ್ತಕವೆಂದು ಹೇಳಿದೆ. ಅದು ಸರಿಯಲ್ಲ. ಬ್ರಹ್ಮಜ್ಞಾನಿಗಳಾದ ಶುಕಾದಿಗಳಿಗೆ ಮುಕ್ತಿಯಾಗಿಲ್ಲವಲ್ಲ ಎಂದರೆ ಹೇಳುವರು -

**ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।**
**ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ ॥ ೩೪॥**

**ಏಷಾ** ಸತ್ವಾದಿಗುಣಾಭಿಮಾನಿನಿಯಾದ **ದೇವೀ** ದ್ಯೋತಮಾನಳಾದ **ಮಾಯಾ** ಬಂಧಕ ಪ್ರಕೃತಿರೂಪಳಾದ ದುರ್ಗಾದೇವಿಯು **ಯದಿ** ಯಾವಾಗ **ಉಪರತಾ** ಈ ಜೀವನಿಗೆ ದುಃಖ ಪಡಿಸುವದಿಲ್ಲವೆಂಬ ಬುದ್ಧಿಯಿಂದ ಜೀವನಿಗೆ ಸಂಸಾರ ತಂದುಕೊಡುವ ವ್ಯಾಪಾರದಿಂದ ನಿವೃತ್ತಳಾಗುವಳೋ(ಇಲ್ಲಿ ನಿವೃತ್ತಾ ಎಂದು ಹೇಳದೆ ಉಪರತಾ ಎಂದಿದ್ದರಿಂದ ಪ್ರಾರಬ್ಧಕರ್ಮವಶಾತ್ **ಉಪ** ಜೀವನ ಸಮೀಪದಲ್ಲಿ ಸ್ವಲ್ಪ ರತಳೂ ಆಗಿರುವಳು ಎಂದು ಸೂಚಿಸುವರು) ಏಕೆಂದರೆ ಯತಃ **ವೈಶಾರದೀ ಮತಿಃ** ಯಾವ ಕಾರಣ ಭಗವದ್ವಿಷಯಕ ಜ್ಞಾನರೂಪಳಾಗಿದ್ದಾಳೆ. **ತದಾ** ಆಗ **ಏನಂ** ಜೀವನನ್ನು **ಬ್ರಹ್ಮ ಸಂಪನ್ನ ಇತಿ ವಿದುಃ** ಬ್ರಹ್ಮನನ್ನು ಹೊಂದಿದನೆಂದೇ ತಿಳಿಯುವರು. ಕರ್ಮಕ್ಷಯರೂಪ ಮುಕ್ತಿಯಾಗಿದೆ ಪರಮ ಮುಕ್ತಿ ಸಮೀಪಿಸಿದೆ. ಜ್ಞಾನವು ಮುಕ್ತಿಸಾಧನ ಎಂದದ್ದಕ್ಕೆ ವ್ಯಭಿಚಾರವಿಲ್ಲ. ಪ್ರಾರಬ್ಧಕರ್ಮ ಮುಗಿದ ಮೇಲೆ **ಸ್ವೇ** ಸ್ವರೂಪಭೂತವಾದ **ಮಹಿಮ್ನಿ** ಆವಿರ್ಭೂತ ಜ್ಞಾನಾನಂದಾದಿರೂಪ ಮಹತ್ವವನ್ನು ಹೊಂದುವವನಾಗಿ **ಮಹೀಯತೇ** ತನ್ನಕ್ಕಿಂತ ಚಿಕ್ಕ ಮುಕ್ತರಿಂದ ಪೂಜಿತನಾಗುವನು.

*ಭಾಗವತತಾತ್ಪರ್ಯ -*

**ವಿಶಾರದಃ ಪರಮೇಶ್ವರಃ । ತನ್ಮತಿರ್ಮಾಯಾ । ಯದಾ ನೈನಂ ಶೋಚಯಾಮೀ-ತ್ಯುಪರತಾ ತದಾ ಸಂಪನ್ನ ಏವ ॥**

ವಿಶಾರದ ಎಂದರೆ ಪರಮಾತ್ಮನು. ಶ್ರೀಹರಿಯ ಜ್ಞಾನರೂಪವಾದ ಇಚ್ಛೆ ವೈಶಾರದೀಮತಿ. ಜೀವನನ್ನು ದುಃಖಿಪಡಿಸುವದಿಲ್ಲ ಎಂಬ ಬುದ್ಧಿಯಿಂದ ಜೀವನಿಗೆ ಸಂಸಾರ ಕೊಡುವದರಿಂದ ನಿವೃತ್ತಳಾಗುವಳೋ ಆಗ ಜೀವನು ಮುಕ್ತನೇ ಆಗುವನೆಂದು ತಿಳಿಯುತ್ತಾರೆ.

ಈ ವರೆಗೆ ಈಶ್ವರನಿಗೆ ಮೂರು ರೂಪಗಳನ್ನು ಹೇಳಿ ಈಗ ಕೆಲವರು ಜನ್ಮವಿಲ್ಲದ ಪರಮಾತ್ಮನಿಗೆ ಅವತಾರ ರೂಪದಿಂದ ಜನ್ಮಗಳು ಕ್ರಿಯಾರಹಿತನಾದವನಿಗೆ ಆ ಆ ಅವತಾರಗಳಲ್ಲಿ ಮಾಡಿದ ಕರ್ಮಗಳು ವಾಸ್ತವಿಕವಲ್ಲ. ಕಿಂತು ಭ್ರಾಂತಿಕಲ್ಪಿತಗಳು ಎನ್ನುವರು ಅವರು ಭಗವತತ್ತ್ವ ತಿಳಿದವರಲ್ಲ ಎಂಬ ಅಭಿಪ್ರಾಯದಿಂದ ಹೇಳುವರು -

**ಏವಂ ಜನ್ಮಾನಿ ಕರ್ಮಾಣಿ ಹ್ಯಕರ್ತುರಜನಸ್ಯ ಚ ।**
**ವರ್ಣಯಂತಿ ಸ್ಮ ಕವಯೋ ವೇದಗುಹ್ಯಾನಿ ಹೃತ್ಪತೇಃ ॥೩೫॥**

**ಏವಂ** ಹಿಂದೆ ಹೇಳಿದಂತೆ ಅಘಟಿತಘಟಕ ಐಶ್ವರ್ಯದಿಂದಲೇ **ಅಜನಸ್ಯ** ಜನ್ಮರಹಿತನಿಗೆ **ಜನ್ಮಾನಿ** ಅವತಾರಗಳನ್ನು **ಅಕರ್ತುಃ** ಭಿನ್ನವಾದ ಕ್ರಿಯಾರಹಿತನಾದವನಿಗೆ **ಕರ್ಮಾಣಿ** ಕರ್ಮಗಳನ್ನು **ಕವಯಃ ಚ** ಜ್ಞಾನಿಗಳೇ **ವರ್ಣಯಂತಿ** ಹೇಳುವರು ಬೇರೆಯವರು ಹೇಳಲಾರರು. ಭ್ರಾಂತಿಕಲ್ಪಿತವೆಂದು ಹೇಳುವರು ಅವರು ಕವಿಗಳೇ ಅಲ್ಲ. ಉಳಿದವರೂ ಜ್ಞಾನಿಗಳಂತೆ ಏಕೆ ಹೇಳುವದಿಲ್ಲ ಎಂದರೆ **ವೇದಗುಹ್ಯಾನಿ** ವೇದಗಳಲ್ಲಿ ಗೌಪ್ಯವಾಗಿ ಪ್ರತಿಪಾದಿತವಾಗಿವೆ ಸ್ಪಷ್ಟವಾಗಿ ಹೇಳಿಲ್ಲ ವೇದಸಂಪ್ರದಾಯ ಜ್ಞಾನವಿಲ್ಲವೆಂದರೆ **ಹೃತ್ಪತೇಃ** ಅವರವರ ಯೋಗ್ಯತಾನುಸಾರ ಅವರ ಮನಃ ಪ್ರೇರಣೆ ಮಾಡುವನು **ಹಿ** ಪ್ರಮಾಣಸಿದ್ಧ.

ಕರ್ತೃತ್ವವೂ ಸ್ವಾಭಾವಿಕವೆಂದರೇ ಅಕರ್ತೃತ್ವಪ್ರತಿಪಾದಕ ಶ್ರುತಿವಿರೋಧ ಬರುವದು ಎಂಬ ಶಂಕೆಯನ್ನು ಪರಿಹರಿಸಲು ಅಕರ್ತೃತ್ವಶ್ರುತಿಗೆ ಅರ್ಥಾಂತರ ತಿಳಿಸುವರು -

**ಸವಾ ಇದಂ ವಿಶ್ವಮಮೋಘಲೀಲಃ**
**ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್ ।**
**ಭೂತೇಷು ಚಾಂತರ್ಹಿತ ಆತ್ಮತಂತ್ರಃ**
**ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥೩೬॥**

**ಅಮೋಘಲೀಲಃ** ಸತ್ಯಕಾಮವೆಂಬ ಕ್ರೀಡೆಯುಳ್ಳ **ಸಃ** ಪರಮ ಪುರುಷ ಪದ್ಮನಾಭನು **ಯದ್ಯಪಿ ಇದಂ** ಈ ಜಗತ್ತನ್ನು **ಸೃಜತಿ** ಹುಟ್ಟಿಸುವನು **ಅವತಿ** ರಕ್ಷಿಸುವನು **ಅತ್ತಿ** ಸಂಹರಿಸುವನು **ತಥಾಽಪಿ** ಆದರೂ **ಅಸ್ಮಿನ್** ಈ ಕ್ರಿಯೆಯಿಂದ ಬಂದ ಫಲದಲ್ಲಿ **ನ ಸಜ್ಜತೇ** ಆಸಕ್ತನಾಗುವದಿಲ್ಲ. ಆದ್ದರಿಂದ ಅಕರ್ತೃ ಎನ್ನುವರು. ಕರ್ತೃತ್ವ ಸ್ವಾಭಾವಿಕವಾದರೆ ಭೋಕ್ತೃತ್ವವು ಬರಲಿ ಎಂದರೆ ಇಷ್ಟಾಪತ್ತಿ ಎಂದು ಹೇಳುವರು. **ಭೂತೇಷು** ಪ್ರಾಣಿಗಳ ದೇಹದಲ್ಲಿ **ಅಂತರ್ಹಿತಃ** ಒಳಗಿದ್ದು **ಆತ್ಮತಂತ್ರಃ** ಸ್ವತಂತ್ರನು **ಷಾಡ್ವರ್ಗಿಕಂ** ಆರು ಇಂದ್ರಿಯಗಳ ವಿಷಯವನ್ನು **ಜಿಘ್ರತಿ** ಶುಭವನ್ನು ಮಾತ್ರ ಅನುಭವಿಸುವನು. **ಷಡ್ಗುಣೇಶಃ** ಆರು ಇಂದ್ರಿಯ ಗ್ರಾಹ್ಯಗುಣಗಳ ಸತ್ತಾದಿಪ್ರದನು.

**ವಿಶೇಷ :-** ಫಲಾಸಕ್ತಿ ಇಲ್ಲದ್ದರಿಂದ ಅಕರ್ತಾ ಎನ್ನುವರು. ಆತ್ಮತಂತ್ರಃ ಎಂದಿದ್ದರಿಂದ ಭೋಗ ಒಪ್ಪಿದರೆ ಅನಶ್ನನ್ ಎಂಬ ಶ್ರುತಿ ವಿರೋಧ ಬರುವದು ಎಂಬ

ಶಂಕೆ ಪರಿಹರಿಸಿದಂತಾಯಿತು. ಅನ್ಯಾಧೀನ ಅಶನಾಭಾವವನ್ನು ಅನಶ್ನನ್ ಎಂಬ ಶ್ರುತಿಯಿಂದ ಹೇಳುವರು. ಮತ್ತು ಅಶುಭಭೋಗಾಭಾವ ಪರಾ ಎಂದು ಸೂಚಿಸುವರು.

*ಭಾಗವತತಾತ್ಪರ್ಯ -*

ಶ್ಲೋಕಾರ್ಥವನ್ನು ಪ್ರಮಾಣದಿಂದ ದೃಢೀಕರಿಸುವರು.

**ಅಪ್ರಯತ್ನಾತ್ ಸ್ವತಂತ್ರತ್ವಾತ್ ಫಲಾನಾಂ ಚ ವಿವರ್ಜನಾತ್ ।**
**ಕ್ರಿಯಾಯಾಶ್ಚ ಸ್ವರೂಪತ್ವಾತ್ ಅಕರ್ತೇತಿ ಚ ತಂ ವಿದುಃ ॥**

**ಕರ್ತೃತ್ವಂ ಭ್ರಾಂತಿಜಂ ಪ್ರಾಹುರತತ್ತ್ವವಿದೋ ಜನಾಃ ।**
**ಐಶ್ವರ್ಯಜಂ ತು ಕರ್ತೃತ್ವಂ ಸಮ್ಯಕ್ತತ್ತ್ವವೇದಿನಃ ॥ -ಇತಿ ಪಾದ್ಮೇ**

ಕ್ಲೇಶಸಾಧ್ಯ ಪ್ರಯತ್ನವಿಲ್ಲದಿರುವದರಿಂದಲೂ ಸರ್ವಸ್ವತಂತ್ರನಾದುದರಿಂದಲೂ ಫಲೋದ್ದೇಶೇನ ಕರ್ಮ ಮಾಡದಿರುವದರಿಂದಲೂ ಕ್ರಿಯೆಯು ಶ್ರೀಹರಿಯ ಸ್ವರೂಪವಾದುದರಿಂದಲೂ ಶ್ರೀಹರಿಯನ್ನು ಅಕರ್ತಾ ಎಂದು ಹೇಳುವರು ಹೊರತು ಸರ್ವಥಾ ಕರ್ತೃತ್ವವಿಲ್ಲವೆಂದಲ್ಲ. ತತ್ತ್ವಜ್ಞಾನವಿಲ್ಲದ ಮೂಢಜನರು ಶ್ರೀಹರಿಯ ಕರ್ತೃತ್ವ ಭ್ರಾಂತಿ ಕಲ್ಪಿತವೆನ್ನುವರು. ಚೆನ್ನಾಗಿ ತತ್ತ್ವ ತಿಳಿದವರು ಕರ್ತೃತ್ವವು ಅಘಟಿತಘಟಿಕಐಶ್ವರ್ಯದಿಂದ ಉಪಪನ್ನವೆಂದು ಹೇಳುವರು ಎಂದು ಪದ್ಮಪುರಾಣದಲ್ಲಿದೆ.

ನಾಮರೂಪಾತ್ಮಕ ವಿಶ್ವವನ್ನು ಸೃಷ್ಟಿಸುವನು ಎಂದು ಹಿಂದೆ ಹೇಳಿದೆ. ಅಲ್ಲಿ ಒಂದು ಸಂದೇಹ. ಭಗವಂತನು ಚತುರ್ಮುಖಾದಿರೂಪಗಳನ್ನು ವಿರಿಂಚಾದಿ ನಾಮಗಳನ್ನು ರುದ್ರಾದಿಗಳಿಗೆ ಏಕೆ ಕೊಡುವುದಿಲ್ಲ ಮತ್ತು ಪೂರ್ಣ ಆನಂದನಿಗೆ ವಿಷಯ ಭೋಗವೇಕೆ? ಎಂದರೆ ಹೇಳುವರು.

**ನ ಚಾಸ್ಯ ಕಶ್ಚಿನ್ನಿಪುಣಂ ವಿಧಾತು-**
**ರವೈತಿ ಜಂತುಃ ಕುಮನೀಷ ಊತಿಮ್ ॥**
**ನಾಮಾನಿ ರೂಪಾಣಿ ಮನೋವಚೋಭಿಃ**
**ಸಂತನ್ವತೋ ನಟಚರ್ಯಾಮಿವಾಜ್ಞಃ ॥೩೭॥**

**ಅಜ್ಞಃ** ಭರತನಾಟ್ಯಶಾಸ್ತ್ರವನ್ನು ತಿಳಿಯದವನು **ನಟಚರ್ಯಾಂ ಇವ** ನಟನು ಮಾಡುವ ಬೆರಳಿನ ಅಭಿನಯಗಳನ್ನು ತಿಳಿಯದಿರುವಂತೆ **ಕುಮನೀಷಃ** ಅಸರ್ವಜ್ಞನಾದ ಮನುಷ್ಯನು **ನಿಪುಣಂ** ಸುಂದರವಾಗಿ ಆಗುವಂತೆ **ವಿಧಾತುಃ** ಜಗತ್ತನ್ನು ಸೃಷ್ಟಿಸುವ **ಮನೋವಚೋಭಿಃ** ಮನಸ್ಸಿನಿಂದ ರೂಪವನ್ನು, ವಚನದಿಂದ ನಾಮವನ್ನು **ನಾಮಾನಿ ರೂಪಾಣಿ ಸಂತನ್ವತಃ** ಆ ಆ ವಸ್ತುಗಳಲ್ಲಿ ಇರುವಂತೆ ಮಾಡುವವನ **ಚ** ಮತ್ತು ವಿಷಯಭೋಗ ಮಾಡುವ **ಅಸ್ಯ** ಪರಮ ಪುರುಷನ **ಊತಿಂ** ಅಭಿಪ್ರಾಯವನ್ನು **ಕಶ್ಚಿತ್ ಜಂತುಃ** ಯಾವ ಜೀವನೂ **ನ ಅವೈತಿ** ತಿಳಿಯಲಾರನು.

ಭಕ್ತನಿಗೆ ಅವನ ಅಭಿಪ್ರಾಯ ತಿಳಿಯ ಬಹುದಲ್ಲ ಎಂದರೆ ಅವನೂ ಸಹ ಸೇವಾದಿಗಳನ್ನು ಮಾಡಿ ಕಥಂಚಿತ್ ಭಗವಂತನ ಸ್ಥಿತಿಯನ್ನು ಕಿಂಚಿತ್ ತಿಳಿಯುವನು ಚೆನ್ನಾಗಿ ತಿಳಿಯಲಾರನು ಎಂದು ಹೇಳುವರು.

**ಸ ವೇದ ಧಾತುಃ ಪದವೀಂ ಪರಸ್ಯ**
**ದುರಂತವೀರ್ಯಸ್ಯರಥಾಂಗಪಾಣೇಃ ।**
**ಯೋಽಮಾಯಯಾ ಸಂತತಯಾನುವೃತ್ತ್ಯಾ**
**ಭಜೇತ ತತ್ಪಾದಸರೋಜಗಂಧಮ್** ॥೩೮॥

**ಯಃ** ಯಾವನು **ಅಮಾಯಯಾ** ಕೌಟಿಲ್ಯವಿಲ್ಲದೆ **ಸಂತತಯಾ** ನಿರಂತರವಾಗಿ ಮಾಡುವ **ಅನುವೃತ್ತ್ಯಾ** ಭಕ್ತಿಯಿಂದ **ತತ್ಪಾದಸರೋಜಗಂಧಂ** ಹೃದಯದಲ್ಲಿ ವ್ಯಕ್ತವಾದ ಭಗವಂತನ ರೂಪವನ್ನು (ಹೃದಿ ವ್ಯಕ್ತಂ ತು ಯದ್ರೂಪಂ ಹರೇಃ ಗಂಧಃ ಸ ಉಚ್ಯತೇ' ಎಂದು ಮುಂದೆ ಹೇಳುವರು.) **ಭಜೇತ** ಅದರಲ್ಲೇ ಮಗ್ನನಾಗುವನೋ **ಸಃ** ಅವನು **ದುರಂತವೀರ್ಯಸ್ಯ** ಅಪಾರಸಾಮರ್ಥ್ಯವಿರುವ **ರಥಾಂಗಪಾಣೇಃ** ಚಕ್ರಧಾರಿಯಾದ **ಪರಸ್ಯ ಧಾತುಃ** ಸರ್ವೋತ್ತಮನಾದ ಜಗದ್ರಕ್ಷಕನಾದ ಶ್ರೀಹರಿಯ **ಪದವೀಂ** ಮಾರ್ಗವನ್ನು **ವೇದ** ತಿಳಿಯುವನು.

ಭಕ್ತಿ ಮಾರ್ಗದಲ್ಲಿ ಪ್ರವೃತ್ತರಾದ ಋಷಿಗಳನ್ನು ಸಾವಧಾನವಾಗಿ ತಮ್ಮ ಮಾತುಗಳನ್ನು ಕೇಳಿದ್ದಕ್ಕೆ ಅಭಿನಂದಿಸುವರು ಸೂತರು -

**ಅಥೇಹ ಧನ್ಯಾ ಭಗವಂತ ಇತ್ಥಂ**
**ಯದ್ವಾಸುದೇವೇಽಖಿಲಲೋಕನಾಥೇ ।**

**ಕುರ್ವಂತಿ ಸರ್ವಾತ್ಮಕ ಆತ್ಮಭಾವೇ**
**ನ ಯತ್ರ ಭೂಯಃ ಪರಿವರ್ತ ಉಗ್ರಃ ॥೩೯॥**

**ಹೇ ಭಗವಂತ** ಪೂಜ್ಯರೇ **ಯತ್ರ** ಯಾವ ಭಗವಂತನಲ್ಲಿ **ಆತ್ಮಭಾವೇ ಕ್ರಿಯಮಾಣೇ ಸತಿ** ಸ್ವಾಮಿತ್ವ ಭಾವನೆ ಮಾಡಿದರೆ **ಭೂಯಃ** ಮತ್ತೆ **ಉಗ್ರಃ** ರುದ್ರನನ್ನೂ ನುಂಗುವ ಕ್ರೂರವಾದ **ಪರಿವರ್ತಃ** ಸಂಸಾರವು **ನ** ಬರಲಾರದು **ತಸ್ಮಿನ್** ಅಂಥಹ **ಅಖಿಲಲೋಕನಾಥೇ** ಸಮಸ್ತ ಜಗತ್ತಿಗೆ ಒಡೆಯನಾದ **ಸರ್ವಾತ್ಮಕೇ** ಎಲ್ಲರ ಅಂತರ್ಯಾಮಿಯಾದ **ವಾಸುದೇವೇ** ಪರಮಾತ್ಮನಲ್ಲಿ **ಇತ್ಥಂ** ಹೇಳಿದ ರೀತಿಯಾಗಿ **ಆತ್ಮಭಾವಂ** ಸ್ವಾಮಿತ್ವ ಭಾವನೆಯನ್ನು **ಕುರ್ವಂತಿ ಇತಿ ಯತ್** ಮಾಡುತ್ತಿರುವಿರಿ ಎಂದೇನಿದೆಯೋ ಅದು. **ಅಥ** ಆದ್ದರಿಂದ **ಇಹ** ಚೇತನರಾಶಿಗಳಲ್ಲಿ **ಯೂಯಂ** ನೀವು **ಧನ್ಯಾಃ** ನಿರಪೇಕ್ಷಗುಣಪೂರ್ಣರು ಕೃತಕೃತ್ಯರು.

**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಂಮಿತಮ್ ।**
**ಉತ್ತಮಶ್ಲೋಕಚರಿತಂ ಚಕಾರ ಭಗವಾನೃಷಿಃ ॥೪೦॥**

**ಭಗವಾನ್** ಪೂಜ್ಯರಾದ **ಋಷಿಃ** ವೇದವ್ಯಾಸದೇವರು **ಬ್ರಹ್ಮಸಂಮಿತಂ** ವೇದ ಸಮಾನವಾದ **ಉತ್ತಮಶ್ಲೋಕಚರಿತಂ** ಶ್ರೀಹರಿಯ ಚರಿತ್ರೆಗಳಿಂದ ಕೂಡಿದ **ಇದಂ ಭಾಗವತಂ ನಾಮ ಪುರಾಣಂ** ಭಾಗವತವೆಂಬ ಪುರಾಣವನ್ನು **ಚಕಾರ** ಮಾಡಿದರು.

ಈ ಶ್ಲೋಕಕ್ಕೆ ಸಂಗತಿ ತಿಳಿಯುವದಿಲ್ಲ ಕಾರಣ ಅದನ್ನು ತಿಳಿಸುವರು.

*ಭಾಗವತ ತಾತ್ಪರ್ಯ -*

ಧರ್ಮಃ ಕಂ ಶರಣಂ ಗತಃ ಇತ್ಯಸ್ಯ ತಮೇವ ವ್ಯಾಸರೂಪಿಣಮಿತಿ ಪರಿಹಾರ ಉಚ್ಯತೇ ಇದಂ ಭಾಗವತಂ ಇತ್ಯಾದಿನಾ ।

ಧರ್ಮವು ಯಾರನ್ನು ಶರಣು ಹೊಂದಿತು ಎಂಬ ಪ್ರಶ್ನೆಗೆ ಧರ್ಮಜ್ಞಾನವನ್ನು ಮಾಡಿಕೊಡುವವ ಪುರಾಣಗಳಿಗೆ ಕರ್ತೃವಾದ ವ್ಯಾಸರೂಪಿಯಾದ ಶ್ರೀಕೃಷ್ಣನನ್ನೇ ಶರಣು ಹೊಂದಿತೆಂದು ಇದಂ ಭಾಗವತಂ ಮುಂತಾಗಿ ಪುರಾಣಾರ್ಕೋಽ-ಮುನೋದಿತಃ ಎಂಬ ಪರ್ಯಂತ ಉತ್ತರ ಹೇಳಲ್ಪಡುವದು.

**ನಿಶ್ರೇಯಸಾಯ ಲೋಕಸ್ಯ ಧನ್ಯಂ ಸ್ವಸ್ತ್ಯಯನಂ ಮಹತ್ ।**
**ತದಿದಂ ಗ್ರಾಹಯಾಮಾಸ ಸುತಮಾತ್ಮವತಾಂ ವರಮ್ ॥೪೧॥**

**ಲೋಕಸ್ಯ** ಸಜ್ಜನರಿಗೆ **ನಿಶ್ರೇಯಸಾಯ** ಮೋಕ್ಷಕ್ಕಾಗಿ **ಧನ್ಯಂ** ಜ್ಞಾನಾದಿ ಪುಷ್ಟಿಕರವಾದ **ಸ್ವಸ್ತ್ಯಯನಂ** ಸಮಸ್ತಮಂಗಳಗಳಿಗೆ ಆಶ್ರಯವಾದ **ಮಹತ್** ಶಬ್ದಗಳಿಂದಲೂ, ಅರ್ಥಗಳಿಂದಲೂ ಬೃಹತ್ ಆದ **ತದಿದಂ** ಭಾಗವತವನ್ನು **ಆತ್ಮವತಾಂ ವರಂ** ಮನಸ್ಸನ್ನು ಗೆದ್ದವರಲ್ಲಿ ಶ್ರೇಷ್ಠನಾದ **ಸುತಂ** ಶುಕಾಚಾರ್ಯರನ್ನು ಕುರಿತು **ಗ್ರಾಹಯಾಮಾಸ** ತಿಳಿಸಿದರು.

**ಸರ್ವವೇದೇತಿಹಾಸಾನಾಂ ಸಾರಂ ಸಾರಂ ಸಮುದ್ಧೃತಮ್ ।**
**ಸ ತು ಸಂಶ್ರಾವಯಾಮಾಸ ಮಹಾರಾಜಂ ಪರೀಕ್ಷಿತಮ್ ॥ ೪೨॥**

**ಸರ್ವವೇದೇತಿಹಾಸಾನಾಂ** ಎಲ್ಲ ವೇದ-ಇತಿಹಾಸಗಳಲ್ಲಿರುವ **ಸಾರಂಸಾರಂ** ಅತ್ಯುತ್ತಮ ಪ್ರಮೇಯವನ್ನು **ಸಮುದ್ಧೃತಂ** ಚೆನ್ನಾಗಿ ತೆಗೆದು ಭಾಗವತದಲ್ಲಿ ಬರೆಯಲ್ಪಟ್ಟಿದೆ. **ಸ ತು** ಶುಕಾಚಾರ್ಯರಾದರೂ **ಮಹಾರಾಜಂ** ಚಕ್ರವರ್ತಿಯಾದ **ಪರೀಕ್ಷಿತಂ ಸಂಶ್ರಾವಯಾಮಾಸ** ಪರೀಕ್ಷಿತನಿಗೆ ಚೆನ್ನಾಗಿ ಕೇಳಿಸಿದರು.

**ಪ್ರಾಯೋಪವಿಷ್ಟಂ ಗಂಗಾಯಾಂ ಪರೀತಂ ಪರಮರ್ಷಿಭಿಃ ।**
**ತಸ್ಯ ಕೀರ್ತಯತೋ ವಿಪ್ರಾ ರಾಜರ್ಷೇರ್ಭೂರಿತೇಜಸಃ ॥೪೩॥**

**ಗಂಗಾಯಾಂ** ಗಂಗಾನದಿಯಲ್ಲಿ **ಪ್ರಾಯೋಪವಿಷ್ಟಂ** ಆ ಮರಣ ಉಪವಾಸ ವ್ರತದಿಂದ ಕುಳಿತಿರುವ **ಪರಮರ್ಷಿಭಿಃ ಪರೀತಂ** ಶ್ರೇಷ್ಠ ಋಷಿಗಳಿಂದ ಸುತ್ತುವರಿಯಲ್ಪಟ್ಟ ಪರೀಕ್ಷಿತನಿಗೆ ಉಪದೇಶಿಸಿದರು. **ಹೇ ವಿಪ್ರಾಃ** ಬ್ರಾಹ್ಮಣರೇ **ಭೂರಿತೇಜಸಃ** ಕ್ಷಾತ್ರ ತೇಜಸ್ಸಿನಿಂದ ಕೂಡಿದ ಬ್ರಹ್ಮಾಪರೋಕ್ಷವುಳ್ಳ **ತಸ್ಯ** ಪರೀಕ್ಷಿತನಿಗೆ **ಕೀರ್ತಯತಃ** ಹೇಳುತ್ತಿರುವ ಶುಕಾಚಾರ್ಯರಿಂದ

**ಅಹಂ ಚಾಧ್ಯಗಮಂ ತತ್ರ ನಿವಿಷ್ಟಸ್ತದನುಗ್ರಹಾತ್ ।**
**ಸೋಽಹಂ ವಃ ಶ್ರಾವಯಿಷ್ಯಾಮಿ ಯಥಾಽಧೀತಂ ಯಥಾಮತಿ ॥೪೪॥**

**ತದನುಗ್ರಹಾತ್** ಶುಕಾಚಾರ್ಯರ ಅನುಗ್ರಹದಿಂದ **ತತ್ರ** ಗಂಗಾತಟದಲ್ಲಿ ಅವರ ಸಮೀಪ **ನಿವಿಷ್ಟಃ** ಕುಳಿತವನಾಗಿ **ಅಹಂ ಚ** ನಾನೂ ಸಹ **ಅಧ್ಯಗಮಂ** ಕಲಿತೆನು **ಸೋಽಹಂ** ಆ ನಾನು **ವಃ** ನಿಮಗೆ **ಯಥಾಽಧೀತಂ** ಕಲಿತಂತೆ **ಯಥಾಮತಿ** ಬುದ್ಧಿಗನುಸಾರವಾಗಿ **ಶ್ರಾವಯಿಷ್ಯಾಮಿ** ಕೇಳಿಸುವೆನು.

ಬ್ರಾಹ್ಮಣರ ಮನಸ್ಸಿನಲ್ಲಿಯ ಅಪೂರ್ವ ಪುರಾಣ ಹೇಳುವಿಯೋ ಎಂಬ ಸಂಶಯ ಪರಿಹರಿಸಿ ಈಗ ಧರ್ಮಃ ಕಂ ಶರಣಂ ಗತಃ ಎಂಬ ಪ್ರಶ್ನೆಗೆ ಉತ್ತರಿಸುವರು -

**ಕೃಷ್ಣೇ ಸ್ವಧಾಮೋಪಗತೇ ಧರ್ಮಜ್ಞಾನಾದಿಭಿಃ ಸಹ ।**
**ಕಲೌ ನಷ್ಟದೃಶಾಂ ಪುಂಸಾಂ ಪುರಾಣಾರ್ಕೋಽಮುನೋದಿತಃ ॥೪೫॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ತೃತೀಯೋಽಧ್ಯಾಯಃ ॥

**ಕೃಷ್ಣೇ** ಯಾದವ ಕೃಷ್ಣನು **ಧರ್ಮಜ್ಞಾನಾದಿಭಿಃ ಸಹ** ಧರ್ಮ ಜ್ಞಾನಗಳಿಂದ ಕೂಡಿಕೊಂಡು **ಸ್ವಧಾಮ** ವೈಕುಂಠವನ್ನು **ಉಪಗತೇ ಸತಿ** ಹೊಂದುತ್ತಿರಲು **ಕಲೌ** ಕಲಿಯುಗದಲ್ಲಿ **ನಷ್ಟದೃಶಾಂ ಪುಂಸಾಂ** ಜ್ಞಾನ ಕಳೆದುಕೊಂಡ ಜನರಿಗೆ **ಪುರಾಣಾರ್ಕಃ** ಎಲ್ಲ ಸದ್ಧರ್ಮಗಳನ್ನು ಪ್ರಕಾಶಗೊಳಿಸುವ **ಪುರಾಣಾರ್ಕಃ** ಶ್ರೀಮದ್ಭಾಗವತವೆಂಬ ಸೂರ್ಯನು **ಅಮುನಾ** ವ್ಯಾಸರಿಂದ **ಉದಿತಃ** ಉದಯಹೊಂದಿದನು. ಧರ್ಮವು ಸಚ್ಛಾಸ್ತ್ರ ಮೂಲಕ ಜ್ಞಾನ-ಸದ್ಧರ್ಮಗಳನ್ನು ಪ್ರವರ್ತಿಸುವ ವ್ಯಾಸರೂಪಿ ಕೃಷ್ಣನನ್ನು ಮೊರೆಹೋಯಿತು ಎಂದು ಭಾವ.

ಇಲ್ಲಿಗೆ ಮೂರನೇಯ ಅಧ್ಯಾಯವು ಮುಗಿಯಿತು

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ
## ಚತುರ್ಥೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಸೂತರು ಭಾಗವತ ಕಥೆಯನ್ನು ಹೇಳುತ್ತೇನೆಂದು ಹೇಳಿದ್ದರೂ ಆ ಕಥಾಶ್ರವಣದಲ್ಲಿ ಹೆಚ್ಚು ಆಸಕ್ತರಾಗಿದ್ದ ಋಷಿಗಳಿಗೆ ಏನೇನು ಹೇಳುತ್ತಾರೋ ಎಂಬ ಕುತೂಹಲ ಅಲ್ಲದೇ ನಮಗೆ ತಿಳಿಯಬೇಕಾದ ಅನೇಕ ವಿಷಯಗಳನ್ನು ಬಿಟ್ಟು ಬಿಡುವರೇನೋ ಎಂಬ ಶಂಕೆ. ಆದ್ದರಿಂದ ಆ ಋಷಿಗಳಲ್ಲಿ ಪ್ರಧಾನರಾದ ಶೌನಕರು ಪ್ರಶ್ನೆ ಮಾಡುತ್ತಾರೆ.

ಕೃಷ್ಣಕಥೆಯು ಯಾವ ಯುಗದಲ್ಲಿ ನಡೆಯಿತು ? ಯಾವ ಸ್ಥಾನದಲ್ಲಿ ಯಾವ ಕಾರಣದಿಂದ ನಡೆಯಿತು ? ಯಾರಿಂದ ಪ್ರೇರಿತನಾಗಿ ಸರ್ವಜ್ಞನಾದ ಬಾದರಾಯಣ ದೇವರು ಶ್ರೀಮದ್ಭಾಗವತ ಸಂಹಿತೆಯನ್ನು ರಚಿಸಿದರು.

ಸೂತರು ಹೇಳುತ್ತಾರೆ. ವೇದವ್ಯಾಸದೇವರು ವೇದವಿಭಾಗ ಮಾಡಿ ಭಾರತ ಪುರಾಣಗಳನ್ನು ಬ್ರಹ್ಮಸೂತ್ರವನ್ನು ರಚಿಸಿ ಇನ್ನೂ ತೃಪ್ತಿ ಕಾಣದೇ ಕಲಿಕಾಲದಲ್ಲಿ ಅಜ್ಞಾನಿಗಳಾದ ಸಜ್ಜನರ ಉಪಕಾರಕ್ಕಾಗಿ ತಾನು ಇನ್ನೂ ಏನಾದರೂ ಗ್ರಂಥ ರಚಿಸಿಬೇಕೆ ? ಯಾವ ಗ್ರಂಥ ರಚಿಸಬೇಕು ಎಂಬ ಗೊಂದಲದಲ್ಲಿದ್ದವರಂತೆ ಚಿಂತಾಕ್ರಾಂತರಾಗಿ ಕುಳಿತರು. ಅಷ್ಟರಲ್ಲಿ ಅಲ್ಲಿಗೆ ನಾರದ ಋಷಿಗಳು ಬಂದರು.

ತಾವು ಮಹಾಭಾರತದಲ್ಲಿ ಭಗವಂತನ ಮಹಿಮೆ ಎಲ್ಲವನ್ನೂ ಹೇಳಿರುವಿರಿ ಆದರೂ ಗುಹ್ಯ-ದರ್ಶನ-ಸಮಾಧಿ ಭಾಷೆಗಳೆಂಬ ಭಾಷಾತ್ರಯ ಪರಿಜ್ಞಾನವಿಲ್ಲದ ಅಲ್ಪರಿಗೆ ಅದು ತಿಳಿಯಲಾರದು. ಸ್ಪಷ್ಟವಾದ ಸಮಾಧಿಭಾಷೆಯಿಂದ ಹೇಳುವ ಭಾಗವತವನ್ನು ರಚಿಸಬೇಕು. ಧರ್ಮ-ಅರ್ಥ-ಕಾಮಗಳನ್ನು ಮಹಾಭಾರತದಲ್ಲಿ ಬಹಳ ಹೇಳಿದ್ದೀರಿ. ಅದು ಸಾಕು. ಭಾಗವತ ಧರ್ಮವನ್ನೂ ಅಷ್ಟೇ ವಿಸ್ತಾರವಾಗಿ ಹೇಳಿದ್ದೀರಿ. ಆದರೆ ಅದು ಎಷ್ಟು ಹೇಳಿದರೂ ಕಡಿಮೆಯೇ. ಇನ್ನೂ ಹೇಳಬೇಕು. ಅದಕ್ಕಾಗಿ ಭಾಗವತ ರಚಿಸಿರಿ. ಎಂದು ನಾರದರು ಹೇಳಿಕೊಂಡರು.

ನಾನು ನಿಮಗೆ ಭಾಗವತವನ್ನು ಹೇಳುತ್ತೇನೆ ಎಂದು ಸೂತರು ಹೇಳಿದರು ಶೌನಕರು ಭಾಗವತ ಶ್ರವಣದಲ್ಲಿ ಶ್ರದ್ಧೆಯಿದೆ ಎಂದು ತಿಳಿಸಲು ವಿಶೇಷ ಪ್ರಶ್ನೆಯನ್ನು ಮಾಡಿದರು.

**ಇತಿ ಬ್ರುವಾಣಂ ಸಂಸ್ತೂಯ ಮುನೀನಾಂ ದೀರ್ಘಸತ್ರಿಣಾಮ್ ।**
**ವೃದ್ಧಃ ಕುಲಪತಿಃ ಸೂತಂ ಬಹ್ವೃಚಃ ಶೌನಕೋಽಬ್ರವೀತ್ ॥೧॥**

**ಇತಿ** ಈರೀತಿಯಾಗಿ **ಬ್ರುವಾಣಂ** ಹೇಳುತ್ತಿರುವ **ಸೂತಂ** ಸೂತರನ್ನು **ದೀರ್ಘಸತ್ರಿಣಾಂ** ಸಾವಿರ ವರ್ಷಪರ್ಯಂತ ಸತ್ರದಲ್ಲಿ ದೀಕ್ಷಿತರಾದ **ಮುನೀನಾಂ ಮಧ್ಯೇ** ಮುನಿಗಳಲ್ಲಿ **ವೃದ್ಧಃ** ಜ್ಞಾನವೃದ್ಧರು ವಯೋವೃದ್ಧರು ಆದ **ಕುಲಪತಿಃ** ಋಷಿ ಕುಲಾಚಾರ ರಕ್ಷಕರಾದ **ಬಹ್ವೃಚಃ** ಋಗ್ವೇದಿಗಳಾದ **ಶೌನಕಃ** ಶೌನಕರು **ಅಬ್ರವೀತ್** ಮಾತನಾಡಿದರು

ಈ ಎಲ್ಲ ವಿಶೇಷಣಗಳು ಶೌನಕರಿಗೆ ಪ್ರಶ್ನೆಮಾಡಲು ಕಾರಣವಾದ ಪ್ರಾಧಾನ್ಯವನ್ನು ಕೊಡುವವು.

**ಶೌನಕ ಉವಾಚ**

**ಸೂತಸೂತ ಮಹಾಭಾಗ ವದ ನೋ ವದತಾಂವರ ।**
**ಕಥಾಂ ಭಾಗವತೀಂ ಪುಣ್ಯಾಂ ಯಾಮಾಹ ಭಗವಾನ್ ಶುಕಃ ॥೨॥**

**ವದಾತಾಂ ವರ** ವಾಗ್ಮಿಗಳಲ್ಲಿ ಶ್ರೇಷ್ಠನಾದ **ಮಹಾಭಾಗ** ಮಹಾಭಕ್ತಿ ಎಂಬ ಭಾಗವುಳ್ಳವನೇ **ಸೂತ** ಸೂತನೇ (ಪುಣ್ಯಕರವಾದ ಕರ್ಮವಾಸನಾವುಳ್ಳ) **ಭಗವಾನ್** ಪೂಜ್ಯರಾದ **ಶುಕಃ** ಶುಕಾಚಾರ್ಯರು **ಯಾಂ** ಯಾವ **ಪುಣ್ಯಾಂ** ಪುಣ್ಯಜನಕವಾದ **ಭಾಗವತೀಂ ಕಥಾಂ** ಭಗವಂತನ ಕಥೆಯನ್ನು **ಆಹ** ಹೇಳಿದರೋ **ತಾಂ** ಅದನ್ನು **ನಃ** ನಮಗೆ **ವದ** ಹೇಳು.

**ಕಸ್ಮಿನ್ ಯುಗೇ ಪ್ರವೃತ್ತೇಯಂ ಸ್ಥಾನೇ ವಾ ಕೇನ ಹೇತುನಾ ।**
**ಕುತಃ ಸಂಚೋದಿತಃ ಕೃಷ್ಣಃ ಕೃತವಾನ್ ಸಂಹಿತಾಂ ಮುನಿಃ ॥೩॥**

**ಇಯಂ** ಕೃಷ್ಣಕಥೆಯು **ಕಸ್ಮಿನ್ ಯುಗೇ ಪ್ರವೃತ್ತಾ** ಯಾವ ಯುಗದಲ್ಲಿ ನಡೆಯಿತು **ಸ್ಥಾನೇ ವಾ** ಯಾವ ಸ್ಥಾನದಲ್ಲಿ **ಕೇನ ಹೇತುನಾ** ಯಾವ ಕಾರಣದಿಂದ ನಡೆಯಿತು **ಕುತಃ ಸಂಚೋದಿತಃ** ಯಾರಿಂದ ಪ್ರೇರಿತನಾಗಿ **ಮುನಿಃ ಕೃಷ್ಣಃ** ಸರ್ವಜ್ಞನಾದ

ಬಾದರಾಯಣನು **ಸಂಹಿತಾಂ** ಶ್ರೀಮದ್ಭಾಗವತ ಸಂಹಿತೆಯನ್ನು **ಕೃತವಾನ್** ಮಾಡಿದನು.

**ಶುಕಾಚಾರ್ಯರ ಮಹಿಮೆ**

ಸ ತು ಸಂಶ್ರಾವಯಾಮಾಸ ಎಂದು ಶುಕಾಚಾರ್ಯರು ಪರೀಕ್ಷಿತ ಮಹರಾಜನಿಗೆ ಭಾಗವತ ಉಪದೇಶ ಮಾಡಿದರು ಎಂದು ನೀವು ಹೇಳಿದುದು ಸರಿಕಾಣುವದಿಲ್ಲ ಶುಕಾಚಾರ್ಯರ ದರ್ಶನವೇ ಜನರಿಗೆ ದುರ್ಲಭವಾಗಿದೆ ಎಂಬ ಅಭಿಪ್ರಾಯದಿಂದ ಹೇಳುವರು -

**ತಸ್ಯ ಪುತ್ರೋ ಮಹಾಯೋಗೀ ಸಮದೃಕ್ ನಿರ್ವಿಕಲ್ಪಕಃ ।**
**ಏಕಾಂತಗತಿರುನ್ನಿದ್ರೋ ಗೂಢೋ ಮೂಢ ಇವೇಯತೇ ॥೪॥**

**ತಸ್ಯ** ವೇದವ್ಯಾಸರ **ಪುತ್ರಃ** ಶುಕಾಚಾರ್ಯರು **ಸಮದೃಕ್** ಎಲ್ಲ ದೇಶಕಾಲವಸ್ತುಗಳಲ್ಲಿ ಏಕಪ್ರಕಾರನಾದ ಸರ್ವಗುಣಪೂರ್ಣನಾದ ಬ್ರಹ್ಮನನ್ನು ಕಾಣುವ ಅಥವಾ ಲಕ್ಷ್ಮೀಸಹಿತನಾದ್ದರಿಂದ ಸಮನೆನಿಸುವ ಪರಮಾತ್ಮನನ್ನು ಕಾಣುವ **ನಿರ್ವಿಕಲ್ಪಕಃ** ಇದು ನನ್ನದು ಅದು ಅವನದು ಎಂಬ ಭೇದ ಬುದ್ಧಿಯಿಲ್ಲದೇ ಎಲ್ಲವೂ ಭಗವದಧೀನವೆಂದು ತಿಳಿದ **ಏಕಾಂತಗತಿಃ** ತಾರತಮ್ಯದ ಕೊನೆಗೆ ಮುಖ್ಯನಾಗಿ ಇರುವ ಪರಮಾತ್ಮನ ಜ್ಞಾನವುಳ್ಳವನು ಆದ್ದರಿಂದ **ಉನ್ನಿದ್ರಃ** ಅಜ್ಞಾನಾದಿ ದೋಷಗಳಿಲ್ಲದ **ಗೂಢಃ** ಅಪ್ರಕಟನಾದ (ಬೂದಿಮುಚ್ಚಿದ ಕೆಂಡದಂತಿರುವ) **ಮಹಾಯೋಗಿ** ಇತರರಿಂದ ಪೂಜ್ಯವಾದ ಭಕ್ತ್ಯಾದಿಯೋಗಗಳು ಅವುಗಳಿಂದ ಪೂರ್ಣರಾದ **ಮೂಢ ಇವ** ಅಜ್ಞರಂತೆ **ಈಯತೇ** ಜನರಿಂದ ತಿಳಿಯಲ್ಪಡುವರು.

*ಭಾಗವತತಾತ್ಪರ್ಯ -*

ಇಲ್ಲಿ ನಿರ್ವಿಕಲ್ಪಕ ಎಂದರೆ ಭೇದವಿಲ್ಲದ ಎಂದು ವಿಪರೀತಾರ್ಥ ಆಗುವದು. ಕಾರಣ ವ್ಯಾಖ್ಯಾನಿಸುವರು

**ನಿರ್ವಿಕಲ್ಪಕಃ ಮದೀಯ ತದೀಯಂ ಇತಿ ಭೇದಂ ಅಪಹಾಯ ಸರ್ವಂ ಈಶ್ವರಾಧೀನಂ ಇತಿ ವಿಜ್ಞಾಯ ಸ್ಥಿತಃ ।** (ನಿರ್ಗತಃ ವಿಕಲ್ಪಃ ಉಕ್ತರೂಪಾ ಭೇದಬುದ್ಧಿಃ ಯಸ್ಮಾತ್ ಸಃ ನಿರ್ವಿಕಲ್ಪಕಃ)

ಮೂಲದಲ್ಲಿ ಯೋಗಿ ಎಂದು ಅನುವಾದ ಮಾಡಿ ಸಮದೃಕ್ತ್ವಾದಿಗಳನ್ನು ಹೇಳಿದಂತೆ ತೋರುವದು. ಅದು ಸರಿಯಲ್ಲ ಸಮದೃಕ್ತ್ವಾದಿಗಳಿಗಿಂತ ಮೊದಲು

ಯೋಗವಿರಲು ಸಾಧ್ಯವಿಲ್ಲ. ಆದ್ದರಿಂದ ಸಮದೃಕ್ತ್ವಾನುವಾದ ಮಾಡಿ ಯೋಗಿತ್ವವನ್ನೇ ವಿಧಾನ ಮಾಡುವದು ಎಂಬ ಅಭಿಪ್ರಾಯದಿಂದ ಸಮಾಖ್ಯಾ ಪ್ರಮಾಣ ಹೇಳುವರು.

**ಸಾಮ್ಯಮೀಶ್ವರರೂಪೇಷು ಸರ್ವತ್ರ ತದಧೀನತಾಮ್ ।**
**ಪಶ್ಯತಿ ಜ್ಞಾನಸಂಪತ್ತ್ಯಾ ವಿನಿದ್ರೋ ಯಃ ಸ ಯೋಗವಿತ್ ॥ -ಇತಿ ಬ್ರಾಹ್ಮೇ**

ನಿರ್ವಿಕಲ್ಪಕ ಎಂದರೆ ಇದು ನನ್ನದು ಅದು ಅವನದು ಎಂಬ ಭೇದಬುದ್ಧಿಯನ್ನು ಬಿಟ್ಟು ಅಂದರೆ ಭಗವದಿತರ ಎಲ್ಲವೂ ಭಗವದಧೀನ ಎಂದು ದೃಢ ನಿಶ್ಚಯವುಳ್ಳವನು.

ಯಾವನು ಶ್ರೀಹರಿಯ ರೂಪಗಳಲ್ಲಿ ಸಾಮ್ಯವನ್ನೂ ಶ್ರೀಹರಿಯೇ ಸರ್ವಸ್ವತಂತ್ರನು ಎಂಬ ಜ್ಞಾನಸಂಪತ್ತಿನಿಂದ ಎಲ್ಲ ಜಗತ್ತು ಈಶ್ವರಾಧೀನವೆಂದು ತಿಳಿಯುವನೋ ಅಜ್ಞಾನಾದಿ ದೋಷರಹಿತನೋ ಅವನು ಭಕ್ತ್ಯಾದಿಯೋಗಪೂರ್ಣನು ಎನಿಸುತ್ತಾನೆ ಎಂದು ಬ್ರಾಹ್ಮ ಪುರಾಣದಲ್ಲಿದೆ.

**ಕಥಮಾಲಕ್ಷಿತಃ ಪೌರೈಃ ಸಂಪ್ರಾಪ್ತಃ ಕುರುಜಾಂಗಲಮ್ ।**
**ಉನ್ಮತ್ತಮೂಕಜಡವದ್ವಿಚರನ್ ಗಜಸಾಹ್ವಯೇ ॥೫॥**

**ಕುರುಜಾಂಗಲಂ** ಕುರು ಮತ್ತು ಜಾಂಗಲ ಎಂಬ ದೇಶಗಳಿಗೆ **ಸಂಪ್ರಾಪ್ತಃ** ಬಂದು **ಗಜಸಾಹ್ವಯೇ** ಆನೆಗೆ ಸಮಾನವಾದ ಹೆಸರುಳ್ಳ ಹಸ್ತಿ ಎಂಬ ಪಟ್ಟಣದಲ್ಲಿ **ಉನ್ಮತ್ತ ಮೂಕಜಡವತ್** ಕೆಲವು ಕಡೆ ಹುಚ್ಚನಂತೆ ಕೆಲವು ಕಡೆ ಮೂಕನಂತೆ ಕೆಲವು ಕಡೆ ದಡ್ಡನಂತೆ **ವಿಚರನ್** ಸಂಚರಿಸುತ್ತಾ **ಪೌರೈಃ** ಪಟ್ಟಣಿಗರಿಂದ **ಕಥಂ ಆಲಕ್ಷಿತಃ** ಶುಕಾಚಾರ್ಯರೆಂದು ಹೇಗೆ ತಿಳಿಯಲ್ಪಟ್ಟನು.

**ವಿಶೇಷ :-** ಊರಲ್ಲಿ ತಿರುಗಾಡುವ ಜನರಿಗೆ ಇವರ ಜ್ಞಾನ ದುರ್ಲಭ ಅಂದ ಮೇಲೆ ಅಂತಃಪುರ ವಾಸಿಯಾದ ರಾಜರು ಇವರನ್ನು ಹೇಗೆ ತಾನೇ ತಿಳಿದಾರು ಎಂದು ಭಾವ. ಹಸ್ತಿ ಎಂಬ ರಾಜನು ಈ ಊರನ್ನು ನಿರ್ಮಿಸಿ ತನ್ನ ಹೆಸರಿಟ್ಟನು. ಕಾರಣ ಹಸ್ತಿನಾಪುರವೆಂದಾಯಿತು.

**ಕಥಂ ವಾ ಪಾಂಡವೇಯಸ್ಯ ರಾಜರ್ಷೇರ್ಮುನಿನಾ ಸಹ ।**
**ಸಂವಾದಃ ಸಮಭೂತ್ತತ ಯತ್ರೈಷಾ ಸಾತ್ವತೀಶ್ರುತಿಃ ॥೬॥**

**ಪಾಂಡವೇಯಸ್ಯ** ಪಾಂಡವರ ಮೊಮ್ಮಗನಾದ **ರಾಜರ್ಷೇ** ರಾಜಋಷಿಯಾದ ಪರೀಕ್ಷಿತನಿಗೆ **ಮುನಿನಾ ಸಹ** ಶುಕಮುನಿಗಳೊಡನೆ **ಯತ್ರ** ಯಾವ ಸಂವಾದದಲ್ಲಿ

**ಏಷಾ ಸಾತ್ವತೀಶ್ರುತಿಃ** ಪರಮಾತ್ಮನ ಸಂಹಿತೆಯು ಪ್ರವೃತ್ತವಾಯಿತೋ ಅಂಥಹ **ಸಂವಾದಃ** ಸಂಭಾಷಣೆಯು **ಕಥಂ ವಾ ಸಮಭೂತ್** ಹೇಗೆ ನಡೆಯಲು ಸಾಧ್ಯ.

ವಿಶೇಷ ಃ- ದರ್ಶನವೇ ದುರ್ಲಭ ಎಂದಾದಾಗ ಮಾತು ದೂರವೆಂದೇನು ಹೇಳುವದು. ಎಂದು ಭಾವ.

ಪುರಾಣ ಹೇಳುವದಿರಲಿ ಒಂದೆಡೆ ನಿಲ್ಲುವದೇ ಅಸಾಧ್ಯ ಎಂದು ಹೇಳುವರು.

**ಸ ಗೋದೋಹನಮಾತ್ರಂ ಗೃಹೇಷು ಗೃಹಮೇಧಿನಾಮ್ ।**
**ಅವೇಕ್ಷತೇ ಮಹಾಭಾಗಸ್ತೀರ್ಥೀಕುರ್ವಂಸ್ತದಾಶ್ರಯಮ್ ॥೭॥**

**ಸಃ** ಶುಕಾಚಾರ್ಯರು **ಗೃಹಮೇಧಿನಾಂ** ಗೃಹಸ್ಥಾಶ್ರಮೋಚಿತ ಯಜ್ಞಾದಿಗಳನ್ನು ಮಾಡುವವರ **ಗೃಹೇಷು** ಮನೆಗಳಲ್ಲಿ **ತದಾಶ್ರಮಂ** ಅವರ ಮನೆಯನ್ನು **ತೀರ್ಥೀಕುರ್ವನ್** ತನ್ನ ಇರುವಿಕೆಯಿಂದ ಪವಿತ್ರಗೊಳಿಸುತ್ತಾ **ಮಹಾಭಾಗಃ** ಭಾಗ್ಯಶಾಲಿಗಳು **ಗೋದೋಹನಮಾತ್ರಂ ಅವೇಕ್ಷತೇ** ಅಲ್ಪ ಕಾಲ ಮಾತ್ರ (ಹಾಲು ಕರೆಯುವಾಗ ಆಕಳ ಕೆಚ್ಚಲಿನಿಂದ ಪಾತ್ರೆಗೆ ಬೀಳುವಷ್ಟು ಕಾಲ)ಭಿಕ್ಷೆ ತರುವವರ ಪ್ರತೀಕ್ಷೆಮಾಡುವವರು. ನಂತರ ಮುಂದೆ ಹೋಗುವರು. ಅಂದ ಮೇಲೆ ಇಂಥವರಿಂದ ಪುರಾಣ ಕೇಳಿದನೆಂಬುದು ಅಸಂಭಾವಿತವೆಂದು ಭಾವ.

ಇದುವರೆಗೆ ಹೇಳುವ ಶುಕಾಚಾರ್ಯರಿಗೆ ಪುರಾಣ ಹೇಳುವದು ಅಸಂಭಾವಿತವೆಂದು ಹೇಳಿ ಕೇಳುವ ಪರೀಕ್ಷಿತನು ಪ್ರಾಯೋಪವೇಶ ಮಾಡಿದನೆಂದು ಹೇಳಿದರಷ್ಟೇ ಅದಕ್ಕೇನು ಕಾರಣ ಎಂದು ಕೇಳಲು ಮೊದಲಿಗೆ ಪರೀಕ್ಷಿತನ ಕಥಾಶ್ರವಣಕ್ಕೆ ಆವಶ್ಯಕತ್ವವನ್ನು ಉಪಪಾದಿಸಿ ಅವನ ಕಥೆ ಹೇಳೆಂದು ಕೇಳುವರು -

**ಅಭಿಮನ್ಯುಸುತಂ ಸೂತ ಪ್ರಾಹುರ್ಭಾಗವತೋತ್ತಮಮ್ ।**
**ತಸ್ಯ ಜನ್ಮ ಮಹಾಶ್ಚರ್ಯಂ ಕರ್ಮಾಣಿ ಚ ಗೃಣೀಹಿ ನಃ ॥೮॥**

**ಹೇ ಸೂತ** ಸೂತನೇ **ಯಸ್ಮಾತ್** ಯಾವ ಕಾರಣ **ಅಭಿಮನ್ಯುಸುತಂ** ಅಭಿಮನ್ಯುವಿನ ಮಗನಾದ ಪರೀಕ್ಷಿತನನ್ನು **ಭಾಗವತೋತ್ತಮಂ** ಭಗವದ್ಭಕ್ತರಲ್ಲಿ ಶ್ರೇಷ್ಠನೆಂದು **ಪ್ರಾಹುಃ** ಜ್ಞಾನಿಗಳು ಹೇಳುವರು **ತಸ್ಮಾತ್** ಆದ್ದರಿಂದ **ತಸ್ಯ** ಅವನ **ಆಶ್ಚರ್ಯಂ ಜನ್ಮ** ಜನನ ಕಾಲದಲ್ಲಿ ಬ್ರಹ್ಮಾಸ್ತ್ರದಿಂದ ಹತನಾದರೂ ಹರಿಯಿಂದ ಬದುಕಿಸಲ್ಪಟ್ಟದ್ದರಿಂದ ಆಶ್ಚರ್ಯಕರವಾದ ಜನನವನ್ನೂ **ಕರ್ಮಾಣಿ ಚ** ಅವನು ಮಾಡಿದ ಕಲಿ ಬಂಧನ ಮುಂತಾದ ಕಾರ್ಯಗಳನ್ನೂ **ನಃ** ನಮಗೆ **ಗೃಣೀಹಿ** ಹೇಳು.

**ಸ ಸಮ್ರಾಟ್ ಕಸ್ಯ ವಾ ಹೇತೋ ಪಾಂಡೂನಾಂ ಮಾನವರ್ಧನಃ ।**
**ಪ್ರಾಯೋಪವಿಷ್ಟೋ ಗಂಗಾಯಾಮನಾದೃತ್ಯಾಧಿರಾಟ್ ಶ್ರಿಯಮ್ ॥೯॥**

**ಪಾಂಡೂನಾಂ** ಪಾಂಡವರ **ಮಾನವರ್ಧನಃ** ಮರ್ಯಾದೆಯನ್ನು ಹೆಚ್ಚಿಸುವ **ಸಾಮ್ರಾಟ್** ಚಕ್ರವರ್ತಿಯಾದ **ಸಃ** ಪರೀಕ್ಷಿತನು **ಅಧಿರಾಟ್‌ಶ್ರಿಯಂ** ಚಕ್ರವರ್ತಿಗಳ ಸಂಪತ್ತನ್ನು **ಅನಾದೃತ್ಯ** ಧಿಕ್ಕರಿಸಿ **ಗಂಗಾಯಾಂ** ಗಂಗಾತೀರದಲ್ಲಿ **ಕಸ್ಯ ವಾ ಹೇತೋಃ** ಯಾವಕಾರಣದಿಂದ **ಪ್ರಾಯೋಪವಿಷ್ಟಃ** ಮರಣಾಂತ ಉಪವಾಸ ಸ್ವೀಕರಿಸಿದನು.

ಚಕ್ರವರ್ತಿಯ ಸಂಪತ್ತನ್ನೇ ತೋರಿಸುತ್ತ ಪ್ರಾಯೋಪವೇಶ ಕಾರಣವನ್ನೇ ಪ್ರಶ್ನಿಸುವರು.

**ನಮಂತಿ ಯತ್ಪಾದನಿಕೇತಮಾತ್ಮನಃ**
**ಶಿವಾಯ ಚಾನೀಯ ಧನಾನಿ ಶತ್ರವಃ ।**
**ಕಥಂ ಸ ಧೀರಃ ಶ್ರಿಯಮಂಗದುಸ್ತ್ಯಜಾ-**
**ಮಿಯೇಷ ಚೊತ್ಸ್ರಷ್ಟುಮಹೋ ಸಹಾಸುಭಿಃ ॥೧೦॥**

**ಹೇ ಅಂಗ** ಸೂತರೇ **ಆತ್ಮನಃ ಶಿವಾಯ** ತಮ್ಮ ಸುಖಕ್ಕಾಗಿ (ಕಲ್ಯಾಣಕ್ಕಾಗಿ) **ಶತ್ರವಃ** ಶತ್ರುರಾಜರು **ಯತ್ಪಾದನಿಕೇತಂ** ಯಾವನ ಪಾದಪೀಠವನ್ನು **ನಮಂತಿ** ನಮಸ್ಕರಿಸುವರೋ **ಧನಾನಿ ಆನೀಯ** ಕರಗಳನ್ನು ತಂದಿಟ್ಟು **ಸಃ ಧೀರಃ** ಅಂಥ ಪರೀಕ್ಷಿತನು **ದುಸ್ತ್ಯಜಾಂ** ಅನ್ಯರಿಂದ ಬಿಡಲಾಗದ **ಶ್ರಿಯಂ** ರಾಜ್ಯಸಂಪತ್ತನ್ನು **ಅಸುಭಿಃ ಸಹ** ಪ್ರಾಣಗಳೊಡನೆ **ಉತ್ಸ್ರಷ್ಟುಂ** ಬಿಡಲು **ಕಥಂ ಇಯೇಷ** ಇಚ್ಛಿಸಿದನು **ಅಹೋ** ಆಶ್ಚರ್ಯವು. ಇಂಥ ಸಂಪತ್ತನ್ನು ಬಿಡಲು ಮಹತ್ತರ ಕಾರಣವಿರಬೇಕು ಅದು ಯಾವುದು ಎಂದು ಭಾವ.

ಶ್ರೀಹರಿಯಲ್ಲಿ ಅತಿಶಯಸ್ನೇಹದಿಂದ ವಿಷಯಗಳನ್ನು ತಿರಸ್ಕರಿಸಿದವರಿಗೆ ಸಂಪತ್ತಿನಿಂದೇನು ಪ್ರಯೋಜನ ಎಂದರೆ ಹೇಳುವರು.

**ಶಿವಾಯ ಲೋಕಸ್ಯ ಭವಾಯ ಭೂತಯೇ**
**ಯ ಉತ್ತಮ ಶ್ಲೋಕಪರಾಯಣಾ ಜನಾಃ ।**
**ಸೇವಂತಿ ನಾತ್ಮಾರ್ಥಮಸೌ ಪರಾಂ ಶ್ರಿಯಂ**
**ಮುಮೋಚ ನಿರ್ವಿದ್ಯ ಕುತಃ ಕಲೇವರಮ್ ॥೧೧॥**

**ಯೇ** ಯಾರು **ಉತ್ತಮಶ್ಲೋಕಪರಾಯಣಾಃ ಜನಾಃ** ಹರಿಯೇ ಮುಖ್ಯಾಶ್ರಯವಾಗಿವುಳ್ಳ ಜನರು (ಹರಿಭಕ್ತರು) **ಲೋಕಸ್ಯ** ಜನರ **ಶಿವಾಯ** ಕಲ್ಯಾಣಕ್ಕಾಗಿ **ಭವಾಯ** ಸಮೃದ್ಧಿಗಾಗಿ **ಭೂತಯೇ** ಐಶ್ವರ್ಯಕ್ಕಾಗಿ **ಜೀವಂತಿ** ಜೀವಿಸುವರು **ನ ಆತ್ಮಾರ್ಥಂ** ತಮಗಾಗಿ ಅಲ್ಲ **ಅಸೌ** ಪರೀಕ್ಷಿತನು **ಪರಾಂ ಶ್ರಿಯಂ** ಪರೋಪಕಾರಕ್ಕಾಗಿರುವ ಸಂಪತ್ತನ್ನು **ಕಲೇವರಂ** ದೇಹವನ್ನೂ **ನಿರ್ವಿದ್ಯ** ಅತಿವಿರಕ್ತನಾದರೂ **ಕುತಃ ಮುಮೋಚ** ಏಕೆ ಬಿಟ್ಟನು. ತಾನು ವಿರಕ್ತನಾದರೂ ಪರೋಪಕಾರಕ್ಕಾಗಿ ತನ್ನ ರಾಜ್ಯದಲ್ಲಿ ಇರಬೇಕಿತ್ತು ಎಂದು ಭಾವ.

**ತತ್ಸರ್ವಂ ನಃ ಸಮಾಚಕ್ಷ್ವ ಪೃಷ್ಟೋ ಯದಿಹ ಕಶ್ಚನ ।**
**ಮನ್ಯೇ ತ್ವಾಂ ವಿಷಯೇ ವಾಚಾಂ ಸ್ನಾತಮನ್ಯತ್ರ ಛಾಂದಸಾತ್ ॥೧೨॥**

**ಯತ್** ಯಾವ ಕಾರಣ **ತ್ವಾಂ** ನಿನ್ನನ್ನು **ಛಾಂದಸಾತ್ ಅನ್ಯತ್ರ** ವೇದವನ್ನು ಬಿಟ್ಟು **ವಾಚಾಂ ವಿಷಯೇ** ಪುರಾಣಾದಿಗಳಲ್ಲಿ **ಸ್ನಾತಂ ಮನ್ಯೇ** ಪಾರಂಗತನೆಂದು ತಿಳಿದಿರುವೆನು **ತತ್** ಆದ್ದರಿಂದ **ಇಹ** ಈಗ ಅಥವಾ ಪ್ರಶ್ನೆಗಳಲ್ಲಿ **ಯತ್ ಕಿಂಚನ ಪೃಷ್ಟಃ** ಏನೆಲ್ಲ ಕೇಳಲ್ಪಟ್ಟಿರುವಿಯೋ **ತತ್ಸರ್ವಂ** ಅದೆಲ್ಲವನ್ನು **ನಃ** ನಮಗೆ **ಸಮಾಚಕ್ಷ್ವ** ಹೇಳು.

**ವಿಶೇಷ-** ಸೂತರು ತ್ರೈವರ್ಣಿಕರಲ್ಲವಾದ್ದರಿಂದ ವೇದಗಳನ್ನು ಬಿಟ್ಟು ಎಂದಿರುವರು.

ಯಾವ ಯುಗದಲ್ಲಿ ಭಾಗವತ ನಿರ್ಮಾಣವೆಂಬ ಪ್ರಶ್ನೆಗೆ ಉತ್ತರಿಸುವರು-

**ಸೂತ ಉವಾಚ-**

**ದ್ವಾಪರೇ ಸಮನುಪ್ರಾಪ್ತೇ ತೃತೀಯೇ ಯುಗಪರ್ಯಯೇ ।**
**ಜಾತಃ ಪರಾಶರಾದ್ಯೋಗಿ ವಾಸವ್ಯಾಂ ಕಲಯಾ ಹರೇಃ ॥೧೩॥**

**ತೃತೀಯೇ ದ್ವಾಪರೇ** ಮೂರನೆಯದಾದ ದ್ವಾಪರ **ಯುಗಪರ್ಯಯೇ** ಯುಗದ ಪರ್ಯವಸಾನವು **ಪ್ರಾಪ್ತೇ ಸತಿ** ಬರುತ್ತಿರಲು(ದ್ವಾಪರ ಯುಗದ ಕೊನೆ ಭಾಗದಲ್ಲಿ) **ವಾಸವ್ಯಾಂ** ಉಪರಿಚರವಸುವಿನ ವೀರ್ಯದಿಂದ ಜನಿಸಿದ ಸತ್ಯವತಿಯಲ್ಲಿ **ಪರಾಶರಾತ್** ಹಿಂಸೆಯನ್ನು ತೊರೆದ ಪರಾಶರಮುನಿಯಿಂದ **ಯೋಗಿ** ನಿತ್ಯಜ್ಞಾನಿಯಾದ ವ್ಯಾಸರು **ಹರೇಃ ಕಲಯಾ** ಪರಮಾತ್ಮನ ಸ್ವರೂಪಾಂಶದಿಂದ **ಜಾತಃ** ಅವತರಿಸಿದರು. (ಈಗ ಭಾಗವತ ಪ್ರವೃತ್ತಿ ಎಂದು ಭಾವ.)

**ವೇದವ್ಯಾಸದೇವರ ಏಕಾಂತತೆ**

**ಸ ಕದಾಚಿತ್ ಸರಸ್ವತ್ಯಾ ಉಪಸ್ಪೃಶ್ಯ ಜಲಂ ಶುಚಿಃ ।**
**ವಿವಿಕ್ತ ಏಕ ಆಸೀನ ಉದಿತೇ ರವಿಮಂಡಲೇ ॥೧೪॥**

**ಸಃ** ವೇದವ್ಯಾಸದೇವರು **ಕದಾಚಿತ್** ಒಂದು ಸಲ **ರವಿಮಂಡಲೇ ಉದಿತೇ** ಸೂರ್ಯೋದಯ ಕಾಲದಲ್ಲಿ **ಸರಸ್ವತ್ಯಾಃ ಜಲಂ ಉಪಸ್ಪೃಶ್ಯ** ಸರಸ್ವತಿನದಿಯ ನೀರಲ್ಲಿ ಸ್ನಾನಾದಿಗಳನ್ನು ಮಾಡಿ **ಶುಚಿಃ** ಶುದ್ಧರಾದವರಾಗಿ **ವಿವಕ್ತೇ** ಜನರಹಿತವಾದ ಪ್ರದೇಶದಲ್ಲಿ **ಏಕಃ** ಒಬ್ಬರೇ **ಆಸೀನಃ** ಕುಳಿತಿದ್ದರು.

**ಪರಾವರಜ್ಞಃ ಸ ಋಷಿಃ ಕಾಲೇನಾವ್ಯಕ್ತರಂಹಸಾ ।**
**ಯುಗಧರ್ಮವ್ಯತಿಕರಂ ಪ್ರಾಪ್ತಂ ಭುವಿ ಯುಗೇ ಯುಗೇ ॥೧೫॥**

**ಪರಾವರಜ್ಞಃ** ತ್ರಿಕಾಲಜ್ಞಾನಿಯಾದ ಪರಾವರತತ್ತ್ವಜ್ಞನಾದ **ಸಃ ಋಷಿಃ** ಸರ್ವತಃ ಸಾರನಾದ ಸರ್ವೋತ್ತಮನಾದ ಋಷಿಕುಲದಲ್ಲಿ ಅವತರಿಸಿದ ವ್ಯಾಸರು **ಅವ್ಯಕ್ತರಂಹಸಾ** ಕಾಣದಿರುವ ವೇಗವುಳ್ಳ **ಕಾಲೇ** ಕಾಲಬಲದಿಂದ **ಭುವಿ** ಭೂಮಿಯಲ್ಲಿ **ಯುಗೇ ಯುಗೇ** ಪ್ರತಿಯೊಂದು ಯುಗದಲ್ಲಿ **ಪ್ರಾಪ್ತಂ** ಉಂಟಾದ **ಯುಗಧರ್ಮವ್ಯತಿಕರಂ** ಯುಗಧರ್ಮದ ಸಾಂಕರ್ಯವನ್ನು

**ಭೌತಿಕಾನಾಂ ಚ ಭಾವಾನಾಂ ಶಕ್ತಿಹ್ರಾಸಂ ಚ ತತ್ಕೃತಮ್ ।**
**ಅಶ್ರದ್ದಧಾನಾನ್ನಿಃಸತ್ವಾನ್ ದುರ್ಮೇಧಾನ್ ಹ್ರಸಿತಾಯುಷಃ ॥೧೬॥**

**ತತ್ಕೃತಂ** ಕಾಲಕೃತವಾದ **ಭೌತಿಕಾನಾಂ ಭಾವಾನಾಂ** ಭೂತಕಾರ್ಯಗಳಾದ ಶರೀರಾದಿ ಪದಾರ್ಥಗಳು **ಶಕ್ತಿಹ್ರಾಸಂ** ಶಕ್ತಿ ಕಡಿಮೆಯಾದುದನ್ನು ಆದ್ದರಿಂದಲೇ **ಅಶ್ರದ್ಧಧಾನಾನ್** ಆಸ್ತಿಕ್ಯ ಬುದ್ಧಿಯಿಲ್ಲದಿರುವ **ನಿಃಸತ್ವಾನ್** ಉತ್ಸಾಹವಿಲ್ಲದ ಸಜ್ಜನಿಕೆ ಇಲ್ಲದಿರುವ **ದುರ್ಮೇಧಾನ್** ಧಾರಣಾಶಕ್ತಿಯಿಲ್ಲದಿರುವ **ಹ್ರಸಿತಾಯುಷಃ** ಅಲ್ಪಾಯುಷ್ಯಿಗಳಾದ

**ದುರ್ಭಗಾಂಶ್ಚ ಜನಾನ್ ವೀಕ್ಷ್ಯ ಮುನಿರ್ದಿವ್ಯೇನ ಚಕ್ಷುಷಾ ।**
**ಸರ್ವವರ್ಣಾಶ್ರಮಾಣಾಂ ಯದ್ದಧ್ಯೌ ಚಿರಮಮೋಘದೃಕ್ ॥೧೭॥**

**ದುರ್ಭಗಾನ್** ದುಷ್ಟ ಭಾಗ್ಯವುಳ್ಳ **ಜನಾನ್** ಜನರನ್ನು **ವೀಕ್ಷ್ಯ** ನೋಡಿ **ಅಮೋಘದೃಕ್** ವ್ಯರ್ಥವಾಗದೇ ಇರುವ ಜ್ಞಾನದೃಷ್ಟಿಯುಳ್ಳ **ಮುನಿಃ** ಮುನಿಗಳಾದ

ವೇದವ್ಯಾಸದೇವರು **ದಿವ್ಯೇನ ಚಕ್ಷುಷಾ** ಜ್ಞಾನದೃಷ್ಟಿಯಿಂದ **ಸರ್ವವರ್ಣಾಶ್ರಮಾಣಾಂ** ಎಲ್ಲ ವರ್ಣದವರಿಗೂ ಎಲ್ಲ ಆಶ್ರಮದವರನ್ನೂ **ಚಿರಂ ದಧ್ಯೌ** ವಿಚಾರ ಮಾಡಿದರು.

*ಭಾಗವತತಾತ್ಪರ್ಯ -*

ಇಲ್ಲಿ ನಿತ್ಯಜ್ಞಾನರಾದ ವೇದವ್ಯಾಸದೇವರಿಗೆ ತಾತ್ಕಾಲಿಕಜ್ಞಾನದೃಷ್ಟಿಯಿಂದ ಚಿಂತನಮಾಡುವದು ಬಾಧಿತವು. ಆದ್ದರಿಂದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು.

ನಿತ್ಯ ಜ್ಞಾನಸ್ಯ ಚಿದ್ದೃಷ್ಟಿರ್ಲೋಕದೃಷ್ಟ್ಯಪೇಕ್ಷಯಾ ।
ಸರ್ವಜ್ಞೋಽಪ್ಯಜ್ಞವದ್ದೇವಃ ಸರ್ವಶಕ್ತಿರಶಕ್ತವತ್ ॥
**ಪ್ರತ್ಯಾಪಯತಿ ಲೋಕಾನಾಮಜ್ಞಾನಾಂ ಮೋಹನಾಯ ಚ ॥ -ಇತಿ ಕೌರ್ಮೇ**

ನಿತ್ಯಜ್ಞಾನವುಳ್ಳ ವ್ಯಾಸಾದಿರೂಪಿ ಶ್ರೀಹರಿಯು ತತ್ಕಾಲದಲ್ಲಿ ತಿಳಿದರು ಎಂದು ಹೇಳುವದು ಲೋಕದೃಷ್ಟಿಯಿಂದ ಮಾತ್ರ. ಶ್ರೀಹರಿಯು ಸರ್ವಜ್ಞನಾದರೂ ಅಜ್ಞನಂತೆ, ಸರ್ವಶಕ್ತಿಯುಳ್ಳವನಾದರೂ ಅಶಕ್ತನಂತೆ, ಅಜ್ಞರನ್ನು ಮೋಹಿಸುವದಕ್ಕಾಗಿ ಸಜ್ಜನರ ಹೆಚ್ಚಿನ ಪುಣ್ಯ ಕಡಿಮೆ ಮಾಡುವದಕ್ಕಾಗಿಯೂ ತೋರಿಸುವನು. ವಸ್ತುತಃ ಅವನಿಗೆ ಅಜ್ಞಾನಾದಿಗಳಿಲ್ಲ ಎಂದು ಕೂರ್ಮ ಪುರಾಣದಲ್ಲಿದೆ.

ಯಾವ ಹಿತವನ್ನು ನೋಡಿದನೆಂಬುದನ್ನೇ ಹೇಳುವರು -

**ಚಾತುರ್ಹೋತ್ರಂ ಕರ್ಮ ಶುದ್ಧಂ ಪ್ರಜಾನಾಂ ವೀಕ್ಷ್ಯ ವೈದಿಕಮ್ ।**
**ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥೧೮॥**

**ವೈದಿಕಂ** ಮೂಲವೇದದಲ್ಲಿ ಹೇಳಿದ **ಚಾತುರ್ಹೋತ್ರಂ**(ಹೋತೃಪದವು ಋತ್ವಿಗುಪಲಕ್ಷಣವು) ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬ ನಾಲ್ಕು ಋತ್ವಿಗ್‌ಗಳಿಂದ ಅನುಷ್ಠೇಯವಾದ **ಶುದ್ಧಂ** ಎಲ್ಲ ಅಂಗಗಳಿಂದ ಕೂಡಿದ **ಕರ್ಮ** ಅಗ್ನಿಷ್ಟೋಮಾದಿಕರ್ಮಗಳು ಪ್ರಜೆಗಳಿಂದ ಮಾಡಲು ಅಶಕ್ಯವೆಂದು **ವೀಕ್ಷ್ಯ** ತಿಳಿದು **ಯಜ್ಞಸಂತತ್ಯೈ** ಯಜ್ಞಪರಂಪರೆಯನ್ನು ಮುಂದುವರೆಸಲು **ಏಕಂ ವೇದಂ** ಒಂದಾಗಿ ತಿಳಿಯುವ ವೇದವನ್ನು **ಚತುರ್ವಿಧಂ ವ್ಯದಧಾತ್** ನಾಲ್ಕು ರೀತಿ ವಿಭಾಗ ಮಾಡಿದನು.

**ವಿಶೇಷ :-** ಉಪವೇದವನ್ನು ತದುಕ್ತಕರ್ಮಗಳನ್ನು 'ಶಾಖಾಭೇದಂ ಕರ್ಮಭೇದಂ ವ್ಯಾಸಸ್ತಸ್ಮಾದಚೀಕ್ಲೃಪತ್' ಎಂದಿದೆ.

ವೇದವಿಭಾಗ ತಿಳಿಸಿದರೆ ಆದರಲ್ಲಿ ಹೇಳಿದ ಕರ್ಮವಿಭಾಗ ತಿಳಿಯುವರು. ವೇದದ ಚಾತುರ್ವಿಧ್ಯ ತಿಳಿಸುವರು.

**ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।**
**ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥೧೯॥**

**ಋಗ್ಯಜುಸ್ಸಾಮಾಥರ್ವಾಖ್ಯಾಃ ಚತ್ವಾರಃ ವೇದಾಃ** ಋಗ್ವೇದಾದಿ ನಾಲ್ಕು ವೇದಗಳು ಉಪವೇದಗಳು **ಉದ್ಧೃತಾಃ** ಪ್ರತ್ಯೇಕಿಸಿ ತೋರಿಸಿಲ್ಪಟ್ಟು ಅವುಗಳ ಅರ್ಥನಿರ್ಣಯಕ್ಕೆ ಮಾಡಿದ **ಇತಿಹಾಸಪುರಾಣಂ** ಇತಿಹಾಸ ಪುರಾಣವು **ಪಂಚಮೋ ವೇದಃ** ಪಂಚಮವೇದವೆಂದು **ಉಚ್ಯತೇ** ಹೇಳಲ್ಪಡುವದು.

ಋಗ್ವೇದಾದಿಪ್ರವರ್ತಕರಾದ ವ್ಯಾಸಶಿಷ್ಯರನ್ನು ತಿಳಿಸುವರು-

**ತತ್ರ ಋಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।**
**ವೈಶಂಪಾಯನ ಏವೈಕೋ ನಿಷ್ಣಾತೋ ಯಜಷಾಂ ತತಃ ॥೨೦॥**

**ತತ್ರ** ಆ ನಾಲ್ಕು ವೇದಗಳ ಮಧ್ಯದಲ್ಲಿ **ಋಗ್ವೇದಧರಃ** ಋಗ್ವೇದ ಪ್ರವರ್ತಕನು **ಪೈಲಃ** ಪೈಲ ಎಂಬ ಶಿಷ್ಯನು. **ಸಾಮಗಃ** ಸಾಮವೇದಪ್ರವರ್ತಕನು **ಕವಿಃ** ಜ್ಞಾನಿಯಾದ **ಜೈಮಿನಿಃ** ಜೈಮಿನಿಯು **ವೈಶಂಪಾಯನಃ ಏವ** ವೈಶಂಪಾಯನನೇ **ಏಕಃ** ಮುಖ್ಯವಾಗಿ **ಯಜುಷಾಂ ನಿಷ್ಣಾತಃ** ಯಜುರ್ವೇದ ಪಾರಂಗತನು **ತತಃ** ನಂತರ ಸೂರ್ಯಾದಿಗಳೂ ನಿಷ್ಣಾತರು.

**ಅಥರ್ವಾಂಗೀರಸಾಮಾಸೀತ್ ಸುಮಂತುರ್ವಾರುಣೋ ಮುನಿಃ ।**
**ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥೨೧॥**

**ವಾರುಣಃ** ವರುಣಪುತ್ರನಾದ **ಸುಮಂತುಃ ನಾಮ ಮುನಿಃ** ಸುಮಂತು ಎಂಬ ಋಷಿಯು **ಅಥರ್ವಾಂಗೀರಸಾಂ ಆಸೀತ್** ಅಥರ್ವವೇದ ಪ್ರವರ್ತಕನಾಗಿದ್ದನು. **ಇತಿಹಾಸಪುರಾಣಾನಾಂ** ಇತಿಹಾಸ ಪುರಾಣಗಳಿಗೆ **ಮೇ ಪಿತಾ** ನನ್ನ ತಂದೆಯಾದ **ರೋಮಹರ್ಷಣಃ** ರೋಮಹರ್ಷಣನು ಪ್ರವತರ್ಕನು.

**ತ ಏವ ಋಷಯೋ ವೇದಂ ಸ್ವಂ ಸ್ವಂ ವ್ಯಸ್ಯನ್ನನೇಕಧಾ ।**
**ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈರ್ವೇದಾಸ್ತೇ ಶಾಖಿನೋಽಭವತ್ ॥೨೨॥**

**ತೇ ಏವ ಋಷಯಃ** ಪೈಲಾದಿಋಷಿಗಳು **ಸ್ವಂ ಸ್ವಂ ವೇದಂ** ತಮ್ಮ ತಮ್ಮ ವೇದವನ್ನು **ಅನೇಕಧಾ ವ್ಯಸ್ಯನ್** ಬಹು ಶಾಖೆಗಳನ್ನಾಗಿ ವಿಭಜಿಸಿದರು. **ಶಿಷ್ಯಪ್ರಶಿಷ್ಯೈಃ** ಪೈಲಾದಿಗಳ ಶಿಷ್ಯರು ಅವರ ಶಿಷ್ಯರುಗಳಿಂದ **ತಚ್ಛಿಷ್ಯೈಃ** ಅವರ ಶಿಷ್ಯರ ಶಿಷ್ಯರಿಂದಲೂ **ವಿಭಕ್ತಾಃ** ವಿಭಾಗಿಸಲ್ಪಟ್ಟ **ವೇದಾಃ** ವೇದಗಳು **ಶಾಖಿನಃ ಅಭವನ್** ಆ ಶಿಷ್ಯರ ಹೆಸರಿನ ಶಾಖಾಗಳಾದವು.

**ತ ಏವ ವಾದಾ ದುರ್ಮೇಧೈರ್ಧಾರ್ಯಂತೇ ಪುರುಷೈರ್ಯಥಾ ।**
**ಏವಂ ಚಕಾರ ಭಗವಾನ್ ವ್ಯಾಸಃ ಕೃಪಣವತ್ಸಲಃ ॥೨೩॥**

**ಕೃಪಣವತ್ಸಲಃ** ದೀನದಯಾಲು ಆದ **ಭಗವಾನ್ ವ್ಯಾಸಃ** ಐಶ್ವರ್ಯಶಾಲಿಯಾದ ಬಾದರಾಯಣರು **ದುರ್ಮೇಧೈಃ** ಅಲ್ಪಜ್ಞಾನವುಳ್ಳ **ಪುರುಷೈಃ** ಜನರಿಂದ **ತೇ ವೇದಾಃ ಏವ** ಆ ವೇದಗಳೇ **ಯಥಾ ಧಾರ್ಯಂತೇ** ಕಲಿಯಲ್ಪಡುವಂತೆ ಅರ್ಥ ತಿಳಿಯಲ್ಪಡುವಂತೆ **ಏವಂ ಚಕಾರ** ಶಿಷ್ಯಪ್ರಶಿಷ್ಯದ್ವಾರಾ ವೇದವಿಭಾಗ ಮಾಡಿದರು. ಆದ್ದರಿಂದಲೇ ಅವರಿಗೆ ವ್ಯಾಸ ಎಂಬ ಹೆಸರು ಬಂದದ್ದು.

ತಮ್ಮಿಂದ ಅನುಗ್ರಹೀತ ಶಿಷ್ಯಪ್ರಶಿಷ್ಯರಿಂದ ವೇದಾಧಿಕಾರಿಗಳಾದ ಮೂರುವರ್ಣದವರಿಗೆ ಶ್ರೇಯಃಸಾಧನ ಶುದ್ಧಕರ್ಮಾನುಷ್ಠಾನ ತಿಳಿಯಲು ವೇದವಿಭಾಗ ಮಾಡಿ ವೇದಾನಧಿಕಾರಿಗಳಾದ ಸ್ತ್ರೀ, ಶೂದ್ರ, ಬ್ರಹ್ಮಬಂಧುಗಳಿಗೆ ಶ್ರೇಯಃಸಾಧನವನ್ನು ತಿಳಿಸುವ ಗ್ರಂಥ ರಚಿಸಿದರೆಂದು ಹೇಳುವರು.

**ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ॥**
**ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥೨೪॥**

**ಸ್ತ್ರೀಶೂದ್ರದ್ವಿಜಬಂಧೂನಾಂ** ಹೆಣ್ಣುಮಕ್ಕಳಿಗೆ ಶೂದ್ರರಿಗೆ ಬ್ರಾಹ್ಮಣರು ನಮ್ಮ ಬಂಧುಗಳು ಎಂದು ಹೇಳಿಕೊಳ್ಳುವ ತಾವು ಬ್ರಾಹ್ಮಣ್ಯ ಕಳೆದುಕೊಂಡ (ಬ್ರಾಹ್ಮಣ್ಯಇಲ್ಲದ)ವರಿಗೆ **ತ್ರಯೀ** ವೇದವು **ನ ಶ್ರುತಿಗೋಚರಾ** ಕೇಳಲು ಯೋಗ್ಯವಲ್ಲ **ಇತಿ** ಈ ಕಾರಣದಿಂದ **ಕರ್ಮಶ್ರೇಯಸಿ** ವೇದೋಕ್ತ ಯಜ್ಞಾದಿರೂಪ ಶ್ರೇಯಃಸಾಧನ ಕರ್ಮಗಳಲ್ಲಿ **ಮೂಢಾನಾಂ** ತಿಳುವಳಿಕೆ ಇಲ್ಲದವರಿಗೆ **ಏವಂ** ಮುಂದೆ ಹೇಳುವಂತೆ **ಶ್ರೇಯಃ** ಶ್ರೇಯಃಸಾಧನ ಭೋಧಕವು **ಭವೇತ್** ಆಗುವುದು **ಇಹ** ಸ್ತ್ರೀ ಶೂದ್ರಾದಿಗಳಿಗೆ

ಎಂದು ವಿಚಾರ ಮಾಡಿ **ಭಾರತಮಾಖ್ಯಾನಂ** ಭಾರತ ಪುರಾಣಾದಿಗಳು **ಕೃಪಯಾ** ದಯೆಯಿಂದ **ಕೃತಂ** ಮಾಡಲ್ಪಟ್ಟವು.

*ಭಾಗವತತಾತ್ಪರ್ಯ -*

ವೇದಾನಧಿಕಾರಿಗಳಾದವರಿಗಾಗಿ ಭಾರತಾದಿಗಳು ಮಾಡಲ್ಪಟ್ಟವೆ ಎಂದು ಹೇಳಿದ್ದರಿಂದ ತ್ರೈವರ್ಣಿಕರಿಗೆ ಭಾರತಾದಿಗಳಲ್ಲಿ ಅಧಿಕಾರವಿಲ್ಲವೆಂದು ತೋರುವದು ಕಾರಣ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು.

**ಭಾರತಂ ಬ್ರಾಹ್ಮಣಾದೀನಾಂ ವೇದಾರ್ಥಪರಿವಿತ್ತಯೇ ।**
**ತೇ ಏವ ವೇದಾಸ್ತ್ವನ್ಯೇಷಾಂ ನರ್ತೇ ತತ್ಕಸ್ಯಚಿತ್ ಸುಖಮ್ ॥**

**-ಇತಿ ಸ್ಕಾಂದೇ॥**

ಬ್ರಾಹ್ಮಣ ಮೊದಲಾದವರಿಗೆ (ತ್ರೈವರ್ಣಿಕರಿಗೆ) ಭಾರತ ಪುರಾಣಾದಿಗಳು ವೇದಾರ್ಥ ತಿಳಿಯಲು ಆವಶ್ಯಕವಾದವುಗಳೇ. ಸ್ತ್ರೀಶೂದ್ರಾದಿಗಳಿಗೆ ಭಾರತಾದಿಗಳೇ ವೇದಸ್ಥಾನದಲ್ಲಿದ್ದು ಶ್ರೇಯಸಾಧನವನ್ನು ತಿಳಿಸುವವೆಂದರ್ಥ. ಅಂತೂ ಭಾರತಾದಿಗಳ ಶ್ರವಣವಿಲ್ಲದೆ ಯಾರಿಗೂ ಮೋಕ್ಷವಾಗಲಾರದು. ಮೂಲದಲ್ಲಿಯೂ ಸ್ತ್ರೀ ಶೂದ್ರಾದಿಗಳಿಗೆ ಮಾತ್ರ ಎಂದು ಹೇಳಿಲ್ಲ. ಕಾರಣ ಇದೇ ಅಭಿಪ್ರಾಯ ಮೂಲಕಾರರಿಗೂ ಇದೆ ಎಂದು ಭಾವ.

ಅವತಾರದ ಪ್ರಯೋಜನವನ್ನು ಹೇಳಿ ಈಗ ಭಾಗವತ ಮಾಡಲು ಪ್ರಯೋಜಕವಾದ ಅವರ ವಿಚಾರವನ್ನು ನಿಮಿತ್ತಸಹಿತವಾಗಿ ತಿಳಿಸುವರು

**ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।**
**ಸರ್ವಾತ್ಮಕೇನಾಪಿ ಯದಾ ನಾತುಷ್ಯತ್ ಹೃದಯಂ ತತಃ ॥೨೯॥**

**ಹೇ ದ್ವಿಜಾಃ** ಶೌನಕಾದಿಗಳೇ **ಭೂತಾನಾಂ ಸದಾ ಶ್ರೇಯಸಿ** ಪ್ರಾಣಿಗಳಿಗೆ ನಿತ್ಯವಾದ ಮುಕ್ತಿಸಾಧನವನ್ನು ತಿಳಿಸಲು **ಏವಂ ಪ್ರವೃತ್ತಸ್ಯಾಪಿ** ಹೊರಟಿರುವವರಿಗೆ **ಸರ್ವಾತ್ಮಕೇನ ಅಪಿ** ಸರ್ವಾಧಿಕಾರಿ ಸಾಧಾರಣವಾದ ಭಾರತ ರಚನೆಯಿಂದಲೂ **ಯದಾ** ಯಾವ ಕಾರಣ **ಹೃದಯಂ** ಮನಸ್ಸು **ನ ಅತುಷ್ಯತ್** ಅಲಂ ಬುದ್ಧಿಯನ್ನು ಹೊಂದಲಿಲ್ಲವೋ **ತತಃ** ಆದ್ದರಿಂದ

**ಅವತಾರ ಪ್ರಯೋಜನದಿಂದ ಅಲಂಬುದ್ಧಿ ಇಲ್ಲದ ವೇದವ್ಯಾಸರು**

**ನಾತಿಪ್ರಸನ್ನಹೃದಯಃ ಸರಸ್ವತ್ಯಾಸ್ತಟೇ ಶುಚೌ ।**
**ವಿತರ್ಕಯನ್ ವಿವಿಕ್ತಸ್ಥ ಇದಂ ಚೋವಾಚ ಧರ್ಮವಿತ್ ॥೨೬॥**

**ಶುಚೌ ದೇಶೇ** ಶುದ್ಧವಾದ ಪ್ರದೇಶದಲ್ಲಿ **ಸರಸ್ವತ್ಯಾಃ ತಟೇ** ಸರಸ್ವತೀನದಿಯ ದಡದಲ್ಲಿ **ವಿವಿಕ್ತಸ್ಥಃ** ಏಕಾಂತದಲ್ಲಿ ಕುಳಿತವನಾಗಿ **ನ ಅತಿಪ್ರಸನ್ನಹೃದಯಃ** ಅವತಾರ ಪ್ರಯೋಜನದಿಂದ ಅಲಂಬುದ್ಧಿ ಇಲ್ಲದವನಾಗಿ **ವಿತರ್ಕಯನ್** ಏನು ಕಾರಣವೆಂದು ವಿಚಾರ ಮಾಡುವವನಾಗಿ **ಧರ್ಮವಿತ್** ಧರ್ಮ ಜ್ಞಾನಿಗಳಾದ ವ್ಯಾಸರು **ಇದಂ ಉವಾಚ** ಈ ರೀತಿ ಹೇಳಿದರು.

೨೫ನೇ ಶ್ಲೋಕದಲ್ಲಿ **ನಾತುಷ್ಯತ್** ಎಂಬುದಕ್ಕೆ ಸಂತೋಷವನ್ನು ಹೊಂದಲಿಲ್ಲ ಎಂದು ಅರ್ಥವಾಗಬಾರದೆಂದು ಅರ್ಥ ಹೇಳುವರು -

*ಭಾಗವತತಾತ್ಪರ್ಯ -*

**ಅತೋಷಃ ಅನಲಂಬುದ್ಧಿಃ ।**
**ಶ್ರುತ್ವಾ ಕಥಾಂ ನ ತುಷ್ಯಾಮಿ ಹರೇರದ್ಭುತಕರ್ಮಣಃ । -ಇತಿ ಮಾತ್ಸ್ಯೇ**

ಲೋಕೋಪಕಾರಕ ಗ್ರಂಥ ಮಾಡುವ ವಿಷಯದಲ್ಲಿ ಸಾಕೆಂಬ ಬುದ್ಧಿ ಇಲ್ಲದಿರುವದೇ ಅಸಂತೋಷ ಹೊರತು ಸಂತೋಷವಿಲ್ಲವೆಂಬುದಲ್ಲ. ಶ್ರೀಹರಿಯು ಪೂರ್ಣಾನಂದನಷ್ಟೇ ತುಷ ಧಾತುವಿಗೆ ಅಲಂಬುದ್ಧಿ ಎಂಬರ್ಥದಲ್ಲಿ ಪ್ರಯೋಗ ತೋರಿಸುವರು ಆಶ್ಚರ್ಯಕರ ವ್ಯಾಪಾರ ಮಾಡುವ ಶ್ರೀಹರಿಯ ಕಥೆಯ ಕೇಳಿ ಅಲಂಬುದ್ಧಿಯನ್ನು ಹೊಂದಲಾರನು ಎಂದು ಮತ್ಸ್ಯಪುರಾಣದಲ್ಲಿದೆ.(ಇಲ್ಲಿ ಸಂತೋಷ ಹೊಂದಲಾರೆ ಎಂದರ್ಥ ಮಾಡಿದರೆ ಬಾಧಿತವಾಗುವದು ಎಂದು ಭಾವ) ಹಾಗಾದರೆ ಮುಂದಿನ ಶ್ಲೋಕದಲ್ಲಿ ನಾತಿಪ್ರಸನ್ನಹೃದಯ ಎಂದು ಅನುವಾದ ಮಾಡಿದ್ದು ಕೂಡಲಾರದು ಎಂದರೆ ಅದಕ್ಕೂ ಇದೇ ಅರ್ಥ ಎಂದು ಹೇಳುವರು.

*ಭಾಗವತತಾತ್ಪರ್ಯ -*

**ನ ಅಪ್ರಸಾದಶ್ಚ ಸ ಏವ ।**
**ಕಃ ಪ್ರಸನ್ನೋಭವೇದ್ದಿವ್ಯಾಂ ಕಥಾಂ ಶೃಣ್ವನ್ ಹರೇಃ ಪರಾಂ ॥ -ಇತಿ ಚ**

ಅಪ್ರಸನ್ನತೆ ಎಂದರೂ ಅಲಂಬುದ್ಧಿಯಿಲ್ಲದಿರುವುದೇ ಈ ಅರ್ಥದಲ್ಲಿ ಪ್ರಯೋಗ ತೋರಿಸುವರು. ಶ್ರೀಹರಿಯ ದಿವ್ಯವಾದ ಶ್ರೇಷ್ಠವಾದ ಕಥೆಯನ್ನು ಕೇಳುತ್ತಾ ಯಾವನು ಸಾಕೆಂದೆನಿಸಿದವನಾದಾನು ಎಂದು ಹೇಳಿದೆ. ಇಲ್ಲಿಯೂ ಬೇರೆ ಅರ್ಥ ಮಾಡಿದರೆ ಬಾಧಿತವಾಗುವದು.

ಏನು ಹೇಳಿದರೆಂದು ಹೇಳುವರು -

**ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।**
**ಮಾನಿತಾ ನಿರ್ವ್ಯಲೀಕೇನ ಗೃಹೀತಂ ಚಾನುಶಾಸನಮ್ ॥೨೮॥**

**ಧೃತವ್ರತೇನ** ವೇದಾಧ್ಯಯನಕ್ಕೆ ಉಪಯುಕ್ತವಾದ ವ್ರತವನ್ನು ಧಾರಣ ಮಾಡಿದ **ಮಯಾ** ನನ್ನಿಂದ **ನಿರ್ವ್ಯಲೀಕೇನ ಮನಸಾ** ಕಾಪಟ್ಯವಿಲ್ಲದ ಮನಸ್ಸಿನಿಂದ ಅಥವಾ ಕಪಟವಿಲ್ಲದ ನನ್ನಿಂದ **ಗುರವಃ** ಗುರುಗಳು **ಅಗ್ನಯಃ** ಮೂರು ಅಗ್ನಿಗಳು **ಛಂದಾಂಸಿ** ವೇದಗಳು **ಮಾನಿತಾಃ** ಸತ್ಕರಿಸಲ್ಪಟ್ಟಿವೆ **ಅನುಶಾಸನಂ ಚ ಗೃಹೀತಂ** ಗುರುಗಳ ಆಜ್ಞೆಯು ನೇರವೇರಿಸಲ್ಪಟ್ಟಿದೆ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ವೇದವ್ಯಾಸರು ತಮ್ಮ ಆಚಾರವನ್ನು ಹೇಳುವರು. ಆದರೆ ಪರಿಪೂರ್ಣರಾದ ಅವರಿಗೆ ಅದು ಹೇಗೆ ಉಪಪನ್ನವಾಗುವದು ಎಂಬ ಶಂಕೆಗೆ ಉತ್ತರಿಸುವರು.

**ಆಚಾರಾಪೇಕ್ಷಯಾ ಧೃತವ್ರತತ್ವಾದಿ ಪರಿಪೂರ್ಣಸ್ಯ ।**

ಲೋಕಾನಾಂ ಎಂದು ತಾತ್ಪರ್ಯದಲ್ಲಿ ಶೇಷಪೂರ್ತಿ ಮಾಡಬೇಕು. ಆಚಾರ ಪದಕ್ಕೆ ಆಚಾರಶಿಕ್ಷೆ ಎಂದರ್ಥ ಲಕ್ಷಣಯಾ ಮಾಡಬೇಕು.

ಸರ್ವಗುಣಪರಿಪೂರ್ಣರಾದರೂ ಯದ್ಯದಾಚರತಿ ಶ್ರೇಷ್ಠ ತತ್ತದೇವೇತರೋ ಜನಃ ॥ ಎಂಬ ಪ್ರಮಾಣಾನುಸಾರ ಜನರು ಈ ರೀತಿ ಆಚರಿಸಬೇಕೆಂದು ತಿಳಿಸಲು ವ್ಯಾಸರು ಬ್ರಹ್ಮಚರ್ಯಾದಿವ್ರತಧಾರಣ ಮಾಡಿದ್ದಾರೆ. ವಸ್ತುತಃ ಅವರಿಗೆ ಪ್ರಯೋಜನವಿಲ್ಲ.

ಯಾವುದಕ್ಕಾಗಿ ಅವತರಿಸಿದೆನೋ ಅದನ್ನೂ ಮಾಡಿ ಆಯಿತು ಎಂದು ಹೇಳುವರು.

**ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಃ ಪ್ರದರ್ಶಿತಃ ।**
**ದೃಶ್ಯತೇ ಯತ್ರ ಧರ್ಮಾದಿ ಸ್ತ್ರೀಶೂದ್ರಾದಿಭಿರಪ್ಯುತ ॥೨೯॥**

**ಅವತಾರ ಪ್ರಯೋಜನದಿಂದ ಅಲಂಬುದ್ಧಿ ಇಲ್ಲದ ವೇದವ್ಯಾಸರು**

**ನಾತಿಪ್ರಸನ್ನಹೃದಯಃ ಸರಸ್ವತ್ಯಾಸ್ತಟೇ ಶುಚೌ ।**
**ವಿತರ್ಕಯನ್ ವಿವಿಕ್ತಸ್ಥ ಇದಂ ಚೋವಾಚ ಧರ್ಮವಿತ್ ॥೨೬॥**

**ಶುಚೌ ದೇಶೇ** ಶುದ್ಧವಾದ ಪ್ರದೇಶದಲ್ಲಿ **ಸರಸ್ವತ್ಯಾಃ ತಟೇ** ಸರಸ್ವತೀನದಿಯ ದಡದಲ್ಲಿ **ವಿವಿಕ್ತಸ್ಥಃ** ಏಕಾಂತದಲ್ಲಿ ಕುಳಿತವನಾಗಿ **ನ ಅತಿಪ್ರಸನ್ನಹೃದಯಃ** ಅವತಾರ ಪ್ರಯೋಜನದಿಂದ ಅಲಂಬುದ್ಧಿ ಇಲ್ಲದವನಾಗಿ **ವಿತರ್ಕಯನ್** ಏನು ಕಾರಣವೆಂದು ವಿಚಾರ ಮಾಡುವವನಾಗಿ **ಧರ್ಮವಿತ್** ಧರ್ಮ ಜ್ಞಾನಿಗಳಾದ ವ್ಯಾಸರು **ಇದಂ ಉವಾಚ** ಈ ರೀತಿ ಹೇಳಿದರು.

೨೫ನೇ ಶ್ಲೋಕದಲ್ಲಿ **ನಾತುಷ್ಯತ್** ಎಂಬುದಕ್ಕೆ ಸಂತೋಷವನ್ನು ಹೊಂದಲಿಲ್ಲ ಎಂದು ಅರ್ಥವಾಗಬಾರದೆಂದು ಅರ್ಥ ಹೇಳುವರು -

*ಭಾಗವತತಾತ್ಪರ್ಯ -*

ಅತೋಷಃ ಅನಲಂಬುದ್ಧಿಃ ।
ಶ್ರುತ್ವಾ ಕಥಾಂ ನ ತುಷ್ಯಾಮಿ ಹರೇರದ್ಭುತಕರ್ಮಣಃ । -ಇತಿ ಮಾತ್ಸ್ಯೇ

ಲೋಕೋಪಕಾರಕ ಗ್ರಂಥ ಮಾಡುವ ವಿಷಯದಲ್ಲಿ ಸಾಕೆಂಬ ಬುದ್ಧಿ ಇಲ್ಲದಿರುವದೇ ಅಸಂತೋಷ ಹೊರತು ಸಂತೋಷವಿಲ್ಲವೆಂಬುದಲ್ಲ. ಶ್ರೀಹರಿಯು ಪೂರ್ಣಾನಂದನಷ್ಟೇ ತುಷ ಧಾತುವಿಗೆ ಅಲಂಬುದ್ಧಿ ಎಂಬರ್ಥದಲ್ಲಿ ಪ್ರಯೋಗ ತೋರಿಸುವರು ಆಶ್ಚರ್ಯಕರ ವ್ಯಾಪಾರ ಮಾಡುವ ಶ್ರೀಹರಿಯ ಕಥೆಯ ಕೇಳಿ ಅಲಂಬುದ್ಧಿಯನ್ನು ಹೊಂದಲಾರನು ಎಂದು ಮತ್ಸ್ಯಪುರಾಣದಲ್ಲಿದೆ.(ಇಲ್ಲಿ ಸಂತೋಷ ಹೊಂದಲಾರೆ ಎಂದರ್ಥ ಮಾಡಿದರೆ ಬಾಧಿತವಾಗುವದು ಎಂದು ಭಾವ) ಹಾಗಾದರೆ ಮುಂದಿನ ಶ್ಲೋಕದಲ್ಲಿ ನಾತಿಪ್ರಸನ್ನಹೃದಯ ಎಂದು ಅನುವಾದ ಮಾಡಿದ್ದು ಕೂಡಲಾರದು ಎಂದರೆ ಅದಕ್ಕೂ ಇದೇ ಅರ್ಥ ಎಂದು ಹೇಳುವರು.

*ಭಾಗವತತಾತ್ಪರ್ಯ -*

ನ ಅಪ್ರಸಾದಶ್ಚ ಸ ಏವ ।
ಕಃ ಪ್ರಸನ್ನೋಭವೇದ್ದಿವ್ಯಾಂ ಕಥಾಂ ಶೃಣ್ವನ್ ಹರೇಃ ಪರಾಂ ॥ -ಇತಿ ಚ

ಅಪ್ರಸನ್ನತೆ ಎಂದರೂ ಅಲಂಬುದ್ಧಿಯಿಲ್ಲದಿರುವುದೇ ಈ ಅರ್ಥದಲ್ಲಿ ಪ್ರಯೋಗ ತೋರಿಸುವರು. ಶ್ರೀಹರಿಯ ದಿವ್ಯವಾದ ಶ್ರೇಷ್ಠವಾದ ಕಥೆಯನ್ನು ಕೇಳುತ್ತಾ ಯಾವನು ಸಾಕೆಂದೆನಿಸಿದವನಾದಾನು ಎಂದು ಹೇಳಿದೆ. ಇಲ್ಲಿಯೂ ಬೇರೆ ಅರ್ಥ ಮಾಡಿದರೆ ಬಾಧಿತವಾಗುವದು.

ಏನು ಹೇಳಿದರೆಂದು ಹೇಳುವರು -

**ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।**
**ಮಾನಿತಾ ನಿರ್ವ್ಯಲೀಕೇನ ಗೃಹೀತಂ ಚಾನುಶಾಸನಮ್ ॥೨೭॥**

**ಧೃತವ್ರತೇನ** ವೇದಾಧ್ಯಯನಕ್ಕೆ ಉಪಯುಕ್ತವಾದ ವ್ರತವನ್ನು ಧಾರಣ ಮಾಡಿದ **ಮಯಾ** ನನ್ನಿಂದ **ನಿರ್ವ್ಯಲೀಕೇನ ಮನಸಾ** ಕಾಪಟ್ಯವಿಲ್ಲದ ಮನಸ್ಸಿನಿಂದ ಅಥವಾ ಕಪಟವಿಲ್ಲದ ನನ್ನಿಂದ **ಗುರವಃ** ಗುರುಗಳು **ಅಗ್ನಯಃ** ಮೂರು ಅಗ್ನಿಗಳು **ಛಂದಾಂಸಿ** ವೇದಗಳು **ಮಾನಿತಾಃ** ಸತ್ಕರಿಸಲ್ಪಟ್ಟಿವೆ **ಅನುಶಾಸನಂ ಚ ಗೃಹೀತಂ** ಗುರುಗಳ ಆಜ್ಞೆಯು ನೇರವೇರಿಸಲ್ಪಟ್ಟಿದೆ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ವೇದವ್ಯಾಸರು ತಮ್ಮ ಆಚಾರವನ್ನು ಹೇಳುವರು. ಆದರೆ ಪರಿಪೂರ್ಣರಾದ ಅವರಿಗೆ ಅದು ಹೇಗೆ ಉಪಪನ್ನವಾಗುವದು ಎಂಬ ಶಂಕೆಗೆ ಉತ್ತರಿಸುವರು.

**ಆಚಾರಾಪೇಕ್ಷಯಾ ಧೃತವ್ರತತ್ವಾದಿ ಪರಿಪೂರ್ಣಸ್ಯ ।**

ಲೋಕಾನಾಂ ಎಂದು ತಾತ್ಪರ್ಯದಲ್ಲಿ ಶೇಷಪೂರ್ತಿ ಮಾಡಬೇಕು. ಆಚಾರ ಪದಕ್ಕೆ ಆಚಾರಶಿಕ್ಷೆ ಎಂದರ್ಥ ಲಕ್ಷಣಯಾ ಮಾಡಬೇಕು.

ಸರ್ವಗುಣಪರಿಪೂರ್ಣರಾದರೂ ಯದ್ಯದಾಚರತಿ ಶ್ರೇಷ್ಠ ತತ್ತದೇವೇತರೋ ಜನಃ ॥ ಎಂಬ ಪ್ರಮಾಣಾನುಸಾರ ಜನರು ಈ ರೀತಿ ಆಚರಿಸಬೇಕೆಂದು ತಿಳಿಸಲು ವ್ಯಾಸರು ಬ್ರಹ್ಮಚರ್ಯಾದಿವ್ರತಧಾರಣ ಮಾಡಿದ್ದಾರೆ. ವಸ್ತುತಃ ಅವರಿಗೆ ಪ್ರಯೋಜನವಿಲ್ಲ.

ಯಾವುದಕ್ಕಾಗಿ ಅವತರಿಸಿದೆನೋ ಅದನ್ನೂ ಮಾಡಿ ಆಯಿತು ಎಂದು ಹೇಳುವರು.

**ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಃ ಪ್ರದರ್ಶಿತಃ ।**
**ದೃಶ್ಯತೇ ಯತ್ರ ಧರ್ಮಾದಿ ಸ್ತ್ರೀಶೂದ್ರಾದಿಭಿರಪ್ಯುತ ॥೨೮॥**

**ಯತ್ರ** ಯಾವ ಭಾರತದಲ್ಲಿ **ಸ್ತ್ರೀಶೂದ್ರಾದಿಭಿಃ ಅಪಿ** ಸ್ತ್ರೀಶೂದ್ರರಿಂದಲೂ **ಉತ** ಮತ್ತು ತ್ರೈವರ್ಣಿಕರಿಂದಲೂ ಅನುಷ್ಠೇಯವಾದ **ಧರ್ಮಾದಿ** ನಿವೃತ್ತಧರ್ಮ ಪರಾಪರತತ್ತ್ವಗಳು **ದೃಶ್ಯತೇ** ತಿಳಿಯುತ್ತದೆಯೋ ಅಂಥ **ಭಾರತವ್ಯಪದೇಶೇನ** ಭಾರತದ ರಚನೆಯ ನೆಪದಿಂದ **ಆಮ್ನಾಯಾರ್ಥಃ** ವೇದಾರ್ಥವು **ಪ್ರದರ್ಶಿತಃ** ತೋರಿಸಲ್ಪಟ್ಟಿತು.

**ಅಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।**
**ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ವಿಸತ್ತಮಃ ॥೨೯॥**

**ಅಥಾಪಿ** ಲೋಕಾಚಾರ ಶಿಕ್ಷಣ ಲೋಕೋಪಕಾರಕ ಗ್ರಂಥ ರಚನೆ ಮುಂತಾದ ಅವತಾರ ಪ್ರಯೋಜನದಿಂದ ಕೂಡಿದ್ದರೂ **ದೈಹ್ಯಃ** ದೇಹರೂಪವಾದ **ಆತ್ಮಾ** ಸ್ವರೂಪವು **ಆತ್ಮನಾ ವಿಭುಃ** ಸ್ವತ ಏವ ವ್ಯಾಪ್ತವಾದುದು **ಬ್ರಹ್ಮವರ್ಚಸ್ವಿನಾಂ ಸತ್ತಮಃ** ಬ್ರಹ್ಮವರ್ಚಸ್ಸುಳ್ಳವರಲ್ಲಿ ಉತ್ತಮನು **ಅಂಸಪನ್ನ ಇವ ಆಭಾತಿ** ಅವತಾರ ಪ್ರಯೋಜನ ಸಂಪತ್ತಿನಿಂದ ಹೊಂದದಿರುವಂತೆ ತೋರುವದು.

ದೇಹದಲ್ಲಿರುವ ಜೀವನು ಬ್ರಹ್ಮನಿಂದ ತಾದಾತ್ಮ್ಯವನ್ನು ಹೊಂದದಿರುವಂತೆ ಎಂಬ ವ್ಯಾಖ್ಯಾನ ಸರಿಯಲ್ಲ ಎಂದು ತಿಳಿಸಲು ಸರಿಯಾಗಿ ಅನ್ವಯಾರ್ಥ ಹೇಳುವರು.

**ದೈಹ್ಯಃ ದೇಹರೂಪಃ । ಆತ್ಮನಾ ವಿಭುಃ ಸ್ವತ ಏವ ವ್ಯಾಪ್ತಃ ।**
**ಸತ್ಯಸರ್ವಾವತಾರೇಷು ನ ವಿಶೇಷೋಽಸ್ತಿ ಕಶ್ಚನ ।**
**ದೇಹದೇಹಿವಿಭೇದಶ್ಚ ನ ಪರೇ ವಿದ್ಯತೇ ಕ್ವಚಿತ್ ॥**
**ಸರ್ವೇಽವತಾರಾ ವ್ಯಾಪ್ತಾಶ್ಚ ಸರ್ವೇ ಸೂಕ್ಷ್ಮಾಶ್ಚ ತತ್ತ್ವತಃ ।**
**ಐಶ್ವರ್ಯಯೋಗಾದ್ಭಗವಾನ್ ಕ್ರೀಡತ್ಯೇವಂ ಜನಾರ್ದನಃ ॥**
**-ಇತಿ ಮಹಾಸಂಹಿತಾಯಾಂ॥**

**ಅವತಾರಪ್ರಯೋಜನಸಂಪತ್ಯಾಽಸಂಪನ್ನಃ ಇವ ।**
**ಬ್ರಹ್ಮವರ್ಚಸಯುಕ್ತಾನಾಂ ಉತ್ತಮಃ ।**

ದೈಹ್ಯ ಎಂದರೆ ದೇಹದಿಂದ ಅಭಿನ್ನನು (ಸ್ವಾರ್ಥೇ ಯತ್‌ಪ್ರತ್ಯಯಃ) ಆತ್ಮನಾ ವಿಭುಃ=ಎಂದರೆ ಸ್ವತ ಏವ ವ್ಯಾಪ್ತನು (ಗುಣಪೂರ್ಣನು) ಶ್ರೀಹರಿಗೆ ಎಲ್ಲ ಅವತಾರಗಳಲ್ಲಿಯೂ ಯಾವ ವ್ಯತ್ಯಾಸ ತಾರತಮ್ಯ ಇರುವುದಿಲ್ಲ ಶ್ರೀಹರಿಯಲ್ಲಿ ದೇಹಕ್ಕೂ ದೇಹಿಯಾದ ಹರಿಗೂ ಭೇದವಿಲ್ಲ. ಎಲ್ಲ ಅವತಾರಗಳೂ ವ್ಯಾಪ್ತವಾಗಿವೆ. ನಿಜವಾಗಿ ಎಲ್ಲವೂ ಸೂಕ್ಷ್ಮವಾಗಿವೆ. (ಪರಿಚ್ಛಿನ್ನ) ಶ್ರೀಹರಿಯು ಅಘಟಿತಘಟಕ. ಅನಂತ ಐಶ್ವರ್ಯದಿಂದ (ಎಲ್ಲವೂ ಉಪಪನ್ನ) ಅನೇಕ ರೂಪಗಳಿಂದ ಕ್ರೀಡಿಸುವನು

ಎಂದು ಮಹಾಸಂಹಿತೆಯಲ್ಲಿ ಹೇಳಿದೆ. ಅವತಾರ ಕಾರ್ಯ ಸಂಪೂರ್ಣ ಆಗದಿರುವದರಿಂದ ಪ್ರಯೋಜನ ಹೊಂದದಿರುವಂತೆ ತೋರಿಸುವನು. ಸದಾಚಾರವುಳ್ಳವರಲ್ಲಿ ಅಧ್ಯಯನಾದಿಗಳುಳ್ಳವರಲ್ಲಿ ಉತ್ತಮನು.

ಅಸಂಪತ್ತಿಗೆ ಕಾರಣವನ್ನು ತಾವೇ ಊಹಿಸುವರು.

**ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।**
**ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ ॥೩೦॥**

**ಭಾಗವತಾಃ** ಭಗವತ್ಪ್ರೀತಿಕರವಾದ **ಧರ್ಮಾಃ** ಧರ್ಮಗಳು ಮತ್ತು ದೇವರು ದೇವತೆಗಳು **ಪ್ರಾಯೇಣ ನ ನಿರೂಪಿತಾಃ** ಎಲ್ಲವೂ(ಅಲ್ಪ ಜ್ಞಾನಿಗಳೂ) ತಿಳಿಯುವಂತೆ ಬಹುಶಃ ಹೇಳಿಲ್ಲ **ತೇ ಏವ** ಅಂತಹ ಧರ್ಮಗಳೇ **ಅಚ್ಯುತಪ್ರಿಯಾಃ** ಶ್ರೀಕೃಷ್ಣನಿಗೆ ಪ್ರಿಯಕರಗಳು ಆದ್ದರಿಂದಲೇ **ಪರಮಹಂಸಾನಾಂ ಪ್ರಿಯಾಃ** ಸನ್ಯಾಸಿಗಳಿಗೂ ಪ್ರಿಯವಾದವುಗಳು.

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಭಾಗವತದಲ್ಲಿ ಹೇಳಿದಂತೆ ಧರ್ಮಗಳನ್ನು ಸಂಪೂರ್ಣವಾಗಿ ಭಾರತದಲ್ಲಿ ಹೇಳಿಲ್ಲವೆಂದು ತೋರುವದು. ಅದು ಸರಿಯಲ್ಲ. ಪ್ರಮಾಣ ವಿರೋಧ ಬರುವದು ಕಾರಣ ಹೇಳುವರು.

ಪುನರಪೇಕ್ಷಿತತ್ವಾತ್ ನ ಪ್ರಾಯೇಣ ನಿರೂಪಿತಾಃ ।
ಯಥಾ ತು ಭಾರತೇ ದೇವೋ ನ ತಥಾऽನ್ಯೇಷು ಕೇಷುಚಿತ್ ।
ಉಚ್ಯತೇ ನ ತಥಾಪೀಶಂ ಜಾನಂತ್ಯಜ್ಞಾ ಜನಾರ್ದನಮ್ ॥ -ಇತಿ ಸ್ಕಾಂದೇ

ಯದ್ಯಪಿ ಭಾರತದಲ್ಲಿ ಧರ್ಮಗಳು ಎಲ್ಲರಿಗಾಗಿ ಹೇಳಿವೆ. ಆದರೂ ಭಾರತಾರ್ಥವು ಕಠಿಣವಾಗಿರುವುದರಿಂದ ಮಂದಾಧಿಕಾರಿಗಳಿಗೆ ಭಾರತದಲ್ಲಿ ಹೇಳಿದ ಪ್ರಮೇಯವನ್ನೇ ಇನ್ನೊಂದು ಗ್ರಂಥದಿಂದ ಎಲ್ಲರಿಗೂ ಅರ್ಥವಾಗುವಂತೆ ತಿಳಿಸಿದರೆ ಚೆನ್ನಾಗಿ ತಿಳಿಯುವರು ಎಂಬ ದೃಷ್ಟಿಯಿಂದ ಇನ್ನೊಂದು ಗ್ರಂಥಾಪೇಕ್ಷೆ ಇದ್ದುದರಿಂದ ಸಾಕೆಂದೆನಿಸುವದಿಲ್ಲ. ಕಾರಣ ಹೇಗೆ ಭಾರತದಲ್ಲಿ ಶ್ರೀಹರಿಯ ಧರ್ಮಗಳು ಹೇಳಲ್ಪಟ್ಟಿವೆಯೋ ಹಾಗೆ ಬೇರೇ ಯಾವ ಗ್ರಂಥಗಳಲ್ಲಿಯೂ ಹೇಳಿಲ್ಲ. ಆದರೂ ಮಂದಾಧಿಕಾರಿಗಳು ಶ್ರೀಹರಿಯನ್ನು ತಿಳಿಯುವುದಿಲ್ಲ. ಎಂದು ಸ್ಕಾಂದ ಪುರಾಣದಲ್ಲಿದೆ.

**ನಾರದರ ಆಗಮನ**

**ತಸ್ಯೈವಂ ಖಿನ್ನಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।**
**ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್ ॥೩೧॥**

**ಏವಂ** ಈ ರೀತಿ **ಆತ್ಮಾನಂ** ತನ್ನನ್ನು **ಖಿನ್ನಂ** ಅಲಂಬುದ್ಧಿಯನ್ನು ಹೊಂದದಿರುವವನೆಂದು **ಮನ್ಯಮಾನಸ್ಯ** ತಿಳಿದಿರುವ **ಖಿದ್ಯತಃ** ಅನಲಂ ಬುದ್ಧಿಯನ್ನು ಹೊಂದಿದ **ತಸ್ಯ ಕೃಷ್ಣಸ್ಯ** ಆ ವೇದವ್ಯಾಸರ **ಪ್ರಾಗುದಾಹೃತಂ** ಹಿಂದೆ ಹೇಳಿದ **ಆಶ್ರಮಂ** ಸರಸ್ವತೀತೀರದ ಆಶ್ರಮಕ್ಕೆ **ನಾರದಃ ಅಭ್ಯಾಗಾತ್** ನಾರದರು ಆಗಮಿಸಿದರು.

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಖೇದವುಳ್ಳ, ದುಃಖವನ್ನು ಹೊಂದಿದ ಎಂದರ್ಥ ಎಂದು ತೋರುವದು ಕಾರಣ ವಿವಕ್ಷಿತವಾದ ಖೇದಶಬ್ದಾರ್ಥ ಹೇಳುವರು.

ಖೇದೋಽನಲಂಬುದ್ಧಿಃ ।
ಅತುಷ್ಟಿರಪ್ರಸಾದಶ್ಚ ಖೇದೋಽತೃಪ್ತಿಸ್ತಥೈವ ಚ ।
ಅನಲತ್ವಂ ವದಂತ್ಯೇತೇ ಸರ್ವೇ ಪರ್ಯಾಯವಾಚಕಾಃ ॥ -ಇತಿ ಬ್ರಾಹ್ಮೇ

ಮನ್ಯಮಾನಸ್ಯ ಸ್ವೇಚ್ಛಯಾ

ಭೇದವೆಂದರೆ ಸಾಕು ಎನಿಸುವಿಕೆ, ಅತುಷ್ಟಿ ಅಪ್ರಸಾದ, ಭೇದ, ಅತೃಪ್ತಿ, ಅನಲತ್ವ ಇವು ಏಕಾರ್ಥಪ್ರತಿಪಾದಕಗಳು ಎಂದು ಬ್ರಾಹ್ಮಪುರಾಣದಲ್ಲಿದೆ.

**ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಂ ।**
**ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್ ॥೩೨॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಚತುರ್ಥೋಽಧ್ಯಾಯಃ ॥

**ಆಗತಂ** ಬಂದಿರುವ **ತಂ** ನಾರದರನ್ನು **ಅಭಿಜ್ಞಾಯ** ತಿಳಿದು **ಸಹಸಾ** ತಕ್ಷಣ **ಪ್ರತ್ಯುತ್ಥಾಯ** ಎದ್ದು **ಸುರಪೂಜಿತಂ ಮುನಿಂ** ದೇವತೆಗಳಿಂದ ಪೂಜಿತರಾದ **ನಾರದಂ** ನಾರದರನ್ನು **ವಿಧಿವತ್ ಪೂಜಯಾಮಾಸ** ವಿಧಿಪೂರ್ವಕವಾಗಿ ಪೂಜಿಸಿದರು.

ಇಲ್ಲಿಗೆ ನಾಲ್ಕನೇಯ ಅಧ್ಯಾಯ ಮುಗಿಯಿತು

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಪಂಚಮೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಶ್ರೀಹರಿಯ ಮಹಿಮೆಯನ್ನು ಶ್ರವಣ ಮಾಡಿದರೆ ಮೋಕ್ಷಸಾಧನೆ ಸುಲಭವೆನ್ನಲು ತಮ್ಮ ಪೂರ್ವಜನ್ಮದ ವೃತ್ತಾಂತವೇ ಸಾಕ್ಷಿ ಎನ್ನುತ್ತ ನಾರದರು ವೇದವ್ಯಾಸರ ಮುಂದೆ ಆ ವೃತ್ತಾಂತವನ್ನು ವರ್ಣಿಸಿದರು. ನಾನು ಪೂರ್ವಜನ್ಮದಲ್ಲಿ ದಾಸೀಪುತ್ರನಾಗಿದ್ದೆ. ಒಮ್ಮೆ ಜ್ಞಾನಿಗಳಾದ ಅನೇಕ ಸನ್ಯಾಸಿಗಳು ಒಂದೆಡೆ ಚಾತುರ್ಮಾಸ್ಯ ಸಂಕಲ್ಪಮಾಡಿ ಕುಳಿತರು. ಐದು ವರ್ಷದ ಬಾಲಕನಾಗಿದ್ದ ನಾನು ಅವರು ಉಂಡ ಎಂಜಲು ಎಲೆಯನ್ನು ತೆಗೆದು ಸಾರಿಸುವದು ಉಳಿದಿದ್ದ ಅನ್ನ ಉಣ್ಣುವದು ಅವರು ಹೇಳುತ್ತಿದ್ದ ಹರಿಕಥೆಯನ್ನು ಕೇಳುವುದು ಹೀಗೆ ಮಾಡುತ್ತಿದ್ದೆ. ಇವುಗಳಿಂದ ನನ್ನ ಅಂತಃಕರಣ ಶುದ್ಧವಾಯಿತು. ಭಕ್ತಿವೈರಾಗ್ಯಗಳು ಮೂಡಿದವು. ಯತಿಗಳು ವ್ರತವನ್ನು ಮುಗಿಸಿ ಹೊರಡುವಾಗ ನನ್ನನ್ನು ಕರೆದು ಪ್ರೀತಿಯಿಂದ ಗೋಪ್ಯವಾದ ಪರಮಾತ್ಮತತ್ತ್ವವನ್ನು ಉಪದೇಶಿಸಿದರು. ಜ್ಞಾನಪೂರ್ವಕ ಕರ್ಮಾಚರಣೆಗೆ ಆದೇಶವಿತ್ತು ಹೊರಟಹೋದರು. ಆದಕಾರಣ ಜ್ಞಾನಪೂರ್ವಕ ಕರ್ಮಾಚರಣೆ ಯಿಂದ ಸಜ್ಜನರಿಗೆ ಜ್ಞಾನಲಾಭವಾಗುವಂತೆ ಭಾಗವತಗ್ರಂಥ ರಚಿಸಿರಿ ಎಂದರು.

**ಶ್ರೀಹರಿಯ ಮಹಿಮೆ ಶ್ರವಣದಿಂದ ಮೋಕ್ಷ**

**ಸೂತ ಉವಾಚ-**

**ಅಥ ತಂ ಸುಖಮಾಸೀನಂ ಉಪಾಸೀನಂ ಬೃಹಚ್ಛ್ರವಾಃ ।**
**ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ ॥೧॥**

**ಅಥ** ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದ ನಂತರ **ಸುಖಂ ಆಸೀನಃ** ಆರಾಮವಾಗಿ ಕುಳಿತಿರುವ **ಬೃಹಚ್ಛ್ರವಾಃ** ಮಹಾಕೀರ್ತಿಶಾಲಿಯಾದ **ವೀಣಾಪಾಣಿಃ** ಮಹತೀ ಎಂಬ ವೀಣೆಯನ್ನು ಕೈಯಲ್ಲಿ ಹಿಡಿದ **ದೇವರ್ಷಿಃ** ನಾರದರು **ಉಪಾಸೀನಂ** ಸಮೀಪದಲ್ಲಿ ಕುಳತಿರುವ **ವಿಪ್ರರ್ಷಿಂ** ವ್ಯಾಸರನ್ನು ಕುರಿತು **ಸ್ಮಯನ್ ಇವ** ಮುಗುಳು ನಗುತ್ತಾ **ಪ್ರಾಹ** ಮಾತನಾಡಿದರು.

ನಾರದ ಉವಾಚ -

**ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।**
**ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ ॥೨॥**

**ಮಹಾಭಾಗ** ಮಹಾಭಾಗ್ಯಶಾಲಿಗಳೇ **ಪಾರಾಶರ್ಯ** ಪರಾಶರ ಪುತ್ರರೇ **ಭವತಃ** ನಿಮ್ಮ **ಶಾರೀರಃ** ಶರೀರರೂಪವಾದ **ಮಾನಸಃ** ಮನೋರೂಪವಾದ **ಆತ್ಮಾ** ಸ್ವರೂಪವು **ಆತ್ಮನಾ ಏವ** ಸ್ವತಃ ಏವ (ತಾನಾಗಿಯೇ) **ಪರಿತುಷ್ಯತಿ ಕಚ್ಚಿತ್** ಅಲಂಬುದ್ಧಿಯನ್ನು ಹೊಂದಿದೆಯೇ?

*ಭಾಗವತತಾತ್ಪರ್ಯ-*

ಲೋಕಾನುಸಾರವಾಗಿ ನಿಮ್ಮ ಶರೀರವಾಗಲಿ ಮನಸ್ಸಾಗಲಿ ಸಂತುಷ್ಟವಾಗಿದೆಯೇ ಎಂದು ಕೇಳಬೇಕು ಅದು ಬಿಟ್ಟು ಶಾರೀರಮಾನಸಃ ಆತ್ಮಾ ಎಂದು ಆತ್ಮವಿಶೇಷ್ಯ ಪ್ರಶ್ನೆ ಹೇಗೆ ಉಪಪನ್ನವಾಗುವದು? ಲೋಕದಲ್ಲಿ ಹೀಗೆ ಪ್ರಶ್ನಿಸುವದು ಕಂಡಿಲ್ಲ ಎಂದರೆ ಅಭಿಪ್ರಾಯ ಹೇಳವರು.

**ಶಾರೀರಮಾನಸಯೋರಭೇದಾದುಭಯಥಾಪಿ ಯುಜ್ಯತೇ ಸ್ವತಂತ್ರತ್ವಾತ್ ಆತ್ಮನ್ಯೆವ ಹ್ಯಲಂಬುದ್ಧಿಃ ।**

ಮೂಲಾನುಸಾರ ಸ್ವಾರ್ಥೇ ಕಃಪ್ರತ್ಯಯ ಪ್ರಯೋಗ. ಶರೀರ ಮನಸ್ಸುಗಳಿಗೆ ಶ್ರೀಹರಿಯಿಂದ ಅಭೇದವಿರುವದರಿಂದ ಶರೀರರೂಪ ಎಂದು ಎರಡು ರೀತಿ ಹೇಳಿದ್ದು ಯುಕ್ತವೇ. ವೇದವ್ಯಾಸರಿಗೆ ನಿಯಾಮಕರೊಬ್ಬರು ಬೇರೆ ಇಲ್ಲದಿರುವದರಿಂದ ಸ್ವತಃ ಏವ ಸಾಕೆನಿಸಿದೆಯೇ ಎಂಬ ಪ್ರಶ್ನೆಯು ಉಪಪನ್ನವೇ. ಇತರರಿಗೆ ಶರೀರ, ಮನಸ್ಸು, ಆತ್ಮ ಭಿನ್ನವಾದ್ದರಿಂದ ಆತ್ಮ ವಿಶೇಷ್ಯಕ ಪ್ರಶ್ನೆ ಕೂಡುವುದಿಲ್ಲ. ಭಗವಂತನಲ್ಲಿ ಅಭೇದವಿರುವದರಿಂದ ಹೇಗಾದರೂ ಕೇಳಬಹುದು.

**ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।**
**ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್ ॥೩॥**

**ಯತ್** ಯಾವಕಾರಣ ಮಹತ್ ಶಬ್ದತಃ ಅರ್ಥತಃ ದೊಡ್ಡದಾದ ಅದ್ಭುತಂ ಭಾಷಾತ್ರಯಗಳಿಂದ ಕೂಡಿರುವದರಿಂದ ಗಹನವಾದ ಸರ್ವಾರ್ಥಪರಿಬೃಂಹಿತಮ್ ಧರ್ಮಾದಿ ಸಕಲ ಪುರುಷಾರ್ಥಗಳಿಂದ ಪೂರ್ಣವಾದ ಭಾರತಂ ಭಾರತವನ್ನು ತ್ವಂ ನೀವು ಕೃತವಾನ್ ಮಾಡಿರುವಿರಿ ತತ್ ಆದ್ದರಿಂದ ತೇ ನಿಮ್ಮಿಂದ ಜಿಜ್ಞಾಸಿತಂ ವಿಚಾರಿತವಾದ ಧರ್ಮಾದಿಗಳು ಸುಸಂಪನ್ನಂ ಚೆನ್ನಾಗಿ ತಿಳಿಯಲ್ಪಟ್ಟಿವೆ. ಅಪಿ ಅನುಷ್ಠಾನ ಮಾಡಲ್ಪಟ್ಟಿವೆ.

**ಜಿಜ್ಞಾಸಿತಮಧೀತಂ ಚ ಬ್ರಹ್ಮ ಯತ್ತತ್ಸನಾತನಮ್ ।**
**ತಥಾಽಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ ॥೪॥**

ಯತ್ ಯಾವಕಾರಣ ಸನಾತನಂ ಬ್ರಹ್ಮ ಪುರಾಣಪುರುಷನಾದ ವೇದವೇದಾರ್ಥ ಭೂತ ಪರಬ್ರಹ್ಮನು ಜಿಜ್ಞಾಸಿತಂ ವಿಚಾರವಿಷಯನಾಗಿದ್ದಾನೆ ಅಧೀತಂ ಉಪಾಧ್ಯಾಯ ಪರಂಪರೆಯಿಂದ ತಿಳಿಯಲ್ಪಟ್ಟಿದ್ದಾನೆ ತಥಾಽಪಿ ಈ ರೀತಿ ಅವತಾರಕಾರ್ಯ ಪೂರೈಸಿದ್ದರೂ ಆತ್ಮಾನಂ ತಮ್ಮನ್ನು ಅಕೃತಾರ್ಥ ಇವ ಶೋಚಸಿ ಅವತಾರಕಾರ್ಯ ಆಗದಿರುವಂತೆ ತೋರಿಸಿಕೊಳ್ಳುವಿರಿ.

*ಭಾಗವತತಾತ್ಪರ್ಯ-*

ಇಲ್ಲಿ ಶೋಚಸಿ ಎಂದರೆ ಶೋಕ ಮಾಡುವಿ ಎಂದು ತೋರುವದು ಕಾರಣ ವ್ಯಾಖ್ಯಾನಿಸುವರು.

**ಶೋಚಸಿ ಪ್ರಕಾಶಯಸಿ । ಅಜಸ್ರೇಣ ಶೋಚಿಷಾ ಶೋಶುಚಾನಃ ॥ -ಇತಿ ಶ್ರುತಿಃ**

ಶೋಚಸಿ ತೋರಿಸಿಕೊಳ್ಳುತ್ತೀರಿ ಶುಚ ಧಾತುವಿಗೆ ಈ ಅರ್ಥದಲ್ಲಿ ವೈದಿಕ ಪ್ರಯೋಗ ತೋರಿಸುವರು. ನಿತ್ಯವಾದ ಪ್ರಕಾಶದಿಂದ ಮತ್ತೆ ಮತ್ತೆ ಚೆನ್ನಾಗಿ ಪ್ರಕಾಶಿಸತಕ್ಕವನು ಎಂದು ಶ್ರುತಿಯಿದೆ.

ವ್ಯಾಸ ಉವಾಚ -

**ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ**
**ತಥಾಽಪಿ ನಾತ್ಮಾ ಪರಿತುಷ್ಯತೇ ಮೇ ।**

**ತನ್ಮೂಲಮವ್ಯಕ್ತಮಗಾಧಬೋಧಂ**
**ಪೃಚ್ಛಾಮಹೇತ್ವಾತ್ಮಭವಾತ್ಮಭೂತಮ್ ।।೫।।**

**ಹೇ ನಾರದ** ಎಲೋ ನಾರದನೆ **ತ್ವಯಾ** ನಿನ್ನಿಂದ **ಉಕ್ತಂ** ಹೇಳಲ್ಪಟ್ಟ **ಇದಂ ಸರ್ವಂ** ಇದೆಲ್ಲವೂ **ಮೇ** ನನಗೆ **ಅಸ್ತ್ಯೇವ** ಇದ್ದೇ ಇದೆ. **ತಥಾऽಪಿ** ಆದರೂ **ಮೇ** ನನ್ನ **ಆತ್ಮಾ** ಶರೀರ ಹಾಗೂ ಮನಸ್ಸು **ನ ಪರಿತುಷ್ಯತೇ** ಅಲಂಬುದ್ಧಿಯನ್ನು ಪಡೆದಿಲ್ಲ. **ತನ್ಮೂಲಂ** ಅಪರಿತೋಷ ಕಾರಣವು **ಅವ್ಯಕ್ತಂ** ಅಸ್ಪಷ್ಟವಾಗಿದೆ ಕಾರಣ **ಆತ್ಮಭವಾತ್ಮಭೂತಂ** ವಿಷ್ಣುವಿನ ಪುತ್ರನಾದ ಬ್ರಹ್ಮ ಅವನ ಶರೀರದಿಂದ ಜನಿಸಿದ ಆದ್ದರಿಂದಲೇ **ಅಗಾಧಬೋಧಂ** ಗಾಢವಾದ ಜ್ಞಾನವುಳ್ಳ **ತ್ವಾಂ** ನಿನ್ನನ್ನು **ಪೃಚ್ಛಾಮಹೇ** ಕೇಳುವೆನು.

*ಭಾಗವತತಾತ್ಪರ್ಯ-*

ನನ್ನ ಅಪರಿತೋಷಕ್ಕೆ ಕಾರಣ ಕೇಳುವೆನೆಂದು ಹೇಳಿದ್ದರಿಂದ ವ್ಯಾಸರಿಗೆ ಅಜ್ಞಾನವಿದೆ ಎಂದು ತೋರುವದು. ಕಾರಣ ಅದರ ಅಭಿಪ್ರಾಯ ಹೇಳುವರು.

**ಜ್ಞಾನಶಕ್ತಿಸ್ವರೂಪೋऽಪಿ ಹ್ಯಜ್ಞಾऽಶಕ್ತಂ ವದೇದ್ಧರಿಃ ।**
**ಅಜ್ಞಾನಾಂ ಮೋಹನಾಯೇಶಸ್ತೇನ ಮುಹ್ಯಂತಿ ಮೋಹಿತಾಃ ।। -ಇತಿ ಪಾದ್ಮೇ**

ಶ್ರೀಹರಿ ಜ್ಞಾನಶಕ್ತಿಸ್ವರೂಪನಾದರೂ ಅಜ್ಞಾನಿಗಳಿಗೆ ಮೋಹಗೊಳಿಸುವದಕ್ಕಾಗಿ ಅಜ್ಞನೆಂದು ಅಶಕ್ತನೆಂದು ಹೇಳುವನು. ಆದರಿಂದ ವಂಚಿತರಾಗಿ ಮಿಥ್ಯಾಜ್ಞಾನ ಹೊಂದುವರು ಎಂದು ಪಾದ್ಮ ಪುರಾಣದಲ್ಲಿದೆ.

ನಾರದರ ಜ್ಞಾನವನ್ನು ವಿವರಿಸುವರು.

**ಸ ವೈ ಭವಾನ್ ವೇದ ಸಮಸ್ತಗುಹ್ಯಂ ಉಪಾಸಿತೋ ಯಃ ಪುರುಷಃ ಪುರಾಣಃ ।**
**ಪರಾವರೇಶೋ ಮನಸೈವ ವಿಶ್ವಂ ಸೃಜತ್ಯವತ್ಯತ್ತಿ ಗುಣೈರಸಂಗಃ ।।೬।।**

**ಯಃ** ಯಾವನು **ಗುಣೈಃ ಅಸಂಗಃ** ಸತ್ವಾದಿ ಗುಣಗಳಿಂದ ರಚಿತವಾದ ಶರೀರ ನಿಮಿತ್ತ ಸುಖದುಃಖಾದಿರಹಿತನು **ಪರಾವರೇಶಃ** ಮುಕ್ತಾಮುಕ್ತಪ್ರಪಂಚಕ್ಕೆ ಒಡೆಯನು **ಪುರಾಣಃ** ಜಗತ್ಸೃಷ್ಟಿಪೂರ್ವದಲ್ಲಿ ಇರುವವನು **ಪುರುಷಃ** ಕರ್ಮಫಲಗಳನ್ನು ಕೊಡುವವನು **ಉಪಾಸಿತಃ ಇತಿ ಯತ್** ನಿನ್ನಿಂದ ಅಪರೋಕ್ಷೀಕೃತನಾದ್ದರಿಂದ **ಭವಾನ್** ನೀನು **ಸಮಸ್ತಗುಹ್ಯಂ ವೇದ** ಎಲ್ಲ ರಹಸ್ಯವನ್ನೂ ತಿಳಿದಿರುವಿ **ಮನಸಾ ಏವ** ತನ್ನ ಇಚ್ಛೆಯಿಂದಲೇ ಸಾಧನಾಂತರಗಳ ಅಪೇಕ್ಷೆ ಇಲ್ಲದೆ **ವಿಶ್ವಂ** ಜಗತ್ತನ್ನು **ಸೃಜತಿ**

ಸೃಷ್ಟಿಸುವನು **ಅವತಿ** ರಕ್ಷಿಸುವನು **ಅತ್ತಿ** ಸಂಹರಿಸುವನು ಇಂಥವನು ನಿನ್ನಿಂದ ಉಪಾಸಿತನು ಎಂದನ್ವಯ.

**ವಿಶೇಷ-** ಚತುರ್ಮುಖನ ಪ್ರಿಯಪುತ್ರನು, ಸರ್ವಜಗತ್ಸೃಷ್ಟ್ಯಾದಿಗಳನ್ನು ಮಾಡುವ ಭಗವದುಪಾಸಕನು, ಶ್ರೀಹರಿಯ ಅನುಗ್ರಹವನ್ನು ಚೆನ್ನಾಗಿ ಸಂಪಾದನೆ ಮಾಡಿದವನೂ ಆದಕಾರಣ ನನ್ನ ಅಪರಿತೋಷಕ್ಕೆ ಕಾರಣ ನಿನಗೆ ತಿಳಿದಿರುವದೆಂದು ಭಾವ.

**ತ್ವಂ ಪರ್ಯಟನ್ನರ್ಕ ಇವ ತ್ರಿಲೋಕೀ-**
**ಮಂತಶ್ಚರೋ ವಾಯುರಿವಾತ್ಮ ಸಾಕ್ಷೀ ।**
**ಪರಾವರೇ ಬ್ರಹ್ಮಣಿ ಧರ್ಮತೋ ವ್ರತೈ-**
**ಸ್ನಾತಸ್ಯ ಮೇ ನ್ಯೂನಮಲಂ ವಿಚಕ್ಷ್ವ** ॥೭॥

**ತ್ವಂ** ನೀನು **ಅರ್ಕ ಇವ** ಸೂರ್ಯನಂತೆ **ತ್ರಿಲೋಕೀಂ** ಮೂರು ಲೋಕಗಳಲ್ಲಿ **ಪರ್ಯಟನ್** ಸಂಚರಿಸುತ್ತ **ಅಂತಶ್ಚರಃ** ಎಲ್ಲ ಪ್ರಾಣಿಗಳ ಒಳಗೆ ಸಂಚರಿಸುವ **ವಾಯುರಿವ** ಪ್ರಾಣವಾಯುವಿನಂತೆ **ಆತ್ಮಸಾಕ್ಷೀ** ಎಲ್ಲರ ಮನೋವೃತ್ತಿಗಳನ್ನು ತಿಳಿದವನು **ಪರಾವರೇ ಬ್ರಹ್ಮಣಿ** ಪರಬ್ರಹ್ಮ ಪರಮಾತ್ಮನಲ್ಲಿ ಹಾಗೂ ಅವನನ್ನು ಪ್ರತಿಪಾದಿಸುವ ವೇದದಲ್ಲಿ **ಧರ್ಮತಃ** ವೇದೋಕ್ತ ಧರ್ಮಾನುಷ್ಠಾನದಿಂದ **ವ್ರತೈಃ** ಸ್ವಾಧ್ಯಾಯನಿಯಮಗಳಿಂದ **ಸ್ನಾತಸ್ಯ** ಪಾರಂಗತನಾದ **ಮೇ** ನನ್ನಲ್ಲಿರುವ **ನ್ಯೂನಂ** (ನಿತರಾಂ ಊನಂ)ಉಳಿದಿರುವ ಅವತಾರ ಪ್ರಯೋಜನವನ್ನು **ಅಲಂ ವಿಚಷ್ವೇ** ಚೆನ್ನಾಗಿ ವಿಚಾರಮಾಡಿ ಹೇಳು.

ಲೋಕವ್ಯಾಮೋಹನಕ್ಕಾಗಿ ವ್ಯಾಸರಿಂದ ಪೃಷ್ಟರಾದ ನಾರದರು ಅವರ ಅಭಿಪ್ರಾಯಕ್ಕನುಗುಣವಾಗಿ ಉತ್ತರ ಹೇಳುವರು.

ನಾರದ ಉವಾಚ -

**ಭವತಾऽನುದಿತಪ್ರಾಯಂ ಯಶೋ ಭಗವತೋऽಮಲಮ್ ।**
**ಯೇನೈವಾಸೌ ನ ತುಷ್ಯೇತ ಮನ್ಯೇ ತದ್ದರ್ಶನಂ ಖಿಲಮ್** ॥೮॥

**ಹೇ ವ್ಯಾಸ** ಬಾದರಾಯಣರೇ **ಭಗವತಃ** ಪರಮಾತ್ಮನ **ಅಮಲಂ ಯಶಃ** ಶುದ್ಧವಾದ ಕೀರ್ತಿಯು **ಭವತಾ ಯದ್ಯಪಿ ಉದಿತಂ** ನಿಮ್ಮಿಂದ ಹೇಳಲ್ಪಟ್ಟಿದೆ ಆದರೂ

**ಅನುದಿತಪ್ರಾಯಂ** ಮಂದಾಧಿಕಾರಿಗಳಿಗೆ ಹೇಳದಿದ್ದಂತೆಯೇ. ತ್ರಿಭಾಷಾಗಳಿರುವದರಿಂದ ಮಂದರಿಗೆ ಭಾರತದಲ್ಲಿ ಹೇಳಿದ ಭಗವತ್ತತ್ತ್ವ ತಿಳಿಯುವದು ಶಕ್ಯವಿಲ್ಲವೆಂದು ಭಾವ. **ಅತಃ** ಆದ್ದರಿಂದ **ಯೇನ** ಮಂದಾಧಿಕಾರೂಗಳಿಗೂ ತಿಳಿಯುವಂತೆ ಭಗವದ್ಬೋದಕವಾದ ಪುರಾಣಮಾಡದಿರುವದರಿಂದ **ಅಸೌ** ನಿಮ್ಮ ಮನಸ್ಸು **ನ ತುಷ್ಯೇತ** ಅಲಂಬುದ್ಧಿಯನ್ನು ಹೊಂದಿಲ್ಲ. **ತದ್ದರ್ಶನಂ ಖಿಲಂ ಮನ್ಯೇ** ಮಂದಾಧಿಕಾರಿಗಳಿಗೆ ಭಗವಂತನನ್ನು ತಿಳಿಸುವ ಪುರಾಣ ಉಳಿದಿದೆ ಎಂದು ತಿಳಿಯುವೆನು.

ಮಂದಾಧಿಕಾರಿಗಳೂ ಸಹ ಧರ್ಮಾದಿಗಳನ್ನು ತಿಳಿದಂತೆ ಭಗವಂತನ ಕೀರ್ತಿಯನ್ನು ಭಾರತದಿಂದಲೇ ಏಕೆ ತಿಳಿಯಬಾರದು ಎಂದರೆ ಹೇಳುವರು. -

**ಯಥಾ ಧರ್ಮಾದಯೋ ಹ್ಯರ್ಥಾ ಮುನಿವರ್ಯಾನುವರ್ಣಿತಾಃ ।**
**ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ ॥೯॥**

**ಹೇ ಮುನಿವರ್ಯ** ಸರ್ವಜ್ಞತಮರಾದ ವೇದವ್ಯಾಸರೇ **ತ್ವಯಾ** ನಿಮ್ಮಿಂದ **ಧರ್ಮಾದಯಃ ಅರ್ಥಾಃ** ಧರ್ಮಾದಿಪುರುಷಾರ್ಥಗಳು **ಯಥಾ** ಹೇಗೆ **ಅನುವರ್ಣಿತಾಃ** ಸರ್ವಾಧಿಕಾರಿಗಳಿಗೆ ತಿಳಿಯುವಂತೆ ಭಾರತದಲ್ಲಿ ಉಕ್ತವಾಗಿವೆಯೋ **ತಥಾ** ಹಾಗೆ ಎಲ್ಲರಿಗೂ ತಿಳಿಯುವಂತೆ **ವಾಸುದೇವಸ್ಯ** ಭಗವಂತನ **ಮಹಿಮಾ** ಮಹಿಮೆಯು **ನ ಅನುವರ್ಣಿತಃ** ಉಕ್ತವಾಗಿಲ್ಲ **ಹಿ** ಯಾವ ಕಾರಣ. ಆದ್ದರಿಂದ ಅದು ಉಳಿದಿದೆ ಎಂದು ತಿಳಿಯುವೆನು. ಭಾರತವು ದುರ್ಗಮಾರ್ಥವಾದ್ದರಿಂದ ತಿಳಿಯಲಾರರು. ಆದ್ದರಿಂದ ಅವರ ಶ್ರೇಯಸ್ಸಿಗಾಗಿ ಹರಿಯ ಜ್ಞಾನ ಮಾಡಿಕೊಡುವ ಗ್ರಂಥಾಂತರದ ಆವಶ್ಯಕತೆ ಇದೆ ಎಂದೂ ಭಾವ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ 'ಭಾರತದಲ್ಲಿ ಧರ್ಮಾದಿಗಳೇ ಬಹಳವಾಗಿ ನಿರೂಪಿಸಲ್ಪಟ್ಟಿವೆ. ವಾಸುದೇವನ ಮಹಿಮೆ ವರ್ಣಿಸಲ್ಪಟ್ಟಿಲ್ಲವೆನ್ನುವಂತೆ ತೋರುವದು' ಅದಕ್ಕೆ ಕಾರಣ ಹೇಳುವರು.

ಧರ್ಮಾದೀನಾಮಲ್ಪಕಥನೇನ ಪೂರ್ತಿಃ । ನ ವಾಸುದೇವಮಹಿಮ್ನಃ **ಅತಿಕಥಿತಸ್ಯಾಪಿ ॥**

ಎಲ್ಲ ಅಧಿಕಾರಿಗಳಿಗೂ ಧರ್ಮಾದಿಗಳನ್ನು ಭಾರತದಿಂದಲೇ ತಿಳಿಯಲು ಸಾಧ್ಯವಿದ್ದುದರಿಂದ ಭಾರತವೆಂಬ ಒಂದೇ ಗ್ರಂಥದಲ್ಲಿ ಹೇಳಿದರೂ ವ್ಯಾಸರಿಗೆ ಸಾಕೆನ್ನಿಸಿತು. ಭಾರತದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಧರ್ಮಾದಿಗಳಿಗಿಂತ ಹೆಚ್ಚು ಹೇಳಿದ್ದರೂ ಮಂದಾಧಿಕಾರಿಗಳಿಗೆ ತಿಳಿಯಲು ಅಶಕ್ಯವಾದ್ದರಿಂದ ವ್ಯಾಸರಿಗೆ ಭಗವನ್ಮಹಿಮೆ ಹೇಳುವದು ಸಾಕೆನ್ನಿಸಲಿಲ್ಲ ಕಾರಣ ಶ್ರೀಕೃಷ್ಣಮಹಿಮೆ ಪ್ರತಿಪಾದಕ ಇನ್ನೊಂದು ಗ್ರಂಥ ಮಾಡಬೇಕೆಂದು ವ್ಯಾಸರ ಭಾವ. ಧರ್ಮಾದಿಗಳು ಪರಿಮಿತ. ಭಗವನ್ಮಹಿಮೆ ಅಪರಿಮಿತ ಈ ಕಾರಣಕ್ಕೂ ಮತ್ತೆ ಹೇಳುವ ಹಂಬಲವೆಂದೂ ಭಾವ.

ಮಂದಾಧಿಕಾರಿಗಳಿಗಾಗಿ ಗ್ರಂಥಾಂತರ ರಚನೆಯ ಆವಶ್ಯಕತೆಯೇನಿಲ್ಲ. ಶ್ರೀಹರಿಯನ್ನು ತಿಳಿಸದಿರುವ ಸಾಹಿತ್ಯಾದಿಶಾಸ್ತ್ರಗಳಿಂದಲೇ ಅವರಿಗೆ ಶ್ರೇಯಸ್ಸಾಗಬಹುದಲ್ಲ ಎಂದರೆ ಅವುಗಳು ಮೋಕ್ಷಜನಕಗಳೆಂದು ಜ್ಞಾನಿಗಳಿಗೆ ಸಮ್ಮತವಲ್ಲ ಎಂದು ಹೇಳುವರು.

**ನ ತದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।**
**ತದ್ವಾಯಸಂ ತೀರ್ಥಮುಶಂತಿ ಮಾನಸಾ**
**ನ ಯತ್ರ ಹಂಸಾ ನ್ಯಪತನ್ನಿಮಂಕ್ಷಯಾ ॥೧೦॥**

**ಚಿತ್ರಂ ಪದಂ ಅಪಿ** ಆಲಂಕಾರಿಕ ಪದಗಳಿಂದ ಕೂಡಿದ್ದರೂ **ಯದ್ವಚಃ** ಯಾವ ಶಾಸ್ತ್ರವು **ಜಗತ್ಪವಿತ್ರಂ** ಪ್ರಪಂಚವನ್ನೇ ಪಾವನಗೊಳಿಸುವ **ಹರೇಃ ಯಶಃ** ಶ್ರೀಕೃಷ್ಣನ ಮಹಿಮೆಯನ್ನು **ಕರ್ಹಿಚಿತ್** ಎಂದೂ **ನ ಗೃಣೀತ** ಪ್ರತಿಪಾದಿಸುವದಿಲ್ಲವೋ **ತತ್ ವಚಃ ನ** ಅದು ಮೋಕ್ಷಾನುಕೂಲ ಶಾಸ್ತ್ರವಲ್ಲ **ತದ್ವಾಯಸಂ** ಕೇವಲ ಜೀವನೋಪಾಯ ಭೂತವಾದುದು.

**ಯಥಾ** ಹೇಗೆ **ಯತ್ರ** ಯಾವ ತೀರ್ಥದಲ್ಲಿ **ಮಾನಸಾಃ** ಮಾನಸ ಸರೋವರದಲ್ಲಿ ವಿಹರಿಸುವ **ಹಂಸಾಃ** ಬಿಳಿ ರೆಕ್ಕೆಯ ಪಕ್ಷಿಗಳು **ನಿಮಂಕ್ಷಯಾ** ತಾಪಕಳೆದುಕೊಳ್ಳಲು ಸ್ನಾನ ಮಾಡುವ ಇಚ್ಛೆಯಿಂದ **ನ ನ್ಯಪತನ್** ಇಳಿಯುವುದಿಲ್ಲವೋ **ತತ್** ಅದನ್ನು **ವಾಯಸಂ ಪಶ್ಯಂತಿ** ಕಾಗೆಯಿಂದ ಉಪಜೀವ್ಯವೆಂದು ತಿಳಿಯುವರು ಜನರು **ತಥಾ** ಹಾಗೆ **ಯತ್ರ** ಯಾವ ಸಾಹಿತ್ಯಾದಿಶಾಸ್ತ್ರಗಳಲ್ಲಿ **ಮಾನಸಾಃ** ಬ್ರಹ್ಮನ ಮನಸ್ಸಿನಿಂದ ಹುಟ್ಟಿದ **ಹಂಸಾಃ** ಯತಿಗಳಾದ ಸನಕಾದಿಗಳು **ನಿಮಂಕ್ಷಯಾ** ಪರಬ್ರಹ್ಮ ವಿಚಾರೇಚ್ಛೆಯಿಂದ

**ಅನುದಿತಪ್ರಾಯಂ** ಮಂದಾಧಿಕಾರಿಗಳಿಗೆ ಹೇಳದಿದ್ದಂತೆಯೇ. ತ್ರಿಭಾಷಾಗಳಿರುವದರಿಂದ ಮಂದರಿಗೆ ಭಾರತದಲ್ಲಿ ಹೇಳಿದ ಭಗವತ್ತತ್ತ್ವ ತಿಳಿಯುವದು ಶಕ್ಯವಿಲ್ಲವೆಂದು ಭಾವ. **ಅತಃ** ಆದ್ದರಿಂದ **ಯೇನ** ಮಂದಾಧಿಕಾರೂಗಳಿಗೂ ತಿಳಿಯುವಂತೆ ಭಗವದ್ಬೋದಕವಾದ ಪುರಾಣಮಾಡದಿರುವದರಿಂದ **ಅಸೌ** ನಿಮ್ಮ ಮನಸ್ಸು **ನ ತುಷ್ಯೇತ** ಅಲಂಬುದ್ಧಿಯನ್ನು ಹೊಂದಿಲ್ಲ. **ತದ್ದರ್ಶನಂ ಖಿಲಂ ಮನ್ಯೇ** ಮಂದಾಧಿಕಾರಿಗಳಿಗೆ ಭಗವಂತನನ್ನು ತಿಳಿಸುವ ಪುರಾಣ ಉಳಿದಿದೆ ಎಂದು ತಿಳಿಯುವೆನು.

ಮಂದಾಧಿಕಾರಿಗಳೂ ಸಹ ಧರ್ಮಾದಿಗಳನ್ನು ತಿಳಿದಂತೆ ಭಗವಂತನ ಕೀರ್ತಿಯನ್ನು ಭಾರತದಿಂದಲೇ ಏಕೆ ತಿಳಿಯಬಾರದು ಎಂದರೆ ಹೇಳುವರು. -

**ಯಥಾ ಧರ್ಮಾದಯೋ ಹ್ಯರ್ಥಾ ಮುನಿವರ್ಯಾನುವರ್ಣಿತಾಃ ।**
**ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ ॥೯॥**

**ಹೇ ಮುನಿವರ್ಯ** ಸರ್ವಜ್ಞತಮರಾದ ವೇದವ್ಯಾಸರೇ **ತ್ವಯಾ** ನಿಮ್ಮಿಂದ **ಧರ್ಮಾದಯಃ ಅರ್ಥಾಃ** ಧರ್ಮಾದಿಪುರುಷಾರ್ಥಗಳು **ಯಥಾ** ಹೇಗೆ **ಅನುವರ್ಣಿತಾಃ** ಸರ್ವಾಧಿಕಾರಿಗಳಿಗೆ ತಿಳಿಯುವಂತೆ ಭಾರತದಲ್ಲಿ ಉಕ್ತವಾಗಿವೆಯೋ **ತಥಾ** ಹಾಗೆ ಎಲ್ಲರಿಗೂ ತಿಳಿಯುವಂತೆ **ವಾಸುದೇವಸ್ಯ** ಭಗವಂತನ **ಮಹಿಮಾ** ಮಹಿಮೆಯು **ನ ಅನುವರ್ಣಿತಃ** ಉಕ್ತವಾಗಿಲ್ಲ **ಹಿ** ಯಾವ ಕಾರಣ. ಆದ್ದರಿಂದ ಅದು ಉಳಿದಿದೆ ಎಂದು ತಿಳಿಯುವೆನು. ಭಾರತವು ದುರ್ಗಮಾರ್ಥವಾದ್ದರಿಂದ ತಿಳಿಯಲಾರರು. ಆದ್ದರಿಂದ ಅವರ ಶ್ರೇಯಸ್ಸಿಗಾಗಿ ಹರಿಯ ಜ್ಞಾನ ಮಾಡಿಕೊಡುವ ಗ್ರಂಥಾಂತರದ ಆವಶ್ಯಕತೆ ಇದೆ ಎಂದೂ ಭಾವ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ 'ಭಾರತದಲ್ಲಿ ಧರ್ಮಾದಿಗಳೇ ಬಹಳವಾಗಿ ನಿರೂಪಿಸಲ್ಪಟ್ಟಿವೆ. ವಾಸುದೇವನ ಮಹಿಮೆ ವರ್ಣಿಸಲ್ಪಟ್ಟಿಲ್ಲವೆನ್ನುವಂತೆ ತೋರುವದು' ಅದಕ್ಕೆ ಕಾರಣ ಹೇಳುವರು.

ಧರ್ಮಾದೀನಾಮಲ್ಪಕಥನೇನ ಪೂರ್ತಿಃ । ನ ವಾಸುದೇವಮಹಿಮ್ನಃ ಅತಿಕಥಿತಸ್ಯಾಪಿ ॥

ಎಲ್ಲ ಅಧಿಕಾರಿಗಳಿಗೂ ಧರ್ಮಾದಿಗಳನ್ನು ಭಾರತದಿಂದಲೇ ತಿಳಿಯಲು ಸಾಧ್ಯವಿದ್ದುದರಿಂದ ಭಾರತವೆಂಬ ಒಂದೇ ಗ್ರಂಥದಲ್ಲಿ ಹೇಳಿದರೂ ವ್ಯಾಸರಿಗೆ ಸಾಕೆನ್ನಿಸಿತು. ಭಾರತದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಧರ್ಮಾದಿಗಳಿಗಿಂತ ಹೆಚ್ಚು ಹೇಳಿದ್ದರೂ ಮಂದಾಧಿಕಾರಿಗಳಿಗೆ ತಿಳಿಯಲು ಅಶಕ್ಯವಾದ್ದರಿಂದ ವ್ಯಾಸರಿಗೆ ಭಗವನ್ಮಹಿಮೆ ಹೇಳುವದು ಸಾಕೆನ್ನಿಸಲಿಲ್ಲ ಕಾರಣ ಶ್ರೀಕೃಷ್ಣಮಹಿಮೆ ಪ್ರತಿಪಾದಕ ಇನ್ನೊಂದು ಗ್ರಂಥ ಮಾಡಬೇಕೆಂದು ವ್ಯಾಸರ ಭಾವ. ಧರ್ಮಾದಿಗಳು ಪರಿಮಿತ. ಭಗವನ್ಮಹಿಮೆ ಅಪರಿಮಿತ ಈ ಕಾರಣಕ್ಕೂ ಮತ್ತೆ ಹೇಳುವ ಹಂಬಲವೆಂದೂ ಭಾವ.

ಮಂದಾಧಿಕಾರಿಗಳಿಗಾಗಿ ಗ್ರಂಥಾಂತರ ರಚನೆಯ ಆವಶ್ಯಕತೆಯೇನಿಲ್ಲ. ಶ್ರೀಹರಿಯನ್ನು ತಿಳಿಸದಿರುವ ಸಾಹಿತ್ಯಾದಿಶಾಸ್ತ್ರಗಳಿಂದಲೇ ಅವರಿಗೆ ಶ್ರೇಯಸ್ಸಾಗಬಹುದಲ್ಲ ಎಂದರೆ ಅವುಗಳು ಮೋಕ್ಷಜನಕಗಳೆಂದು ಜ್ಞಾನಿಗಳಿಗೆ ಸಮ್ಮತವಲ್ಲ ಎಂದು ಹೇಳುವರು.

**ನ ತದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।**
**ತದ್ವಾಯಸಂ ತೀರ್ಥಮುಶಂತಿ ಮಾನಸಾ**
**ನ ಯತ್ರ ಹಂಸಾ ನ್ಯಪತನ್ನಿಮಂಕ್ಷಯಾ ॥೧೦॥**

**ಚಿತ್ರಂ ಪದಂ ಅಪಿ** ಆಲಂಕಾರಿಕ ಪದಗಳಿಂದ ಕೂಡಿದ್ದರೂ **ಯದ್ವಚಃ** ಯಾವ ಶಾಸ್ತ್ರವು **ಜಗತ್ಪವಿತ್ರಂ** ಪ್ರಪಂಚವನ್ನೇ ಪಾವನಗೊಳಿಸುವ **ಹರೇಃ ಯಶಃ** ಶ್ರೀಕೃಷ್ಣನ ಮಹಿಮೆಯನ್ನು **ಕರ್ಹಿಚಿತ್** ಎಂದೂ **ನ ಗೃಣೀತ** ಪ್ರತಿಪಾದಿಸುವದಿಲ್ಲವೋ **ತತ್ ವಚಃ** **ನ** ಅದು ಮೋಕ್ಷಾನುಕೂಲ ಶಾಸ್ತ್ರವಲ್ಲ **ತದ್ವಾಯಸಂ** ಕೇವಲ ಜೀವನೋಪಾಯ ಭೂತವಾದುದು.

**ಯಥಾ** ಹೇಗೆ **ಯತ್ರ** ಯಾವ ತೀರ್ಥದಲ್ಲಿ **ಮಾನಸಾಃ** ಮಾನಸ ಸರೋವರದಲ್ಲಿ ವಿಹರಿಸುವ **ಹಂಸಾಃ** ಬಿಳಿ ರೆಕ್ಕೆಯ ಪಕ್ಷಿಗಳು **ನಿಮಂಕ್ಷಯಾ** ತಾಪಕಳೆದುಕೊಳ್ಳಲು ಸ್ನಾನ ಮಾಡುವ ಇಚ್ಛೆಯಿಂದ **ನ ನ್ಯಪತನ್** ಇಳಿಯುವುದಿಲ್ಲವೋ **ತತ್** ಅದನ್ನು **ವಾಯಸಂ ಪಶ್ಯಂತಿ** ಕಾಗೆಯಿಂದ ಉಪಜೀವ್ಯವೆಂದು ತಿಳಿಯುವರು ಜನರು **ತಥಾ** ಹಾಗೆ **ಯತ್ರ** ಯಾವ ಸಾಹಿತ್ಯಾದಿಶಾಸ್ತ್ರಗಳಲ್ಲಿ **ಮಾನಸಾಃ** ಬ್ರಹ್ಮನ ಮನಸ್ಸಿನಿಂದ ಹುಟ್ಟಿದ **ಹಂಸಾಃ** ಯತಿಗಳಾದ ಸನಕಾದಿಗಳು **ನಿಮಂಕ್ಷಯಾ** ಪರಬ್ರಹ್ಮ ವಿಚಾರೇಚ್ಛೆಯಿಂದ

ನ ನೃಪತನ್ ಪ್ರವೇಶ ಮಾಡುವದಿಲ್ಲವೋ **ತತ್ ತೀರ್ಥಂ** ಆ ಶಾಸ್ತ್ರವನ್ನು **ವಾಯಸಂ** ಜೀವನಮಾತ್ರೋಪಯೋಗಿ ಎಂದು **ಉಶಂತಿ** ಜ್ಞಾನಿಗಳು ತಿಳಿಯುವರು. ಈ ಶ್ಲೋಕದಲ್ಲಿ **ವಾಯಸಂ** ಎಂಬುದು ಲುಪ್ತೋಪಮಾ.

*ಭಾಗವತತಾತ್ಪರ್ಯ-*

ಆದರೆ ದಾರ್ಷ್ಟಾಂತಿಕದಲ್ಲಿ ಕಾಗಿಯ ಸಂಬಂಧಿ ಎಂಬರ್ಥ ಕೂಡಲಾರದು ಕಾರಣ ತಿಳಿಸುವರು.

ವಾಯಸಂ ತೀರ್ಥಂ ವಯೋಮಾತ್ರಾನುಜೀವಿಶಾಸ್ತ್ರಂ ।

ಪರಲೋಕಸಾಧನವಾಗದ, ಜೀವನ ಮಾತ್ರಕ್ಕೆ ಉಪಯುಕ್ತವಾದ ಶಾಸ್ತ್ರವು.

ವಾಸುದೇವ ಪ್ರತಿಪಾದಕವಾದ ಶಾಸ್ತ್ರಕ್ಕೆ ಮೋಕ್ಷ ಕಾರಣತ್ವವು ಸಜ್ಜನರು ಮಾಡುವ ಶ್ರವಣಾದಿಗಳಿಂದಲೇ ಸಿದ್ಧವಾಗುವದು ಎಂದು ಹೇಳುವರು.

**ಸ ವಾಗ್ವಿಸರ್ಗೋ ಜನತಾಘವಿಪ್ಲವೋ**
**ಯಸ್ಮಿನ್ ಪ್ರತಿಶ್ಲೋಕಮವದ್ಧವತ್ಯಪಿ ।**
**ನಾಮಾನ್ಯನಂತಸ್ಯ ಯಶೋಂಕಿತಾನಿ**
**ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥೧೧॥**

**ಯಸ್ಮಿನ್ ಪ್ರತಿಶ್ಲೋಕಮ್** ಯಾವ ಪ್ರತಿಶ್ಲೋಕದಲ್ಲಿ **ಅಬದ್ಧವತ್ಯಪಿ** ಆಲಂಕಾರಿಕ ಪದಗಳಿಲ್ಲದಿದ್ದರೂ(ಅಪಶಬ್ದಗಳಿರುವುದರಿಂದ ಶಾಬ್ದಿಕರಿಂದ ನಿಂದಿತವಾದರೂ) **ಅನಂತಸ್ಯ** ಶ್ರೀಹರಿಯ **ಯಶೋಂಕಿತಾನಿ** ಕೀರ್ತಿಯನ್ನು ತಿಳಿಸುವ **ನಾಮಾನಿ** ಪದಗಳು **ಸಂತಿ** ಇರುವವೋ ಆದನ್ನು **ಯತ್** ಯಾವಕಾರಣ **ಸಾಧವಃ** ಸಜ್ಜನರು ಹರಿಭಕ್ತರಾದ ಶುಕಾದಿಗಳು **ಶೃಣ್ವಂತಿ** ಹೇಳುವವರಿದ್ದರೆ ಕೇಳುವರು **ಗೃಣಂತಿ** ಕೇಳುವವರಿದ್ದರೆ ಹೇಳುವರು **ಗಾಯಂತಿ** ಹೇಳುವರು.(ಕೇಳುವವರು ಇಲ್ಲದಿದ್ದಾಗ ತಾವೇ ಗಾನ ಮಾಡುವರು) ಆದ್ದರಿಂದ **ಜನತಾಘವಿಪ್ಲವಃ** ಜನರ ಪಾಪನಾಶಕವು **ವಾಗ್ವಿಸರ್ಗಃ** ವಿಶಿಷ್ಟವಚನವುಳ್ಳ ಗ್ರಂಥವು

**ವಿಶೇಷ :-** ಈ ಶ್ಲೋಕದಲ್ಲಿ ಭಗವನ್ಮಾಹಾತ್ಮ್ಯವರ್ಣನವು ಭಕ್ತಿದ್ವಾರಾ ಮೋಕ್ಷಕ್ಕೆ ಕಾರಣವೆಂದು ಅಭಿಪ್ರೇತವಾಗಿದೆ. 'ಭಕ್ತ್ಯರ್ಥಂ ಭಗವನ್ಮಹಿಮೋಕ್ತಿಃ' ಎಂದಿದ್ದಾರೆ. ಸಂಧ್ಯಾಧಿಕರಣದಲ್ಲಿ.

ಶ್ರುತಿಸಿದ್ಧವಾದ ಭಗವತ್ಸ್ವರೂಪಜ್ಞಾನ ನಿವೃತ್ತಕರ್ಮಗಳಿಂದಲೇ ಎಲ್ಲರಿಗೂ ಮೋಕ್ಷವಾಗುವಾಗ ಭಕ್ತಿಯ ಆವಶ್ಯಕತೆಯೇ ಇಲ್ಲ ಆಂದ ಮೇಲೆ ಭಕ್ತಿಗಾಗಿ ಮಾಹಾತ್ಮ್ಯ ವರ್ಣನೆ ಆವಶ್ಯಕವಿಲ್ಲ ಎಂದರೆ ಭಕ್ತಿ ಇಲ್ಲವಾದರೆ ನಿವೃತ್ತ ಕರ್ಮಗಳಿಂದಲೂ ಮೋಕ್ಷವಾಗಲಾರದು ಎಂದು ಹೇಳುವರು.

**ನೈಷ್ಕರ್ಮ್ಯಮಪ್ಯಚ್ಯುತ ಭಾವವರ್ಜಿತಂ ನ**
**ಶೋಭತೇ ಜ್ಞಾನಮಲಂ ನಿರಂಜನಮ್ ।**
**ಕುತಃ ಪುನಃ ಶಶ್ವದಭದ್ರಮೀಶ್ವರೇ**
**ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥೧೨॥**

**ಅಲಂ ನಿರಂಜನಂ** ಸಂವಾದ ಕಾಲದಲ್ಲಿ ದೋಷವನ್ನು ತಂದು ಕೊಡದ ಅಥವಾ ವಿಷಯಸಂಗರೂಪ ಮಲರಹಿತವಾದ **ಜ್ಞಾನಂ** ಶ್ರೀಹರಿ ವಿಷಯಕವೇದಾದಿಜನ್ಯ-ಪರೋಕ್ಷಜ್ಞಾನವು **ಅಕಾರಣಂ** ಯದ್ಯಪಿ ಫಲಾನುಸಂಧಾನ ರೂಪ ಕಾರಣ ರಹಿತವು **ತಥಾऽಪಿ** ಆದರೂ ನೈಷ್ಕರ್ಮ್ಯಮಪಿ ಮೋಕ್ಷ ಕೊಡಲು ಯೋಗ್ಯವಾಗಿದ್ದರೂ **ಅಚ್ಯುತಭಾವವರ್ಜಿತಂ** ಭಗವಂತನಲ್ಲಿ ಭಕ್ತಿ ಇಲ್ಲವಾದರೆ **ನ ಶೋಭತೇ** ಮೋಕ್ಷಜನಕವಾಗಲಾರದು ಹೀಗಿರುವಾಗ **ಶಶ್ವದಭದ್ರಂ** ಮಾಡುವಾಗ ದೋಷದಿಂದ ಕೂಡಿದ ('ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ' ಎಂದಿದೆ.) **ಈಶ್ವರೇ ನ ಚ ಅರ್ಪಿತಂ** ಭಗವಂತನಲ್ಲಿ ಅರ್ಪಿಸದೇ ಇರುವ **ಕರ್ಮ ನ ಶೋಭತೇ** ಕರ್ಮವು ಮೋಕ್ಷಜನಕವಲ್ಲ **ಇತಿ** ಎಂದು **ಕುತಃ ಪುನಃ** ಪ್ರತ್ಯೇಕ ಏನು ಹೇಳುವದು.

**ವಿಶೇಷ :-** ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವೆಂಬುದು ಪ್ರಸಿದ್ಧ ಅದೂ ಸಹ ಭಕ್ತಿ ಇಲ್ಲದೆ ಮೋಕ್ಷಜನಕವಲ್ಲವೆಂದ ಮೇಲೆ ಜ್ಞಾನಕ್ಕಿಂತ ಕಡಿಮೆಯಾದ ಕರ್ಮವು ಭಕ್ತಿ ಇಲ್ಲದೇ ಮೋಕ್ಷಜನಕವಲ್ಲ ಎಂದು ಹೇಳಬೇಕಿಲ್ಲವೆಂದು ಭಾವ.

*ಭಾಗವತತಾತ್ಪರ್ಯ-*

ಇಲ್ಲಿ ಜ್ಞಾನಪದದಿಂದ ಪರೋಕ್ಷಜ್ಞಾನ ವಿವಕ್ಷಿತವಲ್ಲ ಎಂದು ಹೇಳುವರು.

ಪರೋಕ್ಷಜ್ಞಾನಂ ನ ಶೋಭತೇ ।

ಪರೋಕ್ಷಜ್ಞಾನವು ಮುಕ್ತಿಯನ್ನು ಸಾಧಿಸಲಾರದು ಎಂದರ್ಥ. ಅಪರೋಕ್ಷಜ್ಞಾನ ತೆಗೆದುಕೊಳ್ಳಲು ಬಾಧಕ ಹೇಳುವರು.

**ಅಪರೋಕ್ಷಜ್ಞಾನಂ ನ ಭಕ್ತ್ಯಾ ವಿನಾ ಉತ್ಪದ್ಯತೇ ।**

ಈ ಶ್ಲೋಕದಲ್ಲಿ ಅಚ್ಯುತಭಾವವರ್ಜಿತಂ ಎಂದು ಜ್ಞಾನಕ್ಕೆ ಭಕ್ತಿಯಿಲ್ಲದೆ ಉತ್ಪತ್ತಿ ಹೇಳಲ್ಪಟ್ಟಿದೆ. ಅದನ್ನು ಅಪರೋಕ್ಷಜ್ಞಾನವೆಂದು ಹೇಳಿದರೆ ಕೂಡುವದಿಲ್ಲ. ಅಪರೋಕ್ಷಜ್ಞಾನವು ಭಕ್ತಿಯಿಲ್ಲದೆ ಹುಟ್ಟಲಾರದು. ಪರೋಕ್ಷಜ್ಞಾನವಾದರೂ ಭಕ್ತಿಯಿಲ್ಲದವರಿಗೂ ಶಾಸ್ತ್ರದಿಂದ ಸಂಭಾವಿತವೆಂದು ಭಾವ. ಭಕ್ತಿಯು ಅಪರೋಕ್ಷಜ್ಞಾನ ಸಾಧನವೆನ್ನಲು ಪ್ರಮಾಣ ಹೇಳುವರು. 'ಯಸ್ಯ ದೇವೇ ಪರಾ ಭಕ್ತಿಃ' 'ಯಮೇವೈಷ ವೃಣುತೇ ತೇನ ಲಭ್ಯಃ' 'ಯದ್ವಾಸುದೇವಶರಣಾ ವಿದುರಂಜಸೈವ' ಇತ್ಯಾದೇಃ ।

ಯಾರಿಗೆ ಶ್ರೀಹರಿಯಲ್ಲಿ ಉತ್ತಮ ಭಕ್ತಿಯಿದೆಯೋ, ಶ್ರೀಹರಿಯು ಯಾರನ್ನು ಭಕ್ತನೆಂದು ಸ್ವೀಕರಿಸುವನೋ ಆ ಭಕ್ತನಿಂದಲೇ ಶ್ರೀಹರಿ ಹೊಂದಲು ಶಕ್ಯ. ಶ್ರೀವಾಸುದೇವಭಕ್ತನಿಗೆ ಶ್ರೀಹರಿಯು ಅಪರೋಕ್ಷವಾಗಿ ತಿಳಿದಿರುವನು ಮುಂತಾದ ಪ್ರಮಾಣಗಳಿಂದ ಅಪರೋಕ್ಷಜ್ಞಾನಕ್ಕೆ ಭಕ್ತಿಯು ಮುಖ್ಯ ಕಾರಣವೆಂದು ತಿಳಿಯುತ್ತದೆ.

ಈ ರೀತಿಯಾಗಿ ಹರಿಭಕ್ತಿಯು ಆವಶ್ಯಕವಾದ್ದರಿಂದ ಭಕ್ತಿಯನ್ನು ಹುಟ್ಟಿಸಲು ಶ್ರೀಹರಿಮಾಹಾತ್ಮ್ಯ ಪ್ರತಿಪಾದಕವಾದ ಗ್ರಂಥವನ್ನು ಮಾಡಿರೆಂದು ಪ್ರಾರ್ಥಿಸುವರು.

**ಅತೋ ಮಹಾಭಾಗ ಭವಾನಮೋಘದೃಕ್**
**ಶುಚಿಶ್ರವಾಃ ಸತ್ಯರತೋ ಧೃತವ್ರತಃ ।**
**ಉರುಕ್ರಮಸ್ಯಾಖಿಲಬಂಧಮುಕ್ತಯೇ**
**ಸಮಾಧಿನಾಽನುಸ್ಮರ ಯದ್ವಿಚೇಷ್ಟಿತಮ್ ॥೧೩॥**

**ಅತಃ** ಹರಿಭಕ್ತಿಯು ಆವಶ್ಯಕವಾದುದರಿಂದ ಅದನ್ನು ಹುಟ್ಟಿಸಲು **ಹೇ ಮಹಾಭಾಗ** ಅಪರಿಮಿತ ಐಶ್ವರ್ಯ ಸಂಪನ್ನನೇ (ಇದರಿಂದ ಹಣದ ಆಶೆಗೆ ಸುಳ್ಳು ಹೇಳುವವನಲ್ಲ ಎಂದು ಸೂಚಿತವಾಗುವದು) **ಅಮೋಘದೃಕ್** ಅಬಾಧಿತಜ್ಞಾನವುಳ್ಳವನು (ಇದರಿಂದ ವಿವಕ್ಷಿತಾರ್ಥ ತತ್ತ್ವಜ್ಞಾನ ತಿಳಿಸಿದಂತಾಯಿತು) **ಶುಚಿಶ್ರವಾಃ ಭವಾನ್ ಯತಃ** ಯಾವ ಕಾರಣ ನೀವು ಸಾಕ್ಷಾತ್ ವಿಷ್ಣುವೇ ಆಗಿರುವಿ. (ಇದರಿಂದ ಪ್ರಮಾದ ಅಪಟುಕರಣಾದಿ ದೋಷವಿಲ್ಲವೆಂದು ಭಾವ) **ಸತ್ಯರತಃ** ಕಂಡಂತೆ ಹೇಳುವವರು (ಇದರಿಂದ ವಿಪ್ರಲಂಭಕತ್ವವಿಲ್ಲವೆಂದಂತಾಯಿತು) **ಧೃತವ್ರತಃ** ಮುಕ್ತಿಸಾಧನವನ್ನು ಉಪದೇಶ ಮಾಡುವರೆಂಬ ವ್ರತಧಾರಣ ಮಾಡಿದವರು (ಇದರಿಂದ ವಿವಕ್ಷಾ ಇದೆ

ಎಂದಂತಾಯಿತು) **ಉರುಕ್ರಮಸ್ಯ** ಅಪರಿಮಿತ ಪರಾಕ್ರಮವುಳ್ಳ ವಿಷ್ಣುವಿನ **ಯದ್ವಿಚೇಷ್ಟಿತಂ** ವಿವಿಧ ಲೀಲೆಗಳನ್ನುದ್ದೇಶಿಸಿ **ಅಖಿಲಬಂಧಮುಕ್ತಯೇ** ಎಲ್ಲ ಸಜ್ಜನರ ಬಂಧ ಕಳೆಯಲು **ಸಮಾಧಿನಾ** ಸಮಾಧಿಭಾಷೆಯಿಂದಲೇ **ಅನುಸ್ಮರ** ಮಂದರಿಗೆ ತಿಳಿಯುವಂತೆ ಗ್ರಂಥವನ್ನು ರಚಿಸು ಎಂದು ಭಾವ.

*ಭಾಗವತತಾತ್ಪರ್ಯ-*

ಇಲ್ಲಿ ನಾಲ್ಕು ವಿಶೇಷಣಗಳು ಗ್ರಂಥಕಾರರಿಗೆ ಆಪ್ತತ್ವ ಹೇಳಲು ಹೊರಟಿವೆ. ಅವುಗಳಲ್ಲಿ ಶುಚಿಶ್ರವಾಃ ಎಂಬುದಕ್ಕೆ ಶುದ್ಧವಾದ ಕೀರ್ತಿಯುಳ್ಳವನೆಂದು ಅರ್ಥ ಮಾಡಿದರೆ ಈ ವಿಶೇಷಣವು ಆಪ್ತತ್ವೋಪಪಾದಕವಾಗಲಾರದು ಕಾರಣ ಇಲ್ಲಿ ವಿವಕ್ಷಿತಾರ್ಥ ಹೇಳುವರು.

**ಶುಚಿಶ್ರವಾಃ ವಿಷ್ಣುಃ ।**

'ರುದ್ರೋ ಬಹುಶಿರಾ ಬಭ್ರುರ್ವಿಶ್ವಯೋನಿಃ ಶುಚಿಶ್ರವಾಃ' ಎಂದು ವಿಷ್ಣುಸಹಸ್ರನಾಮದಲ್ಲಿರುವುದರಿಂದ ಶುಚಿಶ್ರವಾ ಎಂದರೆ ವಿಷ್ಣು ಎಂದರ್ಥ. ನೀವು ವಿಷ್ಣು ಆದ್ದರಿಂದ ಕರಣಪಾಟವಾದಿಗಳನ್ನು ಶಂಕಿಸಲಾಗದು. ಆದ್ದರಿಂದ ಆಪ್ತತ್ವೋಪಪಾದಕವಾಗುವದು.

**ಸಮಾಧಿನಾ ಸಮಾಧಿಭಾಷಯಾ ।**

ಸಮಾಧಿನಾ ಎಂಬುದಕ್ಕೆ ಏಕಾಗ್ರಚಿತ್ತದಿಂದ ಎಂಬರ್ಥ ವಾಗದಿರಲೆಂದು ವ್ಯಾಖ್ಯಾನಿಸುವರು. ಸಮಾಧಿನಾ ಸಮಾಧಿಭಾಷೆಯಿಂದ ಎಂದರ್ಥ. 'ಉಕ್ತೋ ಯೋ ಮಹಿಮಾ ವಿಷ್ಣೋಃ ಸ ತೂಕ್ತೋ ಹಿ ಸಮಾಧಿನಾ' ಎಂದು ವಚನವಿರುವದರಿಂದ ವಿಷ್ಣುವಿನ ಮಹಿಮೆ ಹೇಳುವ ವಾಕ್ಯಗಳಿಂದ ಭಾರತದಲ್ಲಿ ದರ್ಶನ ಗುಹ್ಯಭಾಷೆಗಳೂ ಉಂಟು. ಅದರಂತೆ ಇಲ್ಲಿ ಅವುಗಳನ್ನು ಸೇರಿಸದೇ ಭಾಗವತವನ್ನು ಮಾಡೆಂದು ಭಾವ.

ಅನುಸ್ಮರ ಎಂಬುದಕ್ಕೆ ಜ್ಞಾಪಿಸಿಕೋ ಎಂಬ ಅರ್ಥವಾಗದಿರಲು ಪ್ರಕೃತ್ಯರ್ಥ ಹೇಳುವರು.

**ಸ್ಮರಣಂ ಗ್ರಂಥಕೃತಿಃ ।**

ಸ್ಮರಣವೆಂದರೆ ಗ್ರಂಥಮಾಡುವದು ಎಂದರ್ಥ. ಸ್ಮರ ಧಾತುವಿಗೆ ಗ್ರಂಥ ಎಂಬರ್ಥದಲ್ಲಿ ಪ್ರಯೋಗ ತೋರಿಸುವರು.

**ಸ್ಮರಂತಿ ಚ ಇತ್ಯಾದೇಃ ।**

ಗ್ರಂಥವನ್ನು ಮಾಡುತ್ತಾರೆ ಎಂದರ್ಥ. ಆದಿಪದದಿಂದ 'ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಮುಂತಾದವನ್ನು ಸ್ವೀಕರಿಸಬೇಕು. ಈ ಪ್ರಯೋಗದಿಂದ ಈ ಅರ್ಥ ಸಿದ್ಧವಾಗುವದು.

ಮಂದಾಧಿಕಾರಿಗಳಿಗಾಗಿ ಭಗವನ್ಮಹಿಮೆಯನ್ನು ನಾನು ಹೇಳಬೇಕಿಲ್ಲ. ಕಪಿಲ ಕಣಾದಾದಿಗಳು ಹೇಳಿದ ಪದಾರ್ಥಜ್ಞಾನದಿಂದಲೇ ಅವರಿಗೆ ಮೋಕ್ಷವಾಗುವದು ಎಂದರೆ ಅದಕ್ಕೆ ಹೇಳುವರು.

**ಅತೋಽನ್ಯಥಾ ಕಿಂಚನ ಯದ್ವಿವಕ್ಷಿತಂ**
**ಪೃಥಗ್ ದೃಶಸ್ತತ್ಕೃತರೂಪನಾಮಭಿಃ ।**
**ನ ಕರ್ಹಿಚಿತ್ ಕ್ವಾಪಿ ಚ ದುಃಸ್ಥಿತಾ ಮತಿಃ**
**ಲಭೇತ ವಾತಾಹತನೌರಿವಾಸ್ಪದಮ್ ॥೧೪॥**

**ಅತಃ** ಭಗವಂತನ ವ್ಯಾಪಾರಗಳಿಂದ **ಅನ್ಯಥಾ** ಬೇರೆ ರೀತಿಯ **ಯತ್ಕಿಂಚನ** ಪ್ರಧಾನಾದಿಗಳು **ವಿವಕ್ಷಿತಂ** ಆ ಆ ವಾದಿಗಳಿಗೆ ಮೋಕ್ಷಸಾಧನವೆಂದು ಅಭಿಪ್ರೇತ ವಾಗಿದೆಯೋ **ತತ್ಕೃತರೂಪನಾಮಭಿಃ** ಪ್ರಧಾನಾದಿಗಳಲ್ಲಿ ಹೇಳಲ್ಪಟ್ಟ ಏನು ರೂಪಗಳು ತ್ರಿಗುಣತ್ವ, ಗುಣಾಶ್ರಯತ್ವ ಮೊದಲಾದ ಲಕ್ಷಣಗಳು ಮತ್ತು ಪ್ರಧಾನ, ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮುಂತಾದ ನಾಮಗಳು ಇವುಗಳಿಂದ **ಪೃಥಗ್‌ದೃಶಃ** ಮೋಕ್ಷಸಾಧನವಿಷಯದಲ್ಲಿ ಬೇರೆ ಬೇರೆ ಜ್ಞಾನವುಳ್ಳ ಅಧಿಕಾರಿಗಳಿಗೆ **ಮತಿಃ** ಬುದ್ಧಿಯು **ದುಃಸ್ಥಿತಾ** ಚಂಚಲವಾಗಿ **ಕರ್ಹಿಚಿತ್** ಎಂದೂ **ಕ್ವಾಪಿ** ಯಾವ ವಿಷಯದಲ್ಲಿಯೂ **ಆಸ್ಪದಂ** ದೃಢವಾದ ಅವಸ್ಥಾನವನ್ನು **ವಾತಾಹತನೌರಿವ** ಸಮುದ್ರದಲ್ಲಿಯ ಗಾಳಿಗೆ ಸಿಲುಕಿದ ದೋಣಿಯಂತೆ **ನ ಲಭೇತ** ಹೊಂದಲಾರದು. ಬೇರೆ ವಾದಿಗಳು ಹೇಳಿದ ಮೋಕ್ಷಸಾಧನಗಳುಂಟೇನೋ ನಿಜ ಆದರೆ ಪರಸ್ಪರ ವಿರುದ್ಧ ನಾಮರೂಪವುಳ್ಳದ್ದಾಗಿ ಹೇಳಿದ ಅವುಗಳನ್ನು ಕಂಡು ಅಧಿಕಾರಿಗಳಿಗೆ ಸಂಶಯ ಬರಬಹುದೇ ಹೊರತು ನಿಶ್ಚಯವಾಗಲಾರದು ಎಂದು ಭಾವ. ಯದ್ಯಪಿ 'ನ ತದ್ವಚಶ್ಚಿತ್ರಪದಂ' ಮುಂತಾಗಿ ಈ ವಿಷಯವನ್ನು ದೂಷಣ ಮಾಡಿದೆ. ಆದರೂ ಐಹಿಕ ಶ್ರೇಯಸ್ಸಾಧನಪ್ರತಿಪಾದಕ ಸಾಹಿತ್ಯಾದಿಶಾಸ್ತ್ರಗಳನ್ನು ಮಾತ್ರ ಅಲ್ಲಿ ದೂಷಿಸಿದೆ. ಹೊರತು ಆಮುಷ್ಮಿಕ ಶ್ರೇಯಸ್ಸಾಧನ ಪ್ರತಿಪಾದಕಗಳನ್ನಲ್ಲ ಎಂದು ತಿಳಿದವರ ಶಂಕೆಯನ್ನು ಇಲ್ಲಿ

ನಿರಾಕರಿಸಿರುವರು ಎಂದು ತಿಳಿಯಬೇಕು. ಆದ್ದರಿಂದಲೇ ಅಲ್ಲಿ ಚಿತ್ರಪದಂ ಎಂದು ವಾಯಸಂ ಎಂದೂ ಹೇಳಿದೆ. ನ್ಯಾಯಸ್ಸಾಮ್ಯದಿಂದ ಇವುಗಳೂ ಅಲ್ಲೇ ದೂಷಿತವೆನ್ನಲಾಗುವದಿಲ್ಲ. ಕಪಿಲಕಣಾದಾದಿಗಳು ಋಷಿಗಳಾದ್ದರಿಂದ ನಾರದ ತುಲ್ಯರು ಅವರ ಮಾತಿನಲ್ಲಿ ಅವಿಶ್ವಾಸ ಮಾಡಲು ಕಾರಣವಿಲ್ಲ ಎಂಬ ಅಭಿಪ್ರಾಯ ಉಂಟು. ಆದ್ದರಿಂದಲೇ ಸಂಶಯ ಬರಬಹುದು ನಿಶ್ಚಯವಾಗಲಾರದು ಎಂದು ಉತ್ತರಿಸುವರು.

ವಿಷಯಾಸಕ್ತರಾದ ಮಂದರನ್ನು ಕುರಿತು ಕಾಮ್ಯಕರ್ಮಗಳನ್ನೇ ಹೇಳಬೇಕು. ಅವರಿಗೆ ಅಲ್ಲಲ್ಲಿ ಆಕಾಂಕ್ಷೆ ಇದೆ. ಮೋಕ್ಷಸಾಧನವನ್ನು ಹೇಳಿದರೆ ವಿರಕ್ತನಿಗೆ ವಾಣಿಜ್ಯ ಉಪದೇಶಿಸಿದಂತಾಗುವದು ಅನಾಕಾಂಕ್ಷಿತವಾದ್ದರಿಂದ ಎಂದರೆ ಅದಕ್ಕೆ ಹೇಳುವರು.

**ಜುಗುಪ್ಸಿತಂ ಧರ್ಮಕೃತೇಽನುಶಾಸನಂ**
**ಸ್ವಭಾವರಕ್ತಸ್ಯ ಮಹಾನ್ ವ್ಯತಿಕ್ರಮಃ ।**
**ಯದ್ವಾಕ್ಯತೋ ಧರ್ಮ ಇತೀತರಸ್ಥಿತೋ**
**ನ ಮನ್ಯತೇ ಸತ್ಯನಿವಾರಣಂ ಜನಃ ॥೧೫॥**

**ಸ್ವಭಾವರಕ್ತಸ್ಯ** ಯಾರ ಉಪದೇಶವನ್ನು ಅಪೇಕ್ಷಿಸದೇ ತಾವಾಗಿಯೇ ಕಾಮ್ಯ ವಿಷಯಗಳಲ್ಲಿ ಆಸಕ್ತರಾದ ಅಧಿಕಾರಿಗಳಿಗೆ **ಧರ್ಮಕೃತೇ** ಪ್ರವೃತ್ತಿಧರ್ಮ (ಕಾಮ್ಯಕರ್ಮವನ್ನು) ತಿಳಿಸಲು **ಅನುಶಾಸನಂ** ಶಾಸ್ತ್ರರಚಿಸುವದು **ಜುಗುಪ್ಸಿತಂ** ನಿಮ್ಮಂತಹ ದಯಾಲುಗಳಿಗೆ ನಿಂದಿತವಾದುದು ಆದ್ದರಿಂದ ಅದರ ನಿರಾಕರಣವನ್ನೇ ನೀವು ಮಾಡಬೇಕು. ಏಕೆಂದರೆ **ಯದ್ವಾಕ್ಯತಃ** ಯಾವ ನಿಮ್ಮಂಥ ಶ್ರೇಷ್ಠರಾದವರ ಮಾತಿನಿಂದ ತಿಳಿದು ಬರುವುದೇ ಧರ್ಮ ಇತಿ ಧರ್ಮವೆಂದು ಮುಖ್ಯಪುರುಷಾರ್ಥ ಸಾಧನವೆಂದು **ಯಃ** ಯಾವ **ಇತರಃ ಜನಃ** ಅಧಿಕಾರಿಯು **ಸ್ಥಿತಃ** ವಿಶ್ವಾಸವಿಟ್ಟಿರುವನು **ತಸ್ಯ** ಆ ಕುಮಾರ್ಗದಲ್ಲಿ ಹೊರಟ ಅವನನ್ನು **ನಿವಾರಣಂ ನ ಮನ್ಯತೇ ಚೇತ್** ನಿವಾರಣ ಮಾಡದಿದ್ದರೆ **ತಸ್ಯ** ಅವನಿಗೆ ಶ್ರೇಷ್ಠನು ಮಾಡುವ **ಮಹಾನ್ ವ್ಯತಿಕ್ರಮಃ** ದೊಡ್ಡ ಅನ್ಯಾಯವು ಆದ್ದರಿಂದ ನಿಂದತವೆಂದು ಭಾವ.

**ವಿಶೇಷ :-** ಒಬ್ಬ ವ್ಯಕ್ತಿ ಅಡ್ಡ ಹಾದಿ ಹಿಡಿದಿರುವನು ಎಂದಾದರೆ ತನ್ನಲ್ಲಿ ವಿಶ್ವಾಸ ಮಾಡುವನು ಎಂದಾದರೆ ಅವನನ್ನು ಆ ಮಾರ್ಗದಿಂದ ಬಿಡಿಸಬೇಕೇ ಹೊರತು ಅದೇ ಸರಿಯೆಂದು ಹೇಳುವದು ಕೃಪಾಲುವಿನ ಧರ್ಮವಲ್ಲ.

*ಭಾಗವತತಾತ್ಪರ್ಯ-*

ಇಲ್ಲಿ ಧರ್ಮ ಶಬ್ದಕ್ಕೆ ನಿವೃತ್ತಧರ್ಮ ಎಂದರ್ಥವಾದರೆ ಅದನ್ನು ಹೇಳುವದು ನಿಂದಿತವಾಗಲಾರದು. ಕಾರಣ ವ್ಯಾಖ್ಯಾನಿಸುವರು-

ಪ್ರವೃತ್ತಿಧರ್ಮಕೃತೇ ।

ಪ್ರವೃತ್ತಿಧರ್ಮ ಹೇಳುವದು ನಿಂದ್ಯವೆಂದು ಭಾವ.

ಕಪಿಲಕಣಾದಾದಿ ಗ್ರಂಥಗಳಲ್ಲಿಯಂತೆ ಮಂದಾಧಿಕಾರಿಗಳಿಗೆ ನನ್ನ ಮಾತಿನ ಮೇಲೇಯೂ ವಿಶ್ವಾಸವಿಲ್ಲ. ಆದ್ದರಿಂದ ಅವರಿಗಾಗಿ ಶ್ರೀಹರಿ ಮಾಹಾತ್ಮ್ಯ ಪ್ರತಿಪಾದಕ ಗ್ರಂಥನಿರ್ಮಾಣ ನಾನು ಮಾಡಬೇಕಿಲ್ಲ ಎಂದರೆ ಅದಕ್ಕೆ ಹೇಳುವರು.

**ವಿಚಕ್ಷಣೋऽಸ್ಯಾರ್ಹತಿ ವೇದಿತುಂ ವಿಭೋ-**
**ರನಂತಪಾರಸ್ಯ ನಿವೃತ್ತಿತಃ ಸುಖಂ ।**
**ಪ್ರವರ್ತಮಾನಸ್ಯ ಗುಣೈರನಾತ್ಮನಃ**
**ತತೋ ಭವಾನ್ ದರ್ಶಯ ಚೇಕ್ಷಿತಂ ವಿಭೋಃ ॥೧೬॥**

**ವಿಚಕ್ಷಣಃ** ಮಂದಾಧಿಕಾರಿಗಳಲ್ಲಿಯೂ ನಿಪುಣನು **ಅನಾತ್ಮನಃ** ಮನೋಜಯ ವಿಲ್ಲದ **ಗುಣೈಃ** ವಿಷಯಗಳಿಗಾಗಿ **ಪ್ರವೃತ್ತಮಾನಸ್ಯ** ಆಸಕ್ತನಾದ ಅಧಿಕಾರಿಗೆ **ನಿವೃತ್ತಿತಃ** ವಿಷಯ ವೈರಾಗ್ಯದಿಂದ ಮತ್ತು ಭಗವನ್ಮಾಹಾತ್ಮ್ಯಶ್ರವಣಾದಿಗಳಿಂದ **ಅನಂತಪಾರಸ್ಯ** ಕಾಲತಃ ದೇಶತಃ ಅಪರಿಚ್ಛಿನ್ನವಾದ **ವಿಭೋಃ** ಗುಣತಃ ವ್ಯಾಪ್ತನಾದ ಪರಮಾತ್ಮನ ದೆಸೆಯಿಂದ (ಅವನ ಅನುಗ್ರಹದಿಂದ) **ಯತ್ ಸುಖಂ** ಮೋಕ್ಷರೂಪಸುಖ ಆಗುವದೋ **ತದ್ವೇದಿತುಂ** ಅದನ್ನು ಪುರುಷಾರ್ಥವೆಂದು ತಿಳಿಯಲು **ಅರ್ಹತಿ** ನಿಮ್ಮ ಗ್ರಂಥದಿಂದ ಯೋಗ್ಯನಾಗಿರುವನು **ತತಃ** ಆದ್ದರಿಂದ **ಭವಾನ್** ಪೂಜ್ಯರಾದ ತಾವು **ವಿಭೋಃ** ದೇಶಕಾಲಗುಣಗಳಿಂದ ವ್ಯಾಪ್ತನಾದ ಶ್ರೀಹರಿಯ **ಚೇಷ್ಟಿತಂ** ಲೀಲೆಯನ್ನು **ದರ್ಶಯ** ತೋರಿಸು ಅಂದರೆ ಲೀಲಾಪ್ರತಿಪಾದಕ ಗ್ರಂಥವನ್ನು ರಚಿಸು ಎಂದರ್ಥ.

**ವಿಶೇಷ :-**ಯಾವನು ನಿಪುಣನೋ ಅಂದರೆ ಸಮಯ ಪಾದದಲ್ಲಿ ಹೇಳಿದ ಯುಕ್ತಿಗಳಿಂದ ಕಪಿಲಾದಿಗಳು ಆಪ್ತರಲ್ಲವೆಂದು ನಿಶ್ಚಯವುಳ್ಳವನು ಮತ್ತು ಅಮೋಘದೃಕ್ ಶುಚಿಶ್ರವಾಃ ಎಂದು ಹೇಳಿದ ರೀತಿಯಿಂದ ನಿಮ್ಮಲ್ಲಿ ಆಪ್ತಿ ನಿಶ್ಚಯವುಳ್ಳವನು ಎಂದರ್ಥ.

*ಭಾಗವತತಾತ್ಪರ್ಯ-*

ಈಶ್ಲೋಕದಲ್ಲಿ 'ಅನಂತಪಾರಸ್ಯ ಸುಖಂ ವೇದಿತುಮರ್ಹತಿ' ಎಂದರೆ ಶ್ರೀಹರಿಯ ಸುಖವನ್ನೇ ತನ್ನ ಪುರುಷಾರ್ಥವೆಂದು ತಿಳಿಯುವದು ಯೋಗ್ಯ ಎಂದು ಅರ್ಥ ಕಾಣುವದು. ಅದು ಸರಿಯಲ್ಲ ಆದಕ್ಕೆ ಯೋಜನೆ ತೋರಿಸುವರು.

**ಅನಂತಪಾರಸ್ಯ ವಿಭೋಃ ಸಕಾಶಾದ್ಯತ್ಸುಖಮ್ ।**

ಮೂಲದಲ್ಲಿ ಸಕಾಶಾತ್ ಎಂಬ ಪದ ಅಧ್ಯಾಹಾರ ಮಾಡಿ ಯೋಜಿಸಬೇಕು ಎಂದು ಭಾವ. ದೇಶ ಕಾಲಗುಣಗಳಿಂದ ವ್ಯಾಪ್ತನಾದ ಶ್ರೀಹರಿಯ ಅನುಗ್ರಹದಿಂದ ವ್ಯಕ್ತವಾಗುವ ತನ್ನ ಸುಖವನ್ನೇ ಪುರುಷಾರ್ಥವೆಂದು ತಿಳಿಯುವನು ಎಂದು ಭಾವ.

ಶ್ರೀಹರಿಯಲ್ಲಿ ಭಕ್ತಿಯನ್ನು ಹುಟ್ಟಿಸಲು ಹರಿಮಾಹಾತ್ಮ್ಯ ಪ್ರತಿಪಾದಕ ಗ್ರಂಥವನ್ನು ನಾನು ಮಾಡಿದ್ದಾದರೆ ಆದನ್ನು ಅಭ್ಯಸಿಸುವವರಿಗೆ ಶ್ರೀಹರಿಯಲ್ಲಿಯೇ ಅತಿಸ್ನೇಹ ಉಂಟಾಗಿ ನಿತ್ಯನೈಮಿತ್ತಿಕಧರ್ಮ ಸಂಕೋಚವಾಗುವದು. ಆದ್ದರಿಂದ ಅನರ್ಥವಾಗುವದು ಎಂದರೆ ಶ್ರೀಹರಿಯನ್ನು ಭಕ್ತಿಯಿಂದ ಭಜಿಸುವವರಿಗೆ ತಮ್ಮ ಧರ್ಮಸಂಕೋಚವಾದರೂ ಯಾವ ತೊಂದರೆ ಇಲ್ಲ ಎಂಬ ಅಭಿಪ್ರಾಯದಿಂದ ಭಕ್ತಿಗೆ ಫಲ ನಿಯಮವನ್ನು ಹೇಳುವರು.

**ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-**
**ರ್ಭಜನ್ನಪಕ್ವೋऽಥ ಪತೇತ್ತತೋ ಯದಿ ।**
**ಯತ್ರ ಕ್ವ ವಾ ಭದ್ರಮಭೂದಮುಷ್ಯ**
**ಕೋ ವಾऽರ್ಥ ಆಪ್ತೋ ಭಜತಾ ಸ್ವಧರ್ಮಂ ॥೧೭॥**

**ಸ್ವಧರ್ಮಂ** ತನಗೆ ವಿಹಿತವಾದ ಧರ್ಮಗಳನ್ನು ಸಂಕೋಚ ಮಾಡಿ (ಭಗವದ್ವಿಷಯಕ ಸ್ವಧರ್ಮಾನುಷ್ಠಾನಾತ್ಮಕ ಪ್ರವೃತ್ತಧರ್ಮವನ್ನು ಬಿಟ್ಟು) **ಹರೇಃ ಚರಣಾಂಬುಜಂ ಭಜನ್** ನಿವೃತ್ತಧರ್ಮವಿಧಾಯಕ ಶಾಸ್ತ್ರೋಕ್ತ ಆಚಾರಗಳಿಂದ ಶ್ರೀಹರಿಯ ಪಾದಕಮಲಗಳನ್ನು ಸೇವಿಸುವವನು **ಅಪಕ್ವಃ** ಭಕ್ತಿಪರಿಪಾಕವಿಲ್ಲದೇ ಸೇವೆಯಿಂದ ಅಪರೋಕ್ಷಜ್ಞಾನರೂಪಫಲ ಹೊಂದದೇ **ತತಃ** ಹರಿಭಜನದಿಂದ **ಯದಿ ಪತೇತ್** ಒಂದು ವೇಳೆ ರಾಗಾದಿವಿಘ್ನಗಳಿಂದ ಸ್ಖಲಿತನಾದರೆ (ಬಿಟ್ಟರೆ) ಅಧರ್ಮದಲ್ಲಿ ಮೃತನಾದರೆ **ತರ್ಹಿ** ಹಾಗೆ **ಯತ್ರ ಕ್ವ ವಾ** ಮುಂದಿನ ಯಾವುದೇ ಜನ್ಮದಲ್ಲಿ **ಅಮುಷ್ಯ** ಭಜನಾಸಕ್ತನಿಗೆ **ಭದ್ರಂ ಅಭೂತ್** ಕಲ್ಯಾಣವೇ ಆಗುವದು.(ಮುಂದೆ ಆಗುವದು

ನಿಶ್ಚಯವಿದ್ದಾಗ ಆಗಿದೆ ಎಂದು ಹೇಳುವ ಪದ್ಧತಿ ಇರುವುದರಿಂದ ಅಭೂತ್ ಎಂದಿರುವರು.) ಹೊರತು ಸ್ವಧರ್ಮಸಂಕೋಚದಿಂದ ಅನರ್ಥವಾಗದು. 'ಕ್ಷಿಪ್ರಂ ಭವತಿ ಧರ್ಮಾತ್ಮಾ' 'ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕೀಂ' ಮುಂತಾದ ಪ್ರಮಾಣಗಳಿವೆ. ಹಾಗಾದರೆ ಇದರಂತೆ ಭಕ್ತಿಯಿಲ್ಲದೆ ಸ್ವಧರ್ಮವನ್ನೇ ಮಾಡುವವನಿಗೆ ವಿಘ್ನ ಬಂದರೂ ಜನ್ಮಾಂತರದಲ್ಲಿ ಫಲ ಬರುವದರಿಂದ ಎರಡು ಸಮಾನವೇ ಎಂದರೆ ಹೇಳುವರು. **ಅಭಜತಾಂ** ಭಕ್ತಿ ಮಾಡದವರಿಗೆ **ಸ್ವಧರ್ಮಂ ಭಜತಾಂ** ಸ್ವಧರ್ಮ ಮಾಡುವವನಿಗೆ ವಿಘ್ನ ಬಂದಾಗ **ಕೋ ವಾ ಅರ್ಥಃ ಆಪ್ತಃ** ಯಾವ ಫಲ ದೊರಕಿದೆ? ಯಾವದೂ ಇಲ್ಲ ಕಾರಣ ಸಾಮ್ಯವಿಲ್ಲ. ಹರಿಭಕ್ತಿಯನ್ನು ಸಂಕೋಚಮಾಡಿ ಸ್ವಧರ್ಮಾಚರಣ ಮಾಡಿದರೆ ಫಲವಿಲ್ಲವೆಂದು ಭಾವ.

ಕೇವಲ ಶ್ರೀಹರಿಯನ್ನೇ ಭಜಿಸುವವನಿಗೆ ಲೌಕಿಕ ಪ್ರಯತ್ನದಲ್ಲಿಯೂ ಸಂಕೋಚವಾಗುವದು. ಆಗ ವಿಷಯ ನಿಮಿತ್ತಸುಖ ಸಿಗದಿದ್ದರೆ ಶರೀರ ಇರುವದೇ ಕಷ್ಟವಾಗುವದು ಎಂದರೆ ಹೇಳುವರು.

**ತಸ್ಯೈವ ಹೇತೋಃ ಪ್ರಯತೇತ ಕೋವಿದೋ**
**ನ ಲಭ್ಯತೇ ಯದ್ಭ್ರಮತಾಮುಪರ್ಯಧಃ ।**
**ತಲ್ಲಭ್ಯತೇ ದುಃಖವದನ್ಯತಃ ಸುಖಂ**
**ಕಾಲೇನ ಸರ್ವತ್ರ ಗಭೀರರಂಹಸಾ** ॥೧೮॥

**ಕೋವಿದಃ** ಬುದ್ಧಿವಂತನು **ಉಪರಿ** ಸ್ವರ್ಗಾದಿಗಳಲ್ಲಿ **ಅಧಃ** ನರಕಾದಿಗಳಲ್ಲಿ **ಭ್ರಮತಾಂ** ತಿರುಗುವವರಿಗೆ **ಯತ್** ಯಾವ ಮೋಕ್ಷಸುಖವು **ನ ಲಭ್ಯತೇ** ದೊರಯುವುದಿಲ್ಲವೋ **ತಸ್ಯೈವ ಹೇತೋಃ** ಆ ಮೋಕ್ಷಸುಖಕ್ಕಾಗಿಯೇ **ಪ್ರಯತೇತ** ಚೆನ್ನಾಗಿ ಪ್ರಯತ್ನಿಸಬೇಕು. ಹೊರತು ವಿಷಯ ಸುಖಕ್ಕಾಗಿ ಅಲ್ಲ. **ತತ್ ಸುಖಂ** ವಿಷಯ ಸುಖವು **ಅನ್ಯತಃ** ಪ್ರಯತ್ನ ಮಾಡದಿದ್ದರೂ ಪ್ರಾಚೀನ ಕರ್ಮದಿಂದ **ಗಭೀರರಂಹಸಾ** ಅಜ್ಞಾತ ವೇಗವುಳ್ಳ **ಕಾಲೇನ** ಕಾಲನಾಮಕ ಹರಿಯಿಂದ **ದುಃಖವತ್** ದುಃಖದಂತೆ **ಸರ್ವತ್ರ** ನರಕಾದಿಗಲ್ಲಿಯೂ **ಲಭ್ಯತೇ** ದೊರೆಯುವದು. ಆದ್ದರಿಂದ ಅದಕ್ಕೆ ಮಹಾ ಪ್ರಯತ್ನ ಬೇಕಿಲ್ಲ.

ಇದನ್ನೇ 'ಅಪ್ರಾರ್ಥಿತಾನಿ ದುಃಖಾನಿ ಯಥಾ ವಾ ಯಾಂತಿ ದೇಶಿನಾಂ । ಸುಖಾನ್ಯಪಿ ತಥಾ' ಬೇಡದಿದ್ದರೂ ದುಃಖಬಂದಂತೆ ಸುಖವೂ ಬೇಡದಿದ್ದರೂ ದೈವಾನುಸಾರ ಬರುವದು ಎಂದು ಭಾವ.

**ವಿಜಯಧ್ವಜೀಯ-**

**ತಸ್ಯೈವ ಹೇತೋಃ** ಅನಂತ ರೂಪನಾದ ಶ್ರೀಹರಿಯ ಪ್ರಸಾದ ಲಭ್ಯವಾದ ಯಾವ ಸುಖವುಂಟೋ ಆ ಸುಖ ಕಾರಣಕ್ಕೆ ಪ್ರಯತ್ನಿಸಿರಿ ಬೇರೆಯದಕ್ಕೆ ಬೇಡ. ಅಂದರೆ ಮೋಕ್ಷ ಸುಖಕ್ಕೆ ಕಾರಣವಾದ ನಿವೃತ್ತಧರ್ಮವೆಂಬ ಸಾಧನಕ್ಕಾಗಿ ಪ್ರಯತ್ನಮಾಡಿ. **ಯತ್ಸುಖಂ** ಯಾವ ಸುಖವು ಭೂಸ್ವರ್ಗಾದಿಗಳಲ್ಲಿ ಪ್ರವೃತ್ತರಾಗುವ ಪ್ರವೃತ್ತಧರ್ಮಿಗಳಿಗೆ ಸುಲಭವಲ್ಲವೋ ಅಂತಹ ಸುಖವು ನಿರಂತರ ನಿವೃತ್ತಧರ್ಮ ಮಾಡುವದರಿಂದ ಶ್ರೀಹರಿಯ ಅನುಗ್ರಹದಿಂದ ಎಲ್ಲ ದೇಶಕಾಲಗಳಲ್ಲಿ ನಿರ್ದುಃಖವಾದ ಸ್ವರೂಪಸುಖ ಅಭಿವ್ಯಕ್ತವಾಗುವದು. ಆದ್ದರಿಂದ ನಿವೃತ್ತಧರ್ಮವೇ ಶ್ರೇಷ್ಠ. ಹೇಗೆ ಪಾಪಿಗಳಿಗೆ ಪ್ರಯತ್ನ ಮಾಡದಿದ್ದರೂ ದುಃಖ ದೊರೆಯುವದೋ ಅದರಂತೆ ನಿವೃತ್ತಧರ್ಮ ಮಾಡಿದವರಿಗೆ ಅನಾಯಾಸವಾಗಿ ಸುಖ ದೊರೆಯುವದು. **ಅನ್ಯತಃ** ವಿಷಯಭೋಗದಿಂದ ಬರುವ ದುಃಖ ಮಿಶ್ರಸುಖಕ್ಕೆ ಪ್ರಯತ್ನಿಸದೆ ನಿತ್ಯವಾದ ಕೇವಲ ಸುಖಕ್ಕೆ ಪ್ರಯತ್ನಿಸಬೇಕು.

ಶ್ರೀಹರಿ ಸೇವಕನಿಗೆ ಕಲ್ಯಾಣವೇ ಆಗುವದು ಎಂದು ಹೇಳಿದ್ದನ್ನೇ ಉಪಪಾದಿಸುವರು.

**ನ ವೈ ಜನೋ ಜಾತು ಕಥಂಚನಾವ್ರಜೇ-**
**ನ್ಮುಕುಂದಸೇವ್ಯನ್ಯವದಂಗಸಂಸೃತಿಮ್ ।**
**ಸ್ಮರನ್ಮುಕುಂದಾಂಘ್ರ್ಯುಪಗೂಹನಂ ಪುನಃ**
**ವಿಹಾತುಮಿಚ್ಛೇನ್ನ ರಸಗ್ರಹೀ ಜನಃ ॥೧೯॥**

**ಹೇ ಅಂಗ** ಪರಮಪ್ರೇಮಾಸ್ಪದನೇ **ಮುಕುಂದಸೇವೀ ಜನಃ** ಹರಿಭಕ್ತಿ ಮುಂತಾದ ಯೋಗಾನುಷ್ಠಾನ ಮಾಡುವ ವ್ಯಕ್ತಿಯು **ಅನ್ಯವತ್** ಮುಕುಂದನನ್ನು ಸೇವಿಸದವನಂತೆ (ಇದು ವ್ಯತಿರೇಕದೃಷ್ಟಾಂತ) **ಜಾತು** ಎಂದೂ **ಕಥಂಚನ** ಯಾವುದೇ ಕಾರಣದಿಂದ **ಸಂಸೃತಿಂ** ದೇಹ ಪರಂಪರೆಯನ್ನು **ನ ಆವ್ರಜೇತ್** ಹೊಂದಲಾರನು. (ಯೋಗಸಾಧನೋಪಯುಕ್ತ ದೇಹ ಪರಂಪರೆಯನ್ನೇ ಹೊಂದುವನೆಂದು ಭಾವ.) ವೈ ಶಬ್ದದಿಂದ 'ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ' ಮುಂತಾದ ಪ್ರಮಾಣಪ್ರಸಿದ್ಧಿಯನ್ನು ತಿಳಿಸುವರು. ಮುಂದಿನ ಜನ್ಮಗಳಲ್ಲಿ ವಿಷಯಾಭಿಲಾಷೆಯಿಂದ ಹರಿಧ್ಯಾನಾದಿರೂಪ ಯೋಗವನ್ನು ಬಿಡಲಾರನೆಂದು

ಹೇಳುವರು. **ಅಯಂ ರಸಗ್ರಹೀಜನಃ** ಇವನು ಸಾರವನ್ನು ತಿಳಿದವನು ಪೂರ್ವಾಭ್ಯಾಸ ಬಲದಿಂದ **ಮುಕುಂದಾಂಘ್ರ್ಯುಪಗೂಹನಂ** ಪರಮಾತ್ಮನ ಪಾದಗಳ ಮನಸಾ ಆಲಿಂಗನವನ್ನು (ಧ್ಯಾನವನ್ನು) **ಸ್ಮರನ್** ಪುರುಷಾರ್ಥಸಾಧನವಾದ್ದರಿಂದ ಕರ್ತವ್ಯವೆಂದು ತಿಳಿದು **ಪುನಃ** ತುಚ್ಛವಿಷಯಪ್ರಾಪ್ತಿಯಾದರೂ **ವಿಹಾತುಂ ನ ಇಚ್ಛೇತ್** ಬಿಡಲಿಚ್ಛಿಸುವದಿಲ್ಲ ಧ್ಯಾನಮಾಡುವದಕ್ಕಾಗಿಯೇ ಪ್ರಯತ್ನಿಸುವನು ಇದನ್ನೇ-

'ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ।
ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ॥

ಎಂದು ಹೇಳಿರುವನು ಶ್ರೀಕೃಷ್ಣ. ಈ ಶ್ಲೋಕವನ್ನು 'ಉಪಮರ್ದಂತು' ಎಂಬಲ್ಲಿ ಜ್ಞಾನಿಗಳಿಗೆ ಅನಿಷ್ಟಪ್ರಾರಬ್ಧದ ಉಪಮರ್ದ ಆಗುವದು ಎಂಬುದಕ್ಕೆ ಸಮ್ಮತಿಯಾಗಿ ಟೀಕಾಕಾರರು ಉದಾಹರಿಸಿದ್ದಾರೆ ಅದನ್ನು ಅಪಕ್ವರ ವಿಷಯದಲ್ಲಿ ವ್ಯಾಖ್ಯಾನಿಸಿದ್ದು ಹೇಗೆ ಅಂದರೆ ಯಾವಾಗ ಈ ರೀತಿ ಅಪಕ್ವರಿಗೇನೇ ಕಲ್ಯಾಣವಾಗುವದು ಎಂದ ಮೇಲೆ ಭಕ್ತಿಯ ಪರಿಪಾಕವುಳ್ಳ ಜ್ಞಾನಿಗಳಿಗೆ ಮಂಗಳವಾಗುವದೇನು ಹೇಳುವದು ಎಂಬ ಕೈಮುತ್ಯಾಭಿಪ್ರಾಯವಿರುವುದರಿಂದ ವಿರೋಧವಿಲ್ಲ.

ಮುಂದೆ ಮಾಡುವ ಗ್ರಂಥದಲ್ಲಿ ಈ ಪ್ರಮೇಯವನ್ನು ಅವಶ್ಯವಾಗಿ ಹೇಳಬೇಕೆಂಬ ಅಭಿಪ್ರಾಯದಿಂದ ಹೇಳುವರು.

**ಇದಂ ಹಿ ವಿಶ್ವಂ ಭಗವಾನಿವೇತರೋ**
**ಯತೋ ಜಗತ್ಸ್ಥಾನನಿರೋಧಸಂಭವಃ ।**
**ತದ್ಧಿ ಸ್ವಯಂ ವೇದ ಭವಾಂಸ್ತಥಾಽಪಿ**
**ಪ್ರಾದೇಶಮಾತ್ರಂ ಭವತಃ ಪ್ರದರ್ಶಿತಮ್** ॥೨೦॥

**ಯತಃ** ಯಾವ ಕಾರಣ ಯಾವನಿಂದ **ಜಗತ್ಸ್ಥಾನನಿರೋಧಸಂಭವಃ** ಪ್ರಪಂಚದ ಸ್ಥಿತಿ, ನಾಶ, ಉತ್ಪತ್ತಿಗಳು ಆಗುವವೋ ಆ **ಭಗವಾನ್** ಭಗವಂತನು **ಇತರೋಽಪಿ** ಜಗತ್ತಿನಿಂದ ಭಿನ್ನನಾದರೂ **ವಿಶ್ವಮಿವ** ಪ್ರಪಂಚವೇ ಎಂಬಂತೆ ಹೇಳಲ್ಪಡುವನು 'ಸರ್ವಂ ಖಲ್ವಿದಂ ಬ್ರಹ್ಮ' ಮುಂತಾಗಿ ಸ್ವಾತಂತ್ರ್ಯವಿರುವದರಿಂದ ಹೊರತು ವಾಸ್ತವಿಕ ಅಭೇದವಿದ್ದುದರಿಂದಲ್ಲ. **ತತ್ ಸರ್ವಂ ಖಲು** ಎಂಬ ವಾಕ್ಯಕ್ಕೆ ನಾನು ಹೇಳಿದ ತಾತ್ಪರ್ಯವನ್ನು **ಭವಾನ್** ತಾವು **ಸ್ವಯಂ ವೇದ** ತಿಳಿದೇ ಇದ್ದೀರಿ ಯಾರೂ ಹೇಳಬೇಕಿಲ್ಲ. **ತಥಾಽಪಿ** ಆದರೂ **ಭವತಃ** ಪ್ರತಿ ತಮ್ಮ ಎದುರಿಗೆ **ಪ್ರಾದೇಶಮಾತ್ರಂ**

ಸ್ವಲ್ಪವೇ ನನ್ನಿಂದ ಹೇಳಲ್ಪಟ್ಟಿದೆ. ಉಪಾಧ್ಯಾಯರಿಗೆ ಬಾಲಕರು ಒಪ್ಪಿಸಿದಂತೆ ಅವ್ಯಾಕೃತಾಕಾಶಸದೃಶಸರ್ವಜ್ಞರಾದ ತಮಗೆ ಪ್ರಾದೇಶಪರಿಮಿತ (ಚೋಟುದ್ದ) ಪ್ರದರ್ಶಿತವೆಂದರ್ಥ. ಅಂತೂ ಜೀವಜಡಾತ್ಮಕಗಳಿಂದ ಅಭೇದ ಹೇಳಿದರೆ ಅದು ಜೀವ ಜಡಗಳ ಸತ್ತಾದಿಪ್ರದನೆಂಬ ಅಭಿಪ್ರಾಯವುಳ್ಳದ್ದು. ವಾಸ್ತವ ಅಭೇದ ಪ್ರತಿಪಾದಕವಲ್ಲವೆಂದು ವರ್ಣಿಸಿರಿ. ಎಂದು ಭಾವ.

ಭಗವಂತನ ಅವತಾರನಾದುದರಿಂದ ನಿಮಗೆ ಭಗವಂತನ ವಿಷಯದಲ್ಲಿ ನಾವೇನೂ ಹೇಳಬೇಕಿಲ್ಲ ಎಂದು ಸೂಚಿಸುತ್ತ ಭಗವನ್ಮಾಹಾತ್ಮ್ಯವನ್ನು ವರ್ಣಿಸಿರಿ ಎಂದು ವಿಜ್ಞಾಪಿಸುವರು.

**ತ್ವಮಾತ್ಮನಾತ್ಮಾನಮವೈಹ್ಯಮೋಘದೃಕ್**
**ಪರಸ್ಯ ಪುಂಸಃ ಪರಮಾತ್ಮನಃ ಕಲಾಮ್ ।**
**ಅಜಂ ಪ್ರಜಾತಂ ಜಗತಃ ಶಿವಾಯ ತನ್**
**ಮಹಾನುಭಾವಾಭ್ಯುದಯೋಽಪಿ ಗಣ್ಯತಾಮ್ ॥೨೧॥**

**ಹೇ ಅಮೋಘದೃಕ್** ಅಬಾಧಿತ ಜ್ಞಾನವುಳ್ಳವನೇ **ತ್ವಂ** ನೀನು **ಅಜಂ** ಉತ್ಪತ್ತಿ ರಹಿತನಾದ **ಆತ್ಮಾನಂ** ನಿನ್ನನ್ನು **ಪರಮಾತ್ಮನಃ** ಕ್ಷರಾಕ್ಷರೋತ್ತಮ ದೇಹವುಳ್ಳ ಆದ್ದರಿಂದಲೇ **ಪರಸ್ಯ** ಲೋಕವಿಲಕ್ಷಣನಾದ **ಪುಂಸಃ** ಪುರುಷನಾಮಕ ಶ್ರೀಹರಿಯ **ಕಲಾಂ** ಸ್ವರೂಪಾಂಶವೆಂದು **ಜಗತಃ** ಸಜ್ಜನರ (ಪ್ರಪಂಚದ) **ಶಿವಾಯ** ಮೋಕ್ಷಾದಿ ಪುರುಷಾರ್ಥಸಾಧನವನ್ನು ತಿಳಿಸುವದಕ್ಕಾಗಿ **ಪ್ರಜಾತಂ** ಶುಕ್ಲಶೋಣಿತ ಸಂಬಂಧವಿಲ್ಲದೆ ಅವತರಿಸಿದವನೆಂದು **ಆತ್ಮನಾ ಅವೈಹಿ** ಸ್ವಯಮೇವ ತಿಳಿದಿರುವುದು(ಲೋಟ್ ಲಡರ್ಥದಲ್ಲಿದೆ ಇಲ್ಲವಾದರೆ ಅಮೋಘದೃಕ್ ತ್ವ ಅನುಪಪನ್ನವಾಗುವದು. ತದ್ಧಿ ಸ್ವಯಂ ವೇದ ಎಂಬುದು ವಿರುದ್ಧವಾಗುವದು) **ತತ್** ಲೋಕಹಿತಕ್ಕಾಗಿ ಅವತರಿಸಿದ್ದರಿಂದ **ಮಹಾನುಭಾವಾಭ್ಯುದಯಃ ಅಪಿ** ಅಪರಿಮಿತ ಸಾಮರ್ಥ್ಯವುಳ್ಳ ಶ್ರೀಹರಿಯ ಪರಾಕ್ರಮವು **ಗಣ್ಯತಾಂ** ಹೇಳಲ್ಪಡಲಿ.

ಭಗವಂತನ ಮಹಿಮೆ ವರ್ಣನದಿಂದ ಜಗತ್ಕಲ್ಯಾಣ ಹೇಗೆ ಆಗುವದೆಂದು ಹೇಳುವರು

**ಇದಂ ಹಿ ಪುಂಸಸ್ತಪಸಃ ಶ್ರುತಸ್ಯ ವಾ**
**ಸ್ವಿಷ್ಟಸ್ಯ ಸೂಕ್ತಸ್ಯ ಚ ಬುದ್ಧದತ್ತಯೋಃ ।**

**ಅವಿಪ್ಲುತೋऽರ್ಥಃ ಕವಿಭಿರ್ನಿರೂಪಿತೋ**
**ಯದುತ್ತಮಶ್ಲೋಕಗುಣಾನುವರ್ಣನಮ್** ॥೨೨॥

**ಯದುತ್ತಮಶ್ಲೋಕಗುಣಾನುವರ್ಣನಂ** ಶ್ರೀಹರಿಯ ಗುಣಗಳ ಕೀರ್ತನವು ಏನಿದೆಯೋ **ಇದಂ** ಇದು **ಶ್ರುತಸ್ಯ** ಶ್ರವಣದ **ಸ್ವಿಷ್ಟಸ್ಯ** ಉತ್ತಮ ಕಲ್ಪದಿಂದ ಮಾಡಿದ ಯಜ್ಞಕ್ಕೆ **ಸೂಕ್ತಸ್ಯ** ಅಧ್ಯಯನದ **ಬುದ್ಧದತ್ತಯೋಃ** ಜ್ಞಾನದಾನಗಳಿಗೆ **ಅವಿಪ್ಲುತಃ ಅರ್ಥಃ** ಅವಿನಾಶಿಯಾದ ಫಲವೆಂದು **ಕವಿಭಿಃ** ಜ್ಞಾನಿಗಳಿಂದ **ನಿರೂಪಿತಃ** ಹೇಳಲ್ಪಟ್ಟಿದೆ.

**ವಿಶೇಷ :-**ನೀವು ಹರಿಗುಣಾನುವರ್ಣನ ಮಾಡಿದರೆ ಅದನ್ನು ಶ್ರವಣ ಮಾಡುವ ಸಜ್ಜನರಿಗೆ ತಪಸ್ಸೇ ಮೊದಲಾದವು ಅಪರೋಕ್ಷಜ್ಞಾನದ್ವಾರಾ ನಿತ್ಯ ಫಲಜನಕವಾಗುವದು ಎಂದು ಭಾವ.

ಶ್ರೀಹರಿಮಾಹಾತ್ಮ್ಯ ಶ್ರವಣ ಮಾಡುವ ಸಜ್ಜನರಿಗೆ ಫಲ ಆಗುವದು ಎಂಬುದಕ್ಕೆ ನಾನೇ ದೃಷ್ಟಾಂತ ಎಂಬ ಅಬಿಪ್ರಾಯದಿಂದ ತಮ್ಮ ವೃತ್ತಾಂತವನ್ನು ಹೇಳುವರು.

**ಅಹಂ ಪುರಾತೀತಭವೇऽಭವಂ ಮುನೇ**
**ದಾಸ್ಯಾಸ್ತು ಕಸ್ಯಾಶ್ಚನ ವೇದವಾದಿನಾಮ್ ।**
**ನಿರೂಪಿತೋ ಬಾಲಕ ಏವ ಯೋಗಿನಾಂ**
**ಶುಶ್ರೂಷಣೇ ಪ್ರಾವೃಷಿ ನಿರ್ವಿವಕ್ಷತಾಮ್** ॥೨೩॥

**ಪುರಾ** ಹಿಂದಿನ ಬ್ರಹ್ಮಕಲ್ಪದಲ್ಲಿ **ಅತೀತಭವೇ** ಪೂರ್ವಜನ್ಮದಲ್ಲಿ **ವೇದವಾದಿನಾಂ** ವೇದಾರ್ಥ ವಿಚಾರಮಾಡುವ ಬ್ರಾಹ್ಮಣರ **ಕಸ್ಯಾಶ್ಚನ ದಾಸ್ಯಾಸ್ತು** ಒಬ್ಬ ವಿಶಿಷ್ಟ ದಾಸಿಯಿಂದ **ಅಹಂ** ನಾನು **ಅಭವಂ** ಜನಿಸಿದೆನು. **ಹೇ ಮುನೇ** ವ್ಯಾಸರೇ **ಪ್ರಾವೃಷಿ** (ಉಪಲಕ್ಷಣಯಾ ಶರದಿ ಚ ಪ್ರಾವೃಟ್ ಮತ್ತು ಶರತ್ ಕಾಲದಲ್ಲಿ) ಅರ್ಥಾತ್ ಚಾತುರ್ಮಾಸ್ಯದಲ್ಲಿ **ನಿರ್ವಿವಕ್ಷತಾಂ** ಒಂದೇ ಸ್ಥಳದಲ್ಲಿ ವಾಸಿಸಲಿಚ್ಛಿಸುವ **ಯೋಗಿನಾಂ** ಸಂನ್ಯಾಸಿಗಳ **ಶುಶ್ರೂಷಣೇ** ಸೇವೆ ಮಾಡಲು **ಬಾಲಕ ಏವ** (ಚಂಚಲತೆ ಇಲ್ಲದ) ಹುಡುಗನಿರುವಾಗಲೇ **ನಿರೂಪಿತಃ** ನಿಯೋಜಿಸಲ್ಪಟ್ಟೆನು.

**ತೇ ಮಯ್ಯಪೇತಾಖಿಲಚಾಪಲೇऽರ್ಭಕೇ**
**ದಾಂತೇ ಯತಕ್ರೀಡನಕೇऽನುವರ್ತಿನಿ ।**

**ಚಕ್ರುಃ ಕೃಪಾಂ ಯದ್ಯಪಿ ತುಲ್ಯದರ್ಶನಾಃ**
**ಶುಶ್ರೂಷಮಾಣೇ ಮುನಯೋಽಲ್ಪಭಾಷಿಣೆ** ॥೨೪॥

**ಯದ್ಯಪಿ ತುಲ್ಯದರ್ಶನಾಃ** ಗುಣಕ್ರಿಯಾರೂಪಗಳಿಂದ ಸಮನಾದ ಬ್ರಹ್ಮನನ್ನು ಕಾಣುವ ಅಥವಾ ಯಥಾಸ್ಥಿತ ವಸ್ತುಗಳನ್ನು ತಿಳಿಯುವ ಮಿತ್ರಶತ್ರುಪಕ್ಷಗಳನ್ನು ಸಮನಾಗಿ ಕಾಣುವವರು **ತಥಾಽಪಿ** ಆದರೂ **ತೇ** ಆ **ಮುನಯಃ** ಸನ್ಯಾಸಿಗಳು **ಅಪೇತಾಖಿಲಚಾಪಲೇ** ಎಲ್ಲ ಚಂಚಲ ಸ್ವಭಾವವನ್ನು ತೊರೆದ **ಅರ್ಭಕೇ** ಚಿಕ್ಕವನಾದ **ದಾಂತೇ** ಜಿತೇಂದ್ರಿಯ, (ಇಂದ್ರಿಯ ನಿಗ್ರಹವುಳ್ಳ) **ಯತಕ್ರೀಡನಕೇ** ಆಟದ ಸಾಧನೆಗಳನ್ನು ತ್ಯಜಿಸಿದ **ಅನುವರ್ತಿನಿ** ಅನುಸರಿಸುವ **ಅಲ್ಪಭಾಷಿಣೆ** ಮಿತವಾಗಿ ಮಾತನಾಡುವ (**ಅಲ್ಪಧಾರಿಣೆ** ಎಂಬ ಪಾಠವಿದ್ದಾಗ ಬಾಲ ಶರೀರ ಧರಿಸಿದ ಎಂದರ್ಥ) **ಶುಶ್ರೂಷಮಾಣೇ** ಸೇವಿಸುವ **ಮಯಿ** ನನ್ನಲ್ಲಿ ಕೃಪಾಂ **ಚಕ್ರುಃ** ದಯೆಮಾಡಿದರು.

ಅವರಲ್ಲಿದ್ದಾಗ ತನ್ನ ಶರೀರ ಯಾತ್ರಾ ಕ್ರಮವನ್ನು ಹೇಳುವರು.

**ಉಚ್ಛಿಷ್ಟಲೇಪಾನನುಮೋದಿತೋ ದ್ವಿಜೈಃ**
**ಸಕೃಚ್ಚ ಭುಂಜೇ ತದಪಾಸ್ತಕಿಲ್ಬಿಷಃ ।**
**ಏವಂ ಪ್ರವೃತ್ತಸ್ಯ ವಿಶುದ್ಧಚೇತಸ-**
**ಸ್ತದ್ಧರ್ಮ ಏವಾಭಿರುಚಿಃ ಪ್ರಜಾಯತೇ** ॥೨೫॥

**ದ್ವಿಜೈಃ** ಸನ್ಯಾಸಿಗಳಿಂದ(ಬ್ರಾಹ್ಮಣರಿಗೇ ಸನ್ಯಾಸಾಶ್ರಮ ಎಂದು ತಿಳಿಸಲು ದ್ವಿಜೈಃ ಎಂದಿರುವರು) **ಉಚ್ಛಿಷ್ಟಲೇಪಾನ್** ಉಂಡುಳಿದ ಪಾತ್ರೆಗೆ ಅಂಟಿದ ಅನ್ನಾದಿಗಳನ್ನು **ಅನುಮೋದಿತಃ** ಅವರು ಉಂಡ ಪಾತ್ರೆಗಳನ್ನು ತೆಗೆದು ತೊಳೆಯುವದು, ಕಸಗುಡಿಸಿ ಶಗಣೆಯಿಂದ ಸಾರಿಸುವದು ಮತ್ತು ಉಳಿದ ಅನ್ನ ತಿನ್ನುವದಕ್ಕೆ ಅಪ್ಪಣೆ ಪಡೆದು **ಸಕೃಚ್ಚ ಭುಂಜೇ** ಒಪ್ಪತ್ತು ಮಾತ್ರ ಊಟ ಮಾಡುತ್ತಿದ್ದೆನು. ಇದರಿಂದ ಅಪ್ಪಣೆ ಇಲ್ಲದೇ ಉಚ್ಛಿಷ್ಟ ಮುಟ್ಟುವ ಅಧಿಕಾರವೂ ಶೂದ್ರರಿಗೆ ಇಲ್ಲ ಉಣ್ಣುವದಂತು ದೂರ ಉಳಿಯಿತು ಎಂದು ಭಾವ. ಯತಿಗಳು ಒಂದೇ ಹೊತ್ತು ಉಣ್ಣುವುದರಿಂದ ನನಗೂ ಒಂದೇ ಹೊತ್ತು ಊಟ ಎಂದು ಭಾವ. **ತದಪಾಸ್ತಕಿಲ್ಬಿಷಃ** ಒಂದೇ ಸಲ ಉಚ್ಛಿಷ್ಟ ಭೋಜನದಿಂದ ಪಾಪವನ್ನು ಕಳೆದುಕೊಂಡೆನು **ಏವಂ ಪ್ರವೃತ್ತಸ್ಯ** ಈ ರೀತಿ ನಡೆದ ನನಗೆ **ವಿಶುದ್ಧಚೇತಸಃ** ವಿಶೇಷವಾಗಿ ಶುದ್ಧಾಂತಃಕರಣನಾದವಗೆ **ತದ್ಧರ್ಮೇ ಏವ** ಸನ್ಯಾಸಿಗಳ

ಧರ್ಮವಾದ ವೈರಾಗ್ಯ, ಭಗವತ್ಕಥಾಶ್ರವಣಾದಿಗಳಲ್ಲೇ **ಅಭಿರುಚಿಃ** ಉತ್ಕಂಠತೆಯು **ಪ್ರಜಾಯತೇ** ಉಂಟಾಯಿತು. ಈಗಲೂ ಮಹಾತ್ಮರ ಉಚ್ಛಿಷ್ಟ ಭೋಜನದಿಂದ ಈ ಫಲವಾಗುವದು ಎಂದು ತಿಳಿಸಲು ಲಟ್ ಪ್ರಯೋಗ ಮಾಡಿರುವರು.

ಅಭಿರುಚಿಯಿಂದ ಏನಾಯಿತು ಎಂದು ಹೇಳುವರು.

**ತತ್ರಾನ್ವಹಂ ಕೃಷ್ಣಕಥಾಃ ಪ್ರಗಾಯತಾಮ**
**ನುಗ್ರಹೇಣಾಶೃಣವಂ ಮನೋಹರಾಃ ।**
**ತಾ ಶ್ರದ್ಧಯಾ ಮೇಽನುಸವಂ ವಿಶೃಣ್ವತಃ**
**ಪ್ರಿಯಶ್ರವಸ್ಯಾಂಗ ತದಾ ಭವನ್ಮತಿಃ ॥೨೬॥**

**ಹೇ ಅಂಗ** ಶ್ರೀ ವೇದವ್ಯಾಸರೇ **ತತ್ರ** ಅವರ ಹತ್ತಿರ **ಅನ್ವಹಂ** ಪ್ರತಿದಿನವೂ **ಅನುಸವಂ** ಮೂರು ಹೊತ್ತೂ **ಪ್ರಗಾಯತಾಂ** ಕೀರ್ತನ ಮಾಡುವ ಸನ್ಯಾಸಿಗಳ **ಅನುಗ್ರಹೇಣ** ಆಜ್ಞಾರೂಪ ಅನುಗ್ರಹದಿಂದ **ಮನೋಹರಾಃ** ಸುಂದರವಾದ **ಕೃಷ್ಣಕಥಾಃ** ಕಥೆಗಳನ್ನು **ಶ್ರದ್ಧಯಾ** ಭಕ್ತಿಯಿಂದ **ವಿಶೃಣ್ವತಃ** ಕೇಳುವ **ಮೇ** ನನಗೆ **ಪ್ರಿಯಶ್ರವಸಿ** ಪ್ರಿಯವಾದ ಕೀರ್ತಿಯುಳ್ಳ ಶ್ರೀಹರಿಯಲ್ಲಿ **ತದಾ** ಆಗ **ಮತಿಃ ಅಭವತ್** ಮನಸ್ಸು ಪ್ರವೇಶಿಸಿತು. (ಮಾಹಾತ್ಮ್ಯಜ್ಞಾನವಾಯಿತು.)

ಆ ಜ್ಞಾನವನ್ನೇ ತಿಳಿಸುವರು.

**ತಸ್ಮಿಂಸ್ತದಾ ಲಬ್ಧರುಚೇರ್ಮಹಾಮತೇ**
**ಪ್ರಿಯಶ್ರವಸ್ಯಸ್ಖಲಿತಾ ಮತಿರ್ಮಮ ।**
**ಯಯಾಹ ಮೇ ಸದಸತ್ಸ್ವಮಾಯಯಾ**
**ಪಶ್ಯೇ ಮಯಿ ಬ್ರಹ್ಮಣಿ ಕಲ್ಪಿತಂ ಪರೇ ॥೨೭॥**

**ಹೇ ಮಹಾಮತೇ** ವ್ಯಾಸರೇ **ತದಾ** ಆಗ **ತಸ್ಮಿನ್ ಪ್ರಿಯಶ್ರವಸಿ** ಆ ಭಗವಂತನಲ್ಲಿ **ಲಬ್ಧರುಚೇಃ ಮಮ** ರುಚಿಯನ್ನು ಹೊಂದಿದ ನನಗೆ **ಅಸ್ಖಲಿತಾ ಮತಿಃ ಅಭವತ್** ಅಪ್ರತಿಹತವಾದ ನಿರಂತರ ಜ್ಞಾನ ಉಂಟಾಯಿತು. **ಯಯಾ** ಯಾವ ಅಸ್ಖಲಿತವಾದ ಜ್ಞಾನದಿಂದ **ಅಹಂ** ನಾನು **ಸದಸತ್ ಏತತ್** ಕಾರ್ಯಕಾರಣಾತ್ಮಕ ಜಗತ್ತು **ಮಯಿ ಸ್ಥಿತೇ** ನನ್ನಲ್ಲಿ ನಿಯಾಮಕನಾಗಿರುವ **ಬ್ರಹ್ಮಣಿ** ಪರಮಾತ್ಮನಲ್ಲಿ **ಸ್ವಮಾಯಯಾ** ಇದು ಇಲ್ಲಿ ಇರಲಿ ಎಂಬ ತನ್ನ ಇಚ್ಛೆಯಿಂದ **ಕಲ್ಪಿತಂ** ಸ್ಥಾಪಿತವೆಂದು **ಪಶ್ಯೇ** ತಿಳಿದೆನು.

ಸನ್ಯಾಸಿಗಳು ಸೇವೆಯಿಂದ ನನ್ನ ನಿಯಾಮಕನಾದ ಪರಬ್ರಹ್ಮನಲ್ಲಿ ಇದು ಇಲ್ಲೇ ಸುಖವಾಗಿ ಇರಲಿ ಎಂಬ ತನ್ನ ಇಚ್ಛೆಯಿಂದಲೇ ಎಲ್ಲ ಜಗತ್ತು ಸ್ಥಾಪಿತವಾಗಿದೆ ಎಂಬ ಅಚಲವಾದ ಜ್ಞಾನ ಉಂಟಾಯಿತು ಎಂದರ್ಥ.

*ಭಾಗವತತಾತ್ಪರ್ಯ-*

ಈ ಶ್ಲೋಕದ ಉತ್ತರಾರ್ಧದಲ್ಲಿ ಮಯಿ ಬ್ರಹ್ಮಣಿ ಅಂದರೇ ನಾನೇ ಆದ ಬ್ರಹ್ಮನಲ್ಲಿ ತನ್ನ ಅವಿದ್ಯೆಯಿಂದ ಆರೋಪಿತವಾಗಿದೆ ಈ ಜಗತ್ತು ಎಂದು ಅನ್ಯಥಾಜ್ಞಾನ ಬರುವದು. ಅದನ್ನು ಪರಿಹರಿಸಲು ಸ್ಥಿತೇ ಎಂಬ ಪದ ಅಧ್ಯಾಹಾರ ಮಾಡಿ ಯೋಜನೆ ತೋರಿಸುವರು.

**ಮಯಿ ಸ್ಥಿತೇ ಬ್ರಹ್ಮಣಿ ಸ್ಥೀಯತಾಮತ್ರೇತೀಶ್ವರೇಚ್ಛಯಾ ಪರಿಕಲ್ಪಿತಮ್ ॥**

ನನಗೆ ನಿಯಾಮಕನಾಗಿದ್ದ ಬ್ರಹ್ಮನಲ್ಲಿ ಜಗತ್ತು ಪರಬ್ರಹ್ಮನ ಇಚ್ಛೆಯಿಂದ ಸ್ಥಾಪಿಸಲ್ಪಟ್ಟದ್ದು.

ಈ ರೀತಿ ಮಾಹಾತ್ಮ್ಯಜ್ಞಾನದಿಂದ ಸುದೃಢ ಸ್ನೇಹವೂ ನನಗೆ ಉಂಟಾಯಿತು ಎಂದು ಹೇಳುವರು.

**ಇತ್ಥಂ ಶರತ್ಪ್ರಾವೃಷಿಕಾವೃತೂ ಹರೇ-**
**ರ್ವಿಶೃಣ್ವತೋ ಮೇಽನುಸವಂ ಯಶೋಽಮಲಮ್ ।**
**ಸಂಕೀರ್ತ್ಯಮಾನಂ ಮುನಿಭಿರ್ಮಹಾತ್ಮಭಿ-**
**ರ್ಭಕ್ತಿಃ ಪ್ರವೃತ್ತಾಽಽತ್ಮರಜಸ್ತಮೋಪಹಾ ॥೨೮॥**

**ಇತ್ಥಂ** ಈರೀತಿಯಾಗಿ **ಶರತ್ಪ್ರಾವೃಷಿಕೌ ಋತೂ** ಶರತ್ ಋತು ವರ್ಷ ಋತುಗಳನ್ನು (ಕಾಲಾಧ್ವನೋರತ್ಯಂತ ಸಂಯೋಗೇ ದ್ವಿತೀಯಾ ) ನಾಲ್ಕು ತಿಂಗಳು ಒಂದು ಕ್ಷಣವೂ ಬಿಡದೇ **ಅನುಸವಂ** ತ್ರಿಕಾಲದಲ್ಲಿಯೂ **ಮಹಾತ್ಮಭಿಃ** ಮಹಾತ್ಮರಾದ **ಮುನಿಭಿಃ** ಯತಿಗಳಿಂದ **ಸಂಕೀರ್ತ್ಯಮಾನಂ** ಹೇಳಲ್ಪಡುವ **ಹರೇಃ** ಶ್ರೀಹರಿಯ **ಅಮಲಂ** ನಿರ್ದುಷ್ಟವಾದ **ಯಶಃ** ಕೀರ್ತಿಯನ್ನು **ವಿಶೃಣ್ವತಃ** ವಿಶೇಷವಾಗಿ (ಶ್ರದ್ಧೆಯಿಂದ) ಕೇಳುವ **ಮೇ** ನನಗೆ **ಆತ್ಮರಜಸ್ತಮೋಪಹಾ** ಮನಸ್ಸಿನ ರಾಗಾದಿಗಳು ನಿದ್ರಾ ಆಲಸ್ಯಾದಿಗಳನ್ನು ಕಳೆಯುವ **ಭಕ್ತಿಃ** ಸುದೃಢಸ್ನೇಹವು **ಪ್ರವೃತ್ತಾ** ಉಂಟಾಯಿತು.

ಗುರುಪ್ರಸಾದವಿಲ್ಲದೆ ಕೇಳುವ ಮಾತ್ರದಿಂದ ಜ್ಞಾನೋದಯ ಹೇಗಾಯಿತು ಎಂದರೆ ಹೇಳುವರು. -

**ತಸ್ಯೈವ ಮೇಽನುರಕ್ತಸ್ಯ ಪ್ರಶ್ರಿತಸ್ಯ ಹತೈನಸಃ ।**
**ಶ್ರದ್ದಧಾನಸ್ಯ ಬಾಲಸ್ಯ ದಾಂತಸ್ಯಾನುಚರಸ್ಯ ಚ ॥೨೯॥**

**ಜ್ಞಾನಂ ಗುಹ್ಯತಮಂ ಯತ್ತತ್ ಸಾಕ್ಷಾದ್ಭಗವತೋದಿತಮ್ ।**
**ಅನ್ವವೋಚನ್ ಗಮಿಷ್ಯಂತಃ ಕೃಪಯಾ ದೀನವತ್ಸಲಾಃ ॥೩೦॥**

**ಏವಂ** ಈ ರೀತಿಯಾಗಿ **ಅನುರಕ್ತಸ್ಯ** ಶ್ರೀಹರಿಯಲ್ಲಿ ಭಕ್ತಿಯುಳ್ಳ **ಪ್ರಶಿತಸ್ಯ** ವಿನೀತನಾದ **ಹತೈನಸಃ** ಪಾಪಾರಹಿತನಾದ **ಶ್ರದ್ದಾನಸ್ಯ** ಗುರು-ದೇವತೆಗಳ ಮಾತಿನಲ್ಲಿ ಆಸ್ತಿಕ್ಯ ಬುದ್ಧಿಯುಳ್ಳ **ಬಾಲಸ್ಯ** ಚಿಕ್ಕವನಾದ **ದಾಂತಸ್ಯ** ಇಂದ್ರಿಯ ನಿಗ್ರಹವುಳ್ಳ **ಅನುಚರಸ್ಯ** ಯಾವಾಗಲೂ ಸೇವೆಗಾಗಿ ಹಿಂಬಾಲಿಸುವ **ತಸ್ಯಮೇ** ಆ ನನಗೆ **ಗಮಿಷ್ಯಂತಃ** ಚಾತುರ್ಮಾಸ್ಯ ಮುಗಿಸಿ ತೀರ್ಥಯಾತ್ರೆಗೆ ಹೊರಟ **ದೀನವತ್ಸಲಾಃ** 'ದೀನರಲ್ಲಿ ಸ್ನೇಹವುಳ್ಳ ಕೃಪಯಾ ದಯೆಯಿಂದ ಮುನಿಗಳು **ಯತ್ಸಾಕ್ಷಾತ್ ಭಗವತೋದಿತಂ** ಆದಿ ಸೃಷ್ಟಿಯಲ್ಲಿ ಶ್ರೀಮನ್ನಾರಾಯಣನು ಚತುರ್ಮುಖನಿಗೆ ಉಪದೇಶಿಸಿದ (ಸಂಪ್ರದಾಯಗತವಾದ) **ಗುಹ್ಯತಮಂ** ಅತಿರಹಸ್ಯವಾದ **ಜ್ಞಾನಂ** ಶಾಸ್ತ್ರವನ್ನು **ಅನ್ವವೋಚನ್** ಉಪದೇಶಿಸಿದರು.

ಅವರು ಉಪದೇಶಿಸಿದ ಶಾಸ್ತ್ರದಿಂದ ನೀನೇನು ಪಡೆದೆ ಎಂದರೆ ಹೇಳುವರು.

**ಯೇನೈವಾಹಂ ಭಗವತೋ ವಾಸುದೇವಸ್ಯ ವೇಧಸಃ ।**
**ಮಾಯಾನುಭಾವಮವಿದಂ ಯೇನ ಗಚ್ಛಂತಿ ತತ್ಪದಮ್ ॥೩೧॥**

**ಯೇನ** ಯಾವಜ್ಞಾನದಿಂದ ಯೋಗಿಗಳು **ತತ್ಪದಂ** ವಾಸುದೇವ ಸ್ವರೂಪವನ್ನು (ವೈಕುಂಠವನ್ನು)**ಗಚ್ಛಂತಿ** ತಿಳಿಯುವರು ಹೊಂದುವರು **ಅಹಂ ಚ** ನಾನೂ ಸಹ **ಯೇನ ಏವ** ಯಾವ ಜ್ಞಾನದಿಂದಲೇ **ವೇಧಸಃ** ಸರ್ವಕರ್ತೃವಾದ **ವಾಸುದೇವಸ್ಯ ಭಗವತಃ** ವಾಸುದೇವಿ ರೂಪಿ ಪರಮಾತ್ಮನ **ಮಾಯಾನುಭಾವಂ** ಮಾಹಾತ್ಮ್ಯವನ್ನು (ಇಚ್ಛಾ ಸಾಮರ್ಥ್ಯವನ್ನು )**ಅವಿದಂ** ತಿಳಿದೆನು.

ಹಾಗಾದರೆ ಕರ್ಮ ಮಾಡುವದು ವ್ಯರ್ಥವೇ ಎಂಬ ಶಂಕೆಯು ಬಂದಾಗ ಜ್ಞಾನ ಸಾಧನವಾಗಿ ಕರ್ಮವೂ ಆವಶ್ಯಕವೇ ಎಂಬ ಅಭಿಪ್ರಾಯದಿಂದ ಕರ್ಮ ರಹಸ್ಯವನ್ನೂ ಅವರು ಉಪದೇಶಿಸಿದರು ಎಂದು ಹೇಳುವರು.

**ಏತತ್ಸಂಸೂಚಿತಂ ಬ್ರಹ್ಮನ್ ತಾಪತ್ರಯಚಿಕಿತ್ಸಿತಮ್ ।**
**ಯದೀಶ್ವರೇ ಭಗವತಿ ಕರ್ಮ ಬ್ರಹ್ಮಣಿ ಭಾವಿತಮ್ ॥೩೨॥**

**ಯತ್** ಯಾವ ಕರ್ಮವು **ಈಶ್ವರೇ** ಸರ್ವನಿಯಾಮಕನಾದ **ಭಗವತಿ** ಐಶ್ವರ್ಯಶಾಲಿಯಾದ **ಬ್ರಹ್ಮಣಿ** ಪರಬ್ರಹ್ಮನಲ್ಲಿ **ಭಾವಿತಂ** ಸಮರ್ಪಿತವಾದ **ಕರ್ಮ** ಕರ್ಮವೇನಿದೆಯೋ **ಏತತ್** ಇದು **ತಾಪತ್ರಯಚಿಕಿತ್ಸಿತಂ** ಆಧ್ಯಾತ್ಮಿಕಾದಿ ತಾಪಗಳಿಗೆ ಔಷಧವು **ಇತಿ** ಎಂದು **ಸಂಸೂಚಿತಂ** ಉಪದೇಶಿಸಲ್ಪಟ್ಟಿತು.

ಸಂಸಾರಕ್ಕೆ ಕಾರಣವಾದ ಕರ್ಮವು ಸಂಸಾರ ನಿವರ್ತಕ ಹೇಗಾದೀತು ? ಎಂಬ ಶಂಕೆಗೆ ಸಾಮಗ್ರೀಭೇದದಿಂದ ಎರಡೂ ಯುಕ್ತವೇ ಎಂದು ದೃಷ್ಟಾಂತ ಕೊಟ್ಟು ಉಪಪಾದಿಸುವರು.

**ಆಮಯೋಽಯಂ ಚ ಭೂತಾನಾಂ ಜಾಯತೇ ಯೇನ ಸುವ್ರತ ।**
**ತದೇವ ಹ್ಯಾಮಯದ್ರವ್ಯಂ ತತ್ಪುನಾತಿ ಚಿಕಿತ್ಸಿತಮ್ ॥೩೩॥**

**ಹೇ ಸುವ್ರತ** ಜಗತ್ತಿಗೆ ಹಿತೋಪದೇಶ ರೂಪ ಸುಂದರ ವ್ರತದಿಂದ ಕೂಡಿದವನೇ **ಭೂತಾನಾಂ** ಪ್ರಾಣಿಗಳಿಗೆ **ಯೇನ** ಯಾವ ತುಪ್ಪ ಮೊದಲಾದ ವುಗಳಿಂದ **ಅಯಂ** ಪ್ರಸಿದ್ಧವಾದ **ಆಮಯಃ** ರೋಗವು **ಜಾಯತೇ** ಉಂಟಾಗುವದೋ **ತದೇವ** ಅದೇ **ಆಮಯದ್ರವ್ಯಂ** ರೋಗಜನಕ ತುಪ್ಪವೇ **ಚಿಕಿತ್ಸಿತಂ** ಬೇರೆ ಪದಾರ್ಥಗಳ ಜೊತೆಗೆ ಸೇರಿಸಿ ಔಷಧಿಯಾಗಿ ಮಾಡಿದರೆ **ತತ್** ಅನಾರೋಗ್ಯವನ್ನು **ಪುನಾತಿ** ಪರಿಹರಿಸುವದು.

**ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿಹೇತವಃ ।**
**ತ ಏವಾತ್ಮವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ ॥೩೪॥**

**ಏವಂ** ಹಾಗೆಯೇ **ನೃಣಾಂ** ಅಧಿಕಾರಿಗಳಿಗೆ **ಸರ್ವೇ** ಎಲ್ಲ **ಕ್ರಿಯಾಯೋಗಾಃ** ನಿತ್ಯನೈಮಿತ್ತಿಕಕರ್ಮ ರೂಪ ಉಪಾಯಗಳು **ಸಂಸೃತಿಹೇತವಃ** ಸಕಾಮವಾದರೆ ಸಂಸಾರಕಾರಣಗಳು **ಪರೇ** ಪರಮಾತ್ಮನಲ್ಲಿ **ಕಲ್ಪಿತಾಃ** ಸಮರ್ಪಿತಗಳಾದರೆ **ತೇ ಏವ** ಅವೇ ಕರ್ಮಗಳು **ಆತ್ಮವಿನಾಶಾಯ ಕಲ್ಪಂತೇ** ಲಿಂಗದೇಹ ನಾಶಮಾಡಲು ಸಮರ್ಥವಾಗುವವು.

ಬ್ರಹ್ಮನಲ್ಲಿ ಸಮರ್ಪಿತವಾದ ಕ್ರಿಯಾಯೋಗವು ಸಾಕ್ಷಾತ್ತಾಗಿ ಲಿಂಗದೇಹನಾಶಕವೇ ಎಂದರೆ ಅಲ್ಲವೆಂದು ಹೇಳುವರು.

**ಯದತ್ರ ಕ್ರಿಯತೇ ಕರ್ಮ ಭಗವತ್ಪರಿತೋಷಣಮ್ ।**
**ಜ್ಞಾನಂ ಯತ್ತದಧೀನಂ ಹಿ ಭಕ್ತಿಯೋಗಸಮನ್ವಿತಮ್ ॥೩೫॥**

**ಅತ್ರ** ಕರ್ಮಭೂಮಿಯಲ್ಲಿ **ಭಗವತ್ಪರಿತೋಷಣಂ** ಸಮರ್ಪಿಸುವದರಿಂದ ಭಗವಂತನ ಸಂತುಷ್ಟಿಗೆ ಕಾರಣವಾದ **ಯತ್ ಕರ್ಮ ಕ್ರಿಯತೇ** ಯಾವ ಕರ್ಮವು ಅಧಿಕಾರಿಯಿಂದ ಮಾಡಲ್ಪಡುವದೋ **ತದಧೀನಂ** ಆ ಕರ್ಮ ಅವನ ಅಧೀನವಾಗಿದೆ. ಅಂತಃಕರಣ ಶುದ್ಧಿದ್ವಾರಾ **ಭಕ್ತಿಯೋಗಸಮನ್ವಿತಂ ಯತ್ ಜ್ಞಾನಂ ತತ್** ಭಕ್ತಿಸಹಿತ ಪರೋಕ್ಷಜ್ಞಾನವು. ಆದ್ದರಿಂದ ಕರ್ಮವು ಲಿಂಗದೇಹನಾಶಕ್ಕೆ ಸಮರ್ಥವಾಗುವುದು ಅಂಥಹ ಕರ್ಮದಿಂದ ಅಂತಃಕರಣ ಶುದ್ಧಿ ಗುರುಪ್ರಾಪ್ತಿ ಪರೋಕ್ಷಜ್ಞಾನ ಅಪರೋಕ್ಷಜ್ಞಾನ ಲಿಂಗದೇಹ ಭಂಗ ಹೀಗೆ ಎಲ್ಲವೂ ಉಪಪನ್ನವಾಗುವದು.

ಹಿಂದೆ ಹೇಳಿದ ಪ್ರಕಾರ ಮೋಕ್ಷಜನಕ ಕರ್ಮಗಳಿಗೆ ಭಗವಂತನ ಪ್ರೀತಿಯೇ ಉದ್ದೇಶ್ಯ ಎಂಬಲ್ಲಿ ಜ್ಞಾಪಕ ಶಿಷ್ಟಾಚಾರ ತಿಳಿಸುವರು.

**ಕುರ್ವಾಣಾ ಯತ್ರ ಕರ್ಮಾಣಿ ಭಗವಚ್ಛಿಕ್ಷಯಾಽಸಕೃತ್ ।**
**ಗೃಣಂತಿ ಗುಣನಾಮಾನಿ ಕೃಷ್ಣಸ್ಯಾನುಸ್ಮರಂತಿ ಚ ॥೩೬॥**

**ಯತ್ರ** ಯಾವಾಗ **ಕರ್ಮಾಣಿ ಕುರ್ವಾಣಾಃ ಭವಂತಿ** ಕರ್ಮಗಳನ್ನು ಮಾಡುವರಾಗುವರೋ **ತದಾ** ಆಗ **ಭಗವಚ್ಛಿಕ್ಷಯಾ** 'ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್' ಸರ್ವದಾ ವಿಷ್ಣು ಸ್ಮರಣೆ ಮಾಡಬೇಕು ಯಾವ ಕಾಲದಲ್ಲಿಯೂ ಮರೆಯಬಾರದು ಎಂಬ ಭಗವಂತನ ಉಪದೇಶದಿಂದ **ಅಸಕೃತ್** ಆದಿ ಮಧ್ಯ ಅವಸಾನಗಳಲ್ಲಿ ಅಥವಾ ನಿರಂತರವಾಗಿ **ಗುಣನಾಮಾನಿ** ಗುಣ ಪ್ರತಿಪಾದಕ ನಾಮಗಳನ್ನು **ಗೃಣಂತಿ** ಉಚ್ಚರಿಸುವರು. **ಕೃಷ್ಣಸ್ಯ ಅನುಸ್ಮರಂತಿ** ಶ್ರೀಕೃಷ್ಣನ ನಾಮಾರ್ಥವಾದ ಗುಣಗಳನ್ನು ಸ್ಮರಿಸುವರು. ಇದರಿಂದ ಕರ್ಮಗಳಿಗೆ ಭಗವಂತನ ಪ್ರೀತಿಯೇ ಉದ್ದೇಶ್ಯವೆಂದು ತಿಳಿಯುವರು.

ಅವು ಯಾವ ಗುಣನಾಮಗಳು ಎಂದು ತೋರಿಸುತ್ತ ಶ್ರೀಹರಿಪ್ರೀತ್ಯುದ್ದೇಶ್ಯಕ ಕರ್ಮದಿಂದ ಭಕ್ತಿ ಸಹಿತ ಪರೋಕ್ಷಜ್ಞಾನ ಮಾತ್ರವಲ್ಲ ಅಪರೋಕ್ಷ ಜ್ಞಾನವೇ ಆಗುವದು ಎಂದು ಹೇಳುವರು.

**ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ ।**
**ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥೩೭॥**

**ಇತಿ ಮೂರ್ತ್ಯಭಿಧಾನೇನ ಮಂತ್ರಮೂರ್ತಿಮಮೂರ್ತಿಕಮ್ ।**
**ಯಜತೇ ಯಜ್ಞಪುರುಷಂ ಸಮ್ಯಗ್ದರ್ಶನಃ ಪುಮಾನ್ ॥೩೮॥**

ಇಲ್ಲಿ ಧೀಮಹಿ ಎಂದು ಏಕದೇಶ ಸ್ವೀಕರಿಸಿದ್ದರಿಂದ 'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್' ಎಂಬ ಸಮಗ್ರ ವಿಷ್ಣು ಗಾಯತ್ರಿ ಸಂಗ್ರಹಿಸಲ್ಪಟ್ಟಿದೆ. **ಯಃ** ಯಾವ ಯಜಮಾನನು ತಾನು ನಿತ್ಯದಲ್ಲಿ 'ಓಂ ನಮೋ ಭಗವತೇ ತುಭ್ಯಂ' ಮುಂತಾದ **ಮುರ್ತ್ಯಭಿಧಾನೇನ** ಮೂರ್ತಿವಾಚಕ ಮಂತ್ರಗಳಿಂದ **ಮಂತ್ರಮೂರ್ತಿಂ** ಮಂತ್ರ ಪ್ರತಿಪಾದ್ಯನಾದ **ಅಮೂರ್ತಿಕಂ** ಪ್ರಾಕೃತ ದೇಹವಿಲ್ಲದ ವಾಸುದೇವಾದಿರೂಪನಾದ ಯಜ್ಞಪುರುಷಂ ಚತ್ವಾರಿ ಶೃಂಗಾ ಮುಂತಾದ ಋಕ್ ಪ್ರತಿಪಾದ್ಯ ಆಕಾರವುಳ್ಳ ಭಗವಂತನ ಉದ್ದೇಶ್ಯವಾಗಿ **ಯಜತೇ** ಪೂಜಿಸುವನೋ **ಸಃ** ಅವನು **ಸಮ್ಯಗ್ದರ್ಶನಃ** ಪರೋಕ್ಷ ಅಪರೋಕ್ಷ ಜ್ಞಾನ ಉಳ್ಳವನಾಗುವನು. **ಓಂ** ಸರ್ವಗುಣಪೂರ್ಣ, ಸರ್ವರಕ್ಷಕ ಷಡ್ಗುಣಪೂರ್ಣನಾದ ಭಗವಂತನೇ **ತುಭ್ಯಂ** ನಿನಗೆ **ನಮಃ** ನಮಸ್ಕಾರವು. ಎಲ್ಲ ಕಡೆ ವಾಸಿಸುವದರಿಂದ ಕ್ರೀಡಿಸುವದರಿಂದ ವಾಸುದೇವನನ್ನು **ಧೀಮಹಿ** ಸ್ಮರಿಸುವೆವು.

**ವಿಶೇಷ** ಃ-ಪ್ರಕೃಷ್ಟದ್ಯುಮ್ನ ಬಂಗಾರದಂತೆ ರೂಪ ಉಳ್ಳವ ಪ್ರದ್ಯುಮ್ನ, ಯಾರಿಂದಲೂ ತಡೆಯಿಲ್ಲದವನಾದ್ದರಿಂದ ಅನಿರುದ್ಧ ಅನ ಎಂದರೆ ಮುಖ್ಯಪ್ರಾಣ ಅವನುಳ್ಳವ ಅನಿ ಅವನಿಂದ ಮುಖ್ಯಪ್ರಾಣ ಪ್ರಸಾದವುಳ್ಳವನಿಂದ ರುದ್ಧ ವಶೀಕೃತ ಅನಿನಾ ರುದ್ಧಃ ಅನಿರುದ್ಧಃ ಎಂದು ಅರ್ಥ.

**ಇಮಂ ಸ್ವಧರ್ಮನಿಯಮಮವೇತ್ಯ ಮದನುಷ್ಠಿತಮ್ ।**
**ಅದಾನ್ಮೇ ಜ್ಞಾನಮೈಶ್ವರ್ಯಂ ಸ್ವಸ್ಮಿನ್ ಭಾವಂ ಚ ಕೇಶವಃ ॥೩೯॥**

**ಮದನುಷ್ಠಿತಂ** ನನ್ನಿಂದ ಆಚರಿಸಲ್ಪಟ್ಟ **ಸ್ವಧರ್ಮನಿಯಮಂ** ಭಗವದ್ಧರ್ಮ ನಿಯಮವನ್ನು **ಅವೇತ್ಯ** ತಿಳಿದು **ಐಶ್ವರ್ಯ್ಯಂ** ಈಶ್ವರವಿಷಯಕವಾದ **ಜ್ಞಾನಂ** ಪರೋಕ್ಷ ಅಪರೋಕ್ಷ ಜ್ಞಾನವನ್ನು **ಸ್ವಸ್ಮಿನ್ ಭಾವಂ ಚ** ತನ್ನಲ್ಲಿ ಭಕ್ತಿಯನ್ನು **ಮೇ** ನನಗೆ **ಅದಾತ್** ಕೊಟ್ಟನು.

**ತ್ವಮಪ್ಯದಭ್ರಶ್ರುತವಿಶ್ರುತಂ ವಿಭೋ**
**ಸಮಾಪ್ಯತೇ ಯೇನ ವಿದಾ ಬುಭುತ್ಸಿತಮ್ ।**
**ಪ್ರಖ್ಯಾಹಿ ದುಃಖೈರ್ಮುಹುರರ್ದಿತಾತ್ಮನಾಂ**
**ಸಂಕ್ಲೇಶನಿರ್ವಾಣಮುಶಂತಿ ನಾನ್ಯಥಾ ॥೪೦॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಪಂಚಮೋಽಧ್ಯಾಯಃ ॥

**ಹೇ ಅದಭ್ರಶ್ರುತ** ಬಹಳ ಶ್ರವಣ ಮಾಡಿದವನೇ ಉತ್ತಮಾಧಿಕಾರಿಗಳಿಗೆ ಉಪಕಾರ ಮಾಡಿದವನೇ **ತ್ವಮಪಿ** ಈಶ್ವರನಾದರೂ ಹೊಂದಬೇಕಾದದ್ದಿಲ್ಲವಾದರೂ **ವಿಭೋಃ** ದೇಶಕಾಲಗುಣಗಳಿಂದ ವ್ಯಾಪ್ತನಾದ ಶ್ರೀಹರಿಯ **ವಿಶ್ರುತಂ** ವೇದಪ್ರಸಿದ್ಧವಾದ **ದುಃಖೈಃ** ದುಃಖಗಳಿಂದ **ಮುಹುಃ** ಮತ್ತೆ ಮತ್ತೆ **ಅರ್ದಿತಾತ್ಮನಾಂ** ಪೀಡಿತವಾದ ಮನಸ್ಸುಳ್ಳವರಿಗೆ **ವಿದಾಂ** ಮಂದಾಧಿಕಾರಿಗಳಿಗೆ **ಬುಭುತ್ಸಿತಂ** ತಿಳಿಯಲಪೇಕ್ಷಿಸುವವರ ಇಷ್ಟವು **ಯೇನ** ಯಾವ ಗ್ರಂಥದಿಂದ **ಸಮಾಪ್ಯತೇ** ಸಂಪೂರ್ಣವಾಗುವದೋ **ತಂ** ಆ ಗ್ರಂಥವನ್ನು **ಪ್ರಖ್ಯಾಹಿ** ರಚನೆ ಮಾಡಿ ಹೇಳು **ಅನ್ಯಥಾ** ಗ್ರಂಥ ಮಾಡದಿದ್ದಲ್ಲಿ **ಸಂಕ್ಲೇಶನಿರ್ವಾಣಂ ಉಶಂತಿ** ಅತ್ಯಂತ ಕಷ್ಟದಿಂದ ದೇಹತ್ಯಾಗವನ್ನಿಚ್ಛಿಸುವರು.

ನಿಮಗೆ ಪ್ರಯೋಜನವಿಲ್ಲದಿದ್ದರೂ ಮಂದಾಧಿಕಾರಿಗಳ ಮೇಲೆ ಕೃಪೆಯಿಂದ ಶ್ರೀಹರಿ ಮಾಹಾತ್ಮ್ಯ ಪ್ರತಿಪಾದಕ ಗ್ರಂಥ ರಚನೆ ಮಾಡಿರಿ ಎಂದು ಭಾವ.

ಇಲ್ಲಿಗೆ ಐದನೇಯ ಅಧ್ಯಾಯವು ಮುಗಿಯಿತು

★★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಷಷ್ಠೋಽಧ್ಯಾಯಃ

**ಅಧ್ಯಾಯ ಸಾರಾಂಶ**

**ನಾರದರ ಪೂರ್ವವೃತ್ತಾಂತ**

ನಾರದರು ತಮ್ಮ ಪೂರ್ವಜನ್ಮದ ವೃತ್ತಾಂತವನ್ನು ಮುಂದುವರಿಸಿ ಹೇಳಿದರು. ನನ್ನ ತಾಯಿ ಒಂದು ದಿನ ರಾತ್ರಿಯ ಕತ್ತಲಲ್ಲಿ ಹಾಲು ಕರೆಯಲು ಹೊರಟು ದಾರಿಯಲ್ಲಿ ಹಾವನ್ನು ತುಳಿದು ಸತ್ತು ಬಿದ್ದಳು. ಮೊದಲೇ ವಿರಕ್ತನಾಗಿದ್ದ ನನಗೆ ತಪ್ಪಿಸಿಕೊಳ್ಳಲಾಗದ ಒಂದೇ ಒಂದು ಇಹದ ಸಂಬಂಧ ಹೀಗೆ ಕಳಚಿಹೋಯಿತು. ನಾನು ಏಕಾಂಗಿಯಾಗಿ ಅಲೆಯುತ್ತ ಕಾಡನ್ನು ಸೇರಿದೆ. ಹಸಿವು ಬಾಯಾರಿಕೆಗಳಿಂದ ಬಳಲಿದ್ದ ನಾನು ಒಂದು ಮಡುವಿನಲ್ಲಿ ಮಿಂದು ನೀರು ಕುಡಿದು ಅರಳಿ ಗಿಡದ ಕೆಳಗೆ ಕುಳಿತು ಧ್ಯಾನಮಾಡಲು ಪ್ರಾರಂಭಿಸಿದೆ. ಆಗ ಭಗವಂತನ ದರ್ಶನವಾಯಿತು. ಎಲ್ಲಿಲ್ಲದ ಆನಂದ ಆದರೆ ಅದು ಬಹಳ ಕಾಲ ಇರಲಿಲ್ಲ. ಕ್ಷಣದಲ್ಲಿ ಮಾಯವಾಯಿತು. ಪ್ರತ್ಯಕ್ಷನಾದ ಭಗವಂತ ಮತ್ತೆ ಅದೃಶ್ಯನಾಗಿ ನುಡಿದ. ನನ್ನ ದರ್ಶನದ ತವಕ ನಿನಗೆ ಹೀಗೆ ಉಂಟಾಗಲೆಂದು ನಿನಗೆ ದರ್ಶನ ನೀಡಿದ್ದೇನೆ. ಇನ್ನು ನೀನು ಶರೀರತ್ಯಾಗ ಮಾಡಿ ಮುಂದಿನ ಕಲ್ಪದಲ್ಲಿ ಬ್ರಹ್ಮಪುತ್ರನಾಗಿ ಜನಿಸಿ ಪರಮಭಾಗವತನೆನಿಸುವಿ. ಆಗ ನಿನಗೆ ಪೂರ್ವಜನ್ಮದ ಸ್ಮರಣೆ ನನ್ನ ಅನುಗ್ರಹದಿಂದ ಇರುತ್ತದೆ ಎಂದು. ಬಳಿಕ ಶರೀರತ್ಯಾಗ ಮಾಡಿ ಕಲ್ಪಾಂತ್ಯದಲ್ಲಿ ಬ್ರಹ್ಮದೇವರ ಉದರವನ್ನು ಪ್ರವೇಶಿಸಿದಿ. ಲಯಕಾಲ ಕಳೆದಾಗ ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮದೇವರ ತೊಡೆಯಿಂದ ಜನಿಸಿದೆ. ಅವನ ಗುಣಗಾನವೇ ಅಜ್ಞರನ್ನು ಸಂಸಾರ ಸಮುದ್ರದಿಂದ ದಾಟಿಸುವ ನೌಕೆಯಾಗುವುದು ನನ್ನ ಅನುಭವ ಸಿದ್ಧವಾದ ಮಾತು. ಆದರಿಂದ ಬಾದರಾಯಣರೇ ತಾವು ಅಜ್ಞಾನಿಗಳ ಉದ್ಧಾರಕ್ಕಾಗಿ ಭಾಗವತವನ್ನು ರಚಿಸಿರಿ.

ಶ್ರೀಹರಿ ಮಾಹಾತ್ಮ್ಯ ಶ್ರವಣ ಹಾಗೂ ನಿವೃತ್ತ ಕರ್ಮಾನುಷ್ಠಾನಗಳಿಂದ ಅಂತಃಕರಣ ಶುದ್ಧವಾಗಿ ಹರಿಭಕ್ತಿ ಸಹಿತವಾದ ಪರೋಕ್ಷಾಪರೋಕ್ಷಜ್ಞಾನವಾಗುವವು ಎಂಬುದಕ್ಕೆ ನಾನೇ ದೃಷ್ಟಾಂತ ಎಂದು ನಾರದರು ತಮ್ಮ ವೃತ್ತಾಂತ ಹೇಳಲಾರಂಭಿಸಿದರು. ಅದನ್ನು ಪೂರ್ವಾಧ್ಯಾಯದಲ್ಲಿ ಚೆನ್ನಾಗಿ ಹೇಳಲಿಲ್ಲ. ಆದ್ದರಿಂದ ಅವರಿಗೆ ಅಪರೋಕ್ಷ ಜ್ಞಾನವಾದ ರೀತಿಯನ್ನು ಜನರು ಅನುಷ್ಠಾನ ಮಾಡಲು ಅವರ ಮುಖದಿಂದಲೇ ಹೇಳಿಸಲು ಸರ್ವಜ್ಞರಾದ ವೇದವ್ಯಾಸರು ನಾರದರಿಗೆ ಉಳಿದ ಆಯುಷ್ಯವನ್ನು ಹೇಗೆ ಕಳೆದರು ಎಂದು ಪ್ರಶ್ನಿಸುವರು.

ಸೂತ ಉವಾಚ -

**ಏವಂ ನಿಶಮ್ಯ ಭಗವಾನ್ ದೇವರ್ಷೇರ್ಜನ್ಮ ಕರ್ಮ ಚ ।**
**ಭೂಯಃ ಪಪ್ರಚ್ಛ ತಂ ಬ್ರಹ್ಮನ್ ವ್ಯಾಸಃ ಸತ್ಯವತೀಸುತಃ ॥೧॥**

**ಬ್ರಹ್ಮನ್** ಶೌನಕರೇ **ಸತ್ಯವತೀಸುತಃ ಭಗವಾನ್ ವ್ಯಾಸಃ** ಸತ್ಯವತಿಯ ಮಗನಾದ **ಭಗವಾನ್** ವೇದವ್ಯಾಸದೇವರು **ಏವಂ** ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ **ದೇವರ್ಷೇಃ** ನಾರದರ **ಜನ್ಮ ಕರ್ಮ ಚ** ಜನನ ಕಾರ್ಯಗಳನ್ನು **ನಿಶಮ್ಯ** ಕೇಳಿ **ಭೂಯಃ** ಮತ್ತೆ **ಪಪ್ರಚ್ಛ** ಕೇಳಿದರು.

ವ್ಯಾಸ ಉವಾಚ -

**ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿಸ್ತವ ।**
**ವರ್ತಮಾನೋ ವಯಸ್ಯಾದ್ಯೇ ತತಃ ಕಿಮಕರೋದ್ಭವಾನ್ ॥೨॥**

**ತವ** ನಿನಗೆ **ವಿಜ್ಞಾನಾದೇಷ್ಟೃಭಿಃ** ಜ್ಞಾನೋಪದೇಶ ಮಾಡಿದ **ಭಿಕ್ಷುಭಿಃ** ಸಂನ್ಯಾಸಿಗಳಿಂದ **ವಿಪ್ರವಸಿತೇ ಸತಿ** ದೇಶಾಂತರಕ್ಕೆ ಹೋಗಲ್ಪಡುತ್ತಿರಲು **ಆದ್ಯೇ ವಯಸಿ ವರ್ತಮಾನಃ** ಬಾಲ್ಯಾವಸ್ಥೆಯಲ್ಲಿರುವ **ಭವಾನ್** ನೀನು **ಕಿಂ ಅಕರೋತ್** ಏನು ಮಾಡಿದೆ.

ಇದನ್ನೇ ಕೇಳುವರು.

**ಸ್ವಾಯಂಭುವ ಕಯಾ ವೃತ್ತ್ಯಾ ವರ್ತಿತಂ ತೇ ಪರಂ ವಯಃ ।**
**ಕಥಂ ವೇದಮುದಸ್ರಾಕ್ಷೀಃ ಕಾಲೇ ಪ್ರಾಪ್ತೇ ಕಲೇವರಮ್ ॥೩॥**

**ಹೇ ಸ್ವಾಯಂಭುವ** ಬ್ರಹ್ಮಪುತ್ರನೇ **ತೇ** ನಿನ್ನ **ಪರಂ ವಯಃ** ಉಪದೇಶಾನಂತರದ ಆಯುಷ್ಯವನ್ನು **ಕಯಾ ವೃತ್ತ್ಯಾ ವರ್ತಿತಂ** ಯಾವ ಜೀವನೋಪಾಯದಿಂದ ಕಳೆದೆ

**ಕಾಲೇ ಪ್ರಾಪ್ತೇ** ಸಮಯ ಬಂದಾಗ **ಇದಂ ಕಲೇವರಂ** ದಾಸಿ ಪುತ್ರದೇಹವನ್ನು **ಕಥಂ ವಾ ಉದಸ್ರಾಕ್ಷೀಃ** ಹೇಗೆ ತ್ಯಜಿಸಿದಿ?

ಪೂರ್ವಜನ್ಮದಲ್ಲಿ ಅನುಭವಿಸಿದ್ದನ್ನು ಈಗ ಹೇಳುತ್ತಿರುವದಾದರೂ ಹೇಗೆ ಎಂದು ಕೇಳುವರು.

**ಪ್ರಾಕ್ಕಲ್ಪವಿಷಯಾಮೇತಾಂ ಸ್ಮೃತಿಂ ತೇ ಸುರಸತ್ತಮ ।**
**ನ ಹ್ಯೇವ ವ್ಯವಧಾತ್ ಕಾಲಃ ಏಷ ಸರ್ವನಿರಾಕೃತಿಃ ॥೪॥**

**ಹೇ ಸುರಸತ್ತಮ** ದೇವ ಶ್ರೇಷ್ಠನಾದ ನಾರದನೇ **ಪ್ರಾಕ್ಕಲ್ಪವಿಷಯಾಂ** ಹಿಂದಿನ ಕಲ್ಪದ ವಿಷಯವಾದ **ಏತಾಂ ಸ್ಮೃತಿಂ** ನಿನ್ನ ಜನ್ಮಕರ್ಮಾದಿಗಳ ಸ್ಮರಣವನ್ನು **ಸರ್ವನಿರಾಕೃತಿಃ ಏಷಃ ಕಾಲಃ** ಎಲ್ಲರ ಪೂರ್ವಜನ್ಮದ ಹೆಸರು ಮುಂತಾದವುಗಳನ್ನು ನಾಶಗೊಳಿಸುವ ಈ ಕಾಲವು **ನ ಏವ ವ್ಯವಧಾತ್ ಕಥಂ** ಹೇಗೆ ಮುಚ್ಚಿಹಾಕಲಿಲ್ಲ.

ನಾರದ ಉವಾಚ -

**ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿರ್ಮಮ ।**
**ವರ್ತಮಾನೋ ವಯಸ್ಯಾದ್ಯೇ ತತ ಏತದಕಾರ್ಷಮ್ ॥೫॥**

**ಮಮ** ನನಗೆ **ವಿಜ್ಞಾನಾದೇಷ್ಟೃಭಿಃ ಭಿಕ್ಷುಭಿಃ** ವಿಶೇಷ ಜ್ಞಾನೋಪದೇಶ ಮಾಡಿದ ಸನ್ಯಾಸಿಗಳಿಂದ **ವಿಪ್ರವಸಿತೇ** ದೇಶಾಂತರದಲ್ಲಿ ವಾಸ ಮಾಡಲ್ಪಡುತ್ತಿರಲು **ಆದ್ಯೇ ವಯಸಿ ವರ್ತಮಾನಃ** ಬಾಲ್ಯದಲ್ಲಿರುವ ನಾನು **ತತಃ** ನಂತರ **ಏತದಕಾರ್ಷಂ** ಮುಂದೆ ಹೇಳುವಂತೆ ಮಾಡಿದೆನು.

ತಾನೂ ಅವರ ಜೊತೆ ಹೋಗದಿರಲು ಕಾರಣ ಹೇಳುವರು.

**ಏಕಾತ್ಮಜಾ ಮೇ ಜನನೀ ಯೋಷಿನ್ಮೂಢಾ ಚ ಕಿಂಕರೀ ।**
**ಮಯ್ಯಾತ್ಮಜೇಽನನ್ಯಗತೌ ಚಕ್ರೇ ಸ್ನೇಹಾನುಬಂಧನಂ ॥೬॥**

**ಮೇ** ನನ್ನ **ಜನನೀ** ತಾಯಿಯು **ಏಕಾತ್ಮಜಾ** ಒಂದೇ ಮಗನನ್ನು ಉಳ್ಳವಳು **ಯೋಷಿನ್ಮೂಢಾ** ಸ್ತ್ರೀಯರ ಮಧ್ಯದಲ್ಲಿ ವಿವೇಕವಿಲ್ಲದವಳು **ಕಿಂಕರೀ ಚ** ದಾಸಿಯೂ ಕೂಡ **ಅನನ್ಯಗತೌ** ಬೇರೆ ಗತಿಯಿಲ್ಲದ **ಆತ್ಮಜೇ ಮಯಿ** ಮಗನಾದ ನನ್ನಲ್ಲಿ **ಸ್ನೇಹಾನುಬಂಧನಂ ಚಕ್ರೇ** ಸ್ನೇಹದಿಂದ ಕಟ್ಟಿಹಾಕಿದಳು.

ಕೇವಲ ಸ್ನೇಹ ಮಾತ್ರಮಾಡುವವಳೇ ಹೊರತು ಅಶನ ವಸನ ಕೊಡಲು ಸಮರ್ಥಳಲ್ಲ ಎಂದು ಹೇಳುವರು.

**ಸಾऽಸ್ವತಂತ್ರಾ ನ ಕಲ್ಪಾಸೀದ್ಯೋಗಕ್ಷೇಮಂ ಮಮೇಚ್ಛತಿ ।**
**ಈಶಸ್ಯ ಹಿ ವಶೇ ಲೋಕೋ ಯೋಷಾ ದಾರುಮಯೀ ಯಥಾ ॥೭॥**

**ಸಾ** ನನ್ನ ತಾಯಿಯು **ಅಸ್ವತಂತ್ರಾ** ಪರಾಧೀನಳು **ಮಮ** ನನಗೆ **ಯೋಗಕ್ಷೇಮಂ** ಹೊಸದಾಗಿ ಬರುವದನ್ನು, ಇದ್ದದ್ದು ರಕ್ಷಿಸುವದನ್ನು **ಇಚ್ಛತಿ** ಇಚ್ಛಿಸುವಳು. ಆದರೆ **ನ ಕಲ್ಪಾಸೀತ್** ಯೋಗಕ್ಷೇಮವನ್ನು ಮಾಡಲು ಸಮರ್ಥಳಾಗಲಿಲ್ಲ. **ಯಥಾ ದಾರುಮಯೀ ಯೋಷಾಃ** ಕಟ್ಟಿಗೆಯ ಹೆಣ್ಣು ಬೊಂಬೆಯಂತೆ **ಲೋಕಃ** ಜನರು **ಈಶಸ್ಯ ವಶೇ ಹಿ** ಕರ್ಮಾನುಸಾರ ಪ್ರೇರಕನಾದ ಹರಿಯ ಅಧೀನರಷ್ಟೇ.

**ಅಹಂ ಚ ತದ್ಬ್ರಹ್ಮಕುಲ ಊಷಿವಾಂಸ್ತದಪೇಕ್ಷಯಾ ।**
**ದಿಗ್ದೇಶಕಾಲಾವ್ಯುತ್ಪನ್ನೋ ಬಾಲಕಃ ಪಂಚಹಾಯನಃ ॥೮॥**

ತದಪೇಕ್ಷಯಾ ತಾಯಿಯ ಇಚ್ಛೆಯಂತೆ **ಪಂಚಹಾಯನಃ ಬಾಲಕಃ** ಐದು ವರ್ಷದ ಹುಡುಗನಾದ **ದಿಗ್ದೇಶಕಾಲಾವ್ಯುತ್ಪನ್ನಃ** ದಿಕ್ಕು ದೇಶ ಕಾಲಗಳ ಜ್ಞಾನವಿಲ್ಲದ **ಅಹಂ ಚ** ನಾನೂ ಸಹ **ತದ್ಬ್ರಹ್ಮಕುಲೇ ಊಷಿವಾನ್** ಆ ಬ್ರಾಹ್ಮಣರ ಮನೆಯಲ್ಲಿ ವಾಸಿಸಿದೆನು.

**ಏಕದಾ ನಿರ್ಗತಾಂ ಗೇಹಾದ್ ದುಹಂತೀಂ ನಿಶಿ ಗಾಂ ಪಥಿ ।**
**ಸರ್ಪೋऽದಶತ್ ಪದಾऽऽಸ್ಪೃಷ್ಟಃ ಕೃಪಣಾಂ ಕಾಲಚೋದಿತಃ ॥೯॥**

**ಏಕದಾ** ಒಂದು ಸಲ **ನಿಶಿ** ರಾತ್ರಿಕಾಲದಲ್ಲಿ **ಗಾಂ ದುಹಂತೀಂ** ಆಕಳನ್ನು ಕರೆಯಲೆಂದು **ಗೇಹಾತ್** ಮನೆಯಿಂದ **ನಿರ್ಗತಾಂ** ಹೊರಗೆ ಹೊರಟ **ಕೃಪಣಾಂ** ದೀನಳಾದ ನನ್ನ ತಾಯಿಯನ್ನು **ಪದಾ ಆಸ್ಪೃಷ್ಟಃ** ಕಾಲಿನಿಂದ ತುಳಿಯಲ್ಪಟ್ಟ **ಸರ್ಪಃ** ಹಾವು **ಕಾಲಚೋದಿತಃ** ಸಂಹಾರಕರ್ತೃವಾದ ಕಾಲನಾಮಕ ಶ್ರೀಹರಿಯಿಂದ ಪ್ರೇರಿತವಾಗಿ **ಅದಶತ್** ಕಚ್ಚಿತು ಮರಣ ಹೊಂದಿದಳು.

**ತದಾ ತದಹಮೀಶಸ್ಯ ಭಕ್ತಾನಾಂ ಸಮಭೀಪ್ಸಿತಮ್ ।**
**ಅನುಗ್ರಹಂ ಮನ್ಯಮಾನಃ ಪ್ರಾತಿಷ್ಠಂ ದಿಶಮುತ್ತರಾಮ್ ॥೧೦॥**

**ತದಾ** ಆಗ **ತತ್** ತಾಯಿಯ ಮರಣವು **ಭಕ್ತಾನಾಂ** ಭಕ್ತರ ಮೇಲೆ **ಈಶಸ್ಯ** ಶ್ರೀಹರಿಯ **ಸಮಭೀಪ್ಸಿತಂ** ಇಷ್ಟವಾದ **ಅನುಗ್ರಹಂ ಮನ್ಯಮಾನಃ** ಅನುಗ್ರಹವೆಂದು ತಿಳಿದು **ಅಹಂ** ನಾನು **ಉತ್ತರಾಂ ದಿಶಂ ಪ್ರಾತಿಷ್ಠಂ** ಉತ್ತರ ದಿಕ್ಕಿಗೆ ಹೊರಟೆನು.

**ಸ್ಫಿತಾನ್ ಜನಪದಾಂಸ್ತತ್ರ ಪುರಗ್ರಾಮವ್ರಜಾಕರಾನ್ ।**
**ಖೇಟಾನ್ ಪಟ್ಟನವಾಟೀಶ್ಚ ವನಾನ್ಯುಪವನಾನಿ ಚ ॥೧೧॥**

**ಸ್ಫಿತಾನ್** ಸಮೃದ್ಧವಾದ **ಜನಪದಾನ್** ದೇಶಗಳನ್ನು **ತತ್ರ** ಆ ದೇಶದಲ್ಲಿ **ಪುರಗ್ರಾಮವ್ರಜಕರಾನ್** ರಾಜಧಾನಿ, ಬಹುಜನರು ವಾಸಿಸುವ ಊರು, ಖನಿಜ(ಬಂಗಾರ ರತ್ನಗಳಿರುವ ಸ್ಥಳಗಳು ಅಂದರೆ ಗಣಿಗಳನ್ನು)ಗಳನ್ನು **ಖೇಟಾನ್** ಬೇಟೆಯಾಡುವ ಬೇಡರಿರುವ ಸ್ಥಳಗಳನ್ನು **ಪಟ್ಟನವಾಟೀಶ್ಚ** ಜಲದುರ್ಗ, ಸ್ಥಳದುರ್ಗಗಳನ್ನು **(ವಾಟೀನ್ ಚ** ಹೂ ಮಾರುವವರ ವಾಸಸ್ಥಾನಗಳನ್ನು**) ವನಾನಿ** ತಾನಾಗಿ ಬೆಳೆದ ಗಿಡಗಳ ಗುಂಪು **ಉಪವನಾನಿ ಚ** ಹಚ್ಚಿದ (ನೆಟ್ಟ) ಗಿಡಗಳ ಸಮುದಾಯವನ್ನು ದಾಟಿ ವನವನ್ನು ನೋಡಿದನೆಂದು ಅರ್ಥ.

11 ನೇ ಶ್ಲೋಕದ ಅನ್ವಯಾರ್ಥಸಂಪಾದನೆಗೆ ಪುರಗ್ರಾಮಾದಿ ಶಬ್ದಗಳ ಅರ್ಥವನ್ನು ಪ್ರಮಾಣದಿಂದ ತಿಳಿಸುವರು.

*ಭಾಗವತತಾತ್ಪರ್ಯ -*

**ಮೃಗಯಾ ಜೀವಿನಾಂ ಖೇಟೋ ವಾಟೀ ಪುಷ್ಪೋಪಜೀವಿನಾಂ ।**
**ಗ್ರಾಮೋ ಬಹುಜಾನಾಕೀರ್ಣೋ ರಾಜರಾಜಾಶ್ರಯಂ ಪುರಮ್ ।**
**ಜಲಸ್ಥಲಾ ಯತಿಸ್ಫೀತಂ ಪತ್ತನಂ ಕೀರ್ತ್ಯತೇ ಬುಧೈಃ ॥ -ಇತಿ ಸ್ಕಾಂದೇ**

ಮೃಗ ಮುಂತಾದವನ್ನು ಕೊಂದು ಜೀವಿಸುವವರ ಪ್ರದೇಶವು ಖೇಟವೆಂದು, ಪುಷ್ಪಗಳಿಂದ ಜೀವಿಸುವವರ ಆವಾಸಸ್ಥಾನವು ವಾಟೀ, ಬಹುಜನರಿಂದ ಕೂಡಿದ ದೇಶವು ಗ್ರಾಮವೆಂದು, ರಾಜಾಧಿರಾಜರಿಗೆ ಆಶ್ರಯವಾದ ಸ್ಥಾನವು ಪುರವೆಂದೂ, ಸಮೃದ್ಧವಾದ ಜಲದುರ್ಗಸ್ಥಲದುರ್ಗಗಳಿರುವ ರಾಜಧಾನಿಯು ಪಟ್ಟಣವೆಂದೂ, ಜ್ಞಾನಿಗಳಿಂದ ಹೇಳಲ್ಪಡುತ್ತದೆ ಎಂದು ಸ್ಕಾಂದಪುರಾಣದಲ್ಲಿದೆ.

**ವಿಚಿತ್ರಧಾತುಚಿತ್ರಾದೀನಿಭಭಗ್ನಭುಜದ್ರುಮಾನ್ ।**
**ಜಲಾಶಯಾಂಶ್ಶಿವಜಲಾನ್ನಳಿನೀಃ ಸುರಸೇವಿತಾಃ ॥೧೨॥**

**ಇಭಭಗ್ನಭುಜದ್ರುಮಾನ್** ಆನೆಗಳಿಂದ ಮುರಿದು ಹೋದ ಭೂರ್ಜವೃಕ್ಷಗಳುಳ್ಳ ಅಥವಾ ಆನೆಗಳಿಂದ ಭಗ್ನಗೊಂಡ ಟೊಂಗೆಗಳುಳ್ಳ ಗಿಡಗಳುಳ್ಳ **ವಿಚಿತ್ರಧಾತುಚಿತ್ರಾದೀನ್** ನಾನಾ ವಿಧ ಗರಿಕಹರಿತಾಲಾದಿ ಸ್ವರ್ಣರಜತಾದಿ ಧಾತುಗಳಿಂದ ಆಶ್ಚರ್ಯಕರಗಳಾದ ಪರ್ವತಗಳನ್ನು **ಶಿವಜಲಾನ್** ಒಳ್ಳೆಯ ನೀರುಳ್ಳ **ಜಲಾಶಯಾನ್** ಮಡವುಗಳನ್ನು **ಸುರಸೇವಿತಾಃ** ದೇವತೆಗಳಿಂದ ಸೇವಿಸಲ್ಪಟ್ಟ **ನಳಿನೀಃ** ಪುಷ್ಕರಣಿಗಳನ್ನು (ಸರೋವರಗಳನ್ನು)

**ಚಿತ್ರಸ್ವನೈಃ ಪತ್ರರಥೈರ್ವಿಭ್ರಮದ್ಭ್ರಮರಶ್ರಿಯಃ ।**
**ಚಲವೇಣುಶರಸ್ತಂಭಕುಶಕೀಚಕಗಹ್ವರಮ್ ॥೧೩॥**

**ಚಿತ್ರಸ್ವನೈಃ** ನಾನಾ ವಿಧ ಧ್ವನಿಗಳುಳ್ಳ **ಪತ್ರರಥೈಃ** ಪಕ್ಷಿಗಳಿಂದ ಸಹತವಾಗಿ ಅಥವಾ ಪಕ್ಷಿಗಳ ನಿಮಿತ್ತವಾಗಿ **ವಿಭ್ರಮತ್** ಇತ್ತ ಅತ್ತ ಸಂಚರಿಸುವ **ಭ್ರಮರಶ್ರಿಯಃ** ಭ್ರಮರಗಳ ಶೋಭೆಯುಳ್ಳ ನಲಿನಿಯು **ಚಲ** ಚಲಿಸುವ **ವೇಣು** ಗಾಳಿತುಂಬಿ ಕೂಗವ ಬಿದರುಗಳು **ಶರಸ್ತಂಭ** ಎಳೆಯ ಹುಲ್ಲುಗಳು **ಕುಶಾ** ದರ್ಭೆಗಳು **ಕೀಚಕ** ಬಿದುರುಗಳಿಂದ **ಗಹ್ವರಂ** ದುರ್ಗಮವಾದ ಎಂದು ಅರ್ಥ.

**ಏಕ ಏವಾತಿಯಾತೋಹಮದ್ರಾಕ್ಷಂ ವಿಪಿನಂ ಮಹತ್ ।**
**ಘೋರಂ ಪ್ರತಿಭಯಾಕಾರಂ ವ್ಯಾಲೋಲೂಕಶಿವಾಜರಮ್ ॥೧೪॥**

**ಏಕ ಏವ** ಒಬ್ಬನೇ **ಅತಿಯಾತ್** ಮೇಲೆ ಹೇಳಿದ ಜನಪದಾದಿಗಳನ್ನು ದಾಟಿದವನಾಗಿ **ಘೋರಂ** ದುಃಸಹವಾದ **ಪ್ರತಿಭಯಾಕಾರಂ** ಬಹು ಭಯಜನಕವಾದ **ವ್ಯಾಲೋಲೂಕಶಿವಾಜರಂ** ಆನೆ,(ಹಾವು) ಗೂಬೆ, ನರಿಗಳಿಗೆ ಕ್ರೀಡಾಸ್ಥಾನವಾದ **ಮಹತ್ ವಿಪಿನಂ** ದೊಡ್ಡ ಕಾಡನ್ನು **ಅಹಂ** ನಾನು **ಅದ್ರಾಕ್ಷಂ** ಕಂಡೆನು.

**ಪರಿಶ್ರಾಂತೇಂದ್ರಿಯಾತ್ಮಾಽಹಂ ತೃಟ್ಪರೀತೋ ಬುಭುಕ್ಷಿತಃ ।**
**ಸ್ನಾತ್ವಾ ಪೀತ್ವಾ ಹ್ರದೇ ನದ್ಯಾ ಉಪಸ್ಪೃಷ್ಟೋ ಗತಶ್ರಮಃ ॥೧೫॥**

**ಪರಿಶ್ರಾಂತೇಂದ್ರಿಯಾತ್ಮಾಹಂ** ಬಹಳ ಶ್ರಮ ಹೊಂದಿದ ಇಂದ್ರಿಯ-ದೇಹವುಳ್ಳ **ಅಹಂ** ನಾನು **ತೃಟ್‌ಪರೀತಃ** (ನೀರಡಿಕೆಯಿಂದ ಆವರಿಸಿದ) ನೀರು ಕುಡಿಯಲಿಚ್ಛಿಸುವವನಾಗಿ **ಬುಭುಕ್ಷಿತಂ** ಹಸಿವೆಯಾದವನು **ನದ್ಯಾಃ ಹ್ರದೇ** ನದಿಯ ಮಡುವಿನಲ್ಲಿ **ಸ್ನಾತ್ವಾ** ಸ್ನಾನಮಾಡಿ **ಉಪಸ್ಪೃಷ್ಟಃ** ಆಚಮನ ಮಾಡಿದವನಾಗಿ

ತರ್ಪಣಾದಿಗಳನ್ನು ಕೊಟ್ಟು ಪೀತ್ವಾ ಸಿಹಿಯಾದ ನೀರು ಕುಡಿದು **ಗತಶ್ರಮಃ** ಆಲಸ್ಯವನ್ನು ಕಳೆದುಕೊಂಡೆನು.

**ತಸ್ಮಿನ್ನಿರ್ಮನುಜೇಽರಣ್ಯೇ ಪಿಪ್ಪಲೋಪಸ್ಥ ಆಶ್ರಿತಃ ।**
**ಆತ್ಮನಾಽಽತ್ಮಾನಮಾತ್ಮಸ್ಥಂ ಯಥಾಶ್ರುತಮಚಿಂತಯಮ್ ॥೧೬॥**

**ನಿರ್ಮನುಜೇ** ಮನುಷ್ಯರಿಲ್ಲದ **ತಸ್ಮಿನ್ ಅರಣ್ಯೇ** ಆ ಅಡವಿಯಲ್ಲಿ **ಪಿಪ್ಪಲೋಪಸ್ಥೇ** ಅಶ್ವತ್ಥಗಿಡದ ಬುಡದಲ್ಲಿ **ಆಶ್ರಿತಃ** ಕುಳಿತವನಾಗಿ **ಆತ್ಮಾನಂ** ಮನಸ್ಸಿನಿಂದ **ಆತ್ಮಸ್ಥಂ** ನನ್ನ ಅಂತರ್ಯಾಮಿಯಾದ **ಆತ್ಮಾನಂ** ಪರಮಾತ್ಮನನ್ನು **ಯಥಾಶ್ರುತಂ** ಸನ್ಯಾಸಿಗಳಿಂದ ಕೇಳಿದಂತೆ **ಅಚಿಂತಯಂ** ಧ್ಯಾನ ಮಾಡಿದೆನು.

ಸನ್ಯಾಸಿಗಳಿಂದ ಏನು ಕೇಳಿದಿ ಏನು ಧ್ಯಾನ ಮಾಡಿದಿ ಎಂದರೆ ಹೇಳುವರು

**ಸ್ವಪ್ನೋ ಮಾಯಾಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮನಃ ।**
**ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥೧೭॥**

**ಮಾಯಾ** ಜೀವನ ಮನಸ್ಸಿನಲ್ಲಿರುವ ಕ್ಷೇಳಿದ ನೋಡಿದ ವಸ್ತುಗಳ ವಾಸನೋಪಾದಾನಕ ಪದಾರ್ಥಗಳನ್ನು ಕಾಣುವದೆಂಬುದು **ಸ್ವಪ್ನಃ** ಕನಸು **ಅಗ್ರಹಃ** ಸ್ವಾಪ್ನ ಜಾಗ್ರತ್ ಪದಾರ್ಥಗಳನ್ನು ನೋಡದಿರುವದು **ಶಯ್ಯಾ** ಸುಷುಪ್ತಿಯು **ನಾಮರೂಪಕ್ರಿಯಾವೃತ್ತಿಃ ಆಭಾಸಃ** ನಾಮ ರೂಪ ಕ್ರಿಯಾವಿಷಯಕ ಜ್ಞಾನವಾಗುವದೇ **ಜಾಗ್ರತ್** ಜಾಗಾರಾವಸ್ಥೆಯು. ಈ ಮೂರು ಅವಸ್ಥೆಗಳು **ಆತ್ಮನಃ** ಜೀವರಿಗೆ ಯಾವನಿಂದ ಆಗುವವೋ ಅವನು **ಸಂವಿತ್** ಸ್ವಪರಗತ ಅಖಿಲವಿಶೇಷವಿಷಯಕ ಅಪ್ರಾಕೃತಜ್ಞಾನರೂಪನು **ಶಾಸ್ತ್ರಂ** ಸರ್ವಾಂತರ್ಯಾಮಿಯು **ಪರಂ ಪದಂ** ಸರ್ವೋತ್ತಮನೆಂದು ಜ್ಞೇಯನು.

**ನೇಂದ್ರಿಯಾರ್ಥಂ ನ ಚ ಸ್ವಪ್ನಂ ನ ಸುಪ್ತಂ ನ ಮನೋರಥಮ್ ।**
**ನ ನಿರೋಧಂ ಚಾನುಗಚ್ಛೇಚ್ಚಿತ್ರಂ ತದ್ಭಗವತ್ಪದಮ್ ॥೧೮॥**

**ಇಂದ್ರಿಯಾರ್ಥಂ** ಇಂದ್ರಿಯಗಳಿಂದಾಗುವ ಜ್ಞಾನಕ್ಕೆ ವಿಷಯವಾದ ಅರ್ಥವನ್ನು ಅಂದರೆ ಜಾಗ್ರದವಸ್ಥೆಯನ್ನು **ಸ್ವಪ್ನಂ ಚ** ಸ್ವಪ್ನಾವಸ್ಥೆಯನ್ನೂ(ಕನಸನ್ನು) **ಚ** ಮತ್ತು **ಸುಪ್ತಂ** ಸುಷುಪ್ತ್ಯವಸ್ಥೆಯನ್ನೂ (ನಿದ್ರೆಯನ್ನೂ) **ಮನೋರಥಂ** ಚಿಂತೆಯನ್ನು (ಚಿಂತಾ ಮನೋರಥೇ ಎಂದು ಅಭಿಧಾನವಿದೆ) **ನ ರೋಧಂ** ಮರಣವನ್ನು ಚಶಬ್ದದಿಂದ

ಉತ್ಪತ್ತ್ಯಾದಿಗಳನ್ನೂ **ಯತ್ ನ ಅನುಗಚ್ಛೇತ್** ಯಾವುದು ಜೀವನ ಜೊತೆಗೆ ತಾನು ಹೊಂದುವದಿಲ್ಲವೋ **ತತ್** ಅದು **ಚಿತ್ರಂ** ಲೋಕವಿಲಕ್ಷಣವಾದ **ಭಗವತ್ಪದಂ** ಭಗವಂತನ ಸ್ವರೂಪವು.

**ವಿಜಯಧ್ವಜೀಯ -**

1) **ಚಿತ್ರಂ** ಆಶ್ಚರ್ಯ ರೂಪನಾದ ಅಥವಾ ಅವಿಮಿಶ್ರಿತಜ್ಞಾನಾತ್ಮಕನು

2) ಚೇತನನಾದ ಜೀವನನ್ನು ತ್ರಾಯತೇ ಇತಿ ಚಿತ್ರಂ ಎಂದರೆ ಜೀವರಕ್ಷಕನಾದ ಎಂದರ್ಥ ಅಥವಾ ಚಿತ್ ಜ್ಞಾನವನ್ನು ತನೋತಿ ರಾತೀತಿ ಚಿತ್ರಂ ।

3) ಜ್ಞಾನಿಗಳಿಗೆ ಜ್ಞಾನವನ್ನು ಹೆಚ್ಚಿಸುವವನು ಜ್ಞಾನವಿಲ್ಲದವರಿಗೆ ಗುರುಮುಖದಿಂದ ಜ್ಞಾನಕೊಡುವವನು ಎಂದರ್ಥ.

4) ಚಿತ್ರರತನು ಸ ಹಿ ಸರ್ವಮನೋವೃತ್ತಿಪ್ರೇರಕಃ ಸಮುದಾಹೃತಃ ।।ಸ್ಮೃತಿ।।

5) ಚಿನೋತೀತಿ ಚಿತ್-ಸೃಷ್ಟಿಕರ್ತೃ ಬ್ರಹ್ಮನು ತಂ ತರತೀತಿ ಚಿತ್ರಂ ಅವನನ್ನು ಮೀರಿ ಇದ್ದವನು ಅಥವಾ ಚಿತಂ-ಬ್ರಹ್ಮನನ್ನೂ ತನೋತಿ-ಸೃಷ್ಟಿಸುವ ರಮಯತಿ-ಸಂತೋಷ ಪಡಿಸುವನು ಅವನಿಗಿಂತ ಉತ್ತಮವಾದ ಭಗವತ್-ಐಶ್ವರ್ಯಾದಿ ಗುಣಗಳಿಂದ ಕೂಡಿದ ಪದಂ-ಸ್ವರೂಪವು ಶ್ರೀಹರಿಯದು. ತತ್-ವ್ಯಾಪ್ತವಾದುದು. ಇನ್ನುಳಿದೆಲ್ಲವು ಹಿಂದಿನಂತೆ.

**ಸ ಏಕೋ ಭಗವಾನಗ್ರೇ ಕ್ರೀಡಿಷ್ಯನ್ನಿದಮಾತ್ಮನಃ ।**
**ಸೃಷ್ಟ್ವಾ ವಿಹೃತ್ಯ ತಜ್ಜಗ್ಧ್ವಾ ಉದಾಸ್ತೇ ಕೇವಲಃ ಪುನಃ ।।೧೯।।**

**ಅಗ್ರೇ** ಸೃಷ್ಟಿಯ ಮೊದಲು **ಸಃ** ಪ್ರಸಿದ್ಧನಾದ **ಭಗವಾನ್** ಪರಮಾತ್ಮನು **ಏಕಃ** ಒಬ್ಬನೇ ಸ್ವತಂತ್ರನಾಗಿದ್ದನು. **ಕ್ರೀಡಿಷ್ಯನ್** ಅವತಾರ ರೂಪಗಳಿಂದಲೂ ಜಗನ್ನಿಯಾಮಕ ರೂಪಗಳಿಂದಲೂ ಕ್ರೀಡಿಸಲು ಇಚ್ಛಿಸಿ **ಆತ್ಮನಃ** ಜೀವಸಮುದಾಯದ ಅಂದರೆ ಅವರಿಗೆ ಉಪಕಾರಕವಾದ **ಇದಂ** ಜಗತ್ತನ್ನು ಅಥವಾ **ಆತ್ಮನಃ** ತನ್ನ ಉದರದಿಂದ ಬ್ರಹ್ಮಾದಿ ಸಮಸ್ತ ಜಗತ್ತನ್ನು **ಸೃಷ್ಟ್ವಾ** ಸೃಷ್ಟಿಮಾಡಿ ನಿಯಾಮಕನಾಗಿ ಅದರಲ್ಲಿ ಪ್ರವೇಶಿಸಿ **ವಿಹೃತ್ಯ** ಜಗತ್ತನ್ನು ರಕ್ಷಿಸಲು ಅವತಾರಗಳನ್ನು ಮಾಡಿ ವಿಹರಿಸಿ **ಪುನಃ** ಮತ್ತೆ **ತಜ್ಜಗ್ಧ್ವಾ** ಪ್ರಲಯಕಾಲದಲ್ಲಿ ಜಗತ್ತನ್ನು ಸಂಹರಿಸಿ **ಕೇವಲಃ** ಪುರುಷಾಂತರ ರಹಿತನಾಗಿ ಏಕಾಕಿಯಾಗಿ **ಉದಾಸ್ತೇ** ಉತ್ಕೃಷ್ಟನಾಗಿರುವನು.(ಒಬ್ಬನೇ ಆದ್ದರಿಂದ

ಭಯಾದಿಗಳಿಲ್ಲವೆಂದರ್ಥ) ಅಥವಾ ಜೀವದ ಪ್ರವೃತ್ತ್ಯಾದಿಗಳ ವಿಷಯದಲ್ಲಿ ಉದಾಸೀನನಾಗಿರುವನು.

**ವಿಶೇಷ :-** ತಜ್ಜಗ್ಧ್ಯಾ ಉದಾಸ್ತೇ ಎಂಬಲ್ಲಿ ಸಂಧಿಯಾಗದಿರುವದು ಪ್ರಕೃತ್ಯಾದಿಸಾಧನಗಳನ್ನೂ ಬಿಟ್ಟು ಸೃಷ್ಟಿಸುವ ಶಕ್ತಿ ಇದೆ ಎಂಬ ಮಾಹಾತ್ಮ್ಯ ತೋರಿಸಲು ಮತ್ತು ಸೃಷ್ಟಿಸ್ಥಿತಿ, ಸಂಹಾರ ಕರ್ತೃತ್ವವಷ್ಟೇ ಅಲ್ಲ, ಜ್ಞಾನಾದಿ ಕರ್ತೃತ್ವವೂ ಉಂಟು ಎಂದು ತಿಳಿಸಲು.

ಇದುವರೆಗೆ ಸಂನ್ಯಾಸಿಗಳಿಂದ ಉಪದಿಷ್ಟವಾದ ತಾನು ಧ್ಯಾನಿಸಿದ್ದನ್ನು ತಿಳಿಸಿ. ಧ್ಯಾನದ ಫಲ ತಿಳಿಸುವರು ನಾರದರು

**ಧ್ಯಾಯತಶ್ಚರಣಾಂಭೋಜಂ ಭಾವನಿರ್ವೃತಚೇತಸಃ ।**
**ಉತ್ಕಂಠಾಶ್ರುಕಲಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥೨೦॥**

**ಚರಣಾಂಭೋಜಂ** ಶ್ರೀಹರಿಯ ಪಾದಕಮಲವನ್ನು **ಧ್ಯಾಯತಃ** ಧ್ಯಾನ ಮಾಡುತ್ತಿರುವ **ಭಾವನಿರ್ವೃತಚೇತಸಃ** ಭಕ್ತಿಯಿಂದ ಆನಂದ ಪೂರ್ಣವಾದ ಮನಸ್ಸುಳ್ಳ **ಉತ್ಕಂಠಾಶ್ರುಕಲಾಕ್ಷಸ್ಯ** ಉತ್ಕಂಠತೆಯಿಂದ ಉಂಟಾದ ನೀರಿನ ಹನಿಗಳಿಂದ ಕೂಡಿದ ಕಣ್ಣುಗಳುಳ್ಳ **ಮೇ** ನನ್ನ **ಹೃದಿ** ಹೃದಯದಲ್ಲಿ **ಹರಿಃ** ಶ್ರೀಹರಿಯು **ಶನೈಃ** ಮೆಲ್ಲನೆ **ಆಸೀತ್** ಪ್ರತ್ಯಕ್ಷನಾದನು.

**ಪ್ರೇಮಾತಿಭಾರನಿರ್ಭಿಣ್ಣಪುಲಕಾಂಗೋಽತಿನಿರ್ವೃತಃ ।**
**ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥೨೧॥**

**ಪ್ರೇಮಾತಿಭಾರನಿರ್ಭಿಣ್ಣಪುಲಕಾಂಗಃ** ಅತಿಯಾದ ಸ್ನೇಹದ ಭಾರದಿಂದ ಹೊರಟ ರೋಮಾಂಚನದಿಂದ ಕೂಡಿದ ಅವಯವವುಳ್ಳ **ಆನಂದಸಂಪ್ಲವೇ** ಆನಂದ ಸಾಗರದಲ್ಲಿ **ಲೀನಃ** ಮಗ್ನನಾದ **ಅತಿನಿರ್ವೃತಃ** ಬಹಳಸಂತೋಷನಾಗಿ **ಹೇ ಮುನೇ** ವ್ಯಾಸರೇ **ಉಭಯಂ ನ ಅಪಶ್ಯಂ** ಎರಡನೆಯದನ್ನು ಕಾಣಲಿಲ್ಲ ಶ್ರೀಹರಿಯನ್ನು ಮಾತ್ರ ನೋಡಿದೆನೆಂದು ಭಾವ.

*ಭಾಗವತತಾತ್ಪರ್ಯ-*

ಉಭಯಂ ದ್ವಿತೀಯಂ ನಾಪಶ್ಯಂ ತಮೇವಾಪಶ್ಯಮ್ ।

ಉತ್ಪತ್ತ್ಯಾದಿಗಳನ್ನೂ **ಯತ್ ನ ಅನುಗಚ್ಛೇತ್** ಯಾವುದು ಜೀವನ ಜೊತೆಗೆ ತಾನು ಹೊಂದುವದಿಲ್ಲವೋ **ತತ್** ಅದು **ಚಿತ್ರಂ** ಲೋಕವಿಲಕ್ಷಣವಾದ **ಭಗವತ್ಪದಂ** ಭಗವಂತನ ಸ್ವರೂಪವು.

**ವಿಜಯಧ್ವಜೀಯ -**

1) **ಚಿತ್ರಂ** ಆಶ್ಚರ್ಯ ರೂಪನಾದ ಅಥವಾ ಅವಿಮಿಶ್ರಿತಜ್ಞಾನಾತ್ಮಕನು

2) ಚೇತನನಾದ ಜೀವನನ್ನು ತ್ರಾಯತೇ ಇತಿ ಚಿತ್ರಂ ಎಂದರೆ ಜೀವರಕ್ಷಕನಾದ ಎಂದರ್ಥ ಅಥವಾ ಚಿತ್ ಜ್ಞಾನವನ್ನು ತನೋತಿ ರಾತೀತಿ ಚಿತ್ರಂ ।

3) ಜ್ಞಾನಿಗಳಿಗೆ ಜ್ಞಾನವನ್ನು ಹೆಚ್ಚಿಸುವವನು ಜ್ಞಾನವಿಲ್ಲದವರಿಗೆ ಗುರುಮುಖದಿಂದ ಜ್ಞಾನಕೊಡುವವನು ಎಂದರ್ಥ.

4) ಚಿತ್ರರತನು ಸ ಹಿ ಸರ್ವಮನೋವೃತ್ತಿಪ್ರೇರಕಃ ಸಮುದಾಹೃತಃ ।।ಸ್ಮೃತಿ।।

5) ಚಿನೋತೀತಿ ಚಿತ್-ಸೃಷ್ಟಿಕರ್ತೃ ಬ್ರಹ್ಮನು ತಂ ತರತೀತಿ ಚಿತ್ರಂ ಅವನನ್ನು ಮೀರಿ ಇದ್ದವನು ಅಥವಾ ಚಿತಂ-ಬ್ರಹ್ಮನನ್ನೂ ತನೋತಿ-ಸೃಷ್ಟಿಸುವ ರಮಯತಿ-ಸಂತೋಷ ಪಡಿಸುವನು ಅವನಿಗಿಂತ ಉತ್ತಮವಾದ ಭಗವತ್-ಐಶ್ವರ್ಯಾದಿ ಗುಣಗಳಿಂದ ಕೂಡಿದ ಪದಂ-ಸ್ವರೂಪವು ಶ್ರೀಹರಿಯದು. ತತ್-ವ್ಯಾಪ್ತವಾದುದು. ಇನ್ನುಳಿದೆಲ್ಲವು ಹಿಂದಿನಂತೆ.

**ಸ ಏಕೋ ಭಗವಾನಗ್ರೇ ಕ್ರೀಡಿಷ್ಯನ್ನಿದಮಾತ್ಮನಃ ।**
**ಸೃಷ್ಟ್ವಾ ವಿಹೃತ್ಯ ತಜ್ಜಗ್ಧ್ವಾ ಉದಾಸ್ತೇ ಕೇವಲಃ ಪುನಃ ।।೧೯।।**

**ಅಗ್ರೇ** ಸೃಷ್ಟಿಯ ಮೊದಲು **ಸಃ** ಪ್ರಸಿದ್ಧನಾದ **ಭಗವಾನ್** ಪರಮಾತ್ಮನು **ಏಕಃ** ಒಬ್ಬನೇ ಸ್ವತಂತ್ರನಾಗಿದ್ದನು. **ಕ್ರೀಡಿಷ್ಯನ್** ಅವತಾರ ರೂಪಗಳಿಂದಲೂ ಜಗನ್ನಿಯಾಮಕ ರೂಪಗಳಿಂದಲೂ ಕ್ರೀಡಿಸಲು ಇಚ್ಛಿಸಿ **ಆತ್ಮನಃ** ಜೀವಸಮುದಾಯದ ಅಂದರೆ ಅವರಿಗೆ ಉಪಕಾರಕವಾದ **ಇದಂ** ಜಗತ್ತನ್ನು ಅಥವಾ **ಆತ್ಮನಃ** ತನ್ನ ಉದರದಿಂದ ಬ್ರಹ್ಮಾದಿ ಸಮಸ್ತ ಜಗತ್ತನ್ನು **ಸೃಷ್ಟ್ವಾ** ಸೃಷ್ಟಿಮಾಡಿ ನಿಯಾಮಕನಾಗಿ ಅದರಲ್ಲಿ ಪ್ರವೇಶಿಸಿ **ವಿಹೃತ್ಯ** ಜಗತ್ತನ್ನು ರಕ್ಷಿಸಲು ಅವತಾರಗಳನ್ನು ಮಾಡಿ ವಿಹರಿಸಿ **ಪುನಃ** ಮತ್ತೆ **ತಜ್ಜಗ್ಧ್ವಾ** ಪ್ರಲಯಕಾಲದಲ್ಲಿ ಜಗತ್ತನ್ನು ಸಂಹರಿಸಿ **ಕೇವಲಃ** ಪುರುಷಾಂತರ ರಹಿತನಾಗಿ ಏಕಾಕಿಯಾಗಿ **ಉದಾಸ್ತೇ** ಉತ್ಕೃಷ್ಟನಾಗಿರುವನು.(ಒಬ್ಬನೇ ಆದ್ದರಿಂದ

ಭಯಾದಿಗಳಿಲ್ಲವೆಂದರ್ಥ) ಅಥವಾ ಜೀವದ ಪ್ರವೃತ್ಯಾದಿಗಳ ವಿಷಯದಲ್ಲಿ ಉದಾಸೀನನಾಗಿರುವನು.

**ವಿಶೇಷ :-** ತಜ್ಜಗ್ಧ್ಯಾ ಉದಾಸ್ತೇ ಎಂಬಲ್ಲಿ ಸಂಧಿಯಾಗದಿರುವದು ಪ್ರಕೃತ್ಯಾದಿಸಾಧನಗಳನ್ನೂ ಬಿಟ್ಟು ಸೃಷ್ಟಿಸುವ ಶಕ್ತಿ ಇದೆ ಎಂಬ ಮಾಹಾತ್ಮ್ಯ ತೋರಿಸಲು ಮತ್ತು ಸೃಷ್ಟಿಸ್ಥಿತಿ, ಸಂಹಾರ ಕರ್ತೃತ್ವವಷ್ಟೇ ಅಲ್ಲ, ಜ್ಞಾನಾದಿ ಕರ್ತೃತ್ವವೂ ಉಂಟು ಎಂದು ತಿಳಿಸಲು.

ಇದುವರೆಗೆ ಸಂನ್ಯಾಸಿಗಳಿಂದ ಉಪದಿಷ್ಟವಾದ ತಾನು ಧ್ಯಾನಿಸಿದ್ದನ್ನು ತಿಳಿಸಿ. ಧ್ಯಾನದ ಫಲ ತಿಳಿಸುವರು ನಾರದರು

**ಧ್ಯಾಯತಶ್ಚರಣಾಂಭೋಜಂ ಭಾವನಿರ್ವೃತಚೇತಸಃ ।**
**ಉತ್ಕಂಠಾಶ್ರುಕಲಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥೨೦॥**

**ಚರಣಾಂಭೋಜಂ** ಶ್ರೀಹರಿಯ ಪಾದಕಮಲವನ್ನು **ಧ್ಯಾಯತಃ** ಧ್ಯಾನ ಮಾಡುತ್ತಿರುವ **ಭಾವನಿರ್ವೃತಚೇತಸಃ** ಭಕ್ತಿಯಿಂದ ಆನಂದ ಪೂರ್ಣವಾದ ಮನಸ್ಸುಳ್ಳ **ಉತ್ಕಂಠಾಶ್ರುಕಲಾಕ್ಷಸ್ಯ** ಉತ್ಕಂಠತೆಯಿಂದ ಉಂಟಾದ ನೀರಿನ ಹನಿಗಳಿಂದ ಕೂಡಿದ ಕಣ್ಣುಗಳುಳ್ಳ **ಮೇ** ನನ್ನ **ಹೃದಿ** ಹೃದಯದಲ್ಲಿ **ಹರಿಃ** ಶ್ರೀಹರಿಯು **ಶನೈಃ** ಮೆಲ್ಲನೆ **ಆಸೀತ್** ಪ್ರತ್ಯಕ್ಷನಾದನು.

**ಪ್ರೇಮಾತಿಭಾರನಿರ್ಭಿಣ್ಣಪುಲಕಾಂಗೋಽತಿನಿರ್ವೃತಃ ।**
**ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥೨೧॥**

**ಪ್ರೇಮಾತಿಭಾರನಿರ್ಭಿಣ್ಣಪುಲಕಾಂಗಃ** ಅತಿಯಾದ ಸ್ನೇಹದ ಭಾರದಿಂದ ಹೊರಟ ರೋಮಾಂಚನದಿಂದ ಕೂಡಿದ ಅವಯವವುಳ್ಳ **ಆನಂದಸಂಪ್ಲವೇ** ಆನಂದ ಸಾಗರದಲ್ಲಿ **ಲೀನಃ** ಮಗ್ನನಾದ **ಅತಿನಿರ್ವೃತಃ** ಬಹಳಸಂತೋಷನಾಗಿ **ಹೇ ಮುನೇ** ವ್ಯಾಸರೇ **ಉಭಯಂ ನ ಅಪಶ್ಯಂ** ಎರಡನೆಯದನ್ನು ಕಾಣಲಿಲ್ಲ ಶ್ರೀಹರಿಯನ್ನು ಮಾತ್ರ ನೋಡಿದೆನೆಂದು ಭಾವ.

*ಭಾಗವತತಾತ್ಪರ್ಯ-*

ಉಭಯಂ ದ್ವಿತೀಯಂ ನಾಪಶ್ಯಂ ತಮೇವಾಪಶ್ಯಮ್ ।

ಇಲ್ಲಿ ಉಭಯಂ ಎಂಬುದಕ್ಕೆ ಪರಾಪರತತ್ತ್ವಗಳೆರಡನ್ನೂ ಎಂದು ಅರ್ಥ ಮಾಡಿದರೆ ಪರಮಾತ್ಮನನ್ನು ನೋಡಲಿಲ್ಲವೆಂದಾಗುವದು. ಕಾರಣ ಉಭಯಶಬ್ದಾರ್ಥ ಹೇಳಿರುವರು ಉಭಯ ಶಬ್ದಕ್ಕೆ ಎರಡು ಎಂದರ್ಥವಲ್ಲ, ಕಿಂತು ಎರಡನೆಯದು ಎಂದು. ಇದರಿಂದ ಎರಡನೆಯದನ್ನು ನೋಡಲಿಲ್ಲ ಶ್ರೀಹರಿಯನ್ನೇ ನೋಡಿದೆನೆಂಬರ್ಥ ಲಭಿಸುವದು. ಸಮ, ಅಧಿಕ, ದ್ವಿತೀಯವಸ್ತು ಕಾಣಲಿಲ್ಲವೆಂದು ಭಾವ.

**ರೂಪಂ ಭಗವತೋ ಯತ್ತನ್ಮನಃಕಾಂತಂ ಸುಖಾವಹಮ್ ।**
**ಅಪಶ್ಯನ್ ಸಹಸೋತ್ತಸ್ಥೌ ಕೈವಲ್ಯಾದ್ ದುರ್ಮನಾ ಇವ ॥೨೨॥**

**ಸುಖಾವಹಂ** ಸುಖಜನಕವಾದ **ಮನಃಕಾಂತಂ** ಮನೋಹರವಾದ **ಯತ್ ಭಗವತೋ ರೂಪಂ** ಯಾವ ಭಗವಂತನ ರೂಪವಿತ್ತೋ **ತತ್** ಅದು **ಸಹಸಾ** ಹೊರಗಿನ ಕಾರಣವೇನೂ ಇಲ್ಲದೆ ಇದ್ದರೂ **ದುರ್ಮನಾಃ ಇವ** ದುಷ್ಟ ಅಂತಃಕರಣವುಳ್ಳ ಪುರುಷನಂತೆ **ಅಪಶ್ಯನ್** ಕಾಣದಲೇ **ಕೈವಲ್ಯಾತ್** ಪರಮಾನಂದಾನುಭವದಿಂದ **ಉತ್ತಸ್ಥೌ** ಮೇಲೆದ್ದಿತು. ಇಲ್ಲದಾದನೆಂದರ್ಥ.

**ದಿದೃಕ್ಷುಸ್ತದಹಂ ಭೂಯಃ ಪ್ರಣಿಧಾಯ ಮನೋ ಹೃದಿ ।**
**ವೀಕ್ಷಮಾಣೋಽಪಿ ನಾಪಶ್ಯಮವಿತೃಪ್ತ ಇವಾತುರಃ ॥೨೩॥**

**ಅಹಂ** ನಾನು **ತತ್** ಆ ರೂಪವನ್ನು **ಭೂಯಃ** ಮತ್ತೆ **ದಿದೃಕ್ಷುಃ** ನೋಡುವ ಇಚ್ಛೆಯಿಂದ **ಹೃದಿ ಮನಃ ಪ್ರಣಿಧಾಯ** ಹೃದಯದಲ್ಲಿ ಏಕಾಗ್ರಮನಸ್ಸಿನಿಂದ ಇದ್ದರೂ **ವೀಕ್ಷಮಾಣೋಽಪಿ** ಧ್ಯಾನಮಾಡಿದರೂ **ನ ಅಪಶ್ಯಂ** ಕಾಣಲಿಲ್ಲ **ಆತುರಃ ಇವ** ರೋಗಿಯಂತೆ **ಅವಿತೃಪ್ತಃ ಅಭವಂ** ತೃಪ್ತಿ ಇಲ್ಲದಾದೆನು.

**ಏವಂ ಯತಂತಂ ವಿಜನೇ ಮಾಮಾಹಾಗೋಚರೋ ಗಿರಾಮ್ ।**
**ಗಂಭೀರಶ್ಲಕ್ಷ್ಣಯಾ ವಾಚಾ ಶುಚಃ ಪ್ರಶಮಯನ್ನಿವ ॥೨೪॥**

**ಏವಂ** ಈ ರೀತಿ **ವಿಜನೇ** ಜನರಹಿತ ಅರಣ್ಯದಲ್ಲಿ **ಯತಂತಂ** ಪ್ರಯತ್ನಿಸುವ **ಮಾಂ** ನನ್ನನ್ನು **ಗಿರಾಂ ಅಗೋಚರಃ** ನಮ್ಮ ಮಾತುಗಳಿಗೆ ವಿಷಯನಲ್ಲದ **ಅರ್ಥಾತ್** ಅದೃಶ್ಯನಾದ ವ್ಯಕ್ತಿಯು **ಗಂಭೀರಶ್ಲಕ್ಷ್ಣಯಾ ವಾಚಾ** ಅರ್ಥಗರ್ಭಿತವಾದ ಮಧುರಮಾತುಗಳಿಂದ **ಶುಚಃ** ದುಃಖವನ್ನು **ಪ್ರಶಮಯನ್ ಇವ** ಪರಿಹರಿಸುವಂತೆ **ಆಹ** ಹೇಳಿದನು.

**ಹಂತಾಸ್ಮಿನ್ ಜನ್ಮನಿ ಭವಾನ್ನ ಮಾಂ ದ್ರಷ್ಟುಮಿಹಾರ್ಹತಿ ।**
**ಅವಿಪಕ್ವಕಷಾಯಾಣಾಂ ದುರ್ದರ್ಶೋಽಹಂ ಕುಯೋಗಿನಾಮ್ ॥೨೫॥**

**ಹಂತ** ಆಶ್ಚರ್ಯ **ಭವಾನ್** ನೀನು **ಅಸ್ಮಿನ್** ಜನ್ಮನಿ ಈ ಶೂದ್ರ ಜನ್ಮದಲ್ಲಿ **ಮಾಂ** ನನ್ನನ್ನು **ದ್ರಷ್ಟುಂ** ನೋಡಲು **ನ ಅರ್ಹತಿ** ಸಮರ್ಥನಾಗಿರಲಾರೆ **ಅಹಂ** ನಾನು **ಅವಿಪಕ್ವಕಷಾಯಾಣಾಂ** ಕಾಮಾದಿ ದೋಷಗಳನ್ನು ಕಳೆದುಕೊಳ್ಳದ **ಕುಯೋಗಿನಾಂ** ಯೋಗಸಂಪೂರ್ತಿಯಾಗದವರಿಗೆ **ದುರ್ದರ್ಶಃ** ಕಾಣಿಸಲಾರೆನು.

**ಸಕೃದ್ಯದ್ದರ್ಶಿತಂ ರೂಪಮೇತತ್ಕಾಮಾಯ ತೇಽನಘ ।**
**ಮತ್ಕಾಮಃ ಶನಕೈಃ ಸಾಧು ಸರ್ವಾನ್ ಮುಂಚತಿ ಹೃಚ್ಛ್ರಯಾನ್ ॥೨೬॥**

**ಹೇ ಅನಘ** ಪಾಪರಹಿತನೇ **ಸಕೃತ್** ಒಂದು ಸಲ **ರೂಪಂ ದರ್ಶಿತಂ ಇತಿ ಯತ್ ಏತತ್** ನನ್ನ ರೂಪವನ್ನೇನು ತೋರಿಸಿದೆನೆಂಬುದುದಿದೆಯೋ ಅದು **ಕಾಮಾಯ** ನನ್ನಲ್ಲಿ ಅನುರಾಗ ಉಂಟಾಗಲು ಆದರಿಂದೇನು ಪ್ರಯೋಜನವೆಂದರೆ **ಯತ್ಕಾಮಃ** ನನ್ನಲ್ಲಿ ಅನುರಕ್ತನಾದ ಪುರುಷನು **ಶನಕೈಃ** ಮೆಲ್ಲನೆ **ಹೃಚ್ಛ್ರಯಾನ್** ಮನಸ್ಸಿನಲ್ಲಿರುವ ಕಾಮಾದಿಗಳನ್ನು **ಸರ್ವಾನ್** ಎಲ್ಲವುಗಳನ್ನು **ಸಾಧು** ಚೆನ್ನಾಗಿ **ಮುಂಚತಿ** ಬಿಡುವನು. ಎಲ್ಲ ಮನೋದೋಷಗಳು ಹೋಗುವವೆಂದು ಭಾವ.

ಸನ್ಯಾಸಿಗಳ ಸೇವೆಯ ಫಲ ತಿಳಿಸುವರು.

**ಸತ್ಸೇವಯಾ ದೀರ್ಘಯಾ ವೈ ಜಾತಾ ಮಯಿ ದೃಢಾ ಮತಿಃ ।**
**ಹಿತ್ವಾಽವದ್ಯಮಿಮಂ ಲೋಕಂ ಗಂತಾ ಮಜ್ಜನತಾಮಸಿ ॥೨೭॥**

**ದೀರ್ಘಯಾ** ಬಹಳ ಕಾಲದವರೆಗೆ **ಸತಾಂ** ಸನ್ಯಾಸಿಗಳ **ಸೇವಯಾ** ಸೇವೆಯಿಂದಲೇ **ವೈ** ಯಾವ ಕಾರಣ **ಮಯಿ** ನನ್ನಲ್ಲಿ **ದೃಢಾ ಮತಿಃ ಜಾತಾ** ಸ್ಥಿರವಾದ ಬುದ್ಧಿ ಉಂಟಾಗಿದೆಯೋ **ತಸ್ಮಾತ್** ಆದ್ದರಿಂದ **ಅವದ್ಯಂ** ಶೂದ್ರಜಾತಿ ಆದದ್ದರಿಂದ ನಿಂದ್ಯವಾದ **ಇಮಂ ಲೋಕಂ** ಈ ದೇಹವನ್ನು **ಹಿತ್ವಾ** ಬಿಟ್ಟು **ಮಜ್ಜನತಾಂ ಗಂತಾ ಅಸಿ** ನನ್ನ ಭಕ್ತನಾಗುವಿ.

**ಮತಿರ್ಮಯಿ ನಿಬದ್ಧೇಯಂ ನ ವಿಪದ್ಯೇತ ಕರ್ಹಿಚಿತ್ ।**
**ಪ್ರಜಾಸರ್ಗನಿರೋಧೇಽಪಿ ಸ್ಮೃತಿಶ್ಚ ಮದನುಗ್ರಹಾತ್ ॥೨೮॥**

**ಪ್ರಜಾಸರ್ಗನಿರೋಧೇ ಅಪಿ** ಮಹಾಪ್ರಳಯವಾದ ಮೇಲೆ **ಪುನಃ** ಸೃಷ್ಟಿಯಾದಾಗಲೂ **ಮದನುಗ್ರಹಾತ್** ನನ್ನ ಭಕ್ತರ ಸೇವೆಯಿಂದ ಉಂಟಾದ ನನ್ನ ಅನುಗ್ರಹದಿಂದ **ಮಯಿ** ನನ್ನಲ್ಲಿ **ನಿಬದ್ಧಾ ಇಯಂ ಮತಿಃ** ಆಸಕ್ತವಾದ ಈ ಬುದ್ಧಿಯು **ಕರ್ಹಿಚಿತ್** ಯಾವ ಕಾಲದಲ್ಲಿಯೂ **ನ ವಿಪದ್ಯೇತ** ನಾಶವಾಗಲಾರದು **ಸ್ಮೃತಿಃ ಚ** ಪೂರ್ವಜನ್ಮದಲ್ಲಿ ಅನುಭೂತವಾದುದರ ಸ್ಮರಣೆಯು **ನ ವಿಪದ್ಯೇತ** ನಾಶವಾಗಲಾರದು.

**ಏತಾವದುಕ್ತ್ವಾ ವಿರರಾಮ ತನ್ಮಹ-**
**ದ್ಭೂತಂ ನಭೋಲಿಂಗಮಲಿಂಗಮೀಶ್ವರಮ್ ।**
**ಅಹಂ ಚ ತಸ್ಮೈ ಮಹತಾಂ ಮಹೀಯಸೇ**
**ಶೀರ್ಷ್ಣಾಽವನಾಮಂ ವಿದಧೇಽನುಕಂಪಿತಃ ॥೨೯॥**

**ತತ್** ಪ್ರಸಿದ್ಧನಾದ **ನಭೋಲಿಂಗಂ** ಆಕಾಶದಲ್ಲಿ ಇರುವ ಶರೀರವುಳ್ಳ **ಅಲಿಂಗಂ** ಜಡಶರೀರರಹಿತನಾದ **ಈಶ್ವರಂ** ನಿಯಾಮಕನಾದ **ಮಹದ್ಭೂತಂ** ಮಹಾಭೂತ ಶಬ್ದವಾಚ್ಯನಾದ ಪರಬ್ರಹ್ಮನು **ಏತಾವದುಕ್ತ್ವಾ** ಇಷ್ಟನ್ನು ಹೇಳಿ **ವಿರರಾಮ** ವಿರಾಮವನ್ನು ಹೊಂದಿದನು. **ಅನುಕಂಪಿತಃ** ಅವನ ಕೃಪೆಗೆ ಪಾತ್ರನಾಗಿರುವ **ಅಹಂ ಚ** ನಾನಾದರೂ **ಮಹತಾಂ ಮಹೀಯಸೇ** ಲಕ್ಷ್ಮ್ಯಾದಿಗಳಿಗಿಂತಲೂ ಉತ್ತಮನಾದ **ತಸ್ಮೈ** ಆ ಪರಬ್ರಹ್ಮನಿಗೆ **ಶೀರ್ಷ್ಣಾ** ತಲೆಬಾಗಿ **ಅವನಾಮಂ** ನಮಸ್ಕಾರವನ್ನು **ವಿದಧೇ** ಮಾಡಿದೆನು.

**ನಾಮಾನ್ಯನಂತಸ್ಯ ಗತತ್ರಪಃ ಪಠನ್**
**ಗುಹ್ಯಾನಿ ಭದ್ರಾಣಿ ಕೃತಾನಿ ಚ ಸ್ಮರನ್ ।**
**ಗಾಂ ಪರ್ಯಟಂಸ್ತುಷ್ಟಮನಾ ಗತಸ್ಪೃಹಃ**
**ಕಾಲಂ ಪ್ರತೀಕ್ಷನ್ನಪಟೋ ವಿಮತ್ಸರಃ ॥೩೦॥**

**ಗತತ್ರಪಃ** ಲಜ್ಜೆಯನ್ನು ತೊರೆದು **ಅನಂತಸ್ಯ** ಶ್ರೀಹರಿಯ **ಗುಹ್ಯಾನಿ** ರಹಸ್ಯವಾದ **ಭದ್ರಾಣಿ** ಮಂಗಳಕರವಾದ **ನಾಮಾನಿ** ಹೆಸರುಗಳನ್ನು **ಕೃತಾನಿ** ಕೃತಿಗಳನ್ನು **ಸ್ಮರನ್** ಸ್ಮರಿಸುತ್ತಾ **ತುಷ್ಟಮನಾಃ** ಯದೃಚ್ಛಾಲಾಭದಿಂದ ಸಂತುಷ್ಟನಾಗಿ ಶ್ರೀಹರಿಯ ಇಚ್ಛೆಯಿಂದಲೇ ದೊರೆತಿದ್ದರಲ್ಲಿ ಅಲಂ ಬುದ್ಧಿಯುಳ್ಳವನಾಗಿ ಎಂದು ಭಾವ. **ಗತಸ್ಪೃಹಃ** ಆದ್ದರಿಂದಲೆ ಹೆಚ್ಚಿನದನ್ನು ಅಪೇಕ್ಷಿಸದೆ **ಕಾಲಂ ಪ್ರತೀಕ್ಷನ್** ಮರಣಕಾಲವನ್ನು ನಿರೀಕ್ಷಿಸುತ್ತ **ವಿಮತ್ಸರಃ** ಮಾತ್ಸರ್ಯರಹಿತನಾಗಿ **ಅಪಟಃ** ವಸ್ತ್ರರಹಿತನಾಗಿ, ಅನ್ಯನಗತಿಕನಾಗಿ **ಗಾಂ ಪರ್ಯಟನ್** ಭೂಮಿಯನ್ನು ಸಂಚರಿಸಿದೆನು.

**ವಿಶೇಷ :-** ಪಟ ಗತೌ ಎಂಬ ಧಾತುವಿರುವದರಿಂದ ಪಟಃ ಈಶ್ವರನಿಂದ ಭಿನ್ನನಾದ ಗತಿಯು ನ ವಿದ್ಯತೇ ಯಸ್ಯ ಸಃ ಅವನು ಅಪಟಃ ಅವನು ಅನನ್ಯಗತಿಕನು. ಎಂದು ಭಾವ.

**ಏವಂ ಕೃಷ್ಣಮತೇರ್ಬ್ರಹ್ಮನ್ನಸಕ್ತಸ್ಯಾಮಲಾತ್ಮನಃ ।**
**ಕಾಲಃ ಪ್ರಾದುರಭೂತ್ ಕಾಲೇ ತಟಿತ್ಸೌದಾಮಿನೀ ಯಥಾ ॥೩೦॥**

**ಹೇ ಬ್ರಹ್ಮನ್** ವೇದವ್ಯಾಸದೇವರೇ **ಏವಂ** ಈ ರೀತಿಯಾಗಿ **ಅಸಕ್ತಸ್ಯ** ವಿರಕ್ತನಾದ **ಅಮಲಾತ್ಮನಃ** ಶುದ್ಧಮನಸ್ಸುಳ್ಳ **ಕೃಷ್ಣಮತೇಃ** ಪರಮಾನಂದ ಬಲಾತ್ಮಕನಾದ ಶ್ರೀಹರಿಯಲ್ಲಿ ಬುದ್ಧಿಯುಳ್ಳ **ಕಾಲೇ** ತನ್ನ ಯೋಗ್ಯವಾದ ಕಾಲದಲ್ಲಿ **ಕಾಲಃ** ಮೃತ್ಯುವು **ಸೌದಾಮಿನೀ ತಟಿತ್ ಯಥಾ** ಮಾಲಾಕಾರವಾದ ಮಿಂಚಿನಂತೆ **ಪ್ರಾದುರಭೂತ್** ಬಂದಿತು.

**ಏವಂ ಮಯಿ ಪ್ರಯುಂಜಾನೇ ಶುದ್ಧಾಂ ಭಾಗವತೀಂ ತನುಮ್ ।**
**ಪ್ರಾರಬ್ಧಕರ್ಮನಿರ್ವಾಣೋ ನ್ಯಪತತ್ಪಾಂಚಭೌತಿಕಃ ॥೩೧॥**

**ಏವಂ** ಈ ರೀತಿಯಾಗಿ **ಮಯಿ** ನಾನು **ಶುದ್ಧಾಂ** ನಿರ್ದುಷ್ಟವಾದ **ಭಾಗವತೀಂ ತನುಂ** ಶ್ರೀಹರಿಯ ಮೂರ್ತಿಯನ್ನು **ಪ್ರಯುಂಜಾನೇ ಸತಿ** ಧ್ಯಾನಮಾಡುತ್ತಿರಲು **ಪ್ರಾರಬ್ಧಕರ್ಮನಿರ್ವಾಣಃ** ಪ್ರಾರಬ್ಧಕರ್ಮಕ್ಕೆ ನಾಶಕವಾದ **ಪಾಂಚಭೌತಿಕಃ** ಪಂಚಭೂತಗಳಿಂದ ನಿರ್ಮಿತವಾದ ದೇಹವು **ನ್ಯಪತತ್** ಬಿದ್ದಿತು.

**ಕಲ್ಪಾಂತ ಇದಮಾದಾಯ ಶಯಾನೇಽಂಭಸ್ಯುದನ್ವತಃ ।**
**ಶಿಶಯಿಷೋರನುಪ್ರಾಣಂ ವಿವೇಶಾಂತರಹಂ ವಿಭೋಃ ॥೩೩॥**

**ಕಲ್ಪಾಂತೇ** ಹಿಂದಿನ ಬ್ರಹ್ಮಕಲ್ಪದ ಕೊನೆಯಲ್ಲಿ **ಇದಂ** ತನ್ನಿಂದ ಸೃಷ್ಟವಾದ ಜಗತ್ತನ್ನು **ಆದಾಯ** ತನ್ನ ಹೊಟ್ಟೆಯಲ್ಲಿ ಇಟ್ಟು ಕೊಂಡು **ಉದನ್ವತಃ** ಪ್ರಳಯ ಕಾಲದ ಸಮುದ್ರದ **ಅಂಭಸಿ** ನೀರಿನಲ್ಲಿ **ಶಿಶಯಿಷೋಃ** ಮಲಗಲು ಇಚ್ಛಿಸುವ **ವಿಭೋಃ** ನಾರಾಯಣನ **ಅಂತಃ** ಒಳಗೆ **ಅಹಂ** ನಾನು **ಅನುಪ್ರಾಣಂ** ಮುಖ್ಯಪ್ರಾಣನನ್ನು ಪ್ರವೇಶಿಸುವ ದ್ವಾರಾ ವಿವೇಶ ಪ್ರವೇಶಮಾಡಿದೆನು.

**ಸಹಸ್ರಯುಗಪರ್ಯಂತ ಉತ್ಥಾಯೇದಂ ಸಿಸೃಕ್ಷತಃ ।**
**ಮರೀಚಿಮಿಶ್ರಾ ಋಷಯಃ ಪ್ರಾಣೇಭ್ಯೋಽಹಂ ಚ ಜಜ್ಞಿರೇ ॥೩೪॥**

**ಸಹಸ್ರಯುಗಪರ್ಯಂತೇ** ಚತುರ್ಮುಖಬ್ರಹ್ಮದೇವರ ನೂರು ವರ್ಷದ ನಂತರ **ಉತ್ಥಾಯ** ಎದ್ದು **ಇದಂ** ಜಗತ್ತನ್ನು **ಸಿಸೃಕ್ಷತಃ** ಸೃಷ್ಟಿಸಲು ಇಚ್ಛಿಸುತ್ತಿರುವ ಶ್ರೀಹರಿಯ ದೆಸೆಯಿಂದ **ಉತ್ಥಾಯ** ಉತ್ಪತ್ತಿಯನ್ನು ಹೊಂದಿ **ಇದಂ ಸಿಸೃಕ್ಷತಃ** ಜಗತ್ತನ್ನು ಸೃಷ್ಟಿಸಲು ಇಚ್ಛಿಸುವ ಬ್ರಹ್ಮದೇವರ **ಪ್ರಾಣೇಭ್ಯಃ** ಇಂದ್ರಿಯಗಳಿಂದ **ಮರೀಚಿಮಿಶ್ರಾಃ** ಮರೀಚಿಮೊದಲಾದ ಋಷಿಗಳು **ಜಜ್ಞಿರೇ** ಹುಟ್ಟಿದರು **ಅಹಂ ಚ** ನಾನು ಕೂಡ **ಜಜ್ಞೇ** ಬ್ರಹ್ಮದೇವರ ತೊಡೆಯಿಂದ ಹುಟ್ಟಿದೆನು.

**ವಿಶೇಷ :-**ಸಹಸ್ರಯುಗಶಬ್ದದ ಸ್ವಾರಸ್ಯದಿಂದ ಹಿಂದೆ ಬ್ರಹ್ಮದೇವರ ದಿನವನ್ನು ತೆಗೆದುಕೊಂಡರೆ ಹಿಂದಿನ ದಿವಸದಲ್ಲಿ ನಾರದರು ಇರಲಿಲ್ಲವೆಂದಾಗುತ್ತದೆ. ಪ್ರತಿದಿನದಲ್ಲಿ ಬೇರೆ ಬೇರೆ ನಾರದರು ಇದ್ದರು ಎಂಬ ವಿಷಯದಲ್ಲಿ ಪ್ರಮಾಣವಿಲ್ಲದಿರುವದರಿಂದ ಸಹಸ್ರಯುಗಶಬ್ದಕ್ಕೆ ಇಲ್ಲಿ ಬ್ರಹ್ಮದೇವರ ನೂರು ವರ್ಷವೆಂದು ಅರ್ಥಮಾಡಿದೆ.

**ಅಂತರ್ಬಹಿಶ್ಚ ಲೋಕಾಂಸ್ತ್ರೀನ್ ಪರ್ಯೇಮ್ಯಸ್ಕಂದಿತವ್ರತಃ ।**
**ಅನುಗ್ರಹಾತ್ ಮಹಾವಿಷ್ಣೋರವಿಘಾತಗತಿಃ ಕ್ವಚಿತ್ ॥೩೫॥**

**ಮಹಾವಿಷ್ಣೋಃ ಅನುಗ್ರಹಾತ್** ಮಹಾವಿಷ್ಣುವಿನ ಅನುಗ್ರಹದಿಂದ **ಅವಿಘಾತಗತಿಃ** ಎಲ್ಲಿಯೂ ತಡೆಯಿಲ್ಲದ ಗಮನವುಳ್ಳವನಾಗಿ **ಅಸ್ಕಂದಿತವ್ರತಃ** ಅಖಂಡಿತವಾದ ಬ್ರಹ್ಮಚರ್ಯವುಳ್ಳವನಾಗಿ **ತ್ರೀನ್ ಲೋಕಾನ್** ಮೂರು ಲೋಕಗಳನ್ನು **ಅಂತಃ ಬಹಿಶ್ಚ** ಒಳಗೂ ಹೊರಗೂ **ಪರ್ಯೇಮಿ** ಸಂಚರಿಸುವೆನು.

**ದೇವದತ್ತಾಮಿಮಾಂ ವೀಣಾಂ ಸ್ವರಬ್ರಹ್ಮವಿಭೂಷಿತಾಮ್ ।**
**ಮೂರ್ಛಯಿತ್ವಾ ಹರಿಕಥಾಂ ಗಾಯಮಾನಶ್ಚರಾಮ್ಯಹಮ್ ॥೩೬॥**

**ಸ್ವರಬ್ರಹ್ಮವಿಭೂಷಿತಾಮ್** ಸಪ್ತಸ್ವರಗಳೆಂಬ ವೇದಗಳಿಂದ ಅಲಂಕೃತವಾದ **ದೇವದತ್ತಾಂ** ದೇವದತ್ತ ಎಂಬ **ಇಮಾಂ ವೀಣಾಂ** ಈ ವೀಣೆಯನ್ನು **ಮೂರ್ಛಯಿತ್ವಾ** ಸ್ವರವನ್ನು ವೃದ್ಧಿಗೊಳಿಸುತ್ತಾ **ಹರಿಕಥಾಂ ಗಾಯನ್** ಭಗವಂತನ ಗೀತೆಗಳನ್ನು ಹಾಡುತ್ತ **ಅಹಂ ಚರಾಮಿ** ನಾನು ಸಂಚರಿಸುವೆನು.

ಈ ರೀತಿ ಹಾಡುವದರಿಂದ ತನಗೆ ಆಗುವ ಪ್ರಯೋಜನವನ್ನು ಹೇಳುವರು.

**ಪ್ರಗಾಯತಶ್ಚ ವೀರ್ಯಾಣಿ ತೀರ್ಥಪಾದಃ ಪ್ರಿಯಶ್ರವಾಃ ।**
**ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ ॥೩೭॥**

**ವೀರ್ಯಾಣಿ** ತನ್ನ ಪರಾಕ್ರಮಗಳನ್ನು **ಪ್ರಗಾಯತಃ** ಚೆನ್ನಾಗಿ ಹಾಡುವ **ಮೇ ಚೇತಸಿ** ನನ್ನ ಮನಸ್ಸಿನಲ್ಲಿ **ಆಹೂತಃ** ಇವ ಆಹ್ವಾನಿಸಿದವನಂತೆ ಇರುವ **ತೀರ್ಥಪಾದಃ** ಗಂಗಾದಿ ತೀರ್ಥಗಳೇ ಪಾದದಲ್ಲಿವುಳ್ಳ **ಪ್ರಿಯಶ್ರವಾಃ** ಪ್ರಿಯಕರವಾದ ಕೀರ್ತಿಯುಳ್ಳ ಅಥವಾ ಶ್ರವಣವುಳ್ಳ ಶ್ರೀಹರಿಯು **ಶೀಘ್ರಂ ದರ್ಶನಂ ಯಾತಿ** ಬೇಗನೆ ಕಾಣಿಸಿಕೊಳ್ಳುವನು.

ಬೇರೆಯವರಿಗೆ ಇವರ ಹಾಡಿನಿಂದ ಆಗುವ ಪ್ರಯೋಜನವನ್ನು ಹೇಳಿ ಉಪಸಂಹಾರ ಮಾಡುವರು.

**ಏತದಾತುರಚಿತ್ತಾನಾಂ ಮಾತ್ರಾಸ್ಪರ್ಶೇಚ್ಛಯಾ ಮುಹುಃ ।**
**ಭವಸಿಂಧುಪ್ಲವೋ ದೃಷ್ಟೋ ಹರಿಚರ್ಯಾನುವರ್ಣನಮ್ ॥೩೮॥**

**ಮುಹುಃ** ಮತ್ತೆ ಮತ್ತೆ **ಮಾತ್ರಾಸ್ಪರ್ಶೇಚ್ಛಯಾ** ವಿಷಯಗಳ ಭೋಗಮಾಡುವ ಇಚ್ಛೆಯಿಂದ **ಆತುರಚಿತ್ತಾನಾಂ** ವ್ಯಾಕುಲವಾದ ಮನಸ್ಸುಳ್ಳವರಿಗೆ **ಹರಿಚರ್ಯಾನು-ವರ್ಣನಂ** ಭಗವಂತನ ಚರಿತ್ರೆಗಳ ವರ್ಣನೆಯು **ಏತತ್** ಇದು **ಭವಸಿಂಧುಪ್ಲವಃ** ಸಂಸಾರವೆಂಬ ಸಮುದ್ರವನ್ನು ದಾಟಲು ನೌಕೆ ಇದ್ದಂತೆ ಎಂಬುದು **ದೃಷ್ಟಃ** ನಮಗೆ ಪ್ರತ್ಯಕ್ಷಸಿದ್ಧವಾಗಿದೆ. ಅದಕ್ಕಾಗಿ ನೀವು ಲೋಕಹಿತಕ್ಕಾಗಿ ಭಗವಂತನ ಚರಿತ್ರೆಗಳನ್ನು ಹೇಳಿರಿ.

**ಯಮಾದಿಭಿರ್ಯೋಗಪಥೈಃ ಕಾಮಲೋಭಹತೋ ಮುಹುಃ ।**
**ಮುಕುಂದಸೇವಯಾ ಯದ್ವತ್ತಥಾತ್ಮಾಽದ್ಧಾ ನ ಶಾಮ್ಯತಿ ॥೩೯॥**

**ಯದ್ವತ್** ಹೇಗೆ **ಮುಕುಂದಸೇವಯಾ** ಪರಮಾತ್ಮನ ಚರಿತ್ರೆ ಶ್ರವಣರೂಪವಾದ ಸೇವೆಯಿಂದ **ಆತ್ಮಾ** ಜೀವನು **ಶಾಮ್ಯತಿ** ಭಗವನ್ನಿಷ್ಠಾಬುದ್ಧಿ ಯುಳ್ಳವನಾಗುವನೋ **ತಥಾ** ಹಾಗೆ **ಯಮಾದಿಭಿಃ** ಯಮಾದಿಗಳಿಂದ **ಯೋಗಪಥೈಃ** ಯೋಗಮಾರ್ಗಗಳಿಂದ **ಮುಹುಃ** ಮತ್ತೆ ಮತ್ತೆ **ಕಾಮಲೋಭಹತಃ** ಕಾಮಲೋಭಗಳಿಂದ ಪೀಡಿತನಾದವನು **ಅದ್ಧಾ ನ ಶಾಮ್ಯತಿ** ಚೆನ್ನಾಗಿ ಭಗವನ್ನಿಷ್ಠೆಯುಳ್ಳವನಾಗುವದಿಲ್ಲ.

ಭಗವಂತನ ಚರಿತ್ರೆಯನ್ನು ಶ್ರವಣಮಾಡಿ ಹರಿಯ ಸ್ವಾತಂತ್ರ್ಯವನ್ನು ಅರಿತಾಗ ಕಾಮಲೋಭಗಳು ಪೀಡಿಸುವದಿಲ್ಲ ಎಂದು ಭಾವ.

**ಸರ್ವಂ ತದಿದಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।**
**ಜನ್ಮಕರ್ಮರಹಸ್ಯಂ ಮೇ ಭವತಶ್ಚಾತ್ಮತೋಷಣಮ್ ॥೪೦॥**

**ಹೇ ಅನಘ** ಪಾಪರಹಿತರಾದ ವೇದವ್ಯಾಸದೇವರೇ **ತ್ವಯಾ** ನಿಮ್ಮಿಂದ **ಯತ್** ಯಾವುದು **ಪೃಷ್ಟಃ** ಕೇಳಲ್ಪಟ್ಟಿತೋ **ತದಿದಂ** ಆ ಎಲ್ಲ **ಭವತಃ ಆತ್ಮತೋಷಣಂ** ನಿನ್ನ ಮನಸ್ಸಿನ ಸಂತೋಷಕ್ಕೆ ಕಾರಣವಾದ **ಮೇ** ನನ್ನ **ಜನ್ಮಕರ್ಮರಹಸ್ಯಂ** ಜನನ ಹಾಗು ಕರ್ಮದ ರಹಸ್ಯವು **ಆಖ್ಯಾತಂ** ಹೇಳಲ್ಪಟ್ಟಿತು.

ಸೂತ ಉವಾಚ

**ಏವಂ ಸಂಭಾಷ್ಯ ಭಗವಾನ್ನಾರದೋ ವಾಸವೀಸುತಮ್ ।**
**ಆಮಂತ್ರ್ಯ ವೀಣಾಂ ರಣಯನ್ ಯಯೌ ಯಾದೃಚ್ಛಿಕೋ ಯತಿಃ ॥೪೧॥**

**ಏವಂ** ಈ ರೀತಿಯಾಗಿ **ಭಗವಾನ್ ನಾರದಃ** ಪೂಜ್ಯರಾದ ನಾರದರು **ವಾಸವೀ ಸುತಂ** ಸತ್ಯವತಿಯ ಮಗನಾದ ವೇದವ್ಯಾಸದೇವರನ್ನು ಕುರಿತು **ಸಂಭಾಷ್ಯ** ಮಾತನಾಡಿ **ಆಮಂತ್ರ್ಯ ಚ** ಹೋಗಿ ಬರುವೆ ಎಂದು ತಿಳಿಸಿ **ವೀಣಾಂ ರಣಯನ್** ವೀಣೆಯನ್ನು ಮೀಟುತ್ತ **ಯಾದೃಚ್ಛಿಕಃ ಯತಿಃ** ಹರಿಯ ಇಚ್ಛಾಮಾತ್ರಾಧೀನನಾದ ಸನ್ಯಾಸಿಯಾದ ನಾರದರು **ಯಯೌ** ಹೊರಟರು.

**ಅಹೋ ದೇವರ್ಷಿರ್ಧನ್ಯೋಽಯಂ ಯಃ ಕೀರ್ತಿಂ ಶಾರ್ಙ್ಗಧನ್ವನಃ ।**
**ಗಾಯನ್ ಮಾಧ್ವ್ಯಾ ಗಿರಾ ತಂತ್ರ್ಯಾ ರಮಯತ್ಯಾತುರಂ ಜಗತ್ ॥೪೨॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಷಷ್ಠೋಽಧ್ಯಾಯಃ ॥

**ಯಃ** ಯಾರು **ಶಾರ್ಙ್ಗಧನ್ವನಃ** ಶಾರ್ಙ್ಗ ಎಂಬ ಧನುಸ್ಸನ್ನು ಧರಿಸಿರುವ ಪರಮಾತ್ಮನ **ಕೀರ್ತಿಂ** ಕೀರ್ತಿಯನ್ನು **ಮಾಧ್ವ್ಯಾ ಗಿರಾ** ಮಧುರವಾದ ಮಾತುಗಳಿಂದ **ತಂತ್ರ್ಯಾ ಚ** ವೀಣೆಯಿಂದಲೂ **ಗಾಯನ್** ಹಾಡುತ್ತ **ಆತುರಂ ಜಗತ್** ಸಂಸಾರದಲ್ಲಿ ತೊಳಲಾಡುವ ಜಗತ್ತನ್ನು **ರಮಯತಿ** ಸಂತೋಷಪಡಿಸುತ್ತಾರೆಯೋ **ಅಯಂ** ದೇವಋಷಿಗಳಾದ ನಾರದರು **ಧನ್ಯಃ** ಧನ್ಯರು **ಅಹೋ** ಆಶ್ಚರ್ಯ.

ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಸಪ್ತಮೋಽಧ್ಯಾಯಃ

**ಅಧ್ಯಾಯ ಸಾರಾಂಶ**

ನಾರದರ ಪ್ರಾರ್ಥನೆಯಂತೆ ವೇದವ್ಯಾಸದೇವರು ಶಮ್ಯಾಪ್ರಾಸದಲ್ಲಿ ಭಾಗವತವನ್ನು ರಚಿಸಿ ಶುಕಮುನಿಗಳಿಗೆ ಉಪದೇಶಿಸಿದರು. ಆರಂಭದಲ್ಲಿ ಪರೀಕ್ಷಿತನ ಕಥೆಯೊಂದಿಗೆ ಭಾಗವತವನ್ನು ಪ್ರಾರಂಭಿಸುತ್ತ ಕುರುಕ್ಷೇತ್ರ ಮಹಾಯುದ್ಧದಲ್ಲಿ ದುರ್ಯೋಧನ ಭೀಮನ ಗದೆಯಿಂದ ಒದೆ ತಿಂದು ತೊಡೆ ಮುರಿದು ಕೊಂಡು ಬಿದ್ದಾಗ ದುರ್ಯೋಧನನ ಅಪೇಕ್ಷೆಯಂತೆ ಅಶ್ವತ್ಥಾಮ ದ್ರೌಪದೀಪುತ್ರರ ಹತ್ಯೆ ಮಾಡಲು ಸಂಕಲ್ಪಿಸಿದ. ಕಾಡಿನಲ್ಲಿ ರಾತ್ರಿ ಒಂದು ಮರದ ಕೆಳಗೆ ಮಲಗಿದ್ದಾಗ ಅವನಿಗೆ ಒಂದು ಕನಸು ಬಿದ್ದಿತು. ಕನಸಿನಲ್ಲಿ ಅಶ್ವತ್ಥಾಮ ದ್ರೌಪದಿಯ ಮಕ್ಕಳನ್ನು ರಾತ್ರಿ ಅವರು ಶಿಬಿರದಲ್ಲಿ ಮಲಗಿದ್ದಂತೆ ಕ್ರೂರವಾಗಿ ಹತ್ಯೆಗೈದ. ಪುತ್ರಶೋಕದಿಂದ ಅಳುತ್ತಿದ್ದ ದ್ರೌಪದಿಯನ್ನು ಅರ್ಜುನ ಸಂತೈಸಿ ಅಶ್ವತ್ಥಾಮನನ್ನು ಬೆನ್ನು ಹತ್ತಿ ಹೋಗುತ್ತಾನೆ. ಅಶ್ವತ್ಥಾಮ ಪ್ರಾಣರಕ್ಷಣೆಗಾಗಿ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಕೃಷ್ಣನ ಆದೇಶದಂತೆ ಅರ್ಜುನನೂ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾನೆ. ಎರಡೂ ಬ್ರಹ್ಮಾಸ್ತ್ರಗಳು ಜೊತೆ ಸೇರಿ ಪ್ರಳಯಾಗ್ನಿಯಂತೆ ಪ್ರಜ್ವಲಿಸಿ ಲೋಕವನ್ನು ಸುಡಲು ಪ್ರಾರಂಭಿಸಿದವು. ಆಗ ಅರ್ಜುನ ಎರಡನ್ನೂ ಉಪಸಂಹಾರ ಮಾಡುತ್ತಾನೆ. ಅಶ್ವತ್ಥಾಮಾಚಾರ್ಯರನ್ನು ಬಂಧಿಸಿ ಕಟ್ಟಿ ಎಳೆದು ತಂದು ದ್ರೌಪದಿಯ ಮುಂದೆ ನಿಲ್ಲಿಸುತ್ತಾನೆ. ದ್ರೌಪದಿದೇವಿಯರು ಹೇಳುತ್ತಾರೆ. ಇವನನ್ನು ಬಿಡು. ಇವನು ಬ್ರಾಹ್ಮಣ. ಮೇಲಾಗಿ ಗುರುಪುತ್ರ. ಪತಿಯನ್ನು ಕಳೆದುಕೊಂಡ ಕೃಪಿಗೆ ಏಕ ಮಾತ್ರ ಪುತ್ರ. ನಾನು ಪುತ್ರಶೋಕದಿಂದ ಅಳುವಂತೆ ಅವಳೂ ಅಳುವಂತಾಗಬಾರದು ಎಂದು. ಆದರೆ ಭೀಮ ಹೇಳಿದ ವ್ಯರ್ಥವಾಗಿ ಶಿಶುಹತ್ಯೆ ಮಾಡಿದ ಈತನಿಗೆ ಶಿಕ್ಷೆ ಆವಶ್ಯಕ ಎಂದು. ಆಗ ಕೃಷ್ಣನ

ಆದೇಶದಂತೆ ಅರ್ಜುನ ಅಶ್ವತ್ಥಾಮನಿಗೆ ಮರಣದಂಡನೆಗೆ ಸಮಾನವಾದ ಶಿಕ್ಷೆಯಾಗಿ ಅವನ ತಲೆಯಲ್ಲಿ ಸಹಜವಾಗಿ ಬೆಳೆದಿದ್ದ ರತ್ನವನ್ನು ಕಿತ್ತುತೆಗೆದು ಅವನನ್ನು ಬಿಟ್ಟುಬಿಟ್ಟ. ಹೀಗೆ ಕನಸು ಕಂಡ ಅಶ್ವತ್ಥಾಮ ಎನ್ನುತ್ತದೆ ಮಹಾಭಾರತ. ಅಶ್ವತ್ಥಾಮ ಶಿಬಿರವನ್ನು ನುಗ್ಗಿ ದ್ರೌಪದಿಯ ಮಕ್ಕಳನ್ನು ಕೊಂದು ಪಲಾಯನ ಮಾಡ ತೊಡಗಿದ. ಭೀಮ ಅವನನ್ನು ಬೆನ್ನಟ್ಟಿ ಹೋದಾಗ ಆತ ಬ್ರಹ್ಮಾಸ್ತ್ರ ಪ್ರಯೋಗಿಸಿದ. ಅಲ್ಲಿಗೆ ಬಂದ ಅರ್ಜುನ ಕೃಷ್ಣನ ಆದೇಶದಂತೆ ತಾನೂ ಬ್ರಹ್ಮಾಸ್ತ್ರ ಪ್ರಯೋಗಿಸಿದ. ವೇದವ್ಯಾಸರು ಬಂದು ಆ ಅಸ್ತ್ರಗಳನ್ನು ಉಪಸಂಹರಿಸಲು ಇಬ್ಬರಿಗೂ ಆದೇಶ ನೀಡಿದರು. ಅರ್ಜುನನೇ ಎರಡೂ ಅಸ್ತ್ರಗಳನ್ನು ಉಪಸಂಹಾರ ಮಾಡಿದ. ಅಶ್ವತ್ಥಾಮ ಗರ್ಭವನ್ನು ರಕ್ಷಣೆಮಾಡಲು ನಿರಾಕರಿಸಿದ. ಶ್ರೀಕೃಷ್ಣ ತಾನೇ ಗರ್ಭವನ್ನು ರಕ್ಷಿಸುವ ಸಂಕಲ್ಪ ಮಾಡಿದ.

ಭಾಗವತವನ್ನು ರಚಿಸುವ ನೆಪದಿಂದ ಈ ಅಧ್ಯಾಯದಲ್ಲಿ ಭಗವಂತನಲ್ಲಿ ಭಕ್ತಿ ಹಾಗು ಭಗವಂತನ ಮಾಹಾತ್ಮ್ಯವನ್ನು ತಿಳಿಸುವರು.

**ಶಮ್ಯಾಪ್ರಾಸದಲ್ಲಿ ನಾರದರ ಪ್ರಾರ್ಥನೆಯಂತೆ ವೇದವ್ಯಾಸದೇವರಿಂದ ಶುಕಮುನಿಗಳಿಗೆ ಭಾಗವತೋಪದೇಶ**

**ಶೌನಕ ಉವಾಚ –**

**ನಿರ್ಗತೇ ನಾರದೇ ಸೂತ ಭಗವಾನ್ ಬಾದರಾಯಣಃ ।**
**ಶ್ರುತವಾಂಸ್ತದಭಿಪ್ರೇತಂ ತತಃ ಕಿಮಕರೋದ್ವಿಭುಃ ॥೧॥**

**ಹೇ ಸೂತ** ಎಲೋ ಸೂತರೇ **ನಾರದೇ ನಿರ್ಗತೇ ಸತಿ** ನಾರದರು ಹೋಗುತ್ತಿರಲು **ವಿಭುಃ** ಸಮರ್ಥರಾದ **ಭಗವಾನ್ ಬಾದರಾಯಣಃ** ಷಡ್ಗುಣೈಶ್ವರ್ಯ ಸಂಪನ್ನರಾದ ವೇದವ್ಯಾಸದೇವರು **ತದಭಿಪ್ರೇತಂ ಶ್ರುತವಾನ್ ಸನ್** ನಾರದರ ಅಭಿಪ್ರಾಯವನ್ನು ಕೇಳಿದವರಾಗಿ **ತತಃ** ನಾರದರ ನಿರ್ಗಮನಾನಂತರ **ಕಿಂ ಅಕರೋತ್** ಏನು ಮಾಡಿದರು.

**ಸೂತ ಉವಾಚ –**

**ಬ್ರಹ್ಮನದ್ಯಾಃ ಸರಸ್ವತ್ಯಾ ಆಶ್ರಮಃ ಪಶ್ಚಿಮೇ ತಟೇ ।**
**ಶಮ್ಯಾಪ್ರಾಸ ಇತಿ ಪ್ರೋಕ್ತ ಋಷೀಣಾಂ ಸತ್ರವರ್ಧನಃ ॥೨॥**

**ಬ್ರಹ್ಮನದ್ಯಾಃ** ಬ್ರಾಹ್ಮಣರಿಂದ ಆಶ್ರಿತವಾದ (ಬ್ರಹ್ಮದೇವತಾಕವಾದ) **ಸರಸ್ವತ್ಯಾಃ** ಸರಸ್ವತೀನಾಮಕವಾದ ನದಿಯ **ಪಶ್ಚಿಮೇ ತಟೇ** ಪಶ್ಚಿಮ ದಡದಲ್ಲಿ **ಋಷೀಣಾಂ**

ಋಷಿಗಳ **ಸತ್ರವರ್ಧನಃ** ಯಾಗವನ್ನು ವೃದ್ಧಿಗೊಳಿಸುವ ಅಂದರೆ ಯಾವ ಯಾಗವನ್ನು ಎಲ್ಲಿ ಮಾಡುವದರಿಂದ ಅಧಿಕಫಲವುಂಟಾಗುವದೋ ಅದು **ಶಮ್ಯಾಪ್ರಾಸ ಇತಿ ಪ್ರೋಕ್ತಃ** ಶಮ್ಯಾಪ್ರಾಸ ಎಂದು ಕರೆಸಿಕೊಳ್ಳುವ **ಋಷೀಣಾಂ ಆಶ್ರಮಃ** ಋಷಿಗಳ ಆಶ್ರಮವು ಇರುವದು.

*ಭಾಗವತತಾತ್ಪರ್ಯ-*

**ಶಮ್ಯಾಂ ಪ್ರಾಸ್ಯ ತತ್ರ ಶಾಲಾಂ ಕೃತ್ವಾ ಯತ್ರ ಯಜ್ಞಃ ಕ್ರಿಯತೇ ಸ ಶಮ್ಯಾಪ್ರಾಸಃ ॥**

ಸರಸ್ವತೀನದಿಯ ಪಶ್ಚಿಮತೀರದಲ್ಲಿ ಪ್ರತಿನಿತ್ಯವು ದೀಕ್ಷಾಪೂರ್ವಕವಾಗಿ ಮಾಡಲ್ಪಡುವ ಒಂದೊಂದು ದಿನದ ಸತ್ರಗಳು ಇರುವವು. ಅವುಗಳನ್ನು ಯಾವ ಪ್ರದೇಶ ವಿಶೇಷದಲ್ಲಿ ಮಾಡಬೇಕು ಎಂದು ಆಶ್ವಲಾಯನರು ಸೂತ್ರ ಹೇಳಿದ್ದಾರೆ. ಯಾವ ಸ್ಥಂಡಿಲದಲ್ಲಿ ಗಾರ್ಹಪತ್ಯ ಮತ್ತು ಆಹವನೀಯ ಅಗ್ನಿಗಳು ಸ್ಥಾಪಿಸಲ್ಪಡುವವೋ ಆ ಸ್ಥಂಡಿಲದಿಂದ ಹೊರಗೆ ಆಗ್ನೇಯಕೋಣದಲ್ಲಿರುವ ಮೂವತ್ತಾರು ಅಂಗುಲ ಪರಿಮಿತವಾದ ಯಾವ ಭೂಮಿಯುಂಟೋ ಅದಕ್ಕೆ ಶಮ್ಯಾಪ್ರಾಸವೆನ್ನುತ್ತಾರೆ. ಬ್ರಹ್ಮನೆಂಬ ಋತ್ವಿಕ್ ಆಹವನೀಯ ಮತ್ತು ಗಾರ್ಹಪತ್ಯ ಸ್ಥಂಡಿಲಸಮೀಪದಲ್ಲಿ ಆಗ್ನೇಯಾಭಿಮುಖನಾಗಿ ನಿಂತು 36ಅಂಗುಲದೇಶವನ್ನು ಉದ್ದೇಶ ಮಾಡಿಕೊಂಡು 36 ಅಂಗುಲ ಪರಿಮಿತವಾದ ಶಮ್ಯಾ ಎಂಬುವ ಯಜ್ಞಪಾತ್ರವಿಶೇಷವನ್ನು ಆ ಸ್ಥಂಡಿಲದಲ್ಲಿಯೇ ಬೀಳುವಂತೆ ಹಸ್ತಲಾಘವದಿಂದ ಎಸೆಯಬೇಕು. ಯಾವ 36 ಅಂಗುಲದ ಪ್ರದೇಶದಲ್ಲಿ ಆ ಪಾತ್ರೆಯು ಬಿದ್ದಿದೆಯೋ ಅಲ್ಲಿ ಗಾರ್ಹಪತ್ಯಾಗ್ನಿಯ ಮಂಟಪ ನಿರ್ಮಾಣಮಾಡಿ ಮೊದಲಿರುವ ಸ್ಥಾನದಿಂದ ಅಗ್ನಿಯನ್ನು ತೆಗೆದು ಕೊಂಡು ಹೋಗಿ ಮಂಟಪದ ಕುಂಡಮಧ್ಯದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಯಾಗವನ್ನು ಮಾಡಬೇಕು. ಆದ್ದರಿಂದ ಆ ಯಾಗ ಪ್ರದೇಶವು ಶಮ್ಯಾಎಂಬುವ ಸತ್ರಪಾತ್ರದ ಮಂಟಪಕ್ಕೆ ಆಶ್ರಯವಾದ್ದರಿಂದ ಶಮ್ಯಾಪ್ರಾಸವೆಂದು ಕರೆಯುತ್ತಾರೆ.

**ತಸ್ಮಿನ್ ಋಷ್ಯಾಶ್ರಮೇ ವ್ಯಾಸೋ ಬದರೀಷಂಡಮಂಡಿತೇ ।**
**ಆಸೀನೋಽಪ ಉಪಸ್ಪೃಶ್ಯ ಪ್ರಣಿದಧ್ಯೌ ಮನಶ್ಚಿರಮ್ ॥೩॥**

**ಬದರೀಷಂಡಮಂಡಿತೇ** ಬೋರೆ ಗಿಡಗಳ ಸಮೂಹದಿಂದ ಅಲಂಕೃತವಾದ **ತಸ್ಮಿನ್ ಋಷ್ಯಾಶ್ರಮೇ** ಆ ಋಷಿಗಳ ಆಶ್ರಮದಲ್ಲಿ **ವ್ಯಾಸಃ** ವೇದವ್ಯಾಸದೇವರು **ಆಸೀನಃ**

ಕುಳಿತುಕೊಂಡು **ಅಪ ಉಪಸ್ಪೃಶ್ಯ** ಆಚಮನೆಯನ್ನು ಮಾಡಿ **ಚಿರಂ ಮನಃ ಪ್ರಣಿದಧ್ಯೌ** ಬಹುಕಾಲದವರೆಗೆ ಮನಸ್ಸನ್ನು ಸ್ಥಿರಪಡಿಸಿದನು. ಅಂದರೆ ಬಹುಕಾಲ ಧ್ಯಾನಮಾಡಿದನು ಎಂದರ್ಥ.

**ವಿಶೇಷ :-** ಇಲ್ಲಿ ಅತೀತಾನಾಗತಾನಂತಕೋಟಿ ಬ್ರಹ್ಮಾಂಡಗಳ ಒಳಹೊರಗಿರುವ ಅಪರಿಮಿತ ಪದಾರ್ಥಗಳನ್ನು ಅಶೇಷವಿಶೇಷಸಹಿತವಾಗಿ ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಅಥವಾ ಶುದ್ಧವಾದ ನೀರಿನಂತೆ ಯಾವಾಗಲೂ ಪ್ರತ್ಯಕ್ಷವಾಗಿ ನೋಡುವ ವೇದವ್ಯಾಸದೇವರನ್ನು ಬಹುಕಾಲ ಧ್ಯಾನಮಾಡಿದರು ಎಂದು ಹೇಳಿದ್ದು ಅಸುರಜನಮೋಹನಕ್ಕಾಗಿ ಎಂದು ತಿಳಿಯಬೇಕು.

**ಭಕ್ತಿಯೋಗೇನ ಮನಸಿ ಸಮ್ಯಕ್ ಪ್ರಣಿಹಿತೇಽಮಲೇ ।**
**ಅಪಶ್ಯತ್ಪುರುಷಂ ಪೂರ್ಣಂ ಮಾಯಾಂ ಚ ತದಪಾಶ್ರಯಾಮ್ ॥೪॥**

**ಭಕ್ತಿಯೋಗೇನ** ಭಕ್ತಿ ಎಂಬ ಉಪಾಯದಿಂದ **ಅಮಲೇ** ರಾಗಾದಿದೋಷಗಳಿಲ್ಲದ **ಸಮ್ಯಕ್ ಪ್ರಣಿಹಿತೇ** ಅತಿಶಯವಾಗಿ ಭಗವಂತನಲ್ಲಿ ಸ್ಥಿರೀಕೃತವಾದ **ಲೋಕಾನಾಂ ಮನಸಿ** ಜನರ ಮನಸ್ಸಿನಲ್ಲಿ ಪ್ರತ್ಯಕ್ಷನಾಗುವ **ಪೂರ್ಣಂ** ದೇಶ, ಕಾಲ, ಗುಣಗಳಿಂದ ಅಪರಿಚ್ಛಿನ್ನನಾದ **ಪುರುಷಂ** ಪರಮಾತ್ಮನನ್ನು **ಅಪಶ್ಯತ್** ನೋಡಿದನು. **ಮಾಯಾಂ ಚ** ಜೀವಬಂಧಕವಾದ ಪ್ರಕೃತಿಯನ್ನು **ತದಪಾಶ್ರಯಾಮ್** ಹರಿಯ ಅಧೀನವೆಂದು **ಅಪಶ್ಯತ್** ನೋಡಿದನು. ಅಥವಾ **ತದಪಾಶ್ರಯಾಮ್** ಜೀವನನ್ನು ತೊರೆದು ಇರುವದನ್ನಾಗಿ **ಅಪಶ್ಯತ್** ನೋಡಿದನು. ಅಂದರೆ ಜನರ ಮನಸ್ಸು ಭಕ್ತಿಯೋಗದಿಂದ ರಾಗಾದಿದೋಷರಹಿತವಾದಾಗ ಭಗವಂತನನ್ನು ನೋಡುವದು ಶಕ್ಯವಾಗುವದು. ಆದರಿಂದ ಭಗವದಧೀನವಾದ ಜೀವಬಂಧಕವಾದ ಮಾಯೆಯು ಜೀವನನ್ನು ಬಿಟ್ಟು ಸರಿಯುವದು. ಎಂದು ನೋಡಿದನು.

*ಭಾಗವತತಾತ್ಪರ್ಯ-*

ಈ ಮೇಲಿನ ಶ್ಲೋಕದಲ್ಲಿ ವೇದವ್ಯಾಸದೇವರು ತಮ್ಮ ಮನಸ್ಸಿನಲ್ಲಿ ಪೂರ್ಣಪುರುಷನನ್ನು ಧ್ಯಾನದಿಂದ ನೋಡಿದರು ಎಂದು ಅರ್ಥ ತೋರುವದು. ಅದನ್ನು ನಿವಾರಿಸಲು ಲೋಕಾನಾಂ ಎಂದು ಅಧ್ಯಾಹಾರ ಮಾಡಿ ಅನ್ವಯವನ್ನು ತೋರಿಸುವರು.

ಭಕ್ತಿಯೋಗೇನ ಸಮ್ಯಕ್ ಪ್ರಣಿಹಿತೇ ಲೋಕಾನಾಂ ಮನಸಿ ।

ಜನರು ಭಕ್ತಿಯಿಂದ ಭಗವಂತನಲ್ಲಿ ಮನಸ್ಸನ್ನು ಇಟ್ಟಾಗ ಜನರ ಮನಸ್ಸಿನಲ್ಲಿ ಭಗವಂತನು ಪ್ರತ್ಯಕ್ಷನಾಗುವನು ಎಂದು ಅಭಿಪ್ರಾಯ. ಲೋಕಾನಾಂ ಎಂಬ ಪದವನ್ನು ಅಧ್ಯಾಹಾರ ಮಾಡದಿದ್ದರೆ ಭಕ್ತಿಯೋಗೇನ ಸಮ್ಯಕ್ ಪ್ರಣಿಹಿತೇ ಮುಂತಾದ ಪದಗಳು ಪ್ರಮಾಣ ವಿರುದ್ಧವಾದ ಅರ್ಥವನ್ನು ತಿಳಿಸುವವು.

ಮಾಯಾ ಎಂದರೆ ಅನಿರ್ವಾಚ್ಯ ಅವಿದ್ಯೆಯು ಇದು ಬಂಧಕಶಕ್ತಿಯುಳ್ಳದ್ದು ಹೇಗೆ ಎಂದು ಶಂಕಾ ಮಾಡಿಕೊಂಡು ಅನಿರ್ವಾಚ್ಯ ವಾದುದಕ್ಕೆ ಯಾವಕಾರ್ಯವನ್ನು ಹುಟ್ಟಿಸುವ ಶಕ್ತಿಯಿಲ್ಲದಿರುವದರಿಂದ ಈ ಮಾಯೆಗಾದರು ಕಾರ್ಯವನ್ನು ಹುಟ್ಟಿಸುವ ಶಕ್ತಿಯಿರುವದರಿಂದ ಇಲ್ಲಿ ಮಾಯಾಶಬ್ದದಿಂದ ಬಂಧಕಶಕ್ತಿಯನ್ನೇ ಸ್ವೀಕರಿಸಬೇಕು ಎಂದು ಹೇಳುವರು.

**ಯಯಾ ಸಮ್ಮೋಹಿತೋ ಜೀವ ಆತ್ಮಾನಂ ತ್ರಿಗುಣಾತ್ಮಕಮ್ ।**
**ಪರೋಽಪಿ ಮನುತೇಽನರ್ಥಂ ತತ್ಕೃತಂ ಚಾಭಿಪದ್ಯತೇ ॥೫॥**

**ಜೀವಃ** ಜೀವನು **ಆತ್ಮಾನಂ** ತನ್ನನ್ನು **ಪರಃ ಅಪಿ** ತ್ರಿಗುಣಾತ್ಮಕ ದೇಹದಿಂದ ಭಿನ್ನನಾಗಿದ್ದರು **ಯಯಾ ಸಮ್ಮೋಹಿತಃ** ಯಾವ ಪ್ರಕೃತಿಯಿಂದ ಮೋಹಿತನಾಗಿ **ತ್ರಿಗುಣಾತ್ಮಕಂ** ಸತ್ವರಜಸ್ತಮೋಗುಣಾತ್ಮಕವಾದ ದೇಹದಿಂದ ಅಭಿನ್ನನೆಂದು **ಮನುತೇ** ತಿಳಿಯುವನು. ದೇಹದಿಂದ ಅತ್ಯಂತ ಭಿನ್ನನು ಎಂದು ತನನ್ನು ತಿಳಿಯಲಾರನು ಎಂದು ಭಾವ. **ತತ್ಕೃತಂ** ದೇಹಾತ್ಮ ಅವಿವೇಕದಿಂದ ಉಂಟಾದ **ಅನರ್ಥಂ** ಜನನಮರಣ ರೂಪವಾದ ಸಂಸಾರವನ್ನು **ಅಭಿಪದ್ಯತೇ** ಹೊಂದುವನು.

**ಅನರ್ಥೋಪಶಮಂ ಸಾಕ್ಷಾತ್ ಭಕ್ತಿಯೋಗಮಧೋಕ್ಷಜೇ ।**
**ಲೋಕಸ್ಯಾಜಾನತೋ ವಿದ್ವಾಂಶ್ಚಕ್ರೇ ಸಾತ್ವತಸಂಹಿತಾಮ್ ॥೬॥**

**ಅಜಾನತಃ ಲೋಕಸ್ಯ** ಬಂಧನಿವೃತ್ತಿಯ ಉಪಾಯವನ್ನು (ಇಷ್ಟಪ್ರಾಪ್ತಿ ಅನಿಷ್ಟಪರಿಹಾರೋಪಾಯವನ್ನು) ತಿಳಿಯದಿರುವ ಸಜ್ಜನರಿಗಾಗಿ **ಸಾಕ್ಷಾತ್ ಅನರ್ಥೋಪಶಮಂ** ಸಾಕ್ಷಾತ್ತಾಗಿ ಅನರ್ಥಕ್ಕೆ ನಾಶಕವಾದ **ಅಧೋಕ್ಷಜೇ ಭಕ್ತಿಯೋಗಂ** ಪರಮಾತ್ಮನ ವಿಷಯದಲ್ಲಿ ಭಕ್ತಿರೂಪವಾದ ಉಪಾಯವನ್ನು **ವಿದ್ವಾನ್** ವೇದವ್ಯಾಸದೇವರು **ಸಾತ್ವತಸಂಹಿತಾಂ ಚಕ್ರೇ** ಭಗವಂತನ ಮಹಿಮೆಯನ್ನು ತಿಳಿಸುವ ಭಾಗವತವನ್ನು ರಚಿಸಿದರು.

**ವಿಶೇಷ :-**ಅಪರೋಕ್ಷಜ್ಞಾನಾನಂತರದಲ್ಲಿಯೂ ಉಂಟಾಗುವ ಪರಮಪ್ರಸಾದ ಸಾಧನೀಭೂತವಾದ ಅತಿದೃಢವಾದ ಭಕ್ತಿಯೋಗವನ್ನು ಇಟ್ಟುಕೊಂಡು ಸಾಕ್ಷಾತ್ ಅನರ್ಥೋಪಶಮಂ ಎಂದಿರುವರು.

**ಯಸ್ಯಾಂ ವೈ ಶ್ರೂಯಮಾಣಾಯಾಂ ಕೃಷ್ಣೇ ಪರಮಪೂರುಷೇ ।**
**ಭಕ್ತಿರುತ್ಪದ್ಯತೇ ಪುಂಸಾಂ ಶೋಕಮೋಹಭಯಾಪಹಾ ॥೭॥**

**ಯಸ್ಯಾಂ ಶ್ರೂಯಮಾಣಾಯಾಂ** ಕೇಳುತ್ತಿರುವಾಗಲೇ **ಶೋಕಮೋಹಭಯಾಪಹಾ** ದುಃಖಮೋಹಗಳಿಂದ ಕೂಡಿದ ಸಂಸಾರಭಯವನ್ನು ನಾಶಪಡಿಸುವ **ಭಕ್ತಿಃ** ಭಕ್ತಿಯು **ಪರಮಪೂರುಷೇ** ಸರ್ವೋತ್ತಮನಾದ **ಕೃಷ್ಣೇ** ಕೃಷ್ಣಪರಮಾತ್ಮನಲ್ಲಿ **ಪುಂಸಾಂ** ಸಜ್ಜನರಿಗೆ **ಉತ್ಪದ್ಯತೇ** ಉಂಟಾಗುವದು. **ವೈ** (ವೈಶಬ್ದ ಕೈಮುತ್ಯ ದ್ಯೋತಕ)ಅಂದರೆ ಭಗವಂತನ ಕಥೆ ಕೇಳುವಾಗಲೇ ಭಕ್ತಿಯು ಹುಟ್ಟುವದು ಎಂದ ಮೇಲೆ ಶಾಸ್ತ್ರಶ್ರವಣ ಮಾಡಿ ವ್ಯಾಖ್ಯಾನ ಮಾಡಿದ ನಂತರ ಭಕ್ತಿ ಹುಟ್ಟುವದು ಎಂದು ಏನು ಹೇಳುವದು. ಎಂದು ಅಭಿಪ್ರಾಯ.

**ಸ ಸಂಹಿತಾಂ ಭಾಗವತೀಂ ಕೃತ್ವಾನುಕ್ರಮ್ಯ ಚಾತ್ಮಜಮ್ ।**
**ಶುಕಮಧ್ಯಾಪಯಾಮಾಸ ನಿವೃತ್ತಿನಿರತಂ ಮುನಿಮ್ ॥೮॥**

**ಸಃ** ವೇದವ್ಯಾಸದೇವರು **ಭಾಗವತೀಂ ಸಂಹಿತಾಂ ಕೃತ್ವಾ** ಭಗವನ್ಮಹಿಮೆಯನ್ನು ತಿಳಿಸುವ ಭಾಗವತವನ್ನು ರಚಿಸಿ **ಅನುಕ್ರಮ್ಯ** ಒಳ್ಳೆಯ ಮುಹೂರ್ತದಲ್ಲಿ ಆರಂಭಿಸಿ **ಆತ್ಮಜಂ** ಮಗನಾದ **ಮುನಿಮ್** ಮೌನಿಯಾದ **ನಿವೃತ್ತಿನಿರತಂ** ವಿಷಯಗಳ ನಿವೃತ್ತಿಯಲ್ಲಿಯೇ ಬಹಳ ಆಸಕ್ತನಾದ ಅಥವಾ ವ್ಯಾಪ್ತನಾಗಿರುವ ಭಗವಂತನಲ್ಲಿ ಆಸಕ್ತನಾದ **ಶುಕಂ** ಶುಕಾಚಾರ್ಯರನ್ನು(ಶುಕಾಚಾರ್ಯರಿಗೆ)**ಅಧ್ಯಾಪಯಾಮಾಸ** ಶಾಸ್ತ್ರಪಾಠವನ್ನು ಹೇಳಿದರು.

ನಿವೃತ್ತಿನಿರತಂ ಎಂಬುವದಕ್ಕೆ ಫಲೇಚ್ಛೆ ಇಲ್ಲದವನು ಎಂಬರ್ಥವನ್ನು ತಿಳಿಯದಿರುವವರಂತೆ ಶೌನಕರು ಪ್ರಶ್ನಿಸುವರು.

ಶೌನಕ ಉವಾಚ -

**ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।**
**ಕಸ್ಯ ವಾ ಬೃಹತೀಮೇತಾಮಾತ್ಮಾರಾಮಃ ಸಮಭ್ಯಸತ್ ॥೯॥**

**ಆತ್ಮಾರಾಮಃ** ಪರಮಾತ್ಮನನ್ನು ಚೆನ್ನಾಗಿ ಸಂತೋಷಪಡಿಸುವ **ಮುನಿಃ** ಸರ್ವಜ್ಞರಾದ ಆದ್ದರಿಂದಲೇ **ಸರ್ವತ್ರ** ಶಿಷ್ಯಸಂಗ್ರಹ ಮೊದಲಾದವುಗಳಲ್ಲಿ **ಉಪೇಕ್ಷಕಃ** ಉದಾಸೀನಬುದ್ಧಿಯುಳ್ಳ **ನಿವೃತ್ತಿನಿರತಃ** ವ್ಯಾಪ್ತನಾದ ಭಗವಂತನಲ್ಲಿ ರತರಾದ **ಸಃ** ಶುಕಾಚಾರ್ಯರು **ಸರ್ವತ್ರ** ನಾಲ್ಕು ಪುರುಷಾರ್ಥಗಳ ಮಧ್ಯದಲ್ಲಿ **ಕಸ್ಯ ವಾ ಹೇತೋಃ** ಯಾವ ಪುರುಷಾರ್ಥಕ್ಕಾಗಿ **ಬೃಹತೀಂ** ದೊಡ್ಡದಾದ **ಏತಾಂ** ಭಾಗವತಸಂಹಿತೆಯನ್ನು **ಸಮಭ್ಯಸತ್** ಓದಿದರು.

ಸೂತ ಉವಾಚ –

**ಆತ್ಮಾರಾಮಾಶ್ಚ ಮುನಯೋ ನಿರ್ಗ್ರಾಹ್ಯಾ ಅಪ್ಯುರುಕ್ರಮೇ ।**
**ಕುರ್ವಂತ್ಯಹೈತುಕೀಂ ಭಕ್ತಿಂ ಇತ್ಥಂಭೂತಗುಣೋ ಹರಿಃ ॥೧೦॥**

**ಆತ್ಮಾರಾಮಾಃ ಚ** ಸ್ವರೂಪಸುಖದಲ್ಲಿಯೇ ಸಂತೋಷ ಪಡುವವರಾದರೂ **ನಿರ್ಗ್ರಾಹ್ಯಾಃ** ಉಪಾದೇಯವಿಲ್ಲದಿರುವವರಾದ(ಪ್ರಯೋಜನಾಪೇಕ್ಷೆ ಇಲ್ಲದಿದ್ದರೂ) **ಮುನಯಃ** ಉತ್ತಮಾಧಿಕಾರಿಗಳು **ಉರುಕ್ರಮೇ** ಶ್ರೇಷ್ಠವಾದ ಪಾದವಿಕ್ಷೇಪವುಳ್ಳ ಭಗವಂತನಲ್ಲಿ **ಅಹೈತುಕೀಂ** ಪ್ರಯೋಜನವಿಲ್ಲದ ಅಥವಾ ನಿರ್ನಿಮಿತ್ತವಾದ **ಭಕ್ತಿಂ ಕುರ್ವಂತಿ** ಭಕ್ತಿಯನ್ನು ಮಾಡುತ್ತಾರೆ **ಇತ್ಥಂಭೂತಗುಣೋ ಹರಿಃ** ನಿಷ್ಕಾಮರಾದ ಭಕ್ತರ ಮನಸ್ಸುಗಳನ್ನು ವಶೀಕರಿಸಲು ಸಮರ್ಥವಾದ ಗುಣವುಳ್ಳವನು.

ಪೂರ್ವೋಕ್ತವಾದದ್ದನ್ನು ವಿವರಿಸುವರು.

**ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ ।**
**ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಮ್ ॥೧೧॥**

**ಹರೇಃ** ಭಗವಂತನ **ಗುಣಾಕ್ಷಿಪ್ತಮತಿಃ** ಜ್ಞಾನಾನಂದಸೌಂದರ್ಯಗಳಿಂದ ಆಕರ್ಷಿತವಾದ ಮನಸ್ಸುಳ್ಳ **ಭಗವಾನ್** ಪೂಜ್ಯರಾದ **ಬಾದರಾಯಣಿಃ** ವೇದವ್ಯಾಸದೇವರ ಮಕ್ಕಳಾದ ಶುಕಾಚಾರ್ಯರು **ವಿಷ್ಣುಜನಪ್ರಿಯಂ** ಭಗವದ್ಭಕ್ತರಿಗೆ ಹೃದಯಂಗಮವಾದ **ಮಹದಾಖ್ಯಾನಂ** ಭಗವಂತನ ಮಹಿಮೆಯನ್ನು ಹೇಳುವ ಭಾಗವತ ಪುರಾಣವನ್ನು **ಅಧ್ಯಗಾತ್** ಅಧ್ಯಯನಮಾಡಿದರು.

ತಸ್ಯ ಜನ್ಮ ಮಹಾಶ್ಚರ್ಯಂ ಎಂದು ೪ನೇ ಅಧ್ಯಾಯದ ೮ನೇ ಶ್ಲೋಕದಲ್ಲಿ ಕೇಳಿದ ಪ್ರಶ್ನೆಗೆ ಉತ್ತರಿಸಲು ಹೇಳುವರು.

**ಪರೀಕ್ಷಿತೋಽಥ ರಾಜರ್ಷೇರ್ಜನ್ಮಕರ್ಮವಿಲಾಪನಮ್ ।**
**ಸಂಸ್ಥಾಂ ಚ ಪಾಂಡುಪುತ್ರಾಣಾಂ ವಕ್ಷ್ಯೇ ಕೃಷ್ಣಕಥೋದಯಾಮ್ ॥೧೨॥**

**ಅಥ** ಅನಂತರ **ರಾಜರ್ಷೇಃ** ರಾಜರ್ಷಿಯಾದ **ಪರೀಕ್ಷಿತಃ** ಪರೀಕ್ಷಿತನ **ಜನ್ಮ** ಜನ್ಮ **ಕರ್ಮ** ಕಾರ್ಯಗಳು **ವಿಲಾಪನಮ್** ಮರಣ ಮತ್ತು ಮುಕ್ತಿಯನ್ನು **ವಕ್ಷ್ಯೇ** ಹೇಳುತ್ತೇನೆ ಅದಕ್ಕಾಗಿ ಮೊದಲು **ಕೃಷ್ಣಕಥೋದಯಾಂ** ಕೃಷ್ಣನ ಕಥೆಯ ಉತ್ಕರ್ಷವುಳ್ಳ **ಪಾಂಡುಪುತ್ರಾಣಾಂ** ಪಾಂಡವರ **ಸಂಸ್ಥಾಂ ಚ** ಸ್ವರ್ಗಾರೋಹಣ ಮತ್ತು ಯುದ್ಧಾನಂತರದಲ್ಲಿ ಮಾಡಿದ ಮಹಾಭಿಷೇಕ ಮಹಾಪ್ರಸ್ಥಾನದ ವರೆಗಿನ ಸ್ಥಿತಿಯನ್ನು ಸಹ **ವಕ್ಷ್ಯೇ** ಹೇಳುವೆನು.

ಪರೀಕ್ಷಿತನ ಜನ್ಮವನ್ನು ತಿಳಿಸಲು ಪರೀಕ್ಷಿತನು ಗರ್ಭದಲ್ಲಿರುವಾಗಲೇ ಅಶ್ವತ್ಥಾಮಾಚಾರ್ಯರ ಬ್ರಹ್ಮಾಸ್ತ್ರದಿಂದ ಶ್ರೀಕೃಷ್ಣನಿಂದ ರಕ್ಷಿಸಲ್ಪಟ್ಟನು ಎಂದು ಹೇಳಲು ಕಥೆಯನ್ನು ಆರಂಭಿಸುವರು.

**ಯದಾ ಮೃಧೇ ಕೌರವಪಾಂಡವಾನಾಂ**
**ವೀರೇಷ್ವಥೋ ವೀರಗತಿಂ ಗತೇಷು ।**
**ವೃಕೋದರಾವಿದ್ಧಗದಾಭಿಮರ್ಶ**
**ಭಗ್ನೋರುದಂಡೇ ಧೃತರಾಷ್ಟ್ರಪುತ್ರೇ ॥೧೩॥**

**ಕೌರವಪಾಂಡವಾನಾಂ ಮೃಧೇ** ಕೌರವಪಾಂಡವರ ಯುದ್ಧದಲ್ಲಿ **ವೀರೇಷು** ಭೀಷ್ಮಾಚಾರ್ಯರೇ ಮೊದಲಾದ ವೀರರು **ವೀರಗತಿಂ ಗತೇಷು** ಸ್ವರ್ಗಸ್ಥರಾಗುತ್ತಿರಲು **ಧೃತರಾಷ್ಟ್ರಪುತ್ರೇ** ದುರ್ಯೋಧನನು **ವೃಕೋದರಾತ್** ಭೀಮಸೇನದೇವರಿಂದ **ಆವಿದ್ಧ** ತಿರುಗಿಸಿ ಎಸೆಯಲ್ಪಟ್ಟ **ಗದಾಭಿಮರ್ಶಭಗ್ನೋರುದಂಡೇ ಗದಾ** ಗದೆಯ **ಅಭಿಮರ್ಶ** ಹೊಡೆತದಿಂದ **ಭಗ್ನ** ನಾಶವಾದ **ಉರುದಂಡೇ** ತೊಡೆಗಳುಳ್ಳವನಾಗುತ್ತಿರಲು

**ಭರ್ತುಃ ಪ್ರಿಯಂ ದ್ರೌಣಿರಿತಿ ಸ್ಮ ಪಶ್ಯನ್**
**ಕೃಷ್ಣಾಸುತಾನಾಂ ಸ್ವಪತಾಂ ಶಿರಾಂಸಿ ।**
**ಅಪಾಹರದ್ವಿಪ್ರಿಯಮೇತದಸ್ಯ**
**ಜುಗುಪ್ಸಿತಂ ಕರ್ಮ ವಿಗರ್ಹಯಂತಿ ॥೧೪॥**

**ಮಾತಾ ಶಿಶೂನಾಂ ನಿಧನಂ ಸುತಾನಾಂ**
**ನಿಶಮ್ಯ ಘೋರಂ ಪರಿತಪ್ಯಮಾನಾ ।**
**ತದಾ ರುದದ್ಬಾಷ್ಪಕಲಾಕುಲಾಕ್ಷೀ**
**ತಾಂ ಸಾಂತ್ವಯನ್ನಾಹ ಕಿರೀಟಮಾಲೀ ॥೧೫॥**

**ಭರ್ತುಃ** ತಮ್ಮ ಯಜಮಾನನಾದ ದುರ್ಯೋಧನನಿಗೆ **ಪ್ರಿಯಂ ಪಶ್ಯನ್** ನಾನು ಪ್ರಿಯವನ್ನು ಹಿತವನ್ನು ಮಾಡುವೆನೆಂದು **ದ್ರೌಣಿಃ** ಅಶ್ವತ್ಥಾಮಾಚಾರ್ಯರು **ಯದಾ** ಯಾವಾಗ **ಸ್ವಪತಾಂ** ನಿದ್ರೆ ಮಾಡುವ **ಕೃಷ್ಣಾಸುತಾನಾಂ** ದ್ರೌಪದಿಯ ಮಕ್ಕಳ **ಶಿರಾಂಸಿ** ತಲೆಗಳನ್ನು **ಅಪಾಹರತ್** ಕತ್ತರಿಸಿದನೋ **ತದಾ** ಆಗ **ಶಿಶೂನಾಂ ಮಾತಾ** ಮಕ್ಕಳ ತಾಯಿಯಾದ ದ್ರೌಪದಿಯು **ಸುತಾನಾಂ ಘೋರಂ ನಿಧನಂ** ಬಹು ಭಯಂಕರವಾದ ಮಕ್ಕಳ ಸಾವನ್ನು **ನಿಶಮ್ಯ** ಕೇಳಿ **ಪರಿತಪ್ಯಮಾನಾ** ಬಹಳವಾಗಿ ಪರಿತಪಿಸುತ್ತಾ **ಅಸ್ಯ** ಅಶ್ವತ್ಥಾಮಾಚಾರ್ಯರ **ಜುಗುಪ್ಸಿತಂ** ನಿಂದಿತವಾದ **ಏತತ್** ಮಕ್ಕಳ ನಿಧನರೂಪವಾದ **ಕರ್ಮ** ಕರ್ಮವನ್ನು **ವಿಗರ್ಹಯಂತೀ** ನಿಂದಿಸುತ್ತಾ **ಬಾಷ್ಪಕಲಾಕುಲಾಕ್ಷೀ** ಕಣ್ಣೀರುಗಳಿಂದ ತುಂಬಿದ ಕಣ್ಣುಳ್ಳ ದ್ರೌಪದಿಯು **ಅರುದತ್** ಅತ್ತಳು **ತಾಂ** ಆ ದ್ರೌಪದಿಯನ್ನು **ಕಿರೀಟಮಾಲೀ** ಅರ್ಜುನನು **ಸಾಂತ್ವಯನ್** ಸಮಾಧಾನಪಡಿಸುತ್ತಾ **ಆಹ** ಹೇಳಿದನು.

**ಅಸ್ಯ ಭರ್ತುಃ** ಈ ದುರ್ಯೋಧನನಿಗೆ **ಏತತ್ ಶಿಶುನಿಧನವು ವಸ್ತುತೋ ವಿಪ್ರಿಯಮೇವ** ವಾಸ್ತವಿಕವಾಗಿ ಇಷ್ಟವಾಗದಿರುವದೇ ಎಂಬ ಪ್ರತೀತಿಯನ್ನು ನಿರಾಕರಿಸಲು ಅಸ್ಯ ಎಂಬ ಪದದಿಂದ ಯಾರನ್ನು ತೆಗೆದುಕೊಳ್ಳಬೇಕು ಎಂಬುದನ್ನು ತೋರಿಸುತ್ತಾ ವಿಪ್ರಿಯಮೇತದಸ್ಯ ಎಂಬುದರ ಅರ್ಥವನ್ನು ಹೇಳುವರು.

*ಭಾಗವತತಾತ್ಪರ್ಯ-*

ಸ್ವಾತ್ಮನ ಏವ ವಿಪ್ರಿಯಂ ನ ಭರ್ತುಃ । ಪ್ರಯೋಜನಾಭಾವಾದ್ವಿಪ್ರಿಯಮಿವ ಚ ತಸ್ಯ ಪ್ರಿಯಮಿತಿ ಹಿ ಪ್ರಸ್ತಾವೋಕ್ತಮ್ ॥

ಮಹಾಭಾರತದಲ್ಲಿ ಭೀಮಸೇನದೇವರು ದ್ರೌಪದಿಯನ್ನು ಸಾಂತ್ವನಗೊಳಿಸಿದರು, ಅಶ್ವತ್ಥಾಮಾಚಾರ್ಯರನ್ನು ಬೆನ್ನಟ್ಟಿ ಹೋಗಿ ಕಟ್ಟಿಹಾಕಿದರು ಎಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಅರ್ಜುನನು ದ್ರೌಪದಿಯನ್ನು ಸಾಂತ್ವನ ಗೊಳಿಸಿದ್ದು, ಅಶ್ವತ್ಥಾಮಾಚಾರ್ಯರನ್ನು ಬಂಧಿಸಿದ್ದು ಹೇಗೆ ಸಮಂಜಸವಾಗುವದು ಎಂದರೆ ಹೇಳುವರು.

ಅಶ್ವತ್ಥಾಮಾಚಾರ್ಯರಿಗೇನೆ ವಿಪ್ರಿಯವಾದುದು ಹೊರತು ದುರ್ಯೋಧನನಿಗಲ್ಲ. ಹಾಗಾದರೆ ಭರ್ತುಶ್ಚ ವಿಪ್ರಿಯಂ ಎಂದು ಮುಂದೆ ಹೇಳುವದರ ವಿರೋಧಬರುವದಲ್ಲ ಎಂದರೆ ಅದರ ಅಭಿಪ್ರಾಯವನ್ನು ಹೇಳುವರು.

ಪ್ರಯೋಜನಾಭಾವಾತ್ ಎಂದು ಪೃಥಿವಿಯಲ್ಲಿ ಪಾಂಡವರ ವಂಶವನ್ನು ಇಲ್ಲದಂತೆ ಮಾಡಬೇಕೆಂಬ ಪ್ರಯೋಜನವು ಇದರಿಂದ ಆಗದಿರುವದರಿಂದ ಭರ್ತುಃ ವಿಪ್ರಿಯಮಿವ ದುರ್ಯೋಧನನಿಗೆ ವಿಪ್ರಿಯವಿದ್ದಂತೆ ಎಂದು ಮುಂದಿನ ವಾಕ್ಯದಲ್ಲಿ ಪ್ರಯೋಜನವಿಲ್ಲದಿರುವದರಿಂದ ಮುಖ್ಯಾರ್ಥಸಾದೃಶ್ಯದಿಂದ ವಿಪ್ರಿಯಶಬ್ದವು ಗೌಣವಾಗಿ ಪ್ರಯೋಗಿಸಲ್ಪಟ್ಟಿದೆ ಹೊರತು ಮುಖ್ಯಾರ್ಥವಲ್ಲ.

ದುರ್ಯೋಧನನಿಗೆ ಅಪ್ರಿಯವೆಂದು ಏಕೆ ಹೇಳಬಾರದು ಎಂದರೆ ಅದಕ್ಕೆ ಬಾಧಕ ಹೇಳುವರು.'ತಸ್ಯ ಪ್ರಿಯಮಿತಿ ಪ್ರಸ್ತಾಪೋಕ್ತಂ'ದುರ್ಯೋಧನನಿಗೆ ಶಿಶುನಿಧನವು ಪ್ರಿಯವೆಂದು ಸೌಪ್ತಿಕಪರ್ವದಲ್ಲಿ ಹೇಳಿದೆ ಆದ್ದರಿಂದ ಅಶ್ವತ್ಥಾಮನಿಗೆ ವಿಪ್ರಿಯವೇ ಹೊರತು ದುರ್ಯೋಧನನಿಗೆ ಅಲ್ಲ.

*ಭಾಗವತತಾತ್ಪರ್ಯ-*

ಸ್ವಪ್ನೋಽಯಂ ಪಾರ್ಥಾನುಯಾತಮಾತ್ಮಾನಂ ದ್ರೌಣಿಃ ಸ್ವಪ್ನೇ ದದರ್ಶ ಹ ।
ಬಂಧನಂ ಚಾತ್ಮನಸ್ತತ್ರ ದ್ರೌಪದ್ಯಾ ಚೈವ ಮೋಕ್ಷಣಮ್ ।।ಇತಿ ಸ್ಕಾಂದೇ।।

ತಸ್ಮಾನ್ನೈಷೀಕವಿರೋಧಃ ।।

ಅಯಂ ಇಲ್ಲಿ ಹೇಳುವ ಅರ್ಥವು ಸ್ವಪ್ನಃ ಅಶ್ವತ್ಥಾಮಾಚಾರ್ಯರು ಸ್ವಪ್ನದಲ್ಲಿ ಕಂಡದ್ದು ಹೊರತು ಬಾಹ್ಯವಲ್ಲ ಆದ್ದರಿಂದ ವಿರೋಧವಿಲ್ಲ. ಅಂದಮೇಲೆ ಭೀಮಸೇನದೇವರೇ ಅಶ್ವತ್ಥಾಮಾಚಾರ್ಯರನ್ನು ಬೆನ್ನಟ್ಟಿದ್ದು ಶಿರೋರತ್ನವನ್ನು ಅಪಹರಿಸಿದ್ದು ಅನಂತರ ದ್ರೌಪದಿಯಿಂದ ಬಿಡಿಸಿದ್ದು. ದ್ರೌಪದಿಯಿಂದ ಬಿಡುಗಡೆಗೊಂಡ ಅಶ್ವತ್ಥಾಮಾಚಾರ್ಯರು ಸ್ವಪ್ನದಲ್ಲಿ ಕಂಡದ್ದನ್ನು ಸ್ಮರಿಸುತ್ತಾ ಹೊರಟುಹೋದರು. ಎಂಬ ಮಹಾಭಾರತಕಥೆಯನ್ನು ಸ್ವೀಕರಿಸಬೇಕು. 15ನೇ ಶ್ಲೋಕದಲ್ಲಿರುವ 'ಸಾಂತ್ವಯನ್' ಎಂಬುವದರಿಂದ ಆರಂಭಿಸಿ ಅಧ್ಯಾಯ ಮುಗಿಯುವವರೆಗೆ ಅಶ್ವತ್ಥಾಮಾಚಾರ್ಯರು ಕಂಡ ಸ್ವಪ್ನದ ವೃತ್ತಾಂತವನ್ನೇ ವಿವರಿಸುವರು. ಅರ್ಜುನನು ಮಾಡಿದ ಅಶ್ವತ್ಥಾಮಾಚಾರ್ಯರನ್ನು ಬೆನ್ನಟ್ಟಿದ್ದು ಬಂಧಿಸಿದ್ದು ಎಲ್ಲವು ಸ್ವಪ್ನದಲ್ಲಿ ಕಂಡದ್ದು ಎಂಬ ವಿಷಯದಲ್ಲಿ ಪ್ರಮಾಣವನ್ನು ತಿಳಿಸುವರು.

ಪಾರ್ಥಾನುಯಾತಂ ಎಂದು. ದ್ರೌಣಿಃ ಅಶ್ವತ್ಥಾಮಾಚಾರ್ಯರು ಪಾರ್ಥಾನುಯಾತಂ ಅರ್ಜುನನಿಂದ ಬೆನ್ನಟ್ಟಲ್ಪಟ್ಟ ತಮ್ಮನ್ನು ಸ್ವಪ್ನೇ ಸ್ವಪ್ನದಲ್ಲಿ ಕಂಡರು. ಆತ್ಮನಃ ಬಂಧನಂ ಚ ಅರ್ಜುನನಿಂದ ಮಾಡಲ್ಪಟ್ಟ ತಮ್ಮ ಬಂಧನವನ್ನು ದ್ರೌಪದ್ಯಾ ದ್ರೌಪದಿಯಿಂದ ಮಾಡಿಸಲ್ಪಟ್ಟ ಮೋಚನವನ್ನು ಸ್ವಪ್ನದಲ್ಲಿ ಕಂಡನು. ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಆದ್ದರಿಂದ ಐಷೀಕಪರ್ವವಿರೋಧವಿಲ್ಲ.

ಅರ್ಜುನನು ದ್ರೌಪದಿಯನ್ನು ಸಮಾಧಾನಪಡಿಸುತ್ತಾ ಏನನ್ನು ಹೇಳಿದನು ಎಂದು ಹೇಳುವರು.

**ತನ್ಮಾ ಶುಚಸ್ತೇ ಪ್ರಮೃಜಾಮಿ ಭದ್ರೇ**
**ಯದ್ಬ್ರಹ್ಮಬಂಧೋಃ ಶಿರ ಆತತಾಯಿನಃ ।**
**ಗಾಂಡೀವಮುಕ್ತೈರ್ವಿಶಿಖೈರುಪಾಹರೇ**
**ತ್ವಾಕ್ರಮ್ಯ ಯತ್ ಸ್ನಾಸ್ಯಸಿ ನೇತ್ರಜೈರ್ಜಲೈಃ ॥೧೬॥**

**ಹೇ ಭದ್ರೇ** ಎಲೇ ಮಂಗಳಕರಳೇ **ತ್ವಂ ಮಾ ಶುಚಃ** ನೀನು ದುಃಖಪಡಬೇಡ **ತೇ ಶುಚಃ** ನಿನ್ನ ಕಣ್ಣೀರುಗಳನ್ನು **ಯದಾ** ಯಾವಾಗ **ಬ್ರಹ್ಮಬಂಧೋಃ** ಬ್ರಾಹ್ಮಣಾಧಮನಾದ **ಆತತಾಯಿನಃ** ಅಕರ್ತವ್ಯವನ್ನು ಮಾಡಿದ ಅಶ್ವತ್ಥಾಮನ **ಶಿರಃ** ತಲೆಯನ್ನು **ಗಾಂಡೀವಮುಕ್ತೈಃ** ಗಾಂಡೀವಧನುಸ್ಸಿನಿಂದ ಬಿಡಲ್ಪಟ್ಟ **ವಿಶಿಖೈಃ** ವಿವಿಧಬಾಣಗಳಿಂದ **ಉಪಾಹರೇ** ಕತ್ತರಿಸಿ ನಿನ್ನ ಸಮೀಪಕ್ಕೆ ತರುವೆನು **ಯಚ್ಛಿರಃ ಆಕ್ರಮ್ಯ** ಯಾವ ತಲೆಯನ್ನು ಸಿಟ್ಟಿನಿಂದ ಕಾಲಿನಿಂದ ಸ್ಪರ್ಶಿಸಿ ದುಃಖೋದ್ರೇಕದಿಂದ **ನೇತ್ರಜೈಃ ಜಲೈಃ** ಕಣ್ಣೀರಿನಿಂದ **ಸ್ನಾಸ್ಯಸಿ** ಸ್ನಾನವನ್ನು ಮಾಡುವೆಯೋ **ತದಾ** ಆಗ **ಪ್ರಮೃಜಾಮಿ** ಕಣ್ಣೀರನ್ನು ವರಿಸುವೆನು.

ಕತ್ತರಿಸಿದ ತಲೆಯ ಸ್ಪರ್ಶದಿಂದ ಅಶುದ್ಧಿ ಬರುವದು. ಆದಕ್ಕಾಗಿ ಕಣ್ಣೀರಿನಿಂದ ಸ್ನಾನಮಾಡುವಿ.

**ಇತಿ ಪ್ರಿಯಾಂ ವಲ್ಗುವಿಚಿತ್ರಜಲ್ಪೈಃ ಸ ಸಾಂತ್ವಯಿತ್ವಾಚ್ಯುತಮಿತ್ರಸೂತಃ ।**
**ಅಭ್ಯದ್ರವದ್ದಂಶಿತ ಉಗ್ರಧನ್ವಾ ಕಪಿಧ್ವಜೋ ಗುರುಪುತ್ರಂ ರಥೇನ ॥೧೭॥**

**ಸಃ ಕಪಿಧ್ವಜಃ** ಆ ಅರ್ಜುನನು **ಇತಿ** ಈ ರೀತಿಯಾಗಿ **ವಲ್ಗುವಿಚಿತ್ರಜಲ್ಪೈಃ** ಮನೋಹರವಾದ ವಿಚಿತ್ರವಾದ ಆಶ್ಚರ್ಯಕರವಾದ ಮಾತುಗಳಿಂದ **ಪ್ರಿಯಾಂ**

ಹೆಂಡತಿಯನ್ನು **ಸಾಂತ್ವಯಿತ್ವಾ** ಸಮಾಧಾನಗೊಳಿಸಿ **ಅಚ್ಯುತಮಿತ್ರಸೂತಃ** ಶ್ರೀಕೃಷ್ಣನೇ ಅನಿಮಿತ್ತಬಂಧು ಮತ್ತು ಸಾರಥಿಯೂ ಆಗಿರುವ **ದಂಶಿತಃ** ಕವಚವನ್ನು ಧಾರಣೆ ಮಾಡಿರುವ **ಉಗ್ರಧನ್ವಾ** ಭಯಂಕರವಾದ ಧನಸ್ಸುಳ್ಳ **ಕಪಿಧ್ವಜಃ** ಹನುಮಂತದೇವರೇ ಧ್ವಜದಲ್ಲಿ ಉಳ್ಳ **ಸಃ** ಅರ್ಜುನನು **ಗುರುಪುತ್ರಂ** ಅಶ್ವತ್ಥಾಮಾಚಾರ್ಯರನ್ನು **ರಥೇ** ರಥದಲ್ಲಿ ಕುಳಿತು **ಅಭ್ಯದ್ರವತ್** ಬೆನ್ನು ಹತ್ತಿದನು.

**ತಮಾಪತಂತಂ ಸ ವಿಲೋಕ್ಯ ದೂರಾತ್**
**ಕುಮಾರಹೋದ್ವಿಗ್ನಮನಾ ರಥೇನ ।**
**ಪರಾದ್ರವತ್ ಪ್ರಾಣಪರೀಪ್ಸುರುರ್ವ್ಯಾಂ**
**ಯಾವದ್ಗಮಂ ರುದ್ರಭಯಾದ್ಯಥಾರ್ಕಿಃ** ॥೧೮॥

**ಆಪತಂತಂ** ಬೆನ್ನು ಹತ್ತಿ ಬರುವ **ತಂ** ಆ ಅರ್ಜುನನ್ನು **ದೂರಾತ್** ದೂರದಿಂದಲೇ **ವಿಲೋಕ್ಯ** ನೋಡಿ **ಕುಮಾರಹಾ** ಮಕ್ಕಳನ್ನು ಸಂಹಾರ ಮಾಡಿದ **ಸಃ** ಅಶ್ವತ್ಥಾಮನು **ಉದ್ವಿಗ್ನಮನಾಃ** ನಡುಗಲ್ಪಟ್ಟ ಹೃದಯವುಳ್ಳ **ಪ್ರಾಣಪರೀಪ್ಸುಃ** ತನ್ನ ಪ್ರಾಣವನ್ನು ಉಳಿಸುವದಕ್ಕೆ ಇಚ್ಛಿಸುವವನಾಗಿ **ಯಾವದ್ಗಮಂ** ಎಲ್ಲಿಯ ವರೆಗೆ ಹೋಗಲು ಸಾಧ್ಯವೋ ಅಲ್ಲಿಯ ವರೆಗೆ **ಉರ್ವ್ಯಾಂ** ಭೂಮಿಯಲ್ಲಿ **ಯಥಾ** ಹೇಗೆ **ಕಃ** ಬ್ರಹ್ಮದೇವರು ತಮ್ಮ ಐದನೆಯ ತಲೆಯನ್ನು ಕತ್ತರಿಸಲು ಬಂದಿರುವ **ರುದ್ರಭಯಾತ್** ರುದ್ರದೇವರ ಭಯದಿಂದ **ಪರಾದ್ರವತ್** ಓಡಿದರೋ **ತಥಾ** ಹಾಗೆ ಅಶ್ವತ್ಥಾಮಾಚಾರ್ಯರು **ಪರಾದ್ರವತ್** ಓಡಿದರು. ಯಥಾऽऽರ್ಕಿಃ ಎಂಬ ಪಾಠದಲ್ಲಿ ಸೂರ್ಯನ ಮಗನಾದ ಶನೈಶ್ಚರನು **ರುದ್ರಭಯಾತ್** ರುದ್ರದೇವರ ಮೂರನೇ ಕಣ್ಣಿನ ತೇಜಸ್ಸಿನ ಭಯದಿಂದ **ಯಥಾ** ಹೇಗೆ ಓಡಿಹೋದನೋ ಹಾಗೆ ಎಂದರ್ಥ.

ಯಥಾರ್ಕಃ ಎಂಬ ಪಾಠದಲ್ಲಿ ವಿದ್ಯುನ್ಮಾಲೀ ಎಂಬ ರಾಕ್ಷಸನು ರುದ್ರದೇವರು ಕೊಟ್ಟ ಬಂಗಾರದ ವಿಮಾನವನ್ನು ಏರಿ ಸೂರ್ಯನ ಹಿಂದೆ ಹೋಗಿ ವಿಮಾನದ ಬೆಳಕಿನಿಂದ ರಾತ್ರಿಯನ್ನು ಇಲ್ಲದಂತೆ ಮಾಡಿದನು. ಅನಂತರ ಸೂರ್ಯನಿಂದ ಆ ವಿಮಾನವು ಕೆಡವಲ್ಪಟ್ಟಿತು. ಅದನ್ನು ಕೇಳಿ ರುದ್ರದೇವರು ಕುಪಿತರಾದಾಗ ಅವರ ಭಯದಿಂದ ಸೂರ್ಯನು ಓಡಿದನು ಅದರಂತೆ ಎಂದರ್ಥ. ಈ ವಿಷಯವು ವಾಮನಪುರಾಣದಲ್ಲಿ ಪ್ರಸಿದ್ಧವಿದೆ. ಇಲ್ಲಿ ರುದ್ರದೇವರ ಭಯದಿಂದ ಬ್ರಹ್ಮದೇವರು ಓಡಿದ್ದು ಅಸುರಜನಮೋಹನಕ್ಕಾಗಿ.

**ಯದಾ ಶರಣಮಾತ್ಮಾನಮೈಕ್ಷತ ಶ್ರಾಂತವಾಹನಮ್ ।**
**ಅಸ್ತ್ರಂ ಬ್ರಹ್ಮಶಿರೋ ಮೇನೇ ಆತ್ಮತ್ರಾಣಂ ದ್ವಿಜಾತ್ಮಜಃ ॥೧೯॥**

**ಯದಾ** ಯಾವಾಗ **ಶ್ರಾಂತವಾಹನಂ** ಶ್ರಮವನ್ನು ಹೊಂದಿದ ಕುದರೆಗಳುಳ್ಳ **ಆತ್ಮಾನಂ** ತನ್ನನ್ನು **ಅಶರಣಂ** ರಕ್ಷಕರಹಿತನನ್ನಾಗಿ **ಐಕ್ಷತ** ತಿಳಿದನೋ **ತದಾ** ಆಗ **ದ್ವಿಜಾತ್ಮಜಃ** ದ್ರೋಣಾಚಾರ್ಯರ ಪುತ್ರರಾದ ಅಶ್ವತ್ಥಾಮರು **ಬ್ರಹ್ಮಶಿರೋಸ್ತ್ರಂ** ಬ್ರಹ್ಮಾಸ್ತ್ರವನ್ನು **ಆತ್ಮತ್ರಾಣಂ ಮೇನೇ** ತಮಗೆ ರಕ್ಷಕವೆಂದು ತಿಳಿದರು (ದ್ವಿಜಾತ್ಮಜಃ ಎಂಬುವದು ಬ್ರಹ್ಮಾಸ್ತ್ರಸಿದ್ಧಿಸೂಚಕವು)

**ಅಥೋಪಸ್ಪೃಶ್ಯ ಸಲಿಲಂ ಸಂದಧೇಽಸ್ತ್ರಂ ಸಮಾಹಿತಃ ।**
**ಅಜಾನನ್ನಪಿ ಸಂಹಾರಂ ಪ್ರಾಣಕೃಚ್ಛ್ರ ಉಪಸ್ಥಿತೇ ॥೨೦॥**

**ಅಥ** ಅನಂತರ **ಸಲಿಲಂ ಉಪಸ್ಪೃಶ್ಯ** ನೀರಿನಿಂದ ಆಚಮನವನ್ನು ಮಾಡಿ **ಸಂಹಾರಂ ಅಜಾನನ್ ಅಪಿ** ಉಪಸಂಹಾರವನ್ನು ತಿಳಿಯದಿದ್ದರೂ **ಪ್ರಾಣಕೃಚ್ಛ್ರೇ ಉಪಸ್ಥಿತೇ** ಪ್ರಾಣಸಂಕಟವು ಬಂದಾಗ **ಸಮಾಹಿತಃ** ಧ್ಯಾನವನ್ನು ಮಾಡಿ **ಅಸ್ತ್ರಂ ಸಂದಧೇ** ಅಸ್ತ್ರವನ್ನು ಬಿಟ್ಟರು.

**ತತಃ ಪ್ರಾದುಷ್ಕೃತಂ ತೇಜಃ ಪ್ರಚಂಡಂ ಸರ್ವತೋ ದಿಶಮ್ ।**
**ಪ್ರಾಪತತ್ತದಭಿಪ್ರೇಕ್ಷ್ಯ ವಿಷ್ಣುಂ ಜಿಷ್ಣುರುವಾಚ ಹ ॥೨೧॥**

**ತತಃ** ಅಸ್ತ್ರದಿಂದ **ಪ್ರಾದುಷ್ಕೃತಂ** ಉಂಟಾದ **ಪ್ರಚಂಡಂ** ಭೀಕರವಾದ **ಸರ್ವತೋದಿಶಂ** ಎಲ್ಲ ದಿಕ್ಕುಗಳಲ್ಲಿ ಹರಡಿದ **ತೇಜಃ** ಕಾಂತಿಯನ್ನು **ಅಭಿಪ್ರೇಕ್ಷ್ಯ** ನೋಡಿ **ಜಿಷ್ಣುಃ** ಅರ್ಜುನನು **ವಿಷ್ಣುಂ** ಕೃಷ್ಣನನ್ನು ಕುರಿತು **ಹ** ಆಶ್ಚರ್ಯದಿಂದ **ಉವಾಚ** ಹೇಳಿದನು.

ಅರ್ಜುನ ಉವಾಚ -

**ಕೃಷ್ಣ ಕೃಷ್ಣ ಮಹಾಭಾಗ ಭಕ್ತಾನಾಮಭಯಂಕರ ।**
**ತ್ವಮೇಕೋ ದಹ್ಯಮಾನಾನಾಮಪವರ್ಗೋಽಸಿ ಸಂಸೃತೇಃ ॥೨೨॥**

**ಹೇ ಕೃಷ್ಣ** ಸದಾನಂದಾತ್ಮಕನೇ **ಕೃಷ್ಣ** ದುಃಖಪರಿಹಾರಕನೇ **ಮಹಾಭಾಗ** ಮಹಾಭಾಗ್ಯಶಾಲಿಯೇ **ಭಕ್ತಾನಾಂ ಅಭಯಂಕರ** ಭಕ್ತರಿಗೆ ಅಭಯವನ್ನು ಕೊಡುವವನೇ **ತ್ವಂ ಏಕಃ** ನೀನೊಬ್ಬನೇ **ದಹ್ಯಮಾನಾನಾಂ** ಸುಡುತ್ತಿರುವ ಜನರಿಗೆ

**ಸಂಸೃತೇಃ** ಸಂಸಾರದ ದುಃಖವನ್ನು ಕಳೆದು **ಅಪವರ್ಗಃ ಅಸಿ** ಮೋಕ್ಷಕೊಡುವ-ವನಾಗಿರುವಿ.

**ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।**
**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥೨೩॥**

**ತ್ವಂ** ನೀನು **ಆದ್ಯಃ ಪುರುಷಃ** ಎಲ್ಲರಿಗಿಂತಲೂ ಮೊದಲಿಗನಾದ ಪಾಪಪರಿಹಾರಕನಾದ ಆದ್ದರಿಂದಲೇ ಪುರುಷಶಬ್ದವಾಚ್ಯನಾದ 'ಸರ್ವಾನ್ ಪಾಪ್ಮನಾ ಔಷತ್ ತಸ್ಮಾತ್ ಪುರುಷಃ' ಎಂದು ಶ್ರುತಿಯಿದೆ. ಸಾಕ್ಷಾತ್ ಪುರುಷಃ ನಿರುಪಚರಿತ ಐಶ್ವರ್ಯವುಳ್ಳವನು **ಪ್ರಕೃತೇಃ ಪರಃ** ಚಿತ್ ಪ್ರಕೃತಿಗಿಂತಲೂ ಉತ್ತಮನು ಆದ ನೀನು **ಚಿಚ್ಛಕ್ತ್ಯಾ** ಸ್ವರೂಪಜ್ಞಾನಶಕ್ತಿಯಿಂದ **ಮಾಯಾಂ** ಬಂಧಕಶಕ್ತಿಯನ್ನು **ನಿರಸ್ಯ** ದೂರಮಾಡಿ **ಕೈವಲ್ಯೇ** ಪ್ರಕೃತಿ ಹಾಗು ಪ್ರಾಕೃತಸಂಬಂಧರಹಿತವಾದ **ಆತ್ಮನಿ** ಸ್ವರೂಪದಲ್ಲಿ **ಸ್ಥಿತಃ** ಇರುವಿ ಅನನ್ಯಾಶ್ರಿತ ಮತ್ತು ನಿತ್ಯಮುಕ್ತನು ಎಂದು ತಿಳಿಸಿದಂತಾಯಿತು.

**ಸ ಏವ ಜೀವಲೋಕಸ್ಯ ಮಾಯಾಮೋಹಿತಚೇತಸಃ ।**
**ವಿಧಿತ್ಸುಃ ಸ್ವೇನ ವೀರ್ಯೇಣ ಶ್ರೇಯೋ ಧರ್ಮಾದಿಲಕ್ಷಣಮ್ ॥೨೪॥**

**ಸಃ ಏವ** ಪ್ರಕೃತಿಪ್ರಾಕೃತಸಂಬಂಧರಹಿತನಾದ ಆ ನೀನೇ **ಮಾಯಾಮೋಹಿತ-ಚೇತಸಃ** ಬಂಧಕಶಕ್ತಿಯಿಂದ ಮೋಹಿತರಾದ ಮನಸ್ಸುಳ್ಳ **ಜೀವಲೋಕಸ್ಯ** ಜನರಿಗೆ **ಸ್ವೇನ ವೀರ್ಯೇಣ** ಸ್ವರೂಪಸಾಮರ್ಥ್ಯದಿಂದ **ಧರ್ಮಾದಿಲಕ್ಷಣಂ** ಧರ್ಮಮೊದಲಾದ ಶ್ರೇಯಸ್ಸನ್ನು **ವಿಧತ್ಸೇ** ಮಾಡುವಿ

**ವಿಶೇಷ :-(ವಿಧಿತ್ಸುಃ** ಎಂಬ ಪಾಠದಲ್ಲಿ ಮಾಡಲು ಇಚ್ಛಿಸಿ ಅವತಾರವನ್ನು ಮಾಡುವಿ.)

**ತಥಾಽಯಂ ಚಾವತಾರಸ್ತೇ ಭುವೋ ಭಾರಜಿಹೀರ್ಷಯಾ ।**
**ಸ್ವಾನಾಂ ಚಾನನ್ಯಭಾವಾನಾಮನುಧ್ಯಾನಾಯ ಚಾಸಕೃತ್ ॥೨೫॥**

**ತಥಾ** ಎಲ್ಲ ಭಗವದವತಾರಗಳು ಸ್ಮರಣೆ ಮಾಡುವದರಿಂದ ಮೋಕ್ಷಕ್ಕೆ ಕಾರಣವಾಗುವಂತೆ **ಭುವಃ ಭಾರಜಿಹೀರ್ಷಯಾ** ಭೂಮಿಗೆ ಭಾರರಾದ ದುಷ್ಟರ ಸಂಹಾರೇಚ್ಛೆಯಿಂದ ಮಾಡಲ್ಪಟ್ಟ **ಅಯಂ ಚ** ಈ ಅವತಾರವು ಕೂಡ **ಅನನ್ಯಭಾವಾನಾಂ** ಏಕಾಂತ ಭಕ್ತರಿಗೆ **ಚ** ಮತ್ತು **ಸ್ವಾನಾಂ** ಜ್ಞಾತಿಗಳಿಗೆ **ಅಸಕೃತ್**

**ಅನುಧ್ಯಾನಾಯ ಚ** ಪುನಃ ಪುನಃ ಧ್ಯಾನಮಾಡುದಕ್ಕೂ **ತೇ ಅವತಾರಃ** ನಿನ್ನ ಅವತಾರವಾಗಿದೆ ನಿನ್ನ ಅವತಾರವು ಧ್ಯಾನದ್ವಾರಾ ಮೋಕ್ಷಕ್ಕೆ ಸಾಧನವಾಗಿದೆ ಅಂದಮೇಲೆ ಮೋಕ್ಷಪ್ರದನಾದ ನಿನಗೆ ಈ ದುಃಖ ಪರಿಹಾರಮಾಡುವ ಸಾಮರ್ಥ್ಯವಿದೆ ಎಂದು ಏನು ಹೇಳುವದು.

**ಕಿಮಿದಂ ಸ್ವಿತ್ಕುತೋ ವೇತಿ ದೇವದೇವ ನ ವೇದ್ಮ್ಯಹಮ್ ।**
**ಸರ್ವತೋಮುಖಮಾಯಾತಿ ತೇಜಃ ಪರಮದಾರುಣಮ್ ॥೨೬॥**

**ಹೇ ದೇವದೇವ** ದೇವತೆಗಳಿಗೂ ದೇವನಾದ ಶ್ರೀಕೃಷ್ಣನೇ **ಪರಮದಾರುಣಂ** ಭಯಂಕರವಾದ **ತೇಜಃ** ತೇಜಸ್ಸು **ಸರ್ವತೋಮುಖಂ ಆಯಾತಿ** ಎಲ್ಲಕಡೆಯಿಂದಲೂ ಬರುತ್ತದೆಯೋ **ತತ್ ಇದಂ ಕಿಂ** ಬರುವ ತೇಜಸ್ಸು ಏನು **ಕುತೋ ವಾ ಆಯಾತಿ** ಎಲ್ಲಿಂದ ಬರುತ್ತಿದೆ **ಕಿಂ ಸ್ವಿತ್** ಏನಿರಬಹುದು **ಅಹಂ ನ ವೇದ್ಮಿ** ನಾನು ತಿಳಿದಿಲ್ಲ.

ಶ್ರೀಭಗವಾನುವಾಚ -

**ವೇತ್ಥೇದಂ ದ್ರೋಣಪುತ್ರಸ್ಯ ಬ್ರಾಹ್ಮಮಸ್ತ್ರಂ ಪ್ರದರ್ಶಿತಮ್ ।**
**ನೈವಾಸೌ ವೇದ ಸಂಹಾರಂ ಪ್ರಾಣಬಾಧ ಉಪಸ್ಥಿತೇ ॥೨೭॥**

**ಪ್ರಾಣಬಾಧೇ ಉಪಸ್ಥಿತೇ** ತನ್ನ ಪ್ರಾಣಹೋಗುವ ಸಂದರ್ಭದಲ್ಲಿ ಪ್ರಕಟಿಸಲ್ಪಟ್ಟ **ದ್ರೋಣಪುತ್ರಸ್ಯ** ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮನ **ಇದಂ ಬ್ರಾಹ್ಮಂ ಅಸ್ತ್ರಂ ವೇತ್ಥ** ಇದನ್ನು ಬ್ರಹ್ಮಾಸ್ತ್ರವೆಂದು ತಿಳಿ **ಅಸೌ** ಈ ಅಶ್ವತ್ಥಾಮನು **ಸಂಹಾರಂ ನೈವ ವೇದ** ಬ್ರಹ್ಮಾಸ್ತ್ರದ ಉಪಸಂಹಾರವನ್ನು ತಿಳಿದಿಲ್ಲ ಹೇ ಅರ್ಜುನನೇ ನೀನಾದರೂ ಬ್ರಹ್ಮಾಸ್ತ್ರದ ಉಪಸಂಹಾರವನ್ನು ತಿಳಿದಿರುವಿ.

**ನ ಹ್ಯಸ್ಯಾನ್ಯತಮಂ ಕಿಂಚಿದಸ್ತ್ರಂ ಪ್ರತ್ಯವಕರ್ಷಣಮ್ ।**
**ಜಹ್ಯಸ್ತ್ರತೇಜ ಉನ್ನದ್ಧಮಸ್ತ್ರಜ್ಞೋ ಹ್ಯಸ್ತ್ರತೇಜಸಾ ॥೨೮॥**

**ಅಸ್ತ್ರಾಣಾಂ ಅನ್ಯತಮಂ ಕಿಂಚಿತ್ ಅಸ್ತ್ರಂ** ಅಸ್ತ್ರಗಳ ಮಧ್ಯದಲ್ಲಿ ಯಾವುದೋ ಒಂದು ಅಸ್ತ್ರವು **ಅಸ್ಯ** ಈ ಬ್ರಹ್ಮಾಸ್ತ್ರದ **ಪ್ರತ್ಯವಕರ್ಷಣಂ** ಪ್ರತೀಕಾರ ಸಮರ್ಥವು ಅಥವಾ ನಿವರ್ತಕವು **ನಹಿ** ಆಗಿಲ್ಲ. ಆದ್ದರಿಂದ **ಅಸ್ತ್ರಜ್ಞಃ** ವಿಸರ್ಗ ಮತ್ತು ಉಪಸಂಹಾರ ಪೂರ್ವಕವಾದ ಅಸ್ತ್ರವನ್ನು ತಿಳಿದ **ತ್ವಂ** ನೀನು **ಅಸ್ತ್ರತೇಜಸಾ** ಬ್ರಹ್ಮಾಸ್ತ್ರದ ತೇಜಸ್ಸಿನಿಂದ **ಉನ್ನದ್ಧಂ** ಉತ್ಕೃಷ್ಟವಾದ **ಅಸ್ತ್ರತೇಜಃ** ಬ್ರಹ್ಮಾಸ್ತ್ರತೇಜಸ್ಸನ್ನು **ಜಹಿ** ನಿವರ್ತನೆಮಾಡು. ಈ ಅಸ್ತ್ರದ ಪ್ರತಿಬಂಧನೆ ಮಾಡಲು ನೀನು ಬ್ರಹ್ಮಾಸ್ತ್ರವನ್ನು ಬಿಡು ಎಂದು ಭಾವ.

ಸೂತ ಉವಾಚ -

**ಶ್ರುತ್ವಾ ಭಗವತಾ ಪ್ರೋಕ್ತಂ ಫಲ್ಗುನಃ ಪರವೀರಹಾ ।**
**ಸ್ಪೃಷ್ಟ್ವಾಽಽಪಸ್ತಂ ಪರಿಕ್ರಮ್ಯ ಬ್ರಾಹ್ಮಂ ಬ್ರಾಹ್ಮಾಯ ಸಂದಧೇ ॥೨೯॥**

**ಪರವೀರಹಾ** ಶತ್ರುಪಕ್ಷದ ವೀರರನ್ನು ಸಂಹರಿಸುವ **ಫಲ್ಗುನಃ** ಅರ್ಜುನನು **ಭಗವತಾ ಪ್ರೋಕ್ತಂ** ಶ್ರೀಕೃಷ್ಣನಿಂದ ಹೇಳಿದ್ದನ್ನು **ಶ್ರುತ್ವಾ** ಕೇಳಿ **ಆಪಃ ಸ್ಪೃಷ್ಟ್ವಾ** ಆಚಮನಮಾಡಿ **ತಂ** ಶ್ರೀಕೃಷ್ಣನನ್ನು **ಪ್ರರಿಕ್ರಮ್ಯ** ಪ್ರದಕ್ಷಿಣೆ ಮಾಡಿ **ಬ್ರಾಹ್ಮಾಯ** ಬ್ರಹ್ಮಾಸ್ತ್ರದ ಶಾಂತಿಗಾಗಿ **ಬ್ರಾಹ್ಮಂ** ಬ್ರಹ್ಮಾಸ್ತ್ರವನ್ನು **ಸಂದಧೇ** ಹೂಡಿದನು. ಅಂದರೆ ಬಿಟ್ಟನು ಎಂದು ಭಾವ.

**ಸಂಹತ್ಯಾನ್ಯೋನ್ಯಮುಭಯೋಸ್ತೇಜಸೀ ಶರಸಂವೃತೇ ।**
**ಆವೃತ್ಯ ರೋದಸೀ ಖಂ ಚ ವವೃಧಾತೇಽರ್ಕವಹ್ನಿವತ್ ॥೩೦॥**

**ಶರಸಂವೃತೇ** ಧನುಸ್ಸಿನಲ್ಲಿ ಆರೂಢವಾದ **ಉಭಯೋಃ ಅಸ್ತ್ರತೇಜಸೀ** ಅಶ್ವತ್ಥಾಮನ ಹಾಗೂ ಅರ್ಜುನನ ಬ್ರಹ್ಮಾಸ್ತ್ರದ ತೇಜಸ್ಸುಗಳು **ಅನ್ಯೋನ್ಯಂ ಸಂಹತ್ಯ** ಪರಸ್ಪರವಾಗಿ ಕೂಡಿಕೊಂಡು **ರೋದಸೀ** ದ್ಯಾವಾಪೃಥಿವೀಗಳನ್ನು **ಖಂ ಚ** ಅಂತರಿಕ್ಷವನ್ನು **ಆವೃತ್ಯ** ಆವರಿಸಿ ಅಥವಾ ವ್ಯಾಪಿಸಿ **ಅರ್ಕವಹ್ನಿವತ್** ಪ್ರಳಯಕಾಲದಲ್ಲಿ ಸಂಕರ್ಷಣಮುಖದಿಂದ ಹೊರ ಹೊರಟ ಅಗ್ನಿಯು ಮತ್ತು ಮೇಲಿರುವ ಸೂರ್ಯನು ಸೇರಿಕೊಂಡು ಬೆಳೆದಂತೆ **ವವೃಧಾತೇ** ವೃದ್ಧಿಯನ್ನು ಹೊಂದಿದವು.

**ದೃಷ್ಟ್ವಾಽಸ್ತ್ರತೇಜಸ್ತು ತಯೋಸ್ತ್ರೀಂಲ್ಲೋಕಾನ್ ಪ್ರದಹತ್ ಮಹತ್ ।**
**ದಹ್ಯಮಾನಾಃ ಪ್ರಜಾಃ ಸರ್ವಾಃ ಸಾಂವರ್ತಕಮಮಂಸತ ॥೩೧॥**

**ತಯೋಃ** ಆ ಅಶ್ವತ್ಥಾಮ ಹಾಗು ಅರ್ಜುನನ **ಪ್ರದಹತ್** ಸುಡುತ್ತಿರುವ **ಮಹತ್** ದೊಡ್ಡದಾದ **ಅಸ್ತ್ರತೇಜಃ** ಬ್ರಹ್ಮಾಸ್ತ್ರದ ತೇಜಸ್ಸನ್ನು **ದೃಷ್ಟ್ವಾ** ನೋಡಿ **ದಹ್ಯಮಾನಾಃ** ಬ್ರಹ್ಮಾಸ್ತ್ರದಿಂದ ಸುಡಲ್ಪಡುತ್ತಿರುವ **ಪ್ರಜಾಃ ಸರ್ವಾಃ** ಜನರೆಲ್ಲರು **ಸಾಂವರ್ತಕಂ ಅಮಂಸತ** ಪ್ರಳಯಕಾಲದ ಅಗ್ನಿಯೆಂದು ತಿಳಿದರು.

**ಪ್ರಜೋಪಪ್ಲವಮಾಲಕ್ಷ್ಯ ಲೋಕವ್ಯತಿಕರಂ ಚ ತಮ್ ।**
**ಮತಂ ಚ ವಾಸುದೇವಸ್ಯ ಸಂಜಹಾರಾರ್ಜುನೋ ದ್ವಯಮ್ ॥೩೨॥**

**ಪ್ರಜೋಪಪ್ಲವಂ** ಜನರಿಗೆ ಆಗುವ ಉಪದ್ರವವನ್ನು **ಆಲಕ್ಷ್ಯ** ನೋಡಿ **ತಂ ಲೋಕವ್ಯತಿಕರಂ** ಆ ಲೋಕದ ನಾಶವನ್ನು **ಆಲಕ್ಷ್ಯ** ಕಂಡು **ವಾಸುದೇವಸ್ಯ** ಶ್ರೀಕೃಷ್ಣನಿಗೆ **ಮತಂ ಚ** ಎರಡು ಅಸ್ತ್ರಗಳನ್ನು ಉಪಸಾಂಹರಮಾಡುವದು ಸಮ್ಮತವೆಂದು **ಆಲಕ್ಷ್ಯ** ತಿಳಿದು **ದ್ವಯಂ** ಎರಡು ಬ್ರಹ್ಮಾಸ್ತ್ರಗಳನ್ನು **ಅರ್ಜುನಃ** ಅರ್ಜುನನು **ಸಂಜಹಾರ** ಉಪಸಂಹಾರಮಾಡಿದನು.

**ತತ ಆಸಾದ್ಯ ತರಸಾ ದಾರುಣಂ ಗೌತಮೀಸುತಮ್ ।**
**ಬಬಂಧಾಮರ್ಷತಾಮ್ರಾಕ್ಷಃ ಪಶುಂ ರಶನಯಾ ಯಥಾ ॥೩೩॥**

**ತತಃ** ಅನಂತರ **ತರಸಾ** ವೇಗದಿಂದ **ಆಸಾದ್ಯ** ಅಶ್ವತ್ಥಾಮನನ್ನು ಸಮೀಪಿಸಿ **ದಾರುಣಂ** ಕ್ರೂರನಾದ **ಗೌತಮೀಸುತಂ** ಗೌತಮ ವಂಶದಲ್ಲಿ ಹುಟ್ಟಿದ ಕೃಪಿಯ ಮಗನಾದ ಅಶ್ವತ್ಥಾಮರನ್ನು **ಅಮರ್ಷತಾಮ್ರಾಕ್ಷಃ** ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಅರ್ಜುನನು **ರಶನಯಾ ಪಶುಂ ಯಥಾ** ಹಗ್ಗದಿಂದ ಪಶುವನ್ನು ಬಂಧಿಸುವಂತೆ **ಬಬಂಧ** ಕಟ್ಟಿಹಾಕಿದನು.

**ಶಿಬಿರಾಯ ನಿನೀಷಂತಂ ರಜ್ಜ್ವಾ ಬದ್ಧ್ವಾ ರಿಪುಂ ಬಲಾತ್ ।**
**ಪ್ರಾಹಾರ್ಜುನಂ ಪ್ರಕುಪಿತೋ ಭಗವಾನಂಬುಜೇಕ್ಷಣಃ ॥೩೪॥**

**ಬಲಾತ್** ಬಲಾತ್ಕಾರದಿಂದ **ರಿಪುಂ** ಶತ್ರುವಾದ ಅಶ್ವತ್ಥಾಮಾಚಾರ್ಯರನ್ನು **ರಜ್ಜ್ವಾ** ಹಗ್ಗದಿಂದ **ಬಧ್ವಾ** ಕಟ್ಟಿ **ಶಿಬಿರಾಯ** ಸೇನೆಗಳ ನಿವಾಸಸ್ಥಾನಕ್ಕೆ **ನಿನೀಷಂತಂ** ತೆಗೆದು ಕೊಂಡು ಹೋಗಲು ಇಚ್ಛಿಸುತ್ತಿರುವ **ಅರ್ಜುನಂ ಪ್ರತಿ** ಅರ್ಜುನನಿಗೆ **ಪ್ರಕುಪಿತಃ** ಸಿಟ್ಟಿಗೆ ಬಂದಿರುವ **ಅಂಬುಜೇಕ್ಷಣಃ ಭಗವಾನ್** ಕಮಲದಂತೆ ಕಣ್ಣುಗಳಿರುವ ಭಗವಂತನು **ಪ್ರಾಹ** ಹೇಳಿದನು.

**ಮೈನಂ ಪಾರ್ಥಾರ್ಹಸಿ ತ್ರಾತುಂ ಬ್ರಹ್ಮಬಂಧುಮಿಮಂ ಜಹಿ ।**
**ಯೋಽಸಾವನಾಗಸಃ ಸುಪ್ತಾನವಧೀನ್ನಿಶಿ ಬಾಲಕಾನ್ ॥೩೫॥**

**ಹೇ ಪಾರ್ಥ** ಎಲೋ ಅರ್ಜುನನೇ **ಯಃ ಅಸೌ** ಯಾವ ಈ ಅಶ್ವತ್ಥಾಮನು **ಅನಾಗಸಃ** ನಿರಪರಾಧಿಗಳಾದ **ಸುಪ್ತಾನ್** ಮಲಗಿದ **ಬಾಲಕಾನ್** ಮಕ್ಕಳನ್ನು **ನಿಶಿ** ರಾತ್ರಿಯಲ್ಲಿ **ಅವಧೀತ್** ಸಂಹಾರಮಾಡಿದನೋ ಅಂತಹ **ಏನಂ** ಈ **ಬ್ರಹ್ಮಬಂಧುಂ** ಬ್ರಾಹ್ಮಣಾಭಾಸನನ್ನು **ತ್ರಾತುಂ ನ ಅರ್ಹಸಿ** ರಕ್ಷಿಸಲು ಯೋಗ್ಯನಲ್ಲ. ಆದ್ದರಿಂದ

ಇವನನ್ನು ಕೊಲ್ಲು. ಅನಾಗಸಂ ಪ್ರಸುಪ್ತಂ ಚ ಬಾಲಕಂ ಹಂತಿ ಯೋ ನರಃ । ಸ ಖಂಡಶೋ ನಿಶಾತವ್ಯಃ ಇತ್ಯೇವಂ ಮನುರಬ್ರವೀತ್ ।।

ಎಂದು ಸ್ಮೃತಿ ಇರುವದರಿಂದ ಬಾಲಕರು, ನಿರಪರಾಧಿಗಳು, ಮತ್ತು ನಿದ್ರಿಸುವರು ಇಂಥವರನ್ನು ಅಶ್ವತ್ಥಾಮನು ಕೊಂದದ್ದಕ್ಕಾಗಿ ಇವನನ್ನು ಈ ಕಾರಣಕ್ಕಾಗಿ ಕೊಲ್ಲು ಎಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿದನು.

ಶತ್ರುಗಳಿಂದ ಇಷ್ಟು ಜನರು ಕೊಲ್ಲಲು ಯೋಗ್ಯರಲ್ಲ ಎಂದು ಹೇಳುವರು.

**ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಮ್ ।**
**ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹಂತಿ ಧರ್ಮವಿತ್ ।।೩೬।।**

**ಮತ್ತಂ** ಮದ್ಯಪಾನಮಾಡಿದವನು **ಪ್ರಮತ್ತಂ** ಸ್ಮರಣರಹಿತನಾದವನು **ಉನ್ಮತ್ತಂ** ಭೂತಹಿಡಿದುಕೊಂಡವನು **ಸುಪ್ತಂ** ಮಲಗಿದವನು **ಬಾಲಂ** ಚಿಕ್ಕಬಾಲಕನಾದ **ಸ್ತ್ರಿಯಂ** ಹೆಣ್ಣುಮಗಳು **ಜಡಮ್** ಜ್ಞಾನಶೂನ್ಯನಾದವನು **ಬಾಲಂ** ದಿಗ್ವಿಶೇಷವನ್ನು ತಿಳಿಯದಿರುವ **ಪ್ರಪನ್ನಂ** ಶರಣಾಗತನಾದ **ವಿರಥಂ** ರಥ ಮೊದಲಾದ ಯುದ್ಧಸಾಧನೆಗಳಿಲ್ಲದಿರುವವನು **ಭೀತಂ** ಯುದ್ಧದಿಂದ ಹೆದರಿ ಓಡಿಹೋದ **ರಿಪುಂ** ಶತ್ರುವನ್ನು **ಧರ್ಮವಿತ್** ಧರ್ಮವನ್ನು ತಿಳಿದವನು **ನ ಹಂತಿ** ಕೊಲ್ಲಲಾರನು.

ಮುಂದಿನ ಶ್ಲೋಕದಲ್ಲಿ ತದಸೌ ವಧ್ಯತಾಂ ಪಾಪಃ ಎಂದು ದ್ರೋಣಾಚಾರ್ಯರ ವಧವು ಹೇಳಲ್ಪಡುವದು. ಆಗ ಬರುವ 'ಬ್ರಾಹ್ಮಣವಧವನ್ನು ನಾನು ಹೇಗೆ ಮಾಡಬೇಕು' ಎಂಬ ಅರ್ಜುನನ ಶಂಕೆಯನ್ನು ಪರಿಹರಿಸಲು ಅಶ್ವತ್ಥಾಮನು ವಧವು ಅವನು ಮಾಡಿದ ಪಾಪಕ್ಕೆ ದಂಡರೂಪವಾಗುವದು ಆದ್ದರಿಂದ ಅವನ ಹಿತಕ್ಕಾಗಿಯೇ ನಿನ್ನಿಂದ ಮಾಡಲ್ಪಡಬೇಕು. ಎಂಬ ಅಭಿಪ್ರಾಯದಲ್ಲಿ ಹೇಳುವನು.

**ಸ್ವಪ್ರಾಣಾನ್ ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಖಲಃ ।**
**ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದ್ಯಾತ್ಯಧಃ ಪುಮಾನ್ ।।೩೭।।**

**ಅಘೃಣಃ** ಕೃಪಾರಹಿತನಾದ **ಖಲಃ** ಇಂದ್ರಿಯಾರಾಮನಾದ **ಪರಪ್ರಾಣೈಃ** ಮತ್ತೊಬ್ಬರ ಪ್ರಾಣಗಳನ್ನು ತೆಗೆದು **ಸ್ವಪ್ರಾಣಾನ್** ತನ್ನ ಪ್ರಾಣಗಳನ್ನು ಉಳಿಸುಕೊಳ್ಳುವನೋ **ತದ್ವಧಃ** ತನ್ನ ಪ್ರಾಣವನ್ನು ಉಳಿಸಿಕೊಳ್ಳುವ ವ್ಯಕ್ತಿಯ ವಧವು **ತಸ್ಯ** ಪರಪ್ರಾಣಾಪಹಾರಮಾಡಿ ತನ್ನ ಪ್ರಾಣಸಂರಕ್ಷಿಸುವವನಿಗೆ **ಶ್ರೇಯಃ** ಪುರುಷಾರ್ಥಕ್ಕೆ ಕಾರಣವು **ಯತ್** ಯಾವ

ಕಾರಣ **ದೋಷಾತ್** ದಂಡಪ್ರಾಯಶ್ಚಿತ್ತವಿಲ್ಲದಿರುವ ದೋಷದಿಂದ **ಪುಮಾನ್** ದೋಷಿಯು **ಅಧಃ ಯಾತಿ** ನರಕಕ್ಕೆ ಹೋಗುವನು. **ಹಿ** ಪ್ರಸಿದ್ಧ. 'ರಾಜಾಭಿರ್ಧೃತ-ದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ । ವಿಧೂತಕಲ್ಮಷಾ ಯಾಂತಿ ಸ್ವರ್ಗಂ ಸುಕೃತಿನೋ ಯಥಾ' ।।

ಮಾನವರು ಪಾಪಗಳನ್ನು ಮಾಡಿ ರಾಜರಿಂದ ದಂಡವನ್ನು ಪಡೆದಿದ್ದಾರೆ ಪಾಪಗಳನ್ನು ಕಳೆದುಕೊಂಡು ಪುಣ್ಯವಂತರಂತೆ ಸ್ವರ್ಗಕ್ಕೆ ಹೋಗುವರು.

**ಪ್ರತಿಶ್ರುತಂ ಚ ಭವತಾ ಪಾಂಚಾಲ್ಯೈ ಶೃಣ್ವತೋ ಮಮ ।**
**ಆಹರಿಷ್ಯೇ ಶಿರಸ್ತಸ್ಯ ಯಸ್ತೇ ಮಾನಿನಿ ಪುತ್ರಹಾ ।।೩೮।।**

**ಹೇ ಮಾನಿನಿ** ಮಾನಾರ್ಹಳಾದ ದ್ರೌಪದಿಯೇ **ಯಃ ತೇ ಪುತ್ರಹಾ** ಯಾರು ನಿನ್ನ ಮಕ್ಕಳನ್ನು ಕೊಂದವನೋ **ತಸ್ಯ** ಅವನ **ಶಿರಃ** ತಲೆಯನ್ನು **ಆಹರಿಷ್ಯೇ** ಕತ್ತರಿಸಿ ತರುವೆನು ಎಂದು **ಪಾಂಚಾಲ್ಯೈ** ದ್ರೌಪದಿಯ ಮುಂದೆ **ಮಮ ಶೃಣ್ವತಃ** ನಾನು ಕೇಳುತ್ತಿರುವಾಗ **ಪ್ರತಿಶ್ರುತಂ** ಪ್ರತಿಜ್ಞೆಯು ಮಾಡಲ್ಪಟ್ಟಿದೆ. ಅವನನ್ನು ನೀನು ಕೊಲ್ಲು

ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ರಕ್ಷಿಸುವದಕ್ಕಾಗಿ ಶ್ರೀಕೃಷ್ಣನು ಅರ್ಜುನನಿಗೆ ಅಶ್ವತ್ಥಾಮನನ್ನು ಕೊಲ್ಲು ಎಂದು ಹೇಳುತ್ತಾನೆ.

**ತದಸೌ ವಧ್ಯತಾಂ ಪಾಪಃ ಆತತಾಯ್ಯಾತ್ಮಬಂಧುಹಾ ।**
**ಭರ್ತುಶ್ಚ ವಿಪ್ರಿಯಂ ವೀರ ಕೃತವಾನ್ ಕುಲಪಾಂಸನಃ ।।೩೯।।**

**ಹೇ ವೀರ** ಅರ್ಜುನನೇ **ಆತತಾಯೀ** ಶಸ್ತ್ರಪಾಣಿಯಾದ **ಆತ್ಮಬಂಧುಹಾ** ಮಕ್ಕಳನ್ನು ಕೊಂದ **ಕುಲಪಾಂಸನ** ಕುಲದೂಷಕನಾದ **ಅಸೌ** ಈ ಅಶ್ವತ್ಥಾಮನು **ಭರ್ತುಃ ಚ** ದುರ್ಯೋಧನನಿಗೂ ಕೂಡ **ವಿಪ್ರಿಯಂ** ಪ್ರಯೋಜನವಿಲ್ಲದ್ದರಿಂದ ಪ್ರಿಯವಾಗದಂತಿರುವ ಶಿಶುಹತ್ಯೆಯನ್ನು ಮಾಡಿರುವ **ತತ್** ಆದ್ದರಿಂದ **ಪಾಪಃ** ಪಾಪಿಯು **ವಧ್ಯತಾಂ** ಕೊಲ್ಲಲ್ಪಡಲಿ. 'ಆತ್ಮಬಂಧುಃ ಸುತಸ್ತೋಕಃ ಪುತ್ರೋಽಂಗಜ ಉದಾಹೃತಃ'' ಎಂದು ಅಭಿಧಾನವಿದೆ.

ಶ್ರೀಕೃಷ್ಣನು ಅರ್ಜುನನಿಗೆ ಅಶ್ವತ್ಥಾಮನನ್ನು ಕೊಲ್ಲು ಎಂದು ಹೇಳಿದ್ದು ಅರ್ಜುನನ ಧರ್ಮಜ್ಞಾನದ ಪರೀಕ್ಷೆಗಾಗಿಯೇ ಹೊರತು ಅಶ್ವತ್ಥಾಮನನ್ನು ಕೊಲ್ಲಬೇಕೆಂಬ ಅಭಿಪ್ರಾಯದಿಂದಲ್ಲ ಎಂದು ಹೇಳುತ್ತ ಅರ್ಜುನನಿಗೆ ಗುರುಗಳಲ್ಲಿರುವ ಭಕ್ತ್ಯತಿಶಯವನ್ನು ತಿಳಿಸುವರು.

**ಏವಂ ಪರೀಕ್ಷತಾ ಧರ್ಮಂ ಪಾರ್ಥಃ ಕೃಷ್ಣೇನ ಚೋದಿತಃ ।**
**ನೈಚ್ಛದ್ಧಂತುಂ ಗುರುಸುತಂ ಯದ್ಯಪ್ಯಾತ್ಮಹನಂ ಮಹಾನ್ ॥೪೦॥**

**ಏವಂ** ಈ ರೀತಿಯಾಗಿ **ಧರ್ಮಂ ಪರೀಕ್ಷತಾ** ಅರ್ಜುನನ ಧರ್ಮವನ್ನು ಪರೀಕ್ಷಿಸುವದಕ್ಕಾಗಿ **ಕೃಷ್ಣೇನ** ಶ್ರೀಕೃಷ್ಣನಿಂದ **ಚೋದಿತಃ** ಪ್ರೇರಿತನಾದ **ಮಹಾನ್ ಪಾರ್ಥಃ** ವಿವೇಕಿಯಾದ ಅರ್ಜುನನು **ಆತ್ಮಹನಂ** ಬಾಲಹತ್ಯೆಯ ದೋಷದಿಂದ ತನ್ನನ್ನೇ ಕೊಂದ **ಗುರುಸುತಂ** ಗುರುಗಳ ಮಗನಾದ ಅಶ್ವತ್ಥಾಮಾಚಾರ್ಯರನ್ನು **ಹಂತುಂ ನೈಚ್ಛತ್** ಕೊಲ್ಲಲು ಇಚ್ಛಿಸಲಿಲ್ಲ.

**ಅಥೋಪೇತ್ಯ ಸ್ವಶಿಬಿರಂ ಗೋವಿಂದಪ್ರಿಯಸಾರಥಿಃ ।**
**ನ್ಯವೇದಯತ್ತಂ ಪ್ರಿಯಾಯೈ ಶೋಚಂತ್ಯಾ ಆತ್ಮಜಾನ್ ಹತಾನ್ ॥೪೧॥**

**ಅಥ** ಅನಂತರ **ಗೋವಿಂದಪ್ರಿಯಸಾರಥಿಃ** ಶ್ರೀಕೃಷ್ಣನೇ ಪ್ರಿಯನು ಸಾರಥಿಯೂ ಆಗಿರುವ ಅರ್ಜುನನು **ಸ್ವಶಿಬಿರಂ ಉಪೇತ್ಯ** ತನ್ನ ಶಿಬಿರಕ್ಕೆ ಬಂದು **ಹತಾನ್ ಆತ್ಮಜಾನ್** ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟ ತನ್ನ ಮಕ್ಕಳನ್ನು ಉದ್ದೇಶಿಸಿ **ಶೋಚಂತ್ಯೈ** ದುಃಖಪಡುತ್ತಿರುವ ಹೆಂಡತಿಯಾದ ದ್ರೌಪದಿಗೆ **ತಂ** ಅಶ್ವತ್ಥಾಮನನ್ನು **ನ್ಯವೇದಯತ್** ಒಪ್ಪಿಸಿದನು.

**ತಥಾऽऽಹೃತಂ ಪಶುವತ್ ಪಾಶಬದ್ಧ-**
**ಮವಾಙ್ಮುಖಂ ಕರ್ಮಜುಗುಪ್ಸಿತೇನ ।**
**ನಿರೀಕ್ಷ್ಯ ಕೃಷ್ಣಾಪಕೃತಂ ಗುರೋಃ ಸುತಂ**
**ವಾಮಸ್ವಭಾವಾ ಕೃಪಯಾ ನನಾಮ ॥೪೨॥**

**ತಥಾ ಆಹೃತಂ** ಆ ರೀತಿಯಾಗಿ ಕರೆತಂದ **ಪಶುವತ್** ಪಶುವಿನಂತೆ **ಪಾಶಬದ್ಧಂ** ಹಗ್ಗದಿಂದ ಕಟ್ಟಲ್ಪಟ್ಟ **ಕರ್ಮಜುಗುಪ್ಸಿತೇನ** ನಿಂದಿತವಾದ ಕರ್ಮದಿಂದ(ಜುಗುಪ್ಸಿತಂ ಚ ತತ್ ಕರ್ಮ ಚ ಕರ್ಮಜುಗುಪ್ಸಿತಂ ತೇನ ಅತ್ರ ವಿಶೇಷಣಸ್ಯ ಪರನಿಪಾತಃ) **ಅವಾಙ್ಮುಖಂ** ಕೆಳಗೆ ಮೋರೆ ಮಾಡಿದ **ಅಪಕೃತಂ** ಅಪಕಾರವನ್ನು ಮಾಡಿದ **ಗುರೋಃ ಸುತಂ** ಗುರು ಪುತ್ರನಾದ ಅಶ್ವತ್ಥಾಮನನ್ನು **ಕೃಪಯಾ** ಕೃಪಾದೃಷ್ಟಿಯಿಂದ **ನಿರೀಕ್ಷ್ಯ** ನೋಡಿ **ವಾಮಸ್ವಭಾವಾ** ಮೃದು ಸ್ವಭಾವದವಳಾದ **ಕೃಷ್ಣಾ** ದ್ರೌಪದಿಯು **ನನಾಮ** ನಮಸ್ಕರಿಸಿದಳು.

ನಮಸ್ಕರಿಸಿದ ಮೇಲೆ ಸುಮ್ಮನೇ ಕೂಡಲಿಲ್ಲ ದ್ರೌಪದಿಯು ಈ ಮಾತುಗಳನ್ನು ಹೇಳಿದಳು. ಎಂದು ಹೇಳುವರು

**ಉವಾಚ ಚಾಸಹಂತ್ಯಸ್ಯ ಬಂಧನಾಽನಯನಂ ಸತೀ ।**
**ಮುಚ್ಯತಾಂ ಮುಚ್ಯತಾಮೇಷ ಬ್ರಾಹ್ಮಣೋ ನಿತರಾಂ ಗುರುಃ ॥೪೩॥**

**ಸತೀ** ಒಳ್ಳೆಯ ಸೌಶೀಲ್ಯಾದಿ ಗುಣವುಳ್ಳ ದ್ರೌಪದಿಯು **ಅಸ್ಯ** ಅಶ್ವತ್ಥಾಮಾಚಾರ್ಯರ **ಬಂಧನಾನಯನಂ** ಕಟ್ಟಿತಂದಿರುವದನ್ನು **ಅಸಹಮಾನಾ** ಸಹಿಸದವಳಾಗಿ **ಏಷಃ** ಅಶ್ವತ್ಥಾಮನು **ಮುಚ್ಯತಾಂ ಮುಚ್ಯತಾಂ** ಬಿಡಲ್ಪಡಲಿ **ಬ್ರಾಹ್ಮಣಃ ನಿತರಾಂ ಗುರುಃ** ಎಲ್ಲ ವರ್ಣಗಳಿಗೆ ಬ್ರಾಹ್ಮಣನೇ ಗುರುವು ಅದರಲ್ಲಿಯೂ ನಿಮಗೆ ಈ ಅಶ್ವತ್ಥಾಚಾರ್ಯರು ಗುರುಪುತ್ರರಾದ್ದರಿಂದ ಮುಖ್ಯವಾಗಿ ಗುರುಗಳು ಎಂದು **ಉವಾಚ** ಹೇಳಿದಳು.

ಅಶ್ವತ್ಥಾಮಾಚಾರ್ಯರು ಗುರುಗಳು ಹೇಗೆಂಬುದನ್ನು ಹೇಳುವರು.

**ಸರಹಸ್ಯೋ ಧನುರ್ವೇದಃ ಸವಿಸರ್ಗೋಪಸಂಯಮಃ ।**
**ಅಸ್ತ್ರಗ್ರಾಮಶ್ಚ ಭವತಾ ಶಿಕ್ಷಿತೋ ಯದನುಗ್ರಹಾತ್ ॥೪೪॥**

**ಯದನುಗ್ರಹಾತ್** ಯಾವ ದ್ರೋಣಾಚಾರ್ಯರ ಅನುಗ್ರಹದಿಂದ **ಸರಹಸ್ಯಃ** ಗೋಪ್ಯವಾದ ಮಂತ್ರಸಹಿತವಾಗಿ **ಧನುರ್ವೇದಃ** ಧನುರ್ವೇದವು **ಚ** ಮತ್ತು **ಸವಿಸರ್ಗೋಪಸಂಯಮಃ** ಅಸ್ತ್ರಪ್ರಯೋಗ ಮಾಡುವದು ಉಪಸಂಹಾರಮಾಡುವದು ಇವೆರಡರಿಂದ ಸಹಿತವಾದ **ಅಸ್ತ್ರಗ್ರಾಮಃ** ಅಸ್ತ್ರಗಳ ಸಮೂಹವು **ಭವತಾ** ನಿಮ್ಮಿಂದ **ಶಿಕ್ಷಿತಃ** ಕಲಿಯಲ್ಪಟ್ಟಿತೋ **ಸಃ ಏಷಃ** ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ.

**ಸ ಏಷ ಭಗವಾನ್ ದ್ರೋಣಃ ಪ್ರಜಾರೂಪೇಣ ವರ್ತತೇ ।**
**ತಸ್ಯಾತ್ಮನೋಽರ್ಧಂ ಪತ್ನ್ಯಾಸ್ತೇ ನಾನ್ವಗಾದ್ ವೀರಸೂಃ ಕೃಪೀ ॥೪೫॥**

**ಸಃ ಏಷಃ ಭಗವಾನ್** ಯಾವ ಈ ಪೂಜ್ಯರಾದ ದ್ರೋಣಾಚಾರ್ಯರು **ಪ್ರಜಾರೂಪೇಣ** ಮಗನರೂಪದಿಂದ **ವರ್ತತೇ** ಇರುವರು (ಆತ್ಮಾ ವೈ ಪುತ್ರನಾಮಾಽಸಿ) ಎಂದು ಶ್ರುತಿಯಿದೆ. ಆದ್ದರಿಂದ ಗುರುಗಳು ಎಂದರ್ಥ ಗುರುಪತ್ನಿಯಲ್ಲಿರುವ ಭಕ್ತಿಯಿಂದಲಾದರು ಅಶ್ವತ್ಥಾಮನನ್ನು ಬಿಟ್ಟುಬಿಡಿ ಎಂಬ ಅಭಿಪ್ರಾಯದಿಂದ ಹೇಳುವರು **ತಸ್ಯ** ದ್ರೋಣಾಚಾರ್ಯರ **ಯತಃ** ಯಾವ ಕಾರಣದಿಂದ **ಪತ್ನೀ** ಹೆಂಡತಿಯು **ತತಃ** ಆ ಕಾರಣದಿಂದ **ಆತ್ಮನಃ** ದೇಹದ **ಅರ್ಧಂ**

ಅರ್ಧಾಂಗಿಯಾದ **ಕೃಪೀ** ಕೃಪಿಯು **ಆಸ್ತೇ** ಜೀವಂತವಿರುವಳು **ಯತಃ** ಯಾವ ಕಾರಣ **ವೀರಸೂಃ** ಪುತ್ರವತಿಯು **ಅತಃ** ಆ ಕಾರಣದಿಂದ **ನ ಅನ್ವಗಾದ್** ಪತಿಯನ್ನು ಅನುಸರಿಸಿ ಹೋಗಲಿಲ್ಲ. ಅಂದರೆ ಸಹಗಮನವನ್ನು ಮಾಡಲಿಲ್ಲ. ಗುರುಪತ್ನಿಯಲ್ಲಿ ಗೌರವದಿಂದ ಇವನನ್ನು ಸಂಹರಿಸಬೇಡಿ ಎಂದು ಭಾವ.

ಕೇವಲ ಗುರುಭಕ್ತಿಯಷ್ಟೇ ಇವರನ್ನು ಬಿಡಲು ಕಾರಣವಲ್ಲ ಇವರನ್ನು ಕೊಲ್ಲುವದು ನಮ್ಮ ಕುಲಕ್ಕೆ ಪಾಪಸಂಪಾದಕವು ಆಗಿದೆ. ಆದ್ದರಿಂದಲೂ ಇವನನ್ನು ಬಿಡಿ ಎಂದು ಹೇಳುವರು.

**ತದ್ಧರ್ಮಜ್ಞ ಮಹಾಭಾಗ ಭವದ್ಭಿರ್ಗೌರವಂ ಕುಲಮ್ ।**
**ವೃಜಿನಂ ನಾರ್ಹತಿ ಪ್ರಾಪ್ತುಂ ಪೂಜ್ಯಂ ವಂದ್ಯಮಭೀಕ್ಷ್ಣಶಃ ॥೪೬॥**

**ತದ್ಧರ್ಮಜ್ಞ** ಗುರ್ವಾದಿಭಕ್ತಿಗಳಿಂದ ಉಂಟಾಗುವ ಧರ್ಮವನ್ನು ತಿಳಿದವನೇ **ಮಹಾಭಾಗ** ಮಹಾಭಾಗ್ಯಶಾಲಿಯಾದ ಅರ್ಜುನನೇ **ಅಭೀಕ್ಷ್ಣಶಃ** ಯಾವಾಗಲು ಎಲ್ಲರಿಂದಲೂ **ಪೂಜ್ಯಂ ವಂದ್ಯಂ ಚ** ಪೂಜನೀಯವಾದ ನಮಸ್ಕರಿಸಲ್ಪಡುವ **ಕೌರವಂ ಕುಲಂ** ಕುರುಕುಲವು **ಭವದ್ಭಿಃ** ನಿಮ್ಮಿಂದ **ವೃಜಿನಂ** ಬ್ರಹ್ಮದ್ರೋಹನಿಮಿತ್ತ ದುಃಖವನ್ನು **ಪ್ರಾಪ್ತುಂ** ಹೊಂದಲು **ನ ಅರ್ಹತಿ** ಯೋಗ್ಯವಲ್ಲ.

ಇವನನ್ನು ಕೊಂದರೆ ಅವನ ತಾಯಿಗೆ ದುಃಖವಾಗುವದು ಆದ್ದರಿಂದಲೂ ಇವನನ್ನು ಕೊಲ್ಲಬೇಡಿ ಎಂದು ಹೇಳುವಳು.

**ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ ।**
**ಯಥಾಽಹಂ ಮೃತವತ್ಸಾಽಽರ್ತಾ ರೋದಿಮ್ಯಶ್ರುಮುಖೀ ಮುಹುಃ ॥೪೭॥**

**ಯಥಾ** ಹೇಗೆ **ಅಹಂ** ನಾನು **ಮೃತವತ್ಸಾ** ಮಕ್ಕಳನ್ನು ಕಳೆದು ಕೊಂಡು **ಆರ್ತಾ** ದುಃಖಿತಳಾಗಿ **ಅಶ್ರುಮುಖೀ** ಕಣ್ಣೀರಿಡುತ್ತ **ಮುಹುಃ** ಮೇಲಿಂದ ಮೇಲೆ **ರೋದಿಮಿ** ಅಳುವೆನೋ **ತಥಾ** ಹಾಗೆಯೇ **ಪತಿದೇವತಾ** ಪತಿಯೇ ದೈವವಾಗಿಯುಳ್ಳ **ಗೌತಮೀ** ಗೌತಮ ಕುಲದಲ್ಲಿ ಜನಿಸಿದ ಕೃಪಿಯು **ಅಸ್ಯ ಜನನೀ** ಅಶ್ವತ್ಥಾಮನ ತಾಯಿಯು **ಮಾ ರೋದೀತ್** ಅಳುವದು ಬೇಡ ಅದಕ್ಕಾಗಿ ಇವರನ್ನು ಕೊಲ್ಲುವದು ಬೇಡ. ನಮ್ಮ ಕುಲದ ಹಿತಕ್ಕಾಗಿ ಇವನನ್ನು ಕೊಲ್ಲಬೇಡಿ.

ಸಂಹರಿಸಿದರೆ ಆಗುವ ಪರಿಣಾಮವನ್ನು ತಿಳಿಸುವಳು. ಎಂದು ಹೇಳುವರು.

**ಯೈಃ ಕೋಪಿತಂ ಬ್ರಹ್ಮಕುಲಂ ರಾಜನ್ಯೈರಕೃತಾತ್ಮಭಿಃ ।**
**ತತ್ಕುಲಂ ಪ್ರದಹತ್ಯಾಶು ಸಾನುಬಂಧಂ ಶುಚಾರ್ಪಿತಮ್ ॥೪೮॥**

**ಅಕೃತಾತ್ಮಭಿಃ** ಅಶಿಕ್ಷಿತವಾದ ಬುದ್ಧಿಯುಳ್ಳ **ಯೈಃ** ಯಾವ **ರಾಜನ್ಯೈಃ** ಕ್ಷತ್ರಿಯರಿಂದ **ಬ್ರಹ್ಮಕುಲಂ** ಬ್ರಾಹ್ಮಣರ ಕುಲವು **ಕೋಪಿತಂ** ಸಿಟ್ಟಿಗೆ ತರಿಸಲ್ಪಟ್ಟಿದೆಯೋ **ತತ್ಕುಲಂ** ಆ ಕುಲವು **ಶುಚಾರ್ಪಿತಂ** ದುಃಖದಿಂದ ವ್ಯಾಪ್ತವಾಗಿ **ಸಾನುಬಂಧಂ** ಪರಿವಾರಸಮೇತವಾಗಿ **ಆಶು** ಬೇಗನೆ **ಪ್ರದಹತಿ** ಸುಟ್ಟುಹೋಗುವದು. ಅಂದರೆ ಕುಲವೇ ನಷ್ಟವಾಗಿ ಹೋಗುವದು ಎಂದು ಹೇಳಿದಳು.

ಸೂತ ಉವಾಚ -

**ಧರ್ಮ್ಯಂ ನ್ಯಾಯ್ಯಂ ಸಕರುಣಂ ನಿರ್ವ್ಯಲೀಕಂ ಸಮಂ ಮಹತ್ ।**
**ರಾಜಾ ಧರ್ಮಸುತೋ ರಾಜ್ಞ್ಯಾಃ ಪ್ರತ್ಯನಂದದ್ ವಚೋ ದ್ವಿಜಾಃ ॥೪೯॥**

**ಹೇ ದ್ವಿಜಾಃ** ಶೌನಕಾದಿಬ್ರಾಹ್ಮಣರೇ **ಧರ್ಮ್ಯಂ** ಧರ್ಮದಿಂದ ಕೂಡಿದ **ನ್ಯಾಯ್ಯಂ** ಯುಕ್ತಿಯುಕ್ತವಾದ **ಸಕರುಣಂ** ದಯೆಯಿಂದ ಕೂಡಿದ **ನಿರ್ವ್ಯಲೀಕಂ** ಸತ್ಯವಾದ **ಸಮಂ** ಶತ್ರುಮಿತ್ರಭಾವರಹಿತವಾದ **ಮಹತ್** ಹಿತೋಪದೇಶಮಾಡಿದ್ದರಿಂದ ದೊಡ್ಡದಾದ **ರಾಜ್ಞ್ಯಾಃ** ದ್ರೌಪದಿಯ **ವಚಃ** ಮಾತನ್ನು **ಧರ್ಮಸುತಃ ರಾಜಾ** ಯಮಧರ್ಮನ ಮಗನಾದ ಯುಧಿಷ್ಠಿರನು **ಪ್ರತ್ಯನಂದತ್** ಅನುಮೋದಿಸಿದನು.

**ನಕುಲಃ ಸಹದೇವಶ್ಚ ಯುಯುಧಾನೋ ಧನಂಜಯಃ ।**
**ಭಗವಾನ್ ದೇವಕೀಪುತ್ರೋ ಯೇ ಚಾನ್ಯೇ ಯಾಶ್ಚ ಯೋಷಿತಃ ॥೫೦॥**

**ನಕುಲಃ** ನಕುಲನು **ಸಹದೇವಃ** ಸಹದೇವನು **ಯುಯುಧಾನಃ** ಸಾತ್ಯಕಿಯು **ಧನಂಜಯಃ** ಅರ್ಜುನನು **ಭಗವಾನ್** ಭಗವಂತನಾದ **ದೇವಕೀಪುತ್ರಃ** ದೇವಕಿಯ ಮಗನಾದ ಶ್ರೀಕೃಷ್ಣನು **ಯೇ ಚ ಅನ್ಯೇ** ಇನ್ನುಳಿದ ಪುರುಷರು **ಯಾಃ ಚ ಯೋಷಿತಃ** ಯಾವೆಲ್ಲ ಸ್ತ್ರೀಯರು ಎಲ್ಲರೂ **ಪ್ರತ್ಯನಂದನ್** ಅನುಮೋದಿಸಿದರು.

**ತತ್ರಾಹಾಮರ್ಷಿತೋ ಭೀಮಸ್ತಸ್ಯ ಶ್ರೇಯಾನ್ವಧಃ ಸ್ಮೃತಃ ।**
**ನ ಭರ್ತುರ್ನಾತ್ಮನಶ್ಚಾರ್ಥೇ ಯೋऽಹನ್ಸುಪ್ತಾನ್ ಶಿಶೂನ್ ವೃಥಾ॥೫೧॥**

**ತತ್ರ** ಆ ಅವಸ್ಥೆಯಲ್ಲಿ **ಅಮರ್ಷಿತಃ** ಈ ಮಾತನ್ನು ಸಹಿಸದ **ಭೀಮಃ** ಭೀಮಸೇನದೇವರು **ಯಃ** ಯಾವನು **ನ ಭರ್ತುಃ ಅರ್ಥೇ** ಯಜಮಾನನಿಗೆ ಆಗಲಿ **ಆತ್ಮನಶ್ಚ ಅರ್ಥೇ** ತನ್ನ ಪ್ರಯೋಜನಕ್ಕಾಗಿ ಆಗಲಿ **ವೃಥಾ** ವಧ್ಯರಾದ ಶಿಶುಗಳ ಪ್ರಯೋಜನಕ್ಕಾಗಿ ಆಗಲಿ **ನ** ಪೂರ್ವೋಕ್ತವಾದ ಮೂರು ಪ್ರಯೋಜಗಳಿಲ್ಲದೆ **ಸುಪ್ತಾನ್** ಮಲಗಿಕೊಂಡ **ಶಿಶೂನ್** ಮಕ್ಕಳನ್ನು **ಅಹನ್** ಕೊಂದನೋ **ತಸ್ಯ** ಅವನ **ವಧಃ** ಕೊಲ್ಲುವದು **ಶ್ರೇಯಾನ್ ಸ್ಮೃತಃ** ಅವನ ಪಾಪನಾಶಕವೆಂದು ಹೇಳಲ್ಪಟ್ಟಿದೆ. ಹಿಂದೆ ಹೇಳಲ್ಪಟ್ಟ ಸ್ಮೃತಿಯಲ್ಲಿಯೇ ಹೇಳಿದೆ. ಅವನನ್ನು ಶಿಕ್ಷಿಸುವ ನಮಗೆ ಯಾವ ಪಾಪವೂ ಬರುವದಿಲ್ಲ ಎಂದು ಭಾವ.

**ನಿಶಮ್ಯ ಭೀಮಗದಿತಂ ದ್ರೌಪದ್ಯಾಶ್ಚ ಚತುರ್ಭುಜಃ ।**
**ಆಲೋಕ್ಯ ವದನಂ ಸಖ್ಯುರಿದಮಾಹ ಹಸನ್ನಿವ ॥೫೨॥**

**ಚತುರ್ಭುಜಃ** ಶ್ರೀಕೃಷ್ಣನು **ಭೀಮಗದಿತಂ** ಭೀಮಸೇನದೇವರು ಹೇಳಿದ್ದನ್ನು **ದ್ರೌಪದ್ಯಾಶ್ಚ** ದ್ರೌಪದಿಯು ಹೇಳಿದ ಮಾತನ್ನು **ನಿಶಮ್ಯ** ಕೇಳಿ **ಸಖ್ಯುಃ** ಅರ್ಜುನನ **ವದನಂ** ಮುಖವನ್ನು **ಆಲೋಕ್ಯ** ನೋಡಿ **ಹಸನ್ನಿವ** ಮುಗುಳು ನಗುತ್ತಾ **ಇದಂ ಆಹ** ಮುಂದೆ ಹೇಳುವ ಮಾತನ್ನು ಹೇಳಿದನು.

ಶ್ರೀಭಗವಾನುವಾಚ -

**ಬ್ರಹ್ಮಬಂಧುರ್ನ ಹಂತವ್ಯ ಆತತಾಯೀ ವಧಾರ್ಹಣಃ ।**
**ಮಯ್ಯೈವೋಭಯಮಾಮ್ನಾತಂ ಪರಿಪಾಹ್ಯನುಶಾಸನಮ್ ॥೫೩॥**

**ಬ್ರಹ್ಮಬಂಧುಃ ನ ಹಂತವ್ಯಃ** ಬ್ರಾಹ್ಮಣರೇ ಬಂಧು ಆಗಿ ಉಳ್ಳವನು ಕೊಲ್ಲಲು ಯೋಗ್ಯನಲ್ಲ **ಆತತಾಯೀ ವಧಾರ್ಹಣಃ** ಆತತಾಯಿಯು ಕೊಲ್ಲಲು ಯೋಗ್ಯನು **ಮಯಾ ಏವ** ನನ್ನಿಂದಲೇ **ಉಭಯಂ ಆಮ್ನಾತಂ** ಎರಡೂ ಧರ್ಮಗಳು ಹೇಳಲ್ಪಟ್ಟಿವೆ. **ಅನುಶಾಸನಂ** ನನ್ನ ಆಜ್ಞೆಯನ್ನು **ಪರಿಪಾಹಿ** ಪರಿಪಾಲಿಸು

**ವಿಶೇಷ :-** 'ಬ್ರಾಹ್ಮಣೋ ನ ಹಂತವ್ಯಃ' ಎಂದು ಶ್ರುತಿಯಿದೆ. 'ಆತತಾಯಿನಮಾಯಾಂತಂ ಅಪಿ ವೇದಾಂತಪಾರಗಮ್ । ಜಿಘಾಂಸಂತಂ ಜಿಘಾಂಸೀಯಾತ್ ನ ತೇನ ಬ್ರಹ್ಮಹಾ ಭವೇತ್' ॥ ಇತ್ಯಾದಿ ವಾಕ್ಯಗಳಿಂದ ನಾನೇ ಹೇಳಿದ್ದೇನೆ. 'ಶ್ರುತಿಸ್ಮೃತಿಹರೇರಾಜ್ಞೇ' ಎಂಬ ಮಾತಿನ ಪ್ರಕಾರ ಎರಡೂ ನನ್ನ ಆಜ್ಞಾ ರೂಪವಾಗಿವೆ.

**ಕುರು ಪ್ರತಿಶ್ರುತಂ ಸತ್ಯಂ ಯತ್ತತ್ ಸಾಂತ್ವಯತಾ ಪ್ರಿಯಾಮ್ ।**
**ಪ್ರಿಯಂ ಚ ಭೀಮಸೇನಸ್ಯ ಪಾಂಚಾಲ್ಯೈ ಮಹ್ಯಮೇವ ಚ ॥೫೪॥**

**ಪ್ರಿಯಾಂ** ಹೆಂಡತಿಯನ್ನು **ಸಾಂತ್ವಯತಾ** ಸಮಾಧಾನಗೊಳಿಸುವ **ಯತ್ ಪ್ರತಿಶ್ರುತಂ** ಯಾವುದನ್ನು ಪ್ರತಿಜ್ಞೆಮಾಡಿದೆಯೋ **ತತ್** ಅದನ್ನು **ಸತ್ಯಂ ಕುರು** ಸತ್ಯವನ್ನಾಗಿ ಮಾಡು **ಭೀಮಸೇನಸ್ಯ** ಭೀಮಸೇನನಿಗೆ **ಪ್ರಿಯಂ ಚ ಕುರು** ಪ್ರಿಯವನ್ನು ಮಾಡು **ಪಾಂಚಾಲ್ಯೈ** ದ್ರೌಪದಿಗೆ **ಮಹ್ಯಂ ಚ** ನನಗೂ ಕೂಡ **ಪ್ರಿಯಂ ಕುರು** ಪ್ರಿಯವಾದದ್ದನ್ನು ಮಾಡು. ಇದರಲ್ಲಿ ಅಶ್ವತ್ಥಾಮನ ಸಂಹಾರಮಾಡಿದರೆ ಭೀಮಸೇನನಿಗೆ ಪ್ರಿಯವಾಗುವದು ವಧ ಮಾಡದೇ ಇದ್ದರೇ ದ್ರೌಪದಿಗೆ ಪ್ರಿಯವಾಗುವದು ಎರಡನ್ನು ಮಾಡಿದರೆ ಕೃಷ್ಣನಿಗೆ ಪ್ರಿಯವಾಗುವದು. ಎಂದು ತಿಳಿಯಬೇಕು.

**ಸೂತ ಉವಾಚ -**

**ಅರ್ಜುನಃ ಸಹಸಾऽऽಜ್ಞಾಯ ಹರೇರ್ಹಾರ್ದಮಥಾಸಿನಾ ।**
**ಮಣಿಂ ಜಹಾರ ಮೂರ್ಧನ್ಯಂ ದ್ವಿಜಸ್ಯ ಸಹಮೂರ್ಧಜಮ್ ॥೫೫॥**

**ಅರ್ಜುನಃ** ಅರ್ಜುನನು **ಸಹಸಾ** ಬೇಗನೆ **ಹಾರ್ದಂ** ಅಭಿಪ್ರಾಯವನ್ನು **ಆಜ್ಞಾಯ** ವಿರುದ್ಧವಾದ ಎರಡು ಧರ್ಮಗಳನ್ನು ವಿಧಾನಮಾಡುವದಿಲ್ಲ ಆದ್ದರಿಂದ ಅವನ ಮಾತಿನ ಅಭಿಪ್ರಾಯ ಹೀಗಿದೆ ಎಂದು ತಿಳಿದು **ಅಸಿನಾ** ಖಡ್ಗದಿಂದ **ಮೂರ್ಧನ್ಯಂ** ತಲೆಯಲ್ಲಿ ಹುಟ್ಟಿದ **ಸಹ ಮೂರ್ಧಜಂ** ಕೇಶಗಳ ಜೊತೆಗೆ ಹುಟ್ಟಿದ್ದು **ಮೂರ್ಧನ್ಯಂ** ತಲೆಯಲ್ಲಿ ಹುಟ್ಟಿದ (ಸ್ವಾಭಾವಿಕವಾದ) **ಮಣಿಂ** ಶಿರೋರತ್ನವನ್ನು **ಜಹಾರ** ಕಿತ್ತುಕೊಂಡನು.

**ವಿಮುಚ್ಯ ರಶನಾಬದ್ಧಂ ಬಾಲಹತ್ಯಾ ಹತಪ್ರಭಮ್ ।**
**ತೇಜಸಾ ಮಣಿನಾ ಹೀನಂ ಶಿಬಿರಾನ್ನಿರವಾಪಯತ್ ॥೫೬॥**

**ರಶನಾಬದ್ಧಂ** ಹಗ್ಗದಿಂದ ಕಟ್ಟಿದವವನನ್ನು **ವಿಮುಚ್ಯ** ಬಿಡಿಸಿ **ಬಾಲಹತ್ಯಾ ಹತಪ್ರಭಂ** ಮಕ್ಕಳನ್ನು ಕೊಂದದ್ದರಿಂದ ಕಳಾಹೀನನಾದ **ತೇಜಸಾ** ಸಾಮರ್ಥ್ಯದಿಂದ **ಮಣಿನಾ** ಶಿರೋರತ್ನದಿಂದಲೂ **ಹೀನಂ** ರಹಿತನಾದ ಅಶ್ವತ್ಥಾಮನನ್ನು **ಶಿಬಿರಾತ್** ಶಿಬಿರದಿಂದ **ನಿರವಾಪಯತ್** ಹೊರಹಾಕಿದನು. ಇದರಿಂದಾಗಿ ಶ್ರೀಕೃಷ್ಣನ ಎಲ್ಲ ಅಭಿಪ್ರಾಯವನ್ನು ನೆರವೇರಿಸಿದಂತಾಯಿತು.

ಭೀಮನು ಹೇಳಿದ ವಧವನ್ನು ಮಾಡದೇ ಇರುವದರಿಂದ ಎಲ್ಲವನ್ನು ಮಾಡಿದಂತೆ ಹೇಗೆ ಆಯಿತು. ಎಂದರೆ ಹೇಳುವರು.

**ಬಂಧನಂ ದ್ರವಿಣಾದಾನಂ ಸ್ಥಾನಾನ್ನಿರ್ಯಾಪಣಂ ತಥಾ ।**
**ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋಽಸ್ತಿ ದೈಹಿಕಃ ॥೫೭॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಸಪ್ತಮೋಽಧ್ಯಾಯಃ ॥

**ಬಂಧನಂ** ಹಗ್ಗದಿಂದ ಕೈಕಟ್ಟುವದು **ದ್ರವಿಣಾದಾನಂ** ಬಂಗಾರಾದಿಗಳನ್ನು ಅಪಹರಿಸುವದು **ಸ್ಥಾನಾತ್ ನಿರ್ಯಾಪಣಂ** ತಮ್ಮ ದೇಶದಿಂದ ಹೊರಗೆ ಹಾಕುವದು **ಏಷ ಹಿ** ಎಂಬುವದೇ **ಬ್ರಹ್ಮಬಂಧೂನಾಂ** ಬ್ರಾಹ್ಮಣರ **ವಧಃ** ವಧಕ್ಕೆ ಪ್ರತಿನಿಧಿಯು **ಅನ್ಯಃ ದೈಹಿಕಃ** ದೇಹ ಸಂಬಂಧಿಯಾದ ಅವಯವಗಳನ್ನು ಕತ್ತರಿಸುವದು **ನ ಅಸ್ತಿ** ಶಾಸ್ತ್ರವಿಹಿತವಾಗಿಲ್ಲ.

ಇಲ್ಲಿಗೆ ಏಳನೇಯ ಅಧ್ಯಾಯವು ಮುಗಿಯಿತು

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಅಷ್ಟಮೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿ ಪಾಂಡವರಿಂದ ವೈಭವದ ಅಶ್ವಮೇಧಯಾಗವನ್ನು ಮಾಡಿಸಿ ಶ್ರೀಕೃಷ್ಣ ದ್ವಾರಕೆಗೆ ಹೊರಟು ನಿಂತ. ಆ ಸಂದರ್ಭದಲ್ಲಿ ಉತ್ತರೆ ಓಡಿ ಬಂದು ಕೃಷ್ಣ ಕಾಪಾಡು. ಬ್ರಹ್ಮಾಸ್ತ್ರದಿಂದ ನನ್ನನ್ನು ರಕ್ಷಿಸು. ನಾನು ಸತ್ತರೂ ಚಿಂತೆಯಿಲ್ಲ ಗರ್ಭದಲ್ಲಿ ಬೆಳೆಯುತ್ತಿರುವ ಮಗು ಕ್ಷೇಮವಾಗಿರಲಿ ಎಂದಳು. ಶ್ರೀಕೃಷ್ಣ ಒಂದು ರೂಪದಿಂದ ತಾನೇ ಗರ್ಭವನ್ನು ಪ್ರವೇಶಿಸಿ ಪರೀಕ್ಷಿತನ ರಕ್ಷಣೆಗೆ ಕಟಿ ಬದ್ಧನಾಗಿ ನಿಂತ. ಬಳಿಕ ಶ್ರೀಕೃಷ್ಣನನ್ನು ಕುಂತಿ ಸ್ತುತಿಸಿದಳು. ನಮಗೆ ಆಪತ್ತು ಬಂದಾಗಲೆಲ್ಲ ನಿನ್ನ ದರ್ಶನವಾಗಿ ಆಪತ್ತುಗಳು ಪರಿಹಾರವಾದವು. ಆದ್ದರಿಂದ ನಿನ್ನ ದರ್ಶನಕ್ಕೆ ಕಾರಣವಾಗಬಲ್ಲ ಆಪತ್ತೇ ನಮಗಿರಲಿ ಎಂದಳು.

ಭಕ್ತಿಯನ್ನು ವಿಧಾನಮಾಡಲು ಶ್ರೀಹರಿಯ ಭಕ್ತವಾತ್ಸಲ್ಯ ಮೊದಲಾದ ಅಚಿಂತ್ಯ ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ಅದಕ್ಕಾಗಿ ಮೃತರಾದವರಿಗೆ ಲೌಕಿಕವಾದ ಏನು ಕರ್ತವ್ಯವಿದೆಯೋ ಅದನ್ನು ತಿಳಿಸುವರು.

**ಧರ್ಮರಾಜನಿಗೆ ಪಟ್ಟಾಭಿಷೇಕ**

**ಸೂತ ಉವಾಚ -**

**ಪುತ್ರಶೋಕಾತುರಾಃ ಸರ್ವೇ ಪಾಂಡವಾಃ ಸಹ ಕೃಷ್ಣಯಾ ।**
**ಸ್ವಾನಾಂ ಮೃತಾನಾಂ ಯತ್ಕೃತ್ಯಂ ಚಕ್ರುರ್ನಿರ್ಹರಣಾದಿಕಮ್ ॥೧॥**

**ಸರ್ವೇ ಪಾಂಡವಾಃ** ಎಲ್ಲ ಪಾಂಡವರು **ಕೃಷ್ಣಯಾ ಸಹ** ದ್ರೌಪದಿಯೊಡನೆ **ಮೃತಾನಾಂ** ಮರಣಹೊಂದಿದ **ಸ್ವಾನಾಂ** ಬಂಧುಗಳಿಗೆ **ಯತ್ಕೃತ್ಯಂ ನಿರ್ಹರಣಾದಿಕಂ**

ಮಾಡಬೇಕಾದ ಸ್ಮಶಾನಯಾತ್ರೆ ಮತ್ತು ಶವದಾಹಾದಿಗಳು ಏನು ಉಂಟೋ ಅವುಗಳನ್ನು **ಚಕ್ರುಃ** ಮಾಡಿದರು.

**ಅಥೋ ನಿಶಾಮಯಾಮಾಸ ಕೃಷ್ಣಾಯೈ ಭಗವಾನ್ ಪುರಾ ।**
**ಪತಿತಾಯಾಃ ಪಾದಮೂಲೇ ರುದಂತ್ಯಾ ಯತ್ತ್ರಿಶ್ರುತಮ್ ॥೨॥**

**ಅಥೋ** ಅನಂತರ **ಭಗವಾನ್** ಶ್ರೀಕೃಷ್ಣನು **ಪುರಾ** ವನವಾಸಕಾಲದಲ್ಲಿ **ಪಾದಮೂಲೇ** ತನ್ನ ಪಾದದ ಮೇಲೆ **ಪತಿತಾಯಾಃ** ಬಿದ್ದು **ರುದಂತ್ಯಾಃ** ಅಳುತ್ತಿರುವ **ಕೃಷ್ಣಾಯೈ** ದ್ರೌಪದಿಗೆ **ಯತ್ತ್ರಿಶ್ರುತಂ** 'ಭೀಮನ ಗದೆಯಿಂದ ಸಂಹೃತರಾದ ದುರ್ಯೋಧನಾದಿಗಳನ್ನು ಆಲಿಂಗಿಸಿ ಕೂದಲುಗಳನ್ನು ಹರವಿಕೊಂಡು ಅಳುತ್ತಿರುವ ದುರ್ಯೋಧನಾದಿಗಳ ಹೆಂಡಂದಿರನ್ನು ತೋರಿಸುವೆನು' ಎಂದು ಪ್ರತಿಜ್ಞೆ ಗೈದಿದ್ದನೋ **ತತ್** ಆ ಪ್ರತಿಜ್ಞೆಯನ್ನು **ನಿಶಾಮಯಾಮಾಸ** ತೋರಿಸಿದನು.

**ಪಶ್ಯ ರಾಜ್ಞ್ಯರಿದಾರಾಂಸ್ತೇ ರುದತೋ ಮುಕ್ತಮೂರ್ಧಜಾನ್ ।**
**ಆಲಿಂಗ್ಯ ಸ್ವಪತೀನ್ ಭೀಮಗದಾಭಗ್ನೋರುವಕ್ಷಸಃ ॥೩॥**

**ಹೇ ರಾಜ್ಞಿ** ಹೇ ದ್ರೌಪದಿಯೇ **ಭೀಮಗದಾಭಗ್ನೋರುವಕ್ಷಸಃ** ಭೀಮಸೇನದೇವರ ಗದೆಯಿಂದ ಛಿದ್ರವಾದ ತೊಡೆ ಮತ್ತು ಎದೆಯ ಭಾಗವುಳ್ಳ **ಸ್ವಪತೀನ್** ತಮ್ಮ ಗಂಡಂದಿರನ್ನು **ಆಲಿಂಗ್ಯ** ಅಪ್ಪಿಕೊಂಡು **ಮುಕ್ತಮೂರ್ಧಜಾನ್** ಕೂದಲುಗಳನ್ನು ಹರವಿಕೊಂಡು **ರುದತಃ** ಅಳುತ್ತಿರುವ **ತೇ** ನಿನ್ನ **ಅರಿದಾರಾನ್** ಶತ್ರುಗಳ ಹೆಂಡಂದಿರನ್ನು **ಪಶ್ಯ** ನೋಡು.

**ಅಥ ತೇ ಸಂಪರೇತಾನಾಂ ಸ್ವಾನಾಮುದಕಮಿಚ್ಛತಾಮ್ ।**
**ದಾತುಂ ಸಕೃಷ್ಣಾ ಗಂಗಾಯಾಂ ಪುರಸ್ಕೃತ್ಯ ಯಯುಃ ಸ್ತ್ರಿಯಃ ॥೪॥**

**ಅಥ** ಅನಂತರ **ಸಂಪರೇತಾನಾಂ** ಯುದ್ಧದಲ್ಲಿ ಮೃತರಾದ **ಉದಕಮಿಚ್ಛತಾಂ** ನೀರನ್ನು ಅಪೇಕ್ಷಿಸುವ **ಸ್ವಾನಾಂ** ತಮ್ಮ ಬಂಧುಗಳಿಗೆ **ದಾತುಂ** ತರ್ಪಣಾದಿಗಳನ್ನು ಕೊಡಲು **ಸಕೃಷ್ಣಾಃ** ದ್ರೌಪದಿಯಿಂದ ಸಹಿತರಾಗಿ ಅಥವಾ ಶ್ರೀಕೃಷ್ಣನಿಂದ ಸಹಿತರಾಗಿ **ಸ್ತ್ರಿಯಃ ಪುರುಸ್ಕೃತ್ಯ** ಸ್ತ್ರೀಯರನ್ನು ಮುಂದುಮಾಡಿಕೊಂಡು **ಯಯುಃ** ಗಂಗೆಯನ್ನು ಕುರಿತು ಹೋದರು.

**ತೇ ನಿನೀಯೋದಕಂ ಸರ್ವೇ ವಿಲಪ್ಯ ಚ ಭೃಶಂ ಪುನಃ ।**
**ಆಪ್ಲುತಾ ಹರಿಪಾದಾಬ್ಜರಜಃಪೂತಸರಿಜ್ಜಲೇ ॥೫॥**

**ತೇ** ಪಾಂಡವರು **ಗಂಗಾಯಾಂ** ಗಂಗೆಯಲ್ಲಿ ಸ್ನಾನಮಾಡಿ **ಉದಕಂ** ತರ್ಪಣವನ್ನು **ನಿನೀಯ** ಕೊಟ್ಟು **ಚ** ಮತ್ತು **ಸರ್ವೇ** ಸ್ತ್ರೀಪುರುಷರೆಲ್ಲರು **ಭೃಶಂ** ಬಹಳವಾಗಿ **ವಿಲಪ್ಯ** ಅತ್ತು **ಪುನಃ** ಮತ್ತೆ **ಹರಿಪಾದಾಬ್ಜರಜಃಪೂತಸರಿಜ್ಜಲೇ** ಭಗವಂತನ ಪಾದಕಮಲಗಳ ಧೂಳಿಯಿಂದ ಪವಿತ್ರವಾದ ಗಂಗೆಯ ನೀರಿನಲ್ಲಿ **ಆಪ್ಲುತಾಃ** ಸ್ನಾನಮಾಡಿದರು.

**ತತ್ರಾಸೀನಂ ಕುರುಪತಿಂ ಧೃತರಾಷ್ಟ್ರಂ ಸಹಾನುಜಮ್ ।**
**ಗಾಂಧಾರೀಂ ಪುತ್ರಶೋಕಾರ್ತಾಂ ಪೃಥಾಂ ಕೃಷ್ಣಾಂ ಚ ಮಾಧವಃ ॥೬॥**

**ಸಾಂತ್ವಯಾಮಾಸ ಮುನಿಭಿರ್ಹತಪುತ್ರಾನ್ ಶುಚಾರ್ಪಿತಾನ್ ।**
**ಭೂತೇಷು ಕಾಲಸ್ಯ ಗತಿಂ ದರ್ಶಯನ್ನಪ್ರತಿಕ್ರಿಯಾಮ್ ॥೭॥**

**ತತ್ರ** ಗಂಗೆಯ ದಡದಲ್ಲಿ **ಆಸೀನಂ** ಕುಳಿತಿರುವ **ಸಹಾನುಜಂ** ಭೀಮಾದಿಗಳಿಂದ ಸಹಿತನಾದ **ಕುರುಪತಿಂ** ಯುಧಿಷ್ಠಿರನನ್ನು **ಸಹಾನುಜಂ** ಸಂಜಯನಿಂದ ಸಹಿತನಾದ **ಧೃತರಾಷ್ಟ್ರಂ** ಧೃತರಾಷ್ಟ್ರನನ್ನು **ಪುತ್ರಶೋಕಾರ್ತಾಂ** ಮಕ್ಕಳ ಸಾವಿನಿಂದ ದುಃಖಿತಳಾದ **ಗಾಂಧಾರೀಂ** ಗಾಂಧಾರಿಯನ್ನು **ಪೃಥಾಂ** ಕುಂತಿಯನ್ನು **ಕೃಷ್ಣಾಂ** ದ್ರೌಪದಿಯನ್ನು **ಮಾಧವಃ** ಶ್ರೀಕೃಷ್ಣನು **ಮುನಿಭಿಃ ಸಹ** ಋಷಿಗಳಿಂದ ಸಹಿತನಾಗಿ **ಭೂತೇಷು** ಪ್ರಾಣಿಗಳಲ್ಲಿ **ಕಾಲಸ್ಯ** ಕಾಲರೂಪಿಯಾದ ಪರಮಾತ್ಮನ **ಗತಿಂ** ಪರಾಕ್ರಮವನ್ನು **ಅಪ್ರತಿಕ್ರಿಯಾಂ** ಪರಿಹರಿಸಲು ಅಸಾಧ್ಯವೆಂದು **ದರ್ಶಯನ್** ತೋರಿಸಿ **ಹತಪುತ್ರಾನ್** ಸಾಯಲ್ಪಟ್ಟ ಮಕ್ಕಳುಳ್ಳ **ಶುಚಾರ್ಪಿತಾನ್** ದುಃಖಿತರಾದವರನ್ನು **ಸಾಂತ್ವಯಾಮಾಸ** ಸಮಾಧಾನಗೊಳಿಸಿದನು.

**ಘಾತಯಿತ್ವಾಽಸತೋ ರಾಜ್ಞ್ಯಾಃ ಕಚಸ್ಪರ್ಶಹತಾಯುಷಃ ।**
**ಸಾಧಯಿತ್ವಾಜಾತಶತ್ರೋಃ ಸ್ವಾರಾಜ್ಯಂ ಕಿತವೈರ್ಹೃತಮ್ ॥೮॥**

**ರಾಜ್ಞ್ಯಾಃ** ದ್ರೌಪದಿಯ **ಕಚಸ್ಪರ್ಶಹತಾಯುಷಃ** ಕೇಶಗಳನ್ನು ಮುಟ್ಟುವದರಿಂದ ನಷ್ಟವಾದ ಆಯುಷ್ಯವುಳ್ಳ **ಅಸತಃ** ದುಷ್ಟರಾದ ದುರ್ಯೋಧನಾದಿಗಳನ್ನು **ಘಾತಯಿತ್ವಾ** ಪಾಂಡವರಿಂದ ಕೊಲ್ಲಿಸಿ **ಅಜಾತಶತ್ರೋಃ** ಶತ್ರುವೇ ಇಲ್ಲದಿರುವ ಧರ್ಮರಾಜನಿಗೆ **ಕಿತವೈಃ ಹೃತಂ** ಕಪಟಿಗಳಾದ ದುರ್ಯೋಧನಾದಿಗಳಿಂದ ಅಪಹರಿಸಲ್ಪಟ್ಟ **ಸ್ವಾರಾಜ್ಯಂ** ಸ್ವರ್ಗರೂಪವಾದ ರಾಜ್ಯವನ್ನು **ಸಾಧಯಿತ್ವಾ** ಸಂಪಾದಿಸಿ ಕೊಟ್ಟು

**ಯಾಜಯಿತ್ವಾಶ್ವಮೇಧೈಸ್ತಂ ತ್ರಿಭಿರುತ್ತಮಕಲ್ಪಕೈಃ ।**
**ತದ್ಯಶಃ ಪಾವನಂ ದಿಕ್ಷು ಶತಮನ್ಯೋರಿವಾತನೋತ್ ॥೯॥**

**ಉತ್ತಮಕಲ್ಪಕೈಃ** ದಕ್ಷಿಣಾದಿವಿಷಯದಲ್ಲಿ ವಿಹಿತವಾದ ಉತ್ತಮಕಲ್ಪಗಳಿಂದ ಕೂಡಿದ **ತ್ರಿಭಿಃ** ತ್ರಿಗುಣಫಲವುಳ್ಳ **ಪಂಚಭಿಃ ಅಶ್ವಮೇಧೈಃ** ಐದು ಅಶ್ವಮೇಧಗಳಿಂದ **ಯಾಜಯಿತ್ವಾ** ಯಜ್ಞಮಾಡಿಸಿ **ಪಾವನಂ** ಪವಿತ್ರವಾದ **ತದ್ಯಶಃ** ಅವರ ಕೀರ್ತಿಯನ್ನು **ದಿಕ್ಷು** ಎಲ್ಲ ದಿಕ್ಕುಗಳಲ್ಲಿ **ಶತಮನ್ಯೋಃ ಇವ ಆತನೋತ್** ವಾಮನಾವತಾರದಲ್ಲಿ ಇಂದ್ರನ ಕೀರ್ತಿಯನ್ನು ಹರಡಿಸಿದಂತೆ ಪಾಂಡವರ ಕೀರ್ತಿಯನ್ನು ವಿಸ್ತಾರ ಗೊಳಿಸಿದನು.

**ವಿಶೇಷ :-** 'ತದ್ಯಜ್ಞಪಂಚಕಮಜಸ್ತ್ರಿಗುಣಾಂ ಸ ಏಭ್ಯಃ ಸದ್ದಕ್ಷಿಣಾಂ ಕ್ರತುಪತಿರ್ನಿಖಿಲಾಮವಾಪ್ಯ । ಚಕ್ರೇಽಶ್ವಮೇಧತ್ರಯಮೇಕಮೇಕಂ ತೇಷಾಂ ಹರಿರ್ಬಹುಸುವರ್ಣಕ ನಾಮಧೇಯಮ್' ॥ ಎಂದು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ಹೇಳಿದ್ದಾರೆ. ಮೂರು ವರ್ಷಗಳ ಕಾಲ ಮಾಡುವ ಅಶ್ವಮೇಧಯಾಗವನ್ನು ಐದು ಜನ ಅಣ್ಣತಮ್ಮಂದಿರು ಏಕಕಾಲದಲ್ಲಿ ಪ್ರತ್ಯೇಕವಾಗಿ ಮಾಡಿದರು. ಎಲ್ಲರು ವೇದವ್ಯಾಸದೇವರ ಆಜ್ಞೆಯ ಮೇರೆಗೆ ಉತ್ತಮಕಲ್ಪದ ದಕ್ಷಿಣಾದಿಗಳನ್ನು ಕೊಟ್ಟರು. ಇದರಿಂದ ಪ್ರತಿಯೊಂದು ಅಶ್ವಮೇಧಕ್ಕೂ ಮೂರು ಪಟ್ಟು ಫಲಬರುತ್ತದೆ ಎಂದು ಶ್ಲೋಕದ ಅಭಿಪ್ರಾಯ.

**ಆಮಂತ್ರ್ಯ ಪಾಂಡುಪುತ್ರಾಂಶ್ಚ ಶೈನೇಯೋದ್ಧವಸಂಯುತಃ ।**
**ದ್ವೈಪಾಯನಾದಿಭಿರ್ವಿಪ್ರೈಃ ಪೂಜಿತೈಃ ಪ್ರತಿಪೂಜಿತಃ ॥೧೦॥**

**ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।**
**ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಮ್ ॥೧೧॥**

**ಬ್ರಹ್ಮನ್** ಶೌನಕರೇ **ಶೈನೇಯೋದ್ಧವಸಂಯುತಃ** ಸಾತ್ಯಕಿ ಹಾಗು ಉದ್ಧವನಿಂದ ಕೂಡಿದ **ಪೂಜಿತೈಃ** ಪೂಜಿಸಲ್ಪಟ್ಟ **ವಿಪ್ರೈಃ** ಬ್ರಾಹ್ಮಣರಾದ **ದ್ವೈಪಾಯನಾದಿಭಿಃ** ವೇದವ್ಯಾಸದೇವರೇ ಮೊದಲಾದವರಿಂದ **ಪ್ರತಿಪೂಜಿತಃ** ಪೂಜಿಸಲ್ಪಟ್ಟು **ಪಾಂಡುಪುತ್ರಾನ್ ಆಮಂತ್ರ್ಯ** ಪಾಂಡವರಿಗೆ ಹೋಗಿಬರುವೆನೆಂದು ತಿಳಿಸಿ **ದ್ವಾರಕಾಂ ಗಂತುಂ** ದ್ವಾರಕಾಪಟ್ಟಣಕ್ಕೆ ಹೋಗಲು **ಕೃತಮತಿಃ** ಮನಸ್ಸು ಮಾಡಿ **ರಥಂ ಆಸ್ಥಿತಃ**

ರಥದಲ್ಲಿ ಕುಳಿತು **ಭಯವಿಹ್ವಲಾಂ** ಭಯದಿಂದ ಆತುರಳಾದ **ಅಭಿಧಾವಂತೀಂ** ತನ್ನನ್ನು ಕುರಿತು ಓಡಿಬರುತ್ತಿರುವ **ಉತ್ತರಾಂ** ಉತ್ತರೆಯನ್ನು **ಉಪಲೇಭೇ** ನೋಡಿದನು.

ಉತ್ತರಾ ಉವಾಚ -

**ಪಾಹಿ ಪಾಹಿ ಮಹಾಯೋಗಿನ್ ದೇವದೇವ ಜಗತ್ಪತೇ ।**
**ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಮ್ ॥೧೨॥**

**ಯತ್ರ** ಜಗತ್ತಿನಲ್ಲಿ **ಪರಸ್ಪರಂ ಮೃತ್ಯುಃ** (ಭವತಿ) ಪರಸ್ಪರ ಮರಣವು ಬರುವದೋ **ತತ್ರ** ಅವರಲ್ಲಿ **ತ್ವದನ್ಯಂ** ನಿನ್ನಿಂದ ಭಿನ್ನರಾದ **ಅಭಯಂ** ಅಭಯಪ್ರದರನ್ನು **ನ ಪಶ್ಯೇ** ನೋಡಲಾರೆ ಆದ್ದರಿಂದ ನಿನ್ನನ್ನು ಬಿಟ್ಟು ಮತ್ತೊಬ್ಬರನ್ನು ಸ್ತೋತ್ರಮಾಡುವುದು ಯೋಗ್ಯವಲ್ಲ. **ಹೇ ದೇವದೇವ** ದೇವತೆಗಳಿಗೆ ಒಡೆಯನೇ **ಮಹಾಯೋಗಿನ್** ಯೋಗಸಾಮರ್ಥ್ಯವುಳ್ಳವನೇ **ಜಗತ್ಪತೇ** ಜಗದೊಡೆಯನೇ **ಪಾಹಿ ಪಾಹಿ** ರಕ್ಷಿಸು.

ಪ್ರಸ್ತುತವಾದ ಭಯವನ್ನು ತಿಳಿಸುವಳು.

**ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।**
**ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಮ್ ॥**

**ಹೇ ಈಶ** ನಿಯಾಮಕನೇ **ವಿಭೋ** ಸಮರ್ಥನೇ **ತಪ್ತಾಯಸಃ** ಕಾದಕಬ್ಬಿಣದ **ಶರಃ** ಬಾಣವು **ಅಭಿದ್ರವತಿ** ನನ್ನ ಎದುರಿಗೆ ಬರುತ್ತಿದೆ **ಹೇ ನಾಥ** ಸ್ವಾಮಿಯೇ **ಮಾಂ** ನನ್ನನ್ನು **ಕಾಮಂ** ಯಥೇಷ್ಟವಾಗಿ ಸುಡಲಿ **ಮೇ ಗರ್ಭಃ** ನನ್ನ ಗರ್ಭವು **ಮಾ ನಿಪಾತ್ಯತಾಂ** ಬೀಳಿಸದಿರಲಿ **ಇತಿ** ಈ ರೀತಿಯಾಗಿ **ಬ್ರುವಂತೀಂ** ಹೇಳುತ್ತಿರುವ ಉತ್ತರೆಯನ್ನು **ಉಪಲೇಭೇ** ನೋಡಿದನು.

ಸೂತ ಉವಾಚ-

**ಉಪಧಾರ್ಯ ವಚಸ್ತಸ್ಯಾಃ ಭಗವಾನ್ ಭಕ್ತವತ್ಸಲಃ ।**
**ಅಪಾಂಡವಮಿದಂ ಕರ್ತುಂ ದ್ರೌಣೇರಸ್ತ್ರಮಬುಧ್ಯತ ॥೧೪॥**

**ಭಕ್ತವತ್ಸಲಃ** ಭಕ್ತರಲ್ಲಿ ವಾತ್ಸಲ್ಯವುಳ್ಳ **ಭಗವಾನ್** ಶ್ರೀಕೃಷ್ಣನು **ತಸ್ಯಾಃ** ಉತ್ತರಾದೇವಿಯ **ವಚಃ** ಮಾತನ್ನು **ಉಪಧಾರ್ಯ** ಕೇಳಿ **ಇದಂ** ಭೂಮಂಡಲವನ್ನು **ಅಪಾಂಡವಂ ಕರ್ತುಂ** ಪಾಂಡವರಿಲ್ಲದಂತೆ ಮಾಡಲು **ಮುಕ್ತಂ** ಬಿಡಲ್ಪಟ್ಟ **ದ್ರೌಣೇಃ ಅಸ್ತ್ರಂ** ಅಶ್ವತ್ಥಾಮಾಚಾರ್ಯರ ಅಸ್ತ್ರವನ್ನು **ಅಬುಧ್ಯತ** ತಿಳಿದನು.

**ತರ್ಹ್ಯೇವಾಥ ಭೃಗುಶ್ರೇಷ್ಠ ಪಾಂಡವಾಃ ಪಂಚಸಾಯಕಾನ್ ।**
**ಆತ್ಮನೋಽಭಿಮುಖಾನ್ ದೀಪ್ತಾನಾಲಕ್ಷ್ಯಾಸ್ತ್ರಾಣ್ಯುಪಾದದುಃ ॥೧೪॥**

**ಹೇ ಭೃಗುಶ್ರೇಷ್ಠ** ಶೌನಕರೇ **ತರ್ಹಿ ಏವ** ಆಗಲೇ **ಆತ್ಮನಃ** ತಮಗೆ **ಅಭಿಮುಖಾನ್** ಎದುರಾಗಿ ಬರುತ್ತಿರುವ **ದೀಪ್ತಾನ್** ಪ್ರಕಾಶಮಾನವಾದ **ಪಂಚಸಾಯಕಾನ್** ಐದು ಬಾಣಗಳನ್ನು **ಆಲಕ್ಷ್ಯ** ನೋಡಿ **ಅಥ** ತಕ್ಷಣದಲ್ಲಿ **ಅಸ್ತ್ರಾಣಿ ಉಪಾದದುಃ** ಅಸ್ತ್ರಗಳನ್ನು ತೆಗೆದು ಕೊಂಡರು.

**ವ್ಯಸನಂ ವೀಕ್ಷ್ಯ ತತ್ತೇಷಾಮನನ್ಯವಿಷಯಾತ್ಮನಾಮ್ ।**
**ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ವಿಭುಃ ॥೧೬॥**

**ಅನನ್ಯವಿಷಯಾತ್ಮನಾಂ** ಮತ್ತೊಬ್ಬರಲ್ಲಿ ಮನಸ್ಸಿಡದಿರುವ **ತೇಷಾಂ** ಆ ಪಾಂಡವರ **ತತ್ ವ್ಯಸನಂ** ಆ ದುಃಖವನ್ನು **ವೀಕ್ಷ್ಯ** ನೋಡಿ **ವಿಭುಃ** ಸಮರ್ಥನಾದ ಶ್ರೀಕೃಷ್ಣನು **ಸ್ವಾಸ್ತ್ರೇಣ ಸುದರ್ಶನೇನ** ತನ್ನ ಅಸ್ತ್ರವಾದ ಸುದರ್ಶನದಿಂದ **ಸ್ವಾನಾಂ** ತನ್ನ ಭಕ್ತರಾದ ಪಾಂಡವರ **ರಕ್ಷಾಂ** ರಕ್ಷಣೆಯನ್ನು **ವ್ಯಧಾತ್** ಮಾಡಿದನು.

**ಅಂತಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।**
**ಸ್ವಮಾಯಯಾವೃಣೋದ್ಗರ್ಭಂ ವೈರಾಟ್ಯಾಃ ಕುರುತಂತವೇ ॥೧೭॥**

**ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಅಂತಸ್ಥಃ** ಹೃದಯದಲ್ಲಿರುವ **ಆತ್ಮಾ** ಆದಾನಾದಿ ಕರ್ತೃವಾದ **ಯೋಗೇಶ್ವರಃ** ಸಹಜವಾದ ಅಣಿಮಾದಿ ಅಷ್ಟೈಶ್ವರ್ಯಗಳುಳ್ಳ ಅಥವಾ ಎಲ್ಲ ವಿಧವಾದ ಉಪಾಯಗಳಿಗೆ ಸ್ವಾಮಿಯಾದ **ಹರಿಃ** ಸಂಸಾರ ದುಃಖವನ್ನು ಹರಣಮಾಡುವ ಸ್ವಭಾವವುಳ್ಳ ಶ್ರೀಕೃಷ್ಣನು **ಕುರುತಂತವೇ** ಕೌರವರ ಸಂತತಿಯು ವಿಚ್ಛೇದವಾಗದಿರಲು **ವೈರಾಟ್ಯಾಃ** ವಿರಾಟರಾಜನ ಮಗಳಾದ ಉತ್ತರೆಯ **ಗರ್ಭಂ** ಗರ್ಭವನ್ನು **ಸ್ವಮಾಯಯಾ** ತನ್ನ ಸಾಮರ್ಥ್ಯದಿಂದ **ಆವೃಣೋತ್** ಬ್ರಹ್ಮಾಸ್ತ್ರವು ಸುಡದಂತೆ ಆವರಿಸಿದನು.

**ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ ।**
**ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ ॥೧೮॥**

**ಹೇ ಭೃಗೂದ್ವಹ** ಶೌನಕರೇ **ಬ್ರಹ್ಮಶಿರಃ ಅಸ್ತ್ರಂ** ಬ್ರಹ್ಮಾಸ್ತ್ರವು **ಅಮೋಘಂ** ವ್ಯರ್ಥವಾಗದಿರುವುದು **ಅಪ್ರತಿಕ್ರಿಯಂ ಚ** ಪ್ರತೀಕಾರರಹಿತವಾದುದು **ತಥಾ ಅಪಿ**

ಆದರೂ **ವೈಷ್ಣವಂ** ವಿಷ್ಣುಸಂಬಂಧಿಯಾದ ಸುದರ್ಶನ ಚಕ್ರದ **ತೇಜಃ** ತೇಜಸ್ಸನ್ನು **ಆಸಾದ್ಯ** ಹೊಂದಿ **ಸಮಶಾಮ್ಯದ್** ಚೆನ್ನಾಗಿ ಶಾಂತವಾಯಿತು.

**ವಿಶೇಷ :-** ಶ್ರೀಕೃಷ್ಣನ ಸನ್ನಿಧಾನವಿರುವ ವರೆಗೆ ಅಡಗಿರುವ ಶ್ರೀಕೃಷ್ಣನ ಪ್ರಯಾಣಸಮಯವನ್ನು ನೋಡಿ ಪ್ರಜ್ವಲಿಸುತ್ತಿರುವ ಬ್ರಹ್ಮಾಸ್ತ್ರವನ್ನು ತನ್ನ ಸುದರ್ಶನ ಚಕ್ರದಿಂದ ಶಾಂತಗೊಳಿಸಿದನು ಎಂದು ಭಾವ.

**ಮಾ ಮಂಸ್ಥಾ ಹ್ಯೇತದಾಶ್ಚರ್ಯಂ ಸರ್ವಾಶ್ಚರ್ಯಮಯೇಽಚ್ಯುತೇ ।**
**ಯ ಇದಂ ಮಾಯಯಾ ದೇವ್ಯಾ ಸೃಜತ್ಯವತಿ ಹಂತ್ಯಜಃ ॥೧೯॥**

**ಯಃ** ಯಾವನು **ದೇವ್ಯಾ** ದೇದೀಪ್ಯಮಾನವಾದ **ಮಾಯಯಾ** ಇಚ್ಛೆಯಿಂದ **ಇದಂ** ಬ್ರಹ್ಮಾದಿಜಗತ್ತನ್ನು **ಸೃಜತಿ** ಸೃಷ್ಟಿಸುವನು **ಅವತಿ** ರಕ್ಷಿಸುವನು **ಹಂತಿ** ಸಂಹರಿಸುವನು **ಅಜಃ** ಸ್ವಯಂ ಜನ್ಮರಹಿತನು **ತಸ್ಮಿನ್** ಅಂತಹ **ಸರ್ವಾಶ್ಚರ್ಯಮಯೇ** ಎಲ್ಲರಿಗೂ ಆಶ್ಚರ್ಯಸ್ವರೂಪನಾದ **ಅಚ್ಯುತೇ** ನಾಶರಹಿತನಾದ ಶ್ರೀಹರಿಯಲ್ಲಿ **ಏತತ್** ಬ್ರಹ್ಮಾಸ್ತ್ರವನ್ನು ಉಪಶಮನ ಮಾಡುವದು **ಆಶ್ಚರ್ಯಂ** ಆಶ್ಚರ್ಯವೆಂದು **ಮಾ ಮಂಸ್ಥಾಃ** ಚಿಂತಿಸಬೇಡ.

**ವಿಶೇಷ -** ಹುಟ್ಟಿದ ನಂತರ ಬ್ರಹ್ಮಾಸ್ತ್ರದಿಂದ ಮೃತನಾದ ಮಗನನ್ನು ಅಶ್ವಮೇಧಕ್ಕಾಗಿ ಶ್ರೀಕೃಷ್ಣನು ಮತ್ತೆ ಬಂದು ರಕ್ಷಿಸಿದನು. ಎಂಬ ಕಥೆಯನ್ನು ಇಲ್ಲಿ ಇಟ್ಟುಕೊಳ್ಳಬೇಕು. ಇಲ್ಲದೇ ಹೋದರೇ ಮುಂದೆ ಈ ಪ್ರಸಂಗದ ಅನುವಾದವು ಕೂಡುವದಿಲ್ಲ.

**ಬ್ರಹ್ಮತೇಜೋ ವಿನಿರ್ಮುಕ್ತೈರಾತ್ಮಜೈಃ ಸಹ ಕೃಷ್ಣಯಾ ।**
**ಪ್ರಯಾಣಾಭಿಮುಖಂ ಕೃಷ್ಣಮಿದಮಾಹ ಪೃಥಾ ಸತೀ ॥೨೦॥**

**ಬ್ರಹ್ಮತೇಜೋವಿನಿರ್ಮುಕ್ತೈಃ** ಬ್ರಹ್ಮಾಸ್ತ್ರದಿಂದ ಮೋಚಿತರಾದ **ಆತ್ಮಜೈಃ** ಯುಧಿಷ್ಠಿರಾದಿಗಳಿಂದ ಮತ್ತು **ಕೃಷ್ಣಯಾ ಸಹ** ದ್ರೌಪದಿಯಿಂದ ಸಹಿತಳಾದ **ಸತೀ** ಸಾಧ್ವಿಯಾದ **ಪೃಥಾ** ಕುಂತಿಯು **ಪ್ರಯಾಣಾಭಿಮುಖಂ** ಹೊರಡಲು ಸಿದ್ಧನಾದ **ಕೃಷ್ಣಂ** ಶ್ರೀಕೃಷ್ಣನನ್ನು ಕುರಿತು **ಇದಂ ಆಹ** ಮುಂದೆ ಹೇಳುವ ಮಾತನ್ನು ಹೇಳಿದಳು.

ಪೃಥಾ ಉವಾಚ -

**ನಮಸ್ಯೇ ಪುರುಷಂ ತ್ವಾದ್ಯಮೀಶ್ವರಂ ಪ್ರಕೃತೇಃ ಪರಮ್ ।**
**ಅಲಕ್ಷ್ಯಂ ಸರ್ವಭಾವಾನಾಮಂತರ್ಬಹಿರಪಿ ಧ್ರುವಮ್ ॥೨೦॥**

**ಆದ್ಯಂ** ಎಲ್ಲರಿಗಿಂತಲೂ ಮೊದಲಿಗನಾದ **ಪ್ರಕೃತೇಃ ಪರಂ** ಪ್ರಕೃತಿಯನ್ನು ಮೀರಿದ **ಸರ್ವಭಾವಾನಾಂ ಅಂತಃ ಬಹಿಃ ಅಪಿ** ಒಳಗೂ ಹೊರಗೂ ಕೂಡ **ಧ್ರುವಂ** ನಿತ್ಯವಾಗಿರುವ ಆದರೂ **ಅಲಕ್ಷ್ಯಂ** ಅಪರೋಕ್ಷವಾಗಿ ತಿಳಿಯಲು ಅಶಕ್ಯನಾದ **ತ್ವಾ** ನಿನ್ನನ್ನು **ನಮಸ್ಯೇ** ಸಮಸ್ಕರಿಸುತ್ತೇನೆ.

**ವಿಶೇಷ :-** ಸರ್ವದಾ ಸ್ಥಿತಂ ಎಂದು ಹೇಳಬೇಕಾದಲ್ಲಿ ಧ್ರುವಂ ಎಂದು ಹೇಳಿದ್ದರಿಂದ ಭೂತನಾಶವಾದರೂ ನಿನಗೆ ನಾಶವಿಲ್ಲ ಎಂದು ಸೂಚಿಸಲು.

ನಿನಗೆ ನಮಸ್ಕಾರವೆಂದು ಪ್ರತ್ಯಕ್ಷವಾಗಿ ಹೇಳಿದವನಿಗೆ ಅಪ್ರತ್ಯಕ್ಷತ್ವವು ಹೇಗೆ ಎಂದು ಸಂಶಯ ಬಂದರೆ ಉತ್ತರಿಸುವರು

**ಮಾಯಾಜವನಿಕಾಚ್ಛನ್ನೋ ಮಯಾಽಧೋಕ್ಷಜ ಮರ್ತ್ಯಯಾ ।**
**ನ ಲಕ್ಷ್ಯಸೇ ಮೂಢದೃಶಾ ನಟೋ ನಾಟ್ಯಚರೋ ಯಥಾ ॥೨೨॥**

**ಯಥಾ** ಹೇಗೆ **ನಾಟ್ಯಚರಃ** ನಟನೆಯನ್ನು ಮಾಡುವ **ನಟಃ** ನರ್ತಕನು ಭರತಶಾಸ್ತ್ರವನ್ನು ತಿಳಿಯದವನಿಂದ ನೋಡಲ್ಪಟ್ಟರೂ ಅವನ ಅಭಿನಯವಿಶೇಷಗಳಿಂದ ಕಥೆಯನ್ನು ತಿಳಿಯುವದಿಲ್ಲವೋ ಹಾಗೆ **ಮಾಯಾಯವನಿಕಾಚ್ಛನ್ನಃ** ಜೀವನಲ್ಲಿರುವ ಪರಮಾಚ್ಛಾದಿಕಾ ಎಂಬ ಮಾಯಾರೂಪದಿಂದ ಆವರಿಸಲ್ಪಟ್ಟವನಾಗಿ **ಹೇ ಅಧೋಕ್ಷಜ** ಇಂದ್ರಿಯಜನ್ಯ ಜ್ಞಾನಕ್ಕೆ ವಿಷಯನಾಗದವನೇ **ಮೂಢದೃಶಾ** ದೇಹಾದ್ಯಭಿಮಾನವಿರುವದರಿಂದ ಮತ್ತು ಮನುಷ್ಯಳಾದ **ಮಯಾ** ನನ್ನಿಂದ **ನ ಲಕ್ಷ್ಯಸೇ** ಅವತಾರರೂಪವು ಕಂಡರೂ ಅದರಲ್ಲಿರುವ ಸರ್ವಭೂತಾಂತಸ್ಥಿತತ್ವ ಮೊದಲಾದ ಮಾಹಾತ್ಮ್ಯವು ನಿನ್ನ ಅನುಗ್ರಹವಿಲ್ಲದೇ ಅಪರೋಕ್ಷೀಕರಿಸಲು ಆಗುವದಿಲ್ಲ ಎಂದು ಭಾವ.

ಭಕ್ತಿಯಿಂದ ನಾನು ತಿಳಿಯಲು ಸಾಧ್ಯ ಎಂಬುದನ್ನು ಹೇಳುವರು

**ತಥಾ ಪರಮಹಂಸಾನಾಂ ಮುನೀನಾಮಮಲಾತ್ಮನಾಮ್ ।**
**ಭಕ್ತಿಯೋಗವಿಧಾನಾರ್ಥಂ ಕಥಂ ಪಶ್ಯೇಮಹಿ ಸ್ತ್ರಿಯಃ ॥೨೩॥**

**ಅಮಲಾತ್ಮನಾಂ** ದೇಹಾದ್ಯಭಿಮಾನರಹಿತವಾದ ಮನಸ್ಸುಳ್ಳ **ಮುನೀನಾಂ** ಧ್ಯಾನಶೀಲರಾದ **ಪರಮಹಂಸಾನಾಂ** ಸನಕಾದಿಗಳಿಗೆ **ಭಕ್ತಿಯೋಗವಿಧಾನಾರ್ಥಂ** ಭಕ್ತಿರೂಪವಾದ ಉಪಾಯಕ್ಕೆ ವಿಷಯನಾದ **ತ್ವಾಂ** ನಿನ್ನನ್ನು **ಸ್ತ್ರಿಯಃ** ಹೆಣ್ಣುಮಕ್ಕಳಾದ ನಾವು **ಕಥಂ ಪಶ್ಯೇಮಹಿ** ಹೇಗೆ ನೋಡಬಲ್ಲೆವು ರಾಗಾದಿದೋಷಯುಕ್ತರಾದ ನಾವು ನಿನ್ನನ್ನು ನೋಡಲು ಸಾಧ್ಯವಿಲ್ಲ.

*ಭಾಗವತತಾತ್ಪರ್ಯ-*

ಸನಕಾದಿಮುನಿಗಳ ಭಕ್ತ್ಯುಪಾಯವಿಧಾನಮಾಡಲು ನಾವು ಹೇಗೆ ನೋಡುವೆವು ಎಂದು ಅಸಂಗತವಾಗಿ ತೋರುವದು. ಅದಕ್ಕಾಗಿ ಅರ್ಥಶಬ್ದದ ವಿವಕ್ಷಿತಾರ್ಥವನ್ನು ತಿಳಿಸುವರು.

**ಭಕ್ತಿಯೋಗವಿಧಾನವಿಷಯಮ್ ।**

ಅರ್ಥಶಬ್ದವು ವಿಷಯಪರವೆಂದು ಭಾವ. ಭಕ್ತಿಯೆಂಬ ಉಪಾಯಕ್ಕೆ ವಿಷಯನಾದ. ಅಂದರೆ ಭಕ್ತಿಗೆ ವಿಷಯನಾದ ಎಂದರ್ಥ.

ಜ್ಞಾನಭಕ್ತಿಗಳನ್ನು ಮಾಡುವದು ಅಶಕ್ಯವೆಂದು ಹೇಳಿ, ನಮಸ್ಕರಿಸುವದು, ಸ್ತುತಿಸುವದು ಇವೇ ನಮ್ಮ ಪುರುಷಾರ್ಥಸಾಧನವೆಂದು ಈ ಅಭಿಪ್ರಾಯದಿಂದ ಕುಂತಿಯು ಸ್ತುತಿಸುವಳು.

**ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।**
**ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥೨೪॥**

**ಕೃಷ್ಣಾಯ** ಮೋಹವನ್ನು ನಾಶಮಾಡುವ ಅಥವಾ ನೈದಿಲೆಯಂತೆ ಕಪ್ಪಾದ ವರ್ಣವುಳ್ಳ **ವಾಸುದೇವಾಯ** ವಸುದೇವನ ಮಗನಾದ ಅಥವಾ ಜಗತ್ತನ್ನು ಮರೆಮಾಚಿ ಪ್ರಕಾಶಗೊಳ್ಳುವ ಅಥವಾ ದೈತ್ಯರನ್ನು ನಾಶಪಡಿಸುವ ಕ್ರೀಡಾದಿಗುಣಗಳಿಂದ ಯುಕ್ತನಾದ **ದೇವಕೀನಂದನಾಯ** ಲಕ್ಷ್ಮೀದೇವಿಯನ್ನು

ಸಂತೋಷಪಡಿಸುವ **ನಂದಗೋಪಕುಮಾರಾಯ** ನಂದಗೋಪ ಎಂಬ ರಾಜನಿಗೆ ಕುಷ್ಠರೋಗವನ್ನು ಪರಿಹರಿಸುವ ಅಥವಾ ನಂದಗೋಪನ ಸಾಕು ಮಗನಾದ **ಗೋವಿಂದಾಯ** ವೇದವೇದ್ಯನಾದ ಅಥವಾ ಗೋಸಂಪತ್ತುಳ್ಳ ಶ್ರೀಕೃಷ್ಣನಿಗೆ **ನಮೋ ನಮಃ** ನಮಸ್ಕಾರಗಳು.

**ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।**
**ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥೨೨॥**

**ಪಂಕಜನಾಭಾಯ** ನಾಭಿಯಲ್ಲಿ ಕಮಲವುಳ್ಳ ಅಥವಾ ಕೆಸರಿನಲ್ಲಿ ಹುಟ್ಟಿದ ಕಮಲವನ್ನು ಮೀರಿಸುವ ಕಾಂತಿಯುಳ್ಳ **ತೇ** ನಿನಗೆ **ನಮಃ** ನಮಸ್ಕಾರವು **ಪಂಕಜಮಾಲಿನೇ** ಕಮಲದ ಹಾರವನ್ನು ಧರಿಸಿದ **ತೇ** ನಿನಗೆ **ನಮಃ** ನಮಸ್ಕಾರವು **ಪಂಕಜನೇತ್ರಾಯ** ಕಮಲದಂತೆ ಕಣ್ಣುಗಳುಳ್ಳ **ತೇ** ನಿನಗೆ **ನಮಃ** ನಮಸ್ಕಾರವು **ಪಂಕಜಾಂಘ್ರಯೇ ತೇ** ಕಮಲದಂತೆ ಕೋಮಲವಾದ ಪಾದವುಳ್ಳ ನಿನಗೆ ಶ್ರೀಕೃಷ್ಣನಿಗೆ **ನಮಃ** ನಮಸ್ಕಾರವು.

ಶ್ರೀಕೃಷ್ಣನು ಮಾಡಿದ ಉಪಕಾರವನ್ನು ಎರಡು ಶ್ಲೋಕಗಳಿಂದ ಸ್ಮರಿಸುವಳು.

**ಯಥಾ ಹೃಷೀಕೇಶ ಖಲೇನ ದೇವಕೀ**
**ಕಂಸೇನ ರುದ್ಧಾऽತಿಚಿರಂ ಶುಚಾರ್ಪಿತಾ ।**
**ವಿಮೋಚಿತಾಹಂ ಚ ಸಹಾತ್ಮಜಾ ವಿಭೋ**
**ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ॥೨೬॥**

**ಹೇ ಹೃಷೀಕೇಶ** ಇಂದ್ರಿಯಗಳಿಗೆ ಸ್ವಾಮಿಯೇ **ಖಲೇನ** ದುಷ್ಟನಾದ **ಕಂಸೇನ** ಕಂಸನಿಂದ **ಅತಿಚಿರಂ** ಬಹುಕಾಲ ಕಾರಾಗೃಹದಲ್ಲಿ **ರುದ್ಧಾ** ಬಂಧಿಸಲ್ಪಟ್ಟ **ಶುಚಾರ್ಪಿತಾ** ದುಃಖಪೀಡಿತಳಾದ **ದೇವಕೀ** ದೇವಕಿಯು **ಯಥಾ** ಹೇಗೆ **ವಿಮೋಚಿತಾ** ಬಂಧಮುಕ್ತಳಾದಳೋ **ತಥಾ** ಹಾಗೆಯೇ **ಹೇ ವಿಭೋ** ಸಮರ್ಥನಾದ ಶ್ರೀಕೃಷ್ಣನೇ **ಸಹಾತ್ಮಜಾ** ಮಕ್ಕಳಿಂದ ಸಹಿತಳಾದ **ಅಹಂ ಚ** ನಾನು **ನಾಥೇನ ತ್ವಯಾ ಏವ** ಸ್ವಾಮಿಯಾದ ನಿನ್ನಿಂದಲೇ **ವಿಪದ್ಗಣಾತ್** ಆಪತ್ತುಗಳ ಸಮೂಹದಿಂದ **ಮುಹುಃ** ಮತ್ತೆ ಮತ್ತೆ **ವಿಮೋಚಿತಾ** ಬಿಡಿಸಲ್ಪಟ್ಟೆನು.

ಅನೇಕ ಆಪತ್ತುಗಳ ವಿವರಣೆಯನ್ನು ಕೊಡುವಳು.

**ವಿಷಾನ್ಮಹಾಗ್ನೇಃ ಪುರುಷಾದದಂಶನಾ-**
**ದಸತ್ಸಭಾಯಾ ವನವಾಸಕೃಚ್ಛ್ರತಃ ।**
**ಮೃಧೇ ಮೃಧೇಽನೇಕಮಹಾರಥಾಸ್ತ್ರತೋ**
**ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾಃ ॥೨೪॥**

**ಹೇ ಹರೇ** ಶ್ರೀಕೃಷ್ಣನೇ **ವಯಂ** ನಾವು **ವಿಷಾತ್** ಭೀಮನಿಗೆ ಕೊಟ್ಟ ಕಾಲಕೂಟ ವಿಷದಿಂದ **ಅಗ್ನೇಃ** ಅರಗಿನಮನೆಗೆ ಇಟ್ಟ ಬೆಂಕಿಯಿಂದ **ಪುರುಷಾದದಂಶನಾತ್** ಹಿಡಿಂಬ, ಬಕಾಸುರ ಮೊದಲಾದವರ ಭಕ್ಷಣೆಯಿಂದ **ಅಸತ್ಸಭಾಯಾಃ** ದ್ರೌಪದಿಯ ಕೇಶಗ್ರಹಣಾದಿಗಳನ್ನು ಮಾಡುವ ದುಷ್ಟರಾದ ದುರ್ಯೋಧನಾದಿಗಳ ಸಭೆಯಿಂದ **ವನವಾಸಕೃಚ್ಛ್ರತಃ** ವನವಾಸದ ಸಂಕಟದಿಂದ **ಮೃಧೇ ಮೃಧೇ** ಪ್ರತಿಯೊಂದು ಯುದ್ಧಗಳಲ್ಲಿ **ಮಹಾರಥಾಸ್ತ್ರತಃ** ಮಹಾರಥಿಕರ ನಾಗಾದಿ ಅಸ್ತ್ರಗಳಿಂದ **ಚ** ಮತ್ತು **ದ್ರೌಣ್ಯಸ್ತ್ರತಃ** ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದಲೂ **ಅಭಿರಕ್ಷಿತಾಃ ಸ್ಮ** ರಕ್ಷಿಸಲ್ಪಟ್ಟಿದ್ದೇವೆ.

ನಿನ್ನ ಸ್ಮರಣಕ್ಕೆ ವಿರೋಧಿಯಾದ ಸಂಪತ್ತಿನ ಪರಂಪರೆಗಿಂತಲೂ ನಿನ್ನ ದರ್ಶನವನ್ನುಂಟುಮಾಡುವ ವಿಪತ್ತಿನ ಪರಂಪರೆಯು ಶ್ರೇಷ್ಠವಾದುದು ಆದ್ದರಿಂದ ವಿಪತ್ತುಗಳು ಬರಲಿ ಎಂದು ವಿಜ್ಞಾಪಿಸುವಳು

**ವಿಪದಃ ಸಂತು ನಃ ಶಶ್ವತ್ತತ್ರ ತತ್ರ ಜಗತ್ಪತೇ ।**
**ಭವತೋ ದರ್ಶನಂ ಯತ್ ಸ್ಯಾದಪುನರ್ಭವದರ್ಶನಮ್ ॥೨೮॥**

**ಯತ್** ಯಾವ ವಿಪತ್ತುಗಳಲ್ಲಿ **ಅಪುನರ್ಭವದರ್ಶನಂ** ಮೋಕ್ಷವನ್ನು ತಂದುಕೊಡುವ **ಭವತಃ ದರ್ಶನಂ** ನಿನ್ನ ದರ್ಶನವು **ಸ್ಯಾತ್** ಆಗುವುದೋ **ಹೇ ಜಗತ್ಪತೇ** ಜಗತ್ತಿಗೆ ಸ್ವಾಮಿಯಾದ ಶ್ರೀಕೃಷ್ಣನೇ **ನಃ** ನಮಗೆ **ತತ್ರ ತತ್ರ** ಆ ಸಾಂಸಾರಿಕವ್ಯಾಪಾರಗಳಲ್ಲಿ **ವಿಪದಃ** ಆಪತ್ತುಗಳು **ಶಶ್ವತ್** ಯಾವಾಗಲೂ **ಸಂತು** ಇರಲಿ.

*ಭಾಗವತತಾತ್ಪರ್ಯ-*

**ಅಪುನರ್ಭವದರ್ಶನಂ** ಎಂಬುವಲ್ಲಿ ಷಷ್ಠೀತತ್ಪುರುಷ ಸಮಾಸವನ್ನು ಮಾಡಿದರೆ ಅಸಂಗತವಾಗುವುದು ಆದಕ್ಕಾಗಿ ತಾತ್ಪರ್ಯವನ್ನು ಹೇಳುವರು.

**ಅಪುನರ್ಭವಂ ದರ್ಶಯತಿ ।**

ಮೋಕ್ಷವನ್ನು ಸಂಪಾದಿಸಿ ಕೊಡುವ ಎಂದು ಅರ್ಥ.

ಸಂಪತ್ತಿಗಿಂತಲೂ ಆಪತ್ತು ಶ್ರೇಯಸ್ಕರವೇಕೆ ಎಂಬುದನ್ನು ಹೇಳುವಳು.

**ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।**
**ನಾರ್ಹ ಇತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥೨೯॥**

**ಜನ್ಮೈಶ್ವರ್ಯಶ್ರುತಶ್ರೀಭಿಃ** ಸತ್ಕುಲದಲ್ಲಿ ಜನ್ಮ, ಸ್ವಾಮಿತ್ವ, ಶಾಸ್ತ್ರಶ್ರವಣದಿಂದ ಬಂದ ವಿದ್ಯೆ, ಧನಸಂಪತ್ತು ಇವುಗಳಿಂದ **ಏಧಮಾನಮದಃ** ಬೆಳೆಯುತ್ತಿರುವ ಗರ್ವವುಳ್ಳ **ಪುಮಾನ್** ಪುರುಷನು **ಅಕಿಂಚನಗೋಚರಂ** ಸತ್ಕುಲಾದಿಗಳಲ್ಲಿ ಹುಟ್ಟಿದರೂ ಅಹಂಕಾರವಿಲ್ಲದಿರುವ ಪರಮಹಂಸರಿಂದ ತಿಳಿಯಲು ಯೋಗ್ಯನಾದ **ತ್ವಾಂ** ನಿನ್ನನ್ನು **ಇತಿ ಅಭಿಧಾತುಂ** 'ಕೃಷ್ಣಾಯ ವಾಸುದೇವಾಯ' ಇತ್ಯಾದಿಗಳನ್ನು ಹೇಳಲು ಕೂಡ **ನ ಅರ್ಹಃ** ಸಮರ್ಥನಾಗಲಾರನು. ಅಂದ ಮೇಲೆ ಸ್ಮರಿಸಲು ನೋಡಲು ಯೋಗ್ಯನಲ್ಲವೆಂದು ಏನು ಹೇಳುವುದು.

ಭಕ್ತ್ಯತಿಶಯದಿಂದ ಮತ್ತೆ ಶ್ರೀಕೃಷ್ಣನನ್ನು ಕುಂತಿಯು ನಮಸ್ಕರಿಸುವಳು.

**ನಮೋಽಕಿಂಚನವಿತ್ತಾಯ ನಿವೃತ್ತಗುಣವೃತ್ತಯೇ ।**
**ಆತ್ಮಾರಾಮಾಯ ಶಾಂತಾಯ ಕೈವಲ್ಯಪತಯೇ ನಮಃ ॥೩೦॥**

**ಅಕಿಂಚನವಿತ್ತಾಯ** ಭಕ್ತರೇ ಧನವಾಗಿಯುಳ್ಳ **ನಿವೃತ್ತಗುಣವೃತ್ತಯೇ** ಸತ್ವಾದಿಗುಣಗಳ ಕಾರ್ಯವಾದ ಜಾಗ್ರದಾದಿಗಳಿಲ್ಲದೇ ಇರುವ **ಆತ್ಮಾರಾಮಾಯ** ಸ್ವರಮಣನಾದ(ಆತ್ಮನಿ ಆರಮತೇ ಇತಿ ಆತ್ಮಾರಾಮಃ ತಸ್ಮೈ)ಚೇತನರಿಗೆ ಕ್ರೀಡಿಸಲು ಉದ್ಯಾನವಾದ **ಶಾಂತಾಯ** ಸುಖಪೂರ್ಣನಾದ **ಕೈವಲ್ಯಪತಯೇ** ಮುಕ್ತರಿಗೆ ಅಧಿಪತಿಯಾದ ಶ್ರೀಕೃಷ್ಣನಿಗೆ **ನಮೋ ನಮಃ** ನಮಸ್ಕಾರವು.

ನೀನು ವಸುದೇವನ ಮಗನಲ್ಲ ಎಂಬ ಅಭಿಪ್ರಾಯದಿಂದ ಹೇಳುವಳು

**ಮನ್ಯೇ ತ್ವಾಂ ಕಾಲಮೀಶಾನಮನಾದಿನಿಧನಂ ಪರಮ್ ।**
**ಸಮಂ ಚರಂತಂ ಸರ್ವತ್ರ ಭೂತಾನಾಂ ಯನ್ಮಿಥಃ ಕಲಿಃ ॥೩೧॥**

**ತ್ವಾಂ** ನಿನ್ನನ್ನು **ಕಾಲಂ** ಸಂಹಾರಕನೆಂದು **ಈಶಾನಂ** ಜಗತ್ಪ್ರೇರಕನೆಂದು **ಅನಾದಿನಿಧನಂ** ಜನ್ಮಮರಣಗಳಿಲ್ಲದವನೆಂದು ಅಥವಾ ಮುಖ್ಯಪ್ರಾಣನಿಗೆ ಜನ್ಮ ಮತ್ತು ಲಯಕ್ಕೆ ಕಾರಣನು **ಪರಂ** ಲೋಕವಿಲಕ್ಷಣನೆಂದು **ಅಹಂ ಮನ್ಯೇ** ನಾನು ತಿಳಿದಿದ್ದೇನೆ. **ಸರ್ವತ್ರ ಸಮಂ ಚರಂತಂ** ದೇವಾಸುರಮನುಷ್ಯರಲ್ಲಿ ಅವರ ಯೋಗ್ಯತಾನುಸಾರವಾಗಿ ಇರುವವನು ಎಂದು **ಮನ್ಯೇ** ತಿಳಿಯುತ್ತೇನೆ **ಯತ್** ಯಾವ ಕಾರಣ **ಭೂತಾನಾಂ** ಲೋಕದಲ್ಲಿ ಎಲ್ಲ ಪ್ರಾಣಿಗಳಿಗೆ **ಮಿಥಃ** ಪರಸ್ಪರವಾಗಿ **ಕಲಿಃ** ಜಗಳವು ಅಂದರೆ ಯೋಗ್ಯತಾನುಸಾರೇಣ ಸಮತ್ವವಿಲ್ಲವೆಂದು ಅರ್ಥ. ಅದ್ದರಿಂದಲೇ ನೀನು ಲೋಕವಿಲಕ್ಷಣನೆಂದು ಭಾವ. **ಯತ್** ಯಾವನಿಂದ **ಭೂತಾನಾಂ** ಕೌರವಪಾಂಡವರಿಗೆ **ಮಿಥಃ** ಪರಸ್ಪರವಾಗಿ **ಕಲಿಃ** ಜಗಳವು ಉಂಟಾಯಿತೋ ಅಂತಹ ನಿನ್ನನ್ನು ನಾನು ತಿಳಿಯುವೆ. ಎಂದು ಈ ರೀತಿಯಾಗಿಯೂ ಅರ್ಥೈಸಿರುವರು.

*ಭಾಗವತತಾತ್ಪರ್ಯ-*

ಎಲ್ಲರ ವಿಷಯದಲ್ಲಿ ಒಂದೇ ರೀತಿಯಾಗಿ ನಡೆದುಕೊಳ್ಳುವನು ಎಂದರ್ಥ ತೋರುವದು. ಆ ಪ್ರತೀತಿಯನ್ನು ಹೋಗಲಾಡಿಸಲು ತಾತ್ಪರ್ಯವನ್ನು ಹೇಳುವರು.

**ತತ್ತದ್ಯೋಗ್ಯತಯಾ ಸಮತ್ವಮ್ ।**

ಅವರವರ ಯೋಗ್ಯತಾನುಗುಣವಾಗಿಯೇ ಭಗವಂತನು ಫಲವನ್ನು ಕೊಡುವವನು. ಯೋಗ್ಯತೆಯನ್ನು ಮೀರಿ ಫಲವನ್ನು ಕೊಡುವುದಿಲ್ಲ. ಆದ್ದರಿಂದ ಸಮನು ಎಂದು ಭಾವ.

ಯೋಗ್ಯತಾನುಸಾರವಾಗಿ ನನಗೆ ಸರ್ವತ್ರ ಸಮತೆ ಇದ್ದರೂ ಕೂಡ ಜನರು ಪಾಂಡವರಲ್ಲಿ ಸ್ನೇಹ ಯಾಕೆ, ದುರ್ಯೋಧನಾದಿಗಳಲ್ಲಿ ಸ್ನೇಹವಿಲ್ಲ ಯಾಕೆ ಆದ್ದರಿಂದ ನಾನು ವಿಷಮನೆಂದು ಹೇಳುತ್ತಾರೆ ಎಂದರೆ ನೀನು ಮಾಡಲು ಇಚ್ಛಿಸಿದ್ದನ್ನು ತಿಳಿಯದಿರುವದರಿಂದ ಅವರು ನಿನ್ನಲ್ಲಿ ವಿಷಮಬುದ್ಧಿಯನ್ನು ಮಾಡುವರು. ಎಂದು ಹೇಳುವಳು.

**ನ ವೇದ ಕಶ್ಚಿದ್ ಭಗವನ್ ಚಿಕೀರ್ಷಿತಂ**<br>
**ತವೇಹಮಾನಸ್ಯ ನೃಣಾಂ ವಿಡಂಬನಮ್ ।**<br>
**ನ ಯಸ್ಯ ಕಶ್ಚಿದ್ದಯಿತೋಽಸ್ತಿ ಕರ್ಹಿಚಿದ್**<br>
**ದ್ವೇಷ್ಯಶ್ಚ ಯಸ್ಮಿನ್ ವಿಷಮಾ ಮತಿರ್ನೃಣಾಮ್ ॥೩೨॥**

**ಕಶ್ಚಿತ್ ಯಸ್ಯ** ಯಾವ ನಿನಗೆ **ಕರ್ಹಿಚಿತ್** ಯಾವ ಕಾಲದಲ್ಲಿಯೂ **ಕಶ್ಚಿತ್** ಯಾವನು ಕೂಡ **ದಯಿತಃ ನ ಅಸ್ತಿ** ಯೋಗ್ಯತೆಯನ್ನು ಮೀರಿ ಪ್ರಿಯನಾದವನು ಇಲ್ಲ **ಕಶ್ಚಿತ್** ಯಾವನೊಬ್ಬನು **ದ್ವೇಷ್ಯಶ್ಚ ನ ಅಸ್ತಿ** ಯೋಗ್ಯತೆಯನ್ನು ಮೀರಿ ದ್ವೇಷಿಸುವವನು ಇಲ್ಲ ಹೀಗಿದ್ದರೂ **ಯಸ್ಮಿನ್** ಯಾವ ನಿನ್ನ ವಿಷಯದಲ್ಲಿ **ನೃಣಾಂ** ಅಸುರಸ್ವಭಾವದವರಾದ ಜನರಿಗೆ **ವಿಷಮಾ ಮತಿಃ** ಅರ್ಜುನನಿಗೆ ಅನುಗ್ರಹ ಮಾಡಿ ದುರ್ಯೋಧನನನ್ನು ದ್ವೇಷಿಸುತ್ತಾನೆ ಎಂಬ ಬುದ್ಧಿಯು **ಹೇ ಭಗವನ್** ಹೇ ಶ್ರೀಕೃಷ್ಣನೇ **ಕಶ್ಚಿತ್** ಒಬ್ಬನೂ **ನೃಣಾಂ ವಿಡಂಬನಂ ಈಹಮಾನಸ್ಯ ತವ** ಲೋಕಾನುಕರಣೆ ಮಾಡುವ ನಿನ್ನ **ಚಿಕೀರ್ಷಿತಂ** ಮಾಡಲು ಇಷ್ಟವಾದ ಕಾರ್ಯವನ್ನು **ಕಶ್ಚಿತ್** ಯಾವನೂ ಕೂಡ **ನ ವೇದ** ತಿಳಿದಿಲ್ಲ.

**ವಿಶೇಷ-** ನೀನು ಲೋಕಾನುಕರಣೆ ಮಾಡುವದರಿಂದ ಇವನು ನಮ್ಮ ಹಾಗೆಯೇ ಒಬ್ಬ ಎಂದು ತಿಳಿದು ನಿನ್ನಲ್ಲಿ ವೈಷಮ್ಯ ಬುದ್ಧಿಯನ್ನು ಮಾಡುವರು ಎಂದು ಭಾವ.

ಲೋಕಾನುಕರಣೆಯನ್ನು ವಿವರಿಸುವಳು

**ಜನ್ಮಕರ್ಮ ಚ ವಿಶ್ವಾತ್ಮನ್ನಜಸ್ಯಾಕರ್ತುರಾತ್ಮನಃ ।**
**ತಿರ್ಯಙ್ನೃಪಶುಯಾದಸ್ಸು ತದತ್ಯಂತವಿಡಂಬನಮ್ ॥೩೩॥**

**ಹೇ ವಿಶ್ವಾತ್ಮನ್** ಸರ್ವಾಂತರ್ಯಾಮಿಯೇ **ಅಜಸ್ಯ** ಉತ್ಪತ್ತಿರಹಿತನಾದ **ಆತ್ಮನಃ** ಸ್ವಾಮಿಯಾದ **ಅಕರ್ತುಃ** ಫಲದ ಅಪೇಕ್ಷೆ ಇಲ್ಲದಿರುವದರಿಂದ ಅಕರ್ತಾ ಎನಿಸುವ **ತವ** ನಿನಗೆ **ತಿರ್ಯಙ್ನೃಪಶುಯಾದಸ್ಸು ತಿರ್ಯಕ್** ವರಾಹಾದಿರೂಪದಿಂದ, **ನೃಪ** ರಾಮಾದಿರೂಪದಿಂದ, ಮಹೀದಾಸಾದಿರೂಪದಿಂದ, **ಪಶು** ಜಲಚರಪ್ರಾಣಿಗಳಾದ ಮತ್ಸ್ಯಾದಿರೂಪದಿಂದ ಆಯಾ ಜಾತಿಗಳಿಗೆ ಅನುಸಾರಿಯಾಗಿ ಕಾರ್ಯವನ್ನು ಮಾಡುವುದು ಏನು ಇದೆಯೋ **ತತ್** ಅದು **ಅತ್ಯಂತವಿಡಂಬನಂ** ಅತಿಶಯವಾದ ಲೋಕಾನುಕರಣವು.

ಮುಂದೆ ಹೇಳುವ ವಿಷಯವು ಜ್ಞಾನಿಗಳಿಗೂ ಮೋಹಕವು ಅತಿಶಯಲೋಕವಿಡಂಬನವು ಆಗಿದೆ ಎಂಬ ಅಭಿಪ್ರಾಯದಿಂದ ಹೇಳುವಳು

**ಗೋಪ್ಯಾದದೇ ತ್ವಯಿ ಕೃತಾಗಸಿ ದಾಮ ತಾವದ್**
**ಯಾ ತೇ ದಶಾಶ್ರುಕಲಿಲಾಂಜನಸಂಭ್ರಮಾಕ್ಷಮ್ ।**

**ವಕ್ತ್ರಂ ವಿನಮ್ಯ ಭಯಭಾವನಯಾ ಸ್ಥಿತಸ್ಯ**
**ಸಾ ಮಾಂ ವಿಮೋಹಯತಿ ಭೀರಪಿ ಯಂ ಬಿಭೇತಿ ॥೩೧॥**

**ಹೇ ಗೋಪಿ** ಯಶೋದೆಯೇ **ತ್ವಯಿ ಕೃತಾಗಸಿ** ನೀನು ಮೊಸರಿನ ಗಡಿಗೆಯನ್ನು ಒಡೆದು ಬೆಣ್ಣೆಯನ್ನು ಅಪಹರಿಸುತ್ತಿರಲು(ಬೆಣ್ಣೆ ಕದಿಯುವ ಅಪರಾಧವನ್ನು ಮಾಡುತ್ತಿರಲು) **ಯದಾ** ಯಾವಾಗ **ತ್ವಾ** ನಿತ್ಯಮುಕ್ತನಾದ ನಿನ್ನನ್ನು ಕಟ್ಟಲು **ದಾಮ** ಹಗ್ಗವನ್ನು ತೆಗೆದುಕೊಂಡಳೋ **ತಾವತ್** ಆ ಕಾಲದಲ್ಲಿ **ಯಂ** ಯಾವ ನಿನ್ನನ್ನು ಕುರಿತು (**ಯಂ ಪ್ರತಿ** ಯಾವ ನಿನ್ನನ್ನು ನೋಡಿ) **ಭೀಃ ಅಪಿ** ಎಲ್ಲ ಜನರನ್ನು ಹೆದರಿಸುವ ಭಯಾಭಿಮಾನಿದೇವತೆಯಾದ ದುರ್ಗಾದೇವಿಯು ಕೂಡ **ಬಿಭೇತಿ** ಹೆದರುತ್ತಾಳೆ ಅಂತಹ **ತೇ** ನಿನ್ನ **ಭಯಭಾವನಯಾ** ಹೆದರಿಕೆಯಿಂದ **ಅಶ್ರುಕಲಿಲಾಂಜನಸಂಭ್ರಮಾಕ್ಷಂ ಅಶ್ರು** ಕಣ್ಣೀರಿನಿಂದ ಕೂಡಿದ **ಕಲಿಲಾಂಜನ** ಕಾಡಿಗೆಯುಳ್ಳ **ಸಂಭ್ರಮ** ವ್ಯಾಕುಲವಾದ **ಅಕ್ಷಂ** ಕಣ್ಣುಗಳುಳ್ಳ **ವಕ್ತ್ರಂ** ಮುಖವನ್ನು **ವಿನಮ್ಯ** ಕೆಳಗೆ ಮಾಡಿ **ಸ್ಥಿತಸ್ಯ** ನಿಂತಿರುವ **ಯಾ ದಶಾ** ಯಾವ ನಿನ್ನ ಅವಸ್ಥೆಯುಂಟೋ **ಸಾ** ಅದು **ಮಾಂ** ನನ್ನನ್ನು **ವಿಮೋಹಯತಿ** ಮೋಹಗೊಳಿಸುವದು ಆದ್ದರಿಂದ ಈ ಲೋಕಾನುಕರಣವು ಜ್ಞಾನಿಗಳಿಗೂ ಮೋಹಕವು.

ಮನುಷ್ಯರನ್ನು ಅನುಕರಣೆ ಮಾಡುವ ನಿನ್ನ ಇಷ್ಟವು ತಿಳಿಯದಿರುವದರಿಂದಲೇ ಜ್ಞಾನಿಗಳು ನಿನ್ನ ಅವತಾರ ಪ್ರಯೋಜನವನ್ನು ಅನೇಕ ರೀತಿಯಾಗಿ ಹೇಳುವರು ಕೇಚಿತ್ ಮೊದಲಾದ ನಾಲ್ಕು ಶ್ಲೋಕಗಳಿಂದ

**ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।**
**ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಮ್ ॥೩೨॥**

**ಪುಣ್ಯಶ್ಲೋಕಸ್ಯ** ಪುಣ್ಯಕೀರ್ತಿಯಾದ ಭಗವದ್ಭಕ್ತನಾದ **ಪ್ರಿಯಸ್ಯ** ಪ್ರಿಯನಾದ **ಯದೋಃ** ಯದುರಾಜನ **ಅನ್ವವಾಯೇ** ವಂಶದಲ್ಲಿ **ಮಲಯಸ್ಯ ಇವ** ಮಲಯಪರ್ವತದ ಕೀರ್ತಿಗೋಸ್ಕರ ಚಂದನವು ಹುಟ್ಟಿದಂತೆ **ಕೇಚಿತ್** ಕೆಲವರು **ಅಜಂ** ಜನ್ಮರಹಿತನಾದ ನೀನು **ಜಾತಂ** ಹುಟ್ಟಿದ್ದು ಎಂದು **ಆಹುಃ** ಹೇಳಿದ್ದಾರೆ.

**ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।**
**ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಮ್ ॥೩೩॥**

**ಕಶ್ಚಿತ್ ಯಸ್ಯ** ಯಾವ ನಿನಗೆ **ಕರ್ಹಿಚಿತ್** ಯಾವ ಕಾಲದಲ್ಲಿಯೂ **ಕಶ್ಚಿತ್** ಯಾವನು ಕೂಡ **ದಯಿತಃ ನ ಅಸ್ತಿ** ಯೋಗ್ಯತೆಯನ್ನು ಮೀರಿ ಪ್ರಿಯನಾದವನು ಇಲ್ಲ **ಕಶ್ಚಿತ್** ಯಾವನೊಬ್ಬನು **ದ್ವೇಷ್ಯಶ್ಚ ನ ಅಸ್ತಿ** ಯೋಗ್ಯತೆಯನ್ನು ಮೀರಿ ದ್ವೇಷಿಸುವವನು ಇಲ್ಲ ಹೀಗಿದ್ದರೂ **ಯಸ್ಮಿನ್** ಯಾವ ನಿನ್ನ ವಿಷಯದಲ್ಲಿ **ನೃಣಾಂ** ಅಸುರಸ್ವಭಾವದವರಾದ ಜನರಿಗೆ **ವಿಷಮಾ ಮತಿಃ** ಅರ್ಜುನನಿಗೆ ಅನುಗ್ರಹ ಮಾಡಿ ದುರ್ಯೋಧನನನ್ನು ದ್ವೇಷಿಸುತ್ತಾನೆ ಎಂಬ ಬುದ್ಧಿಯು **ಹೇ ಭಗವನ್** ಹೇ ಶ್ರೀಕೃಷ್ಣನೇ **ಕಶ್ಚಿತ್** ಒಬ್ಬನೂ **ನೃಣಾಂ ವಿಡಂಬನಂ ಈಹಮಾನಸ್ಯ ತವ** ಲೋಕಾನುಕರಣೆ ಮಾಡುವ ನಿನ್ನ **ಚಿಕೀರ್ಷಿತಂ** ಮಾಡಲು ಇಷ್ಟವಾದ ಕಾರ್ಯವನ್ನು **ಕಶ್ಚಿತ್** ಯಾವನೂ ಕೂಡ **ನ ವೇದ** ತಿಳಿದಿಲ್ಲ.

**ವಿಶೇಷ-** ನೀನು ಲೋಕಾನುಕರಣೆ ಮಾಡುವದರಿಂದ ಇವನು ನಮ್ಮ ಹಾಗೆಯೇ ಒಬ್ಬ ಎಂದು ತಿಳಿದು ನಿನ್ನಲ್ಲಿ ವೈಷಮ್ಯ ಬುದ್ಧಿಯನ್ನು ಮಾಡುವರು ಎಂದು ಭಾವ.

ಲೋಕಾನುಕರಣೆಯನ್ನು ವಿವರಿಸುವಳು

**ಜನ್ಮಕರ್ಮ ಚ ವಿಶ್ವಾತ್ಮನ್ನಜಸ್ಯಾಕರ್ತುರಾತ್ಮನಃ ।**
**ತಿರ್ಯಙ್‌ನೃಪಶುಯಾದಸ್ಸು ತದತ್ಯಂತವಿಡಂಬನಮ್ ॥೩೩॥**

**ಹೇ ವಿಶ್ವಾತ್ಮನ್** ಸರ್ವಾಂತರ್ಯಾಮಿಯೇ **ಅಜಸ್ಯ** ಉತ್ಪತ್ತಿರಹಿತನಾದ **ಆತ್ಮನಃ** ಸ್ವಾಮಿಯಾದ **ಅಕರ್ತುಃ** ಫಲದ ಅಪೇಕ್ಷೆ ಇಲ್ಲದಿರುವದರಿಂದ ಅಕರ್ತಾ ಎನಿಸುವ **ತವ** ನಿನಗೆ **ತಿರ್ಯಜನ್ನಪಶುಯಾದಸ್ಸು ತಿರ್ಯಕ್** ವರಾಹಾದಿರೂಪದಿಂದ, **ನೃಪ** ರಾಮಾದಿರೂಪದಿಂದ, ಮಹೀದಾಸಾದಿರೂಪದಿಂದ, **ಪಶು** ಜಲಚರಪ್ರಾಣಿಗಳಾದ ಮತ್ಸ್ಯಾದಿರೂಪದಿಂದ ಆಯಾ ಜಾತಿಗಳಿಗೆ ಅನುಸಾರಿಯಾಗಿ ಕಾರ್ಯವನ್ನು ಮಾಡುವುದು ಏನು ಇದೆಯೋ **ತತ್** ಅದು **ಅತ್ಯಂತವಿಡಂಬನಂ** ಅತಿಶಯವಾದ ಲೋಕಾನುಕರಣವು.

ಮುಂದೆ ಹೇಳುವ ವಿಷಯವು ಜ್ಞಾನಿಗಳಿಗೂ ಮೋಹಕವು ಅತಿಶಯಲೋಕವಿಡಂಬನವು ಆಗಿದೆ ಎಂಬ ಅಭಿಪ್ರಾಯದಿಂದ ಹೇಳುವಳು

**ಗೋಪ್ಯಾದದೇ ತ್ವಯಿ ಕೃತಾಗಸಿ ದಾಮ ತಾವದ್**
**ಯಾ ತೇ ದಶಾಶ್ರುಕಲಿಲಾಂಜನಸಂಭ್ರಮಾಕ್ಷಮ್ ।**

**ವಕ್ತ್ರಂ ವಿನಮ್ಯ ಭಯಭಾವನಯಾ ಸ್ಥಿತಸ್ಯ**
**ಸಾ ಮಾಂ ವಿಮೋಹಯತಿ ಭೀರಪಿ ಯಂ ಬಿಭೇತಿ ॥೩೪॥**

**ಹೇ ಗೋಪಿ** ಯಶೋದೆಯೇ **ತ್ವಯಿ ಕೃತಾಗಸಿ** ನೀನು ಮೊಸರಿನ ಗಡಿಗೆಯನ್ನು ಒಡೆದು ಬೆಣ್ಣೆಯನ್ನು ಅಪಹರಿಸುತ್ತಿರಲು(ಬೆಣ್ಣೆ ಕದಿಯುವ ಅಪರಾಧವನ್ನು ಮಾಡುತ್ತಿರಲು) **ಯದಾ** ಯಾವಾಗ **ತ್ವಾ** ನಿತ್ಯಮುಕ್ತನಾದ ನಿನ್ನನ್ನು ಕಟ್ಟಲು **ದಾಮ** ಹಗ್ಗವನ್ನು ತೆಗೆದುಕೊಂಡಳೋ **ತಾವತ್** ಆ ಕಾಲದಲ್ಲಿ **ಯಂ** ಯಾವ ನಿನ್ನನ್ನು ಕುರಿತು (**ಯಂ ಪ್ರತಿ** ಯಾವ ನಿನ್ನನ್ನು ನೋಡಿ) **ಭೀಃ ಅಪಿ** ಎಲ್ಲ ಜನರನ್ನು ಹೆದರಿಸುವ ಭಯಾಭಿಮಾನಿದೇವತೆಯಾದ ದುರ್ಗಾದೇವಿಯು ಕೂಡ **ಬಿಭೇತಿ** ಹೆದರುತ್ತಾಳೆ ಅಂತಹ **ತೇ** ನಿನ್ನ **ಭಯಭಾವನಯಾ** ಹೆದರಿಕೆಯಿಂದ **ಅಶ್ರುಕಲಿಲಾಂಜನಸಂಭ್ರಮಾಕ್ಷಂ** **ಅಶ್ರು** ಕಣ್ಣೀರಿನಿಂದ ಕೂಡಿದ **ಕಲಿಲಾಂಜನ** ಕಾಡಿಗೆಯುಳ್ಳ **ಸಂಭ್ರಮ** ವ್ಯಾಕುಲವಾದ **ಅಕ್ಷಂ** ಕಣ್ಣುಗಳುಳ್ಳ **ವಕ್ತ್ರಂ** ಮುಖವನ್ನು **ವಿನಮ್ಯ** ಕೆಳಗೆ ಮಾಡಿ **ಸ್ಥಿತಸ್ಯ** ನಿಂತಿರುವ **ಯಾ ದಶಾ** ಯಾವ ನಿನ್ನ ಅವಸ್ಥೆಯುಂಟೋ **ಸಾ** ಅದು **ಮಾಂ** ನನ್ನನ್ನು **ವಿಮೋಹಯತಿ** ಮೋಹಗೊಳಿಸುವದು ಆದ್ದರಿಂದ ಈ ಲೋಕಾನುಕರಣವು ಜ್ಞಾನಿಗಳಿಗೂ ಮೋಹಕವು.

ಮನುಷ್ಯರನ್ನು ಅನುಕರಣೆ ಮಾಡುವ ನಿನ್ನ ಇಷ್ಟವು ತಿಳಿಯದಿರುವದರಿಂದಲೇ ಜ್ಞಾನಿಗಳು ನಿನ್ನ ಅವತಾರ ಪ್ರಯೋಜನವನ್ನು ಅನೇಕ ರೀತಿಯಾಗಿ ಹೇಳುವರು ಕೇಚಿತ್ ಮೊದಲಾದ ನಾಲ್ಕು ಶ್ಲೋಕಗಳಿಂದ

**ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।**
**ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಮ್ ॥೩೫॥**

**ಪುಣ್ಯಶ್ಲೋಕಸ್ಯ** ಪುಣ್ಯಕೀರ್ತಿಯಾದ ಭಗವದ್ಭಕ್ತನಾದ **ಪ್ರಿಯಸ್ಯ** ಪ್ರಿಯನಾದ **ಯದೋಃ** ಯದುರಾಜನ **ಅನ್ವವಾಯೇ** ವಂಶದಲ್ಲಿ **ಮಲಯಸ್ಯ ಇವ** ಮಲಯಪರ್ವತದ ಕೀರ್ತಿಗೋಸ್ಕರ ಚಂದನವು ಹುಟ್ಟಿದಂತೆ **ಕೇಚಿತ್** ಕೆಲವರು **ಅಜಂ** ಜನ್ಮರಹಿತನಾದ ನೀನು **ಜಾತಂ** ಹುಟ್ಟಿದ್ದು ಎಂದು **ಆಹುಃ** ಹೇಳಿದ್ದಾರೆ.

**ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।**
**ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಮ್ ॥೩೬॥**

**ಅಪರೇ** ಮತ್ತೆ ಕೆಲವು ಜ್ಞಾನಿಗಳು **ಯಾಚಿತಃ** ದೇವತೆಗಳಿಂದ ಪ್ರಾರ್ಥಿತನಾಗಿ **ಅಜಃ** ಜನ್ಮರಹಿತನಾದ **ತ್ವಂ** ನೀನು **ಅಸ್ಯ** ಸಜ್ಜನರ **ಕ್ಷೇಮಾಯ** ಕ್ಷೇಮಕ್ಕಾಗಿ **ಸುರದ್ವಿಷಾಂ ವಧಾಯ ಚ** ದೇವತೆಗಳ ದ್ವೇಷಿಗಳಾದ ಅಸುರರ ಸಂಹಾರಕ್ಕಾಗಿ **ವಸುದೇವಸ್ಯ ಸಕಾಶಾತ್** ವಸುದೇವನ ದೆಸೆಯಿಂದ **ದೇವಕ್ಯಾಂ** ದೇವಕಿಯಲ್ಲಿ **ಅಭ್ಯಗಾತ್** ಅವತರಿಸಿದ್ದಿ ಎಂದು **ಆಹುಃ** ಹೇಳಿದ್ದಾರೆ.

**ಭಾರಾವತಾರಣಾಯಾನ್ಯೇ ಭುವೋ ನಾವ ಇವೋ ದಧೌ ।**
**ಸೀದಂತ್ಯಾ ಭೂರಿಭಾರೇಣ ಜಾತೋ ಹ್ಯಾತ್ಮಭುವಾರ್ಥಿತಃ ॥೩೭॥**

**ಅನ್ಯೇ** ಇನ್ನು ಕೆಲವು ಜ್ಞಾನಿಗಳು **ಉದಧೌ** ಸಮುದ್ರದಲ್ಲಿ **ಭೂರಿಭಾರೇಣ** ಬಹಳವಾದ ಭಾರದಿಂದ **ಸೀದಂತ್ಯಾಃ** ಮುಳುಗುತ್ತಿರುವ **ನಾವ ಇವ** ದೋಣಿಯ ಭಾರವನ್ನು ಇಳಿಸುವಂತೆ **ಭೂರಿಭಾರೇಣ** ಅಸುರಜನರ ಬಹಳ ಭಾರದಿಂದ **ಸೀದಂತ್ಯಾಃ** ದುಃಖಿತಳಾದ ಭೂಮಿಯ **ಭಾರಾವತರಣಾಯ** ಭಾರವನ್ನು ಇಳಿಸಲು **ಆತ್ಮಭುವಾರ್ಥಿತಃ** ಬ್ರಹ್ಮದೇವರ ಪ್ರಾರ್ಥನೆಯಿಂದ **ಜಾತಃ** ಅವತರಿಸಿರುವಿ ಎಂದು ಹೇಳಿದ್ದಾರೆ.

**ಭವೇಽಸ್ಮಿನ್ ಕ್ಲಿಶ್ಯಮಾನಾನಾಮವಿದ್ಯಾಕಾಮಕರ್ಮಭಿಃ ।**
**ಶ್ರವಣಸ್ಮರಣಾರ್ಹಾಣಿ ಕರಿಷ್ಯನ್ನಿತಿ ಕೇಚನ ॥೩೮॥**

**ಕೇಚನ** ಕೆಲವು ಜ್ಞಾನಿಗಳು **ಅಸ್ಮಿನ್ ಭವೇ** ಈ ಸಂಸಾರದಲ್ಲಿ **ಅವಿದ್ಯಾಕಾಮಕರ್ಮಭಿಃ** ಅವಿದ್ಯಾಕಾಮಕರ್ಮಗಳಿಂದ **ಕ್ಲಿಶ್ಯಮಾನಾನಾಂ** ದುಃಖಪಡುತ್ತಿರುವವರಿಗೆ **ಶ್ರವಣಸ್ಮರಣಾರ್ಹಾಣಿ** ಶ್ರವಣಕ್ಕೆ ಯೋಗ್ಯವಾದ ನಾಮಗಳನ್ನು ಸ್ಮರಣಕ್ಕೆ ಯೋಗ್ಯವಾದ ರೂಪಗಳನ್ನು ತೆಗೆದು ಕೊಳ್ಳುವಿ ಎಂದು **ಆಹುಃ** ಹೇಳುವರು.

ಶ್ರವಣಸ್ಮರಣೆಗಳಿಂದ ಆಗುವ ಫಲವೇನು ಎಂದು ಹೇಳುವರು

**ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ**
**ಸ್ಮರಂತಿ ನಂದಂತಿ ತವೇಹಿತಂ ಜನಾಃ ।**
**ತ ಏವ ಪಶ್ಯಂತ್ಯಚಿರೇಣ ತಾವಕಂ**
**ಭವಪ್ರವಾಹೋಪರಮಂ ಪದಾಂಬುಜಮ್ ॥೩೯॥**

**ಯೇ** ಯಾವ ಜನರು **ತವ ಈಹಿತಂ** ನಿನ್ನ ವ್ಯಾಪಾರವನ್ನು **ಅಭೀಕ್ಷ್ಣಶಃ** ಪುನಃ ಪುನಃ **ಶೃಣ್ವಂತಿ** ಕೇಳುವರು **ಗಾಯಂತಿ** ಹಾಡುವರು **ಗೃಣಂತಿ** ಸ್ತುತಿಸುವರು **ಸ್ಮರಂತಿ** ಸ್ಮರಿಸುವರು **ನಂದಂತಿ** ಪರಕೀಯರ ಗಾನವನ್ನು ಕೇಳಿ ಸಂತೋಷಪಡುವರು ಅಥವಾ ಅಭಿನಂದಿಸುವರು **ತೇ ಏವ** ಅವರೇ **ಅಚಿರೇಣ** ಬೇಗನೇ **ಭವಪ್ರವಾಹೋಪರಮಂ** ಸಂಸಾರದ ಪ್ರವಾಹವನ್ನು ನಾಶಪಡಿಸುವ **ಪದಾಂಬುಜಂ** ಪಾದಕಮಲಗಳನ್ನು **ಪಶ್ಯಂತಿ** ನೋಡುತ್ತಾರೆ ಶ್ರವಣಾದಿಗಳಿಂದ ಅಪರೋಕ್ಷಜ್ಞಾನದ್ವಾರಾ ಕ್ಲೇಶನಿವೃತ್ತವಾಗಿ ಮುಕ್ತಿಯಾಗುವುದು.

ನಿನ್ನ ವಿರಹವು ನಮಗೆ ತಡೆಯಲಸಾಧ್ಯ ಆದ್ದರಿಂದ ಈಗ ನಮ್ಮನ್ನು ಪರಿತ್ಯಾಗಮಾಡುವದು ಉಚಿತವಲ್ಲ ಎಂಬ ಅಭಿಪ್ರಾಯದಿಂದ ಹೇಳುವಳು

**ಅಪ್ಯದ್ಯ ನಸ್ತ್ವಂ ಸ್ವಕೃತೇಹಿತಃ ಪ್ರಭೋ**
**ಜಿಹಾಸಸಿ ಸ್ವಿತ್ಸು ಹೃದೋಽನುಜೀವಿನಃ ।**
**ಯೇಷಾಂ ನ ಚಾನ್ಯದ್ಭವತಃ ಪದಾಂಬುಜಾತ್**
**ಪರಾಯಣಂ ರಾಜಸು ಯೋಜಿತಾಂಹಸಾಮ್ ॥೩೦॥**

**ಹೇ ಪ್ರಭೋ** ಸ್ವಾಮಿಯೇ **ಯೋಜಿತಾಂಹಸಾಂ** ಅಪರಾಧ ಮಾಡಿದ **ರಾಜಸು** ಎಲ್ಲ ರಾಜರ ವಿಷಯದಲ್ಲಿ **ಏಷಾಂ** ಯಾವ ನಮಗೆ **ಭವತಃ ಪದಾಂಬುಜಾತ್** ನಿನ್ನ ಪಾದಕಮಲಗಳನ್ನು ಬಿಟ್ಟು ಬೇರೆ **ಪರಾಯಣಂ** ಆಶ್ರಯವು **ನಾಸ್ತಿ** ಇಲ್ಲವೋ **ತ್ವಂ** ಅಂತಹ ನೀನು **ತಾನ್ ಸುಹೃದಃ ಅನುಜೀವಿನಃ** ಕಿಂಕರರಾದ ಪ್ರಿಯರಾದ ಅಥವಾ ಭಗವಂತನ ನೈವೇದ್ಯವನ್ನು ಸೇವಿಸುವ **ನಃ** ನಮ್ಮನ್ನು **ಅದ್ಯ** ಇಂದು **ಜಿಹಾಸಸಿ ಅಪಿ ಸ್ವಿತ್** ದ್ವಾರಕೆಗೆ ಹೋಗುವ ನೆಪದಿಂದ ಬಿಡಲು ಇಚ್ಛಿಸುತ್ತಿರುವಿ ಅಷ್ಟೇ **ಸ್ವಕೃತೇಹಿತಃ** ನಿನ್ನಿಂದಲೇ ಮಾಡಲ್ಪಟ್ಟ ವ್ಯಾಪಾರವುಳ್ಳ ಅಥವಾ ಸ್ವತಂತ್ರವಾದ ವ್ಯಾಪಾರವುಳ್ಳ ಅಥವಾ ಸ್ವಕೀಯರಿಗಾಗಿ ಮಾಡಲ್ಪಟ್ಟ ವ್ಯಾಪಾರವುಳ್ಳ **ತ್ವಂ** ನೀನು **ಜಿಹಾಸಸಿ ಅಪಿ ಸ್ವಿತ್** ಬಿಡಲು ಇಚ್ಛಿಸುತ್ತಿರುವಿ ಅಷ್ಟೇ.

ಬಂಧುಗಳಾದ ಯಾದವರು, ಶೂರರಾದ ಪಾಂಡವರು ರಕ್ಷಕರಿರುವಾಗ, ನಿನ್ನ ಹೊರತು ಬೇರೆಯವರು ರಕ್ಷಕರಿಲ್ಲ ಎಂದು ಹೇಳುವದು ಹೇಗೆ ಎಂಬ ಶಂಕೆಗೆ ಉತ್ತರಿಸುವಳು

**ತೇ ವಯಂ ನಾಮರೂಪಾಭ್ಯಾಂ ಯದುಭಿಃ ಸಹ ಪಾಂಡವಾಃ ।**
**ಭವತೋ ದರ್ಶನಂ ಯರ್ಹಿ ಹೃಷೀಕಾಣಾಮಿವೇಶಿತುಃ ॥೪೧॥**

**ಯಥಾ** ಹೇಗೆ **ಹೃಷೀಕಾಣಾಂ ಈಶಿತುಃ** ಇಂದ್ರಿಯಗಳಿಗೆ ನಿಯಾಮಕರಾದ ವಾಯುದೇವರ ಸಾನ್ನಿಧ್ಯವಿದ್ದರೆ ಶರೀರಕ್ಕೆ ನಾಮರೂಪಗಳು ಇರುತ್ತವೆಯೋ ಹಾಗೆ(**ಈಶಿತುಃ** ವಾಯುದೇವರ **ದರ್ಶನಂ** ದರ್ಶನವು ಯಾವಾಗಲೋ ಆದ ಇಂದ್ರಿಯಾದಿಗಳಿಗೆ ದರ್ಶನಶಕ್ತಿ ಬರುವಂತೆ) **ಯರ್ಹಿ** ಯಾವಾಗ **ಭವತಃ** ನಿನ್ನ **ದರ್ಶನಂ** ಸಾನ್ನಿಧ್ಯವು **ತದೈವ** ಆಗಲೇ **ತೇ** ಪ್ರಸಿದ್ಧರಾದ **ಯದುಭಿಃ ಸಹ** ಯಾದವರೊಡನೆ ಇರುವ **ವಯಂ ಪಾಂಡವಾಃ** ಪಾಂಡವರಾದ ನಾವು **ನಾಮರೂಪಾಭ್ಯಾಂ** ಕೀರ್ತಿಯಿಂದಲೂ ಮತ್ತು ರೂಪಗಳಿಂದಲೂ ಸಮೃದ್ಧರಾಗಿ ಇರುತ್ತೇವೆ

**ವಿಶೇಷ ಃ-** ಕೇ ವಯಂ ಎಂಬ ಪಾಠಾಂತರದಲ್ಲಿ **ಯರ್ಹಿ** ಯಾವಾಗ **ಭವತಃ ಅದರ್ಶನಂ** ನಿನ್ನ ಸಾನ್ನಿಧ್ಯವಿಲ್ಲದಿರುವಾಗ **ನಾಮರೂಪಾಭ್ಯಾಂ** ಕೀರ್ತಿಯಿಂದಲೂ, ಬಲರೂಪಾದಿಗಳಿಂದಲೂ **ವಯಂ ಕೇ** ನಾವು ಯಾರು ನಿನ್ನ ಸನ್ನಿಧಾನವಿಲ್ಲದಿದ್ದರೇ ನಾವೇ ಇಲ್ಲದೇ ಇದ್ದಂತೆ. ಆದ್ದರಿಂದ ನಿನ್ನ ವಿರಹವು ನಮಗೆ ಮರಣಸದೃಶವು ಎಂದು ಭಾವ.

*ಭಾಗವತತಾತ್ಪರ್ಯ-*

ಯರ್ಹಿ ಭವತೋ ದರ್ಶನಂ ತದಾ ಯದೂನಾಮಸ್ಮಾಕಂ ನಾಮರೂಪೇ ।

ನಿನ್ನ ಸನ್ನಿಧಾನದಿಂದ ನಮಗೆ ಕೀರ್ತಿ ಮತ್ತು ಸಮೃದ್ಧಿಗಳು ಇರುತ್ತವೆ ಎಂದು ಭಾವ.

**ನೇಯಂ ಶೋಭಿಷ್ಯತೇ ತತ್ರ ಯಥೇದಾನೀಂ ಗದಾಧರ ।**
**ತ್ವತ್ಪದೈರಂಕಿತಾ ಭಾತಿ ಸ್ವಲಕ್ಷಣವಿಲಕ್ಷಿತೈಃ ॥೪೨॥**

**ಹೇ ಗದಾಧರ** ಎಲೋ ಶ್ರೀಕೃಷ್ಣನೇ **ಇಯಂ** ಈ ರಾಜಧಾನಿಯು **ಇದಾನೀಂ** ಈಗ **ಸ್ವಲಕ್ಷಣವಿಲಕ್ಷಿತೈಃ** ತನ್ನದೇ ಆದ ಅಸಾಧಾರಣವಾದ ಧ್ವಜವಜ್ರಾಂಕುಶ ರೇಖಾಗಳಿಂದ ಚಿಹ್ನಿತವಾದ **ಪದೈಃ** ನಿನ್ನ ಪಾದಗಳಿಂದ **ಅಂಕಿತಾ** ಚಿಹ್ನಿತವಾಗಿ **ಯಥಾ** ಹೇಗೆ ಶೋಭಿಸುವದೋ **ತಥಾ** ಹಾಗೆಯೇ **ತತ್ರ** ನೀನು ಹೋದ ಮೇಲೆ **ನ ಶೋಭಿಷ್ಯತೇ**

ಶೋಭಿಸಲಾರದು ಅಥವಾ **ಇಯಂ** ಈ ಭೂಮಿಯು **ಅಂಕಿತಾ** ನಿನ್ನ ಪಾದಗಳಿಂದ ಚಿಹ್ನಿತವಾಗಿ **ಯಥಾ** ಹೇಗೆ ಶೋಭಿಸುವದೋ **ತಥಾ** ಹಾಗೆ **ನ ಶೋಭಿಷ್ಯತೇ** ಶೋಭಿಸುವುದಿಲ್ಲ.

ನಿನ್ನ ಸನ್ನಿಧಾನದಿಂದ ಕೇವಲ ನಮ್ಮ ನಗರವಷ್ಟೇ ಶೋಭಿಸುವದಲ್ಲ ಸಮಗ್ರ ರಾಷ್ಟ್ರವೇ ಶೋಭಿಸುವದು.

**ಇಮೇ ಜನಪದಾಃ ಸ್ವೃದ್ಧಾಃ ಸುಪಕ್ವೌಷಧಿವೀರುಧಃ ।**
**ವನಾದ್ರಿನದ್ಯುದನ್ವಂತೋ ಹ್ಯೇಧಂತೇ ತವ ವೀಕ್ಷಿತಾಃ ೪೩।।**

**ಇಮೇ ಜನಪದಾಃ** ಈ ರಾಷ್ಟ್ರಗಳು **ಸ್ವೃದ್ಧಾಃ** ನಿನ್ನ ಸನ್ನಿಧಾನದಿಂದ ಒಳ್ಳೆ ಸಮೃದ್ಧವಾಗಿ **ಸುಪಕ್ವೌಷಧಿವೀರುಧಃ** ಒಳ್ಳೆ ಪಕ್ವವಾದ ಗಿಡಗಳು ಮತ್ತು ಬಳ್ಳಿಗಳು **ವನಾದ್ರಿನದ್ಯುದನ್ವಂತಃ** ಅರಣ್ಯ, ಪರ್ವತ, ನದಿಗಳು ನೀರುಗಳುಳ್ಳವುಗಳಾಗಿ **ತವ ವೀಕ್ಷಿತಾಃ** ನಿನ್ನ ಕರುಣಾದೃಷ್ಟಿಗೆ ವಿಷಯವಾಗಿ **ಏಧಂತೇ** ಅಭಿವೃದ್ಧಿಯನ್ನು ಹೊಂದುವವು **ಹಿ** ಆದ್ದರಿಂದ ನಮ್ಮನ್ನು ಬಿಟ್ಟು ಹೋಗುವದು ಉಚಿತವಲ್ಲ.

ಶ್ರೀಕೃಷ್ಣನು ಇಲ್ಲಿಂದ ತೆರಳಿದರೆ ಪಾಂಡವರಿಗೆ ಅಶುಭವು. ಹೋಗದಿದ್ದರೆ ಯಾದವರಿಗೆ ಅಶುಭವು ಎರಡು ರೀತಿಯಿಂದ ವ್ಯಾಕುಲ ಚಿತ್ತಳಾದ ಕುಂತಿಯು ಅವರಿಬ್ಬರಲ್ಲಿಯೂ ಸ್ನೇಹಪಾಶದ ನಿವೃತ್ತಿಯನ್ನು ಪ್ರಾರ್ಥಿಸುವಳು. ಅಥವಾ ಪಾಂಡವರು ಮತ್ತು ಯಾದವರಲ್ಲಿ ಭಗವದ್ಭಕ್ತರೆಂಬುದು ಅವಶ್ಯಕವೆಂದು ತಿಳಿದಿದ್ದರು ಪುತ್ರರು ಮಿತ್ರರು ಎಂಬ ಸ್ನೇಹವು ಸಂಸಾರಹೇತು ವಾದುದರಿಂದ ಹೇಯವೆಂದು ವಿಜ್ಞಾಪಿಸುವಳು.

**ಅಥ ವಿಶ್ವೇಶ ವಿಶ್ವಾತ್ಮನ್ ವಿಶ್ವಮೂರ್ತೇ ಸ್ವಕೇಷು ಮೇ ।**
**ಸ್ನೇಹಪಾಶಮಿಮಂ ಛಿಂದಿ ಧ್ರುವಂ ಪಾಂಡುಷು ವೃಷ್ಣಿಷು ।।೪೪।।**

**ಹೇ ವಿಶ್ವೇಶ** ಜಗದೊಡೆಯನೇ **ವಿಶ್ವಾತ್ಮನ್** ಜಗದ್ವ್ಯಾಪಿಯೇ **ವಿಶ್ವಮೂರ್ತೇ** ಜಗದಂತರ್ಗತವಾದ ಅನಂತಮೂರ್ತಿಯುಳ್ಳವನೇ **ಸ್ವಕೇಷು** ನಮ್ಮವರೆಂದು ತಿಳಿದಿರುವ **ಪಾಂಡುಷು** ಪಾಂಡವರಲ್ಲಿಯ **ಅಥ** ಮತ್ತು **ವೃಷ್ಣಿಷು** ಯಾದವರಲ್ಲಿಯ **ಮೇ** ನನ್ನ **ಇಮಂ ಸ್ನೇಹಪಾಶಂ** ಇವರು ನನ್ನ ಪುತ್ರರು ಮಿತ್ರರು ಎಂಬ ಸ್ನೇಹಪಾಶವನ್ನು **ಧ್ರುವಂ** ನಿಶ್ಚಿತವಾಗಿ **ಛಿಂದಿ** ಸಂಪೂರ್ಣ ನಾಶಮಾಡು

ಈ ರೀತಿಯಾಗಿ ವಿಷಯಸ್ನೇಹವು ಕಳೆದ ನಂತರ ನಿನ್ನಲ್ಲಿ ವಿಶೇಷ ಸ್ನೇಹವು ಬರಲಿ ಎಂದು ಪ್ರಾರ್ಥಿಸುವಳು .

**ತ್ವಯಿ ಮೇಽನನ್ಯವಿಷಯಾ ಮತಿರ್ಮಧುಪತೇಽಸಕೃತ್ ।**
**ರತಿಮುದ್ವಹತಾಮದ್ಧಾ ಗಂಗೇವೌಘಮುದನ್ವತಿ ॥೪೫॥**

**ಹೇ ಮಧುಪತೇ** ಆನಂದಕ್ಕೆ ಸ್ವಾಮಿಯೇ ಅಥವಾ ಮಧುನಾಮಕರಾದ ಯಾದವರಿಗೆ ಒಡೆಯನೇ **ತ್ವಯಿ** ನಿನ್ನಲ್ಲಿ **ಅನನ್ಯವಿಷಯಾ** ಸರ್ವೋರ್ತ್ಕೃಷ್ಟವಾದ **ಮತಿಃ** ಬುದ್ಧಿರೂಪವಾದ ಮನಸ್ಸು **ಉದನ್ವತಿ** ಸಮುದ್ರದಲ್ಲಿ **ಗಂಗೌಘಮಿವ** ಗಂಗಾಪ್ರವಾಹವು ಸೇರುವಂತೆ **ಅದ್ಧಾ** ಚೆನ್ನಾಗಿ **ರತಿಂ** ಆಸಕ್ತಿಯನ್ನು **ಉದ್ವಹತಾತ್** ಹೊಂದಲಿ.

ಈ ರೀತಿಯಾಗಿ ಪ್ರಾರ್ಥಿಸಿ ಮತ್ತೆ ನಮಸ್ಕರಿಸುವಳು

**ಶ್ರೀಕೃಷ್ಣ ಕೃಷ್ಣಸಖ ವೃಷ್ಣಿವೃಷಾವನಿಧ್ರುಕ್**
**ರಾಜನ್ಯವಂಶದಹನಾಮರವಂದ್ಯವೀರ್ಯ ।**
**ಗೋವಿಂದ ಗೋದ್ವಿಜಸುರಾರ್ತಿಹರಾವತಾರ**
**ಯೋಗೇಶ್ವರಾಖಿಲಗುರೋ ಭಗವನ್ ನಮಸ್ತೇ ॥೪೬॥**

**ಹೇ ಶ್ರೀಕೃಷ್ಣ** ಲಕ್ಷ್ಮೀದೇವಿಯಿಂದ ಕೂಡಿದ ಕೃಷ್ಣನೇ ಅಥವಾ ಅಗಸೆ ಹೂವಿನಕಾಂತಿಯಂತೆ ನೀಲವರ್ಣವಿಶಿಷ್ಟನೇ **ವೃಷ್ಣಿವೃಷ** ಯಾದವ ಕುಲಶ್ರೇಷ್ಠನೇ ಅಥವಾ ಮೇಘದಂತೆ ಭಕ್ತಾಭೀಷ್ಟವನ್ನು ಕೊಡುವವನೇ (ವೃಷ್ಣಿಃ ಕುಲವಿಶೇಷೇಷು ವರ್ಷನ್ ಮೇಘೇಽಪಿ ಕಥ್ಯತೇ ಇತ್ಯಭಿಧಾನಂ) **ಅವನಿಧ್ರುಕ್ ರಾಜನ್ಯವಂಶದಹನ** ಭೂಮಿಗೆ ಕಂಟಕರಾದ ರಾಜರ ವಂಶವನ್ನು ಸುಟ್ಟುಹಾಕುವವನೇ **ಅಮರವಂದ್ಯವೀರ್ಯ** ದೇವತೆಗಳಿಂದ ಸ್ತುತ್ಯವಾದ ಪರಾಕ್ರಮವುಳ್ಳವನೇ **ಗೋವಿಂದ** ವೇದಪ್ರತಿಪಾದ್ಯನಾದ ಮಹಿಮನೆ **ಗೋದ್ವಿಜಸುರಾರ್ತಿಹರಾವತಾರ** ಗೋವುಗಳ, ಬ್ರಾಹ್ಮಣರ, ದೇವತೆಗಳ ದುಃಖಪರಿಹಾರಕನೇ **ಯೋಗೇಶ್ವರ** ಯೋಗೈಶ್ವರ್ಯವುಳ್ಳವನೇ **ಅಖಿಲಗುರೋ** ಎಲ್ಲರಿಗೂ ಜ್ಞಾನೋಪದೇಶಕನೇ **ಭಗವನ್** ಷಡ್ಗುಣೈಶ್ವರ್ಯ-ಸಂಪನ್ನನೇ **ತೇ ನಮಃ** ನಿನಗೆ ನಮಸ್ಕಾರವು.

ಸೂತ ಉವಾಚ –

**ಪೃಥಯೇತ್ಥಂ ಕಲಪದೈಃ ಪರಿಗೀತಾಖಿಲೋದಯಃ ।**
**ಮಂದಂ ಜಹಾಸ ವೈಕುಂಠೋ ಮೋಹಯನ್ಯೋಗಮಾಯಯಾ ॥೪೭॥**

**ಪೃಥಯಾ** ಕುಂತಿಯಿಂದ **ಇತ್ಥಂ** ಈ ರೀತಿಯಾಗಿ **ಕಲಪದೈಃ** ಅವ್ಯಕ್ತ ಮಧುರಮಾತುಗಳಿಂದ **ಪರಿಗೀತಾಖಿಲೋದಯಃ** ಸ್ತುತಿಸಲ್ಪಟ್ಟ ಎಲ್ಲ ಮಹಿಮೆಯುಳ್ಳ **ವೈಕುಂಠಃ** ವಿಕುಂಠಾಪುತ್ರನಾದ ಅಥವಾ ವೈಕುಂಠಾಧಿಪತಿಯಾದ ಶ್ರೀಕೃಷ್ಣನು **ಯೋಗಮಾಯಯಾ** ಸ್ವರೂಪಶಕ್ತಿಯಿಂದ **ಮೋಹಯನ್** ಮೋಹಗೊಳಿಸುವವನಾಗಿ **ಮಂದಂ ಜಹಾಸ** ಮುಗುಳ್ನಗೆ ಬೀರಿದನು.

**ತಾಂ ಬಾಢಮಿತ್ಯುಪಾಮಂತ್ರ್ಯ ಪ್ರವಿಶ್ಯ ಗಜಸಾಹ್ವಯಮ್ ।**
**ಸ್ತ್ರಿಯಶ್ಚ ಸ್ವಪುರಂ ಯಾಸ್ಯನ್ ಪ್ರೇಮ್ಣಾ ರಾಜ್ಞಾ ನಿವಾರಿತಃ ॥೪೮॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಮೋಽಧ್ಯಾಯಃ॥

**ತಾಂ** ಕುಂತಿಯನ್ನು **ಬಾಢಂ** 'ಅನನ್ಯವಿಷಯಕವಾದ ಬುದ್ಧಿ ಬರಲಿ ಎಂದು ಪ್ರಾರ್ಥಿಸಿದ್ದು ಹಾಗೆ ಆಗಲಿ' ಎಂದು ಹೇಳಿ **ಸ್ತ್ರಿಯಃ** ದ್ರೌಪದಿಮೊದಲಾದ ಸ್ತ್ರೀಯರಿಗೆ **ಉಪಾಮಂತ್ರ್ಯ** ಹೇಳಿ ಗಂಗಾತೀರದಿಂದ ಬಂದು **ಗಜಸಾಹ್ವಯಂ ಪ್ರವಿಶ್ಯ** ಹಸ್ತಿನಾವತೀ ಪಟ್ಟಣವನ್ನು ಪ್ರವೇಶಿಸಿ **ರಾಜ್ಞಾ** ಧರ್ಮರಾಜನಿಂದ **ಪ್ರೇಮ್ಣಾ ನಿವಾರಿತಃ** ಪ್ರೇಮದಿಂದ **ಸ್ವಪುರಂ ಯಾಸ್ಯನ್** ದ್ವಾರಕೆಗೆ ಹೋಗುವ ಶ್ರೀಕೃಷ್ಣನು ಈಗ ನೀನು ಹೋಗಬೇಡ ಎಂದು ತಡೆಯಲ್ಪಟ್ಟನು.

ಇಲ್ಲಿಗೆ ಎಂಟನೇಯ ಅಧ್ಯಾಯವು ಮುಗಿಯಿತು.

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ನವಮೋऽಧ್ಯಾಯಃ

**ಅಧ್ಯಾಯ ಸಾರಾಂಶ**

ಧರ್ಮರಾಜ ತಾನು ರಾಜ್ಯಕ್ಕಾಗಿ ಬಂಧುಗಳನ್ನು ಕೊಲ್ಲಿಸಿದೆ ಎಂಬ ಅಧರ್ಮಬುದ್ಧಿಯಿಂದ ಪರಿತಪಿಸಿದ. ತಮ್ಮಂದಿರು ಹಾಗೂ ಶ್ರೀಕೃಷ್ಣ ಎಷ್ಟು ಹೇಳಿದರೂ ಅವರೆಲ್ಲರೂ ಅಭಿಮಾನದಿಂದ ಹೇಳುತ್ತಿದ್ದಾರೆ ಎಂದು ತಿಳಿದನೇ ಹೊರತು ಮನಸ್ಸಿಗೆ ಸಮಾಧಾನವಾಗಲಿಲ್ಲ. ಶತ್ರುಪಕ್ಷದಲ್ಲಿ ನಿಂತು ಹೋರಾಡಿ ಶರಶಯ್ಯೆಯಲ್ಲಿ ಮಲಗಿದ ಭೀಷ್ಮರಿಂದಲೇ ಸಮಾಧಾನ ಹೇಳಿಸಿದರೆ ಧರ್ಮರಾಜ ನಂಬುತ್ತಾನೆ ಎಂದು ತಿಳಿದು ಶ್ರೀಕೃಷ್ಣ ಅವನನ್ನು ಭೀಷ್ಮರ ಬಳಿ ಕರೆದು ಕೊಂಡು ಹೋಗಿ ಅವರ ಮೂಲಕ ಧರ್ಮರಾಜನಿಗೆ ಉಪದೇಶ ಮಾಡಿಸಿದ.

ಧರ್ಮರಾಜ ನಿನಗೆ ಈ ಕೃಷ್ಣ ಗೆಳಯನಂತಿದ್ದವನು. ಎಡಬಲದಲ್ಲಿ ಭೀಮಾರ್ಜುನರು. ಆದರೂ ನಿಮಗೆ ಕಷ್ಟ ಬಂದಿತು. ಇದು ಪರಮಾತ್ಮನ ಸಂಕಲ್ಪ. ಅದನ್ನು ಯಾರೂ ತಿಳಿಯಲಾರರು. ಲೋಕವೆಲ್ಲ ಅವನ ಅಧೀನವೆಂದು ತಿಳಿದು ಅವನ ಆದೇಶಾನುಸಾರ ಅನಾಥರಾದ ಪ್ರಜೆಗಳನ್ನು ಕಾಪಾಡು. ಶ್ರೀಕೃಷ್ಣನನ್ನು ಕೇವಲ ನಿನ್ನ ಸೋದರಮಾವನ ಮಗ ಎಂದು ತಿಳಿದಿರುವಿ. ವಸ್ತುತಃ ಇವನು ನಾರಾಯಣ. ಭೀಷ್ಮ ಹೀಗೆ ಹೇಳಿ ಎಲ್ಲ ಧರ್ಮಗಳನ್ನೂ ನಾನಾ ಆಖ್ಯಾನ ಇತಿಹಾಸಗಳೊಂದಿಗೆ ಉಪದೇಶಿಸಿದ. ಉತ್ತರಾಯಣ ಕಾಲ ಬಂದಿತು. ಶರೀರತ್ಯಾಗಕ್ಕೆ ಸಂಕಲ್ಪಿಸಿ ಶ್ರೀಕೃಷ್ಣನನ್ನು ಸುಂದರವಾಗಿ ಸ್ತುತಿಸಿದ. ಮನಸ್ಸು ಮಾತು ನೋಟಗಳಿಂದ ತನ್ನನ್ನು ಭಗವಂತನಿಗೆ ಅರ್ಪಿಸಿಕೊಂಡು ಪ್ರಾಣಾಯಾಮ ಪೂರ್ವಕವಾಗಿ ಯೋಗ ಬಲದಿಂದ ಶರೀರತ್ಯಾಗ ಮಾಡಿದ. ದೇವದುಂದುಭಿ ಮೊಳಗಿತು. ಪುಷ್ಪವೃಷ್ಟಿಯಾಯಿತು. ಧರ್ಮರಾಜ ಅವನಿಗೆ ಉತ್ತರಕ್ರಿಯೆ ನಡೆಸಿ ಹಸ್ತಿನಾವತಿಗೆ ಮರಳಿದ. ಧರ್ಮದಿಂದ ರಾಜ್ಯಭಾರ ಮಾಡಿದ.

ಸ್ವರೂಪಾನಂದಾನುಭವರೂಪ ಮೋಕ್ಷವು ಸಕಲಪುರುಷಾರ್ಥಗಳಲ್ಲಿ ಉತ್ತಮವು ಅದು ಭಗವದಪರೋಕ್ಷಜ್ಞಾನ ವಿಷ್ಣುಪ್ರಸಾದದಿಂದಲೇ ದೊರೆಯುವದು ಎಂಬುದನ್ನು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು. ಅದನ್ನು ತಿಳಿಸಲು ಉಪೋದ್ಘಾತವನ್ನು ರಚಿಸುವರು.

**ಧರ್ಮರಾಜನ ಅಧರ್ಮಬುದ್ಧಿಯ ಪರಿತಾಪಕ್ಕೆ ಭೀಷ್ಮರ ಸಾಂತ್ವನದ ಮಾತುಗಳು**
**ಸೂತ ಉವಾಚ –**

**ವ್ಯಾಸಾದ್ಯೈರೀಶ್ವರೇಹಾಜ್ಞೈಃ ಕೃಷ್ಣೇನಾದ್ಭುತಕರ್ಮಣಾ ।**
**ಪ್ರಬೋಧಿತೋऽಪೀತಿಹಾಸೈರ್ನಾಬುದ್ಧ್ಯತ ಶುಚಾರ್ಪಿತಃ ॥೧॥**

**ಈಶ್ವರೇಹಾಜ್ಞೈಃ** ಭಗವಂತನ ಸೃಷ್ಟ್ಯಾದಿರೂಪಚೇಷ್ಟಾವನ್ನು ತಿಳಿದಿರುವ ಅಥವಾ ಪಾಂಡವರನ್ನು ನಿಮಿತ್ತ ಮಾಡಿ ಭೂಭಾರಹರಣರೂಪವಾದ ಚೇಷ್ಟೆಯು ಪಾಂಡವರಿಗೆ ಧರ್ಮಬುದ್ಧಿಗೋಸ್ಕರವಾಗಿವೆ ಎಂದು ತಿಳಿದ ವ್ಯಾಸಾದಿಗಳಿಂದ (ವೇದವ್ಯಾಸದೇವರೇ ಮೊದಲಾದವರಿಂದ) **ಅದ್ಭುತಕರ್ಮಣಾ ಕೃಷ್ಣೇನ** ಅದ್ಭುತವಾದ ಪರಾಕ್ರಮವುಳ್ಳ ಶ್ರೀಕೃಷ್ಣನಿಂದ **ಇತಿಹಾಸೈಃ ಪ್ರತಿಬೋಧಿತಃ ಅಪಿ** ಹಿಂದೆ ನಡೆದ ಕಥೆಗಳಿಂದ **ಪ್ರತಿಬೋಧಿತೋऽಪಿ** ಚೆನ್ನಾಗಿ ತಿಳಿಹೇಳಿದರೂ ಕೂಡ **ಶುಚಾರ್ಪಿತಃ** ಜ್ಞಾತಿಗಳ ಮರಣನಿಮಿತ್ತಕ ದುಃಖದಿಂದ ಕೂಡಿದವನಾಗಿ **ನ ಅಬುಧ್ಯತ** ವಿಷ್ಣುದ್ವೇಷಿಗಳ ಅವರ ಅನುಬಂಧಿಗಳ ನಿಗ್ರಹವನ್ನು ಧರ್ಮವೆಂದು ತಿಳಿಯಲಿಲ್ಲ.

**ವಿಶೇಷ ಃ-** ಭೂಭಾರಹರಣದಿಂದ ಮುಖ್ಯಫಲವು ಧರ್ಮರಾಜನಿಗೆ ಬರಬಾರದೆಂಬ ಅಭಿಪ್ರಾಯದಿಂದ ಹೊರಗೆ ಚೆನ್ನಾಗಿ ಬೋಧಿಸಿದರು ಒಳಗೆ ಸಂಶಯವನ್ನೇ ದೃಢಪಡಿಸಿದನು ಎಂದು ಸೂಚಿಸಲು ಅದ್ಭುತಕರ್ಮಣಾ ಎಂದು ವಿಶೇಷಣವನ್ನು ಇತ್ತಿರುವರು.

ಈ ರೀತಿಯಾಗಿ ಧರ್ಮರಾಜನಿಗೆ ಬೋಧನೆ ಮಾಡಿದರೂ ಧರ್ಮದಲ್ಲಿ ಅಧರ್ಮಬುದ್ಧಿಯುಳ್ಳ ಯುಧಿಷ್ಠಿರನು ಏನು ಮಾಡಿದನು ಎಂದು ಹೇಳುವರು

**ಆಹ ರಾಜಾ ಧರ್ಮಸುತಶ್ಚಿಂತಯನ್ ಸುಹೃದಾಂ ವಧಮ್ ।**
**ಪ್ರಾಕೃತೇನಾತ್ಮನಾ ವಿಪ್ರಾಃ ಸ್ನೇಹಮೋಹವಶಂಗತಃ ॥೨॥**

**ಹೇ ವಿಪ್ರಾಃ** ಶೌನಕಾದಿಗಳೆ **ಧರ್ಮಸುತಃ ರಾಜಾ** ಯಮಧರ್ಮನ ಮಗನಾದ ಧರ್ಮರಾಜನು **ಸುಹೃದಾಂ ವಧಂ ಚಿಂತಯನ್** ಜ್ಞಾತಿಗಳ ವಧವನ್ನು ಯಾವಾಗಲೂ

ಚಿಂತಿಸುತ್ತ **ಪ್ರಾಕೃತೇನ ಆತ್ಮನಾ** ಧರ್ಮಾಧರ್ಮವಿವೇಕ ಶೂನ್ಯವಾದ ಮನಸ್ಸಿನಿಂದ **ಸ್ನೇಹಮೋಹವಶಂಗತಃ** ಸ್ನೇಹದಿಂದ ಉಂಟಾದ ನನ್ನವರು ಇವರು ಎಂಬ ಮಿಥ್ಯಾಜ್ಞಾನಕ್ಕೆ ಒಳಗಾಗಿ **ಆಹ** ಮಾತನಾಡಿದನು.

**ವಿಶೇಷ-** ಸ್ನೇಹಮೋಹವಶಂಗತಃ ಎಂಬ ಪದದಿಂದ ಯಮಧರ್ಮರಾಜನ ಅವತಾರನಾದ ಯುಧಿಷ್ಠಿರನಿಗೆ ಧರ್ಮದಲ್ಲಿ ಅಧರ್ಮಬುದ್ಧಿಯು ಹೇಗೆ ಎಂಬ ಶಂಕೆಗೆ ಉತ್ತರವನ್ನು ನೀಡಿದಂತಾಯಿತು.

ಏನು ಹೇಳಿದನು ಎಂದು ಹೇಳುವರು

**ಅಹೋ ಮೇ ಪಶ್ಯತಾಜ್ಞಾನಂ ಹೃದಿ ರೂಢಂ ದುರಾತ್ಮನಃ ।**
**ಪಾರಕ್ಯಸ್ಯೈವ ದೇಹಸ್ಯ ಬಹ್ವ್ಯೋ ಮೇಽಕ್ಷೌಹಿಣೀರ್ಹತಾಃ ॥೩॥**

**ಯಸ್ಮಾತ್** ಯಾವ ಕಾರಣ **ಪಾರಕ್ಯಸ್ಯ** ನಾಯಿ ನರಿಗಳ ಆಹಾರರೂಪವಾದ **ದೇಹಸ್ಯ ಅರ್ಥೇ** ದೇಹಕ್ಕಾಗಿ **ಬಹ್ವ್ಯಃ ಅಕ್ಷೋಹಿಣೀಃ** ಅನೇಕಾಕ್ಷೋಹಿಣಿಗಳು **ಹತಃ** ಕೊಲ್ಲಲ್ಪಟ್ಟವು **ತಸ್ಮಾತ್** ಆದ್ದರಿಂದ **ದುರಾತ್ಮನಃ** ದುಷ್ಟನಾದ **ಮೇ** ನನ್ನ **ಹೃದಿ** ಹೃದಯದಲ್ಲಿ **ರೂಢಂ** ಅಂಕುರಿಸಿದ **ಅಜ್ಞಾನಂ** ಅಜ್ಞಾನವನ್ನು **ಪಶ್ಯತ** ನೋಡಿರಿ **ಅಹೋ** ಆಶ್ಚರ್ಯವು.

ಅಕ್ಷೌಹಿಣೀ ಪರಿಮಾಣವನ್ನು ಈ ರೀತಿ ಹೇಳಿರುವರು

ಅಕ್ಷೌಹಿಣೀಪ್ರಸಂಖ್ಯಾನಂ ರಥಾನಾಂ ದ್ವಿಜಸತ್ತಮಾಃ ।
ಸಂಖ್ಯಾಗಣನತತ್ತ್ವಜ್ಞೈಃ ಸಹಸ್ರಾಣ್ಯೇಕವಿಂಶತಿಃ ॥

ಶತಾನ್ಯುಪರಿ ಚೈವಾಷ್ಟೌ ತತೋ ಭೂಯಶ್ಚ ಸಪ್ತತಿಃ ।
ಗಜಾನಾಂ ಚ ಪ್ರಸಂಖ್ಯಾನಮೇತದೇವ ಪ್ರಕೀರ್ತಿತಮ್ ॥

ಜ್ಞೇಯಂ ಶತಸಹಸ್ರಂ ತು ಸಹಸ್ರಾಣಿ ನವೈವ ತು ।
ನರಾಣಾಮಪಿ ಪಂಚಾಶಚ್ಛತಾನಿ ತ್ರೀಣಿ ಚೈವ ಹಿ ॥

ಪಂಚಷಷ್ಟಿಸಹಸ್ರಾಣಿ ತಥಾಶ್ವಾನಾಂ ಶತಾನಿ ಚ ।
ದಶೋತ್ತರಾಣಿ ಷಟ್ ಪ್ರಾಹುಃ ಸಂಖ್ಯಾತತ್ತ್ವವಿದೋ ಜನಾಃ ॥
ಏತಾಮಕ್ಷೌಹಿಣೀಂ ಪ್ರಾಹುರ್ಯಥಾವದಿಹ ಸಂಖ್ಯಯಾ ॥ ಇತಿ

ಅಕ್ಷೌಹಿಣೀ ಸಂಖ್ಯೆಯನ್ನು ವಿವರಿಸುವರು 21,870 ರಥಗಳು, 21,870 ಆನೆಗಳು, 65,610 ಕುದುರೆಗಳು ಮತ್ತು 1,09,350 ಕಾಲಾಳುಗಳುಳ್ಳ ಸೇನೆ. ಇವೆಲ್ಲ ಸೇರಿದರೆ ಒಂದು ಅಕ್ಷೌಹಿಣೀ ಸೈನ್ಯವಾಗುವದು ಎಂದು ಪ್ರಮಾಣದಲ್ಲಿ ತಿಳಿಸಿದ್ದಾರೆ.

ಸಂಹಾರದ ಪರಿಣಾಮವನ್ನು ತಿಳಿಸುವರು

**ನ ಮೇ ಸ್ಯಾನ್ನಿರಯಾನ್ ಮೋಕ್ಷೋ ಹ್ಯಪಿ ವರ್ಷಾಯುತಾಯುತೈಃ ।**
**ಬಾಲದ್ವಿಜಸುಹೃನ್ಮಿತ್ರಪಿತೃಭ್ರಾತೃಗುರುದ್ರುಹಃ ॥೪॥**

**ಮೇ** ನನ್ನ **ಬಾಲದ್ವಿಜಸುಹೃನ್ಮಿತ್ರಪಿತೃಭ್ರಾತೃಗುರುದ್ರುಹಃ ಬಾಲಾನ್** ಅಭಿಮನ್ಯು ಮೊದಲಾದವರನ್ನು **ದ್ವಿಜಾನ್** ದ್ರೋಣಾದಿಗಳನ್ನು **ಮಿತ್ರಾಣಿ** ಧನವನ್ನು ದಾನಮಾಡುವದರಿಂದ ಇಷ್ಟರಾದ ಸೇವಕರನ್ನು ಅಥವಾ **ಮಿತ್ರಾಣಿ** ಗೆಳೆಯರಾದ ಅಶ್ವತ್ಥಾಮಾದಿಗಳನ್ನು **ಪಿತರಃ** ತಂದೆ ಸಮಾನರಾದ ಭೂರಿಶ್ರವ ಮೊದಲಾದವರನ್ನು **ಪಿತೃವ್ಯಾಃ ಭ್ರಾತರಃ** ದುರ್ಯೋಧನಾದಿಗಳನ್ನು **ಗುರವಃ** ಭೀಷ್ಮಾದಿಗಳನ್ನು ಸಂಹಾರಮಾಡಿದ **ಮೇ** ನನಗೆ **ನಿರಯಾತ್** ನರಕದಿಂದ **ಮೋಕ್ಷೋಽಪಿ** ಬಿಡುಗಡೆಯೂ **ವರ್ಷಾಣಾಂ ಅಯುತಾಯುತೈಃ** ಸಹಸ್ರಸಹಸ್ರ ವರ್ಷಗಳು ಕಳೆದರು **ನ ಸ್ಯಾತ್ ಹಿ** ಆಗಲು ಸಾಧ್ಯವಿಲ್ಲ.

**ನೈನೋ ರಾಜ್ಞಃ ಪ್ರಜಾಭರ್ತುರ್ಧರ್ಮೋ ಯುದ್ಧೇ ವಧೋ ದ್ವಿಷಾಮ್ ।**
**ಇತಿ ಮೇ ನ ತು ಬೋಧಾಯ ಕಲ್ಪತೇ ಶಾಶ್ವತಂ ವಚಃ ॥೫॥**

**ಪ್ರಜಾಭರ್ತುಃ** ಪ್ರಜೆಗಳನ್ನು ರಕ್ಷಿಸುವ ರಾಜನಿಗೆ **ದ್ವಿಷಾಂ** ಭಗವಂತನನ್ನು ದ್ವೇಷಿಸುವವರ **ವಧಃ** ಸಂಹಾರವು **ನ ತು ಏನಃ** ಪಾಪವನ್ನು ತಂದುಕೊಡುವದಿಲ್ಲ **ಪ್ರತ್ಯುತ ಯುದ್ಧೇ** ಯುದ್ಧದ ಸಂದರ್ಭದಲ್ಲಿ **ವಧಃ** ಸಂಹಾರವು **ಧರ್ಮಃ** ಧರ್ಮವೇ ಶತ್ರುರಾಜರ ಸಂಹಾರವು ಧರ್ಮಕ್ಕೆ ಸಾಧನವೇ ಆಗಿದೆ ಎಂದು ಯಃ ಪದಾತಿಂ ಹಂತಿ ಸ ಭವತಿ ಚಾತುರ್ಮಾಸ್ಯಯಾಜೀ, ಇತ್ಯಾದಿ ಯಾರು ಶತ್ರುರಾಜರ ಕಾಲಾಳು ಆದವನನ್ನು ಕೊಲ್ಲುವನೋ ಅವನು ಚಾತುರ್ಮಾಸ್ಯ ಯಾಗ ಮಾಡುವವನು ಎಂದು **ಶಾಶ್ವತಂ** ನಿತ್ಯವಾದ **ವೇದವಚಃ** ವೇದವಚನವು **ಮೇ ಬೋಧಾಯ** ನನಗೆ ಬಂದ ಭ್ರಮವನ್ನು ಕಳೆದು ಯಥಾರ್ಥಜ್ಞಾನವನ್ನು ತಂದು ಕೊಡುವದಕ್ಕಾಗಿ **ನ ಕಲ್ಪತೇ** ಸಮರ್ಥವಾಗುವದಿಲ್ಲ.

*ಭಾಗವತತಾತ್ಪರ್ಯ*

**ಯಃ ಪದಾತಿಂ ಹಂತಿ ಸ ಭವತಿ ಚಾತುರ್ಮಾಸ್ಯಯಾಜೀ ಯಃ ಸಾದಿನಂ**
**ಸೋಽಗ್ನಿಷ್ಟೋಮಸ್ಯ ಯೋ ಹಂತಿ ಗಜರಥೌ**
**ಸೋಽಶ್ವಮೇಧರಾಜಸೂಯಾಭ್ಯಾಂ ಇತ್ಯಾದಿ ಶಾಶ್ವತಂ ವಚಃ ||೫||**

ತನ್ನ ಪ್ರಜೆಗಳಿಗೆ ಶತ್ರುರಾಜರಿಂದ ತೊಂದರೆ ಬಂದರೆ ತನ್ನ ಪ್ರಜಾರಕ್ಷಣೆಗಾಗಿ ಶತ್ರುರಾಜರನ್ನು ಸಂಹರಿಸುವದು ರಾಜನ ಕರ್ತವ್ಯ. ಆದರೆ ನನ್ನ ತಮ್ಮನಾದ ದುರ್ಯೋಧನ ತನ್ನ ಪ್ರಜೆಗಳನ್ನು ರಕ್ಷಿಸುತ್ತಿರುವನು. ಯುಧಿಷ್ಠಿರನು ಕೇವಲ ರಾಜ್ಯಲೋಭಕ್ಕಾಗಿ ದುರ್ಯೋಧನನನ್ನು ಸಂಹರಿಸುವದು ಪಾಪಕ್ಕೆ ಕಾರಣವಾಗುವದು. ಈ ವಿಷಯದಲ್ಲಿ ಅನಾದಿನಿತ್ಯವಾದ ವೇದದ ಮಾತು ಯಾವುದು ಎಂಬುದನ್ನು ತಿಳಿಸುವರು. ಯಃ ಪದಾತಿಂ ಹಂತಿ ಇತ್ಯಾದಿ ತಾತ್ಪರ್ಯದ ಮೂಲಕ. ಕುದುರೆ ಸವಾರನನ್ನು, ಅಗ್ನಿಷ್ಟೋಮ ಯಾಗ ಮಾಡುವವನನ್ನು ಯಾರು ಸಂಹರಿಸುವರೋ, ಯಾರು ಗಜಗಳನ್ನು ರಥಗಳನ್ನು ನಾಶಪಡಿಸುವರೋ ಅವರು ಅಶ್ವಮೇಧರಾಜಸೂಯಯಾಗಗಳಿಂದ ಆ ಪಾಪವನ್ನು ಪರಿಹರಿಸಿಕೊಳ್ಳುವರು.

ನಿತ್ಯವಾದ ಅಪೌರುಷೇಯವಾದ ವೇದವಾಣಿಯು ಶತ್ರುರಾಜರ ವಧ ಇದು ಅಧರ್ಮ ಎಂಬ ಭ್ರಮವನ್ನು ನಿರಾಕರಿಸಿ ಶತ್ರುರಾಜರ ಸಂಹಾರ ಇದು ಧರ್ಮ ಎಂದು ಯಥಾರ್ಥಜ್ಞಾನವನ್ನು ಏಕೆ ಹುಟ್ಟಿಸಲು ಸಮರ್ಥವಲ್ಲ ಎಂದರೆ ಆದಕ್ಕೆ ಹೇಳುವರು

**ಸ್ತ್ರೀಣಾಂ ಮದ್ಧತಬಂಧೂನಾಂ ದ್ರೋಹೋ ಯೋಽಸಾವಿಹಾನ್ವಿತಃ ।**
**ಕರ್ಮಭಿರ್ಹಯಮೇಧೀಯೈರ್ನಾಹಂ ಕಲ್ಪೋ ವ್ಯಪೋಹಿತುಮ್ ||೬||**

**ಮದ್ಧತಬಂಧೂನಾಂ** ನನ್ನಿಂದ ಸಾವನ್ನಪ್ಪಿದ ಬಂಧುಗಳ ಅಥವಾ ನನ್ನ ನಿಮಿತ್ತದಿಂದ ಸತ್ತು ಹೋದ ಬಂಧುಗಳ **ಸ್ತ್ರೀಣಾಂ** ಅವರ ಸ್ತ್ರೀಯರ **ಯಃ ಅಸೌ ದ್ರೋಹಃ** ಯಾವ ಈ ಸಂಹಾರರೂಪವಾದ ಗಂಡನ ವಿಯೋಗವಿದೆಯೋ (ಅವರಿಗೆ ವೈಧವ್ಯವನ್ನು ತಂದು ಕೊಡುವದು ಎಂದರ್ಥ) **ತಂ** ಅಂತಹ ಗಂಡನ ವಿಯೋಗರೂಪವಾದ ಸ್ತ್ರೀಸಂಹಾರವನ್ನು **ಅಹಂ** ನಾನು **ಹಯಮೇಧೀಯೈಃ** ಅಶ್ವಮೇಧಸಂಬಂಧಿಯಾದ **ಕರ್ಮಭಿಃ** ಯಾಗರೂಪಕರ್ಮಗಳಿಂದ **ವ್ಯಪೋಹಿತುಂ** ಪಾಪವನ್ನು ಪರಿಹರಿಸಲು ನ **ಕಲ್ಯಃ** ಸಮರ್ಥನಲ್ಲ.

ಈ ವಿಷಯದಲ್ಲಿ ಒಂದು ಉದಾಹರಣೆ

**ಯಥಾ ಪಂಕೇನ ಪಂಕಾಂಭಃ ಸುರಯಾ ವಾ ಸುರಾಕೃತಮ್ ।**
**ಭೂತಹತ್ಯಾಂ ತಥೈವೈತಾಂ ನ ಯಜ್ಞೋ ಮಾರ್ಷ್ಟುಮರ್ಹತಿ ॥೭॥**

**ಪಂಕಾಂಭಃ** ಕೆಸರಿನ ನೀರು **ಪಂಕೇನ** ಕೆಸರಿನಿಂದ ಕೂಡಿದ ವಸ್ತುವನ್ನು ಶುದ್ಧಗೊಳಿಸಲು **ಯಥಾ ನ ಶಕ್ನೋತಿ** ಹೇಗೆ ಸಾಧ್ಯವಿಲ್ಲವೋ, **ಸುರಾಕೃತಂ ಸುರಯಾ** ಮದ್ಯದಿಂದ **ಕೃತಂ** ಕೂಡಿ ಹೋದ ವಸ್ತುವನ್ನು **ಸುರಾ** ಮದ್ಯವು **ಯಥಾ ನ ಶಕ್ತಾ** ಹೇಗೆ ಅದರಲ್ಲಿರುವ ದೋಷವನ್ನು ನಾಶಮಾಡಿ ಶುದ್ಧಗೊಳಿಸಲು ಸಮರ್ಥವಲ್ಲವೋ. ಯಾಕೆಂದರೆ ಸ್ವಯಂ ಮದ್ಯ(ಹೆಂಡ ಅಥವಾ ಸಾರಾಯಿ) ಅಶುದ್ಧವಾಗಿದೆ. **ತಥಾ ಏವ** ಅದೇ ರೀತಿಯಾಗಿ **ಯಜ್ಞಃ** ಅಶ್ವಮೇಧರಾಜಸೂಯರೂಪವಾದ ಯಜ್ಞವು ಹಿಂಸಾರೂಪವಾಗಿರುವದರಿಂದ **ಏತಾಂ ಭೂತಹತ್ಯಾಂ** ಈ ಅಕ್ಷೌಹಿಣೀ ಸಂಖ್ಯಾಕವಾದ ಸೈನಿಕರ ಬಂಧುಬಾಂಧವರ ಸಂಹಾರದಿಂದ ಬಂದ ಪಾಪವನ್ನು **ಮಾರ್ಷ್ಟುಂ** ಪರಿಹರಿಸಲು **ನ ಅರ್ಹತಿ** ಯೋಗ್ಯವಲ್ಲ. ಅಂದರೆ ಸಮರ್ಥವಲ್ಲ.

**ವಿಶೇಷ :-** ಇಲ್ಲಿ ಯುಧಿಷ್ಠಿರನು ಯಜ್ಞವನ್ನು ನಿಂದನೆ ಮಾಡಿದ್ದು ಯಜ್ಞಯಾಗಾದಿಕರ್ಮಗಳಿಂತಲೂ ಜ್ಞಾನವು ಶ್ರೇಷ್ಠ, ಜ್ಞಾನಕ್ಕೆ ಹೆಚ್ಚು ಮಹತ್ವವಿದೆ ಎನ್ನುವ ಅಭಿಪ್ರಾಯದಲ್ಲಿ ಹೇಳಿರುವನು. ಯಜ್ಞಯಾಗಾದಿಗಳನ್ನು ಮಾಡಲೇ ಬಾರದು ಎಂಬ ಉದ್ದೇಶದಿಂದಲ್ಲ. ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ಇತ್ಯಾದಿ ಮಾತುಗಳು ಭಗವಂತನಲ್ಲಿ ಅರ್ಪಿಸಬೇಕು ಎಂಬ ಬುದ್ಧಿಯಿಂದ ಮಾಡಿದ ಯಜ್ಞಯಾಗಾದಿಗಳು ಪಾಪಸಾಧನವಾಗುವದಿಲ್ಲ ಕಿಂತು ಪಾಪಗಳನ್ನು ನಾಶಮಾಡುವವು. ಪ್ರಕೃತ ನನ್ನ ಮನಸ್ಸು ಬಂಧುಮೋಹಯುಕ್ತವಾಗಿದೆ ಆವಿಧವಾದ ಮನಸ್ಸಿನಲ್ಲಿ ಭಗವದನುಸಂಧಾನವನ್ನು ಮಾಡಿಕೊಳ್ಳಲು ಶಕ್ಯವಲ್ಲ. ಆದ್ದರಿಂದ ಭಗವದನುಸಂಧಾನರಹಿತವಾದ ಯಜ್ಞವನ್ನು ಮಾಡಿರುವದರಿಂದ ಅದು ಪಾಪಕ್ಕೆ ಕಾರಣವಾಗುವದು. ಯಜ್ಞಯಾಗಾದಿಕರ್ಮಗಳಿಂದ ಜ್ಞಾನವನ್ನು ಹೊಂದುತ್ತಾನೆ. ಕರ್ಮಣಾ ಜ್ಞಾನಮಾತನೋತಿ ಎಂಬ ಪ್ರಮಾಣವಿರುವದರಿಂದ.

**ಸೂತ ಉವಾಚ -**

**ಇತಿ ಭೀತಃ ಪ್ರಜಾದ್ರೋಹಾತ್ ಸರ್ವಧರ್ಮವಿವಿತ್ಸಯಾ ।**
**ತತೋ ವಿಶಸನಂ ಪ್ರಾಯಾದ್ಯತ್ರ ದೇವವ್ರತೋಽಪತತ್ ॥೮॥**

**ಪ್ರಜಾದ್ರೋಹಾತ್** ಪ್ರಜೆಗಳ ಸಂಹಾರದಿಂದ ಪಾಪಬಂದಿದೆ **ಇತಿ** ಎಂದು **ಭೀತಃ** ಹೆದರಿದ **ಯುಧಿಷ್ಠಿರಃ** ಧರ್ಮರಾಜನು **ಯತ್ರ** ಯಾವ ಯುದ್ಧ ಸ್ಥಳದಲ್ಲಿ **ಭೀಷ್ಮಃ** ಭೀಷ್ಮನು **ಅಪತತ್** ಬಿದ್ದಿರುವನೋ **ತತ್ರಾಪಿ** ಅಲ್ಲಿಯೇ **ಸರ್ವಧರ್ಮವಿವಿತ್ಸಯಾ** ಎಲ್ಲ ವಿಧವಾದ ಧರ್ಮದ ಮರ್ಮವನ್ನು ತಿಳಿಯಬೇಕು ಎಂಬ ಇಚ್ಛೆಯಿಂದ **ತತಃ** ಹಸ್ತಿನಾವತಿ ಪಟ್ಟಣದಿಂದ **ವಿಶಸನಂ** ಸಮರಾಂಗಣವಾದ **ಕುರುಕ್ಷೇತ್ರಂ** ಕುರುಕ್ಷೇತ್ರವನ್ನು ಕುರಿತು **ಪ್ರಾಯಾತ್** ಹೊರಟನು.

**ತದಾ ತದ್ಭ್ರಾತರಃ ಸರ್ವೇ ಸದಶ್ವೈಸ್ಸ್ವರ್ಣಭೂಷಿತೈಃ ।**
**ಅನ್ವಗಚ್ಛನ್ ರಥೈರ್ವಿಪ್ರಾ ವ್ಯಾಸಧೌಮ್ಯಾದಯಸ್ತಥಾ ॥೯॥**

**ತದಾ** ಕುರುಕ್ಷೇತ್ರಕ್ಕೆ ಹೊರಡುವಾಗ **ಸರ್ವೇ** ಎಲ್ಲ **ತದ್ಭ್ರಾತರಃ** ಯುಧಿಷ್ಠಿರನ ತಮ್ಮಂದಿರಾದ ಭೀಮಾದಿಗಳು **ಸ್ವರ್ಣಭೂಷಿತೈಃ** ಬಂಗಾರದ ಆಭರಣಗಳಿಂದ ಅಲಂಕೃತವಾದ **ಸದಶ್ವೈಃ** ಶ್ರೇಷ್ಠವಾದ ಕುದುರೆಗಳಿಂದ ಕೂಡಿದ **ರಥೈಃ** ರಥಗಳಿಂದ **ತಥಾ** ಅದೇ ರೀತಿಯಾಗಿ **ವ್ಯಾಸಧೌಮ್ಯಾದಯಃ** ವೇದವ್ಯಾಸದೇವರು ಧೌಮ್ಯ ಮೊದಲಾದ **ವಿಪ್ರಾಃ** ಬ್ರಾಹ್ಮಣರು **ಅನ್ವಗಚ್ಛನ್** ಅನುಸರಿಸಿ ಹೋದರು.

**ಭಗವಾನಪಿ ವಿಪ್ರರ್ಷೇ ರಥೇನ ಸಧನಂಜಯಃ ।**
**ಸ ತೈರ್ವ್ಯರೋಚತ ನೃಪಃ ಕುಬೇರ ಇವ ಗುಹ್ಯಕೈಃ ॥೧೦॥**

**ಹೇ ವಿಪ್ರರ್ಷೇ** ಹೇ ಶೌನಕರೇ **ರಥೇನ ಸಹ** ರಥ ಸಮೇತನಾಗಿ **ಸಧನಂಜಯಃ** ಅರ್ಜುನನಿಂದ ಸಹಿತನಾದ **ತೈಃ** ಪಾಂಡವರಿಂದ ಸಹಿತನಾದ **ಸಃ ನೃಪಃ** ಆ ಯುಧಿಷ್ಠಿರನು **ಭಗವಾನಪಿ** ಶ್ರೀಕೃಷ್ಣನು ಕೂಡ **ಗುಹ್ಯಕೈಃ** ಯಕ್ಷರಿಂದ ಕೂಡಿದ **ಕುಬೇರಃ ಇವ** ಕುಬೇರನು ಶೋಭಿಸುವಂತೆ **ವ್ಯರೋಚತ** ಶೋಭಿಸಿದನು.

ಕೃಷ್ಣನ ಜೊತೆಗೆ ಕುರುಕ್ಷೇತ್ರದಲ್ಲಿ ಶರಪಂಜರದ ಮೇಲೆ ಮಲಗಿದ ಭೀಷ್ಮನ ಸಮೀಪಕ್ಕೆ ಬಂದು ಏನು ಮಾಡಿದರು ಎಂದು ತಿಳಿಸುವರು.

**ದೃಷ್ಟ್ವಾ ನಿಪತಿತಂ ಭೂಮೌ ದಿವಶ್ಚ್ಯುತಮಿವಾಮರಮ್ ।**
**ಪ್ರಣೇಮುಃ ಪಾಂಡವಾಃ ಭೀಷ್ಮಂ ಸಾನುಗಾಃ ಸಹಚಕ್ರಿಣಃ ॥೧೧॥**

**ಸಾನುಗಾಃ** ಅನುಚರರಿಂದ ಸಹಿತರಾದ **ಸಹಚಕ್ರಿಣಃ** ಶ್ರೀಕೃಷ್ಣಪರಮಾತ್ಮನಿಂದ ಸಹಿತರಾದ **ಪಾಂಡವಾಃ** ಯುಧಿಷ್ಠಿರ ಮೊದಲಾದ ಪಾಂಡವರು **ದಿವಃ** ಸ್ವರ್ಗದಿಂದ

**ಚ್ಯುತಂ** ಭೂಮಿಗೆ ಬಂದಿರುವ **ಅಮರಂ ಇವ** ದೇವತೆಯಂತೆ ಶೋಭಿಸುವ **ಭೂಮೌ** ಯುದ್ಧಭೂಮಿಯಲ್ಲಿ **ನಿಪತಿತಂ** ಬಿದ್ದಿರುವ **ಭೀಷ್ಮಂ** ಭೀಷ್ಮಾಚಾರ್ಯರನ್ನು **ದೃಷ್ಟ್ವಾ** ನೋಡಿ **ಪ್ರಣೇಮುಃ** ನಮಸ್ಕರಿಸಿದರು.

ಪಾಂಡವರು ನಮಸ್ಕರಿಸುವಾಗ ಉಪಸ್ಥಿತರಾದವರನ್ನು ತಿಳಿಸುತ್ತಿರುವರು

**ತತ್ರ ಬ್ರಹ್ಮರ್ಷಯಃ ಸರ್ವೇ ದೇವರ್ಷಯಶ್ಚ ಸತ್ತಮ ।**
**ರಾಜರ್ಷಯಶ್ಚ ತತ್ರಾಸನ್ ದ್ರಷ್ಟುಂ ಭರತಪುಂಗವಮ್ ॥೧೨॥**

**ಹೇ ಸತ್ತಮ** ಹೇ ಸಜ್ಜನಶ್ರೇಷ್ಠರಾದ ಶೌನಕರೇ **ತತ್ರ** ಆ ಸಂದರ್ಭದಲ್ಲಿ **ಸರ್ವೇ ಬ್ರಹ್ಮರ್ಷಯಃ** ನಾರದರೇ ಮೊದಲಾದ ಬ್ರಹ್ಮರ್ಷಿಗಳು **ಚ** ಮತ್ತು **ಸರ್ವೇ ದೇವರ್ಷಯಃ** ವೇದವ್ಯಾಸದೇವರೇ ಮೊದಲಾದ ದೇವರ್ಷಿಗಳು **ಚ** ಮತ್ತು **ತತ್ರ** ಆ ಯುದ್ಧಭೂಮಿಯಲ್ಲಿ **ರಾಜರ್ಷಯಃ** ವಿಶ್ವಾಮಿತ್ರ ಮೊದಲಾದ ರಾಜರ್ಷಿಗಳು **ಭರತಪುಂಗವಂ** ಭರತಕುಲದಲ್ಲಿ ಶ್ರೇಷ್ಠನಾದ ಭೀಷ್ಮನನ್ನು **ದ್ರಷ್ಟುಂ** ನೋಡಲು **ಆಸನ್** ಇದ್ದರು.

ಅಲ್ಲಿ ಉಪಸ್ಥಿತರಾದ ಋಷಿಗಳ ಹೆಸರುಗಳನ್ನು ಹೇಳುವರು.

**ಪರ್ವತೋ ನಾರದೋ ಧೌಮ್ಯೋ ಭಗವಾನ್ ಬಾದರಾಯಣಃ ।**
**ಬೃಹದಶ್ವೋ ಭರದ್ವಾಜಃ ಸಶಿಷ್ಯೋ ರೇಣುಕಾಸುತಃ ॥೧೩॥**

**ಪರ್ವತಃ** ಪರ್ವತಋಷಿಗಳು **ನಾರದಃ** ನಾರದರು **ಧೌಮ್ಯಃ** ಧೌಮ್ಯಾಚಾರ್ಯರು **ಭಗವಾನ್** ಷಡ್ಗುಣಸಂಪನ್ನರಾದ **ಬಾದರಾಯಣಃ** ವೇದವ್ಯಾಸದೇವರು **ಬೃಹದಶ್ವೋ** ಬೃಹದಶ್ವಋಷಿಗಳು **ಭರದ್ವಾಜಃ** ಭರದ್ವಾಜರು **ಸಶಿಷ್ಯಃ** ಶಿಷ್ಯರಿಂದ ಸಹಿತರಾದ **ರೇಣುಕಾಸುತಃ** ಪರಶುರಾಮದೇವರು **ತತ್ರ** ಅಲ್ಲಿ **ಆಸನ್** ಇದ್ದರು.

**ವಸಿಷ್ಠ ಇಂದ್ರಪ್ರಮದಸ್ತ್ರಿತೋ ಗೃತ್ಸಮದೋಽಸಿತಃ ।**
**ಕಕ್ಷೀವಾನ್ ಗೌತಮೋಽತ್ರಿಶ್ಚ ಕೌಶಿಕೋಽಥ ಸುದರ್ಶನಃ ॥೧೪॥**

**ಅಥ** ಅನಂತರ **ವಸಿಷ್ಠಃ** ವಸಿಷ್ಠರು **ಇಂದ್ರಪ್ರಮದಃ** ಇಂದ್ರಪ್ರಮದರು **ತ್ರಿತಃ** ಮೂರನೆಯದವರು **ಗೃತ್ಸಮದಃ** ಗೃತ್ಸಮದಋಷಿಗಳು **ಅಸಿತಃ** ಅಸಿತಋಷಿಗಳು **ಕಕ್ಷೀವಾನ್** ಕಕ್ಷೀವಾನ್ ಋಷಿಗಳು **ಗೌತಮಃ** ಗೌತಮಋಷಿಗಳು **ಅತ್ರಿಃ**

ಅತ್ರಿಋಷಿಗಳು **ಚ** ಮತ್ತು **ಸುದರ್ಶನಃ** ಮಂಗಲಮಯವಾದ ದರ್ಶನವುಳ್ಳ **ಕೌಶಿಕಃ** ವಿಶ್ವಾಮಿತ್ರರು **ಆಸನ್** ಇದ್ದರು.

**ಅನ್ಯೇ ಚ ಮುನಯೋ ಬ್ರಹ್ಮನ್ ಬ್ರಹ್ಮರಾತಾದಯೋಽಮಲಾಃ ।**
**ಶಿಷ್ಯೈರುಪೇತಾ ಆಜಗ್ಮುಃ ಕಶ್ಯಪಾಂಗಿರಸಾದಯಃ ॥೧೫॥**

**ಹೇ ಬ್ರಹ್ಮನ್** ಮಹಾತ್ಮರಾದ ಶೌನಕರೇ **ಅಮಲಾಃ** ತ್ರಿಕರಣಶುದ್ಧರಾದ **ಬ್ರಹ್ಮರಾತಾದಯಃ** ಶುಕಾಚಾರ್ಯರೇ ಮೊದಲಾದ **ಅನ್ಯೇ ಚ ಮುನಯೋ** ಇನ್ನು ಬೇರೆ ಮುನಿಗಳು **ಶಿಷ್ಯೈಃ ಉಪೇತಾಃ** ಶಿಷ್ಯರಿಂದ ಒಡಗೂಡಿದ **ಕಶ್ಯಪಾಂಗಿರಸಾದಯಃ** ಕಶ್ಯಪ ಬೃಹಸ್ಪತ್ಯಾಚಾರ್ಯರೇ ಮೊದಲಾದ ಋಷಿಗಳು **ಆಜಗ್ಮುಃ** ಬಂದರು.

ಬಂದ ಮುನಿಪುಂಗವರನ್ನು ಭೀಷ್ಮರು ಸತ್ಕರಿಸಿದ ರೀತಿ ಹೇಳುತ್ತಾರೆ.

**ತಾನ್ ಸಮೇತಾನ್ ಮಹಾಭಾಗ ಉಪಲಭ್ಯ ವಸೂತ್ತಮಃ ।**
**ಪೂಜಯಾಮಾಸ ಧರ್ಮಜ್ಞೋ ದೇಶಕಾಲವಿಭಾಗವಿತ್ ॥೧೮॥**

**ಹೇ ಮಹಾಭಾಗ** ಶ್ರೋತ್ರವೃಂದದಲ್ಲಿಯೇ ಶ್ರೇಷ್ಠರಾದ ಶೌನಕರೇ **ಧರ್ಮಜ್ಞಃ** ಋಷಿಮುನಿರಾಜಶ್ರೇಷ್ಠರು ತಮ್ಮ ಬಳಿಗೆ ಬಂದಾಗ ಹೇಗೆ ಸತ್ಕರಿಸಬೇಕು ಎಂಬ ಧರ್ಮವನ್ನು ತಿಳಿದಿರುವ **ದೇಶಕಾಲವಿಭಾಗವಿತ್ ದೇಶ** ಕುರುಕ್ಷೇತ್ರ **ಕಾಲ** ಶರಪಂಜರದ ಮೇಲೆ ಪವಡಿಸಿದ ಕಾಲ **ವಿಭಾಗ** ಮುನಿಗಳು ಆಗಮಿಸಿದ ಪ್ರಸಂಗ ಇವುಗಳೆಲ್ಲವನ್ನು **ವಿತ್** ತಿಳಿದಿರುವ **ವಸೂತ್ತಮಃ** ವಸುಗಳಲ್ಲಿ ಉತ್ತಮರಾದ ಭೀಷ್ಮರು **ಸಮೇತಾನ್ ತಾನ್** ತಮ್ಮ ಬಳಿಗೆ ಬಂದ ಋಷಿಮುನಿಗಳನ್ನು **ಪೂಜಯಾಮಾಸ** ಮಾನಸಿಕ, ವಾಚನಿಕ, ಕೈಜೋಡಿಸಿ ನಮಸ್ಕಾರರೂಪವಾದ ಪೂಜೆಯನ್ನು ಮಾಡಿದರು.

**ವಿಶೇಷ :- ಅನ್ಯತ್ರ** ಆಯಾ ದೇಶಗಳ ಕಾಲಗಳ ಪ್ರಸಂಗಗಳ ಜ್ಞಾನವಿರುವ **ಧರ್ಮಜ್ಞಃ** ಆಪತ್ತು ಮತ್ತು ಸಂಪತ್ತು ಧರ್ಮಗಳನ್ನು ತಿಳಿದಿರುವ **ಧರ್ಮಃ** ಷಡ್ಗುಣ್ಯೈಶ್ವರ್ಯಸಂಪನ್ನನಾದ **ತಂ** ಆ ದೇವರನ್ನು **ಜ್ಞಃ** ತಿಳಿದಿರುವ ಎಂದು ಇನ್ನೊಂದರ್ಥವನ್ನು ಧರ್ಮಜ್ಞಃ ಎಂಬುದಕ್ಕೆ ತಿಳಿಯಬಹುದು.

ಭೀಷ್ಮರು ಕೃಷ್ಣನಿಗೆ ನಮಸ್ಕರಿಸುವ ರೀತಿಯನ್ನು ಹೇಳುತ್ತಾರೆ

**ಕೃಷ್ಣಂ ಚ ತತ್ಪ್ರಭಾವಜ್ಞ ಆಸೀನಂ ಜಗದೀಶ್ವರಮ್ ।**
**ಹೃದಿಸ್ಥಂ ಪೂಜಯಾಮಾಸ ಮಾಯಯೋಪಾತ್ತವಿಗ್ರಹಮ್ ॥೧೭॥**

**ತತ್ಪ್ರಭಾವಜ್ಞಃ** ಶ್ರೀಕೃಷ್ಣನ ಸಾಮರ್ಥ್ಯವನ್ನು ತಿಳಿದಿರುವ ಭೀಷ್ಮಾಚಾರ್ಯರು **ಜಗದೀಶ್ವರಂ** ಜಗತ್ತಿಗೆ ಸ್ವಾಮಿಯಾದ **ಹೃದಿಸ್ಥಂ** ಧ್ಯಾನ ಮತ್ತು ಉಪಾಸನೆಯಿಂದ ತಮ್ಮ ಶರೀರಮಧ್ಯದಲ್ಲಿ ಪುಂಡರೀಕಕರ್ಣಿಕೆಯಲ್ಲಿ ದೀಪದಂತೆ ಪ್ರಜ್ವಲಿಸುತ್ತಿರುವ ದೇವರನ್ನು **ಹೃದಿಸ್ಥಂ** ತಮ್ಮ ಮುಂದಿರುವ **ಮಾಯಯಾ** ತನ್ನ ಇಚ್ಛೆಯಿಂದ **ಉಪಾತ್ತವಿಗ್ರಹಂ** ವಸುದೇವನನ್ನು ತಂದೆ ಎಂದು ಅಂಗೀಕರಿಸಿ ಅವನ ಶರೀರದಿಂದ ಪ್ರಕಟಗೊಂಡ ಶರೀರವುಳ್ಳ **ಕೃಷ್ಣಂ** ಶ್ರೀಕೃಷ್ಣಪರಮಾತ್ಮನನ್ನು **ಪೂಜಯಾಮಾಸ** ಕಾಯಿಕ, ವಾಚನಿಕ ಮತ್ತು ಮಾನಸಿಕವಾಗಿ ನಮಸ್ಕಾರ ಮಾಡಿದರು ಅಥವಾ ಪೂಜೆಯನ್ನು ಸಲ್ಲಿಸಿದರು.

ಭೀಷ್ಮರು ಪಾಂಡವರನ್ನು ಉದ್ದೇಶಿಸಿ ಆಡಿದ ಮಾತುಗಳನ್ನು ಹೇಳುತ್ತಿರುವರು.

**ಪಾಂಡುಪುತ್ರಾನುಪಾಸೀನಾನ್ ಪ್ರಶ್ರಯಪ್ರೇಮಸನ್ನತಾನ್ ।**
**ಅಭ್ಯಾಚಷ್ಟಾನುರಾಗಾಸ್ರೈರಂಧೀಭೂತೇನ ಚಕ್ಷುಷಾ ॥೧೮॥**

**ಅನುರಾಗಾಸ್ರೈಃ** ಪ್ರೇಮಪೂರ್ಣವಾದ ಬಾಷ್ಪಗಳಿಂದ **ಅಂಧೀಭೂತೇನ** ಕತ್ತಲೆಯಿಂದ ಕವಿದು ಹೋದ **ಚಕ್ಷುಷಾ** ಕಣ್ಣಿನಿಂದ **ಯುಕ್ತಃ** ಕೂಡಿದ ಭೀಷ್ಮಾಚಾರ್ಯರು **ಪ್ರಶ್ರಯಪ್ರೇಮಸನ್ನತಾನ್** ವಿನಯ ಹಾಗು ಪ್ರೇಮ ಇವುಗಳಿಂದ ತಲೆ ಬಾಗಿ ನಮಸ್ಕರಿಸಿದ **ಉಪಾಸೀನಾನ್** ಸಮೀಪದಲ್ಲಿರುವ **ಪಾಂಡುಪುತ್ರಾನ್** ಪಾಂಡುರಾಜನ ಮಕ್ಕಳಾದ ಯುಧಿಷ್ಠಿರಾದಿಗಳನ್ನು **ಅಭ್ಯಾಚಷ್ಟ** ಮಾತನಾಡಿಸಿದರು.

ಭೀಷ್ಮರು ಧರ್ಮರಾಜನಿಗೆ ಯಾವ ಮಾತುಗಳನ್ನು ಹೇಳುವರು ಎಂದು ತಿಳಿಸುವರು.

ಭೀಷ್ಮ ಉವಾಚ -

**ಅಹೋ ಕಷ್ಟಮಹೋಽನ್ಯಾಯ್ಯಂ ಯದ್ ಯೂಯಂ ಧರ್ಮನಂದನ ।**
**ಜೀವಿತುಂ ನಾರ್ಹಥ ಕ್ಲಿಷ್ಟಂ ವಿಪ್ರಧರ್ಮಾಚ್ಯುತಾಶ್ರಯ್ಯಾಃ ॥೧೯॥**

**ಹೇ ಧರ್ಮನಂದನ** ಹೇ ಯುಧಿಷ್ಠಿರನೇ **ಯೂಯಂ** ನೀವು **ಕ್ಲಿಷ್ಟಂ** ಕಷ್ಟದಿಂದ ಒಡಗೂಡಿದ **ಜೀವಿತುಂ** ಜೀವನವನ್ನು ನಡೆಸಲು **ನಾರ್ಹಥ** ಯೋಗ್ಯರಲ್ಲ **ಯತ್** ಯಾವ ಕಾರಣದಿಂದ **ವಿಪ್ರಧರ್ಮಾಚ್ಯುತಾಶ್ರಯಾಃ ವಿಪ್ರ** ಬ್ರಾಹ್ಮಣರ **ಧರ್ಮ** ಧರ್ಮದಿಂದ **ಚ್ಯುತ** ರಹಿತವಾದ **ಆಶ್ರಯಾ** ಆಶ್ರಯವುಳ್ಳವರು ಒಬ್ಬ ಬ್ರಾಹ್ಮಣರ ಆಶ್ರಯವಿಲ್ಲದಿರುವ ನಿಮಗೆ **ಜೀವಿತುಂ ಕ್ಲಿಷ್ಟಂ** ಜೀವನವನ್ನು ನಡೆಸಲು ಕಷ್ಟ **ತಥಾಪಿ**

ಆದರೂ **ಯತ್ ಕ್ಲಿಷ್ಟಂ ಜೀವಥ** ಯಾವ ಕಷ್ಟಜೀವನವನ್ನು ನಡೆಸುತ್ತೀರಿ **ತತ್ ಅನ್ಯಾಯ್ಯಂ** ಆಶ್ಚರ್ಯಕ್ಕಿಂತಲೂ ಆಶ್ಚರ್ಯ ಅಂದರೆ ಪರಮಾಶ್ಚರ್ಯ.

**ವಿಶೇಷ :-**ಇಲ್ಲಿ ಧರ್ಮನಂದನಃ ಎಂಬುವಲ್ಲಿ ಹಲವು ರೀತಿಯಾಗಿ ವಿಗ್ರಹವನ್ನು ತೋರಿಸುವರು. ಧರ್ಮಸ್ಯ ನಂದನಃ, ಧರ್ಮಂ ನಂದಯತಿ ಇತಿ, ಧರ್ಮ ಏವ ನಂದನಃ ಯಸ್ಯ ಸಃ ಇತಿ ವಾ, ಧರ್ಮೇಣ ಸುಖಕ್ರೀಡಾ ಯಸ್ಯ ಸ ಇತಿ ವಾ, ಆದ್ದರಿಂದ ನಂದನಂ ಸುಖಂ ಯಸ್ಯ ಸಃ ತಥೇತಿ ವಾ. ಎಂದು ವಿಗ್ರಹವನ್ನು ಮಾಡಿರುವರು.

ಯುಧಿಷ್ಠಿರನು ಭೀಷ್ಮಾಚಾರ್ಯರಿಗೆ ಕೇಳುವ ಮಾತು ನಮ್ಮ ಜೀವನ ಕಷ್ಟ ಎಂದು ಹೇಳಿದಿರಿ ಅದು ಹೇಗೆ ಎಂದು ವಿವರಿಸುವರು.

**ಸಂಸ್ಥಿತೇಽತಿರಥೇ ಪಾಂಡೌ ಪೃಥಾ ಬಾಲಪ್ರಜಾ ವಧೂಃ ।**
**ಯುಷ್ಮತ್ಕೃತೇ ಬಹುಕ್ಲೇಶಾನ್ ಪ್ರಾಪ್ತಾಽತೋಕವತೀ ಯಥಾ ॥೨೦॥**

**ಅತಿರಥೇ** ಸರ್ವಸಮರ್ಥನಾದ **ಪಾಂಡೌ** ಪಾಂಡುರಾಜನು **ಸಂಸ್ಥಿತೇ ಸತಿ** ಸತ್ತು ಸ್ವರ್ಗಕ್ಕೆ ಹೋಗುತ್ತಿರಲು **ಅತೋಕವತೀ** ಮಕ್ಕಳಿಲ್ಲದಿರುವ ಹೆಣ್ಣು ಮಗಳು **ಯಥಾ** ಹೇಗೆ ದುಃಖವನ್ನು ಹೊಂದುವಳೋ **ತಥಾ** ಅದೇ ರೀತಿಯಾಗಿ **ಬಾಲಪ್ರಜಾ** ಬಾಲಕರೇ ಮಕ್ಕಳಾಗಿವುಳ್ಳ **ವಧೂಃ** ವಧುವಾದ **ಪೃಥಾ** ಕುಂತಿಯು **ಯುಷ್ಮತ್ಕೃತೇ** ನಿಮ್ಮ ಪಾಲನೆ ಹಾಗು ಪೋಷಣೆಗೋಸ್ಕರ **ಬಹುಕ್ಲೇಶಾನ್** ಅನೇಕ ಕಷ್ಟಗಳನ್ನು **ಪ್ರಾಪ್ತಾ** ಹೊಂದಿದಳು.

ಈ ರೀತಿಯಾಗಿ ಅಪ್ರಿಯವಾಗುವದಕ್ಕೆ ನಿಮ್ಮ ಪ್ರಾರಬ್ಧಕರ್ಮನಿಯಾಮಕನಾದ ಶ್ರೀಹರಿಯೇ ಕಾರಣ ಎಂದು ತಿಳಿಸುವರು.

**ಸರ್ವಂ ಕಾಲಕೃತಂ ಮನ್ಯೇ ಭವತಾಂ ಚ ಯದಪ್ರಿಯಮ್ ।**
**ಸಕಾಲೋ ಯದ್ವಶೇ ಲೋಕೋ ವಾಯೋರಿವ ಘನಾವಲಿಃ ॥೨೧॥**

**ಭವತಾಂ** ವಿಪ್ರಧರ್ಮದ ಆಶ್ರಯವಿಲ್ಲದಿರುವ ನಿಮಗೆ **ಸರ್ವಂ** ಎಲ್ಲ ವಿಧವಾದ **ಯತ್** ಯಾವ **ಅಪ್ರಿಯಂ** ದುಃಖವು **ಕಾಲಕೃತಂ** ಕಾಲನಾಮಕನಾದ ಭಗವಂತನಿಂದ ಮಾಡಲ್ಪಟ್ಟದ್ದು ಎಂದು **ಅಹಂ** ನಾನು **ಮನ್ಯೇ** ತಿಳಿದಿದ್ದೇನೆ **ಘನಾವಲಿಃ** ಮೋಡಗಳ ಸರಮಾಲೆಯು **ವಾಯೋಃ ಇವ** ವಾಯುವಿನ ಅಧೀನದಲ್ಲಿ ಇರುವಂತೆ **ಲೋಕಃ** ಜೀವ ಮತ್ತು ಜಡ ಪ್ರಪಂಚವು **ಯದ್ವಶೇ** ಯಾವ ಭಗವಂತನ ಅಧೀನದಲ್ಲಿ ಇದೆಯೋ **ಸಃ**

ಆ ಭಗವಂತನು **ಕಾಲಃ** ಗುಣಪೂರ್ಣನಾಗಿದ್ದರಿಂದ ಕಾಲ ಎಂಬ ಹೆಸರಿನಿಂದ ಕರೆಸಿಕೊಳ್ಳುವನು.

ಭೀಷ್ಮರು ನಮ್ಮ ಪ್ರಾರಬ್ಧಕರ್ಮಕ್ಕೆ ಅನಿಷ್ಟವಾದವುಗಳನ್ನು ನಿಯಮಿಸುವವನು ಕಾಲನಾಮಕ ಶ್ರೀಹರಿ ಅವನೇ ಇಲ್ಲಿರುವಾಗ ನಿಮಗೆಲ್ಲಿ ವಿಪತ್ತು ಎಂದು ಹೇಳುವರು.

**ಯತ್ರ ಧರ್ಮಸುತೋ ರಾಜಾ ಗದಾಪಾಣಿರ್ವೃಕೋದರಃ ।**
**ಕೃಷ್ಣೋಽಸ್ತ್ರೀ ಗಾಂಡೀವಂ ಚಾಪಂ ಸುಹೃತ್ ಕೃಷ್ಣಸ್ತತೋ ವಿಪತ್ ॥೨೨॥**

**ಯತ್ರ** ಎಲ್ಲಿ **ಧರ್ಮಸ್ಯ ಸುತಃ** ಯಮಧರ್ಮನ ಮಗನಾದ ಯುಧಿಷ್ಠಿರನು **ರಾಜಾ** ಪ್ರಜೆಗಳನ್ನು ಸಂತೋಷಗೊಳಿಸುವ ರಾಜನು **ಯತ್ರ ಚ** ಎಲ್ಲಿ **ಗದಾಪಾಣಿಃ** ಭೂಭಾರರಾದ ದಿತಿಯ ಮಕ್ಕಳನ್ನು ಕೊಲ್ಲಲು ಕೈಯಲ್ಲಿ ಗದೆಯನ್ನು ಧರಿಸಿರುವ ಭಕ್ತಿಯಿಂದ ಕೃಷ್ಣನನ್ನು ವಶಮಾಡಿಕೊಂಡ **ವೃಕೋದರಃ** ಭೀಮಸೇನನು ಅದೇ ರೀತಿಯಾಗಿ **ಅಸ್ತ್ರೀ** ದ್ರೋಣಾಚಾರ್ಯರಿಂದ ಅಸ್ತ್ರಜ್ಞಾನವನ್ನು ಮಾಡಿಕೊಂಡವನು **ಗಾಂಡೀವಂ ಚಾಪಂ** ಗಾಂಡೀವ ಧನುಸ್ಸನ್ನು ಧರಿಸಿದ **ಅರ್ಜುನಃ** ಅರ್ಜುನನು **ಕೃಷ್ಣಃ** ನಾಶರಹಿತವಾದ ಬಲ, ಐಶ್ವರ್ಯ, ಮೊದಲಾದ ಅನಂತ ಗುಣಗಳಿಂದ ಪೂರ್ಣನಾದ ಷಡ್ಗುಣ್ಯೈಶ್ವರ್ಯಸಂಪನ್ನನಾದ ವಸುದೇವನ ಮಗನಾದ ಶ್ರೀಕೃಷ್ಣನು **ಸುಹೃತ್** ಅನಿಮಿತ್ತ ಬಂಧುವಾಗಿರುವನೋ **ತತಃ** ತತ್ರ ಅಲ್ಲಿ **ವಿಪತ್ ಕುತಃ** ವಿಪತ್ತುಗಳು ಎಲ್ಲಿಂದ ? ವಿಪತ್ತುಗಳು ಬರಲು ಶಕ್ಯವಿಲ್ಲ.

ಶ್ರೀಕೃಷ್ಣನು ತನ್ನ ಭಕ್ತರಿಂದ ಪಾಪಗಳನ್ನು ಮಾಡಿಸಿ ಅವರಿಗೆ ಅದರ ಅನಿಷ್ಟ ಫಲವನ್ನು ಹೇಗೆ ಕೊಡಲು ಸಾಧ್ಯ. ಅಂದರೆ ಅವರಿಂದ ಪಾಪಗಳನ್ನು ಮಾಡಿಸುವದಿಲ್ಲ ಎಂಬುದನ್ನು ಹೇಳುವರು.

**ನ ಹ್ಯಸ್ಯ ಕರ್ಹಿಚಿದ್ ರಾಜನ್ ಪುಮಾನ್ ವೇದ ವಿಧಿತ್ಸಿತಮ್ ।**
**ಯದ್ವಿಜಿಜ್ಞಾಸಯಾ ಯುಕ್ತಾ ಮುಹ್ಯಂತಿ ಕವಯೋಽಪಿ ಹಿ ॥೨೩॥**

**ಹೇ ರಾಜನ್** ಹೇ ಯುಧಿಷ್ಠಿರನೇ **ಯದ್ವಿಜಿಜ್ಞಾಸಯಾ** ಯಾವ ಶ್ರೀಕೃಷ್ಣನ ಸ್ವರೂಪದ ವಿಚಾರದಿಂದ **ಯುಕ್ತಾಃ** ಕೂಡಿರುವ **ಕವಯಃ ಅಪಿ** ಜ್ಞಾನಿಗಳೂ **ಮುಹ್ಯಂತಿ** ಭ್ರಾಂತರಾಗುತ್ತಾರೆ **ಅಸ್ಯ** ಅಂತಹ ಈ ಶ್ರೀಕೃಷ್ಣನಿಗೆ **ವಿಧಿತ್ಸಿತಂ** ಇಷ್ಟವನ್ನು ಮಾಡಲು **ಕಶ್ಚಿತ್ ಪುಮಾನ್** ಯಾವ ಪುರುಷನು **ಕರ್ಹಿಚಿದ್** ಎಂದಿಗೂ **ನ ಹಿ ವೇದ** ತಿಳಿಯುವದಿಲ್ಲ ಈ ಮಾತು **ಹಿ** ಪ್ರಸಿದ್ಧ

ಭೀಷ್ಮರು ಯುಧಿಷ್ಠಿರನಿಗೆ ಹೇಳಿದ್ದನ್ನು ಉಪಸಂಹಾರಮಾಡುವರು.

**ತಸ್ಮಾಜ್ಜಗದ್ದೇವತಂತ್ರಂ ವ್ಯವಸ್ಯ ಭರತರ್ಷಭ ।**
**ತಸ್ಯಾನುವಿಹಿತೋಽನಾಥಾಃ ನಾಥ ಪಾಹಿ ಪ್ರಜಾಃ ಪ್ರಭೋ ॥೨೪॥**

**ತಸ್ಮಾತ್** ಹಿಂದೆ ಹೇಳಿದ ಕಾರಣಗಳಿಂದ **ದೈವತಂತ್ರಂ** ಶ್ರೀಹರಿಯ ಅಧೀನವಾದ **ಜಗತ್** ಜಗತ್ತನ್ನು **ತಸ್ಯ** ಶ್ರೀಹರಿಯ **ಅನುವಿಹಿತಃ ಅನು** ಶ್ರುತಿಸ್ಮೃತಿರೂಪ ಭಗವದಾಜ್ಞೆಯಿಂದ ಭಗವಂತನ ದ್ವೇಷಿಗಳ ನಿಗ್ರಹ ಮತ್ತು ಭಗವದ್ಭಕ್ತರ ಪರಿಪಾಲನರೂಪ ತನ್ನ ಕ್ಷಾತ್ರಧರ್ಮದಲ್ಲಿ **ವಿಹಿತಃ** ಅಧರ್ಮಬುದ್ಧಿಯನ್ನು ಬಿಟ್ಟು ಧರ್ಮದಿಂದ ನಡೆಯುವವನು ಹೇ **ಭರತರ್ಷಭ** ಭರತಕುಲೋತ್ತಮನೇ **ಪ್ರಭೋ** ಸಮರ್ಥನೇ **ನಾಥ** ಪ್ರಜೆಗಳಿಗೆ ಸ್ವಾಮಿಯೇ **ಅನಾಥಾಃ** ನಿನ್ನನ್ನು ಬಿಟ್ಟು ಮತ್ತೊಬ್ಬರ ರಕ್ಷಕರಿಲ್ಲದ **ಪ್ರಜಾಃ** ಪ್ರಜೆಗಳನ್ನು **ಪಾಹಿ** ರಕ್ಷಿಸು.

ಇಷ್ಟರವರೆಗೆ ಭಗವಂತನನ್ನು ಪರೋಕ್ಷವಾಗಿ ಹೇಳಿ ಈಗ ಅಪರೋಕ್ಷವಾಗಿ ಕೈ ತೋರಿಸಿ ಹೇಳುವರು.

**ಏಷ ವೈ ಭಗವಾನ್ ಸಾಕ್ಷಾದಾದ್ಯೋ ನಾರಾಯಣಃ ಪುಮಾನ್ ।**
**ಮೋಹಯನ್ ಮಾಯಯಾ ಲೋಕಂ ಗೂಢಶ್ಚರತಿ ವೃಷ್ಣಿಷು ॥೨೫॥**

**ಯಃ** ಯಾರು **ಸಾಕ್ಷಾತ್** ಸಾಕ್ಷಾತ್ತಾಗಿ **ಆದ್ಯಃ** ಮೊದಲಿಗನಾದ **ನಾರಾಯಣಃ** ದೋಷದೂರ ಗುಣಪೂರ್ಣನಾದ **ಭಗವಾನ್** ಭಗವಂತನಿದ್ದಾನೋ **ಸ ಏಷಃ** ಅಂತಹ ಈ ಪುರುಷನು **ಲೋಕಂ** ಮೂಢಜನರನ್ನು **ಮಾಯಯಾ** ಸರಿಯಾದ ಜ್ಞಾನವನ್ನು ಮುಚ್ಚಿಟ್ಟು ಮಾಯೆಯಿಂದ (ಮನುಷ್ಯನಂತೆ) **ಮೋಹಯನ್** ಭ್ರಮಗೊಳಿಸುವವನಾಗಿ **ಗೂಢಃ** ರಹಸ್ಯವಾಗಿದ್ದು (ತಿಳಿಯದೆ ಎಂದರ್ಥ) **ವೃಷ್ಣಿಷು** ಯಾದವರಲ್ಲಿ **ಚರತಿ ವೈ** ಸಂಚರಿಸುವನು.

ಇವನನ್ನು ಸರಿಯಾಗಿ ತಿಳಿದವರು ಯಾರು ಎಂದರೆ ಹೇಳುವರು.

**ಅಸ್ಯಾನುಭಾವಂ ಭಗವಾನ್ ವೇದ ಗುಹ್ಯತಮಂ ಶಿವಃ ।**
**ದೇವರ್ಷಿರ್ನಾರದಃ ಸಾಕ್ಷಾದ್ಭಗವಾನ್ ಕಪಿಲೋ ನೃಪ ॥೨೬॥**

**ಹೇ ನೃಪ** ಎಲೋ ಯುಧಿಷ್ಠಿರನೇ **ಶಿವಃ** ಮಂಗಲಮಯನಾದ **ಭಗವಾನ್** ಭಗವಂತನು **ಅಸ್ಯ ಹರೇಃ ಗುಹ್ಯತಮಂ** ವೇದ ಹಾಗು ವೇದದ ತಾತ್ಪರ್ಯಕ್ಕೆ

ವಿಷಯನಾದ ರಹಸ್ಯಮಯವಾದ **ಅನುಭಾವಂ** ಅನುಭಾವವನ್ನು **ವೇದ** ತಿಳಿದಿದ್ದಾನೆ **ತಥಾ** ಅದೇ ರೀತಿಯಾಗಿ **ದೇವರ್ಷಿಃ** ದೇವರ್ಷಿಗಳಾದ **ನಾರದಃ** ನಾರದರು **ಸಾಕ್ಷಾತ್** ನೇರವಾಗಿ **ಕಪಿಲಃ ಭಗವಾನಪಿ** ಕಪಿಲನಾಮಕ ಭಗವಂತನು ಕೂಡ **ಜಾನೀತ** ತಿಳಿದಿದ್ದಾನೆ.

ಆ ಭಗವಂತನ ಮಾಯೆ ನಿನಗೂ ಮೋಹಜನಕ ಎಂದು ಭೀಷ್ಮರು ಹೇಳುವರು.

**ಯಂ ಮನ್ಯಸೇ ಮಾತುಲೇಯಂ ಪ್ರಿಯಂ ಮಿತ್ರಂ ಸುಹೃತ್ತಮಮ್ ।**
**ಅಕರೋಃ ಸಚಿವಂ ದೂತಂ ಸೌಹೃದಾದಥ ಸಾರಥಿಮ್ ॥೨೦॥**

**ಅಥ** ಅನಂತರ **ತ್ವಂ** ಯುಧಿಷ್ಠಿರನಾದ ನೀನು **ಯಂ** ಯಾವ ಶ್ರೀಕೃಷ್ಣನನ್ನು **ಮಾತುಲೇಯಂ** ಸೋದರಮಾವನ ಸಂಬಂಧಿ **ಪ್ರಿಯಂ** ಪ್ರೀತ್ಯಾಸ್ಪದನು **ಮಿತ್ರಂ** ಕಷ್ಟಗಳಿಂದ ರಕ್ಷಿಸುವವನು **ಸುಹೃತ್ತಮಂ** ಇಷ್ಟವಾದದ್ದನ್ನೇ ಮಾಡುವವನು **ಸೌಹೃದಾತ್** ಸುಹೃದ್ಭಾವನೆಯಿಂದ **ಸಚಿವಂ** ಮಂತ್ರಿಯನ್ನು **ದೂತಂ** ಸಂದೇಶವನ್ನು ತಲುಪಿಸುವವನನ್ನು **ಸಾರಥಿಂ** ರಥದಲ್ಲಿ ಕೂಡಿಸಿ ಕರೆದುಕೊಂಡು ಹೋಗುವವನನ್ನು **ಅಕರೋಃ** ಮಾಡಿದ್ದಿಯಲ್ಲವೇ **ತಸ್ಯ ಅಸ್ಯ** ಅಂತಹ ಈ ಶ್ರೀಕೃಷ್ಣನ **ಅನುಭಾವಂ** ಮಹಿಮೆಯನ್ನು **ಕಃ ವೇದ** ಯಾರು ತಿಳಿಯುತ್ತಾರೆ.

ಶ್ರೀಕೃಷ್ಣ ಪರಮಾತ್ಮನು ಈಶ್ವರನೇ ಆದರೆ ಅವನಿಗೆ ಸಾರಥ್ಯಾದಿ ಕರ್ಮಗಳ ಪ್ರವೃತ್ತಿ ಹೇಗೆ ಕೂಡುವದು ಎಂದು ಹೇಳುವರು.

**ಸರ್ವಾತ್ಮನಃ ಸಮದೃಶೋಽಪ್ಯದ್ವಯಸ್ಯಾನಹಂಕೃತೇಃ ।**
**ತತ್ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್ ॥೨೧॥**

**ಸರ್ವಾತ್ಮನಃ** ಎಲ್ಲರ ಅಂತರ್ಯಾಮಿಯಾಗಿರುವ ಅಥವಾ ಪಿತಾ ಮಾತಾ ಸುಹೃದ್ಬಂಧುಃ ಮುಂತಾದ ಮಾತುಗಳಿಂದ ಮುಖ್ಯ ಬಂಧುವಾದ್ದರಿಂದ ಬಂಧುಗಳಲ್ಲಿದ್ದು ಬಂಧುಗಳಿಗೆ ಬಂಧುತ್ವವನ್ನು ನೀಡುವ **ಸಮದೃಶಃ** ಎಲ್ಲ ಪದಾರ್ಥಗಳನ್ನು ಚೆನ್ನಾಗಿ ತಿಳಿದ **ಅದ್ವಯಸ್ಯ** ತನಗಿಂತಲೂ ಉತ್ತಮ ಮತ್ತು ಸಮರಿರದಿರುವ **ಅನಹಂಕೃತೇಃ** ಪ್ರಕೃತ್ಯಾತ್ಮಕ, ಮತ್ತು ಆದರಿಂದ ವಿಕೃತವಾದ ಶರೀರವಿಲ್ಲವಾದ್ದರಿಂದ ದೇಹಾದಿಗಳಲ್ಲಿ ಅಹಂ ಬುದ್ಧಿ ಇಲ್ಲದಿರುವದರಿಂದ ಆದ್ದರಿಂದಲೇ **ನಿರವದ್ಯಸ್ಯ** ರಾಗಾದಿದೋಷರಹಿತನಾದ **ತತ್ಕೃತಂ** ಕೃಷ್ಣನ

ಸಾರಥ್ಯಾದಿರೂಪಕರ್ಮ ನಿಮಿತ್ತ **ಮತಿವೈಷಮ್ಯಂ** ಬುದ್ಧಿಯಲ್ಲಿ ವಿಷಮಭಾವವು **ಕ್ವಚಿತ್** ಯಾವ ಕಾಲದಲ್ಲಿಯೂ ಕೂಡ **ನ** ಇಲ್ಲ.

ಶ್ರೀಕೃಷ್ಣನು ವಿಷಮಮತಿಗಳಾದ ನಮ್ಮಂಥವರ ಸಂಪರ್ಕಕ್ಕೆ ಕಾರಣವೇನು ಎಂಬ ಶಂಕೆಗೆ ಪರಿಹಾರ ನಿಮ್ಮಂತಹ ಭಕ್ತರ ಭಕ್ತಿಗೆ ಮೆಚ್ಚಿ ನಿಮ್ಮ ಮೇಲೆ ಮಾಡುವ ಅನುಕಂಪ ಎಂದು ಹೇಳುವರು.

**ತಥಾಪ್ಯೇಕಾಂತಭಕ್ತೇಷು ಪಶ್ಯ ಭೂಪಾನುಕಂಪಿತಮ್ ।**
**ಯನ್ಮೇ ಅಸೂಂಸ್ತ್ಯಜತಃ ಸಾಕ್ಷಾತ್ಕೃಷ್ಣೋ ದರ್ಶನಮಾಗತಃ ॥೨೯॥**

**ಹೇ ಭೂಪ** ಹೇ ಯುಧಿಷ್ಠಿರನೇ **ತಥಾ ಅಪಿ** ಶ್ರೀಕೃಷ್ಣ ನಿತ್ಯ ತೃಪ್ತನಾದರೂ **ಏಕಾಂತಭಕ್ತೇಷು** ಶ್ರೀಕೃಷ್ಣನನ್ನು ಬಿಟ್ಟು ಬೇರೆಯವರಲ್ಲಿ ಭಕ್ತಿಯನ್ನು ಮಾಡದಿರುವ ನಮ್ಮಂತಹ ನಿಮ್ಮಂತಹ ಭಕ್ತರು ಯಾರಿರುವರೋ ನನ್ನಲ್ಲಿ **ಅನುಕಂಪಿತಂ** ಕೃಪಾಯುಕ್ತನಾಗಿ **ಪಶ್ಯ** ನೋಡು ಅದಕ್ಕೆ ಕಾರಣವನ್ನು ತಿಳಿಸುವರು **ಯತ್** ಯಾವ ಕಾರಣ **ಅಸೂನ್** ಪ್ರಾಣಗಳನ್ನು **ತ್ಯಜತ** ಬಿಡುತ್ತಿರುವ **ಮೇ** ನನಗೆ **ಕೃಷ್ಣಃ** ಸ್ವಾಮಿಯಾದ ಶ್ರೀಕೃಷ್ಣನು **ಸಾಕ್ಷಾತ್ ದರ್ಶನಂ** ಪ್ರತ್ಯಕ್ಷ ದರ್ಶನವನ್ನು ನೀಡಲು **ಆಗತಃ** ಬಂದಿರುವನು (ಪ್ರಾಣ ಹೋಗುವ ಸಂದರ್ಭದಲ್ಲಿ ನಮ್ಮ ರಕ್ಷಣೆ ಪಡೆದು ಬೆಳೆದ ಮಕ್ಕಳು ನಮ್ಮನ್ನು ಬಿಟ್ಟು ಹೋಗುವರು ಇದು ಆಶ್ಚರ್ಯ) **ತಸ್ಮಾತ್** ಆ ಕಾರಣದಿಂದ ಭಗವದ್ಭಕ್ತರ ಸಂಪರ್ಕವನ್ನೇ ಭಗವಂತನು ನಮಗೆ ಅನುಗ್ರಹಿಸಿ ಕೊಟ್ಟಿರುವನು.

ಪ್ರಾಣಗಳು ದೇಹದಿಂದ ಹೊರಹೊರಡುವ ಸಂದರ್ಭದಲ್ಲಿ ಭಗವಂತನ ದರ್ಶನವಾದರೆ ಏನು ಫಲವಾಗುವದು ಎಂಬುದನ್ನು ತಿಳಿಸುವರು.

**ಭಕ್ತ್ಯಾವೇಶ್ಯ ಮನೋ ಯಸ್ಮಿನ್ ವಾಚಾ ಯನ್ನಾಮ ಕೀರ್ತಯನ್ ।**
**ತ್ಯಜನ್ಕಲೇವರಂ ಯೋಗೀ ಮುಚ್ಯತೇ ಕಾಮಕರ್ಮಭಿಃ ॥೩೦॥**

**ಭಕ್ತ್ಯಾ** ಭಕ್ತಿಯಿಂದ **ಯಸ್ಮಿನ್** ಯಾವ ಶ್ರೀಹರಿಯಲ್ಲಿ **ಮನಃ ಆವೇಶ್ಯ** ಮನಸ್ಸನ್ನು ಇಟ್ಟು **ವಾಚಾ** ಮಾತಿನಿಂದ **ಯನ್ನಾಮಕೀರ್ತಯನ್** ಯಾವ ಶ್ರೀಹರಿಯ ನಾರಾಯಣಾದಿ ನಾಮಗಳನ್ನು ಹಾಡುವವನಾಗಿ **ಕಲೇವರಂ** ಶರೀರವನ್ನು **ತ್ಯಜನ್** ಬಿಡುವ **ಯೋಗೀ** ಮೋಕ್ಷೋಪಾಯವನ್ನು ಕಂಡುಕೊಂಡ ಯೋಗಿಯು **ಕಾಮಕರ್ಮಭಿಃ** ಕಾಮಕರ್ಮಗಳಿಂದ **ಮುಚ್ಯತೇ** ಮುಕ್ತನಾಗುವನು ಎಂದ ಮೇಲೆ

ಪ್ರತ್ಯಕ್ಷವಾಗಿ ಅಂತಹ ಶ್ರೀಹರಿಯನ್ನು ಮರಣಸಮಯದಲ್ಲಿ ಕಾಣುವ ವ್ಯಕ್ತಿಗೆ ಆಗುವ ಮೋಕ್ಷದ ಬಗ್ಗೆ ಏನೆಂದು ವರ್ಣಿಸುವದು. ಆ ಕಾರಣದಿಂದ ಶ್ರೀಹರಿಯಲ್ಲಿ ಸ್ನೇಹವನ್ನು ಮಾಡುವದು ಧರ್ಮ ಸ್ನೇಹವನ್ನು ಮಾಡದೇ ಇರುವದು ಅಧರ್ಮ. ಅದಕ್ಕಾಗಿ ಶ್ರೀಕೃಷ್ಣನು ಹೇಳಿದ ರೀತಿಯಲ್ಲಿ ಕ್ಷಾತ್ರಧರ್ಮವಾದ ರಾಜ್ಯಪಾಲನೆಯಲ್ಲಿ ಅಧರ್ಮಬುದ್ಧಿಯನ್ನು ಏನು ಇಟ್ಟು ಕೊಂಡಿರುವೆಯೋ ಅದನ್ನು ಬಿಡು ರಾಜ್ಯವನ್ನು ಪರಿಪಾಲನೆ ಮಾಡು. ಎಂದು ಇದರ ತಾತ್ಪರ್ಯ.

ಇಲ್ಲಿಯ ವರೆಗೆ ತಮ್ಮ ಇಚ್ಛೆಯಿಂದಲೇ ಮರಣವನ್ನು ಹೊಂದುವ ಭೀಷ್ಮಾಚಾರ್ಯರು ಯುಧಿಷ್ಠಿರನಿಗೆ ರಾಜ್ಯವನ್ನು ಆಳಲು ಹೇಳಿ ಉತ್ತರಾಯಣ ಬರುವವರೆಗೆ ತಮ್ಮ ಪ್ರಾಣಗಳನ್ನು ಬಿಡದೆ ಭಗವಂತನ ಸಮೀಪವಿದ್ದು ಪ್ರಾರ್ಥನೆಯನ್ನು ಮಾಡುವರು.

**ಸ ದೇವದೇವೋ ಭಗವಾನ್ ಪ್ರತೀಕ್ಷತಾಂ**
**ಕಲೇವರಂ ಯಾವದಿದಂ ಹಿನೋಮ್ಯಹಮ್ ।**
**ಪ್ರಸನ್ನಹಾಸಾರುಣಲೋಚನೋಲ್ಲಸನ್-**
**ಮುಖಾಂಬುಜೋ ಧ್ಯಾನಪಥಶ್ಚತುರ್ಭುಜಃ ॥೩೦॥**

**ಅಹಂ** ನಾನು **ಯಾವತ್** ಎಲ್ಲಿಯವರೆಗೆ **ಇದಂ ಕಲೇವರಂ** ಪಂಚಭೂತನಿರ್ಮಿತ-ವಾದ ಈ ಶರೀರವನ್ನು **ಹಿನೋಮಿ** ಬಿಡುತ್ತೇನೋ **ತಾವತ್** ಅಲ್ಲಿಯವರೆಗೆ **ಪ್ರಸನ್ನಹಾಸಾರುಣಲೋಚನೋಲ್ಲಸನ್ಮುಖಾಂಬುಜಃ** ಸಂತೋಷ, ನಗು, ನಸುಗೆಂಪಾದ ಕಣ್ಣು ಇವುಗಳಿಂದ ಶೋಭಿಸುವ ಮುಖಕಮಲವಿರುವ **ಧ್ಯಾನಪಥಃ** ಉಪಾಸನೆಯಿಂದ ನೋಡಲು ಧ್ಯಾನವೇ ದಾರಿಯಾಗಿರುವ **ಚತುರ್ಭುಜಃ** ನಾಲ್ಕು ಭುಜಗಳಿರುವ **ದೇವದೇವಃ** ದೇವತೆಗಳಿಗೂ ದೇವನಾದ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ **ಸಃ** ಆ ಶ್ರೀಕೃಷ್ಣನು **ಪ್ರತೀಕ್ಷತಾಂ** ಈ ಭಕ್ತನ ಮೇಲೆ ಅನುಗ್ರಹವನ್ನು ಮಾಡಲಿ ನಾನು ಪ್ರಾಣಗಳನ್ನು ತ್ಯಾಗಮಾಡುವವರೆಗೆ ಶ್ರೀಕೃಷ್ಣಪರಮಾತ್ಮನು ನನ್ನ ಸಮೀಪದಲ್ಲಿಯೇ ಇರಲಿ ಎಂದು ಪ್ರಾರ್ಥಿಸುವರು ಭೀಷ್ಮಾಚಾರ್ಯರು ಎಂದು ಅಭಿಪ್ರಾಯ.

ಸೂತ ಉವಾಚ -

**ಯುಧಿಷ್ಠಿರಸ್ತದಾಕರ್ಣ್ಯ ಶಯಾನಂ ಶರಪಂಜರೇ ।**
**ಅಪೃಚ್ಛದ್ವಿವಿಧಾನ್ ಧರ್ಮಾನ್ ಋಷೀಣಾಮನುಶೃಣ್ವತಾಮ್ ॥೩೨॥**

**ಯುಧಿಷ್ಠಿರಃ** ಧರ್ಮರಾಜನು **ತದಾಕರ್ಣ್ಯ** ಭೀಷ್ಮಾಚಾರ್ಯರ ಮಾತನ್ನು ಕೇಳಿ **ಶರಪಂಜರೇ** ಬಾಣಗಳ ಹಾಸಿಗೆಯ ಮೇಲೆ **ಶಯಾನಂ** ಮಲಗಿರುವ ಭೀಷ್ಮಾಚಾರ್ಯರನ್ನು **ಅನುಶೃಣ್ವತಾಂ** ಕೇಳುತ್ತಿರುವ **ಋಷೀಣಾಂ** ಋಷಿಗಳ ಸಮ್ಮುಖದಲ್ಲಿ **ವಿವಿಧಾನ್** ಅನೇಕ ರೀತಿಯಾದ **ಧರ್ಮಾನ್** ಧರ್ಮಗಳನ್ನು **ಅಪೃಚ್ಛತ್** ಕೇಳಿದನು.

ಯುಧಿಷ್ಠಿರನ ಪ್ರಶ್ನೆಗಳಿಗೆ ಮುಂದಿನ ಮೂರು ಶ್ಲೋಕಗಳಿಂದ ಧರ್ಮಗಳನ್ನು ವರ್ಣಿಸುವರು.

**ಪುರುಷಸ್ವಭಾವವಿಹಿತಾನ್ಯಥಾವರ್ಣಂ ಯತಾಶ್ರಮಮ್।**
**ವೈರಾಗ್ಯರಾಗೋಪಾಧಿಭ್ಯಾಮಾಮ್ನಾತೋಭಯಲಕ್ಷಣಾನ್ ॥೩೩॥**

**ಯಥಾವರ್ಣಂ** ಬ್ರಾಹ್ಮಣಾದಿವರ್ಣಗಳನ್ನು ಮೀರದಿರುವ **ಯಥಾಶ್ರಮಂ** ಬ್ರಹ್ಮಚರ್ಯಾದಿ ಆಶ್ರಮಗಳನ್ನು ಮೀರದಿರುವ **ಪುರುಷಸ್ವಭಾವವಿಹಿತಾನ್** ಮನುಷ್ಯರ ಯೋಗ್ಯತೆಗೆ ಅನುಗುಣವಾಗಿ ವಿಧಿಸಿರುವ ಧರ್ಮಗಳನ್ನು **ವೈರಾಗ್ಯರಾಗೋಪಾಧಿಭ್ಯಾಂ** ವೈರಾಗ್ಯ ಮತ್ತು ಸ್ನೇಹ ನಿಮಿತ್ತಗಳಿಂದ **ಆಮ್ನಾತೋಭಯಲಕ್ಷಣಾನ್** ವೇದದಿಂದ ವಿಹಿತವಾದ ನಿಷ್ಕಾಮ ಮತ್ತು ಸಕಾಮವಾದ ಧರ್ಮಗಳನ್ನು **ವರ್ಣಯಾಮಾಸ** ವಿವರಿಸಿದರು.

**ದಾನಧರ್ಮಾನ್ರಾಜಧರ್ಮಾನ್ಮೋಕ್ಷಧರ್ಮಾನ್ವಿಭಾಗಶಃ ।**
**ಸ್ತ್ರೀಧರ್ಮಾನ್ಭಗವದ್ಧರ್ಮಾನ್ಸಮಾಸವ್ಯಾಸಯೋಗತಃ ॥೩೪॥**

**ತತ್ತ್ವವಿತ್** ತತ್ವಜ್ಞಾನಿಗಳಾದ ಭೀಷ್ಮಾಚಾರ್ಯರು **ದಾನಧರ್ಮಾನ್** ದಾನಮಾಡಬೇಕಾದ ಧರ್ಮಗಳನ್ನು **ರಾಜಧರ್ಮಾನ್** ರಾಜನಾದವನು ಮಾಡಬೇಕಾದ ಧರ್ಮಗಳನ್ನು **ಮೋಕ್ಷಧರ್ಮಾನ್** ಮೋಕ್ಷಕ್ಕಾಗಿ ಮಾಡಬೇಕಾದ ಧರ್ಮಗಳನ್ನು **ವಿಭಾಗಶಃ** ಪ್ರತ್ಯೇಕ ಪ್ರತ್ಯೇಕವಾಗಿ **ಸ್ತ್ರೀಧರ್ಮಾನ್** ಸ್ತ್ರೀಯರು ಮಾಡಬೇಕಾದ ಧರ್ಮಗಳನ್ನು **ಭಗವದ್ಧರ್ಮಾನ್** ಭಗವಂತನು ಮಾಡುವ ಜಗತ್ತಿನ ಸೃಷ್ಟಿ ಮೊದಲಾದ ಧರ್ಮಗಳನ್ನು **ಸಮಾಸವ್ಯಾಸಯೋಗತಃ** ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ **ವರ್ಣಯಾಮಾಸ** ವಿವರಿಸಿದರು.

**ಧರ್ಮಾರ್ಥಕಾಮಮೋಕ್ಷಾಂಶ್ಚ ಸಹೋಪಾಯಾನ್ಯಥಾ ಮುನೇ ।**
**ನಾನಾಖ್ಯಾನೇತಿಹಾಸೇಷು ವರ್ಣಯಾಮಾಸ ತತ್ತ್ವವಿತ್ ॥೨೫॥**

**ಹೇ ಮುನೇ** ಶೌನಕರೇ **ಯಥಾ** ಹೇಗೆ ಧರ್ಮವಿದೆಯೋ ಹಾಗೆ **ಸಹೋಪಾಯಾನ್** ಸಾಧನಗಳಿಂದ ಸಹಿತವಾದ **ಚ** ಮತ್ತು **ಧರ್ಮಾರ್ಥಕಾಮಮೋಕ್ಷಾನ್** ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು **ನಾನಾಖ್ಯಾನೇತಿಹಾಸೇಷು** ನಾನಾವಿಧವಾದ ಕಥಾಪ್ರಸಂಗಗಳನ್ನೊಳಗೊಂಡ ಭಾರತಾದಿಗಳಲ್ಲಿ **ತತ್ತ್ವವಿತ್** ಧರ್ಮಗಳ ನಿಜವಾದ ಮರ್ಮವನ್ನು ತಿಳಿದಿರುವ ಭೀಷ್ಮಾಚಾರ್ಯರು **ವರ್ಣಯಾಮಾಸ** ವಿವರಿಸಿದರು.

**ಧರ್ಮಾನ್ ಪ್ರವದತಸ್ತಸ್ಯ ಸ ಕಾಲಃ ಪ್ರತ್ಯುಪಸ್ಥಿತಃ ।**
**ಯೋ ಯೋಗಿನಃ ಛಂದಮೃತ್ಯೋರ್ವಾಂಛಿತಸ್ತೂತ್ತರಾಯಣಃ ॥೨೯॥**

**ಛಂದಮೃತ್ಯೋಃ** ತಮ್ಮ ಇಚ್ಛೆಯಿಂದ ಮರಣವನ್ನು ಪಡೆಯುವ **ಯೋಗಿನಃ** ಮುನಿಗಳಿಗೆ **ವಾಂಛಿತಃ** ಅಪೇಕ್ಷಿತವಾದ **ಉತ್ತರಾಯಣಃ** ಉತ್ತರಾಯಣಕಾಲವು **ಯಃ** ಯಾವುದಿದೆಯೋ **ಸಃ** ಆ ಉತ್ತರಾಯಣಕಾಲವು **ಧರ್ಮಾನ್** ಎಲ್ಲ ವಿಧವಾದ ಧರ್ಮಗಳನ್ನು **ಪ್ರವದತಃ** ಹೇಳುತ್ತಿರುವ **ತಸ್ಯ** ಆ ಭೀಷ್ಮಾಚಾರ್ಯರ **ಪ್ರತಿ** ಎದುರಿಗೆ **ಉಪಸ್ಥಿತಃ** ಬಂದಿತು.

**ತದೋಪಸಂಹೃತ್ಯ ಗಿರಂ ಸಹಸ್ರಣೀ**
**ರ್ವಿಮುಕ್ತಸಂಗಂ ಮನ ಆದಿಪೂರುಷೇ ।**
**ಕೃಷ್ಣೇ ಲಸತ್ಪೀತಪಟೇ ಚತುರ್ಭುಜೇ**
**ಪುರಃ ಸ್ಥಿತೋಽಮೀಲಿತದೃಗ್ವ್ಯಧಾರಯತ್ ॥೩೦॥**

**ತದಾ** ಉತ್ತರಾಯಣ ಬಂದ ಮೇಲೆ **ಗಿರಂ** ಮಾತನ್ನು **ಉಪಸಂಹೃತ್ಯ** ಮುಗಿಸಿ **ಸಹಸ್ರಣೀಃ** ತಾನು ಪ್ರಾಣ ಬಿಡುವ ಸಂದರ್ಭದಲ್ಲಿ ತನ್ನಿಂದ ಉಪದೇಶ ಪಡೆದ ಅನೇಕ ರಾಜರುಳ್ಳ **ಅಮೀಲಿತದೃಕ್** ಅರಳಿದ ಕಣ್ಣುಗಳುಳ್ಳ ಭೀಷ್ಮಾಚಾರ್ಯರು **ಪುರಃ ಸ್ಥಿತಃ** ಎದುರಿಗೆ ನಿಂತ **ಲಸತ್ಪೀತಪಟೇ** ಶೋಭಿಸುವ ಪೀತಾಂಬರವುಳ್ಳ **ಆದಿಪುರುಷೇ** ಜಗತ್ಕಾರಣ ಪುರುಷನಾದ **ಕೃಷ್ಣೇ** ಶ್ರೀಕೃಷ್ಣನಲ್ಲಿ **ವಿಮುಕ್ತಸಂಗಂ** ಭಗವದತಿರಿಕ್ತವಾದ ಬೇರೆ ವಿಷಯಗಳಲ್ಲಿ ಆಸಕ್ತವಾಗದ **ಮನಃ** ಮನಸ್ಸನ್ನು **ವ್ಯಧಾರಯತ್** ಭಗವಂತನಲ್ಲಿಯೇ ಇಟ್ಟರು.

**ವಿಶುದ್ಧಯಾ ಧಾರಣಯಾ ಧುತಾಶುಭ-**
**ಸ್ತದೀಕ್ಷಯೈವಾಶು ಗತಾಯುಧವ್ಯಥಃ ।**
**ನಿವೃತ್ತಸರ್ವೇಂದ್ರಿಯವೃತ್ತಿವಿಭ್ರಮಃ**
**ತುಷ್ಟಾವ ಜಲ್ಪಂ ವಿಸೃಜನ್ಜನಾರ್ದನಮ್ ॥೩೮॥**

**ವಿಶುದ್ಧಯಾ** ಯಾವ ವಿಧ ಕಲುಷಗಳಿಲ್ಲದ **ಧಾರಣಯಾ** ಭಗವಂತನ ಉಪಾಸನೆಯಿಂದ **ಧುತಾಶುಭಃ** ಎಲ್ಲ ಅನಿಷ್ಟಗಳನ್ನು ಕಳೆದು ಕೊಂಡ **ಆಶು** ಶೀಘ್ರದಲ್ಲಿಯೇ **ತದೀಕ್ಷಯಾ ಏವ** ಆ ಭಗವಂತನ ದರ್ಶನದಿಂದ **ಗತಾಯುಧವ್ಯಥಃ** ಬಾಣಗಳ ಚುಚ್ಚುವಿಕೆಯಿಂದ ಆದ ನೋವನ್ನು ಮರೆತ **ನಿವೃತ್ತಸರ್ವೇಂದ್ರಿಯ-ವೃತ್ತಿವಿಭ್ರಮಃ** ತಮ್ಮ ಎಲ್ಲ ಇಂದ್ರಿಯ ವ್ಯಾಪಾರಗಳಿಂದ ವಿಮುಖರಾದ ಭೀಷ್ಮಾಚಾರ್ಯರು **ಜಲ್ಪಂ** ಮಾತನಾಡುವದನ್ನು **ವಿಸೃಜನ್** ಬಿಟ್ಟು **ಜನಾರ್ದನಂ** ಶ್ರೀಕೃಷ್ಣನನ್ನು **ತುಷ್ಟಾವ** ಸ್ತುತಿಸಿದರು.

ಭೀಷ್ಮರು ಮಾಡಿದ ಸ್ತುತಿ ಮಾನಸಿಕವೋ ಅಥವಾ ವಾಚನಿಕವೋ ಎಂದು ಪ್ರಶ್ನೆ ಮಾಡಿಕೊಂಡು ಮಾನಸಿಕವಾಗಿ ಎಂದು ಹೇಳುವದು ಸರಿಯಲ್ಲ ಯಾಕೆಂದರೆ ತಮ್ಮ ಪ್ರಯೋಜನಕ್ಕಾಗಿ ಸ್ತುತಿ ಎನ್ನುವದು ಉಪಪನ್ನವಾಗುವದಿಲ್ಲ. ಆದಕ್ಕಾಗಿ ವಾಚನಿಕವಾದ ಸ್ತುತಿ ಎಂದು ತಿಳಿಯಬೇಕು. ಎನ್ನುವದನ್ನು ತಿಳಿಸುವರು.

**ಇತಿ ಮತಿರುಪಕಲ್ಪಿತಾ ವಿತೃಷ್ಣಾ**
**ಭಗವತಿ ಸಾತ್ವಪುಂಗವೇ ವಿಭೂಮ್ನಿ ।**
**ಸ್ವಸುಖ ಉಪಗತೇ ಕ್ವಚಿದ್ವಿಹರ್ತುಂ**
**ಪ್ರಕೃತಿಮುಪೇಯುಷಿ ಯದ್ಭವಪ್ರವಾಹಃ ॥೩೯॥**

**ಇತಿ** ಧರ್ಮೋಪದೇಶ ಪ್ರಕರಣವು ಅಥವಾ ಭೀಷ್ಮರು ಧರ್ಮರಾಜನಿಗೆ ಹೇಳುವದನ್ನು ಮುಗಿಸಿ **ವಿತೃಷ್ಣಾ** ವಿಷಯಾಭಿಲಾಷೆ ಇಲ್ಲದಿರುವ ಅಥವಾ ಭಗವಂತನಲ್ಲಿ ಪ್ರೀತಿಯಿರುವ **ಮತಿಃ** ಭಗವಂತನನ್ನು ಮನನ ಮಾಡುವ ಸ್ವಭಾವವಿರುವ ಬುದ್ಧಿಯು **ಉಪಕಲ್ಪಿತಾ** ಭಗವಂತನ ವಿಷಯಕವಾಗಿದೆ **ವಿಭೂಮ್ನಿ** ದೇಶ ಕಾಲ ಗುಣಗಳಿಂದ ಪರಿಪೂರ್ಣನಾದ **ಭಗವತಿ** ನಿಸ್ಸೀಮವಾದ ಐಶ್ವರ್ಯಾದಿಗುಣಗಳಿರುವ **ಸಾತ್ವತಪುಂಗವೇ** ಯಾದವರಿಗೆ ಒಡೆಯನಾದ **ಸ್ವಸುಖೇ** ಸ್ವರೂಪ ಸುಖವು **ಉಪಾಗತೇ** ಬರುತ್ತಿರಲು ಅಥವಾ ಅತ್ಯಂತ ಸಮೀಪದಲ್ಲಿರಲು

**ಯದ್ಭವಪ್ರವಾಹಃ** ಯಾವ ಭಗವಂತನಿಂದ ಸಕಲಜೀವರಿಗೆ ಸಂಸಾರವು ಬರುತ್ತದೆ. **ಕ್ವಚಿತ್** ಸೃಷ್ಟಿಕಾಲದಲ್ಲಿ ಅನೇಕ ತನ್ನ ಅವತಾರರೂಪಗಳಿಂದ **ವಿಹರ್ತುಂ** ವಿಹಾರಮಾಡಲು **ಪ್ರಕೃತಿಂ** ಮಹತತ್ತ್ವವನ್ನು ಅಹಂಕಾರವನ್ನು ಇವೇ ಮೊದಲಾದ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯಿರುವ ಲಕ್ಷ್ಮೀಯನ್ನು **ಪ್ರಕೃತಿಂ** ಜಡಪ್ರಕೃತಿಯನ್ನು **ಉಪೇಯುಷಿ** ಹೊಂದಿದ್ದಿ.

**ತ್ರಿಭುವನಕಮನಂ ತಮಾಲವರ್ಣಂ ರವಿಕರಗೌರವರಾಂಬರಂ ದಧಾನೇ ।**
**ವಪುರಲಕಕುಲಾವೃತಾನನಾಬ್ಜಂ ವಿಜಯಸಖೇ ರತಿರಸ್ತು ಮೇಽನವದ್ಯಾ ॥**

**ತ್ರಿಭುವನಕಮನಂ** ಮೂರು ಲೋಕಗಳಿಂದ ಇಷ್ಟವಾದ **ತಮಾಲವರ್ಣಂ** ತಮಾಲಪುಷ್ಪದಂತೆ ಮೈಬಣ್ಣವುಳ್ಳ **ರವಿಕರಗೌರವರಾಂಬರಂ** ಉದಯಿಸುವ ಸೂರ್ಯನ ಕಿರಣಗಳಂತೆ ಕೆಂಪಾದ ಶ್ರೇಷ್ಠವಾದ ಬಟ್ಟೆಯುಳ್ಳ ಗೌರ ಎನ್ನುವದಕ್ಕೆ ಕೋಶ ಗೌರೋ ಅರುಣೇ ಸಿತೇ ಪೀತೇ ಸ್ವಚ್ಛೇ ಚ ಪರಿಕೀರ್ತ್ಯತೇ ಇತ್ಯಭಿಧಾನಾತ್ **ಅಲಕಕುಲಾವೃತಾನನಾಬ್ಜಂ** ಕೂದಲುಗಳ ಸಮೂಹದಿಂದ ಮುಚ್ಚಿಹೋದ ಮುಖಕಮಲವುಳ್ಳ **ವಪುಃ** ದೇಹವನ್ನು **ದಧಾನೇ** ಧರಿಸಿರುವ **ವಿಜಯಸಖೇ** ಅರ್ಜುನನ ಗೆಳೆಯನಾದ ಶ್ರೀಕೃಷ್ಣನಲ್ಲಿ **ಅನವದ್ಯಾ** ಫಲಾಪೇಕ್ಷಾದಿದೋಷವಿಲ್ಲದಿರುವ ಅಥವಾ ರಾಗದ್ವೇಷಾದಿಗಳಿಲ್ಲದಿರುವ **ರತಿಃ** ಭಕ್ತಿಯು **ಮೇ** ನನಗೆ **ಅಸ್ತು** ಇರಲಿ.

**ಯುಧಿ ತುರಗರಜೋವಿಧೂಮ್ರವಿಧ್ವತ್ಕಚಲುಲಿತಶ್ರಮವಾರ್ಯಲಂಕೃತಾಸ್ಯೇ ।**
**ಮಮ ನಿಶಿತಶರೈರ್ವಿಭಿದ್ಯಮಾನತ್ವಚಿ ವಿಲಸತ್ಕವಚೇಽಸ್ತು ಕೃಷ್ಣ ಆತ್ಮಾ ॥೪೧॥**

**ಯುಧಿ** ಯುದ್ಧದಲ್ಲಿ **ತುರಗರಜೋವಿಧೂಮ್ರವಿಧ್ವತ್ಕಚಲುಲಿತಶ್ರಮವಾರ್ಯ-ಲಂಕೃತಾಸ್ಯೇ** **ತುರಗ** ಕುದುರೆಗಳ ಕಾಲಿನಿಂದ ಉಂಟಾದ **ರಜ** ಧೂಳಿಯಿಂದ **ವಿಧೂಮ್ರ** ವಿಶೇಷವಾದ ಬೂದಿಬಣ್ಣದಿಂದ ಪರಸ್ಪರವಾಗಿ ಹೊಡೆದಾಡಿಕೊಂಡದ್ದರಿಂದ **ಕಚಲುಲಿತ** ಕಲುಷಿತವಾದ ಕೂದಲುಗಳ **ಶ್ರಮವಾರಿಭಿಃ** ಶ್ರಮದಿಂದ ಉಂಟಾದ ಬೆವರಿನ ಹನಿಗಳಿಂದ **ಅಲಂಕೃತಾಸ್ಯೇ** ಅಲಂಕಾರಗೊಂಡ ಮುಖದಲ್ಲಿ **ನಿಶಿತಶರೈಃ** ತೀಕ್ಷ್ಣವಾದ ಬಾಣಗಳಿಂದ **ವಿಭಿದ್ಯಮಾನತ್ವಚಿ** ಸೀಳಿಹೋದ ಚರ್ಮವುಳ್ಳವನಾದರೂ **ಮಮ ಆತ್ಮಾ** ನನ್ನ ಮನಸ್ಸು **ಕೃಷ್ಣೇ** ಶ್ರೀಕೃಷ್ಣನಲ್ಲಿ **ಅಸ್ತು** ನೆಲಸಿರಲಿ.

**ಸಪದಿ ಸಖಿವಚೋ ನಿಶಮ್ಯ ಮಧ್ಯೇ**
**ನಿಜಪರಯೋರ್ಬಲಯೋರಥಂ ನಿವೇಶ್ಯ ।**

**ಸ್ಥಿತವತಿ ಪರಸೈನಿಕಾಯುರಕ್ಷ್ಣಾ**
**ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥೩೨॥**

**ಸಖಿವಚಃ** ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇ ಅಚ್ಯುತ ಇತಿ ಎಂದು ಹೇಳಿರುವ ಅರ್ಜುನನ **ವಚಃ** ಮಾತನ್ನು **ನಿಶಮ್ಯ** ಕೇಳಿ **ಸಪದಿ** ಕೂಡಲೇ **ನಿಜಪರಯೋಃ** ತಮ್ಮ ಹಾಗೂ ಶತ್ರುಸೈನಿಕರ **ಮಧ್ಯೇ** ಮಧ್ಯದಲ್ಲಿ **ರಥಂ** ಅರ್ಜುನನ ರಥವನ್ನು **ಪ್ರವೇಶ್ಯ** ಪ್ರವೇಶಮಾಡಿಸಿ **ಸ್ಥಿತವತಿ** ನಿಲ್ಲಿಸುವವನಾಗಿ **ಪರಸೈನಿಕಾಯುಃ** ಕೌರವಸೈನಿಕರ ಆಯುಷ್ಯವನ್ನು **ಅಕ್ಷ್ಣಾ** ಕಣ್ಣಿನಿಂದ **ಹೃತವತಿ** ಅಪಹರಿಸುತ್ತಿರುವ **ಪಾರ್ಥಸಖೇ** ಅರ್ಜುನನ ಗೆಳೆಯನಾದ ಶ್ರೀಕೃಷ್ಣನಲ್ಲಿ **ಮಮ** ನನಗೆ **ರತಿಃ** ಭಕ್ತಿಯು **ಅಸ್ತು** ಇರಲಿ.

ಶ್ರೀಕೃಷ್ಣನು ಅರ್ಜುನನನ್ನು ನಿಮಿತ್ತಮಾಡಿ ಗೀತೆಯನ್ನು ಉಪದೇಶಿಸುವ ನೆಪದಿಂದ ಎಲ್ಲ ಸಜ್ಜನರ ಅಜ್ಞಾನವನ್ನು ನಾಶಮಾಡುವ ಭಗವಂತನ ಗುಣವನ್ನು ಚಿಂತಿಸುವನು. ಯುಧಿಷ್ಠಿರನು ನಿನ್ನಲ್ಲಿ ಭಕ್ತಿ ಕೊಡು ಎಂದು ಪ್ರಾರ್ಥಿಸುತ್ತಾನೆ.

**ವ್ಯವಸಿತಪೃತನಾಮುಖಂ ನಿರೀಕ್ಷ್ಯ**
**ಸ್ವಜನವಧಾದ್ವಿಮುಖಸ್ಯ ದೋಷಬುದ್ಧ್ಯಾ ।**
**ಕುಮತಿಮಹರದಾತ್ಮವಿದ್ಯಾ**
**ಯಶ್ಚರಣರತಿಃ ಪರಮಸ್ಯ ತಸ್ಯ ಮೇ ಅಸ್ತು ॥೩೩॥**

**ಯಃ** ಸರ್ವೋತ್ತಮನಾದ ಶ್ರೀಕೃಷ್ಣನು **ವ್ಯವಸಿತಪೃತನಾಮುಖಂ** ಯುದ್ಧಕ್ಕಾಗಿ ನಿಶ್ಚಯಮಾಡಿಕೊಂಡ ಸೇನೆಗಳಿಗೆ ಪ್ರಮುಖರಾದ ಭೀಷ್ಮಾಚಾರ್ಯರೇ ಮೊದಲಾದವರನ್ನು ನೋಡಿ **ದೋಷಬುದ್ಧ್ಯಾ** 'ಹತ್ವಾರ್ಥಕಾಮಾಂಸ್ತು ಗುರೂನಿಹೈವ' ಎಂದು ಯುದ್ಧದಿಂದ ನನ್ನ ಗುರುಹಿರಿಯರ ಸಂಹಾರವಾಗಿ ಅದರಿಂದ ಪಾಪಬರುವುದು ಎಂಬ ದೋಷಜ್ಞಾನದಿಂದ ನ ಯೋತ್ಸ್ಯೇ ನಾನು ಯುದ್ಧಮಾಡುವದಿಲ್ಲ ಎಂಬ ಅರ್ಜುನನ ಮಾತಿನಿಂದ **ಸ್ವಜನವಧಾತ್** ತಮ್ಮ ಬಂಧುಗಳ ವಧದಿಂದ ನಿವೃತ್ತನಾದ ಅರ್ಜನನ **ಕುಮತಿಂ** ದುಷ್ಟರ ಸಂಹಾರ ಮತ್ತು ಸಜ್ಜನರ ರಕ್ಷಣೆ ರೂಪವಾದ ಬುದ್ಧಿಗೆ ವಿಪರೀತವಾದ ಬುದ್ಧಿಯನ್ನು **ಆತ್ಮವಿದ್ಯಯಾ** ಶ್ರೀಕೃಷ್ಣನ ಗೀತೋಪದೇಶರೂಪವಾದ ವಿದ್ಯೆಯಿಂದ ಅಥವಾ ಅಶೋಚ್ಯಾನನ್ವ-ಶೋಚಸ್ತ್ವಮ್ ಇತ್ಯಾದಿರೂಪವಾದ ವಿದ್ಯೆಯಿಂದ **ಅಹರತ್** ಕರಿಷ್ಯೇ ವಚನಂ ತವ

ಇತ್ಯಾದಿಯಾದ ದುಷ್ಟರಾದ ಕೌರವರ ಸಂಹಾರವನ್ನು ಮಾಡಬೇಕು ಎಂಬ ಬುದ್ಧಿಯನ್ನು ಉಂಟುಮಾಡಿದನೋ ಅಂತಹ **ಪರಮಸ್ಯ ತಸ್ಯ** ಸರ್ವೋತ್ತಮನಾದ ಶ್ರೀಕೃಷ್ಣನ **ಚರಣರತಿಃ** ಜ್ಞಾನಸಾಧವಾದ ಆ ಭಗವಂತನ ಪಾದಗಳಲ್ಲಿ ಭಕ್ತಿಯು **ಅಸ್ತು** ಇರಲಿ.

ಶ್ರೀಕೃಷ್ಣನು ತನ್ನ ನಿಯಮಕ್ಕಿಂತಲೂ ಭಕ್ತನ ಪ್ರತಿಜ್ಞೆ ದೊಡ್ಡದು ಎಂದು ಭಕ್ತವಾತ್ಸಲ್ಯವನ್ನು ಸ್ಮರಣೆಗೆ ತಂದುಕೊಡುವನು.

**ಸ್ವನಿಯಮಮಪಹಾಯ ಮತ್ಪ್ರತಿಜ್ಞಾ**
**ಮೃತಮಧಿಕರ್ತ್ಯುಮವಪ್ಲುತೋ ರಥಸ್ಥಃ ।**
**ಧೃತರಥಚರಣೋಽಭ್ಯಯಾದ್ ಬಲಾಗ್ರೇ**
**ಹರಿರಿವ ಹಂತುಮಿಮಂ ಗತೋತ್ತರೀಯಃ ॥೪೪॥**

**ಸ್ವನಿಯಮಂ** ಯುದ್ಧದಲ್ಲಿ ಆಯುಧವನ್ನು ಹಿಡಿಯುವದಿಲ್ಲ ಎಂಬ ತನ್ನ ನಿಯಮವನ್ನು **ಅಪಹಾಯ** ಬಿಟ್ಟು **ಮತ್ಪ್ರತಿಜ್ಞಾಂ** ಆಯುಧವನ್ನು ಶ್ರೀಕೃಷ್ಣನಿಂದ ಯುದ್ಧದಲ್ಲಿ ಹಿಡಿಸುವೆನು ಎಂಬ ಭಕ್ತರಾದ ಭೀಷ್ಮಾಚಾರ್ಯರ ಪ್ರತಿಜ್ಞೆಯನ್ನು **ಋತಂ** ಸತ್ಯವನ್ನಾಗಿ **ಅಧಿಕರ್ತುಂ** ಮಾಡಲು **ರಥಸ್ಥಃ** ರಥದಲ್ಲಿ ಕುಳಿತ ಶ್ರೀಕೃಷ್ಣನು **ಧೃತರಥಚರಣಃ** ರಥದ ಚಕ್ರವನ್ನು ಕೈಯಲ್ಲಿ ಹಿಡಿದವನಾಗಿ **ಅವಪ್ಲುತಃ** ಕೆಳಗಿಳಿದು **ಗತೋತ್ತರೀಯಃ** ಮೇಲಿನ ವಸ್ತ್ರವು ಜಾರಿದವನಾಗಿ **ಹರಿಃ** ಸಿಂಹವು **ಇಭಂ ಇವ** ಆನೆಯನ್ನು ಸಂಹರಿಸಲು ಬರುವಂತೆ **ಬಲಾಗ್ರೇ** ಸೇನೆಯು ಸನ್ನದ್ಧವಾದಾಗ **ಹಂತುಂ** ಕೊಲ್ಲಲು **ಅಭ್ಯಯಾತ್** ಬಂದನು.

**ಶಿತವಿಶಿಖಹತೋ ವಿಶೀರ್ಣದಂಶಃ**
**ಕ್ಷತಜ ಪರಿಪ್ಲುತ ಆತತಾಯಿನೋ ಮೇ**
**ಪ್ರಸಭಮಭಿಸಸಾರ ಮದ್ವಧಾರ್ಥಂ**
**ಸ ಭವತಿ ಮೇ ಭಗವಾನ್ ಮುದೇ ಮುಕುಂದಃ ॥45॥**

**ಯಃ** ಯಾವನು **ಆತತಾಯಿನಃ** ಶತ್ರುಗಳು **ಮೇ** ನನಗೆ **ಶಿತವಿಶಿಖಹತಃ** ತೀಕ್ಷ್ಣವಾದ ಬಾಣಗಳಿಂದ ಗಾಯಗೊಂಡ **ವಿಶೀರ್ಣದಂಸಃ** ಧ್ವಂಸಗೊಂಡ ಕವಚವುಳ್ಳ **ಕ್ಷತಜಪರಿಪ್ಲುತಃ** ಗಾಯದಿಂದ ಹೊರಬಂದ ರಕ್ತದಿಂದ ವದ್ದೆಯಾದವನಂತೆ ಶ್ರೀಕೃಷ್ಣನು **ಪ್ರಸಭಂ** ರಥದಿಂದ ಇಳಿಯಬೇಡ ಭೀಷ್ಮಾಚಾರ್ಯರನ್ನು ಹೊಡೆಯಬೇಡ ಮೊದಲಾದ ಅರ್ಜುನನ ಮಾತನ್ನು ಲೆಕ್ಕಿಸದೆ ಬಲಾತ್ಕಾರವಾಗಿ **ಮೇ** ನನ್ನ **ವಧಾರ್ಥಂ** ಸಂಹಾರಕ್ಕಾಗಿ

**ಅಭಿಸಸಾರ** ಬಂದನೋ **ಸಃ** ಅಂತಹ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ **ಮುಕುಂದಃ** ಮೋಕ್ಷವನ್ನು ನೀಡುವ ಶ್ರೀಕೃಷ್ಣನು **ಮೇ** ನನ್ನ **ಮುದೇ** ಸಂತೋಷಕ್ಕಾಗಿ **ಭವತು** ಇರಲಿ.

ಅರ್ಜುನನ ಉಪಕಾರವನ್ನು ಪ್ರಾಣವನ್ನು ಬಿಡುವ ಸಂದರ್ಭದಲ್ಲಿ ಕೇವಲ ದರ್ಶನದಿಂದ ಸ್ಮರಿಸುವರು ಮತ್ತು ಭಕ್ತಿಯನ್ನು ಪ್ರಾರ್ಥನೆ ಮಾಡುವರು.

**ವಿಜಯರಥಕುಟುಂಬ ಆತ್ತತೋತ್ರೇ**
**ಧೃತಹಯರಶ್ಮಿಜಿತಶ್ರಮೇಕ್ಷಣೀಯೇ ।**
**ಭಗವತಿ ರತಿರಸ್ತು ಮೇ ಮುಮೂರ್ಷೋ-**
**ರ್ಯಮಿಹ ನಿರೀಕ್ಷ್ಯ ಹತಾ ಗತಾಃ ಸ್ವರೂಪಮ್ ॥೪೬॥**

**ಇಹ** ಈ ಯುದ್ಧದಲ್ಲಿ **ಯಂ** ಯಾವುದನ್ನು **ನಿರೀಕ್ಷ್ಯ** ನೋಡಿ **ಹತಾಃ** ಸತ್ತರು **ಸ್ವರೂಪಂ** ಭಗವಂತನ ಮನೆಗೆ **ಗತಾಃ** ಹೋದರು **ವಿಜಯರಥಕುಟುಂಬೇ** ಅರ್ಜುನನ ರಥವು ಯಾರಿಂದ ರಕ್ಷಿಸಲ್ಪಟ್ಟಿತ್ತೋ **ಆತ್ತತೋತ್ರೇ** ಸ್ವೀಕರಿಸಿದ ಚಾವಟಿಯುಳ್ಳ **ಧೃತಹಯರಶ್ಮಿಜಿತಶ್ರಮೇಕ್ಷಣೀಯೇ** ಶ್ರಮವನ್ನು ಗೆದ್ದಂತೆ ಕಾಣುವ ಮತ್ತು ಕುದುರೆಗಳನ್ನು ಲಗಾಮಿನಲ್ಲಿ ಹಿಡಿದಿಟ್ಟಿರುವ **ಭಗವತಿ** ಶ್ರೀಕೃಷ್ಣನಲ್ಲಿ **ಮುಮೂರ್ಷೋಃ** ಸಾಯುತ್ತಿರುವ **ಮೇ** ನನಗೆ **ರತಿಃ** ಭಕ್ತಿಯು **ಅಸ್ತು** ಇರಲಿ.

**ಲಲಿತಗತಿವಿಲಾಸವಲ್ಗುಹಾಸಪ್ರಣಯನಿರೀಕ್ಷಣಕಲ್ಪಿತೋರುಮಾನಾ ।**
**ಕೃತಮನುಕೃತವತ್ಯ ಉನ್ಮದಾಂಧಾ ಪ್ರಕೃತಿಮಗುಃ ಕಿಲ ಯಸ್ಯ ಗೋಪವಧ್ವಃ॥**

**ಯಸ್ಯ** ಯಾವ ಶ್ರೀಕೃಷ್ಣನ **ಲಲಿತಗತಿವಿಲಾಸವಲ್ಗುಹಾಸಪ್ರಣ ನಿರೀಕ್ಷಣಕಲ್ಪಿತೋ-ರುಮಾನಾಃ** ಮನೋಹರವಾದ ಗಮನ ಹಾವಭಾವಗಳು, ಕೋಮಲವಾದ ಹಾಸ, ಮುಗುಳು ನಗೆ, ಪ್ರೀತಿಯಿಂದ ನೋಡುವಿಕೆ ಅವುಗಳಿಂದ ಕಲ್ಪಿಸಿಕೊಂಡ ಅತಿಯಾದ ಮಾನವುಳ್ಳ ಅಥವಾ ಕೋಮಲನಡಿಗೆಗಳು ಮೊದಲಾದವುಗಳಿಂದ ಕೃಷ್ಣನಲ್ಲಿ ಸಮರ್ಪಿಸಿಕೊಂಡ ಮಹಾಪೂಜೆಯುಳ್ಳ **ಅತ ಏವ** ಆದ್ದರಿಂದಲೇ **ಉನ್ಮದಾಂಧಾ** ಉತ್ಕೃಷ್ಟವಾದ ಸಂತೋಷದಿಂದ ಕುರುಡರಾದ **ಕೃತಂ** ಶ್ರೀಕೃಷ್ಣನು ತೋರಿಸಿದ ಪೂತನಾದಿಸಂಹಾರರೂಪ ಪರಾಕ್ರಮವನ್ನು **ಅನುಕೃತವತ್ಯಃ** ತಾವೇ ಕೃಷ್ಣನೆಂದು ತಿಳಿದು ನಡೆಯುವ **ಗೋಪವಧ್ವಃ** ಗೋಪಿಕಾಸ್ತ್ರೀಯರು **ಪ್ರಕೃತಿಂ** ಜಡಶರೀರವನ್ನು **ವಿಹಾಯ**

ಬಿಟ್ಟು ಸ್ವರೂಪಾವಿರ್ಭಾವ ರೂಪ ಮೋಕ್ಷವನ್ನು **ಅಗುಃ** ಹೊಂದಿದರು ಅಂತಹ **ಕೃಷ್ಣೇ** ಶ್ರೀಕೃಷ್ಣನಲ್ಲಿ **ರತಿಃ** ಭಕ್ತಿಯು **ಅಸ್ತು** ಇರಲಿ.

ಶ್ರೀಕೃಷ್ಣನು ಜಗತ್ತಿಗೆ ಪೂಜ್ಯನಾದವನು ಎಂಬುದನ್ನು ಸ್ಮರಿಸುವರು.

**ಮುನಿಗಣನೃಪವರ್ಯಸಂಕುಲೇಽಂತಃ**
**ಸದಸಿ ಯುಧಿಷ್ಠಿರರಾಜಸೂಯ ಏಷಾಮ್ ।**
**ಅರ್ಹಣಮಭಿಪೇದ ಈಕ್ಷಣೀಯೋ**
**ಮಮ ದೃಶಿಗೋಚರ ಏಷ ಆವಿರಾತ್ಮಾ ॥೪೮॥**

**ಮುನಿಗಣನೃಪವರ್ಯಕುಲೇ** ಮುನಿಗಳ ಸಮೂಹಗಳಿಂದ ಮತ್ತು ರಾಜಶ್ರೇಷ್ಠರಿಂದ ಕೂಡಿರುವ **ಏಷಾಂ ಅಂತಃ** ಈ ಋಷಿಗಳ ಮಧ್ಯದಲ್ಲಿ **ಯುಧಿಷ್ಠಿರರಾಜಸೂಯೇ** ಯುಧಿಷ್ಠಿರನು ಮಾಡುವ ರಾಜಸೂಯಯಾಗದ **ಸದಸಿ** ಸಭೆಯಲ್ಲಿ **ಯಃ** ಯಾರು **ಅರ್ಹಣಂ** ಅಗ್ರಪೂಜೆಯನ್ನು **ಅಭಿಪೇದೇ** ಹೊಂದಿದನೋ **ಏಷಃ** ಅಂತಹ ಈ **ಈಕ್ಷಣೀಯಃ** ನೋಡಲೇಬೇಕಾದ ಶ್ರೀಕೃಷ್ಣನು **ಮಮ** ಭೀಷ್ಮನಾದ ನನ್ನ **ದೃಷಿಗೋಚರ** ದೃಷ್ಟಿಗೆ ವಿಷಯನಾಗಿ **ಆವಿರಾತ್ಮಾ** ಪ್ರಾದುರ್ಭವಿಸಿ ನಿಂತಿರುವನು. ಅಹೋ ಇದು ನನ್ನ ಸೌಭಾಗ್ಯ.

ಪರಮಾತ್ಮನು ಸರ್ವಾಂತರ್ಯಾಮಿ ಎಂದು ಹೇಳಿದಾಗ ಸ್ಥಾನಭೇದನಿಮಿತ್ತಕವಾಗಿ ಪರಮಾತ್ಮನಿಗೆ ಭೇದವಿದೆ ಎಂಬ ಶಂಕೆ ಬಂದರೆ ಎಲ್ಲ ಪ್ರಾಣಿಗಳಲ್ಲಿ ಇರುವ ಪರಮಾತ್ಮನಿಗೆ ಐಕ್ಯವೇ ಹೊರತು ಭೇದವಿಲ್ಲವೆಂಬುದು ನಮ್ಮೆಲ್ಲರ ಪ್ರತ್ಯಕ್ಷ ಹಾಗು ಅನುಮಾನದಿಂದ ಸಿದ್ಧವಾಗಿದೆ ಎಂದು ಹೇಳುವರು.

**ತಮಿಮಹಮಜಂ ಶರೀರಭಾಜಾಂ**
**ಹೃದಿ ಹೃದಿ ವಿಷ್ಠಿತಮಾತ್ಮಕಲ್ಪಿತಾನಾಮ್।**
**ಪ್ರತಿದೃಶಮಿವ ನೈಕಧಾರ್ಕಮೇಕಂ**
**ಸಮಧಿಗತೋ ಅಸ್ಮಿ ವಿಧೂತಭೇದಮೋಹಃ ॥೪೯॥**

**ಪ್ರತಿದೃಶಂ** ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾಗಿದ್ದರಿಂದ ಪ್ರತಿಯೊಬ್ಬರ ಕಣ್ಣಿನಲ್ಲಿ **ನೈಕಧಾ** ಅನೇಕರೂಪದಿಂದ **ಸ್ಥಿತಂ** ಚಕ್ಷುರಿಂದ್ರಿಯಕ್ಕೆ ನಿಯಾಮಕನಾಗಿ ಇರುವ **ಅರ್ಕಂ** ಸೂರ್ಯನನ್ನು **ಏಕಂ** ಒಬ್ಬನನ್ನಾಗಿ **ಸಮಧಿಗಚ್ಛತಿ** ಜ್ಞಾನಿಯು ತಿಳಿಯುತ್ತಾನೆಯೋ **ತಥಾ**

ಹಾಗೆಯೇ **ಅಹಂ ಅಪಿ** ನಾನೂ ಕೂಡ **ಆತ್ಮನಾ ಕಲ್ಪಿತಾನಾಂ** ತನ್ನಿಂದ ಸೃಷ್ಟವಾದ **ಶರೀರಭಾಜಾಂ** ಜೀವರ **ಹೃದಿ ಹೃದಿ** ಪ್ರತಿಯೊಬ್ಬರ ಹೃದಯದಲ್ಲಿ **ವಿಷ್ಠಿತಂ** ವಿವಿಧರೂಪಗಳಿಂದ ಇರುವ **ತಂ** ಆ ಪರಮಾತ್ಮನನ್ನು **ಇಮಂ ಅಜಂ** ಈ ಶ್ರೀಕೃಷ್ಣನನ್ನು **ಏಕಂ** ಅಭಿನ್ನನೆಂದು **ವಿಧೂತಭೇದಮೋಹಃ** ಅವತಾರ ಮತ್ತು ಗುಣಾದಿಗಳಲ್ಲಿ ಹೋಗಲ್ಪಟ್ಟ ಭೇದಭ್ರಮವುಳ್ಳವನಾಗಿ **ಸಮಧಿಗತಃ ಅಸ್ಮಿ** ಚೆನ್ನಾಗಿ ತಿಳಿದಿದ್ದೇನೆ. ತಿಳಿಯುವವನು ತಿಳುವಳಿಕೆ ತಿಳಿಯುವವಸ್ತು ಈ ಮೂರುಗಳಿಗೆ ಭೇದವು ಬಾಧಿತವಾಗದ ಅನುಭವದಿಂದ ಸಿದ್ಧವಾಗಿದ್ದರಿಂದ ತಿಳಿಯಲ್ಪಡುವ ಕೃಷ್ಣನು ಬೇರೆ ತಿಳಿಯುವ ನಾನು ಬೇರೆ ಎಂಬುದು ಭೇದಮೋಹವನ್ನು ನಿರಾಕರಿಸುವ ಮಾತು. ತಮ್ಮ(ಅದ್ವೈತಿಗಳ) ಸಿದ್ಧಾಂತದ ದುರಾಗ್ರಹದಿಂದ ಹೇಳಲ್ಪಡುವ ಜಗತ್ತು ಎಲ್ಲವು ಅವಿದ್ಯಾಕಲ್ಪಿತವೆಂಬ ಮಾತು ಆತ್ಮಪದಪ್ರಯೋಗದಿಂದ ನಿರಾಕೃತವಾಯಿತು. ಶರೀರಭಾಜಾಂ ಎಂಬುವದರಿಂದ ಚೇತನಬಹುತ್ವವು ಸಿದ್ಧವಾಗುವುದು. ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಎಂಬ ಪ್ರಮಾಣವಿದೆ. ವಿಧೂತಭೇದಮೋಹಃ ಎಂದರೆ ಸ್ಥಾನಭೇದಾದಿಲಿಂಗಗಳಿಂದ ಉಂಟಾದ ಭೇದಭ್ರಮರಹಿತನೆಂದರ್ಥ. ಇದರಿಂದ ಅತ್ಯಂತಾಭೇದವನ್ನು ತಿಳಿಯುತ್ತೇವೆ ಎಂದಾಯಿತು.

ಅಥವಾ ಈಶ್ವರಸ್ಯ ಪೂರ್ಣತಾ ಜ್ಞಾನಂ ವಿಷ್ಣೋರನ್ಯಸ್ಯ ಚೇಷ್ಯತೇ । ಭೇದಸ್ತಸ್ಯಾವತಾರೇಷು ಜೀವಸ್ಯ ಈಶತ್ವಮೇವ ಚ ತಥಾ ಜೀವತ್ವಮೀಶಸ್ಯ ಜಡಾಭೇದಸ್ತಯೋರಪಿ ಭೇದಮೋಹಃ ಸ ಸದಾ ನ ಹರೌ ಕ್ವಚಿತ್ ಅನ್ಯೇಷಾಂ ತತ್ಪ್ರಸಾದೇನ ಶನೈರ್ಯಾತಿ ಸತಾಮಪಿ ಎಂಬ ಪ್ರಮಾಣದಿಂದ ಹೇಳಲ್ಪಟ್ಟ ಭೇದಮೋಹರಹಿತನು ಎಂದರ್ಥ. ಎಲ್ಲ ಜ್ಞಾನಿಗಳು ಎಲ್ಲಕಡೆ ಇರುವ ಭಗವಂತನು ಒಬ್ಬನೇ ಎಂದು ತಿಳಿಯುತ್ತಾರೆ. ಸರ್ವತ್ರ ಅವಸ್ಥಿತಃ ಈಶ್ವರಃ ಸ್ವಗತಭೇದಶೂನ್ಯಃ ಚೇತನತ್ವಾತ್ ತತ್ವಾಭಿಮಾನಿವತ್ ಎಂಬ ಯುಕ್ತಿಯನ್ನು ಇಲ್ಲಿ ಸೂಚಿಸಿರುವರು.

ದ್ಯೂತವೇ ಭೂಭಾರ ಹರಣಕ್ಕೆ ಕಾರಣವೆಂದು ಪ್ರಸಿದ್ಧವಾಗಿದೆ. ಕೃಷ್ಣನೇ ಭೂಭಾರವನ್ನು ಹರಣಮಾಡಿದವನೆಂದು ಹೇಳುವದು ಹೇಗೆ ಎಂದು ಶಂಕೆಬಂದರೆ ಆ ದ್ಯೂತವನ್ನು ಮಾಡಿಸಿದವನು ಅವನೇ ಆದ್ದರಿಂದ ಅವನೇ ಭೂಭಾರ ಪರಿಹಾರಕನೆಂದು ಸ್ತುತಿಸುತ್ತಾ ತಮ್ಮ ಕರ್ತವ್ಯವನ್ನು ತಿಳಿಸುವರು.

**ಕ್ಷಿತಿಭರಮವರೋಪಿತುಂ ಕುರೂಣಾಂ**
**ಶ್ವಸನ ಇವಾಽಸೃಜದಕ್ಷವಂಶವಹ್ನಿಮ್ ।**
**ತಮಿಮಮಜಮನುವ್ರತಾರ್ತಿಹಾಂಘ್ರಿಂ**
**ಹೃದಿ ಪರಿರಭ್ಯ ಜಹಾಮಿ ಮರ್ತ್ಯನೀಡಮ್ ॥೩೦॥**

**ಶ್ವಸನ ಇವ** ಗಾಳಿಯು ಹೇಗೆ ಬಿದಿರುಗಳಲ್ಲಿ ಪರಸ್ಪರ ಸಂಘರ್ಷಣದಿಂದ ವಹ್ನಿಯನ್ನು ಹುಟ್ಟಿಸುತ್ತದೆಯೋ **ತಥಾ** ಹಾಗೆಯೇ **ಅಯಂ** ಶ್ರೀಕೃಷ್ಣನು **ಕ್ಷಿತಿಭರಂ ಅವರೋಪಿತುಂ** ಭೂಭಾರವನ್ನು ಇಳಿಸಲು(ಕಡಿಮೆ ಮಾಡಲು) **ಕುರೂಣಾಂ** ಕೌರವರು ಮತ್ತು ಪಾಂಡವರುಗಳಲ್ಲಿ **ಅಕ್ಷವಂಶವಹ್ನಿಂ** ದ್ಯೂತವೆಂಬ ವಂಶನಾಮಕ ವಹ್ನಿಯನ್ನು **ಅಸೃಜತ್** ಸೃಷ್ಟಿಸಿದನು **ಅನುವೃತಾರ್ತಿಹಾಂಘ್ರಿಂ** ತನ್ನನ್ನು ಅನುಸರಿಸಿರುವ ಭಕ್ತರ ಸಂಸಾರವೆಂಬ ದುಃಖವನ್ನು ಕಳೆಯುವ **ಅಜಂ** ಜನ್ಮರಹಿತನಾದ **ತಂ ಇಮಂ** ಅಂತಹ ಈ ಕೃಷ್ಣಪರಮಾತ್ಮನನ್ನು **ಹೃದಿ** ಹೃದಯದಲ್ಲಿ **ಪರಿರಭ್ಯ** ಆಲಿಂಗನ ಮಾಡಿಕೊಂಡು **ಮರ್ತ್ಯನೀಡಂ** ಮರಣಶೀಲವಾದ ಈ ದೇಹವನ್ನು **ಜಹಾಮಿ** ಬಿಡುತ್ತೇನೆ.

**ಸೂತ ಉವಾಚ -**

**ಕೃಷ್ಣ ಏವಂ ಭಗವತಿ ಮನೋವಾಗ್ದೃಷ್ಟಿವೃತ್ತಿಭಿಃ ।**
**ಆತ್ಮನ್ಯಾತ್ಮಾನಮಾವಿಶ್ಯ ಸೋಽಂತಃ ಶ್ವಾಸ ಉಪಾರಮತ್ ॥೩೦॥**

**ಏವಂ** ಈ ರೀತಿಯಾಗಿ **ಮನೋವಾಗ್ದೃಷ್ಟಿವೃತ್ತಿಭಿಃ** ಮನಸ್ಸು, ಮಾತು, ಮತ್ತು ದೃಷ್ಟಿಗಳಿಂದ **ಆತ್ಮನಿ** ಹೃದಯದಲ್ಲಿರುವ ಮತ್ತು ಹೊರಗಿರುವ **ಭಗವತಿ** ಭಗವಂತನಾದ **ಕೃಷ್ಣೇ** ಶ್ರೀಕೃಷ್ಣನಲ್ಲಿ **ಆತ್ಮಾನಂ** ತನ್ನನ್ನು **ಆವಿಶ್ಯ** ನಾನು ಸ್ವತಂತ್ರನಲ್ಲ ಶ್ರೀಕೃಷ್ಣನ ಅಧೀನನಾಗಿದ್ದೇನೆ ಎಂದು ಮನಸ್ಸನ್ನು ಇಟ್ಟು **ಸಃ** ಭೀಷ್ಮಾಚಾರ್ಯರು **ಅಂತಃಶ್ವಾಸಃ** ರೇಚಕಪೂರಕ ಶ್ವಾಸೋಚ್ಛ್ವಾಸಗಳನ್ನು ಕುಂಭಕದಲ್ಲಿ ಇಟ್ಟು ಮೂಲಾಧಾರದಿಂದ ಬ್ರಹ್ಮನಾಡಿಯಿಂದ ನಾಭಿಚಕ್ರಕ್ರಮದಿಂದ ಉದಾನ ವಾಯುವನ್ನು ಮೇಲೆ ತೆಗೆದುಕೊಂಡು ಬಂದು **ಉಪಾರಮತ್** ಶರೀರವನ್ನು ಬಿಟ್ಟರು.

**ಸಂಪದ್ಯಮಾನಮಾಜ್ಞಾಯ ಭೀಷ್ಮಂ ಬ್ರಹ್ಮಣಿ ನಿಷ್ಕಲೇ ।**
**ಸರ್ವೇ ಬಭೂವುತೇ ತೂಷ್ಣೀಂ ವಯಾಂಸೀವ ದಿನಾತ್ಯಯೇ ॥೩೨॥**

ಹಾಗೆಯೇ **ಅಹಂ ಅಪಿ** ನಾನೂ ಕೂಡ **ಆತ್ಮನಾ ಕಲ್ಪಿತಾನಾಂ** ತನ್ನಿಂದ ಸೃಷ್ಟವಾದ **ಶರೀರಭಾಜಾಂ** ಜೀವರ **ಹೃದಿ ಹೃದಿ** ಪ್ರತಿಯೊಬ್ಬರ ಹೃದಯದಲ್ಲಿ **ವಿಷ್ಠಿತಂ** ವಿವಿಧರೂಪಗಳಿಂದ ಇರುವ **ತಂ** ಆ ಪರಮಾತ್ಮನನ್ನು **ಇಮಂ ಅಜಂ** ಈ ಶ್ರೀಕೃಷ್ಣನನ್ನು **ಏಕಂ** ಅಭಿನ್ನನೆಂದು **ವಿಧೂತಭೇದಮೋಹಃ** ಅವತಾರ ಮತ್ತು ಗುಣಾದಿಗಳಲ್ಲಿ ಹೋಗಲ್ಪಟ್ಟ ಭೇದಭ್ರಮವುಳ್ಳವನಾಗಿ **ಸಮಧಿಗತಃ ಅಸ್ಮಿ** ಚೆನ್ನಾಗಿ ತಿಳಿದಿದ್ದೇನೆ. ತಿಳಿಯುವವನು ತಿಳುವಳಿಕೆ ತಿಳಿಯುವವಸ್ತು ಈ ಮೂರುಗಳಿಗೆ ಭೇದವು ಬಾಧಿತವಾಗದ ಅನುಭವದಿಂದ ಸಿದ್ಧವಾಗಿದ್ದರಿಂದ ತಿಳಿಯಲ್ಪಡುವ ಕೃಷ್ಣನು ಬೇರೆ ತಿಳಿಯುವ ನಾನು ಬೇರೆ ಎಂಬುದು ಭೇದಮೋಹವನ್ನು ನಿರಾಕರಿಸುವ ಮಾತು. ತಮ್ಮ(ಅದ್ವೈತಿಗಳ) ಸಿದ್ಧಾಂತದ ದುರಾಗ್ರಹದಿಂದ ಹೇಳಲ್ಪಡುವ ಜಗತ್ತು ಎಲ್ಲವು ಅವಿದ್ಯಾಕಲ್ಪಿತವೆಂಬ ಮಾತು ಆತ್ಮಪದಪ್ರಯೋಗದಿಂದ ನಿರಾಕೃತವಾಯಿತು. ಶರೀರಭಾಜಾಂ ಎಂಬುವದರಿಂದ ಚೇತನಬಹುತ್ವವು ಸಿದ್ಧವಾಗುವುದು. ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಎಂಬ ಪ್ರಮಾಣವಿದೆ. ವಿಧೂತಭೇದಮೋಹಃ ಎಂದರೆ ಸ್ಥಾನಭೇದಾದಿಲಿಂಗಗಳಿಂದ ಉಂಟಾದ ಭೇದಭ್ರಮರಹಿತನೆಂದರ್ಥ. ಇದರಿಂದ ಅತ್ಯಂತಾಭೇದವನ್ನು ತಿಳಿಯುತ್ತೇವೆ ಎಂದಾಯಿತು.

ಅಥವಾ ಈಶ್ವರಸ್ಯ ಪೂರ್ಣತಾ ಜ್ಞಾನಂ ವಿಷ್ಣೋರನ್ಯಸ್ಯ ಚೇಷ್ಯತೇ । ಭೇದಸ್ತಸ್ಯಾವತಾರೇಷು ಜೀವಸ್ಯ ಈಶತ್ವಮೇವ ಚ ತಥಾ ಜೀವತ್ವಮೀಶಸ್ಯ ಜಡಾಭೇದಸ್ತಯೋರಪಿ ಭೇದಮೋಹಃ ಸ ಸದಾ ನ ಹರೌ ಕ್ವಚಿತ್ ಅನ್ಯೇಷಾಂ ತತ್ಪ್ರಸಾದೇನ ಶನೈರ್ಯಾತಿ ಸತಾಮಪಿ ಎಂಬ ಪ್ರಮಾಣದಿಂದ ಹೇಳಲ್ಪಟ್ಟ ಭೇದಮೋಹರಹಿತನು ಎಂದರ್ಥ. ಎಲ್ಲ ಜ್ಞಾನಿಗಳು ಎಲ್ಲಕಡೆ ಇರುವ ಭಗವಂತನು ಒಬ್ಬನೇ ಎಂದು ತಿಳಿಯುತ್ತಾರೆ. ಸರ್ವತ್ರ ಅವಸ್ಥಿತಃ ಈಶ್ವರಃ ಸ್ವಗತಭೇದಶೂನ್ಯಃ ಚೇತನತ್ವಾತ್ ತತ್ತ್ವಾಭಿಮಾನಿವತ್ ಎಂಬ ಯುಕ್ತಿಯನ್ನು ಇಲ್ಲಿ ಸೂಚಿಸಿರುವರು.

ದ್ಯೂತವೇ ಭೂಭಾರ ಹರಣಕ್ಕೆ ಕಾರಣವೆಂದು ಪ್ರಸಿದ್ಧವಾಗಿದೆ. ಕೃಷ್ಣನೇ ಭೂಭಾರವನ್ನು ಹರಣಮಾಡಿದವನೆಂದು ಹೇಳುವದು ಹೇಗೆ ಎಂದು ಶಂಕೆಬಂದರೆ ಆ ದ್ಯೂತವನ್ನು ಮಾಡಿಸಿದವನು ಅವನೇ ಆದ್ದರಿಂದ ಅವನೇ ಭೂಭಾರ ಪರಿಹಾರಕನೆಂದು ಸ್ತುತಿಸುತ್ತಾ ತಮ್ಮ ಕರ್ತವ್ಯವನ್ನು ತಿಳಿಸುವರು.

**ಕ್ಷಿತಿಭರಮವರೋಪಿತುಂ ಕುರೂಣಾಂ**
**ಶ್ವಸನ ಇವಾಽಸೃಜದಕ್ಷವಂಶವಹ್ನಿಮ್ ।**
**ತಮಿಮಮಜಮನುವ್ರತಾರ್ತಿಹಾಂಘ್ರಿಂ**
**ಹೃದಿ ಪರಿರಭ್ಯ ಜಹಾಮಿ ಮರ್ತ್ಯನೀಡಮ್ ॥೩೦॥**

**ಶ್ವಸನ ಇವ** ಗಾಳಿಯು ಹೇಗೆ ಬಿದಿರುಗಳಲ್ಲಿ ಪರಸ್ಪರ ಸಂಘರ್ಷಣದಿಂದ ವಹ್ನಿಯನ್ನು ಹುಟ್ಟಿಸುತ್ತದೆಯೋ **ತಥಾ** ಹಾಗೆಯೇ **ಅಯಂ** ಶ್ರೀಕೃಷ್ಣನು **ಕ್ಷಿತಿಭರಂ ಅವರೋಪಿತುಂ** ಭೂಭಾರವನ್ನು ಇಳಿಸಲು(ಕಡಿಮೆ ಮಾಡಲು) **ಕುರೂಣಾಂ** ಕೌರವರು ಮತ್ತು ಪಾಂಡವರುಗಳಲ್ಲಿ **ಅಕ್ಷವಂಶವಹ್ನಿಂ** ದ್ಯೂತವೆಂಬ ವಂಶನಾಮಕ ವಹ್ನಿಯನ್ನು **ಅಸೃಜತ್** ಸೃಷ್ಟಿಸಿದನು **ಅನುವ್ರತಾರ್ತಿಹಾಂಘ್ರಿಂ** ತನ್ನನ್ನು ಅನುಸರಿಸಿರುವ ಭಕ್ತರ ಸಂಸಾರವೆಂಬ ದುಃಖವನ್ನು ಕಳೆಯುವ **ಅಜಂ** ಜನ್ಮರಹಿತನಾದ **ತಂ ಇಮಂ** ಅಂತಹ ಈ ಕೃಷ್ಣಪರಮಾತ್ಮನನ್ನು **ಹೃದಿ** ಹೃದಯದಲ್ಲಿ **ಪರಿರಭ್ಯ** ಆಲಿಂಗನ ಮಾಡಿಕೊಂಡು **ಮರ್ತ್ಯನೀಡಂ** ಮರಣಶೀಲವಾದ ಈ ದೇಹವನ್ನು **ಜಹಾಮಿ** ಬಿಡುತ್ತೇನೆ.

**ಸೂತ ಉವಾಚ -**

**ಕೃಷ್ಣ ಏವಂ ಭಗವತಿ ಮನೋವಾಗ್ದೃಷ್ಟಿವೃತ್ತಿಭಿಃ ।**
**ಆತ್ಮನ್ಯಾತ್ಮಾನಮಾವಿಶ್ಯ ಸೋಽಂತಃ ಶ್ವಾಸ ಉಪಾರಮತ್ ॥೩೧॥**

**ಏವಂ** ಈ ರೀತಿಯಾಗಿ **ಮನೋವಾಗ್ದೃಷ್ಟಿವೃತ್ತಿಭಿಃ** ಮನಸ್ಸು, ಮಾತು, ಮತ್ತು ದೃಷ್ಟಿಗಳಿಂದ **ಆತ್ಮನಿ** ಹೃದಯದಲ್ಲಿರುವ ಮತ್ತು ಹೊರಗಿರುವ **ಭಗವತಿ** ಭಗವಂತನಾದ **ಕೃಷ್ಣೇ** ಶ್ರೀಕೃಷ್ಣನಲ್ಲಿ **ಆತ್ಮಾನಂ** ತನ್ನನ್ನು **ಆವಿಶ್ಯ** ನಾನು ಸ್ವತಂತ್ರನಲ್ಲ ಶ್ರೀಕೃಷ್ಣನ ಅಧೀನನಾಗಿದ್ದೇನೆ ಎಂದು ಮನಸ್ಸನ್ನು ಇಟ್ಟು **ಸಃ** ಭೀಷ್ಮಾಚಾರ್ಯರು **ಅಂತಃಶ್ವಾಸಃ** ರೇಚಕಪೂರಕ ಶ್ವಾಸೋಚ್ಛ್ವಾಸಗಳನ್ನು ಕುಂಭಕದಲ್ಲಿ ಇಟ್ಟು ಮೂಲಾಧಾರದಿಂದ ಬ್ರಹ್ಮನಾಡಿಯಿಂದ ನಾಭಿಚಕ್ರಕ್ರಮದಿಂದ ಉದಾನ ವಾಯುವನ್ನು ಮೇಲೆ ತೆಗೆದುಕೊಂಡು ಬಂದು **ಉಪಾರಮತ್** ಶರೀರವನ್ನು ಬಿಟ್ಟರು.

**ಸಂಪದ್ಯಮಾನಮಾಜ್ಞಾಯ ಭೀಷ್ಮಂ ಬ್ರಹ್ಮಣಿ ನಿಷ್ಕಲೇ ।**
**ಸರ್ವೇ ಬಭೂವುತೇ ತೂಷ್ಣೀಂ ವಯಾಂಸೀವ ದಿನಾತ್ಯಯೇ ॥೩೨॥**

**ತೇ ಸರ್ವೇ** ಅಲ್ಲಿ ನೆರೆದಿರುವ ಎಲ್ಲರೂ ಕೂಡ **ಭೀಷ್ಮಂ** ಭೀಷ್ಮಾಚಾರ್ಯರನ್ನು **ನಿಷ್ಕಲೇ** ಷೋಡಶಕಲಾರಹಿತನಾದ **ಬ್ರಹ್ಮಣಿ** ಶ್ರೀಕೃಷ್ಣನಲ್ಲಿ (ಶ್ರೀಕೃಷ್ಣನನ್ನು) **ಸಂಪದ್ಯಮಾನಂ** ಹೊಂದಿದವನನ್ನಾಗಿ **ಆಜ್ಞಾಯ** ತಿಳಿದು **ದಿನಾತ್ಯಯೇ** ಸಾಯಂಕಾಲದಲ್ಲಿ **ವಾಯಾಂಸಿ** ಪಕ್ಷಿಗಳು ಸುಮ್ಮನಾಗುವಂತೆ **ತೂಷ್ಣೀಂ ಬಭೂವುಃ** ಸುಮ್ಮನಾದರು.

**ವಿಶೇಷ :-** ಮರಣಕ್ಕಿಂತಲೂ ಮೊದಲು ಅಸಂಪ್ರಜ್ಞಾತಸಮಾಧ್ಯವಸ್ಥೆಯನ್ನು ಹೊಂದಿರುವ ಅನಂತರ ತಮ್ಮ ಮೂಲರೂಪವನ್ನು ಹೊಂದಿದವನಾಗಿ **ಆಜ್ಞಾಯ** ಚೆನ್ನಾಗಿ ತಿಳಿದು ಎಂದು ಹೀಗೂ ಅರ್ಥ.

**ತತ್ರ ದುಂದಭಯೋ ನೇದುಃ ದೇವಗಂಧರ್ವನಾದಿತಾಃ.**
**ಶಶಂಸುಃ ಸಾಧವೋ ಬ್ರಹ್ಮನ್ ಖಾತ್ಪೇತುಃ ಪುಷ್ಪವೃಷ್ಟಯಃ ।।೫೩।।**

**ತತ್ರ** ಭೀಷ್ಮಾಚಾರ್ಯರ ನಿರ್ಯಾಣ ಸಮಯದಲ್ಲಿ **ದೇವಗಂಧರ್ವನಾದಿತಾಃ** ದೇವತೆಗಳು ಮತ್ತು ಗಂಧವರ್ವರಿಂದ ಬಾರಿಸಲ್ಪಟ್ಟ **ದುಂದುಭಯಃ** ನಗಾರಿಗಳು **ನೇದುಃ** ಶಬ್ದಮಾಡಿದವು. **ಹೇ ಬ್ರಹ್ಮನ್** ಶೌನಕರೇ **ಸಾಧವಃ** ಸಜ್ಜನರು **ಶಶಂಸುಃ** ಸ್ತೋತ್ರಮಾಡಿದರು **ಖಾತ್** ಆಕಾಶದಿಂದ **ಪುಷ್ಪವೃಷ್ಟಯಃ** ಹೂವಿನ ಮಳೆಗಳು **ಪೇತುಃ** ಭೀಷ್ಮಾಚಾರ್ಯರ ಮೇಲೆ ಆದವು.

**ತಸ್ಯ ನಿರ್ಹಣರಣಾದೀನಿ ಸಂಪರೇತಸ್ಯ ಭಾರ್ಗವ ।**
**ಯುಧಿಷ್ಠಿರಃ ಕಾರಯಿತ್ವಾ ಮಹೂರ್ತಂ ದುಃಖಿತೋ ಅಭವತ್ ।।೫೪।।**

**ಯುಧಿಷ್ಠಿರಃ** ಧರ್ಮರಾಜನು **ಸಂಪರೇತಸ್ಯ** ಮೃತನಾದ **ತಸ್ಯ** ಭೀಷ್ಮಾಚಾರ್ಯರ **ನಿರ್ಹರಣಾದೀನಿ** ಶವಸಂಸ್ಕಾರಗಳನ್ನು **ಕಾರಯಿತ್ವಾ** ಭೀಮಾದಿಗಳಿಂದ ಮಾಡಿಸಿ **ಮುಹೂರ್ತಂ** ಎರಡು ಘಳಿಗೆಯ ವರೆಗೆ(48ನಿಮಿಷ) **ದುಃಖಿತಃ ಅಭವತ್** ದುಃಖಿತನಾದನು.

**ತುಷ್ಟುವುರ್ಮುನಯೋ ಹೃಷ್ಟಾಃ ಕೃಷ್ಣಂ ತದ್ಗುಹ್ಯನಾಮಭಿಃ ।**
**ತತಸ್ತೇ ಕೃಷ್ಣಹೃದಯಾಃ ಸ್ವಾಶ್ರಮಾನ್ಪ್ರಯಯುಃ ಪುನಃ ।।೫೫।।**

**ತತಃ** ಅನಂತರ **ಕೃಷ್ಣಹೃದಯಾಃ** ಕೃಷ್ಣನನ್ನು ಹೃದಯದಲ್ಲಿ ಇರಿಸಿಕೊಂಡ ಅಥವಾ ಕೃಷ್ಣನಲ್ಲಿ ಮನಸ್ಸಿಟ್ಟ **ತೇ ಮುನಯಃ** ಆ ಮುನಿಗಳು **ಹೃಷ್ಟಾಃ** ಭಗವಂತನ

ಮಹಿಮೆಯಿಂದ ರೋಮಾಂಚಿತರಾಗಿ **ಕೃಷ್ಣಂ** ಶ್ರೀಕೃಷ್ಣನನ್ನು **ತದ್ಗುಹ್ಯನಾಮಭಿಃ** ಅವನ ಉಪನಿಷತ್ ಪ್ರತಿಪಾದ್ಯವಾದ ರಹಸ್ಯನಾಮಗಳಿಂದ **ತುಷ್ಟುವುಃ** ಸ್ತೋತ್ರಮಾಡಿದರು **ತತಃ** ಅನಂತರ **ಸ್ವಾಶ್ರಮಾನ್** ತಮ್ಮ ಆಶ್ರಮಗಳಿಗೆ **ಪ್ರಯಯುಃ** ತೆರಳಿದರು.

**ತತೋ ಯುಧಿಷ್ಠಿರೋ ಗತ್ವಾ ಸಕೃಷ್ಣೋ ಗಜಸಾಹ್ವಯಮ್ ।**
**ಪಿತರಂ ಸಾಂತ್ವಯಾಮಾಸ ಗಾಂಧಾರೀಂ ಚ ತಪಸ್ವಿನೀಮ್ ॥೫೧॥**

**ತತಃ** ಅನಂತರ **ಸಕೃಷ್ಣಃ ಯುಧಿಷ್ಠಿರಃ** ಶ್ರೀಕೃಷ್ಣನಿಂದ ಸಹಿತನಾದ ಧರ್ಮರಾಜನು **ಗಜಸಾಹ್ವಯಂ** ಹಸ್ತಿನಾಪುರಕ್ಕೆ **ಗತ್ವಾ** ಹೋಗಿ **ಪಿತರಂ** ಧೃತರಾಷ್ಟ್ರನನ್ನು **ತಪಸ್ವಿನೀಂ** ತಪಸ್ವಿಯಾದ ಗಾಂಧಾರಿಯನ್ನು **ಸಾಂತ್ವಯಾಮಾಸ** ಸಮಾಧಾನಗೊಳಿಸಿದನು.

**ಪಿತ್ರಾ ಚಾನುಮತೋ ರಾಜಾ ವಾಸುದೇವಾನುಮೋದಿತಃ ।**
**ಚಕಾರ ರಾಜ್ಯಂ ಧರ್ಮೇಣ ಪಿತೃಪೈತಾಮಹಂ ವಿಭುಃ ॥೫೨॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ನವಮೋಽಧ್ಯಾಯಃ ॥

**ವಿಭುಃ** ರಾಜ್ಯವಾಳಲು ಸಮರ್ಥನಾದ **ರಾಜಾ** ಧರ್ಮರಾಜನು **ವಾಸುದೇವಾನು-ಮೋದಿತಃ** ಶ್ರೀಕೃಷ್ಣನಿಂದ ಆಜ್ಞಪ್ತನಾಗಿ **ಪಿತ್ರಾ ಚ** ಧೃತರಾಷ್ಟ್ರನಿಂದಲೂ **ಅನುಮತಃ** ಸಮ್ಮತಿಸಲ್ಪಟ್ಟು **ಧರ್ಮೇಣ** ಶಾಸ್ತ್ರೋಕ್ತರೀತಿಯಿಂದ **ಪಿತೃಪೈತಾಮಹಂ** ವಂಶಪಾರಂಪರ್ಯದಿಂದ ಬಂದ **ರಾಜ್ಯಂ** ರಾಜ್ಯವನ್ನು **ಚಕಾರ** ರಕ್ಷಿಸಿದನು.

ಇಲ್ಲಿಗೆ ಒಂಬತ್ತನೇ ಅಧ್ಯಾಯವು ಮುಗಿಯಿತು

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ದಶಮೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಕೆಲವು ತಿಂಗಳ ಕಾಲ ಶ್ರೀಕೃಷ್ಣ ಪಾಂಡವರ ಬಳಿ ಇದ್ದು ಬಳಿಕ ದ್ವಾರಕೆಗೆ ಹೊರಟ. ಪಾಂಡವರ ಮತ್ತು ಹಸ್ತಿನಾವತಿಯ ಎಲ್ಲ ಸ್ತ್ರೀಪುರುಷರು ಅವನನ್ನು ಸಂಭ್ರಮದಿಂದ ಕಳುಹಿಸಿಕೊಟ್ಟರು. ಸ್ತ್ರೀಯರೂ ಕೂಡ ಶ್ರೀಕೃಷ್ಣ ಸಾಕ್ಷಾತ್ ಭಗವಂತನೇ ಎಂದು ಪರಸ್ಪರ ಹೇಳಿಕೊಂಡು ಕುಣಿದಾಡಿದರು. ಬಳಿಕ ಕೃಷ್ಣ ದ್ವಾರಕೆಗೆ ಹೊರಟ. ಯಾದವರು ಸಂಭ್ರಮದಿಂದ ಅವನನ್ನು ಇದಿರುಗೊಂಡರು. ಹದಿನಾರು ಸಾವಿರ ಹೆಂಡಂದಿರು ಶ್ರೀಕೃಷ್ಣನನ್ನು ನೋಡಿ ಪರಮಾನಂದ ಭರಿತರಾದರು.

ಹಸ್ತಿನಾಪುರದಿಂದ ದ್ವಾರಕೆಗೆ ಪ್ರಯಾಣ ಬೆಳಿಸಿದ್ದನ್ನು ಹೇಳುತ್ತ ಭಗವಂತನ ಅನುಗ್ರಹದಿಂದ ದೊರೆತ ಯುಧಿಷ್ಠಿರನ ರಾಜ್ಯಸಮೃದ್ಧಿಯನ್ನು ಹೇಳುವ ಮೂಲಕ ಶ್ರೀಹರಿಯ ಮಹಿಮೆಯನ್ನು ಈ ಅಧ್ಯಾಯದಲ್ಲಿ ಹೇಳುವರು. ಶ್ರೀಹರಿಯ ಮತ್ತು ಅವನ ಭಕ್ತರ ಕಥೆಯಿಂದ ತೃಪ್ತರಾಗದಿರುವ ಶೌನಕರು ಮತ್ತೆ ಪ್ರಶ್ನಿಸುವರು.

**ಭಕ್ತರೊಡನೆ ಭಗವಂತನ(ಶ್ರೀಕೃಷ್ಣನ)ಒಡನಾಟ.**

**ಶ್ರೀಶೌನಕ ಉವಾಚ**

**ಹತ್ವಾ ಸ್ವರಿಕ್ಥಸ್ಪೃಧ ಆತತಾತಿಯಿನೋ**
**ಯುಧಿಷ್ಠಿರೋ ಧರ್ಮಭೃತಾಂ ಗವಿ ಸ್ಥಿತಃ ।**
**ಸಹಾನುಜೈಃ ಪ್ರತ್ಯವರುದ್ಧಭೋಜನಃ**
**ಕಥಂ ಪ್ರವೃತ್ತಃ ಕಿಮಕಾರ್ಷೀತ್ತತಃ ॥೧॥**

**ಸ್ವರಿಕ್ಥೇ** ತನ್ನ ರಾಜ್ಯವೆಂಬ ಸಂಪತ್ತಿನಲ್ಲಿ ಸ್ಪರ್ಧಿಸುವ **ಆತತಾಯಿನಃ** ಅಗ್ನಿಯಿಂದ ಸುಡುವವರು, ವಿಷಪಾನಮಾಡಿಸುವವರು, ಶಸ್ತ್ರಗಳಿಂದ ಹೊಡೆಯುವವರು, ಧನವನ್ನು ಅಪರಹರಿಸುವವರು, ಭೂಮಿಯನ್ನು ಕಸಿದುಕೊಳ್ಳುವವರು, ಹೆಂಡತಿಯನ್ನು ಅವಮಾನಿಸುವವರು ಈ ಎಲ್ಲ ಲಕ್ಷಣಗಳಿರುವದಿರಿಂದ ಆತತಾಯಿಗಳಾದ ದುರ್ಯೋಧನಾದಿಗಳನ್ನು **ಹತ್ವಾ** ಸಂಹಾರಮಾಡಿ **ಧರ್ಮಭೃತಾಂ** ಧರ್ಮಪ್ರವರ್ತಕರಾದ ವ್ಯಾಸಾದಿಗಳ **ಗವಿ** ಮಾತಿನಲ್ಲಿ **ಸ್ಥಿರಃ** ನಿಶ್ಚಲನಾಗಿ **ಸಹಾನುಜೈಃ** ತಮ್ಮಂದಿರಿಂದ ಕೂಡಿಕೊಂಡು **ಪ್ರತ್ಯವರುದ್ಧಭೋಜನಃ** ಬಂಧುಗಳನ್ನು ಸಂಹರಿಸಿದ ದುಃಖದಿಂದ ಸಂಕುಚಿತವಾದ ಭೋಜನವುಳ್ಳವನಾಗಿ **ಕಥಂ ಪ್ರವೃತ್ತಃ** ಯಾವ ರೀತಿಯಿಂದ ರಾಜ್ಯರಕ್ಷಣೆಯಲ್ಲಿ ಪ್ರವೃತ್ತನಾದನು **ತತಃ** ಅವರ ಜೊತೆಗೆ ಹಸ್ತಿನಾಪಟ್ಟಣಕ್ಕೆ ಬಂದ ಕೃಷ್ಣನು **ಕಿಂ ಅಕಾರ್ಷೀತ್** ಏನು ಮಾಡಿದನು.

**ವಿಶೇಷ :-** ಯುಧಿಷ್ಠಿರನು ಶ್ರೀಕೃಷ್ಣನನ್ನು ಆಶ್ರಯಿಸಿಕೊಂಡು ರಾಜ್ಯದಲ್ಲಿ ಪ್ರವೃತ್ತನಾದನೋ ಎಂದು ಮೊದಲನೆಯ ಪ್ರಶ್ನೆಗೆ ಉತ್ತರ ಹೇಳಲು 'ಅಜಿತಾಶ್ರಯಃ ಗಾಂ ಶಶಾಸ' ಯುಧಿಷ್ಠಿರನು ಕೃಷ್ಣನನ್ನು ಆಶ್ರಯಿಸಿದನು ಎಂದು ತಿಳಿಸುವರು.

**ವಿಜಯಧ್ವಜೀಯ-** ಪಾಂಡವರಿಗೆ ಶ್ರೀಕೃಷ್ಣನ ಅತಿಶಯ ಕೃಪೆಯಿಂದ ರಾಜ್ಯಲಾಭವಾಯಿತೆಂದು ಹೇಳುತ್ತಾ ರಾಜ್ಯದಲ್ಲಿ ಪಾಂಡವರ ಸ್ಥಾಪನಾದಿ ಶ್ರೀಕೃಷ್ಣನ ಮಹಿಮೆಯನ್ನು ತಿಳಿಸುವರು.

**ಸೂತ ಉವಾಚ -**

**ವಂಶಂ ಕುರೋರ್ವಂಶದವಾಗ್ನಿನಿರ್ಹೃತಂ**
**ಸಂರೋಹಯಿತ್ವಾ ಭವತಾಪನೋ ಹರಿಃ ।**
**ನಿವೇಶಯಿತ್ವಾ ನಿಜರಾಜ್ಯ ಈಶ್ವರೋ**
**ಯುಧಿಷ್ಠಿರಂ ಪ್ರೀತಮನಾ ಬಭೂವ ಹ ॥೨॥**

**ಈಶ್ವರಃ** ಜಗದ್ವ್ಯಾಪಾರಮಾಡುವದರಲ್ಲಿ ಸಮರ್ಥನಾದ **ಭವತಾಪನಃ** ಅನಾದಿ ಸಂಸಾರ ದಾಹಕನಾದ (ಭವಭಾವನಃ ಎಂಬ ಪಾಠದಲ್ಲಿ ಜಗದುತ್ಪಾದಕನಾದ) **ಹರಿಃ** ಶ್ರೀಕೃಷ್ಣನು **ವಂಶದವಾಗ್ನಿನಿರ್ಹೃತಂ** ವಂಶವೆಂಬ ಕಾಡ್ಗಿಚ್ಚಿನಿಂದ ಹುಟ್ಟಿದ ಕ್ರೋಧರೂಪ ಅಗ್ನಿಯಿಂದ ಸುಟ್ಟುಹೋದ **ಕುರೋಃ ವಂಶಂ** ಕೌರವರ ವಂಶವನ್ನು **ಸಂರೋಹಯಿತ್ವಾ** (ಪರೀಕ್ಷಿತನನ್ನು ರಕ್ಷಿಸುವ ಮೂಲಕ) ಪರಿಕ್ಷಿತವೆಂಬ ಅಂಕುರವನ್ನು ಹುಟ್ಟಿಸಿ **ನಿಜರಾಜ್ಯೇ**

ತನ್ನ ರಾಜ್ಯದಲ್ಲಿ **ಯುಧಿಷ್ಠಿರಂ** ಯುಧಿಷ್ಠಿರನನ್ನು **ನಿವೇಶಯಿತ್ವಾ** ಸ್ಥಾಪಿಸಿ **ಪ್ರೀತಮನಾ ಬಭೂವ** ಸಂತೋಷಗೊಂಡನು.

**ವಿಜಯಧ್ವಜೀಯ**- ನಿತ್ಯದಲ್ಲಿ ಪ್ರೀತನಾದ ಪರಮಾತ್ಮನಿಗೆ ಈಗ ಪ್ರೀತನಾದ ಎಂದು ಹೇಳುವದು ಲೋಕದೃಷ್ಟಿಯಿಂದ ಎಂಬುದನ್ನು ಪ್ರಸಿದ್ಧಿದ್ಯೋತಕವಾದ ಹಶಬ್ದದಿಂದ ತಿಳಿಸುವರು. ಭವಭಾವನಃ ಎಂಬ ಪದದಿಂದ ವಂಶಸಂರೋಹಣ ಶಕ್ತಿಯನ್ನು ತೋರಿಸುವವರು.

**ಯಾಜಯಿತ್ವಾ ಅಶ್ವಮೇಧೈಸ್ತಾನ್ತ್ರಿಭಿರುತ್ತಮಕಲ್ಪಕೈಃ ।**
**ತದ್ಯಶಃ ಪಾವನಂ ದಿಕ್ಷು ಶತಮನ್ಯೋರಿವಾತನೋತ್ ॥೩॥**

**ತಾನ್** ಪಾಂಡವರನ್ನು **ತ್ರಿಭಿಃ ಉತ್ತಮಕಲ್ಪಕೈಃ** ಮೂರು ಪಟ್ಟು ದಕ್ಷಿಣೆಯನ್ನು ಕೊಡುವ ಉತ್ತಮಕಲ್ಪದಿಂದ **ಅಶ್ವಮೇಧೈಃ** ಅಶ್ವಮೇಧಯಾಗಗಳಿಂದ **ಯಾಜಯಿತ್ವಾ** ಯಾಗಮಾಡಿಸಿ **ಪಾವನ** ಪವಿತ್ರವಾದ **ತದ್ಯಶಃ** ಆ ಪಾಂಡವರ ಕೀರ್ತಿಯನ್ನು **ದಿಕ್ಷು** ದಿಕ್ಕುಗಳಲ್ಲಿ **ಶತಮನ್ಯೋಃ** ಇಂದ್ರನ ಕೀರ್ತಿಯನ್ನು ಹರಡಿಸುವಂತೆ **ಆತನೋತ್** ಹರಡಿಸಿದನು.

**ನಿಶಮ್ಯ ಭೀಷ್ಮೋಕ್ತಮಥಾಚ್ಯುತೋದಿತಂ**
**ಪ್ರವೃತ್ತವಿಜ್ಞಾನವಿಧೂತವಿಭ್ರಮಃ ।**
**ಶಶಾಸ ಗಾಮಿಂದ್ರ ಇವಾಜಿತಾಶ್ರಯಃ**
**ಪ್ರಣಿಧ್ಯುಪಾತ್ತಾಮನುಜಾನುವರ್ತಿತಃ ॥೪॥**

**ಭೀಷ್ಮೋಕ್ತಂ** ಭೀಷ್ಮಾಚಾರ್ಯರು ಹೇಳಿದ್ದನ್ನು **ಚ** ಮತ್ತು **ಅಚ್ಯುತೋದಿತಂ** ಶ್ರೀಕೃಷ್ಣಪರಮಾತ್ಮನು ಹೇಳಿದ್ದನ್ನು **ನಿಶಮ್ಯ** ಕೇಳಿ **ಪ್ರವೃತ್ತವಿಜ್ಞಾನವಿಧೂತವಿಭ್ರಮಃ** ಉಂಟಾದ ಹರಿಯೇ ಸ್ವತಂತ್ರನು, ಹರಿದ್ವೇಷಿಗಳನ್ನು ಸಂಹರಿಸುವದು ಪರಮಧರ್ಮವು ಮುಂತಾದ ವಿಜ್ಞಾನದಿಂದ **ವಿಧೂತ** ವಿಶೇಷವಾಗಿ ನಷ್ಟವಾದ **ವಿಭ್ರಮಃ** ನಾನೇ ಸಂಹರಿಸುವವನು ಅಥವಾ ದುರ್ಯೋಧನಾದಿಸಂಹಾರವು ಅಧರ್ಮ ಎಂಬ ಅನೇಕವಿಧ ಭ್ರಮವುಳ್ಳವನಾಗಿ **ಅನುಜಾನುವರ್ತಿತಃ** ತಮ್ಮಂದಿರಾದ ಭೀಮಾದಿಗಳಿಂದ ಸೇವಿತನಾಗಿ **ಪ್ರಣಿಧ್ಯುಪಾತ್ತಾಂ ಗಾಂ** ಮಂತ್ರಿಮುಂತಾದವರಿಂದ ಪ್ರಾಪ್ತವಾದ **ಗಾಂ** ಭೂಮಿಯನ್ನು **ಅಜಿತಾಶ್ರಯಃ** ವಾಮನನನ್ನು ಆಶ್ರಯಿಸಿ **ಇಂದ್ರ ಇವ** ಇಂದ್ರನು

ಸ್ವರ್ಗವನ್ನು ಆಳುವಂತೆ **ಅಜಿತಾಶ್ರಯಃ** ಶ್ರೀಕೃಷ್ಣನನ್ನು ಆಶ್ರಯಿಸಿ **ಗಾಂ** ಭೂಮಿಯನ್ನು **ಶಶಾಸ** ಪಾಲನೆಮಾಡಿದನು.

*ಭಾಗವತ ತಾತ್ಪರ್ಯ-*

ಇಲ್ಲಿ ಪ್ರಣಿಧಿಶಬ್ದದ ಅರ್ಥ ತಿಳಿಯದಿರುವದರಿಂದ ಆದಕ್ಕೆ ಆಚಾರ್ಯರು ವ್ಯಾಖ್ಯಾನಿಸುವರು.

ಅಮಾತ್ಯಾ ಮಂತ್ರಿಣೋ ದೂತಾಃ ಶ್ರೇಣಯಶ್ಚ ಪುರೋಹಿತಾಃ.
ಪುರಂ ಜನಪದಂ ಚೇತಿ ಸಪ್ತ ಪ್ರಣಿಧಯಃ ಸ್ಮೃತಾಃ ॥ - ಇತಿ ಬ್ರಾಹ್ಮೇ

**ಅಮಾತ್ಯಾಃ**-ರಾಜ್ಯದ ಕಾರ್ಯದಲ್ಲಿ ಸಹಕರಿಸುವವರು ಅಮಾತ್ಯರು, **ಮಂತ್ರಿಣಃ**-ವಿಚಾರವನ್ನು ಹೇಳುವವರು ಮಂತ್ರಿಗಳು, **ದೂತಾಃ**-ಸಂದೇಶವನ್ನು ಒಯ್ಯುವವರು **ಶ್ರೇಣಯಃ**-ಅಂಗರಕ್ಷಕರು **ಪುರೋಹಿತಾಃ**-ಪುರೋಹಿತರು **ಪುರಂ**-ಪಟ್ಟಣವು **ಜನಪದಂ**-ದೇಶವು ಇವುಗಳನ್ನು ಪ್ರಣಿಧಿಗಳು ಎನ್ನುವರು.

ಶ್ರೀಕೃಷ್ಣನನ್ನು ಆಶ್ರಯಿಸಿ ರಾಜ್ಯವನ್ನು ಪಾಲನೆ ಮಾಡಿದ ಎಂಬ ವಿಷಯದಲ್ಲಿ ಮುಂದೆ ಹೇಳುವ ಕಾರ್ಯಗಳೆ ಪ್ರಮಾಣವೆಂದು ಹೇಳುವರು.

**ಕಾಮಂ ವವರ್ಷ ಪರ್ಜನ್ಯಃ ಸರ್ವಕಾಮದುಘಾ ಮಹೀ ।**
**ಸಿಷಿಚುಃ ಸ್ಮ ವ್ರಜಂ ಗಾವಃ ಪಯಸಾऽತ್ಯೂಧಸೋ ಮುದಾ ॥೫॥**

**ಪರ್ಜನ್ಯಃ** ಮೇಘಾಭಿಮಾನಿ ದೇವತೆಯು **ಕಾಮಂ** ಯಥೇಚ್ಛವಾಗಿ **ವವರ್ಷ** ಮಳೆಗರೆದನು **ಮಹೀ** ಭೂಮಿಯು **ಸರ್ವಕಾಮದುಘಾ** ಎಲ್ಲರ ಅಭೀಷ್ಟವನ್ನು ಕೊಟ್ಟಳು **ಅತ್ಯೂಧಸಃ** ಸಮೃದ್ಧವಾದ ಕೆಚ್ಚಲುಗಳುಳ್ಳ **ಗಾವಃ** ಆಕಳುಗಳು **ಪಯಸಾ** ಹಾಲಿನಿಂದ **ವ್ರಜಂ** ಕೊಟ್ಟಿಗೆಯನ್ನು **ಮುದಾ** ಸಂತೋಷದಿಂದ **ಸಿಷಿಚುಃ ಸ್ಮ** ಸುರಿಸಿದವು.

**ನದ್ಯಃ ಸಮುದ್ರಾ ಗಿರಯಃ ಸವನಸ್ಪತಿವೀರುಧಃ ।**
**ಫಲನ್ತ್ಯೋಷಧಯಃ ಸರ್ವಾಃ ಕಾಮಮನ್ವೃತು ತಸ್ಯ ವೈ ॥೬॥**

**ತಸ್ಯ** ಆ ಯುಧಿಷ್ಠಿರನಿಗೆ **ನದ್ಯಃ** ನದಿಗಳು **ಸಮುದ್ರಾಃ** ಸಮುದ್ರಗಳು **ಸವನಸ್ಪತಿವೀರುಧಃ** ಬೃಹತ್ತಾದ ಹಣ್ಣುಕೊಡುವ ಹಲಸು ಮುಂತಾದವುಗಳು ಮತ್ತು ಬಳ್ಳಿಗಳು ಇವುಗಳಿಂದ ಸಹಿತವಾದ **ಓಷಧಯಃ** ಬತ್ತಮುಂತಾದವುಗಳು **ಸರ್ವಾಃ** ಹಿಂದೆ ಹೇಳಿದ ಎಲ್ಲವೂ **ಅನ್ವೃತು** ಪ್ರತಿಯೊಂದು ಋತುವಿನಲ್ಲಿಯೂ **ಕಾಮಂ**

ಯಥೇಚ್ಛವಾಗಿ **ಫಲಂತಿ** ರತ್ನ ಮುಂತಾದ ತಮ್ಮ ತಮ್ಮ ಫಲಗಳನ್ನು ಕೊಡುತ್ತಿದ್ದವು ಇದೆಲ್ಲವು ಶ್ರೀಕೃಷ್ಣನನ್ನು ಆಶ್ರಯಿಸಿದ್ದರ ಫಲವು

**ನಾಧಯೋ ವ್ಯಾಧಯಃ ಕ್ಲೇಶಾಃ ದೈವಭೂತಾಮಹೇತವಃ ।**
**ಅಜಾತಶತ್ರಾವಭವನ್ ಜಂತೂನಾಂ ರಾಜ್ಞಿ ಕರ್ಹಿಚಿತ್ ॥೭॥**

**ಅಜಾತಶತ್ರೌ** ಯಾರಲ್ಲಿಯೂ ಶತ್ರುತ್ವ ಭಾವನೆ ಇಲ್ಲದಿರುವ ಧರ್ಮರಾಜನು **ರಾಜ್ಞಿ** ರಾಜ್ಯಭಾರಮಾಡುತ್ತಿರಲು **ಕರ್ಹಿಚಿತ್** ಯಾವ ಕಾಲದಲ್ಲಿಯು **ಜಂತೂನಾಂ** ಪ್ರಾಣಿಗಳಿಗೆ **ದೈವಭೂತಾತ್ಮಹೇತವಃ** ದೇವತೆಗಳು ಪಂಚಮಹಾಭೂತಗಳು ಮತ್ತು ಜೀವರೇ ಕಾರಣವಾಗಿವುಳ್ಳ **ಆಧಯಃ** ಮನೋವ್ಯಥೆಗಳಾಗಲಿ **ವ್ಯಾಧಯಃ** ರೋಗಗಳಾಗಲಿ ದೈವನಿಮಿತ್ತಕವಾದ ಕ್ಲೇಶವೆಂದರೆ ಅನಾವೃಷ್ಟ್ಯಾದಿಗಳಿಂದ ಉಂಟಾದ ಕಷ್ಟಗಳು, ಭೂತಹೇತುಕವಾದ ಕ್ಲೇಶವೆಂದರೆ ಕಳ್ಳರು ಮುಂತಾದವರಿಂದ ಹುಟ್ಟಿದ್ದು. ಆತ್ಮಹೇತುಕವಾದ ಕ್ಲೇಶಗಳೆಂದರೆ ತಾನೇ ಮಾಡುವ ಪಾಪಗಳಿಂದ ಬರುವ ನರಕಾದಿಗಳಾಗಲಿ **ನ ಅಭವನ್** ಉಂಟಾಗಲಿಲ್ಲ ಇದೆಲ್ಲವು ಶ್ರೀಕೃಷ್ಣನ ಆಶ್ರಯದಿಂದ ಬಂದ ಅನಿಷ್ಟನಿವೃತ್ತಿರೂಪ ಫಲವು.

ಈಗ ಹಸ್ತಿನಾವತಿಪಟ್ಟಣವನ್ನು ಪ್ರವೇಶಿಸಿದ ಶ್ರೀಕೃಷ್ಣನು ಏನು ಮಾಡಿದನು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು.

**ಉಷಿತ್ವಾ ಹಸ್ತಿನಪುರೇ ಮಾಸಾನ್ಕತಿಪಯಾನ್ಹರಿಃ ।**
**ಸುಹೃದಾಂ ಚ ವಿಶೋಕಾಯ ಸ್ವಸುಶ್ಚ ಪ್ರಿಯಕಾಮ್ಯಯಾ ॥೮॥**

**ಸುಹೃದಾಂ ಚ** ಪಾಂಡವರ **ವಿಶೋಕಾಯ** ಶೋಕಪರಿಹಾರಕ್ಕಾಗಿ **ಸ್ವಸುಃ ಚ** ತಂಗಿಯಾದ ಸುಭದ್ರೆಗೂ **ಪ್ರಿಯಕಾಮ್ಯಯಾ** ಪ್ರೀತಿಯನ್ನು ಉಂಟುಮಾಡಲು **ಹಸ್ತಿನಪುರೇ** ಹಸ್ತಿನ ಪಟ್ಟಣದಲ್ಲಿ **ಹರಿಃ** ಶ್ರೀಕೃಷ್ಣನು **ಕತಿಪಯಾನ್ ಮಾಸಾನ್** ಕೆಲವು ತಿಂಗಳುಗಳ ವರೆಗೆ **ಉಷಿತ್ವಾ** ವಾಸಮಾಡಿ.

**ಆಮಂತ್ರ್ಯ ಚಾಭ್ಯನುಜ್ಞಾತಃ ಪರಿಷ್ವಜ್ಯಾಭಿವಾದ್ಯ ತಮ್ ।**
**ಆರುರೋಹ ರಥಂ ಕೈಶ್ಚಿತ್ಪರಿಷ್ವಕ್ತೋಽಭಿವಾದಿತಃ ॥೯॥**

**ಆಮಂತ್ರ್ಯ** ದ್ವಾರಕೆಗೆ ಹೋಗಿ ಬರುವೆನೆಂದು ಯುಧಿಷ್ಠಿರನಿಗೆ ಹೇಳಿ **ತಂ** ಯುಧಿಷ್ಠಿರನನ್ನು **ಪರಿಷ್ವಜ್ಯ** ಆಲಿಂಗನ ಮಾಡಿಕೊಂಡು **ಅಭಿವಾದ್ಯ** ಕುಂತಿಮುಂತಾದವರಿಗೆ

ನಮಸ್ಕರಿಸಿ **ಅಭ್ಯನುಜ್ಞಾತಃ** ಒಪ್ಪಿಗೆಯನ್ನು **ಕೈಶ್ಚಿತ್** ಅರ್ಜುನಾದಿಗಳಿಂದ **ಪರಿಷ್ವಕ್ತಃ** ಆಲಿಂಗಿಸಲ್ಪಟ್ಟು **ಅಭಿವಾದಿತಃ** ನಮಸ್ಕಾರ ಮಾಡಿಸಿಕೊಂಡು **ರಥಂ ಆರುರೋಹ** ರಥವನ್ನು ಹತ್ತಿದನು.

**ಸುಭದ್ರಾ ದ್ರೌಪದೀ ಕುಂತೀ ವಿದುರೋಽಥ ಯುಧಿಷ್ಠಿರಃ ।**
**ಗಾಂಧಾರೀ ಧೃತರಾಷ್ಟ್ರಶ್ಚ ಯುಯುತ್ಸುರ್ಗೌತಮೋ ಯಮೌ ॥೧೦॥**

**ವೃಕೋದರಶ್ಚ ಧೌಮ್ಯಶ್ಚ ಸ್ತ್ರಿಯೋ ಮತ್ಸ್ಯಸುತಾದಯಃ ।**
**ನ ಸೇಹಿರೇ ವಿಮುಹ್ಯಂತೋ ವಿರಹಂ ಶಾಂರ್ಗಧನ್ವನಃ ॥೧೧॥**

**ಅಥ** ರಥ ಹತ್ತಿದ ಅನಂತರ **ಸುಭದ್ರಾ** ಸುಭದ್ರೆಯು **ದ್ರೌಪದೀ** ದ್ರೌಪದಿಯು **ಕುಂತೀ** ಕುಂತಿಯು **ವಿದುರಃ** ವಿದುರನು **ಯುಧಿಷ್ಠಿರಃ** ಧರ್ಮರಾಜನು **ಗಾಂಧಾರೀ** ಗಾಂಧಾರಿಯು **ಯುಯುತ್ಸುಃ** ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ದುರ್ಯೋಧನನ ತಮ್ಮನು **ಗೌತಮಃ** ಕೃಪಾಚಾರ್ಯರು **ಯಮೌ** ನಕುಲ ಮತ್ತು ಸಹದೇವರು **ವೃಕೋದರಃ** ಭೀಮಸೇನನು **ಧೌಮ್ಯಃ** ಧೌಮ್ಯಾಚಾರ್ಯರು **ಮತ್ಸ್ಯಸುತಾದಯಃ** ಉತ್ತರಾ ಮೊದಲಾದ **ಸ್ತ್ರಿಯಃ** ಹೆಣ್ಣುಮಕ್ಕಳು **ವಿಮುಹ್ಯಂತಃ** ಏನು ಮಾಡಬೇಕು ಎಂದು ತಿಳಿಯದವರಾಗಿ ಅಥವಾ ಶ್ರೀಕೃಷ್ಣನು ನಮ್ಮ ಸಂಬಂಧಿಯು ಎಂದು ಭ್ರಾಂತರಾಗಿ **ಶಾಂರ್ಗಧನ್ವನಃ** ಶಾಂರ್ಗಧನುಸ್ಸುಳ್ಳ ಶ್ರೀಕೃಷ್ಣನ **ವಿರಹಂ** ವಿಯೋಗವನ್ನು **ನ ಸೇಹಿರೇ** ಸಹಿಸಲಿಲ್ಲ.

ಶ್ರೀಕೃಷ್ಣನ ವಿರಹವನ್ನು ಕುಂತಿಯ ಮಕ್ಕಳು ಸಹಿಸಲಿಲ್ಲ ಎಂಬುದನ್ನು ಕೈಮುತ್ಯದಿಂದ ಹೇಳುವರು.

**ತತ್ಸಂಗಾನ್ಮುಕ್ತದುಃಸಂಗೋ ಹಾತು ನೋತ್ಸಹತೇ ಬುಧಃ ।**
**ಕೀರ್ತ್ಯಮಾನಂ ಯಶೋ ಯಸ್ಯ ಸಕೃದಾಕರ್ಣ್ಯ ರೋಚನಮ್ ॥೧೨॥**

**ಯಸ್ಯ** ಯಾವ ಶ್ರೀಕೃಷ್ಣ ಪರಮಾತ್ಮನ **ಕೀರ್ತ್ಯಮಾನಂ** ಸಜ್ಜನರಿಂದ ಹೇಳಲ್ಪಡುವ **ರೋಚನಂ** ರುಚಿಜನಕವಾದ **ಯಶಃ** ಕೀರ್ತಿಯನ್ನು **ಸಕೃತ್ ಆಕರ್ಣ್ಯ** ಒಂದು ಬಾರಿ ಕೇಳಿದರೆ ಬಿಡಲಾಗದೋ **ತತ್ಸಂಗಾತ್** ಶ್ರೀಕೃಷ್ಣನ ಸೇವಾರೂಪವಾದ ಸಂಬಂಧದಿಂದ **ಮುಕ್ತದುಃಸಂಗಃ** ದುಃಖದಾಯಕವಾದ **ಸಂಗಃ** ಹೆಂಡತಿಮಕ್ಕಳಲ್ಲಿ ಸ್ನೇಹವನ್ನು ಕಳೆದುಕೊಂಡ **ಬುಧಃ** ವಿವೇಕಿಯಾದ ಮನುಷ್ಯನು **ಹಾತುಂ** ಬಿಡಲು **ನ ಉತ್ಸಹತೇ** ಒಪ್ಪುವದಿಲ್ಲ.

**ತಸ್ಯಾಭ್ಯಸ್ತಧಿಯಃ ಪಾರ್ಥಾಃ ಸಹೇರನ್ವಿರಹಂ ಕಥಂ ।**
**ದರ್ಶನಸ್ಪರ್ಶಾಲಾಪಶಯನಾಸನಭೋಜನೈಃ ॥೧೩॥**

**ತಸ್ಯ** ಆ ಶ್ರೀಕೃಷ್ಣನ **ದರ್ಶನಸ್ಪರ್ಶಾಲಾಪಶಯನಾಸಭೋಜನೈಃ** ದರ್ಶನ, ಸ್ಪರ್ಶ,ಸಂಭಾಷಣೆ,ಮಲಗಿಕೊಳ್ಳುವದು,ಕುಳಿತುಕೊಳ್ಳುವದು ಮತ್ತು ಭೋಜನ ಗಳಿಂದ **ಅಭ್ಯಸ್ತಧಿಯಃ** ಅಭ್ಯಾಸವುಳ್ಳ **ಪಾರ್ಥಾಃ** ಪಾಂಡವರು **ವಿರಹಂ** ಶ್ರೀಕೃಷ್ಣನ ವಿಯೋಗವನ್ನು **ಕಥಂ ಸಹೇರನ್** ಹೇಗೆ ತಾನೆ ಸಹಿಸುವರು ಶ್ರೀಕೃಷ್ಣನ ವಿರಹವನ್ನು ಸಹಿಸಲು ಅವರಿಗೆ ಆಗಲಿಲ್ಲ ಎಂದು ಭಾವ.

ಶ್ರೀಕೃಷ್ಣನ ವಿರಹವನ್ನು ತಾಳಲಾರದ ಪಾಂಡವರ ಅವಸ್ಥೆಯನ್ನು ಶ್ರೀಕೃಷ್ಣನ ಪ್ರಯಾಣಸಮಯದಲ್ಲಿ ತೋರಿಸುವವರು.

**ಸರ್ವೇ ತೇ ಅನಿಮಿಷೈರಕ್ಷೈಃಸ್ತಮನುದ್ರುತಚೇತಸಃ ।**
**ವೀಕ್ಷ್ಯಂತಃ ಸ್ನೇಹಸಂಬಂಧಾದ್ವಿಚೇರುಸ್ತತ್ರ ತತ್ರ ಹ ॥೧೪॥**

**ಅನಿಮಿಷೈಃ** ರೆಪ್ಪೆಬಡಿಯದ **ಅಕ್ಷೈಃ** ಕಣ್ಣುಗಳಿಂದ **ತಂ** ಆ ಶ್ರೀಕೃಷ್ಣನನ್ನು **ವೀಕ್ಷಂತಃ** ನೋಡುತ್ತಿರುವ **ಸರ್ವೇ ತೇ** ಅವರೆಲ್ಲರು **ಅನುದ್ರುತಚೇತಸಃ** ಶ್ರೀಕೃಷ್ಣನಲ್ಲಿಯೇ ಆಸಕ್ತವಾದ ಮನಸ್ಸುಳ್ಳವರಾಗಿ **ಸ್ನೇಹಸಂಬಂಧಾತ್** ಸ್ನೇಹದ ಸಂಬಂಧದಿಂದಾಗಿ **ತತ್ರ ತತ್ರ** ಅಲ್ಲಲ್ಲಿಯೂ **ವಿಚೇರುಃ** ಸಂಚರಿಸಿದರು

**ವಿಶೇಷ :-** **ಹ** ಶಬ್ದದಿಂದ ಎಲ್ಲಿಯ ವರೆಗೆ ಶ್ರೀಕೃಷ್ಣನು ದೂರಹೋಗುವನೋ ಪಾಂಡವರು ಎತ್ತರ ಎತ್ತರ ಪ್ರದೇಶದಲ್ಲಿ ನಿಂತು ನೋಡುತ್ತಿದ್ದರು. ಶ್ರೀಕೃಷ್ಣನು ಕಾಣದಿದ್ದಾಗ ಅವನನ್ನೇ ಅನುಸರಿಸಿ ಮನಸ್ಸು ಹೊರಟು ಹೋಯಿತು ಎಂದು ಸೂಚಿಸುವರು.

**ನ್ಯರುನ್ಧನ್ನುದ್ಗಲದ್ಬಾಷ್ಪಮೌತ್ಕಣ್ಠ್ಯಾದ್ದೇವಕೀಸುತೇ ।**
**ನಿರ್ಯಾತ್ಯಗಾರಾನ್ನಾಭದ್ರಮಿತಿ ಸ್ಯಾದ್ಬಾಂಧವಸ್ತ್ರಿಯಃ ॥೧೫॥**

**ಅಗಾರಾತ್** ಹಸ್ತಿನಾವತಿಯಿಂದ **ದೇವಕೀಸುತೇ** ಶ್ರೀಕೃಷ್ಣಪರಮಾತ್ಮನು **ನಿರ್ಯಾತಿ ಸತಿ** ಹೋಗುತ್ತಿರಲು **ಔತ್ಕಂಠ್ಯಾತ್** ಉತ್ಕಂಠದಿಂದ **ಉದ್ಗಲತ್** ಹೊರಬರುತ್ತಿರುವ **ಬಾಷ್ಪಂ** ಕಣ್ಣೀರನ್ನು **ಅಭದ್ರಂ ನೋ ಸ್ಯಾತ್ ಇತಿ** ಅಮಂಗಲವಾಗ ಬಾರದೆಂದು **ಬಾಂಧವಸ್ತ್ರಿಯಃ** ಪಾಂಡವರ ಸ್ತ್ರೀಯರು **ನ್ಯರುಂಧನ್** ತಡೆದರು.

**ವಿಶೇಷ :-** 1.ಇಲ್ಲಿರುವ **ಅಗಾರಾತ್** ಎಂಬ ಶಬ್ದಕ್ಕೆ ಅನೇಕಾರ್ಥಗಳಿವೆ. ನ ಗಾರೋ ನಿಗರಣಂ ನಾಶಲಕ್ಷಣಂ ಯಸ್ಮಾತ್ ಸಃ ನಾಶರಹಿತವಾದ, 2) **ಅಗಾಃ** ವೃಕ್ಷಗಳೇ ವಂಶ್ಯಲಕ್ಷಣಾನಿ ಯಸ್ಯ ಇತಿ ವಾ ಅಂದರೆ ಗಿಡಗಳೆ ಆಧಾರಸ್ತಂಭ ವಾಗಿಯುಳ್ಳ **3)ಅಗಂ** ಅಗಮನಂ ಕಾಂತ್ಯತಿಶಯಾತ್ ಅರಂ-**ಅಲಂ** ಬಹಳವಾಗಿ ಯಾವ ಪಟ್ಟಣವನ್ನು ಬಿಟ್ಟುಹೋಗುವದಿಲ್ಲವೋ ಅಂತಹ **ಅಗಾನಾಂ ಸ್ವರ್ಣಾತ್ಮಕಾನಾಂ ಪರ್ವತಾನಾಂ ಆರಾತ್** ಪ್ರವೇಶಲಕ್ಷಣಂ ಗಮನಂ ಯಸ್ಮಿನ್ ಇತಿ ವಾ ಸುವರ್ಣಮಯವಾದ ಪರ್ವತಗಳಿರುವ ಹಸ್ತಿನಾಪಟ್ಟಣದಿಂದ ಎಂದರ್ಥಗಳಿವೆ.

**ಮೃದಂಗಶಂಖಭೇರ್ಯಶ್ಚ ವೀಣಾಪಣವಗೋಮುಖಾಃ.**
**ಧುಂಧುರ್ಯಾನಕಘಂಟಾದ್ಯಾ ನೇದುರ್ದುಂದುಭಯಸ್ತಥಾ ॥೧೬॥**

**ಮೃದಂಗಶಂಖಭೇರ್ಯಃ** ಮೃದಂಗ, ಶಂಖ, ಭೇರಿಗಳು **ವೀಣಾಪಣವ-ಗೋಮುಖಾಃ** ವೀಣೆಯು, ಮದ್ದಳೆ ಮೊದಲಾದ **ಧುಂಧುರ್ಯಾನಕಘಂಟಾದ್ಯಾಃ** ಕಂಚಿನವಾದ್ಯ, ತಮಟೆ, ಘಂಟೆಮೊದಲಾದ **ತಥಾ** ಅದೇ ರೀತಿಯಾಗಿ **ದುಂದುಭಯಃ** ನಗಾರಿಗಳು **ನೇದುಃ** ಬಾರಿಸಿದವು.

**ಪ್ರಾಸಾದಶಿಖರಾರೂಢಾಃ ಕುರುನಾರ್ಯೋ ದಿದೃಕ್ಷಯಾ.**
**ವವೃಷುಃ ಕುಸುಮೈಃ ಕೃಷ್ಣೇ ಪ್ರೇಮವ್ರೀಡಸ್ಮಿತೇಕ್ಷಣಾಃ ॥೧೭॥**

**ದಿದೃಕ್ಷಯಾ** ಶ್ರೀಕೃಷ್ಣನನ್ನು ನೋಡಬೇಕೆಂಬ ಇಚ್ಛೆಯಿಂದ **ಪ್ರಾಸಾದಶಿಖರಾರೂಢಾಃ** ಮನೆಯ ಮಹಡಿಯ ಮೇಲೆ ಹತ್ತಿದ **ಪ್ರೇಮವ್ರೀಡಸ್ಮಿತೇಕ್ಷಣಾಃ** ಸ್ನೇಹ ಲಜ್ಜಾ ಮತ್ತು ಮಂದಹಾಸಗಳಿಂದ ಕೂಡಿದ **ಕುರುನಾರ್ಯಃ** ಕೌರವಸ್ತ್ರೀಯರು **ಕುಸುಮೈಃ** ಹೂವುಗಳಿಂದ **ವವೃಷುಃ** ಮಳೆಗರೆದರು.

**ವಿಶೇಷ :- ಕುಸುಮೈಃ ವವೃಷುಃ** ಎನ್ನುವಲ್ಲಿ **ಕುಸುಮಾನಿ ವವೃಷುಃ** ಎಂದು ವ್ಯತ್ಯಸ್ತವಾಗಿ ಹೇಳಿದ್ದು ಭಕ್ತ್ಯತಿಶಯವನ್ನು ತಿಳಿಸಲು ಅಥವಾ **ಕುಸುಮೈಃ ಕರಣೈಃ** ಇಲ್ಲಿ ಕರಣತ್ವವಿವಕ್ಷೆಯನ್ನು ಮಾಡಿದ್ದೇವೆ ಆದ್ದರಿಂದ **ಕುಸುಮೈಃ ವವೃಷುಃ** ಎಂಬುದು ಸಮಂಜಸವಾದದ್ದು.

**ಸಿತಾತಪತ್ರಂ ಜಗ್ರಾಹ ಮುಕ್ತಾದಾಮವಿಭೂಷಿತಮ್ ।**
**ರತ್ನದಂಡಂ ಗುಡಾಕೇಶಃ ಪ್ರಿಯಃ ಪ್ರಯತಮಸ್ಯ ಹ. ॥೧೮॥**

**ಮುಕ್ತಾದಾಮವಿಭೂಷಿತಂ** ಮುತ್ತಿನ ಮಾಲೆಗಳಿಂದ ಅಲಂಕರಿಸಲ್ಪಟ್ಟ **ರತ್ನದಂಡಂ** ರತ್ನಖಚಿತವಾದ ದಂಡವುಳ್ಳ **ಸಿತಾತಪತ್ರಂ** ಶ್ವೇತಚ್ಛತ್ರವನ್ನು **ಪ್ರಿಯತಮಸ್ಯ** ಶ್ರೀಕೃಷ್ಣನಿಗೆ **ಗುಡಾಕೇಶಃ** ನಿದ್ರೆಯನ್ನು ಗೆದ್ದ **ಪ್ರಿಯಃ** ಪ್ರಿಯನಾದ ಅರ್ಜುನನು **ಜಗ್ರಾಹ** ಹಿಡಿದನು.

**ಉದ್ಧವಃ ಸಾತ್ಯಕಿಶ್ಚೈವ ವ್ಯಜನೇ ಪರಮಾದ್ಭುತೇ ।**
**ವಿಕೀರ್ಯಮಾಣೈಃ ಕುಸುಮೈಃ ರೇಜೇ ಮಧುಪತಿಃ ಪಥಿ ॥೧೯॥**

**ಉದ್ಧವಃ** ಉದ್ಧವನು **ಚ** ಮತ್ತು **ಸಾತ್ಯಕಿಃ** ಸಾತ್ಯಕಿಯು **ಪರಮಾದ್ಭುತೇ** ಅತ್ಯಂತ ಆಶ್ಚರ್ಯಕರವಾದ **ವ್ಯಜನೇ** ಬೀಸಣಿಕೆಗಳನ್ನು **ಜಗ್ರಹತುಃ** ಹಿಡಿದರು **ಪಥಿ** ಮಾರ್ಗದಲ್ಲಿ **ಮಧುಪತಿಃ** ಯಾದವರ ಒಡೆಯನಾದ ಶ್ರೀಕೃಷ್ಣನು **ವಿಕೀರ್ಯಮಾಣೈಃ** ಆ ಕುರುಕುಲಸ್ತ್ರೀಯರಿಂದ ಹಾಕಲ್ಪಟ್ಟ **ಕುಸುಮೈಃ** ಹೂವುಗಳಿಂದ **ರೇಜೇ** ಶೋಭಿಸಿದನು.

**ಅಶ್ರೂಯಂತಾಶಿಷಃ ಸತ್ಯಾಸ್ತತ್ರ ತತ್ರ ದ್ವಿಜೇರಿತಾಃ ।**
**ನಾನುರೂಪಾನುರೂಪಾಶ್ಚ ನಿರ್ಗುಣಸ್ಯ ಗುಣಾತ್ಮನಃ ॥೨೦॥**

**ತತ್ರ ತತ್ರ** ಅಲ್ಲಲ್ಲಿ ಮಾರ್ಗದಲ್ಲಿ **ದ್ವಿಜೇರಿತಾಃ** ಬ್ರಾಹ್ಮಣರ ಮುಖದಿಂದ ಹೊರಟ(ದುಷ್ಟಾನ್ ಜಹಿ ಜಹಿ, ಶಿಷ್ಟಾನ್ ಪಾಲಯ ಪಾಲಯ, ಅಸ್ಮಾನ್ ಅನುಗ್ರಹಾಣ-ದುಷ್ಟರನ್ನು ಗೆಲ್ಲು, ಸಜ್ಜನರನ್ನು ರಕ್ಷಿಸು, ನಮ್ಮನ್ನು ಅನುಗ್ರಹಿಸು) ಎಂಬ **ಆಶಿಷಃ** ಆಶೀರ್ವಾದಗಳು **ನಿರ್ಗುಣಸ್ಯ** ಬ್ರಹ್ಮಾಂಡದ ಹೊರಗಿರುವ ಭಗವಂತನಿಗೆ **ನಾನುರೂಪಾಃ** ಅನುರೂಪವಲ್ಲದ **ಗುಣಾತ್ಮನಃ** ಬ್ರಹ್ಮಾಂಡದ ಒಳಗಿರುವ ಪರಮಾತ್ಮನಿಗೆ **ಅನುರೂಪಾಶ್ಚ** ಅನುಗುಣವಾದ ಆಶೀರ್ವಾದಗಳು **ಅಶ್ರೂಯಂತ** ಕೇಳಿಬಂದವು.

*ಭಾಗವತತಾತ್ಪರ್ಯ-*

ಪಾಲನಾನುಗ್ರಹಜಯಾನ್ ಗೌಣೇऽಂಡೇ ಸಂಸ್ಥಿತೋ ಹರಿಃ ।
ಕರೋತ್ಯಸೌ ಬಹಿಃಸಂಸ್ಥೋ ನ ಕರೋತೀವ ನಿರ್ಗುಣ ॥ -ಇತಿ ಪಾದ್ಮೇ

**ಪಾಲನಾನುಗ್ರಹಜಯಾನ್** ಸಜ್ಜನರ ರಕ್ಷಣೆ, ನಮ್ಮ ಮೇಲೆ ಅನುಗ್ರಹ, ದುರ್ಜನರ ಮೇಲೆ ಜಯಗಳನ್ನು **ಗೌಣೇ ಅಂಡೇ** ಸತ್ವಾದಿಗುಣಗಳ ಕಾರ್ಯವಾದ ಬ್ರಹ್ಮಾಂಡದಲ್ಲಿ **ಸಂಸ್ಥಿತಃ** ಇರುವ **ಹರಿಃ** ಪರಮಾತ್ಮನು **ಕರೋತಿ** ಮಾಡುತ್ತಾನೆ **ಬಹಿಃಸಂಸ್ಥಃ** ಬ್ರಹ್ಮಾಂಡದ ಹೊರಗಿರುವ **ನಿರ್ಗುಣಃ** ಸತ್ವಾದಿಗುಣರಹಿತನಾದ **ಅಸೌ** ಈ ಪರಮಾತ್ಮನು ನ **ಕರೋತೀವ** ಪಾಲನಾದಿಗಳನ್ನು ಮಾಡುವದಿಲ್ಲ **ಅತಃ** ಆದ್ದರಿಂದ

**ನಾನುರೂಪಾನುರೂಪಾಶ್ಚ** ಅನನುಗುಣವಾದ ಕಾರ್ಯಗಳನ್ನು ಮತ್ತು ಅನುಗುಣವಾದ ಕಾರ್ಯಗಳನ್ನು ಮಾಡುವನು.

ಕೌರವಸ್ತ್ರೀಯರು ಕೇವಲ ಪುಷ್ಪವೃಷ್ಟಿಯನ್ನು ಮಾಡಲಿಲ್ಲ ಕಿಂತು ಶ್ರೀಕೃಷ್ಣನ ಸ್ತುತಿಯನ್ನು ಮಾಡಿದರು ಎಂದು ಹೇಳುವರು.

**ಅನ್ಯೋನ್ಯಮಾಸೀತ್ಸಂಜಲ್ಪ ಉತ್ತಮಶ್ಲೋಕಚೇತಸಾಮ್ ।**
**ಕೌರವೇಂದ್ರಪುರಸ್ತ್ರೀಣಾಂ ಸರ್ವಶ್ರುತಿಮನೋಹರಃ ॥೨೦॥**

**ಉತ್ತಮಶ್ಲೋಕಚೇತಸಾಂ** ಪರಮಾತ್ಮನಲ್ಲಿ ಮನಸ್ಸುಳ್ಳ **ಕೌರವೇಂದ್ರಪುರ ಸ್ತ್ರೀಣಾಂ** ಕೌರವರ ರಾಜಪತ್ನಿಯರ **ಸರ್ವಶ್ರುತಿಮನೋಹರಃ** ಎಲ್ಲ ವೇದಾಭಿಮಾನಿದೇವತೆಗಳಿಗೆ ಇಂಪಾದ ಅಥವಾ ಎಲ್ಲರ ಕಿವಿಗಳಿಗೆ ಇಂಪಾದ ಮತ್ತು ಮನಸ್ಸನ್ನು ಅಪಹರಿಸುವ **ಅನ್ಯೋನ್ಯಂ** ಪರಸ್ಪರವಾಗಿ **ಸಂಜಲ್ಪಃ** ಭಗವಂತನ ಸ್ತುತಿರೂಪವಾದ ಮಾತುಗಳು **ಆಸೀತ್** ನಡೆದವು.

ಕೆಲವು ಸ್ತ್ರೀಯರು ಶ್ರೀಕೃಷ್ಣನ ತೇಜಸ್ಸು ಆದರಿಂದ ಅತಿಶಯವಾದ ಸೌಂದರ್ಯ ಅದನ್ನು ಬಹಳ ವಾಗಿ ಕಂಡು ಆಶ್ಚರ್ಯಚಕಿತರಾದರು. ಆ ಸ್ತ್ರೀಯರಿಗೆ ಅಧಿಕವಾದ ಜ್ಞಾನವಿತ್ತು ಇನ್ನುಳಿದ ಸ್ತ್ರೀಯರು ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನ ಅವತಾರನೇ ಅದಕ್ಕಾಗಿ ಆಶ್ಚರ್ಯ ಪಡುವ ಕಾರಣವಿಲ್ಲ ಎಂಬ ಅಭಿಪ್ರಾಯದಿಂದ ಹೇಳುತ್ತಿದ್ದಾರೆ.

ಸ್ತ್ರಿಯ ಊಚುಃ -

**ಸ ವೈಕಿಲಾಽಯಂ ಪುರುಷಃ ಪುರಾತನೋ**
**ಯ ಏಕ ಆಸೀದವಿಶೇಷ ಆತ್ಮನಿ ।**
**ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ**
**ನಿಮಿಲಿತಾತ್ಮಾ ನಿಶಿ ಸುಪ್ತಶಕ್ತಿಷು ॥೨೨॥**

**ಗುಣೇಭ್ಯಃ** ಗುಣವೆಂದು ಕರೆಸಿಕೊಳ್ಳುವ ಮಹದಾದಿತತ್ವಗಳಿಗಿಂತ **ಅಗ್ರೇ** ಆದಿಕಾರ್ಯ ಹುಟ್ಟುವದಕ್ಕಿಂತ ಮೊದಲು **ನಿಶಿ** ಮಹಾಪ್ರಲಯದಲ್ಲಿ **ಸುಪ್ತಶಕ್ತಿಷು** ಭಗವಂತನ ಅಧೀನರಾದ ಶಕ್ತಿಎಂಬ ಹೆಸರಿನಿಂದ ಕರೆಸಿಕೊಳ್ಳುವ ಸತ್ವ, ರಜಸ್ಸು, ತಮಸ್ಸು ಈ ಗುಣಗಳಿಗೆ ಅಭಿಮಾನಿಗಳಾದ ಶ್ರೀ, ಭೂ, ದುರ್ಗಾ ಇವರು ಜಗತ್ತಿನ ಸೃಷ್ಟ್ಯಾದಿವ್ಯಾಪಾರವನ್ನು ಬಿಟ್ಟು ಭಗವಂತನಲ್ಲಿಯೇ ಸುಖವನ್ನು ಪಡುತ್ತಿರಲು **ಯಃ**

**ಏಕಃ** ಯಾವ ಪ್ರಧಾನನಾದ ಪರಮಾತ್ಮನು **ಜಗದಾತ್ಮನಿ** ಸೃಷ್ಟಿ, ಸಂಹಾರವನ್ನು ಮಾಡುವವನಲ್ಲಿ **ಅವಿಶೇಷಃ** (ನ ವಿದ್ಯತೇ ವಿಶೇಷಃ ಅತಿಶಯಃ ಯಸ್ಮಾತ್ ಸಃ) ಯಾವುದರಿಂದಲೂ ವಿಶೇಷವು ಅಂದರೆ ಅತಿಶಯವನ್ನು ಹೊಂದದಿರುವ ಭಗವಂತನು **ಈಶ್ವರೇ** ಈಶನಾದಿಶಕ್ತಿಯುಳ್ಳ **ಆತ್ಮನಿ** ತನ್ನ ಸ್ವರೂಪದಲ್ಲಿ **ಆಸೀತ್** ಇದ್ದಿತು. (ತನ್ನಲ್ಲಿ ತಾನೇ ಆಶ್ರಿತನಾಗಿ ಇದ್ದ ಎಂದು ಅಭಿಪ್ರಾಯ) **ನಿಮೀಲಿತಾತ್ಮಾ** ಪ್ರಕೃತಿ ಎಂಬ ಕತ್ತಲೆಯಿಂದ ತನ್ನ ಸ್ವರೂಪವನ್ನು ಮುಚ್ಚಿಕೊಳ್ಳುವವನಾಗಿ ಅಥವಾ ತನ್ನ ಅವಯವಗಳನ್ನು ಮುಚ್ಚಿಕೊಳ್ಳುವವನಾಗಿ **ಆಸೀತ್** ಇದ್ದನೋ **ಪುರಾತನಃ** ಪ್ರಾಚೀನನಾದ **ಪುರುಷಃ** ಪುರುಷನಾಮಕ **ಸಃ ವೈ** ಅವನೇ **ಅಯಂ ಕಿಲ** ಈ ಕೃಷ್ಣನಲ್ಲವೇ

**ವಿಶೇಷ :-** ಈ ವಿಷಯದಲ್ಲಿ ಆರ್ಕ್ಮೋರ್ನಿರ್ಮೇಷಣಂ ಕೃತ್ವಾ ಯಃ ಶೇತೇ ಕ್ಷೀರಸಾಗರೇ ಈ ಪ್ರಮಾಣಕ್ಕನುಗುಣವಾಗಿ ಆತ್ಮಶಬ್ದ ಇದು ಶರೀರ ಎಂಬ ಅರ್ಥವನ್ನು ತಿಳಿಸಿಕೊಡುತ್ತದೆ.

*ಭಾಗವತ ತಾತ್ಪರ್ಯ-*

ಇಲ್ಲಿ ಸುಪ್ತಶಕ್ತಿಷು ಎಂದರೆ ಭಗವಂತನ ಸ್ವರೂಪಭೂತಶಕ್ತಿ ಎಂದು ಅರ್ಥತೋರಬಹುದು ಅದನ್ನು ತಾತ್ಪರ್ಯದ ಮೂಲಕ ತಿಳಿಸುತ್ತಾರೆ.

**ಸತ್ವಾದಿಶಕ್ತಿಷು**

ಸತ್ವಾದಿರೂಪಾಸು ಶಕ್ತಿಷು । ಅಂದರೆ ಶಕ್ಯತ್ವಾತ್ ಶಕ್ತಯ ಎಂಬ ವ್ಯುತ್ಪತ್ತಿಯಿಂದ ಪ್ರಕೃತಿರೂಪವಾದ ಸತ್ವಾದಿಗುಣಗಳೇ ಶಕ್ತಿಗಳು ಅವುಗಳು ಸುಪ್ತವಾಗುವದು ಎಂದರೆ ಪರಿಣಾಮಹೊಂದದಿರುವುದು ಎಂದು ಅಭಿಪ್ರಾಯ.

ಪೂರ್ವದಲ್ಲಿ ಹೇಳಿದ ರೀತಿಯಾಗಿ ಶ್ರೀಕೃಷ್ಣನಿಗೆ ಪ್ರಲಯಕಾಲದಲ್ಲಿ ಇರುವ ಈಶ್ವರನಿಂದ ಅಭೇದವನ್ನು ಹೇಳಿ ಈಗ ಸೃಷ್ಟಿಕಾಲದಲ್ಲಿಯು ಜಗತ್ತನ್ನು ಸೃಷ್ಟಿಮಾಡುವವನು ಇವನೇ ಎಂದು ಹೇಳುತ್ತಿದ್ದಾರೆ.

**ಸ ಏವ ಭೂಯೋ ನಿಜವೀರ್ಯಚೋದಿತಾಂ**
**ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ ।**
**ಅನಾಮರೂಪಾತ್ಮನಿ ರೂಪನಾಮನೀ**
**ವಿಧಿತ್ಸಮಾನೋ ಅನುಸಸಾರ ಶಾಸ್ತ್ರಕೃತ್** ॥೨೩॥

**ಯಃ** ಪ್ರಲಯಕಾಲದಲ್ಲಿ ಇರುವವನು **ಸಃ ಏವ** ಆ ಪುರುಷಶ್ರೇಷ್ಠನಾದ ಭಗವಂತನೇ **ನತು** ಹೊರತು ಶರೀರಾದಿಗಳ ವಿಕಾರ ಹೊಂದಿದವನಲ್ಲ. **ಭೂಯಃ** ಮತ್ತು ಸೃಷ್ಟಿಯ ಪ್ರವಾಹವು ಅನಾದಿ ಆಗಿರುವದರಿಂದ **ನಿಜವೀರ್ಯಚೋದಿತಾಂ** ತನ್ನ ಸಾಮರ್ಥ್ಯದಿಂದ ಪ್ರೇರಣೆಗೊಳಗಾದ **ಸ್ವಜೀವಮಾಯಾಂ** ತನ್ನ ಅಧೀನವಾದ ಜೀವನಿಗೆ ಬಂಧಕವಾದ ಶ್ರೀ, ಭೂ, ದುರ್ಗಾತ್ಮಕವಾದ **ಸಿಸೃಕ್ಷತೀಂ** ಸೃಷ್ಟಿಸಲು ಇಚ್ಛಿಸುವ **ಪ್ರಕೃತಿಂ** ಚೇತನಪ್ರಕೃತಿಯನ್ನು **ಅನುಸಸಾರ** ತನ್ನ ಇಚ್ಛೆಗನುಗುಣವಾಗಿಯೇ ಹೊಂದಿದನು. (ಚೇತನರೂಪಳಾದ ಪ್ರಕೃತಿಯಲ್ಲಿ ವೀರ್ಯವನ್ನು ಇಟ್ಟನು ಎಂದಭಿಪ್ರಾಯ.) ಏನು ಮಾಡುವದಕ್ಕಾಗಿ **ಅನಾಮರೂಪಾತ್ಮನಿ** ನಾಮ ಮತ್ತು ರೂಪ ರಹಿತನಾಗಿ ಆಧಾರನಾದ ತನ್ನಲ್ಲಿ **ರೂಪನಾಮಾನಿ** ನಾಮಾತ್ಮಕವಾದ ಮತ್ತು ರೂಪಾತ್ಮಕವಾದ ಜಗತ್ತನ್ನು **ವಿಧಿತ್ಸಮಾನಃ** ಸೃಷ್ಟಿಸಲು ಇಚ್ಛಿಸುವವನಾಗಿ **ಪ್ರಕೃತಿಂ** ಚೇತನರೂಪಳಾದ ಪ್ರಕೃತಿಯನ್ನು **ಅನುಸಸಾರ** ತನ್ನ ಇಚ್ಛೆಗನುಗುಣವಾಗಿ ತನ್ನ ವೀರ್ಯವನ್ನು ಅವಳಲ್ಲಿ ಆಧಾನಮಾಡಿದನು. ಕಾಲಕರ್ಮಾದಿಗಳು ಇವೇ ಇಷ್ಟರಿಂದಲೇ ಸೃಷ್ಟಿಯು ಆಗುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರ **ಶಾಸ್ತ್ರಿಕೃತ್** ಸೃಷ್ಟಿಕಾರಣವಾದ ಕಾಲ, ಕರ್ಮ ಮೊದಲಾದವುಗಳನ್ನು ನಿಯಮನಮಾಡುವವನು ಇವನೇ. ಪೂರ್ವೋಕ್ತ ರೀತಿಯಲ್ಲಿ ಹೇಳಿದ **ಹರಿಃ** ಪರಮಾತ್ಮನು **ಅಯಂ ಕಿಲ** ಈ ಶ್ರೀಕೃಷ್ಣನಲ್ಲವೇ. (ಪರಮಪುರುಷನಾದ ಈ ಶ್ರೀಕೃಷ್ಣನೇ ಸೃಷ್ಟ್ಯಾದಿಗಳನ್ನು ಮಾಡುವವನು ಎಂದು ಭಾವ.)

ಮೋಕ್ಷರೂಪ ಪುರುಷಾರ್ಥವನ್ನು ಪಡೆಯಬೇಕಾದರೆ ತಿಳಿಬೇಕಾದದ್ದು ಇವನನ್ನೇ ಎಂಬುದನ್ನು ಹೇಳುವರು.

**ಸ ವಾ ಅಯಂ ಯತ್ಪದಮತ್ರ ಸೂರಯೋ**
**ಜಿತೇಂದ್ರಿಯಾ ನಿರ್ಜಿತಮಾತರಿಶ್ವನಃ ।**
**ಪಶ್ಯಂತಿ ಭಕ್ತ್ಯುತ್ಕಲಿತಾಮಲಾತ್ಮನಾ**
**ನನ್ವೇಷ ಸತ್ವಂ ಪರಿಮಾರ್ಷ್ಟುಮರ್ಹತಿ ॥೨೪॥**

**ಅತ್ರ** ಮೋಕ್ಷಕ್ಕೆ ಅಧಿಕಾರಿಗಳು ಅನಧಿಕಾರಿಗಳು ಈ ವರ್ಗದಲ್ಲಿ **ಯತ್ಪದಂ** ಯಾವನ ಸ್ವರೂಪವನ್ನು **ನಿರ್ಜಿತಮಾತರಿಶ್ವನಃ** ಪ್ರಾಣಗಳನ್ನು ಗೆದ್ದಿರುವ **ಜಿತೇಂದ್ರಿಯಾಃ** ಇಂದ್ರಿಯಗಳ ಮೇಲೆ ಜಯವನ್ನು ಸಾಧಿಸಿರುವ **ಸೂರಯಃ** ಜ್ಞಾನಿಗಳು

**ಭಕ್ತ್ಯುತ್ಕಲಿತಾಮಲಾತ್ಮನಾ** ಭಕ್ತಿಯಿಂದ ಅರಳಿದ, ರಾಗಾದಿದೋಷರಹಿತವಾದ ಮನಸ್ಸುಳ್ಳವನಿಂದ **ಪಶ್ಯಂತಿ** ನೋಡುತ್ತಾರೆಯೋ **ಸ ವಾ ಅಯಂ** ಆ ಭಗವಂತನೇ **ಏಷಃ** ಈ ಶ್ರೀಕೃಷ್ಣನು **ಸತ್ತ್ವಂ** ಅಂತಃಕರಣವನ್ನು **ಪರಿಮಾರ್ಷ್ಟುಂ** ನಾಶಗೊಳಿಸಲು **ನ ಅರ್ಹತಿ** ಯೋಗ್ಯನಾಗಿಲ್ಲ **ಕಿಂತು** ಆದರೆ **ಏಷಃ** ಏವ ಸಾತ್ವಿಕರಿಗೆ ಅನುಗ್ರಹವನ್ನು ಮಾಡುವ ಶ್ರೀಕೃಷ್ಣನೇ **ಸತ್ತ್ವಂ** ಅಂತಃಕರಣವನ್ನು **ಪರಿಮಾರ್ಷ್ಟುಂ** ಶುದ್ಧಗೊಳಿಸಲು **ಅರ್ಹತಿ** ಯೋಗ್ಯನಾಗಿದ್ದಾನೆ.

**ವಿಶೇಷ :-** ನಮ್ಮನ್ನು ಶುದ್ಧರನ್ನಾಗಿ ಮಾಡಿ ತನ್ನ ದರ್ಶನವನ್ನು ಕೊಡುತ್ತಾನೆ. ಶ್ರೀಕೃಷ್ಣನು ತಾನು ದೂರ ಹೋಗುವದರಿಂದ ತನ್ನ ಜ್ಞಾನವನ್ನು ನಾಶಗೊಳಿಸುವದಿಲ್ಲ. ಈ ವಿಧವಾದ ಜ್ಞಾನವೇ ನಮಗೆ ಯಾವಾಗಲು ಇರುತ್ತದೆ. ನತ್ವೇಷ ಎಂಬ ಪಾಠವಿದ್ದಾಗ **ಸತ್ತ್ವಂ** ತನ್ನ ದರ್ಶನವನ್ನು **ಪರಿಮಾರ್ಷ್ಟುಂ** ದೂರ ಹೋಗುವಿಕೆಯಿಂದ ನಾಶಗೊಳಿಸಲು **ನ ತು ಅರ್ಹತಿ** ಎಂದಿಗೂ ಸಾಧ್ಯವಿಲ್ಲ. ಶ್ರೀಕೃಷ್ಣನ ದರ್ಶನ ಯಾವಾಗಲು ಆಗುವದಕ್ಕಾಗಿ ಅವನ ಜೊತೆಗೆ ಹೋಗಬೇಕು ಎಂದು ಭಾವ.

ಎಲ್ಲ ವೇದಗಳಿಂದ ಪ್ರತಿಪಾದ್ಯನೂ ಇವನೇ ಎಂಬುದನ್ನು ಹೇಳುತ್ತಾರೆ.

**ಸ ವಾ ಅಯಂ ಸಖ್ಯನುಗೀತಸತ್ಕಥೋ**
**ವೇದೇಷು ಗುಹ್ಯೇಷು ಚ ವೇದವಾದಿಭಿಃ ।**
**ಯ ಏಕ ಈಶೋ ಜಗದಾತ್ಮಲೀಲಯಾ**
**ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ ॥೨೫॥**

**ಹೇ ಸಖಿ** ಗೆಳತಿಯೇ **ಯಃ** ಯಾರು **ವೇದವಾದಿಭಿಃ** ವೇದಾರ್ಥವಿಚಾರಿಸುವ ವಾದಿಗಳಿಂದ ಗುಹ್ಯವಾದಿಭಿಃ ಎಂದು ಪಾಠವಿದ್ದಾಗ ಉಪನಿಷದ್ವಿಚಾರಗಳನ್ನು ಮಾಡುವವರಿಂದ **ವೇದೇಷು** ಅನಂತ ವೇದಗಳಲ್ಲಿ **ಗುಹ್ಯೇಷು** ಉಪನಿಷತ್ತುಗಳಲ್ಲಿ **ಅನುಗೀತಸತ್ಕಥಃ** ಪ್ರತಿದಿನವು ಕೀರ್ತಿಸಲ್ಪಡುವ ಸತ್ಯಭೂತವಾದ ಚರಿತ್ರೆಗಳುಳ್ಳ **ಏಕಃ ಏವ ಈಶಃ** ಒಬ್ಬನೇ ಆದ ಭಗವಂತನು **ಜಗದಾತ್ಮಲೀಲಯಾ** ಜಗತ್ತನ್ನು ತನ್ನ ಕ್ರೀಡೆಯಿಂದ **ಸೃಜತಿ** ಸೃಷ್ಟಿಸುತ್ತಾನೆ **ಅವತಿ** ರಕ್ಷಿಸುತ್ತಾನೆ **ಅತ್ತಿ** ನಾಶಗೊಳಿಸುತ್ತಾನೆ. **ನ ತತ್ರ ಸಜ್ಜತೇ** ತನ್ನಿಂದ ಸೃಷ್ಟ್ಯಾದಿಗಳನ್ನು ಪಡೆದಿರುವ ಜಗತ್ತಿನಲ್ಲಿ ಆಸಕ್ತನಾಗುವದಿಲ್ಲ ಯಾಕೆಂದರೆ ಅವನು ಅದರಿಂದ ಪಡೆಯಬೇಕಾದ್ದು ಏನು ಆತ್ಮಕಾಮನಾಗಿದ್ದಾನೆ **ಸ ವಾ ಅಯಂ** ಆ ಸೃಷ್ಟ್ಯಾದಿಗಳನ್ನು ಮಾಡಿದರು ಅದರಲ್ಲಿ ಆಸಕ್ತನಾಗದ ಪುರುಷನು ಈ ಶ್ರೀಕೃಷ್ಣನೇ.

ದುಷ್ಟರ ಸಂಹಾರಕ್ಕಾಗಿ ಅನೇಕ ಅವತಾರಗಳನ್ನು ಎತ್ತಿಕೊಂಡು ಬರುವವನು ಇವನೇ ಎಂಬುದನ್ನು ಹೇಳುವರು.

**ಯದಾ ಹ್ಯಧರ್ಮೇಣ ತಮೋಽಧಿಕಾ ನೃಪಾಃ**
**ಜೀವಂತಿ ತತ್ರೈವ ಹಿ ಸಾತ್ವತಃ ಕಿಲ ।**
**ಧರ್ಮಂ ಭಗಂ ಸತ್ಯಮೃತಂ ದಯಾ ಯಶೋ**
**ಭವಾಯ ರೂಪಾಣಿ ದಧದ್ಯುಗೇ ಯುಗೇ ॥೨೬॥**

**ತಮೋಧಿಕಾಃ** ತಾಮಸತಾಮಸರಾದ **ನೃಪಾಃ** ರಾಜರು **ಯದಾ** ಯಾವಾಗ **ಅಧರ್ಮೇಣ** ವೇದಹೇಳಿದ್ದನ್ನು ಬಿಟ್ಟು ತದ್ವಿರುದ್ಧವಾದ ಶೈವಾದಿ ಆಗಮಗಳಲ್ಲಿ ಹೇಳಿದ ಮಾರ್ಗದಿಂದ **ಜೀವಂತಿ** ತಮ್ಮ ಪ್ರಾಣಗಳನ್ನು ಪೋಷಿಸುತ್ತಾರೆ **ತದಾ** ಆಗ **ಅಸೌ** ಭಗವಂತನು **ಸಾತ್ವತಃ** ಸಜ್ಜನರಿಗೆ ಅನುಗ್ರಹವನ್ನು ಮಾಡುವ **ಭವಾಯ** ಭಕ್ತಜನರ ಮಂಗಳಕ್ಕಾಗಿ ಮಧ್ಯಮಜನರ ಉಪೇಕ್ಷೆಗಾಗಿ, ಅಸುರಜನರಿಗೆ ದುಃಖವನ್ನು ಕೊಡುವದಕ್ಕಾದಿ **ಧರ್ಮಂ** ಧಾರಕ ಅದಕ್ಕಾಗಿ ಧರ್ಮಎಂಬ ಹೆಸರಿರುವ, ಧರ್ಮದಲ್ಲಿ ಅಂತರ್ಗತನಾಗಿ ಧರ್ಮಕ್ಕೆ ಪ್ರೇರಕನಾಗುವವನು **ಭಗಂ** ಐಶ್ವರ್ಯಾದಿಗುಣ-ಗಳಿರುವದರಿಂದ ಭಗ ಎಂಬ ಶಬ್ದದಿಂದ ಕರೆಸಿಕೊಳ್ಳುವ ಐಶ್ವರ್ಯದಲ್ಲಿರುವ, ಅವುಗಳಿಗೆ ಪ್ರೇರಕನಾಗಿರುವವನು **ಸತ್ಯಂ** ಆನಂದರೂಪನಾಗಿರುವದರಿಂದ ಸತ್ಯಶಬ್ದವಾಚ್ಯನಾದ ಸತ್ಯಶಬ್ದಾಂತರ್ಗತನಾದ, ಸತ್ಯಶಬ್ದಪ್ರೇರಕನಾದವನು **ಋತಂ** ಜ್ಞಾನರೂಪನಾದ್ದರಿಂದ ಋತಶಬ್ದವಾಚ್ಯನಾದ ಋತದಲ್ಲಿ ಅಂತರ್ಗತನಾದ ಅದಕ್ಕೆ ಪ್ರೇರಕನಾಗಿರುವವನು **ದಯಾ** ದಯಾಗುಣಕ್ಕೆ ಆಶ್ರಯನಾಗಿದ್ದರಿಂದ ದಯಾಶಬ್ದವಾಚ್ಯನಾದ ದಯಾಂತರ್ಗತನಾದ ದಯೆಗೆ ಪ್ರೇರಕನಾದವನು **ಯಶಃ** ಅತ್ಯಂತ ಪ್ರಸಿದ್ಧನಾಗಿದ್ದರಿಂದ ಯಶಸ್ ಶಬ್ದದಿಂದ ಕರೆಸಿಕೊಳ್ಳುವ ದಯೆಯಲ್ಲಿ ಅಂತರ್ಗತನಾದ ಆ ದಯೆಗೆ ಪ್ರೇರಕನಾಗಿರುವನು ತದ್ರೂಪನಾಗಿರುವನು **ರೂಪಾಣಿ** ಮತ್ಸ್ಯ ಮೊದಲಾದ ರೂಪಗಳನ್ನು **ಯುಗೇ ಯುಗೇ** ಪ್ರತಿಯೊಂದು ಯುಗದಲ್ಲಿ **ದಧತ್** ಧರಿಸಿರುವವನು ಯಃ **ಏಷಃ ಹರಿಃ** ಯಾವ ಈ ಶ್ರೀಹರಿಯೋ **ಸಃ ವಾ ಅಯಂ** ಅವನೇ ಈ ಶ್ರೀಕೃಷ್ಣ ಪರಮಾತ್ಮನು.

ಮೂಲೋಕ್ತವಾದ ಸಾತ್ವತಃ ಎಂಬುದಕ್ಕೆ ಸತ್ವಗುಣಸಂಬಂಧಿ ಎಂದರ್ಥ ವಾಗಬಹುದು. ಸತ್ವಗುಣಸಂಬಂಧಿ ಎಂಬರ್ಥವನ್ನೇ ಮಾಡಿದರೆ ಏನು ಬಾಧಕ

ಸಾತ್ವತಶಬ್ದಕ್ಕೆ ಉತ್ತಮಜನ, ಮಧ್ಯಮಜನ, ಅಧಮಜನ ಇವರಿಗೆ ಅನುಗ್ರಹ ಉದಾಸೀನ ಮತ್ತು ದುಃಖಗಳನ್ನು ಉಂಟುಮಾಡುವ ಎಂಬರ್ಥವನ್ನು ಪ್ರಮಾಣಮೂಲಕವಾಗಿ ತೋರಿಸುವವರು ಶ್ರೀಹರಿಯು ಧರ್ಮಾದಿಗಳಲ್ಲಿ ಇದ್ದು ಧರ್ಮಾದಿಗಳಿಂದ ವಾಚ್ಯನಾಗುವನು ಅವುಗಳೇ ಪ್ರವೃತ್ತಿನಿಮಿತ್ತಗಳು ಎಂಬುದನ್ನು ಪ್ರಮಾಣಮೂಲಕವಾಗಿ ತೋರಿಸುವರು. ಇನ್ನು **ಧರ್ಮಂ ಭಗಂ** ಇವುಗಳಿಗೆ ರೂಪಾಣಿ ಎಂಬುದರ ಜೊತೆಗೆ ಅನ್ವಯವಾಗುವದಿಲ್ಲ ಅದನ್ನು ಪ್ರಮಾಣಪುರಸ್ಸರವಾಗಿ ತೋರಿಸುವರು.

*ಭಾಗವತತಾತ್ಪರ್ಯ-*

**ಸಾತ್ವಿಕಾನಾಮನುಗ್ರಾಹಕಃ.**
**ಅಗುಣೋ ಅಪಿ ಪರೋ ದೇವೋ ಹ್ಯನುಗೃಹ್ಣಾತಿ ಸಾತ್ವಿಕಾನ್ ।**
**ದೇವಾಂಸ್ತು ಮಾನವಾನ್ಮಧ್ಯಾನುಪೇಕ್ಷ್ಯ ಕ್ಲೇಶ್ಯತೇ ಅಸುರಾನ್ ॥**
**-ಇತಿ ಬ್ರಹ್ಮದರ್ಶನೇ ॥**

**ಸಾತ್ವತಃ ಸಾತ್ವಿಕಸ್ನೇಹಾತ್ಸತ್ತ್ವೋ ಹ್ಯಾನಂದರೂಪತ ॥ -ಇತಿ ಬ್ರಹ್ಮವೈವರ್ತೇ ॥**
**ಧಾರಕತ್ವಾದ್ಧರ್ಮರೂಪೋ ಹ್ಯೈಶ್ವರ್ಯಾದಿಭಗೋ ಹ್ಯಸೌ ।**
**ಸತ್ಯಮಾನಂದರೂಪತ್ವಾದೃತೋ ಜ್ಞಾನಸ್ವರೂಪತಃ ॥**
**ಯಶೋ ಬಲಂ ಪ್ರಸಿದ್ಧತ್ವಾದ್ದಯಾ ಹಿ ಕರುಣಾಕರಃ ॥ -ಇತಿ ತಂತ್ರಭಾಗವತೇ**
**ಏವಂ ವಿಧಗುಣಸ್ವರೂಪಾಣಿ ರೂಪಾಣಿ ದಧದ್ಯುಗೇ ಯುಗೇ॥**

**ಸಾತ್ವಿಕಾನಾಂ** ಸಜ್ಜನರಿಗೆ **ಅನುಗ್ರಾಹಕಃ** ಅನುಗ್ರಹವನ್ನು ಮಾಡುತ್ತಾನೆ ಅಥವಾ ಸ್ನೇಹದಿಂದ ಅನುಗ್ರಹದಿಂದ **ಅಗುಣಃ ಅಪಿ** ಸತ್ವಾದಿಗುಣಗಳಿಲ್ಲದಿದ್ದರೂ **ಪರಃ ದೇವಃ** ಸರ್ವೋತ್ತಮನಾದ ಭಗವಂತನು **ಸಾತ್ವಿಕಾನ್** ಸಜ್ಜನರಾದ **ದೇವಾನ್** ದೇವತೆಗಳನ್ನು **ಅನುಗೃಹ್ಣಾತಿ** ಅನುಗ್ರಹಿಸುತ್ತಾನೆ. **ತು** ಆದರೆ **ಮಧ್ಯಮಾನ್** ಮಧ್ಯಮರಾದ **ಮಾನವಾನ್** ಮನುಷ್ಯರನ್ನು **ಉಪೇಕ್ಷ್ಯ** ಉದಾಸೀನ ಮಾಡಿ **ಅಸುರಾನ್** ಅಧಮರಾದ ಅಸುರರನ್ನು **ಕ್ಲೇಶ್ಯತೇ** ದುಃಖಪಡಿಸುತ್ತಾನೆ. **ಸಾತ್ವತಃ** ಸಾತ್ವಿಕವಾದ ಸ್ನೇಹದಿಂದ **ಸತ್ವಃ** ಆನಂದರೂಪನಾದ್ದರಿಂದ **ಸತ್ವ** ಎಂದು ಕರೆಸಿಕೊಳ್ಳುತ್ತಾನೆ **ಧಾರಕತ್ವಾತ್** ಧಾನಕನಾಗಿದ್ದರಿಂದ **ಧರ್ಮರೂಪಃ** ಧರ್ಮರೂಪನಾಗಿ ಧರ್ಮದಲ್ಲಿ ಇದ್ದು ಧರ್ಮಕ್ಕೆ ಪ್ರೇರಕನು **ಹಿ** ಪ್ರಮಾಣಪ್ರಸಿದ್ಧ. **ಐಶ್ವರ್ಯಾದೇಃ** ಐಶ್ವರ್ಯಾದಿಗಳಿರುವದರಿಂದ **ಭಗಃ** ಭಗನೆಂದು ಕರೆಸಿಕೊಳ್ಳುವನು ಅದರಲ್ಲಿ ಪ್ರೇರಕನಾಗಿ ಇರುವವನು.

**ಆನಂದರೂಪತ್ವಾತ್** ಆನಂದರೂಪನಾಗಿರುವದರಿಂದ ಅದರಲ್ಲಿ ಪ್ರೇರಕನಾಗಿ ಇರುವದರಿಂದ ಸತ್ಯಶಬ್ದವಾಚ್ಯನು. **ಹಿ** ಪ್ರಮಾಣಪ್ರಸಿದ್ಧ **ಜ್ಞಾನಸ್ವರೂಪತಃ** ಜ್ಞಾನಸ್ವರೂಪನಾಗಿರುವದರಿಂದ **ಋತಃ** ಋತಶಬ್ದವಾಚ್ಯನಾದವನು ಋತದಲ್ಲಿ ಇದ್ದು ಪ್ರೇರಕನಾಗಿರುವನು ಅಲಂ **ಪ್ರಸಿದ್ಧತ್ವಾತ್** ಅತ್ಯಂತ ಪ್ರಸಿದ್ಧನಾಗಿರುವದರಿಂದ ಅದರಲ್ಲಿ ಇದ್ದು ಪ್ರೇರಕನಾಗಿರುವನು **ಯಶಃ** ಯಶಸ್ಸು ಎಂದು ಕರೆಸಿಕೊಳ್ಳುವವನು **ಹಿ** ಪ್ರಮಾಣಪ್ರಸಿದ್ಧ. **ಕರುಣಾಕರಃ** ಕರುಣೆಗೆ ಆಶ್ರಯನಾಗಿರುವದರಿಂದ ಅದರಲ್ಲಿ ಇದ್ದು ಪ್ರೇರಕನಾಗಿರುವದರಿಂದ **ದಯಾ** ದಯೆ ಎಂಬ ಶಬ್ದದಿಂದ ಕರೆಸಿಕೊಳ್ಳುವನು. ಎಂದು ತಂತ್ರಭಾಗವತದಲ್ಲಿ ಹೇಳಿದೆ. **ಏವಂವಿಧಗುಣಸ್ವರೂಪಾಣಿ** ಈ ರೀತಿಯಾದ ಗುಣಸ್ವರೂಪಪ್ರೇರಕವಾಗಿರುವ **ರೂಪಾಣಿ** ಮತ್ಸ್ಯಾದಿರೂಪಗಳನ್ನು ಯುಗೇ **ಯುಗೇ** ಪ್ರತಿಯುಗದಲ್ಲಿಯೂ **ದಧತ್** ಧರಿಸುತ್ತಾನೆ.

ಪೂರ್ವೋಕ್ತರೀತಿಯಾದ ಮೂಲರೂಪಸ್ತುತಿಯಿಂದ ಶ್ರೀಕೃಷ್ಣನು ಮೂಲರೂಪದಿಂದ ಅತ್ಯಂತ ಅಭಿನ್ನನು ಎಂದು ಸ್ತೋತ್ರಮಾಡಿ ಈಗ ಶ್ರೀಕೃಷ್ಣನನ್ನೇ ಐದು ಶ್ಲೋಕಗಳಿಂದ ಸ್ತುತಿಸುವದನ್ನು ಹೇಳುತ್ತಾರೆ.

**ಅಹೋ ಅಲಂ ಶ್ಲಾಘ್ಯತಮಂ ಯದೋಃ ಕುಲಂ**
**ತ್ವಹೋ ಅಲಂ ಪುಣ್ಯತಮಂ ಮಧೋರ್ವನಮ್ ।**
**ಯದೇಷು ಪುಂಸಾಮೃಷಭಃ ಪ್ರಿಯಶ್ರವಾಃ**
**ಸ್ವಜನ್ಮನಾ ಚಂಕ್ರಮಣೇನ ಚಾಂಚತಿ ॥೨೬॥**

**ಪುಂಸಾಂ ಋಷಭಃ** ಪುರುಷಶ್ರೇಷ್ಠನಾದ **ಪ್ರಿಯಶ್ರವಾಃ** ಮನೋಹರವಾದ ಕೀರ್ತಿಯುಳ್ಳ **ಏಷಃ** ಈ ಶ್ರೀಕೃಷ್ಣನು **ಯದ್** ಯಾವ ಕಾರಣದಿಂದ **ಸ್ವಜನ್ಮನಾ** ತನ್ನ ಜನ್ಮದಿಂದಲೇ **ಯದೋಃ ಕುಲಂ** ಯದುವಂಶವನ್ನು **ಅಲಂ** ಚೆನ್ನಾಗಿ **ಅಂಚತಿ** ಪೂಜಿತವಾಗುವಂತೆ ಮಾಡಿದನು **ಚ** ಮತ್ತು **ಚಂಕ್ರಮಣೇನ** ತನ್ನ ಓಡಾಟದಿಂದ **ಮಧೋಃ ವನಂ** ಮಧುವನವನ್ನು **ಅಲಂ** ಚೆನ್ನಾಗಿ **ಅಂಚತಿ** ಮಾಡುತ್ತಾನೆ **ಶ್ಲಾಘ್ಯತಮಂ** ಪೂಜ್ಯತಮವಾಗಿದ್ದು **ಅಹೋ** ಆಶ್ಚರ್ಯವು **ಪುಣ್ಯತಮಂ** ಅತಿಶಯ ಪುಣ್ಯವನ್ನು ಹೊಂದಿದ್ದು **ಅಹೋ** ಆಶ್ಚರ್ಯವು.

**ಅಹೋ ಬತ ಸ್ವರ್ಯಶಸಸ್ತಿರಸ್ಕರೀ**
**ಕುಶಸ್ಥಲೀ ಪುಣ್ಯಯಶಸ್ಕರೀ ಭುವಃ ।**

**ಪಶ್ಯಂತಿ ನಿತ್ಯಂ ಯದನುಗ್ರಹೇಕ್ಷಿತ**
**ಸ್ಮಿತಾವಲೋಕಂ ಸ್ವಪತಿಂ ಸ್ಮ ಯತ್ಪ್ರಜಾಃ ॥೨೮॥**

**ಸ್ವರ್ಯಶಸಃ** ಸ್ವರ್ಗಲೋಕವು ಉತ್ಕೃಷ್ಟವಾದದ್ದು ಎಂಬ ಯಶಸ್ಸನ್ನು **ತಿರಸ್ಕರೀ** ತಿರಸ್ಕರಿಸುವ **ಕುಶಸ್ಥಲೀ** ದ್ವಾರಕಾಪಟ್ಟಣವು **ಭುವಃ** ಭೂಲೋಕದ **ಪುಣ್ಯಯಶಸ್ಕರೀ** ಪುಣ್ಯಕರವಾದ ಯಶಸ್ಸನ್ನು ಉಂಟುಮಾಡುತ್ತಿತ್ತು. **ಯತ್** ಯಾವಕಾರಣದಿಂದ **ಯತ್ಪ್ರಜಾಃ** ಯಾವ ದ್ವಾರಕಾದಲ್ಲಿ ಇರುವ ಜನರು **ಅನುಗ್ರಹೇಕ್ಷಿತಸ್ಮಿತಾವಲೋಕಂ** ಭಕ್ತರ ಮೇಲಿನ ಅನುಗ್ರಹದಿಂದ ನೋಡಲ್ಪಡುವ ಮತ್ತು ಮಂದಹಾಸದಿಂದ ಕೂಡಿದವನಾಗಿ ಭಕ್ತರಿಗೆ ಕಾಣಿಸುವ ಅಥವಾ ಅನುಗ್ರಹಕ್ಕಾಗಿ ಭಕ್ತರಿಂದ ನಿರೀಕ್ಷಿಸಲ್ಪಡುವ ಮಂದಹಾಸಪೂರ್ವಕವಾದ ನೋಟವುಳ್ಳ **ಸ್ವಪತಿಂ** ತಮಗೆ ಸ್ವಾಮಿಯಾದ ಶ್ರೀಕೃಷ್ಣನನ್ನು **ನಿತ್ಯಂ ಪಶ್ಯಂತಿ ಸ್ಮ** ಪ್ರತಿದಿನವು ನೋಡುತ್ತಿದ್ದರು **ಅಹೋ ಬತ** ಎಷ್ಟು ಆಶ್ಚರ್ಯ.

**ನೂನಂ ವ್ರತಸ್ನಾನಹುತಾದಿನೇಶ್ವರಃ**
**ಸಮರ್ಚಿತೋ ಹ್ಯಸ್ಯ ಗೃಹೀತಪಾಣಿಭಿಃ ।**
**ಪಿಬಂತಿ ಯಾಃ ಸಖ್ಯಧರಾಮೃತಂ ಮುಹುಃ**
**ವ್ರಜಸ್ತ್ರಿಯಃ ಸಮ್ಮುಮುಹುರ್ಯದಾಶಯಾ ॥೨೯॥**

**ಹೇ ಸಖಿ** ಗೆಳತಿಯೇ **ಯಾಃ ವ್ರಜಸ್ತ್ರಿಯಃ** ಯಾವ ಗೋಕುಲದ ಸ್ತ್ರೀಯರು **ಯದಾಶಯಾ** ಯಾವ ಶ್ರೀಕೃಷ್ಣನ ಅಧರಾಮೃತವನ್ನು ಪಾನಮಾಡಬೇಕು ಎಂಬ ಇಚ್ಛೆಯಿಂದ **ಮುಹುಃ** ಮತ್ತೆ ಮತ್ತೆ **ಅಧರಾಮೃತಂ** ಅಧರಾಮೃತವನ್ನು **ಪಿಬಂತಿ** ಪಾನಮಾಡುತ್ತಾರೆ **ಅಸ್ಯ** ಶ್ರೀಕೃಷ್ಣನಿಂದ **ಗೃಹೀತಪಾಣಿಭಿಃ** ಪಾಣಿಗ್ರಹಣಮಾಡಲ್ಪಟ್ಟ ಸ್ತ್ರೀಯರಿಂದ (ಶ್ರೀಕೃಷ್ಣನನ್ನು ಮದುವೆಮಾಡಿಕೊಂಡಿರುವ ಸ್ತ್ರೀಯರಿಂದ ಎಂದಭಿಪ್ರಾಯ) **ವ್ರತಸ್ನಾನಾಹುತಾದಿನಾ** ವ್ರತ, ಸ್ನಾನ, ಹೋಮ ಮೊದಲಾದವುಗಳಿಂದ **ಈಶ್ವರಃ** ಶ್ರೀಕೃಷ್ಣನು **ಸಮರ್ಚಿತಃ ನೂನಂ** ಪೂಜಗೊಳ್ಳಲ್ಪಟ್ಟನಷ್ಟೇ ಆ ಎಲ್ಲ ಸ್ತ್ರೀಯರು ಶ್ರೀಕೃಷ್ಣನನ್ನು ಮದುವೆಮಾಡಿ-ಕೊಳ್ಳುವದಕ್ಕಾಗಿ ವ್ರತಾದಿಗಳಿಂದ ಭಗವಂತನನ್ನು ಪೂಜಿಸಿದರು.

ಶ್ರೀಹರಿಯನ್ನು ಪೂಜಿಸಿದ ಸ್ತ್ರೀಯರು ಯಾರು ಎಂಬುದನ್ನು ಮುಂದಿನ ಎರಡು ಶ್ಲೋಕಗಳಿಂದ ಹೇಳುತ್ತಾರೆ.

**ಯಾ ವೀರ್ಯಶುಲ್ಕೇನ ಹೃತಾಃ ಸ್ವಯಂವರೇ**
**ಪ್ರಮಥ್ಯ ಚೈದ್ಯಪ್ರಮುಖಾನ್ವಿಶುಷ್ಮಿಣಃ ।**
**ಪ್ರದ್ಯುಮ್ನಸಾಂಬಪ್ರಮುಖಾತ್ಮಜಾಃ ಪರಾ**
**ಯಾಶ್ಚ ಹೃತಾ ಭೌಮವಧೇ ಸಹಸ್ರಶಃ ॥೩೦॥**

**ವಿಶುಷ್ಮಿಣಃ** ವಿಶಿಷ್ಟವಾದ ಬಲವುಳ್ಳ **ಚೈದ್ಯಪ್ರಮುಖಾನ್** ಶಿಶುಪಾಲನೇ ಮೊದಲಾದವರನ್ನು **ಪ್ರಮಥ್ಯ** ಸೋಲಿಸಿ **ಸ್ವಯಂವರೇ** ಸ್ವಯಂವರದಲ್ಲಿ **ವೀರ್ಯಶುಲ್ಕಂ** ಪರಾಕ್ರಮವೇ ಮೌಲ್ಯ ಆ ಮೌಲ್ಯದಿಂದ **ಯಾಃ** ಯಾವ ಸ್ತ್ರೀಯರು **ಹೃತಾಃ** ತರಲ್ಪಟ್ಟರೋ **ತಾಃ** ಆ ಸ್ತ್ರೀಯರು **ಪ್ರದ್ಯುಮ್ನಸಾಂಬಪ್ರಮುಖಾತ್ಮಜಾಃ** ಪ್ರದ್ಯುಮ್ನಸಾಂಬ ಮೊದಲಾದವರೇ ಮಕ್ಕಳಾಗಿವುಳ್ಳ **ಪರಾಃ** ರುಕ್ಮಿಣೀ ಮೊದಲಾದವರು **ಯಾಃ ಚ ಅಪಾರಃ** ಯಾವ ಇನ್ನುಳಿದ ಸ್ತ್ರೀಯರು **ಭೌಮವಧೇ** ನರಕಾಸುರನ ಸಂಹಾರವಾದ ಮೇಲೆ **ಸಹಸ್ರಶಃ** ಹದಿನಾರುಸಾವಿರದಾನೂರು ಸಂಖ್ಯೆಯುಳ್ಳ ಕಶೇರು ಮೊದಲಾದವರು **ಆಹೃತಾಃ** ದ್ವಾರಕಾಪಟ್ಟಣಕ್ಕೆ ಕಳಿಸಲ್ಪಟ್ಟರು.

**ಏತಾಃ ಪುರಾ ಸ್ತ್ರೀತ್ವಮವಾಪ್ತಯೇ ಸಮಂ**
**ನಿರಸ್ತಶೋಕಂ ಬತ ಸಾಧು ಕುರ್ವತೇ ।**
**ಯಾಸಾಂ ಗೃಹಾತ್ಪುಷ್ಕರಲೋಚನಃ ಪತಿಃ**
**ನ ಜಾತ್ವಪೈತ್ಯಾಕೃತಿಭಿಃ ಹೃದಿ ಸ್ಪೃಶನ್ ॥೩೦॥**

**ಏತಾಃ** ಈ ಸ್ತ್ರೀಯರು **ಪುರಾ** ಪೂರ್ವಜನ್ಮದಲ್ಲಿ **ಸ್ತ್ರೀತ್ವಂ** ಸ್ತ್ರೀತ್ವವನ್ನು **ಅವಾಪ್ತಯೇ** ಹೊಂದಲು **ನಿರಸ್ತಶೋಕಂ** ದುಃಖವು ಹೇಗೆ ನಿವೃತ್ತವಾಗುವುದೋ ಹಾಗೆ **ಸಮಂ** ಮತ್ತೆ ಮತ್ತೆ **ಸಾಧು** ಮಂಗಲವಾದ ತಪಸ್ಸನ್ನು **ಕುರ್ವತೇ** ಮಾಡಿದರು **ಬತ** ಆಶ್ಚರ್ಯ. **ಪುಷ್ಕರಲೋಚನಃ** ತಾವರೆಯಂತೆ ಕಣ್ಣುಗಳುಳ್ಳ **ಪತಿಃ** ಶ್ರೀಕೃಷ್ಣನು **ಆಕೃತಿಭಿಃ** ತನ್ನ ಶ್ರೇಷ್ಠವಾದ ವ್ಯಾಪಾರಗಳಿಂದ ಅಥವಾ ತನ್ನ ಅವಯವಗಳಿಂದ **ಹೃದಿ ಸ್ಪೃಶನ್ ಸನ್** ಮನಸ್ಸಿನಲ್ಲಿ ಇರುವವನಾಗಿ **ಯಾಸಾಂ** ಯಾವ ಸ್ತ್ರೀಯರ **ಗೃಹಾತ್** ಮನಗಳಿಂದ **ನ ಜಾತು ಅಪೈತಿ** ಎಂದಿಗೂ ಬಿಟ್ಟುಹೋಗುತ್ತಿರಲಿಲ್ಲ.

ಇಲ್ಲಿ ಸ್ತ್ರೀತ್ವವನ್ನು ಹೊಂದುವದಕ್ಕಾಗಿ ಎಂಬ ಮಾತಿನಿಂದ ಪೂರ್ವಜನ್ಮದಲ್ಲಿ ಪುರುಷರು ಎಂಬುದನ್ನು ಸೂಚಿಸಿದಂತಾಯಿತು. ಆ ಪುರುಷರು ಯಾರು ಎಂಬುದನ್ನು ಪ್ರಮಾಣಯುಕ್ತವಾಗಿ ಶ್ಲೋಕದ ತಾತ್ಪರ್ಯವನ್ನು ಹೇಳುತ್ತಾರೆ.

**ಅಗ್ನಿಪುತ್ರಾ ಮಹಾತ್ಮಾನಸ್ತಪಸಾ ಸ್ತ್ರೀತ್ವಮಾಪಿರೇ ।**
**ಭರ್ತಾರಂ ಚ ಜಗದ್ಯೋನಿಂ ವಾಸುದೇವಮಜಂ ವಿಭುಂ ॥**

**-ಇತಿ ಮಹಾಕೌರ್ಮೇ ।**

**ಮಹಾತ್ಮಾನಃ** ಮಹಾತ್ಮರಾದ **ಅಗ್ನಿಪುತ್ರಾಃ** ಅಗ್ನಿಮಕ್ಕಳು **ತಪಸಾ** ತಪಸ್ಸಿನಿಂದ **ಸ್ತ್ರೀತ್ವಂ** ಸ್ತ್ರೀತ್ವವನ್ನು **ಆಪಿರೇ** ಹೊಂದಿದರು **ಜಗದ್ಯೋನಿಂ** ಜಗತ್ತಿಗೆ ಕಾರಣನಾದ **ಅಜಂ** ಜನ್ಮರಹಿತನಾದ **ವಿಭುಂ** ಸ್ವಾಮಿಯಾದ **ವಾಸುದೇವಂ** ವಾಸುದೇವನನ್ನು **ಭರ್ತಾರಂ** ಗಂಡನನ್ನಾಗಿ ಪಡೆಯಲು ಎಂದು ಮಹಾಕೂರ್ಮಪುರಾಣದಲ್ಲಿದೆ.

ಸೂತ ಉವಾಚ -

**ಏವಂವಿಧಾ ಗದಂತೀನಾಂ ಸ ಗಿರಃ ಪುಣ್ಯಯೋಷಿತಾಮ್ ।**
**ನಿರೀಕ್ಷಣೇನಾಭಿನಂದನ್ ಸಸ್ಮಿತೇನ ಯಯೌ ಹರಿಃ ॥೩೨॥**

**ಏವಂವಿಧಾಃ** ಈ ರೀತಿ ವಿಚಿತ್ರವಾದ **ಗಿರಃ** ಮಾತುಗಳನ್ನು **ಗದಂತೀನಾಂ** ಹೇಳುತ್ತಿರುವ **ಪುಣ್ಯಯೋಷಿತಾಂ** ಪುಣ್ಯವಂತರಾದ ಸ್ತ್ರೀಯರ **ಸಸ್ಮಿತೇನ** ಮಂದಹಾಸಯುಕ್ತವಾದ **ನಿರೀಕ್ಷಣೇನ** ಕುಡಿನೋಟದಿಂದ **ಅಭಿನಂದನ್** ಅಭಿನಂದಿಸುವವನಾಗಿ **ಸಃ ಹರಿಃ** ಆ ಶ್ರೀಕೃಷ್ಣಪರಮಾತ್ಮನು **ಯಯೌ** ಹೋದನು.

**ಅಜಾತಶತ್ರುಃ ಪೃತನಾಂ ಗೋಪೀಥಾಯ ಮಧುದ್ವಿಷಃ ।**
**ಪರೇಭ್ಯಃ ಶಂಕಿತಃ ಸ್ನೇಹಾತ್ ಪ್ರಾಯುಂಕ್ತ ಚತುರಂಗಿಣೀಮ್ ॥೩೩॥**

**ಅಜಾತಶತ್ರುಃ** ಎಂದಿಗೂ ಶತ್ರುಗಳೇ ಇಲ್ಲದಿರುವ **ಸಃ ಹರಿಃ** ಆ ಶ್ರೀಕೃಷ್ಣನು **ಪರೇಭ್ಯಃ** ಶತ್ರುಗಳಿಂದ **ಶಂಕಿತಃ ಸನ್** ಶಂಕಿಸಿದವನಾಗಿ **ಗೋಪೀಥಾಯ** ರಕ್ಷಿಸುವದಕ್ಕಾಗಿ **ಚತುರಂಗಿಣೀಂ** ಸೇನೆಗೆ ಅಂಗವಾದ ಆನೆ, ಕುದುರೆ, ರಥ, ಕಾಲಾಳುಗಳುಳ್ಳ (ಹಸ್ತ್ಯಶ್ವರಥಪಾದಾತಂ ಸೇನಾಂಗಂ ಸ್ಯಾಚ್ಚತುರ್ವಿಧಂ ಇತಿ ಎಂಬುದು ಚತುರಂಗಿಣೀ ವಿಷಯದಲ್ಲಿ ಪ್ರಮಾಣ) **ಪೃತನಾಂ** ಸೇನೆಯನ್ನು **ಸ್ನೇಹಾತ್** ಪ್ರೀತಿಯಿಂದ (ಮಾಹಾತ್ಮ್ಯಜ್ಞಾನದಿಂದ ಎಂದರ್ಥವಲ್ಲ) **ಪ್ರಾಯುಂಕ್ತ** ನಿಯೋಜನೆ ಗೊಳಿಸಿದನು.

ಇಲ್ಲಿರುವ ಸ್ನೇಹಶಬ್ದದಿಂದ ಭಕ್ತಿಯನ್ನು ತೆಗೆದುಕೊಂಡು ಮಾಹಾತ್ಮ್ಯಜ್ಞಾನವುಳ್ಳವನಿಗೆ ಎಂದು ಸಂಶಯ ಕೂಡುವದಿಲ್ಲ ಎಂಬುದನ್ನು ವ್ಯಾಖ್ಯಾನಿಸುವರು.

ಸ್ನೇಹಮಾತ್ರಾತ್ ।

ಎಂಬ ತಾತ್ಪರ್ಯದ ಮೂಲಕ. ಇಲ್ಲಿ ಸ್ನೇಹಶಬ್ದಕ್ಕೆ ಭಕ್ತಿಯೆಂಬ ಅರ್ಥ ವಿವಕ್ಷಿತವಲ್ಲ.

**ಅಥ ದೂರಾಗತಾನ್ ಶೌರಿಃ ಕೌರವಾನ್ವಿದುರಾನ್ವಿತಾನ್ ।**
**ಸನ್ನಿವರ್ತ್ಯ ದೃಢಂ ಸ್ನಿಗ್ಧಾನ್ಪ್ರಾಯಾತ್ಸ್ವನಗರೀಂ ಪ್ರಿಯೈಃ ॥೩೪॥**

**ಅಥ** ಅನಂತರ **ವಿದುರಾನ್ವಿತಾನ್** ವಿದುರನಿಂದ ಕೂಡಿರುವ **ದೂರಾಗತಾನ್** ದೂರದಲ್ಲಿ ಬಂದಿರುವ **ಸ್ನಿಗ್ಧಾನ್** ಪ್ರೀತಿ ಪಾತ್ರರಾದ **ಕೌರವಾನ್** ಕೌರವರನ್ನು **ಶೌರಿಃ** ಶ್ರೀಕೃಷ್ಣನು **ದೃಢಂ** ದೃಢವಾಗಿ **ಸನ್ನಿವರ್ತ್ಯ** ತಿರುಗಿ ಕಳುಹಿಸಿ **ಪ್ರಿಯೈಃ** ಉದ್ಧವಾದಿಗಳಿಂದ ಕೂಡಿಕೊಂಡು **ಸ್ವನಗರೀಂ** ತನ್ನ ಪಟ್ಟಣವಾದ ದ್ವಾರಕೆಯನ್ನು ಕುರಿತು **ಪ್ರಾಯಾತ್** ಪ್ರಯಾಣ ಮಾಡಿದನು.

**ಕುರುಜಾಂಗಲಪಾಂಚಾಲಾನ್ ಶೂರಸೇನಾನ್ ಸಯಾಮುನಾನ್ ।**
**ಬ್ರಹ್ಮಾವರ್ತಂ ಕುರುಕ್ಷೇತ್ರಂ ಮತ್ಸ್ಯಾನ್ಸಾರಸ್ವತಾನಥ ॥೩೫॥**

**ಕುರುಜಾಂಗಲಪಾಂಚಾಲಾನ್** ಕುರುದೇಶ, ಜಾಂಗಲದೇಶ, ಪಾಂಚಾಲದೇಶಗಳನ್ನು **ಸಯಾಮುನಾನ್** ಯಮುನಾಸಂಬಂಧಿಯಾದ ದೇಶಗಳಿಂದ ಕೂಡಿದ **ಶೂರಸೇನಾನ್** ಶೂರಸೇನರಾಜನ ದೇಶಗಳನ್ನು **ಸಾರಸ್ವತಾನ್** ಸರಸ್ವತಿನದಿ ಸಂಬಂಧಿಯಾದ **ಮತ್ಸ್ಯಾನ್** ಮತ್ಸ್ಯದೇಶಗಳನ್ನು (ಕುರುಕ್ಷೇತ್ರವನ್ನು) **ಬ್ರಹ್ಮಾವರ್ತಂ** ಸರಸ್ವತೀ ಮತ್ತು ದೃಷದ್ವತೀ ನದೀ ಇವುಗಳ ಸಂಬಂಧಿಯಾದ ಪ್ರದೇಶಗಳನ್ನು **ಅಥ** ಅನಂತರ **ಮರುಧನ್ವಂ** ನೀರಿಲ್ಲದ ಪ್ರದೇಶವನ್ನು **ಸೌವೀರಾಭೀರಸೈಂಧವಾನ್** ಸೌವೀರದೇಶ, ಗೊಲ್ಲರದೇಶ, ಸಿಂಧುದೇಶಗಳನ್ನು **ಅತಿಕ್ರಮ್ಯ** ದಾಟಿ **ಹೇ ಭಾರ್ಗವ** ಶೌನಕರೇ **ಮನಾಕ್** ಸ್ವಲ್ಪ ಮಟ್ಟಿಗೆ **ವಿಭುಃ** ಸಮರ್ಥನಾದ **ಶ್ರಾಂತವಾಹಃ** ಶ್ರಮಹೊಂದಿರುವ ಕುದುರೆಗಳುಳ್ಳವನಾದ ಶ್ರೀಕೃಷ್ಣನು **ಆನರ್ತಾನ್** ದ್ವಾರಕಾಪ್ರದೇಶಗಳನ್ನು ಕುರಿತು **ಉಪಾಗಾತ್** ಬಂದನು.

**ತತ್ರ ತತ್ರ ಚ ತತ್ರತ್ಯೈರ್ಹರಿಃ ಪ್ರತ್ಯುದ್ಯತಾರ್ಹಣಃ ।**
**ಸಾಯಂ ಭೇಜೇ ದಿಶಂ ಪಶ್ಚಾದ್ಗವಿಷ್ಠೋ ಗಾಂ ಗತಸ್ತದಾ ॥೩೭॥**

**ತತ್ರ ತತ್ರ** ತಮ್ಮ ತಮ್ಮ ರಾಷ್ಟ್ರಗಳಲ್ಲಿ **ಚ** ಮತ್ತು **ತತ್ರತ್ಯೈಃ** ಅಲ್ಲಿರುವ ಜನರಿಂದ **ಪ್ರತ್ಯುದ್ಯತಾರ್ಹಣಃ** ಪೂಜೆಯ ಸಾಧನೆಗಳನ್ನು ತೆಗೆದುಕೊಂಡ (ಅಂದರೆ ಆಯಾ ಪ್ರದೇಶದ ಜನರಿಂದ ಪೂಜೆಯನ್ನು ಸ್ವೀಕರಿಸಿದ ಎಂದು ಭಾವ.)**ಹರಿಃ** ಶ್ರೀಕೃಷ್ಣನು **ಯದಾ** ಯಾವಾಗ **ಸಾಯಂ** ಸಂಧ್ಯಾಕಾಲದಲ್ಲಿ **ಪಶ್ಚಾದ್ ದಿಶಂ** ಪಶ್ಚಿಮದಿಕ್ಕನ್ನು **ಭೇಜೇ** ಹೊಂದಿದನೋ **ತದಾ** ಆ ಸಂಧ್ಯಾಕಾಲದಲ್ಲಿ **ಗವಿಷ್ಠಃ** ಸೂರ್ಯನು **ಗಾಂ ಗತಃ** ಪಶ್ಚಿಮಸಮುದ್ರವನ್ನು ಕುರಿತು ಬಂದನು.

ಈ ಶ್ಲೋಕದಲ್ಲಿರುವ ಗವಿಷ್ಠಶಬ್ದಕ್ಕೆ ಆದಿತ್ಯಎಂಬರ್ಥವು ಶ್ರುತಿಯಲ್ಲಿಯೂ ಇದೆ ಎಂಬುದನ್ನು ಹೇಳುವರು.

*ಭಾಗವತತಾತ್ಪರ್ಯ-*

**ಗವಿಷ್ಠ ಆದಿತ್ಯಃ । ಅಸೌ ವಾವಗವಿಷ್ಠೋ ಅಪ್ಸೂದೇತ್ಯಪ್ಸ್ವಸ್ತಮೇತಿ ಮಾಧ್ಯಂದಿನಶ್ರುತಿಃ ।**

**ಗವಿಷ್ಠಃ** ದ್ಯುಲೋಕದಲ್ಲಿ ಅಥವಾ ಸಮುದ್ರದಲ್ಲಿ ನಿಲ್ಲುತ್ತಾನೆ ಆದಕ್ಕಾಗಿ ಗವಿಷ್ಠ ಎಂದರೆ ಆದಿತ್ಯನೆಂದರ್ಥ ಇಲ್ಲಿ ಅಲುಕ್ಸಮಾಸವಾಗಿದೆ ಯುಧಿಷ್ಠಿರ ಎಂಬುವಲ್ಲಿ ಹೇಗೆ ಅಲುಕ್ ಸಮಾಸವೋ ಹಾಗೆಯೇ ಅಲುಕ್ ಸಮಾಸವಾಗಿದೆ.

**ಅಸೌ ಗವಿಷ್ಠಃ** ಈ ಆದಿತ್ಯನು **ಅಪ್ಸು** ಸಮುದ್ರದಲ್ಲಿ **ಉದೇತಿ** ಉದಯಿಸುತ್ತಾನೆ **ಅಪ್ಸು** ನೀರಿನಲ್ಲಿ **ಅಸ್ತಂ ಏತಿ** ಅಸ್ತಂಗತನಾಗುತ್ತಾನೆ ಪೂರ್ವಪಶ್ಚಿಮ ಸಮುದ್ರದ ತೀರದಲ್ಲಿರುವ ಜನರು ಸೂರ್ಯನು ಸಮುದ್ರದಲ್ಲಿ ಉದಯಿಸುತ್ತಾನೆ ಪಶ್ಚಿಮಸಮುದ್ರದಲ್ಲಿ ಸೂರ್ಯನು ಮುಳುಗುತ್ತಾನೆ ಎನ್ನುತ್ತಾರೆ ಎಂದು ಭಾವ. ಆದ್ದರಿಂದ ಆದಿತ್ಯನು ಪಶ್ಚಿಮಸಮುದ್ರವನ್ನು ಪ್ರವೇಶಿಸುವಂತೆ ಮುಳುಗುವಂತೆ ಜನರು ಕಾಣುತ್ತಾರೆ ಎಂದು ತಿಳಿಸಿದಂತಾಯಿತು.

**ಆನರ್ತಾನ್ಸ ಉಪವ್ರಜ್ಯ ಸ್ವೃದ್ಧಾನ್ಜನಪದಾನ್ಸ್ವಕಾನ್ ।**
**ದಧ್ಮೌ ದರವರಂ ತೇಷಾಂ ವಿಷಾದಂ ಶಮಯನ್ನಿವ ।।೩೮।।**

**ಸಃ** ಶ್ರೀಕೃಷ್ಣನು **ಸ್ವೃದ್ಧಾನ್** ಸಮೃದ್ಧವಾದ **ಸ್ವಕಾನ್** ತಮ್ಮ **ಜನಪದಾನ್** ಊರುಗಳಾದ **ಆನರ್ತಾನ್** ದ್ವಾರಕಾಪಟ್ಟಣವನ್ನು ಕುರಿತು **ಉಪವ್ರಜ್ಯ** ಬಂದು **ತೇಷಾಂ** ದ್ವಾರಕಾಪಟ್ಟಣದ ವಾಸಿಗಳಾದ ಜನರ **ವಿಷಾದಂ** ರಾಜರು ಇಲ್ಲ ಎಂಬ ಭಯವನ್ನು ದುಃಖವನ್ನು **ಶಮಯನ್ ಇವ** ಪರಿಹಾರಮಾಡುವವರಂತೆ **ದರವರಂ** ಶ್ರೇಷ್ಠವಾದ ಪಾಂಚಜನ್ಯಶಂಖವನ್ನು **ದಧ್ಮೌ** ಊದಿದನು.

**ಸ ಉಚ್ಚಕಾಶೇ ಧವಳೋದರೋ ದರೋ**
**ಪ್ಯುರುಕ್ರಮಸ್ಯಾಧರಶೋಣಶೋಣಿಮಾ ।**
**ದಾಧ್ಮಾಯಮಾನಃ ಕರಕಂಜಸಂಪುಟೇ**
**ಯಥಾಬ್ಜಷಂಡೇ ಕಲಹಂಸ ಉತ್ಸ್ವನಃ ॥೩೯॥**

**ಧವಳೋದರಃ ಅಪಿ** ಶುಭ್ರವಾದ ಉದರಭಾಗವಿದ್ದರೂ **ಉರುಕ್ರಮಸ್ಯ** ಶ್ರೀಕೃಷ್ಣನ **ಅಧರಶೋಣಶೋಣಿಮಾ** ತುಟಿಯ ಕೆಂಪುತನದಿಂದ ಕೆಂಪಾಗಿರುವ **ದಾಧ್ಮಾಯಮಾನಃ** ಮೇಲಿಂದ ಮೇಲೆ ಊದಲ್ಪಡುವ **ಸಃ ದರಃ** ಆ ಪಾಂಚಜನ್ಯ ಶಂಖವು **ಅಬ್ಜಷಂಡೇ** ಕೆಂಪಾದ ಕಮಲಗಳ ಸಮೂಹದ ಮಧ್ಯದಲ್ಲಿ **ಉತ್ಸ್ವನಃ** ಜೋರಾಗಿ ಧ್ವನಿಮಾಡುವ **ಕಲಹಂಸಃ ಯಥಾ** ರಾಜಹಂಸ ಪಕ್ಷಿಯು ಹೇಗೆ ಧ್ವನಿಮಾಡಬೇಕೋ **ತಥಾ** ಹಾಗೆಯೇ **ಕರಕಂಜಸಂಪುಟೇ** ಶ್ರೀಕೃಷ್ಣನ ಕರಕಮಲಗಳಲ್ಲಿ **ಉಚ್ಚಕಾಶೇ** ಶೋಭಿಸಿತು.

**ತಮುಪಶ್ರುತ್ಯ ನಿನದಂ ಜಗದ್ಭವಭಯಾಪಹಮ್ ।**
**ಪ್ರತ್ಯುದ್ಯಯುಃ ಪ್ರಜಾಃ ಸರ್ವಾಃ ಭರ್ತೃದರ್ಶನಲಾಲಸಾಃ ॥೪೦॥**

**ಭರ್ತೃದರ್ಶನಲಾಲಸಾಃ** ಶ್ರೀಕೃಷ್ಣನ ದರ್ಶನಕ್ಕಾಗಿ ಉತ್ಸುಕರಾದ **ಸರ್ವಾಃ ಪ್ರಜಾಃ** ದ್ವಾರಕೆಯ ಎಲ್ಲ ಪ್ರಜೆಗಳು **ಜಗದ್ಭವಭಯಾಪಹಂ** ಜಗತ್ತಿನ ಸಂಸಾರದ ಭಯವನ್ನು ನಾಶಮಾಡುವ **ತಂ ನಿನದಂ** ಆ ಪಾಂಚಜನ್ಯಶಂಖದ ಧ್ವನಿಯನ್ನು **ಉಪಶ್ರುತ್ಯ** ಕೇಳಿ **ಪ್ರತ್ಯುದ್ಯಯುಃ** ಓಡಿ ಬಂದರು.

**ನತ್ರೋಪನೀತಬಲಯೋ ರವೇರ್ದೀಪಮಿವಾದೃತಾಃ ।**
**ಆತ್ಮಾರಾಮಂ ಪೂರ್ಣಕಾಮಂ ನಿಜಲಾಭೇನ ನಿತ್ಯದಾ ॥೪೧॥**

**ನಿತ್ಯದಾ** ಯಾವಾಗಲೂ **ನಿಜಲಾಭೇನ** ಸ್ವರೂಪಭೂತಾನಂದದ ಪ್ರಾಪ್ತಿಯಿಂದ **ಪೂರ್ಣಕಾಮಂ** ಪರಿಪೂರ್ಣಕಾಮನೆಗಳುಳ್ಳ **ಆತ್ಮಾರಾಮಂ** ತನ್ನಲ್ಲಿಯೇ ಚೆನ್ನಾಗಿ ಸಂತೋಷಪಡುವ ಅಥವಾ ಕ್ರೀಡಿಸುವ ಶ್ರೀಕೃಷ್ಣನನ್ನು ಕುರಿತು **ರವೇಃ** ತೇಜೋಮೂರ್ತಿಯಾದ ಸೂರ್ಯನಿಗೆ **ದೀಪಂ ಇವ** ದೀಪವನ್ನು ತರುವಂತೆ **ಉಪನೀತಬಲಯಃ** ಕಾಣಿಕೆಗಳನ್ನು ತಂದಿರುವ ಪ್ರಜರು ಅಥವಾ ಪೂಜೆಯ ಸಾಧನೆಗಳನ್ನು ತಂದಿರುವ ಪ್ರಜರು **ಆದೃತಾಃ** ಶ್ರೀಕೃಷ್ಣನನ್ನು ಗೌರವಿಸಿದರು ಅಥವಾ ಪೂಜಿಸಿದರು.

**ಪ್ರೀತ್ಯುತ್ಫುಲ್ಲಮುಖಾಃ ಪ್ರೋಚುರ್ಹರ್ಷಗದ್ಗದಯಾ ಗಿರಾ ।**
**ಪಿತರಂ ಸರ್ವಸುಹೃದಮವಿತಾರಮಿವಾರ್ಭಕಾಃ ॥೪೨॥**

**ಪ್ರೀತ್ಯುತ್ಫುಲ್ಲಮುಖಾಃ** ಪ್ರೀತಿಯಿಂದ ಅತ್ಯಂತ ಉತ್ಸಾಹಿತವಾದ ಮುಖವುಳ್ಳ ಪ್ರಜೆಗಳು **ಹರ್ಷಗದ್ಗದಯಾ** ಸಂತೋಷದಿಂದ ಕಂಠಬಿಗಿದು ಬಂದ **ಗಿರಾ** ಮಾತಿನಿಂದ **ಅವಿತಾರಂ** ಜ್ಞಾನ ಮೊದಲಾದವುಗಳನ್ನು ಕೊಡುವ ಮೂಲಕ ರಕ್ಷಕನಾದ **ಸರ್ವಸುಹೃದಂ** ಎಲ್ಲ ಸಜ್ಜನರಿಗೆ ಅನಿಮಿತ್ತಬಂಧುವಾದ ಶ್ರೀಕೃಷ್ಣನನ್ನು **ಅರ್ಭಕಾಃ** ಮಕ್ಕಳು **ಪಿತರಂ** ಇವ ತಂದೆಯನ್ನು ಮಾತನಾಡಿಸುವಂತೆ **ಪ್ರೋಚುಃ** ಮಾತನಾಡಿಸಿದರು.

**ನತಾಃ ಸ್ಮ ತೇ ನಾಥ ಸದಾಂಘ್ರಿಪಂಕಜಂ**
**ವಿರಿಂಚವೈರಿಂಚಸುರೇಂದ್ರವಂದಿತಮ್ ।**
**ಪರಾಯಣಂ ಕ್ಷೇಮಮಿಹೇಚ್ಛತಾಂ ಪರಂ**
**ನ ಯತ್ರ ಕಾಲಃ ಪ್ರಭವೇತ್ಪರಪ್ರಭುಃ ॥೪೩॥**

**ಹೇ ನಾಥ** ಶ್ರೀಕೃಷ್ಣಪರಮಾತ್ಮನೇ **ವಿರಿಂಚವೈರಿಂಚಸುರೇಂದ್ರವಂದಿತಂ** ಬ್ರಹ್ಮದೇವರು, ರುದ್ರದೇವರು, ಇಂದ್ರದೇವರು ಇವರಿಂದ ನಮಸ್ಕೃತನಾದ **ಇಹ** ಚೇತನಸಮುದಾಯದಲ್ಲಿ **ಪರಂ ಕ್ಷೇಮಂ** ಮೋಕ್ಷವನ್ನು **ಇಚ್ಛತಾಂ** ಅಪೇಕ್ಷಿಸುವ ಭಕ್ತರಿಗೆ **ಪರಾಯಣಂ** ಉತ್ತಮವಾದ ಆಶ್ರಯವು ಆಗಿದೆ **ಯತ್ರ** ಯಾವ ಪಾದಕಮಲಗಳಲ್ಲಿ **ಪರಪ್ರಭುಃ ಕಾಲಃ** ಬ್ರಹ್ಮಾದಿಗಳಿಗೆ ಜನನಮರಣಾದಿಗಳನ್ನು ಉಂಟುಮಾಡುವ ಕಾಲವು **ನ ಪ್ರಭವೇತ್** ಜನನಮರಣಾದಿಗಳನ್ನು ಉಂಟುಮಾಡುವದಿಲ್ಲ **ತೇ** ನಿನ್ನ **ಅಂಘ್ರಿಪಂಕಜಂ** ಪಾದಕಮಲಗಳನ್ನು **ಸದಾ** ಯಾವಾಗಲು **ನತಾಃ ಸ್ಮ** ನಮಸ್ಕರಿಸುತ್ತೇನೆ.

**ಭವಾಯ ನಸ್ತ್ವಂ ಭವ ವಿಶ್ವಭಾವನ**
**ತ್ವಮೇವ ಮಾತಾತ್ಮಸುಹೃತ್ಪಿತಾ ಪತಿಃ ।**
**ತ್ವಂ ಸದ್ಗುರುರ್ನಃ ಪರಮಂ ಚ ದೈವತಂ**
**ಯಸ್ಯಾನುವೃತ್ತ್ಯಾ ಕೃತಿನೋ ಬಭೂವಿಮ ॥೪೪॥**

**ಹೇ ವಿಶ್ವಭಾವನ** ಜಗತ್ತಿಗೆ ಅಸ್ತಿತ್ವ ಮೊದಲಾದವುಗಳನ್ನು ಕೊಡುವವನೇ ಅಥವಾ ಜಗತ್ತನ್ನು ಹುಟ್ಟಿಸುವವನೇ **ತ್ವಂ** ನೀನು **ನಃ** ನಮ್ಮ **ಭವಾಯ** ಜ್ಞಾನಭಕ್ತಿ ಮೊದಲಾದ ಮಂಗಲಕ್ಕಾಗಿ **ಭವ** ಇದ್ದಿ **ಯಸ್ಯ ತವ** ಯಾವ ಶ್ರೀಕೃಷ್ಣನಾದ ನಿನ್ನ **ಅನುವೃತ್ತ್ಯಾ** ಸೇವಾರೂಪ ಅನುವೃತ್ತಿಯಿಂದ **ಕೃತಿನಃ** ಪುಣ್ಯವಂತರು **ಬಭೂವಿಮ** ಆಗಿದ್ದೇವೆ ಸ

**ತ್ವಂ** ಅಂತಹ ನೀನು **ಪರಮಂ** ಶ್ರೇಷ್ಠನಾದ **ದೈವತಂ** ಇಷ್ಟದೇವತೆಯು **ನಃ** ನಮಗೆ **ಸದ್ಗುರುಃ** ಯಾವದೋಷವಿಲ್ಲದ ಗುರುಗಳ ಸ್ಥಾನದಲ್ಲಿರುವಿ **ತ್ವಮೇವ** ನೀನೇ **ಮಾತಾ** ಅಭೀಷ್ಟವನ್ನು ಕೊಡುವ ಮೂಲಕ ತಾಯಿಯಾಗಿರುವಿ **ಆತ್ಮಸುಹೃತ್ಪತಿಃ** ನಿನ್ನಿಂದಲೇ ಒಳ್ಳೆಯ ಹೃದಯದವರಾಗಿದ್ದೇವೆ **ಪಿತಾ** ರಕ್ಷಕನು ಅಥವಾ ನಮ್ಮ ಸ್ವಾಮಿಯು ನೀನೆ ಆಗಿದ್ದಿ ಎಂದು ಭಾವ.

**ಅಹೋ ಸನಾಥಾ ಭವತಾ ಸ್ಮ ಯದ್ವಯಂ**
**ತ್ರೈವಿಷ್ಟಪಾನಾಮಪಿ ದೂರದರ್ಶನಮ್ ।**
**ಪ್ರೇಮಸ್ಮಿತಸ್ನಿಗ್ಧನಿರೀಕ್ಷಣಾನನಂ**
**ಪಶ್ಯೇಮ ರೂಪಂ ತವ ಸರ್ವಸೌಭಗಮ್ ॥೪೫॥**

**ತ್ರೈವಿಷ್ಟಪಾನಾಂ ಅಪಿ** ಸ್ವರ್ಗದಲ್ಲಿರುವ ಇಂದ್ರಾದಿದೇವತೆಗಳಿಗೂ **ದೂರದರ್ಶನಂ ದೂರತಃ** ಬಹುಕಾಲದವರೆಗಿನ ತಪಸ್ಸೆಂಬ ಸಂಪತ್ತಿನಿಂದ **ದರ್ಶನಂ** ಕಾಣಲ್ಪಡುವ (ದೇವತೆಗಳಿಗೂ ಸರಳವಾಗಿ ಕಾಣುವುದಿಲ್ಲ ಭಗವಂತನ ರೂಪ ಎಂದು ಭಾವ.) ಎಂದು ಅರ್ಥೈಸುವದರಿಂದ ದರ್ಶನಕ್ಕೆ ಸಾಧನಸಾಮಗ್ರಿಯು ಯಾವುದು ಎಂದು ಅಭಿಪ್ರಾಯಪಟ್ಟಂತಾಯಿತು. ಹೊರತು ದರ್ಶನವೇ ಇಲ್ಲ ಎಂದರ್ಥವಲ್ಲ. ಅಂತಹ ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ ಎಂದು ಅಭಿಪ್ರಾಯ. ಇದರಿಂದ ದರ್ಶನದಲ್ಲಿ ತಾರತಮ್ಯವಿದೆ ಎಂದು ಹೇಳಿದಂತಾಯಿತು. **ಪ್ರೇಮಸ್ಮಿತಸ್ನಿಗ್ಧನಿರೀಕ್ಷಣಾನನಂ** ಪ್ರೀತಿಯಿಂದ ಯುಕ್ತವಾದ ಮಂದಹಾಸ, ಮತ್ತು ಪ್ರೀತಿಯುಕ್ತವಾದ ನೋಡುವಿಕೆ ಯಾವ ಮುಖದಲ್ಲಿದೆ ಅಂತಹ ಮುಖವುಳ್ಳ **ಸರ್ವಸೌಭಗಂ** ಪೂರ್ಣವಾಗಿ ಸುಂದರವಾದ **ಯತ್** ಯಾವ ಕಾರಣದಿಂದ **ತವ ರೂಪಂ** ನಿನ್ನ ರೂಪವನ್ನು **ಪಶ್ಯೇಮ** ನೋಡುತ್ತೇವೋ **ತಸ್ಮಾತ್** ಆ ಕಾರಣದಿಂದಲೇ **ವಯಂ** ನಾವು **ಸನಾಥಾಃ** ರಕ್ಷಕನಿಂದೊಡಗೂಡಿದವರು ಅಥವಾ ಸ್ವಾಮಿಯುಳ್ಳವರು **ಭವತಾ ಸ್ಮಃ** ಆಗುವೆವು **ಅಹೋ** ಇದು ನಮ್ಮ ಭಾಗ್ಯ.

**ಯರ್ಹ್ಯಮ್ಬುಜಾಕ್ಷಾಂಚತಿ ಮಾಧವೋ ಭವಾನ್**
**ಕುರೂನ್ಮಧೂನ್ವಾಥ ಸುಹೃದ್ದಿದೃಕ್ಷಯಾ ।**
**ತತ್ರಾಬ್ದಕೋಟಿಪ್ರತಿಮಃ ಕ್ಷಣೋ ಭವೇದ್**
**ರವಿಂ ವಿನಾಽಕ್ಷ್ಣಾಮಿವ ನಸ್ತವಾಚ್ಯುತ ॥೪೬॥**

**ಹೇ ಅಂಬುಜಾಕ್ಷ** ಕಮಲದಂತೆ ಕಣ್ಣುಳ್ಳ ಶ್ರೀಕೃಷ್ಣನೇ **ಅಥ** ಅನಂತರ **ಯರ್ಹಿ** ಯಾವಾಗ **ಮಾಧವಃ** ಲಕ್ಷ್ಮೀಪತಿಯಾದ **ಭವಾನ್** ನೀನು **ಸುಹೃದ್ದಿದೃಕ್ಷಯಾ** ಪಾಂಡವರನ್ನು ನೋಡಬೇಕೆಂಬ ಇಚ್ಛೆಯಿಂದ **ಕುರೂನ್** ಮಧುರೆಯಿಂದ ಕುರುದೇಶವನ್ನು ಕುರಿತು **ಅಂಚತಿ** ಹೋಗುತ್ತಿ **ಮಧೂನ್** ಕುರುದೇಶದಿಂದ ಮಧುರಾಪಟ್ಟಣವನ್ನು ಕುರಿತು **ಸುಹೃದ್ದಿದೃಕ್ಷಯಾ** ಯಾದವರನ್ನು ನೋಡಬೇಕೆಂಬ ಇಚ್ಛೆಯಿಂದ **ಅಂಚತಿ** ಬರುತ್ತಿ **ಹೇ ಅಚ್ಯುತ** ಶ್ರೀಕೃಷ್ಣನೇ **ತತ್ರ** ಆ ಅವಸ್ಥೆಯಲ್ಲಿ **ರವಿಂ ವಿನಾ** ಕಣ್ಣಿಗೆ ಅಭಿಮಾನಿಯಾದ ಸೂರ್ಯನು ಒಳಗೆ ಅಥವಾ ಹೊರಗೆ ಪ್ರಕಾಶವನ್ನು ಬೀರುವ ಸೂರ್ಯನಿಲ್ಲದೆ **ಅಕ್ಷ್ಣಾಂ ಇವ** ಕಣ್ಣುಗಳಿಗೆ ನೋಡಲು ಸಾಧ್ಯವಾಗುವದಿಲ್ಲವೋ **ತಥಾ** ಅದರಂತೆಯೇ **ತವ** ನೀನಿಲ್ಲದೆ **ನಃ** ನಮಗೆ **ಏಕಃ ಕ್ಷಣಃ** ಒಂದು ಕ್ಷಣವೂ **ಅಬ್ದಕೋಟಿಪ್ರತಿಮಃ** ಕೋಟಿ ವರ್ಷಗಳಿಗೆ ಸಮವಾದದ್ದು **ಭವೇತ್** ಆಗುತ್ತದೆ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಮಧೂನಾಮೇವ ಎಂದು ಗ್ರಹಣಮಾಡಿದರೆ ಮಧೂನ್ ಅಂಚತಿ ಎಂಬುದು ವ್ಯರ್ಥ. ಕುರೂಣಾಂ ಏವ ಎಂದು ಗ್ರಹಣಮಾಡಿದರೆ ಕುರೂನ್ ಅಂಚತಿ ಎಂಬುದು ವ್ಯರ್ಥವಾಗುತ್ತದೆ. ಆದ್ದರಿಂದ ನಃ ಎಂಬುದನ್ನು ಗ್ರಹಣಮಾಡಬೇಕು ಎಂಬುದನ್ನು ತೋರಿಸುತ್ತಾರೆ.

**ಕುರೂಣಾಂ ಮಧೂನಾಂ ಚ ನಃ ।**

ನ ಎಂಬುದನ್ನು ಅನುವಾದಿಸಿ ಕುರೂಣಾಂ ಮಧೂನಾಂ ಚ ಎಂದು ಎರಡರಲ್ಲಿ ಯಾವುದೋ ಒಂದು ಸ್ವೀಕರಿಸಿದರೆ ಅನನ್ವಿತವಾಯಿತು ಎಂದು ದೋಷಬರಬಹುದು ಆದ್ದರಿಂದ ಯದಾ ಕುರೂನ್ ಅಂಚತಿ ತದಾ ನ ಮಧೂನಾಂ ಯದಾ ಮಧೂನ್ ಅಂಚತಿ ತದಾ ನಃ ಕುರೂಣಾಂ ಎಂದು ಮೂಲದಲ್ಲಿರುವ ಪದಗಳಿಗೆ ಅನ್ವಯವನ್ನು ಮಾಡಬೇಕು.

**ಇತಿ ಚೋದೀರಿತಾ ವಾಚಃ ಪ್ರಜಾನಾಂ ಭಕ್ತವತ್ಸಲಃ ।**
**ಶೃಣ್ವಾನೋ ಅನುಗ್ರಹಂ ದೃಷ್ಟ್ಯಾ ವಿತನ್ವನ್ಪ್ರಾವಿಶತ್ಪುರೀಮ್ ॥೪೭॥**

**ಇತಿ** ಪೂರ್ವದಲ್ಲಿ ಹೇಳಿದ ರೀತಿಯಾಗಿ **ಉದೀರಿತಾಃ ವಾಚಃ** ಸ್ತುತಿರೂಪವಾದ ಮಾತುಗಳನ್ನು **ಶೃಣ್ವಾನಃ** ಕೇಳುವ **ಭಕ್ತವತ್ಸಲಃ** ತನ್ನ ಭಕ್ತರನ್ನು ಪ್ರೀತಿಸುವ ಶ್ರೀಕೃಷ್ಣನು

**ಪ್ರಜಾನಾಂ** ಪ್ರಜೆಗಳಿಗೆ **ದೃಷ್ಟ್ಯಾ** ತನ್ನ ಕುಡಿನೋಟನಿಂದ **ಅನುಗ್ರಹಂ** ಆಶೀರ್ವಾದವನ್ನು **ವಿತನ್ವನ್** ಮಾಡುವವನಾಗಿ **ಪುರೀಂ** ದ್ವಾರಕಾಪಟ್ಟಣವನ್ನು **ಪ್ರಾವಿಶತ್** ಪ್ರವೇಶಿಸಿದನು.

ದ್ವಾರಕಾಪಟ್ಟಣವನ್ನು ಐದು ಶ್ಲೋಕಗಳಿಂದ ವರ್ಣಿಸುವರು.

**ಮಧುಭೋಜದಶಾರ್ಹಾರ್ಹಕುಕುರಾಂಧಕವೃಷ್ಣಿಭಿಃ ।**
**ಆತ್ಮತುಲ್ಯಬಲೈರ್ಗುಪ್ತಾಂ ನಾಗೈರ್ಭೋಗವತೀಮಿವ ॥೪೮॥**

**ಆತ್ಮತುಲ್ಯಬಲೈಃ** ತನಗೆ ಸಮವಾದ ಬಲವಿರುವ (ಇದು ಅಧಿಕ ದೃಷ್ಟಾಂತ ಯಾಕೆಂದರೆ ಕೃಷ್ಣನಿಗೆ ಸಮವಾದ ಬಲ ಯಾರಿಗೂ ಇಲ್ಲ) **ಮಧುಭೋಜ ದಶಾರ್ಹಾರ್ಹಕುಕುರಾಂಧಕವೃಷ್ಣಿಭಿಃ** ಮಧುಭೋಜ, ದಶಾರ್ಹ, ಅರ್ಹ, ಕುಕುರ, ಅಂಧಕ ಎಂಬ ಹೆಸರಿನ ಯಾದವರಿಂದ **ಗುಪ್ತಾಂ** ರಕ್ಷಿತವಾದ **ಪುರೀಂ** ದ್ವಾರಕಾಪಟ್ಟಣವನ್ನು **ನಾಗೈಃ** ಸರ್ಪಗಳಿಂದ **ಭೋಗವತೀಂ ಇವ** ಭೋಗವತೀ ಎಂಬ ಹೆಸರಿರುವ ಪಟ್ಟಣವನ್ನು ಪ್ರವೇಶಿಸುವಂತೆ **ಪ್ರಾವಿಶತ್** ಪ್ರವೇಶಿಸಿದನು.

**ಸರ್ವರ್ತುಂ ಸರ್ವವಿಭವೈಃ ಪುಣ್ಯವೃಕ್ಷಲತಾಶ್ರಮೈಃ ।**
**ಉದ್ಯಾನೋಪವನಾರಾಮೈರ್ವೃತಪದ್ಮಾಕರಶ್ರಿಯಮ್ ॥೪೯॥**

**ಸರ್ವರ್ತುಸರ್ವವಿಭವೈಃ** ವಸಂತಾದಿ ಎಲ್ಲ ಋತುಗಳಲ್ಲಿ ಎಲ್ಲ ವಿಧವಾದ ಫಲಪುಷ್ಪಸಂಪತ್ತುಗಳಿಂದ **ಪುಣ್ಯವೃಕ್ಷಲತಾಶ್ರಮೈಃ** ಅಶ್ವತ್ಥಮೊದಲಾದ ಗಿಡಗಳು, ಲತಾಮಂಟಪಗಳು, ಆಶ್ರಮಗಳು ಇವುಗಳಿಂದ **ಉದ್ಯಾನೋಪವನಾರಾಮೈಃ ಉದ್ಯಾನ** ಫಲಗಳೇ ಪ್ರಧಾನವಾದ ವನ, **ಉಪವನ** ಪುಷ್ಪಗಳೇ ಮುಖ್ಯವಾಗಿರುವ ವನ, **ಆರಾಮು** ಆಟವಾಡುವದೇ ಪ್ರಧಾನವಾಗಿರುವ ವನ, ಇವುಗಳಿಂದ **ಧೃತಪದ್ಮಾಕರಶ್ರಿಯಂ** ಕಮಲಗಳಿಗೆ ಆಶ್ರಯವಾದ ಸರೋವರಗಳ ಕಾಂತಿಯನ್ನೊಳಗೊಂಡ **ಪುರೀಂ** ದ್ವಾರಕಾಪಟ್ಟಣವನ್ನು **ಪ್ರಾವಿಶತ್** ಪ್ರವೇಶಿಸಿದನು.

**ಗೋಪುರದ್ವಾರಮಾರ್ಗೇಷು ಕೃತಕೌತುಕತೋರಣಾಮ್ ।**
**ಚಿತ್ರಧ್ವಜಪತಾಕಾಗ್ರೈರಂತಃಪ್ರತಿಹತಾತಪಾಮ್ ॥೫೦॥**

**ಗೋಪುರದ್ವಾರಮಾರ್ಗೇಷು ಗೋಪುರ** ಪಟ್ಟಣದ ಬಾಗಿಲುಗಳು, **ದ್ವಾರ** ಮನೆಯ ಬಾಗಿಲುಗಳು, ರಾಜಮಾರ್ಗಗಳು ಇವುಗಳಲ್ಲಿ **ಕೃತಕೌತುಕತೋರಣಾಂ** ಮಾಡಲ್ಪಟ್ಟ ಮಹೋತ್ಸವದ ತೋರಣಗಳುಳ್ಳ(ಮಹೋತ್ಸವವನ್ನು ಆಚರಿಸುವದಕ್ಕೆ ತೋರಣಗಳನ್ನು

ಕಟ್ಟಿದ) **ಚಿತ್ರಧ್ವಜಪತಾಕಾಗ್ರೈಃ** ಬಣ್ಣ ಬಣ್ಣದ ಧ್ವಜಪತಾಕೆಗಳ ಮುಂಭಾಗಗಳಿಂದ **ಅಂತಃಪ್ರತಿಹತಾತಪಾಂ** ತಡೆಯಲ್ಪಟ್ಟ ಬಿಸಿಲುಳ್ಳ **ಪುರೀಂ** ದ್ವಾರಕಾಪಟ್ಟಣವನ್ನು **ಪ್ರಾವಿಶತ್** ಪ್ರವೇಶಿಸಿದನು.

**ಸಮ್ಮಾರ್ಜಿತಮಹಾಮಾರ್ಗರಥ್ಯಾಪಣಕಚತ್ವರಾಮ್ ।**
**ಸಿಕ್ತಾಂ ಗಂಧಜಲೈರುಪ್ತಾಂ ಫಲಪುಷ್ಪಾಕ್ಷತಾಂಕುರೈಃ ॥೩೦॥**

**ಸಮ್ಮಾರ್ಜಿತಮಹಾಮಾರ್ಗರಥ್ಯಾಪಣಕಚತ್ವರಾಂ ಸಮ್ಮಾರ್ಜಿತ** ಕಸಗೂಡಿಸಿ ಸ್ವಚ್ಛಗೊಳಿಸಿದ **ಮಹಾಮಾರ್ಗ** ರಾಜಮಾರ್ಗಗಳು **ರಥ್ಯಾ** ರಥಹೊರಡುವ ಮಾರ್ಗಗಳು **ಆಪಣಕ** ಮಾರಲು ಯೋಗ್ಯವಾದ ಪದಾರ್ಥ ಮಾರಾಟ ಮಾಡುವ ಸ್ಥಳಗಳು **ಚತ್ವರಂ** ನಾಲ್ಕು ದಿಕ್ಕುಗಳಿಗೆ ಹೋಗುವ ದಾರಿಗಳು(ಚತುಷ್ಪಥ) ಇವುಗಳೆಲ್ಲವನ್ನು ಒಳಗೊಂಡ **ಗಂಧಜಲೈಃ** ಸುಗಂಧಮಯದ್ರವ್ಯಗಳಿಂದ ಕೂಡಿದ ಜಲದಿಂದ **ಸಿಕ್ತಾಂ** ಸಿಂಪಡಿಸಿದ **ಫಲಪುಷ್ಪಾಕ್ಷತಾಂಕುರೈಃ** ಹಣ್ಣು, ಹೂವು, ಬಾಡದ ಕಿಸಲಯಗಳು ಇವುಗಳಿಂದ **ಉಪ್ತಾಂ** ಬಿತ್ತರಿಸಲ್ಪಟ್ಟ **ಪುರೀಂ** ದ್ವಾರಕಾಪಟ್ಟಣವನ್ನು **ಪ್ರಾವಿಶತ್** ಪ್ರವೇಶಿಸಿದನು.

**ದ್ವಾರಿ ದ್ವಾರಿ ಗೃಹಾಣಾಂ ಚ ದಧ್ಯಕ್ಷತಪೇಕ್ಷುಭಿಃ ।**
**ಅಲಂಕೃತಾಂ ಪೂರ್ಣಕುಂಭೈರ್ಬಲಿಭಿರ್ಧೂಪದೀಪಕೈಃ ॥೩೧॥**

**ಗೃಹಾಣಾಂ** ಮನೆಗಳ **ದ್ವಾರಿ ದ್ವಾರಿ** ಪ್ರತಿಯೊಂದು ಬಾಗಿಲುಗಳಲ್ಲಿ **ದಧ್ಯಕ್ಷತಫಲೇಕ್ಷುಭಿಃ** ಮೊಸರು, ಬಹಳ ಫಲಗಳು, ಕಬ್ಬಿನರಸ ಇವುಗಳಿರುವ **ಪೂರ್ಣಕುಂಭೈಃ** ತುಂಬಿದ ಕೊಡಗಳಿಂದ **ಬಲಿಭಿಃ** ದೃಷ್ಟಿದೋಷಪರಿಹಾರಕ್ಕಾಗಿ ಶ್ರೀಕೃಷ್ಣನಿಗೆ ಪರಿಭ್ರಮಣಮಾಡುವದಕ್ಕಾಗಿ ಸಿದ್ಧಪಡಿಸಿದ ಹೂವುಗಳಿಂದ ಕೂಡಿದ ಅನ್ನ ಮೊದಲಾದ ಬಲಿಗಳಿಂದ **ಧೂಪದೀಪಕೈಃ** ದಶಾಂಗದೀಪಗಳಿಂದ **ಅಲಂಕೃತಾಂ** ಶೃಂಗಾರಗೊಂಡ **ಪುರೀಂ** ದ್ವಾರಕೆಯನ್ನು **ಪ್ರಾವಿಶತ್** ಪ್ರವೇಶಿಸಿದನು.

**ನಿಶಮ್ಯ ಕೃಷ್ಣಮಾಯಾಂತಂ ವಸುದೇವೋ ಮಹಾಮನಾಃ ।**
**ಅಕ್ರೂರಶ್ಚೋಗ್ರಸೇನಶ್ಚ ರಾಮಶ್ಚಾದ್ಭುತವಿಕ್ರಮಃ ॥೩೨॥**

**ಪ್ರದ್ಯುಮ್ನಶ್ಚಾರುದೇಷ್ಣಶ್ಚ ಸಾಂಬೋ ಜಾಂಬವತೀಸುತಃ ।**
**ಪ್ರಹರ್ಷವೇಗೋಚ್ಛ್ವಸಿತಶಯನಾಸನಭೋಜನಾಃ ॥೩೩॥**

**ವಾರಣೇಂದ್ರಂ ಪುರಸ್ಕೃತ್ಯ ಬ್ರಾಹ್ಮಣೈಃ ಸಸುಮಂಗಲೈಃ ।**
**ಶಂಖತೂರ್ಯನಿನಾದೇನ ಬ್ರಹ್ಮಘೋಷೇಣ ಚಾದೃತಾಃ ।**
**ಪ್ರತ್ಯುಜಗ್ಮೂ ರಥೈರ್ಹೃಷ್ಟಾಃ ಪ್ರಣಯಾಗತಸಾಧ್ವಸಾಃ ॥೫೫॥**

**ವಾರಮುಖ್ಯಾಶ್ಚ ಶತಶೋ ಯಾನೈಸ್ತದ್ದರ್ಶನೋತ್ಸುಕಾಃ ।**
**ಚಲತ್ಕುಂಡಲನಿರ್ಭಾತಕಪೋಲವದನಶ್ರಿಯಃ ॥೫೬॥**

**ಮಹಾಮನಾಃ** ವಿಶಾಲಮನಸ್ಸಿರುವ **ವಸುದೇವಃ** ವಸುದೇವನು **ಅಕ್ರೂರಃ** ಅಕ್ರೂರನು **ಚ** ಮತ್ತು **ಉಗ್ರಸೇನಃ** ಉಗ್ರಸೇನನು **ಚ** ಮತ್ತು **ಅದ್ಭುತವಿಕ್ರಮಃ** ಆಶ್ಚರ್ಯಕರವಾದ ಪರಾಕ್ರಮವುಳ್ಳ **ರಾಮಃ** ಬಲರಾಮದೇವರು **ಆಯಾಂತಂ** ಬರುತ್ತಿರುವ **ಕೃಷ್ಣಂ** ಶ್ರೀಕೃಷ್ಣನನ್ನು **ನಿಶಮ್ಯ** ಕೇಳಿ **ಪ್ರದ್ಯುಮ್ನಃ** ಪ್ರದ್ಯುಮ್ನನು **ಚ** ಮತ್ತು **ಚಾರುದೇಷ್ಣಃ** ಚಾರುದೇಷ್ಣನು **ಜಾಂಬವತೀಸುತಃ** ಜಾಂಬವತಿಯ ಮಗನಾದ **ಸಾಂಬಃ** ಸಾಂಬನು ಇವರು **ಪ್ರಹರ್ಷವೇಗೋಚ್ಛ್ವಸಿತ ಶಯನಾಸನಭೋಜನಾಃ** ಸಂತೋಷದ ಭರದಲ್ಲಿ ಸಹಜವಾಗಿಯೇ ಬಿಟ್ಟಿರುವ ನಿದ್ರೆ, ಸಿಂಹಾಸನದಲ್ಲಿ ಕೂಡಿವಿಕೆ ಮತ್ತು ಭೋಜನಗಳುಳ್ಳವರು **ಪ್ರಣಯಾಗತಸಾಧ್ವಸಾಃ** ಸುಖಕರವಾಗಿ ಮಾರ್ಗವನ್ನು ಕ್ರಮಿಸಿ ಬಂದಿರುವ **ಚಲತ್ಕುಂಡಲನಿರ್ಭಾತಕಪೋಲವದನಶ್ರಿಯಃ** ಕಿವಿಯ ಓಲೆಗಳ ಚಲಿಸುವಿಕೆಯಿಂದ ಶೋಭಿಸುವ ಕಪೋಲಗಳು ಮತ್ತು ಮುಖ ಇವುಗಳ ಕಾಂತಿಯುಳ್ಳ **ಶತಶಃ ಯಾನೈಃ** ನೂರಾರು ವಾಹನಗಳಿಂದ **ತದ್ದರ್ಶನೋತ್ಸುಕಾಃ** ಶ್ರೀಕೃಷ್ಣನ ದರ್ಶನವನ್ನು ಮಾಡಬೇಕೆಂಬ ಉತ್ಸಾಹದಿಂದ ಕೂಡಿದ **ವಾರಮುಖ್ಯಾಃ** ಶ್ರೇಷ್ಠರಾದ ವೇಶ್ಯಾಸ್ತ್ರೀಯರು **ಸಸುಮಂಗಲೈಃ** ಸುಮಂಗಲೀಸ್ತ್ರೀಯರಿಂದ ಸಹಿತರಾದ **ಬ್ರಾಹ್ಮಣೈಃ** ಬ್ರಾಹ್ಮಣರಿಂದ **ವಾರಣೇಂದ್ರಂ** ಮುತ್ತುಗಳಿಂದ ಯುಕ್ತವಾದ ಪೂರ್ಣಕುಂಭವನ್ನು **ಪುರಸ್ಕೃತ್ಯ** ಮುಂದೆ ಮಾಡಿಕೊಂಡು **ಶಂಖತೂರ್ಯನಿನಾದೇನ** ಶಂಖ, ನಗಾರಿಗಳ ಧ್ವನಿಯಿಂದ **ಚ** ಮತ್ತು **ಬ್ರಹ್ಮಘೋಷೇಣ** ವೇದಮಂತ್ರಪಠಣದಿಂದ **ಹೃಷ್ಟಾಃ** ಸಂತುಷ್ಟರಾದ **ಆದೃತಾಃ** ಆದರದಿಂದ ಕೂಡಿದ ಅವರೆಲ್ಲರು **ರಥೈಃ** ರಥಗಳಿಂದ ಕೂಡಿ **ಪ್ರತ್ಯುಜ್ಜಗ್ಮುಃ** ಶ್ರೀಕೃಷ್ಣನ ಸ್ವಾಗತಕ್ಕಾಗಿ ಎದುರು ಹೋದರು.

**ನಟನರ್ತಕಗಂಧರ್ವಾಃ ಸೂತಮಾಗಧವಂದಿನಃ ।**
**ಗಾಯಂತಿ ಚೋತ್ತಮಶ್ಲೋಕಚರಿತಾನ್ಯದ್ಭುತಾನಿ ಚ ॥೫೭॥**

**ನಟನರ್ತಕಗಂಧರ್ವಾಃ ನಟ** ಅಭಿನಯದಿಂದ ಶೃಂಗಾರಮೊದಲಾದ ಚೇಷ್ಟೆಗಳನ್ನು ಮಾಡುವ **ನರ್ತಕ** ಹಾಡಿಗನುಗುಣವಾಗಿ ಕುಣಿಯುವವನು **ಗಂಧರ್ವಾಃ** ನಿಷಾದರ್ಷಗಾಂಧಾರಷಡ್ಜಮಧ್ಯಮಧೈವತಾಃ ಮೊದಲಾದ ಸ್ವರಬದ್ಧವಾಗಿ ಗಾನಮಾಡುವರಲ್ಲಿ ಕುಶಲರು **ಸೂತಮಾಗಧವಂದಿನಃ ಸೂತ** ಪುರಾಣಗಳ ಅರ್ಥವನ್ನು ಹೇಳುವ ಮೂಲಕ ಸ್ತೋತ್ರಮಾಡುವವರು, **ಮಾಗಧ** ವಂಶದವರ ಪರಾಕ್ರಮಾದಿಗಳ ಪ್ರಶಂಸೆಯನ್ನು ಮಾಡುವವರು **ವಂದಿನಃ** ಶುದ್ಧವಾದ ಜ್ಞಾನವುಳ್ಳವರು **ಚ** ಮತ್ತು ಪ್ರಸಂಗಕ್ಕೆ ಸರಿಯಾದ ಮಾತುಗಳನ್ನಾಡುವವರು **ಅದ್ಭುತಾನಿ** ಆಶ್ಚರ್ಯವನ್ನುಂಟು ಮಾಡುವ **ಉತ್ತಮಶ್ಲೋಕಚರಿತಾನಿ** ಉತ್ತಮರಾದ ರಾಜರ ಚರಿತ್ರೆಗಳನ್ನು **ಗಾಯಂತಿ** ಹಾಡಿಹೊಗಳುತ್ತಾರೆ.

**ಭಗವಾಂಸ್ತತ್ರ ಬಂಧೂನಾಂ ಪೌರಾಣಾಮನುವರ್ತಿನಾಮ್ ।**
**ಯಥಾ ವಿಧ್ಯುಪಸಂಗಮ್ಯ ಸರ್ವೇಷಾಂ ಮಾನಮಾದಧೇ ॥೩೮॥**

**ತತ್ರ** ಆ ವಸುದೇವಾದಿಗಳು ಬರುತ್ತಿರಲು **ಭಗವಾನ್** ಶ್ರೀಕೃಷ್ಣನು **ಅನುವರ್ತಿನಾಂ** ಅನುಸರಿಸಿ ಬರುತ್ತಿರುವ **ಪೌರಾಣಾಂ** ದ್ವಾರಕೆಯಲ್ಲಿರುವ ಜನರಿಗೆ **ಸರ್ವೇಷಾಂ ಬಂಧೂನಾಂ** ಎಲ್ಲ ಬಂಧುಗಳಿಗೆ **ಯಥಾವಿಧಿ** ವಿಧ್ಯುಕ್ತವಾಗಿ **ಉಪಸಂಗಮ್ಯ** ಸಮೀಪಕ್ಕೆ ಬಂದ ಮೇಲೆ **ಮಾನಂ** ಯಾರಿಗೆ ಯಾವ ರೀತಿಯಾದ ಗೌರವವನ್ನು ಮಾಡಬೇಕೋ ಆ ರೀತಿಯಾದ ಸ್ವಾಗತವನ್ನು **ಆದಧೇ** ಮಾಡಿದನು.

ಯಾವುಗಳಿಂದ ಗೌರವವನ್ನು ಸಲ್ಲಿಸಿದ ಎಂಬುದನ್ನು ಹೇಳುತ್ತಾರೆ

**ಪ್ರಹ್ವಾಭಿವಂದನಾಶ್ಲೇಷಕರಸ್ಪರ್ಶಸ್ಮಿತೇಕ್ಷಣೈಃ ।**
**ಆಶ್ವಭ್ಯ ಆಶ್ವಪಾಕೇಭ್ಯಃ ವರೈಶಾಭಿಮತೈರ್ವಿಭುಃ ॥೩೯॥**

**ಪ್ರಹ್ವಾಭಿವಂದನಾಶ್ಲೇಷಕರಸ್ಪರ್ಶಾಸ್ಮಿತೇಕ್ಷಣೈಃ ಪ್ರಹ್ವ** ವಿನಯ **ಅಭಿವಂದನ** ತಲೆಬಾಗಿ ನಮಸ್ಕಾರ **ಆಶ್ಲೇಷ** ಆಲಿಂಗನ **ಕರಸ್ಪರ್ಶ** ಹಸ್ತಲಾಘವ **ಸ್ಮಿತ** ಮಂದಹಾಸ **ಈಕ್ಷಣೈಃ** ನೋಟಗಳಿಂದ **ಅಭಿಮತೈಃ ವರೈಃ** ಅವರವರ ಇಷ್ಟಾರ್ಥಗಳನ್ನು ಕೊಡುವದರ ಮೂಲಕ **ಆಶ್ವಭ್ಯಃ** ನಾಯಿಮೊದಲಾದ ಪ್ರಾಣಿಗಳಿಗೂ **ಆ ಶ್ವಪಾಕೇಭ್ಯಃ** ನಾಯಿಯನ್ನು ಬೇಯಿಸಿ ತಿನ್ನುವ ಚಂಡಾಲನವರೆಗೂ ಇರುವ ಎಲ್ಲರಿಗೂ **ವಿಭುಃ** ಸಮರ್ಥನಾದ ಶ್ರೀಕೃಷ್ಣನು **ಮಾನಂ** ಅವರಿಗೆ ಸರಿಯಾದ ಮರ್ಯಾದೆಯನ್ನು **ಆದಧೇ** ಮಾಡಿದನು.

**ಸ್ವಯಂ ಚ ಗುರುಭಿರ್ವಿಪ್ರೈಸ್ಸದಾರೈಃ ಸ್ಥವಿರೈರಪಿ ।**
**ಆಶೀರ್ಭಿರ್ಯುಜ್ಯಮಾನೋ ಅನ್ಯೈರ್ಬಂಧುಭಿಶ್ಚಾವಿಶತ್ಪುರಮ್ ॥೬೦॥**

**ಚ** ಮತ್ತು **ಸ್ವಯಂ** ಶ್ರೀಕೃಷ್ಣನು **ಸ್ಥವಿರೈಃ** ವೃದ್ಧರಿಂದಲೂ **ಸದಾರೈಃ** ಹೆಂಡಂದಿರಿಂದ ಸಹಿತರಾದ **ಗುರುಭಿಃ** ಗುರುಗಳಿಂದ **ಆಶೀರ್ಭಿಃ** ಆಶೀರ್ವಾದಗಳಿಂದ **ಯುಜ್ಯಮಾನಃ** ಕೂಡಿದವನಾಗಿ **ಅನ್ಯೈಃ** ಶುದ್ಧಜ್ಞಾನವುಳ್ಳ ಜ್ಞಾನಿಗಳಿಂದ **ಚ** ಮತ್ತು **ಬಂಧುಭಿಃ** ಬಂಧುಗಳಿಂದ ಕೂಡಿ **ಪುರಂ** ದ್ವಾರಕಾಪಟ್ಟಣವನ್ನು **ಪ್ರಾವಿಶತ್** ಪ್ರವೇಶಿಸಿದನು.

**ರಾಜಮಾರ್ಗಂ ಗತೇ ಕೃಷ್ಣೇ ದ್ವಾರಕಾಯಾಃ ಕುಲಸ್ತ್ರಿಯಃ ।**
**ಹರ್ಮ್ಯಾಣ್ಯಾರುರುಹುರ್ವಿಪ್ರಾಸ್ತದೀಕ್ಷಣಮಹೋತ್ಸವಾಃ ॥೬೧॥**

**ರಾಜಮಾರ್ಗಂ** ರಾಜಮಾರ್ಗವನ್ನು ಕುರಿತು **ಕೃಷ್ಣೇ ಗತೇ ಸತಿ** ಶ್ರೀಕೃಷ್ಣನು ಹೋಗುತ್ತಿರಲು **ದ್ವಾರಕಾಯಾಃ** ದ್ವಾರಕಾಪಟ್ಟಣದ **ತದೀಕ್ಷಣಮಹೋತ್ಸವಾಃ** ಶ್ರೀಕೃಷ್ಣನ ದರ್ಶನವೇ ದೊಡ್ಡ ಉತ್ಸವವಾಗಿಯುಳ್ಳ **ಕುಲಸ್ತ್ರಿಯಃ** ಕುಲಸ್ತ್ರೀಯರು **ವಿಪ್ರಾಃ** ಬ್ರಾಹ್ಮಣರು **ಹರ್ಮ್ಯಾಣಿ** ಮೇಲ್ಮಾಳಿಗೆಯನ್ನು **ಆರುರುಹುಃ** ಹತ್ತಿದರು.

ಶ್ರೀಕೃಷ್ಣನ ದರ್ಶನ ಅನೇಕ ಬಾರಿ ಆದರೂ ಹಿಂದೆ ಕಾಣದಿರುವ ಏನೋ ಹೊಸತನಯಿದೆ ಎಂದು ಅತ್ಯಂತಭಾವುಕರಾಗುವರು ಎಂಬುದನ್ನು ಹೇಳುವರು.

**ನಿತ್ಯಂ ನಿರೀಕ್ಷಮಾಣಾನಾಂ ಯದ್ಯಪಿ ದ್ವಾರಕೌಕಸಾಮ್ ।**
**ನ ವಿತೃಪ್ಯಂತಿ ಹಿ ದೃಶಃ ಶ್ರಿಯೋ ಧಾಮಾಂಗಮುಚ್ಯುತಮ್ ॥೬೨॥**

**ಶ್ರಿಯಃ** ಲಕ್ಷ್ಮೀದೇವಿಗೆ **ಧಾಮಾಂಗಂ** ಸ್ಥಾನವು ದೇಹವಾಗಿಯುಳ್ಳ (ತನ್ನ ದೇಹದಲ್ಲಿ ಲಕ್ಷ್ಮೀದೇವಿಗೆ ಸ್ಥಾನವನ್ನು ಕೊಟ್ಟವನು ಎಂದು ಭಾವ) **ಅಚ್ಯುತಂ** ಶ್ರೀಕೃಷ್ಣನನ್ನು **ನಿತ್ಯಂ** ಯಾವಾಗಲು **ನಿರೀಕ್ಷಮಾಣಾನಾಂ** ನೋಡುತ್ತಿರುವ **ದ್ವಾರಕೌಕಸಾಂ ಅಪಿ** ದ್ವಾರಕಾಪಟ್ಟಣದ ಜನರ **ಯದ್ಯಪಿ ದೃಶಃ** ಕಣ್ಣುಗಳು ಕಂಡರೂ **ನ ವಿತೃಪ್ಯಂತಿ** ಶ್ರೀಕೃಷ್ಣನ ದರ್ಶನ ಸಾಕು ಎಂದನಿಸುವದಿಲ್ಲ. **ಹಿ** ಆಶ್ಚರ್ಯ.

ಅತಿಯಾದ ಕಾಂತಿಯು ಇವನಲ್ಲಿಯೇ ಯಾವುದರಿಂದ ಆಕ್ಷೇಪಿಸಿದರೆ ಅದಕ್ಕೆ ಹೇಳುವರು.

**ಶ್ರಿಯೋ ನಿವಾಸೋ ಯಸ್ಯೋರಃ ಪಾನಪಾತ್ರಂ ಮುಖಂ ದೃಶಾಮ್ ।**
**ಬಾಹವೋ ಲೋಕಪಾಲಾನಾಂ ಸಾರಂಗಾಣಾಂ ಪ್ರದಾಂಬುಜಮ್ ॥೬೩॥**

**ಶ್ರಿಯಃ** ಲಕ್ಷ್ಮೀದೇವಿಗೆ **ಯಸ್ಯ** ಯಾವ ಭಗವಂತನ **ಉರಃ** ವಕ್ಷಸ್ಥಲವು **ನಿವಾಸಃ** ಇರುವದಕ್ಕೆ ಸ್ಥಾನವು **ಯಸ್ಯ** ಯಾವ ಭಗವಂತನ **ಮುಖಂ** ಮುಖವು **ದೃಶಾಂ** ಎಲ್ಲ ಪ್ರಾಣಿಗಳ ದೃಷ್ಟಿಗೆ **ಪಾನಪಾತ್ರಂ** ಸೌಂದರ್ಯ ಎಂಬ ಅಮೃತಪಾನಕ್ಕೆ ಪಾತ್ರೆಯು **ಯಸ್ಯ** ಯಾವ ಭಗವಂತನ **ಬಾಹವಃ** ಬಾಹುಗಳು **ಲೋಕಪಾಲಾನಾಂ** ಲೋಕಪಾಲಕರಾದ ಇಂದ್ರಾದಿಗಳಿಗೆ **ನಿವಾಸಃ** ಬಲಸ್ಥಾನವಾಗಿದೆ **ಸಾರಂಗಾಣಾಂ** ಶ್ರೇಷ್ಠನಾದ ಬ್ರಹ್ಮನನ್ನು ಕುರಿತು ಹೊರಡುವ ಸಾರಗ್ರಾಹಿಗಳಾದ ಬ್ರಹ್ಮಾದಿಜ್ಞಾನಿಗಳಿಗೆ **ಯಸ್ಯ** ಯಾವ ಭಗವಂತನ **ಪದಾಂಬುಜಂ** ಪಾದಕಮಲಗಳು **ನಿವಾಸಃ** ಶ್ರೇಷ್ಠವಾದ ಆಶ್ರಯವಾಗಿವೆ.

**ಸಿತಾತಪತ್ರವ್ಯಜನೈರುಪಸ್ಕೃತಃ**
**ಪ್ರಸೂನವರ್ಷೈರಭಿವರ್ಷಿತಃ ಪಥಿ ।**
**ಪಿಶಂಗವಾಸಾ ವನಮಾಲಯಾ ಬಭೌ**
**ಘನೋ ಯಥಾರ್ಕೋಡುಪಚಾಪವೈದ್ಯುತೈಃ ॥೬೪॥**

**ಅರ್ಕೋಡುಪಚಾಪವೈದ್ಯುತೈಃ** ಸೂರ್ಯನು, ನಕ್ಷತ್ರಗಳ ರಕ್ಷಕನಾದ ಚಂದ್ರ, ಕಾಮನಬಿಲ್ಲು(ಇಂದ್ರಧನಸ್ಸು) ವಿದ್ಯುತ್ತಿನ ತೇಜಸ್ಸು ಇವುಗಳಿಂದ ಕೂಡಿದ **ಘನಃ ಯಥಾ** ಯಾವ ರೀತಿಯಾಗಿ ಮೇಘವು **ಬಭೌ** ಶೋಭಿಸಿತೋ **ತಥಾ** ಅದೇ ರೀತಿಯಾಗಿ **ಸಿತಾತಪತ್ರವ್ಯಜನೈಃ** ಶುಭ್ರವಾದ ಶ್ವೇತಚ್ಛತ್ರ ಮತ್ತು ವ್ಯಜನಗಳಿಂದ **ಉಪಸ್ಕೃತಃ** ಅಲಂಕಾರಗೊಂಡ **ಅರ್ಕೋಡುಪಚಾಪವೈದ್ಯುತೈಃ** ಶ್ವೇತಚ್ಛತ್ರದ ಮೇಲೆ ಸೂರ್ಯನ ಬಿಂಬವು, ಎರಡು ಬದಿಯಲ್ಲಿರುವ ವ್ಯಜನಗಳಲ್ಲಿ ಚಂದ್ರನು, ಸುತ್ತಲು ನಕ್ಷತ್ರಗಳು ಮಧ್ಯದಲ್ಲಿ ಕೂಡಿರುವ ಎರಡು ಬಿಲ್ಲುಗಳು, ಮತ್ತು ಸ್ಥಿರವಾಗಿರುವ ಕಾಂತಿಯು ಇವುಗಳಿಂದ ಕೂಡಿದ **ಪಥಿ** ರಾಜಮಾರ್ಗದಲ್ಲಿ **ಪ್ರಸೂನವರ್ಷೈಃ** ಪುಷ್ಪಗಳ ಮಳೆಯಿಂದ **ಅಭಿವರ್ಷಿತಃ** ಅಭಿಷೇಕಗೊಂಡ ಶ್ರೀಕೃಷ್ಣನು **ಪಿಶಂಗವಾಸಾ** ಪೀತಾಂಬರದಿಂದ **ವನಮಾಲಯಾ** ವನತುಳಸಿಮಾಲೆಯಿಂದ **ಬಭೌ** ಸ್ವಾತಂತ್ರ್ಯಾದಿಗುಣಗಳಿಂದ ಶೋಭಿಸಿದನು.

ಯಾವುದಕ್ಕೆ ಯಾವುದು ದೃಷ್ಟಾಂತ ಆಗುವುದು ಎಂಬುದನ್ನು ಹೇಳುತ್ತಾರೆ ಈ ರೀತಿಯಾಗಿ ವಿಭಾಗಿಸಿ ತಿಳಿದು ಕೊಳ್ಳಬೇಕು.

**ವಿಶೇಷ :- ಶ್ವೇತಛತ್ರವು** ಮಧ್ಯಾಹ್ನದ ಸೂರ್ಯನ ಸ್ಥಾನದಲ್ಲಿದೆ. **ವ್ಯಜನವು** ಚಂದ್ರನಸ್ಥಾನದಲ್ಲಿದೆ. **ಪೀತಾಂಬರವು** ಕಾಮನಬಿಲ್ಲಿನ ಸ್ಥಾನದಲ್ಲಿದೆ **ವನಮಾಲೆಯು** ವಿದ್ಯುತ್ತಿನ ಸ್ಥಾನದಲ್ಲಿದೆ **ಶ್ರೀಕೃಷ್ಣನು** ಮೇಘಸ್ಥಾನದಲ್ಲಿದ್ದಾನೆ **ಕಿರೀಟವು** ಸೂರ್ಯನ ಸ್ಥಾನದಲ್ಲಿದೆ. **ಶ್ವೇತಛತ್ರವು** ಚಂದ್ರನ ಸ್ಥಾನದಲ್ಲಿದೆ. ಮಂದಾರಾದಿ ಪುಷ್ಪಗಳ **ಮಾಲೆಯು** ಕಾಮನ ಬಿಲ್ಲಿನ ಸ್ಥಾನದಲ್ಲಿದೆ. **ಬೀಸಣಿಕೆಯು** ವಿದ್ಯುತ್ತಿನ ಸ್ಥಾನದಲ್ಲಿದೆ.

**ಪ್ರವಿಷ್ಟಸ್ತು ಗೃಹಂ ಪಿತ್ರೋಃ ಪರಿಷ್ವಕ್ತಃ ಸ್ವಮಾತೃಭಿಃ ।**
**ವವಂದೇ ಶಿರಸಾ ಸಪ್ತ ದೇವಕೀಪ್ರಮುಖಾ ಮುದಾ ॥೬೫॥**

**ಪಿತ್ರೋಃ** ತಂದೆತಾಯಿಯರ **ಗೃಹಂ** ಮನೆಯನ್ನು **ಪ್ರವಿಷ್ಟಃ** ಪ್ರವೇಶಿಸಿರುವ ಶ್ರೀಕೃಷ್ಣನು **ಸ್ವಮಾತೃಭಿಃ** ತನ್ನ ತಾಯಂದಿರಿಂದ **ಪರಿಷ್ವಕ್ತಃ** ಆಲಿಂಗಿತನಾದನು **ಮುದಾ** ಸಂತೋಷದಿಂದ **ದೇವಕೀಪ್ರಮುಖಾ** ದೇವಕೀ ಮೊದಲಾದ **ಸಪ್ತ** ಏಳು ಜನರನ್ನು **ಶಿರಸಾ** ತಲೆಬಾಗಿ **ವವಂದೇ** ನಮಸ್ಕರಿಸಿದನು.

**ತಾಃ ಪುತ್ರಮಂಕಮಾರೋಪ್ಯ ಸ್ನೇಹಸ್ನುತಪಯೋಧರಾಃ ।**
**ಹರ್ಷವಿಹ್ವಲಿತಾತ್ಮಾನಃ ಸಿಷಿಚುರ್ನೇತ್ರಜೈರ್ಜಲೈಃ ॥೬೬॥**

**ತಾಃ** ಆ ಎಲ್ಲ ತಾಯಂದಿರು **ಪುತ್ರಂ** ಪುನ್ನಾಮಕ ನರಕದಿಂದ ರಕ್ಷಿಸುವ ಆದ್ದರಿಂದ ಪುತ್ರ ಎಂದು ಕರೆಸಿಕೊಂಡ ಶ್ರೀಕೃಷ್ಣನನ್ನು **ಅಂಕಂ** ತೊಡೆಯ ಮೇಲೆ **ಆರೋಪ್ಯ** ಕೂಡಿಸಿಕೊಂಡು **ಸ್ನೇಹಸ್ನುತಪಯೋಧರಾಃ** ಸ್ನೇಹಜಲದಿಂದ ಸ್ನಾನ ಮಾಡಿಸುವ **ಹರ್ಷವಿಹ್ವಲಿತಾತ್ಮಾನಃ** ಸಂತೋಷದಿಂದ ವಶವಾಗಿರುವ ಅಂತಃಕರಣವುಳ್ಳ ಆ ತಾಯಂದಿರು **ನೇತ್ರೈಃ** ಕಣ್ಣುಗಳ **ಜಲೈಃ** ನೀರುಗಳಿಂದ **ಸಿಷಿಚುಃ** ಅಭಿಷೇಕಗೈದರು.

**ಅಥಾವಿಶತ್ಸ್ವಭವನಂ ಸರ್ವಕಾಮಾಮನುತ್ತಮಮ್ ।**
**ಪ್ರಾಸಾದಾ ಯತ್ರ ಪತ್ನೀನಾಂ ಸಹಸ್ರಾಣಿ ಚ ಷೋಡಶ ।**
**ಶತಮಷ್ಟೋತ್ತರಂ ಚೈವ ವಜ್ರವೈಡೂರ್ಯಮಂಡಿತಾಃ ॥೬೭॥**

**ಅಥ** ಅನಂತರ **ಯತ್ರ** ಯಾವ ಪಟ್ಟಣದಲ್ಲಿ **ವಜ್ರವೈಡೂರ್ಯಮಂಡಿತಾಃ** ವಜ್ರಾಭರಣಗಳಿಂದ ಅಲಂಕೃತರಾದ **ಷೋಡಶಸಹಸ್ರಾಣಿ ಅಷ್ಟೋತ್ತರಂ ಶತಂ** ಹದಿನಾರು ಸಾವಿರದ ನೂರ ಎಂಟು **ಪತ್ನೀನಾಂ** ಹೆಂಡಂದಿರ **ಪ್ರಾಸಾದಾಃ** ಅಂತಃಪುರಗಳು **ಅನುತ್ತಮಂ** ಯಾವುದಕ್ಕಿಂತ ಉತ್ತಮವಾದದ್ದಿಲ್ಲವೋ **ಸರ್ವಕಾಮಂ**

ಇಷ್ಟವಾದ ಎಲ್ಲ ವಸ್ತುಗಳನ್ನೊಳಗೊಂಡ **ಸ್ವಭವನಂ** ತನ್ನ ಮನೆಯನ್ನು **ಆವಿಶತ್** ಪ್ರವೇಶಿಸಿದನು.

**ಪತ್ನ್ಯಃ ಪತಿಂ ಪ್ರೋಷ್ಯ ಗೃಹಾನುಪಾಗತಂ**
**ವಿಲೋಕ್ಯ ಸಂಜಾತಮನೋಮಹೋತ್ಸವಾಃ ।**
**ಉತ್ತಸ್ಥುರಾರಾತ್ಸಹಸಾ ಆಸನಾಶ್ರಯಃ**
**ಸಾಕಂಪಿತವ್ರೀಡಿತಲೋಚನಾನನಾಃ ॥೬೮॥**

**ಆಸನಾಶ್ರಯಾಃ** ಆಸನವನ್ನು ಆಶ್ರಯಿಸಿರುವ (ಆಸನಗಳಲ್ಲಿ ಕುಳಿತಿರುವ ಎಂದು ಭಾವ) **ಸಾಕಂಪಿತವ್ರೀಡಿತಲೋಚನಾನನಾಃ** ನಾಚಿಕೆಯಿಂದ ನಡುಗುತ್ತಿರುವ ಕಣ್ಣು ಮತ್ತು ಮುಖಗಳುಳ್ಳ **ಸಂಜಾತಮನೋಮಹೋತ್ಸವಾಃ** ಮನಸ್ಸಿನಲ್ಲಿಯೇ ಉಂಟಾದ ಮಹೋತ್ಸವವುಳ್ಳ **ಪತ್ನ್ಯಃ** ಶ್ರೀಕೃಷ್ಣನ ಹೆಂಡಂದಿರು **ಪ್ರೋಷ್ಯ** ಬೇರೆದೇಶದಲ್ಲಿ ವಾಸಮಾಡಿ **ಗೃಹಾನ್** ಮನೆಗೆ **ಉಪಾಗತಂ** ಬಂದಿರುವ **ಪತಿಂ** ಗಂಡನಾದ ಶ್ರೀಕೃಷ್ಣನನ್ನು **ಆರಾತ್** ದೂರದಿಂದಲೇ **ವಿಲೋಕ್ಯ** ನೋಡಿ **ಸಹಸಾ ಉತ್ತಸ್ಥುಃ** ತಕ್ಷಣದಲ್ಲಿಯೇ ಎದ್ದು ನಿಂತರು.

**ತಮಾತ್ಮಜೈರ್ದೃಷ್ಟಿಭಿರಂತರಾತ್ಮನಾ**
**ದುರಂತಭಾವಾಃ ಪರಿರೇಭಿರೇ ಪತಿಮ್ ।**
**ನಿರುದ್ಧಮಪ್ಯಸ್ರವದಂಬು ನೇತ್ರಯೋಃ**
**ವಿಲಜ್ಜತೀನಾಂ ಭೃಗುವರ್ಯ ವೈಕ್ಲವಾತ್ ॥೬೯॥**

**ಹೇ ಭೃಗುವರ್ಯ** ಶೌನಕರೇ ದೃಷ್ಟಾಂತ **ದುರಂತಭಾವಾಃ** ಗಂಭೀರವಾದ ಅಭಿಪ್ರಾಯವುಳ್ಳ ಅಥವಾ ಅಪರಿಮಿತಸ್ನೇಹವುಳ್ಳ ಅಥವಾ ಅನೇಕ ರೀತಿಯಾದ ಶೃಂಗಾರವುಳ್ಳ ಅಥವಾ ಬೇರೆಯವರಿಂದ ತಿಳಿಯದ ಅಭಿಪ್ರಾಯವುಳ್ಳ **ಆತ್ಮಜೈಃ** ತಮ್ಮ **ದೃಷ್ಟಿಭಿಃ** ಕಣ್ಣುಗಳಿಂದ **ತಂ ಪತಿಂ** ಬರುತ್ತಿರುವ ತಮ್ಮ ಗಂಡನನ್ನು **ಅಂತರಾತ್ಮನಾ** ಮನಸ್ಸಿನಿಂದ **ಪರಿರೇಭಿರೇ** ಆಲಿಂಗನಮಾಡಿಕೊಂಡರು **ವವೈಕ್ಲವಾತ್** ಪರನಾದ ಶ್ರೀಕೃಷ್ಣನ ವಶನಾಗಿ **ವಿಲಜ್ಜತೀನಾಂ** ನಾಚಿಕೆಗೊಂಡಿರುವ ಶ್ರೀಕೃಷ್ಣನ ಪತ್ನಿಯರಿಗೆ **ನೇತ್ರಯೋಃ** ಕಣ್ಣುಗಳಲ್ಲಿರುವ **ಅಂಬು** ನೀರು **ನಿರುದ್ಧಂ ಅಪಿ** ತಡೆಯಲ್ಪಟ್ಟರು ಕೂಡ **ಅಸ್ರವತ್** ಹರಿದುಬಂದಿತು ಎಚ್ಚರದಿಂದ ಕೇಳಿರಿ ಎಂದು ತಿಳಿಸುವದಕ್ಕಾಗಿ ಮಧ್ಯದಲ್ಲಿ ಸಂಬೋಧನೆ ಮಾಡಿದ್ದು ಹೇ ಭೃಗುವರ್ಯ ಎಂದು. ಮುಂದೆಲ್ಲಾದರು ಸಂಬೋಧಿಸಿದರೆ ಇದೇ ರೀತಿಯಾಗಿ ತಿಳಿದುಕೊಳ್ಳಿರಿ.

ಪೂರ್ವದಲ್ಲಿ ನಡೆದದ್ದು ಎಲ್ಲವು ಆಶ್ಚರ್ಯ ಎಂದು ಹೇಳುತ್ತಾರೆ.

**ಯದ್ಯಪ್ಯಸೌ ಪಾರ್ಶ್ವಗತೋ ರಹೋಗತ**
**ಸ್ತಾಸಾಂ ತಥಾಪ್ಯಂಘ್ರಿಯುಗಂ ನವಂ ನವಮ್ ।**
**ಪದೇ ಪದೇ ಕಾ ವಿರಮೇತ್ ತತ್ಪದಾತ್**
**ಚಲಾಪಿ ಯಂ ಶ್ರೀರ್ನ ಜಹಾತಿ ಕರ್ಹಿಚಿತ್ ॥೭೦॥**

**ಅಸೌ** ಶ್ರೀಕೃಷ್ಣನು **ಪಾರ್ಶ್ವಗತಃ ಯದ್ಯಪಿ** ಸಮೀಪದಲ್ಲಿ ಇದ್ದರೂ ಕೂಡ **ತಥಾಪಿ** ಅದರಲ್ಲಿಯು **ತಾಸಾಂ** ಆ ಹೆಂಡಂದಿರ ಜೊತೆಗೆ **ರಹೋಗತಃ** ರಹಸ್ಯವಾಗಿ ಇದ್ದರು **ಪದೇ ಪದೇ** ಪ್ರತಿಕ್ಷಣದಲ್ಲಿಯು **ಅಂಘ್ರಿಯುಗಂ** ಎರಡು ಪಾದಗಳು **ನವಂ ನವಂ** ಹೊಸಹೊಸದಾಗಿ ಇತ್ತು. ಆ ಭಗವಂತನ ಪಾದಗಳಲ್ಲಿ ಇರುವದು ಸಾಕು ಎಂದನಿಸುತ್ತಿರಲಿಲ್ಲ ಎಂದು ಭಾವ. **ಶ್ರೀಃ** ಲಕ್ಷ್ಮೀದೇವಿಯು **ಚಲಾ ಅಪಿ** ಚಂಚಲಳಾದರು ಕೂಡ **ಯಂ** ಯಾವ ಶ್ರೀಕೃಷ್ಣನ ಪಾದಗಳನ್ನು **ಕರ್ಹಿಚಿತ್** ಯಾವಕಾಲದಲ್ಲಿಯು **ನ ಜಹಾತಿ** ಬಿಟ್ಟಿರುವದಿಲ್ಲ ಎಂದ ಮೇಲೆ **ತತ್ಪದಾತ್** ಆ ಶ್ರೀಕೃಷ್ಣನ ಪಾದಗಳನ್ನು ಬಿಟ್ಟು **ಕಾ** ಚಂಚಲಳಾದ ಯಾವ ಸ್ತ್ರೀಯು **ವಿರಮೇತ್** ಈ ಕೃಷ್ಣನ ಪಾದಗಳ ಸಂಗ ಬೇಡೆನ್ನುವಳು.

ಶ್ರೀಕೃಷ್ಣನ ಚರಿತ್ರೆಯನ್ನು ಸಂಕ್ಷೇಪವಾಗಿ ಮುಗಿಸುವರು.

**ಏವಂ ನೃಪಾಣಾಂ ಕ್ಷಿತಿಭಾರಜನ್ಮನಾಮ್**
**ಅಕ್ಷೌಹಿಣೀಭಿಃ ಪರಿವೃತ್ತತೇಜಸಾಮ್ ।**
**ವಿಧಾಯ ವರಂ ಶ್ವಸನೋ ಯಥಾನಲಂ**
**ಮಿಥೋ ವಧೇನೋಪರತೋ ನಿರಾಯುಧಃ ॥೭೧॥**

**ಯಥಾ** ಯಾವ ರೀತಿಯಾಗಿ **ಶ್ವಸನಃ** ವಾಯು **ಅನಲಂ** ಬಿದರುಗಳ ಪರಸ್ಪರ ಸಂಘರ್ಷದಿಂದ ಅಗ್ನಿಯನ್ನು **ವಿಧಾಯ** ಸೃಷ್ಟಿಸಿ ಪರಸ್ಪರವಾಗಿ ಸುಟ್ಟು ಹಾಕಿ ಶಾಂತವಾಗುವಂತೆ **ತಥಾ** ಅದೇ ರೀತಿಯಾಗಿ **ಕ್ಷಿತಿಭಾರಜನ್ಮನಾಂ** ಭೂಮಿಗೆ ಭಾರವಾಗುವದಕ್ಕೆ ಜನ್ಮವನ್ನು ತಾಳಿರುವ **ಪರಿವೃತ್ತತೇಜಸಾಂ** ಎಲ್ಲ ಕಡೆಗೆ ಪರಾಕ್ರಮಿಗಳೆಂದಾಗಿರುವ **ನೃಪಾಣಾಂ** ಕೌರವರ-ಪಾಂಡವರ ಪಕ್ಷಪಾತಿಗಳಾದ ರಾಜರನ್ನು **ಮಿಥಃ** ಪರಸ್ಪರವಾಗಿ **ವೈರಂ** ದ್ವೇಷವನ್ನು **ವಿಧಾಯ** ಉಂಟುಮಾಡಿ

**ನಿರಾಯುಧಃ** ಆಯುಧವಿಲ್ಲದಿರುವ ಶ್ರೀಕೃಷ್ಣನು **ಏವಂ** ಪೂರ್ವೋಕ್ತರೀತಿಯಲ್ಲಿ **ವಧೇನ** ಸಂಹಾರಮಾಡುವ ನಿಮಿತ್ತದಿಂದ **ಉಪರತಃ** ನಿವೃತ್ತವ್ಯಾಪಾರವುಳ್ಳವ-ನಾಗುತ್ತಾನೆ.

ಶ್ರೀಕೃಷ್ಣನು ಮನುಷ್ಯನು ಎಂದು ತಿಳಿಯುವದು ಯೋಗ್ಯವಲ್ಲ ಎಂಬುದನ್ನು ಹೇಳುವರು.

**ಸ ಏಷ ನರಲೋಕೇಽಸ್ಮಿನ್ನವತೀರ್ಣಃ ಸ್ವಮಾಯಯಾ ।**
**ರೇಮೇ ಸ್ತ್ರೀರತ್ನಕೂಟಸ್ಥಃ ಭಗವಾನ್ ಪ್ರಾಕೃತೋ ಯಥಾ ॥೭೨॥**

**ಸಃ ಏಷಃ** ಅಂತಹ ಈ ಶ್ರೀಕೃಷ್ಣನು **ಅಸ್ಮಿನ್ ನರಲೋಕೇ** ಈ ಮನುಷ್ಯಲೋಕದಲ್ಲಿ **ಸ್ವಮಾಯಯಾ** ತನ್ನ ಇಚ್ಛೆಯಿಂದ **ಅವತೀರ್ಣಃ** ಅವತರಿಸಿರುವನು **ಸ್ತ್ರೀರತ್ನಕೂಟಸ್ಥಃ** ಶ್ರೇಷ್ಠರಾದ ಸ್ತ್ರೀಯರ ಮಧ್ಯದಲ್ಲಿರುವ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು **ಯಥಾ ಪ್ರಾಕೃತಃ** ಮೂರ್ಖನು ಹೇಗೆ ಆಟವಾಡಬೇಕೋ ಹಾಗೆ **ರೇಮೇ** ಸಂತೋಷಪಟ್ಟನು.

ಆ ಸ್ತ್ರೀಸಮೂಹವು ಅದು ಹೇಗೆ ಈಶ್ವರನ ಅವತಾರವಾಗಿ ಹೇಗೆ ಹೇಳುವದು ಎಂದರೆ ಅದಕ್ಕೆ ಉತ್ತರವನ್ನು ಹೇಳುವರು

**ಉದ್ದಾಮಭಾವಪಿಶುನಾಮಲವಲ್ಗುಹಾಸ**
**ವ್ರೀಡಾವಲೋಕವಿಹತೋ ಮದನೋಽಪಿ ಯಾಸಾಮ್ ।**
**ಸಮ್ಮುಹ್ಯ ಚಾಪಮಜಹಾತ್ ಪ್ರಮದೋತ್ತಮಾಸ್ತಾ**
**ಯಸ್ಯೇಂದ್ರಿಯಂ ವಿಮಥಿತುಂ ಕುಹಕೈರ್ನ ಶೇಕುಃ ॥೭೩॥**

**ಯಾಸಾಂ** ಯಾವ ಸ್ತ್ರೀಯರ **ಉದ್ದಾಮಭಾವಪಿಶುನಾಮಲ ವಲ್ಗುಹಾಸವ್ರೀಡಾ-ವಲೋಕವಿಹತಃ** **ಉದ್ದಾಮ** ಉತ್ಕೃಷ್ಟವಾದ **ಭಾವ** ಶೃಂಗಾರಚೇಷ್ಟೆಗಳ **ಪಿಶುನ** ಸೂಚಕವೆನ್ನುವಂತೆ **ಅಮಲ** ಸರಿಯಾದ ಲಕ್ಷಣವಿರುವ **ವಲ್ಗು** ಸುಂದರವಾದ **ಹಾಸ** ನಗುವು **ವ್ರೀಡಾ** ನಾಚಿಕೆಯಿಂದ **ಅವಲೋಕ** ನೋಡುವಿಕೆ ಇವುಗಳಿಂದ ಮನಸ್ಸಿಗೆ ಪೆಟ್ಟುತಿಂದ **ಮದನಃ ಅಪಿ** ಕಾಮನು ಕೂಡ ಮನ್ಮಥನೂ **ಸಮುಹ್ಯ** ಮೋಹಗೊಂಡು ದಿಗ್ಭ್ರಾಂತನಾಗಿ **ಚಾಪಂ** ಪುಷ್ಪಮಯವಾದ ಬಿಲ್ಲನ್ನು **ಅಜಹಾತ್** ಬಿಟ್ಟನು **ತಾಃ ಪ್ರಮದೋತ್ತಮಾಃ** ಅಂತಹ ಆ ಸ್ತ್ರೀಯರು **ಕುಹಕೈಃ** ಪುರುಷರ ಮನಸ್ಸುಗಳನ್ನು

ಮೋಹಗೊಳಿಸುವ ಸುಂದರವಾದ ನಗು ನಾಚಿಕೆ ಮತ್ತು ಕುಡಿನೋಟ ಇವುಗಳಿಂದ **ಯಸ್ಯ** ಯಾವ ಶ್ರೀಕೃಷ್ಣನ **ಇಂದ್ರಿಯಂ** ಮನಸ್ಸನ್ನು **ವಿಮಥಿತುಂ** ಕದಡಲು **ನ ಶೇಕುಃ** ಸಮರ್ಥರಾಗಲಿಲ್ಲ.

ಶ್ರೀಕೃಷ್ಣನ ಮನಸ್ಸನ್ನು ಸ್ತ್ರೀಯರು ಗೆದ್ದಿದ್ದರು ಎಂಬುದು ಅಜ್ಞಾನಿಗಳ ಮಾತು. ಎಂಬುದನ್ನು ಹೇಳುವರು.

**ಮನ್ಯತೇ ತನ್ಮಯಂ ಲೋಕೋ ಹ್ಯಸಂಗಮಪಿ ಸಂಗಿನಮ್ ।**
**ಆತ್ಮೌಪಮ್ಯೇನ ಮನುಜಂ ಪ್ರಾವೃಣ್ವಾನಮತೋ ಅಬುಧಃ ॥೩೪॥**

**ಅಲೋಕಃ** ಅಜ್ಞಾನಿಗಳ ಪ್ರಪಂಚವು **ಆತ್ಮೌಪಮ್ಯೇನ** ಸ್ತ್ರೀಸಂಗವಿರುವ ತಮ್ಮ ಉದಾಹರಣೆಯಿಂದ **ಅಸಂಗಂ ಅಪಿ** ಸ್ತ್ರೀಸಂಗವಿಲ್ಲದಿದ್ದರು ಶ್ರೀಕೃಷ್ಣನನ್ನು **ಸಂಗಿನಂ** ಸ್ತ್ರೀಸಂಗವಿರುವವನು **ತನ್ಮಯಂ** ಎಲ್ಲ ಪ್ರಪಂಚವು ಸ್ತ್ರೀಸಂಗವುಳ್ಳದ್ದಾಗಿ **ಮನುಜಂ** ಮನುಷ್ಯರನ್ನು ಕುರಿತು **ಪ್ರಾವೃಣ್ವಾನಂ** ತನ್ನ ರೂಪವನ್ನು ಮುಚ್ಚಿಕೊಂಡಿರುವ ಶ್ರೀಕೃಷ್ಣನನ್ನು **ಮನ್ಯತೇ** ತಿಳಿಯುತ್ತಾರೆ. **ಅತಃ** ಶ್ರೀಕೃಷ್ಣನು ಸ್ತ್ರೀಸಂಗವುಳ್ಳವನು ಎಂದು ತಿಳಿಯುವದರಿಂದ **ಅಬುಧಃ** ಭಗವತ್ತತ್ವದ ಜ್ಞಾನವಿಲ್ಲದವನು ಎಂದು.

ಜಡಪ್ರಕೃತಿಸಂಬಂಧವಿರುವ ಸ್ತ್ರೀಯಸಂಗವಿರುವವನಿಗೆ ಸತ್ವರಜಸ್ಸು ಮತ್ತು ತಮಸ್ಸು ಈ ಗುಣಗಳ ಕಾರ್ಯವಾದ ಸುಖ ಮೊದಲಾದವುಗಳ ಸಂಬಂಧವಿಲ್ಲ ಎನ್ನುವದು ಹೇಗೆ ಎಂಬ ಪ್ರಶ್ನೆಗೆ ಭಗವಂತನ ಐಶ್ವರ್ಯದಿಂದಲೇ ಅದೆಲ್ಲವು ಸಿದ್ಧ ಎಂದು ಹೇಳಿ ಆ ಐಶ್ವರ್ಯದ ಸ್ವರೂಪವನ್ನು ತೋರಿಸುವರು.

**ಯತ್ತದೀಶನಮೀಶಸ್ಯ ಪ್ರಕೃತಿಸ್ಥೋ ಅಪಿ ತದ್ಗುಣೈಃ ।**
**ನ ಯುಜ್ಯತೇ ಸದಾತ್ಮಸ್ಥೈರ್ಯಥಾ ಬುದ್ಧಿಸ್ತದಾಶ್ರಯಾ ॥೩೫॥**

**ಯತ್** ಯಾವ ಭಗವಂತನ ಐಶ್ವರ್ಯವು **ಪ್ರಕೃತಿಸ್ಥಃ ಅಪಿ** ಪ್ರಕೃತಿಸಂಬಂಧವಿದ್ದರೂ **ಸದಾ** ಯಾವಾಗಲು **ಆತ್ಮಸ್ಥೈಃ** ತನ್ನನ್ನಾಶ್ರಯಿಸಿರುವ ಸತ್ವಾದಿಗುಣಗಳು ಅದರ ಕಾರ್ಯವಾದ ಸುಖಾದಿಗಳು ಅವುಗಳಿಂದ **ತತ್ ಈಶನಂ** ಐಶ್ವರ್ಯವು ಅಂದರೆ ಭಗವಂತನ ಸಾಮರ್ಥ್ಯವು ಪ್ರಕೃತಿಸಂಬಂಧವಿರುವ ಜ್ಞಾನಿಗಳಿಗೆ **ತದಾಶ್ರಯಾ** ಶ್ರೀಕೃಷ್ಣನ ಆಶ್ರಯ ಪಡೆದಿರುವ **ಬುದ್ಧಿಃ** ಭಗವಂತನ ಜ್ಞಾನವಿರುವ ಜನರಿಗೆ **ಯಥಾ** ಯಾವ ರೀತಿಯಾಗಿ ಸತ್ವಾದಿಗಳ ಕಾರ್ಯವಾದ ಶಬ್ದಮೊದಲಾದ ವಿಷಯಗಳು

ಅಥವಾ ಸುಖದುಃಖಾದಿಗಳು ಇವುಗಳ ಸಂಬಂಧವಾಗದಿರುವಂತೆ **ನ ಯುಜ್ಯತೇ** ಸಂಬದ್ಧವಾಗುವದಿಲ್ಲ. ಭಗವಂತನನ್ನು ಆಶ್ರಯಿಸಿ ಅವನ ಜ್ಞಾನವನ್ನೇ ಮಾಡಿಕೊಂಡವರಿಗೆ ಸತ್ವಾದಿಗುಣಗಳಿಂದ ಯಾವ ರೀತಿಯಾಗಿ ಸುಖದುಃಖಾದಿಗಳಿಲ್ಲವೆಂದ ಮೇಲೆ ಪರಮಾತ್ಮನಿಗೆ ಸತ್ವಾದಿಕಾರ್ಯವಾದ ಸುಖದುಃಖಾದಿಗಳಿಲ್ಲ ಎಂದು ಏನು ಹೇಳುವದು.

*ಭಾಗವತತಾತ್ಪರ್ಯ-*

ತದಾಶ್ರಯಾ ಬುದ್ಧಿಃ ಎಂಬ ಶಬ್ದದ ಜ್ಞಾನವಾಗುವದಿಲ್ಲ. ಆದನ್ನು ತಾತ್ಪರ್ಯದ ಮೂಲಕ ತಿಳಿಸುವರು.

**ತದಾಶ್ರಯಾ ಬುದ್ಧಿಃ. ತಜ್ಜ್ಞಾನಿನಾಮಪಿ ಪ್ರಕೃತಿಸ್ಥಾನಾಂ ನ ತತ್ಸಂಗಃ ಕಿಮು ತಸ್ಯೇತಿ ವ್ಯತ್ಯಾಸದೃಷ್ಟಾಂತಃ । ವ್ಯತ್ಯಾಸೋ ಅನನ್ವಯಶ್ಚೈವ ಪ್ರಸಿದ್ಧೋ ಭೂತ ಏವ ಚ ।**

**ಸರ್ವಸಂಹಾರಕಶ್ಚೇತಿ ದೃಷ್ಟಾಂತಃ ಪಂಚಧಾ ಸ್ಮೃತಃ ॥ ಇತಿ ಬ್ರಾಹ್ಮೇ ॥**

ತದಾಶ್ರಯಾ ಬುದ್ಧಿಃ ಎಂದು ಉದಾಹರಣೆಯನ್ನು ವ್ಯತ್ಯಾಸವಾಗಿ ಕೊಟ್ಟಿರುವರು. **ತಜ್ಜ್ಞಾನಿನಾಂ** ಭಗವಂತನಜ್ಞಾನವಿರುವವರಿಗೆ **ಪ್ರಕೃತಿಸ್ಥಾನಾಂ** ಪ್ರಕೃತಿಸಂಬಂಧವಿರುವ ಜನರಿಗೆ **ನ ತತ್ಸಂಗಃ** ಆ ಪ್ರಕೃತಿನಿರ್ಮಿತವಾದ ಸುಖದುಃಖಾದಿಗಳ ಸಂಬಂಧವಿಲ್ಲ ಕಿಮು **ತಸ್ಯ** ಭಗವಂತನಿಗೆ ಆಗುವದಿಲ್ಲವೆಂದು ಏನು ಹೇಳುವದು. ಇದು ಕೈಮುತ್ಯಸಿದ್ಧವಾದದ್ದು. ಎಂದು ಉದಾಹರಣೆಯನ್ನು ವ್ಯತ್ಯಾಸಮಾಡಿ ಹೇಳಿದ್ದಾರೆ.

ಉದಾಹರಣೆಯನ್ನು ವ್ಯತ್ಯಾಸವಾಗಿ ಹೇಳಿದ್ದಕ್ಕೆ ಪ್ರಮಾಣವನ್ನು ಹೇಳುವರು.

**ವ್ಯಾತ್ಯಾಸೋಽನನ್ವಯಶ್ಚೈವ ಪ್ರಸಿದ್ಧೋಽಭೂತ ಏವ ಚ ।**
**ಸರ್ವಸಾಂಹಾರಿಕಶ್ಚೇತಿ ದೃಷ್ಟಾಂತಃ ಪಂಚಧಾ ಸ್ಮೃತಃ ।**

ಎಂದು ವ್ಯತ್ಯಾಸವಾಗಿ ಹೇಳುವದು, ಅನ್ವಯವಿಲ್ಲದಂತೆ ಹೇಳುವದು, ಪ್ರಸಿದ್ಧವಾದದ್ದನ್ನು ಹೇಳುವದು, ಪೂರ್ವದಲ್ಲಿ ಘಟಿಸದೇ ಇರುವದನ್ನು ಹೇಳುವದು, ಎಲ್ಲವನ್ನು ಸಂಹರಿಸುವವನು ಎಂದು ಐದು ರೀತಿಯಾಗಿ ಉದಾಹರಣೆಯನ್ನು ಹೇಳಬಹುದು ಎಂದು ಬ್ರಾಹ್ಮಪುರಾಣದಲ್ಲಿದೆ.

ಜಗತ್ತು ಸ್ತ್ರೀಸಂಗಮಯವಾಗಿದೆ ಎಂದು ಪೂರ್ವದಲ್ಲಿ ಹೇಳಿದ್ದನ್ನೆ ವಿಸ್ತರಿಸುವರು.

**ತಂ ಮೇನಿರೇ ಖಲಾ ಮೂಢಾಸ್ತ್ರೈಣಂ ಚಾನುವ್ರತಂ ಹರೇಃ ।**
**ಅಪ್ರಮಾಣವಿದೋ ಭರ್ತುರೀಶ್ವರಂ ಮತಯೋ ಯಥಾ ॥೭೬॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ದಶಮೋऽಧ್ಯಾಯಃ ॥

**ಖಲಾಃ** ಇಂದ್ರಿಯಗಳಿಂದ ವಿಷಯಗಳ ಭೋಗವನ್ನು ಮಾಡಿ ಸುಖಪಡುವವರು **ಮೂಢಾಃ** ಇದೇ ಸುಖವೆಂದು ಹುಚ್ಚರಾಗಿರುವವರು ಅಥವಾ ಶಾಸ್ತ್ರಾರ್ಥವನ್ನು ತಿಳಿಯದಿರುವ ತಾಮಸಸ್ವಭಾವ ಮತ್ತು ರಾಜಸ ಸ್ವಭಾವದವರು **ಭರ್ತುಃ** ಜಗತ್ತನ್ನು ಸೃಷ್ಟಿಸುವ ಹರಿಯ **ಅಪ್ರಮಾಣವಿದಃ** ಅನಂತಾದಿಗುಣಗಳನ್ನು ತಿಳಿಯದಿರುವ ಅಥವಾ ಭಗವಂತನಿಗೆ ಯಾರ ಅಪೇಕ್ಷೆಯಿಲ್ಲ. ಸ್ವಾತಂತ್ರ್ಯ ಮೊದಲಾದ ಗುಣಗಳ ಮಾಹಾತ್ಮ್ಯವನ್ನು ತಿಳಿಸುವ ಪ್ರಮಾಣಗಳನ್ನು ತಿಳಿಯದಿರುವವರು **ಯಥಾ** ಹೇಗೆ **ಮತಯಃ** ವೈಶೇಷಿಕಾದಿ ಮತಗಳು ತಮ್ಮ ತಮ್ಮ ಬುದ್ಧಿ ಇದ್ದಷ್ಟೇ ತಿಳಿದರೋ **ತಥಾ** ಹಾಗೆಯೇ **ಅನುವೃತಂ** ಅನುಸರಿಸಲ್ಪಡುವ **ಈಶ್ವರಂ** ಐಶ್ವರ್ಯವಂತನಾದ ಶ್ರೀಕೃಷ್ಣನನ್ನು **ಸ್ತ್ರೈಣಂ** ಸ್ತ್ರೀಸಂಗವಿದ್ದವನು ಎಂದು **ಮೇನಿರೇ** ತಿಳಿದರು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಮೇನಿರೇ ಎಂದು ಹೇಳಿದ ಮೇಲೆ ಮತಯಃ ಯಥಾ ಎಂದು ಉದಾಹರಣೆಯನ್ನು ಹೇಳಿದ್ದಾರೆ ಎಂದು ತೋರುತ್ತದೆ.

**ಮತಯಃ ಯಥಾ ಯಥಾಮತಿ ಮೇನಿರೇ ।**

ತಮ್ಮ ತಮ್ಮ ಬುದ್ಧಿಯಿದ್ದಷ್ಟು ಶ್ರೀಕೃಷ್ಣನನ್ನು ತಿಳಿದರು ಎಂದು ಅರ್ಥ.

**ಇಲ್ಲಿಗೆ ಹತ್ತನೇಯ ಅಧ್ಯಾಯವು ಮುಗಿಯಿತು.**

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಏಕಾದಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಉತ್ತರಾದೇವಿಯ ಗರ್ಭದಲ್ಲಿದ್ದ ಶಿಶುವನ್ನು ಗದಾಪಾಣಿಯಾಗಿ ಶ್ರೀಕೃಷ್ಣ ರಕ್ಷಿಸಿದ. ಗರ್ಭದಲ್ಲಿರುವ ಮಗು ಸುತ್ತಲೂ ಆವರಿಸಿದ ಬ್ರಹ್ಮಾಸ್ತ್ರದ ಬೆಂಕಿಯನ್ನು ದೂರ ಅಟ್ಟುತ್ತಿದ್ದ ಶ್ರೀಕೃಷ್ಣನನ್ನು ಆಶ್ಚರ್ಯಚಕಿತನಾಗಿ ನೋಡುತ್ತಿತ್ತು ಅನ್ನುವದಕ್ಕೆ ಅದಕ್ಕೆ ಪರೀಕ್ಷಿತ ಎಂಬ ಹೆಸರೂ ಬಂತು. ಒಂಭತ್ತು ತಿಂಗಳು ಕಳೆದಾಗ ಕೃಷ್ಣ ಕಣ್ಮರೆಯಾದ. ಮಗು ಸತ್ತು ಹುಟ್ಟಿತು. ಶ್ರೀಕೃಷ್ಣನೇ ಮಗುವನ್ನು ಮತ್ತೆ ಬದುಕಿಸಿದ. ಪಾಂಡವರ ಸಂತತಿ ನಾಶ ಹೊಂದುವ ಸಂದರ್ಭದಲ್ಲಿ ಭಗವಂತ ಅನುಗ್ರಹ ಮಾಡಿ ಮಗುವನ್ನು ಮತ್ತೆ ಬದುಕಿಸಿ ಕೊಟ್ಟ ಅನ್ನುವದಕ್ಕೆ ಆ ಮಗುವಿಗೆ ವಿಷ್ಣುರಾತ ಎಂಬ ಹೆಸರು ಬಂತು. ಹೆಸರಿಗೆ ತಕ್ಕಂತೆ ಇವನು ಮಹಾಭಗವದ್ಭಕ್ತನಾದ. ಶ್ರೀರಾಮಚಂದ್ರನಂತೆ ಬ್ರಾಹ್ಮಣಪ್ರಿಯನೂ ಸತ್ಯಸಂಧನೂ ಅಧಾರ್ಮಿಕರಿಗೆ ಶಾಸನ ಮಾಡುವವನು ಭೂದೇವಿಯನ್ನು ಧರ್ಮವನ್ನು ಉಳಿಸುವದಕ್ಕಾಗಿ ಕಲಿಯನ್ನು ನಿಗ್ರಹಿಸುವ ಸಾಮರ್ಥ್ಯವುಳ್ಳವನೂ ಆಗಿದ್ದನು. ಮುನಿಕುಮಾರನ ಶಾಪದಿಂದ ತಾನು ತಕ್ಷಕ ಕಚ್ಚಿ ಮೃತನಾಗುವೆನೆಂದು ತಿಳಿದಾಗ ವಿರಕ್ತನಾಗಿ ಶುಕಮುನಿಯಿಂದ ಭಾಗವತ ಶ್ರವಣಮಾಡಿ ವೈಕುಂಠಲೋಕವನ್ನು ಪಡೆದ.

ವೈರಾಗ್ಯದ ರೀತಿಯನ್ನು ಶ್ರೀಕೃಷ್ಣನಿಗೆ ಭಕ್ತರ ಮೇಲೆ ಇರುವ ಅನುಕಂಪ ಇದನ್ನು ಈ ಅಧ್ಯಾಯದಲ್ಲಿ ವರ್ಣಿಸುವರು.

**ಉತ್ತರಾದೇವಿಯ ಗರ್ಭದಲ್ಲಿದ್ದ ಶಿಶುವನ್ನು ರಕ್ಷಿಸಿದ ಶ್ರೀಕೃಷ್ಣ**

**ಶೌನಕ ಉವಾಚ -**

**ಅಶ್ವತ್ಥಾಮ್ನೋ ವಿಸೃಷ್ಟೇನ ಬ್ರಹ್ಮಶೀರ್ಷ್ಣೋರುತೇಜಸಾ ।**
**ಉತ್ತರಾಯಾ ಹತೋ ಗರ್ಭಃ ಈಶೇನೋಜ್ಜೀವಿತಃ ಪುನಃ ॥೧॥**

**ಉರುತೇಜಸಾ** ಉತ್ಕೃಷ್ಟವಾದ ತೇಜಸ್ಸುಳ್ಳ **ಅಶ್ವತ್ಥಾಮ್ನಃ** ಅಶ್ವತ್ಥಾಮಾ ಚಾರ್ಯರಿಂದ **ವಿಸೃಷ್ಟೇನ** ಬಿಡಲ್ಪಟ್ಟ **ಬ್ರಹ್ಮಶೀರ್ಷ್ಣಾ** ಬ್ರಹ್ಮಾಸ್ತ್ರದಿಂದ **ಉತ್ತರಾಯಾಃ** ಉತ್ತರಾದೇವಿಯ **ಗರ್ಭಃ** ಗರ್ಭವು **ಹತಃ** ನಾಶಮಾಡಲ್ಪಟ್ಟಿತು **ಪುನಃ** ಮತ್ತೆ ಆ ಗರ್ಭವನ್ನು **ಈಶೇನ** ಶ್ರೀಕೃಷ್ಣನಿಂದ **ಉಜ್ಜೀವಿತಃ** ಬದುಕಿಸಲ್ಪಟ್ಟಿತು.

**ತಸ್ಯ ಜನ್ಮ ಮಹಾಬುದ್ಧೇ ಕರ್ಮಾಣಿ ಚ ಗೃಣೀಹಿ ನಃ.**
**ನಿಧನಂ ಚ ಯಥೈವಾಸೀತ್ಸ ಪ್ರೇತ್ಯ ಗತವಾನ್ಯಥಾ ॥೨॥**

**ತಸ್ಯ** ಆ ಪರೀಕ್ಷಿದ್ರಾಜನ **ಜನ್ಮ** ಉತ್ಪತ್ತಿಯು **ಚ** ಮತ್ತು **ಮಹಾಬುದ್ಧೇಃ** ಮಹಾಜ್ಞಾನಿಯಾದ ಪರೀಕ್ಷಿತನ **ಕರ್ಮಾಣಿ** ಕರ್ಮಗಳನ್ನು **ಯಥಾ** ಹೇಗೆ **ನಿಧನಂ** ಮರಣವು **ಆಸೀತ್** ಆಯಿತು **ಚ** ಮತ್ತು **ಯಥಾ** ಹೇಗೆ **ಸಃ** ಆ ಪರೀಕ್ಷಿತನು **ಪ್ರೇತ್ಯ** ಮರಣವನ್ನು ಹೊಂದಿ **ಕಂ ಲೋಕಂ ಇತಿ ಶೇಷಃ** ಯಾವ ಲೋಕವನ್ನು **ಗತವಾನ್** ಹೊಂದಿದನು **ನಃ** ನಮಗೆ **ಗೃಣೀಹಿ** ವರ್ಣಿಸಿರಿ.

**ತದಿದಂ ಶ್ರೋತುಮಿಚ್ಛಾಮಿ ವಕ್ತುಂ ವಾ ಯದಿ ಮನ್ಯಸೇ.**
**ಬ್ರೂಹಿ ನಃ ಶ್ರದ್ದಧಾನಾಂ ಯಸ್ಯ ಜ್ಞಾನಮದಾಚ್ಛುಕಃ ॥೩॥**

**ಯಸ್ಯ** ಯಾವ ಪರೀಕ್ಷಿತನಿಗೆ **ಜ್ಞಾನಂ** ಜ್ಞಾನವನ್ನು **ಶುಕಃ** ಶುಕಾಚಾರ್ಯರು **ಅದಾತ್** ಕೊಟ್ಟರು **ತತ್ ಇದಂ** ಅಂತಹ ಈ ಪೂರ್ವದಲ್ಲಿ ಹೇಳಿದ ಪರೀಕ್ಷಿತನ ಜನ್ಮ ಮರಣ ವೃತ್ತಾಂತವನ್ನು **ಶ್ರೋತುಂ** ಕೇಳಲು **ಇಚ್ಛಾಮಿ** ಇಚ್ಛಿಸುತ್ತೇನೆ **ಶ್ರದ್ದಧಾನಾನಾಂ ನಃ** ಶ್ರದ್ಧೆಯುಳ್ಳ ನಮಗೆ **ಯದಿ** ಒಂದು ವೇಳೆ **ವಕ್ತುಂ** ಹೇಳಲು **ಮನ್ಯಸೇ ವಾ** ಸಮ್ಮತಿಯಿದ್ದರೆ **ಬ್ರೂಹಿ** ಹೇಳಿ

**ವಿಶೇಷ :-** ಇಲ್ಲಿರುವ ವಕ್ತುಂ ವಾ ಯದಿ ಮನ್ಯಸೇ ಎಂದು ಹೇಳುವದರಿಂದಾಗಿ ಅತಿರಹಸ್ಯವಾದದ್ದು ಎಂದು ಸೂಚಿಸಿದಂತಾಯಿತು.

ಯುಧಿಷ್ಠಿರನು ರಾಜ್ಯವನ್ನು ಆಳುವಸಂದರ್ಭದಲ್ಲಿ ಅಶ್ವಮೇಧಯಾಗಕ್ಕಿಂತ ಮೊದಲಿಗೆ ಪರೀಕ್ಷಿದ್ರಾಜನ ಜನನವಾಗಿತ್ತು ಎಂಬುದನ್ನು ಸೂಚಿಸಲು ಮತ್ತೆ ಯುಧಿಷ್ಠಿರನ ರಾಜ್ಯಸಂರಕ್ಷಣೆ ಮುಂತಾದವುಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ಸೂತ ಉವಾಚ -**

**ಅಪೀಪಲದ್ಧರ್ಮರಾಜಃ ಪಿತೃವದ್ರಂಜಯನ್ಪ್ರಜಾಃ ।**
**ನಿಸ್ಪೃಹಃ ಸರ್ವಕಾಮೇಭ್ಯಃ ಕೃಷ್ಣಪಾದಾನುಸೇವಯಾ ॥೪॥**

**ಸರ್ವಕಾಮೇಭ್ಯಃ** ಎಲ್ಲ ಕಾಮ್ಯವಾದ ಪದಾರ್ಥಗಳಿಂದ **ನಿಸ್ಪೃಹಃ** ಯಾವ ಅಪೇಕ್ಷೆಯನ್ನು ಮಾಡದಿರುವ **ಕೃಷ್ಣಪಾದಾನುಸೇವಯಾ** ಶ್ರೀಕೃಷ್ಣನ ಪಾದಗಳ ಸೇವೆಯಿಂದಲೇ **ಪಿತೃವತ್** ತಂದೆ ತನ್ನ ಮಕ್ಕಳನ್ನು ಹೇಗೆ ಸಂತೋಷಪಡಿಸಬೇಕೋ ಹಾಗೆ **ಪ್ರಜಾಃ** ಪ್ರಜರನ್ನು **ರಂಜಯನ್ ಸನ್** ಸಂತೋಷಗೊಳಿಸುವವನಾಗಿ **ಧರ್ಮರಾಜಃ** ಯುಧಿಷ್ಠಿರನು **ಅಪೀಪಲತ್** ರಕ್ಷಣೆಯನ್ನು ಮಾಡಿದನು.

ಶ್ರೀಕೃಷ್ಣನ ಪಾದಗಳ ಸೇವೆ ಮತ್ತು ಪ್ರಜೆಗಳ ಮತ್ತು ರಾಜ್ಯದ ಸಂರಕ್ಷಣೆ ಇವೆರಡನ್ನು ವಿಸ್ತರಿಸುತ್ತಾರೆ.

**ಸಂಪದಃ ಕ್ರತವೋ ವಿಪ್ರಾ ಮಹಿಷೀ ಭ್ರಾತರೋ ಮಹೀ ।**
**ಜಂಬುದ್ವೀಪಾಧಿಪತ್ಯಂಚ ಯಶಶ್ಚ ತ್ರಿದಿವಂ ಗತಮ್ ॥೫॥**

**ಸಂಪದಃ** ಸಂಪತ್ತುಗಳು **ಕ್ರತವಃ** ಯಜ್ಞಗಳು **ವಿಪ್ರಾಃ** ಬ್ರಾಹ್ಮಣರು **ಮಹಿಷೀ** ಪಶುಗಳು **ಭ್ರಾತರಃ** ತಮ್ಮಂದಿರು **ಮಹೀ** ಭೂಮಿಯು **ಚ** ಮತ್ತು **ಜಂಬುದ್ವೀಪಾಧಿಪತ್ಯಂ** ಜಂಬುದ್ವೀಪದ ಆಧಿಪತ್ಯವು ಅಂದರೆ ರಾಜ್ಯಭಾರವು **ಚ** ಮತ್ತು **ಯಶಶ್ಚ** ಯಶಸ್ಸು **ತ್ರಿದಿವಂ ಗತಂ** ಸ್ವರ್ಗವನ್ನು ತಲುಪಿತು ಅಂದರೆ ಯುಧಿಷ್ಠಿರನ ಸಂಪತ್ತು ಮುಂತಾದವುಗಳು ಮೂರು ಲೋಕವನ್ನು ವ್ಯಾಪಿಸಿತು ಎಂದು ಭಾವ.

ಕಾಮಾಂಧನಾದವನಿಗೆ ಪದಾರ್ಥಗಳೇ ವಿಷಯಗಳು ವಿಷಯಾಸಕ್ತನಾಗದ ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಇಟ್ಟ ಯುಧಿಷ್ಠಿರನಿಗೆ ಪದಾರ್ಥಗಳು ಏನುಂಟುಮಾಡುವವು ಅವುಗಳು ಪುರುಷಾರ್ಥಗಳನ್ನಾಗಿ ಅಪೇಕ್ಷಿಸಲಿಲ್ಲ ಧರ್ಮರಾಜ ಯಾಕೆ ಅಪೇಕ್ಷಿಸಲಿಲ್ಲ ಎಂಬುದನ್ನು ಹೇಳುವರು.

**ಕಿಂತೇ ಕಾಮಾತುರಸ್ಯಾರ್ಥಾ ಮುಕುಂದಮನಸೋ ದ್ವಿಜಾಃ ।**
**ನಾಧಿಜಹ್ರುರ್ಮುದಂ ರಾಜ್ಞಃ ಕ್ಷುಧಿತಸ್ಯ ಯಥೇತರೇ ॥೬॥**

**ಯಥಾ** ಹೇಗೆ **ಕ್ಷುಧಿತಸ್ಯ** ಹಸಿದವನಿಗೆ **ಇತರೇ** ವೀಣೆ ಮೊದಲಾದವುಗಳು ಅಥವಾ ಹೂವು, ಮಾಲೆ, ಮತ್ತು ಸ್ತ್ರೀಮೊದಲಾದವರು **ಮುದಂ** ಸಂತೋಷವನ್ನು **ನ ಕುರ್ವಂತಿ** ಉಂಟುಮಾಡುವದಿಲ್ಲವೋ **ತಥಾ** ಅದೇ ರೀತಿಯಾಗಿ **ಮುಕುಂದಮನಸಃ** ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಇಟ್ಟ **ರಾಜ್ಞಃ** ರಾಜನಾದ ಪರೀಕ್ಷಿತನಿಗೆ **ಅರ್ಥಾಃ** ಪುರುಷಾರ್ಥಗಳು **ಕಿಂ** ಏನು ಮಾಡಲು ಸಾಧ್ಯ ಯಾವ ರೀತಿಯಾದ ಸಂತೋಷವನ್ನೂ ಉಂಟುಮಾಡಲಿಲ್ಲ **ಅರ್ಥಾಃ** ಪುರುಷಾರ್ಥಗಳು ಅಂದರೆ ವಿಷಯಗಳು **ಕಾಮಾತುರಸ್ಯ** ಕಾಮಾಂಧನಿಗೆ (ಯುಧಿಷ್ಠಿರನಾದರು ವಿರಕ್ತನು ಆದ್ದರಿಂದ ಯುಧಿಷ್ಠಿರನ) **ಮುದಂ** ಸಂತೋಷವನ್ನು **ನ ಆಜಹ್ರುಃ** ಉಂಟುಮಾಡಲಿಲ್ಲ.

ಈಗ ಪ್ರಸಕ್ತವಾದದ್ದನ್ನು ಹೇಳುತ್ತಾರೆ

**ಮಾತುರ್ಗರ್ಭಗತೋ ವೀರಃ ಸ ತದಾ ಭೃಗುನಂದನ ।**
**ದದರ್ಶ ಪುರುಷಂ ಕಂಚಿದ್ದಹ್ಯಮಾನೋಽಸ್ತ್ರತೇಜಸಾ ॥೭॥**

**ಹೇ ಭೃಗುನಂದನ** ಭೃಗುಋಷಿಗಳ ಮಕ್ಕಳಾದ ಶೌನಕರೆ **ತದಾ** ಆಗ **ಅಸ್ತ್ರತೇಜಸಾ** ಬ್ರಹ್ಮಾಸ್ತ್ರದ ತೇಜಸ್ಸಿನಿಂದ **ದಹ್ಯಮಾನಃ** ಸುಡಲ್ಪಡುತ್ತಿರುವ **ಮಾತುಃ** ತಾಯಿಯಾದ ಉತ್ತರೆಯ **ಗರ್ಭಗತಃ** ಗರ್ಭದಲ್ಲಿ ಇರುವ **ವೀರಃ ಸಃ** ಪರಾಕ್ರಮಿಯಾದ ಪರೀಕ್ಷಿತನು **ಕಂಚಿತ್** ಲೋಕವಿಲಕ್ಷಣನಾದ **ಪುರುಷಂ** ಪರಮಾತ್ಮನನ್ನು **ದದರ್ಶ** ನೋಡಿದನು.

**ಅಂಗುಷ್ಠಮಾತ್ರಮಮಲಂ ಸ್ಫುರತ್ಪುರಟಮೌಲಿನಮ್ ।**
**ಆಪೀಚ್ಯದರ್ಶನಂ ಶ್ಯಾಮಂ ತಟಿದ್ವಾಸಸಮಚ್ಯುತಮ್ ॥೮॥**

**ಅಂಗುಷ್ಠಮಾತ್ರಂ** ಹೆಬ್ಬೆರಳಿನಷ್ಟು ಇರುವ **ಅಮಲಂ** ಶುದ್ಧನಾದ **ಸುರತ್ಪುರಟಮೌಲಿನಂ** ಶೋಭಿಸುವ ಬಂಗಾರದ ಕಿರೀಟವುಳ್ಳ **ಆಪೀಚ್ಯದರ್ಶನಂ** ಹದಿನಾರು ವರ್ಷದವನಂತೆ ಕಾಣುವ **ಶ್ಯಾಮಂ** ಮೇಘಶ್ಯಾಮನಾದ **ತಟಿದ್ವಾಸಸಂ** ವಿದ್ಯುತ್ತಿನಂತೆ ಹೊಳೆಯುವ ಬಟ್ಟೆಯಿರುವ **ಅಚ್ಯುತಂ** ತನ್ನನ್ನು ಬಿಟ್ಟುಹೋಗ ದಿರುವ ಶ್ರೀಕೃಷ್ಣನನ್ನು **ದದರ್ಶ** ನೋಡಿದನು.

**ಶ್ರೀಮದ್ದೀರ್ಘಚತುರ್ಬಾಹುಂ ತಪ್ತಕಾಂಚನಕುಂಡಲಮ್.**
**ಕ್ಷತಜಾಕ್ಷಂ ಗದಾಪಾಣಿಮಾತ್ಮನಃ ಸರ್ವತೋದಿಶಮ್ ॥೯॥**

**ಶ್ರೀಮದ್ದೀರ್ಘಚತುರ್ಬಾಹುಂ** ಶ್ರೇಷ್ಠವಾದ ಮತ್ತು ದೀರ್ಘವಾದ ನಾಲ್ಕು ಭುಜಗಳುಳ್ಳ **ತಪ್ತಕಾಂಚನಕುಂಡಲಂ** ಹೊಳೆಯುವ ಬಂಗಾರದ ಕುಂಡಲಗಳುಳ್ಳ **ಕ್ಷತಜಾಕ್ಷಂ** ರಕ್ತದಂತೆ ಕೆಂಪಾದ ಕಣ್ಣುಗಳುಳ್ಳ **ಆತ್ಮನಃ** ತನಗೆ **ಸರ್ವತೋದಿಶಂ** ಎಲ್ಲ ದಿಕ್ಕುಗಳಲ್ಲಿ **ಗದಾಪಾಣಿಂ** ಕೈಯಲ್ಲಿ ಗದೆಯನ್ನು ಹಿಡಿದಿರುವ ಸುತ್ತಲು ತಿರುಗುತ್ತಿರುವ ಶ್ರೀಕೃಷ್ಣನನ್ನು **ದದರ್ಶ** ನೋಡಿದನು.

**ಪರಿಭ್ರಮಂತಮುಲ್ಕಾಭಾಂ ಭ್ರಾಮಯಂತಂ ಗದಾಂ ಮುಹುಃ ।**
**ಅಸ್ತ್ರತೇಜಃ ಸ್ವಗದಯಾ ನೀಹಾರಮಿವ ಗೋಪತಿಃ ।**
**ವಿಧಮಂತಂ ಸನ್ನಿಕರ್ಷೇ ಪರ್ಯೈಕ್ಷತ ಕ ಇತ್ಯಸೌ ॥೧೦॥**

**ಉಲ್ಕಾಭಾಂ** ಆಕಾಶದಿಂದ ಬೀಳುವ ನಕ್ಷತ್ರವಿಶೇಷವುಳ್ಳ **ಗದಾಂ** ಗದೆಯನ್ನು **ಮುಹುಃ** ಮೇಲಿಂದ ಮೇಲೆ **ಭ್ರಾಮಯಂತಂ** ತಿರುಗಿಸುತ್ತಿರುವ **ಪರಿಭ್ರಮಂತಂ** ಪೂರ್ವಾದಿದಿಕ್ಕುಗಳಲ್ಲಿ ತಿರುಗುತ್ತಿರುವ ಶ್ರೀಕೃಷ್ಣನನ್ನು **ದದರ್ಶ** ನೋಡಿದನು **ಗೋಪತಿಃ** ಸೂರ್ಯನು **ನೀಹಾರಂ ಇವ** ಹಿಮವನ್ನು ಕರಗಿಸುವಂತೆ **ಸ್ವಗದಯಾ** ತನ್ನ ಗದೆಯಿಂದ **ಅಸ್ತ್ರತೇಜಃ** ಬ್ರಹ್ಮಾಸ್ತ್ರದ ತೇಜಸ್ಸನ್ನು **ಸನ್ನಿಕರ್ಷೇ** ತನ್ನ ಸಮೀಪದಲ್ಲಿ **ವಿಧಮಂತಂ** ನಾಶಮಾಡುತ್ತಿರುವ ಶ್ರೀಕೃಷ್ಣನನ್ನು **ಕಃ ಅಸೌ ಇತಿ** ಯಾರು ಇವನು ಎಂದು **ಸಃ ವೀರಃ** ಪರಾಕ್ರಮಿಯಾದ ಪರೀಕ್ಷಿತನು **ಪರ್ಯೈಕ್ಷತ** ಸುತ್ತಲೂ ನೋಡಿದನು.

**ವಿಧೂಯ ತದಮೇಯಾತ್ಮಾ ಭಗವಾನ್ ಧರ್ಮಗುಬ್ವಿಭುಃ.**
**ಮಿಷತೋ ದಶಮಾಸ್ಯಸ್ಯ ತತ್ರೈವಾಂತರ್ದಧೇ ಹರಿಃ ॥೧೧॥**

**ಧರ್ಮಗುಪ್** ಧರ್ಮವನ್ನು ರಕ್ಷಿಸುವ **ವಿಭುಃ** ಸಮರ್ಥನಾದ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ **ಅಮೇಯಾತ್ಮಾ** ಅನಂತವಾದ ರೂಪಗಳುಳ್ಳ **ದಶಮಾಸಸ್ಯ** ಹತ್ತು ಮಾಸಗಳಾದ ಮೇಲೆ ಹುಟ್ಟುವ **ಮಿಷತಃ ಸತಃ** ಪರೀಕ್ಷಿತನು ನೋಡುತ್ತಿರಲು **ಹರಿಃ** ಎಲ್ಲ ಪಾಪಗಳನ್ನು ಪರಿಹರಿಸುವ ಶ್ರೀಕೃಷ್ಣನು **ತತ್ರೈವ** ಆ ಗರ್ಭದಲ್ಲಿಯೇ **ಅಂತರ್ದಧೇ** ಕಾಣದಂತೆ ಆದನು.

**ತತಃ ಸರ್ವಗುಣೋದರ್ಕೇ ಸಾನುಕೂಲಗ್ರಹೋದಯೇ ।**
**ಜಜ್ಞೇ ವಂಶಧರಃ ಪಾಂಡೋರ್ಭೂಯಃ ಪಾಂಡುರಿವೌಜಸಾ ॥೧೨॥**

**ತತಃ** ಭಗವಂತನ ದರ್ಶನವಾದ ಮೇಲೆ **ಸರ್ವಗುಣೋದರ್ಕೇ** ಎಲ್ಲ ಗುಣಗಳಿಂದ ಉತ್ತಮನಾದ **ಸಾನುಕೂಲಗ್ರಹೋದಯೇ** ಅನುಕೂಲದಿಂದ ಕೂಡಿದ ಯಾವ ಗ್ರಹಗಳಿವೆಯೋ ಅವುಗಳು ಉದಯವಾಗುವ ಕಾಲದಲ್ಲಿ ಅಂತಹ ಶುಭಲಗ್ನದಲ್ಲಿ **ಪಾಂಡೋಃ** ಪಾಂಡುರಾಜನ **ವಂಶಧರಃ** ವಂಶವನ್ನು ಹೊತ್ತಿರುವ **ಓಜಸಾ** ಸಾಮರ್ಥ್ಯದಿಂದ **ಭೂಯಃ** ಮತ್ತೆ **ಪಾಂಡುಃ ಇವ** ಪಾಂಡುರಾಜನಂತೆ ಇರುವ ಪರೀಕ್ಷಿತನು **ಜಜ್ಞೇ** ಹುಟ್ಟಿದನು.

**ತಸ್ಯ ಪ್ರೀತಮನಾ ರಾಜಾ ವಿಪ್ರೈರ್ಧೌಮ್ಯಕೃಪಾದಿಭಿಃ ।**
**ಜಾತಕಂ ಕಾರಯಾಮಾಸ ವಾಚಯಿತ್ವಾ ಚ ಮಂಗಲಮ್ ॥೧೩॥**

**ರಾಜಾ** ಯುಧಿಷ್ಠಿರನು **ಪ್ರೀತಮನಾಃ ಸನ್** ಪುತ್ರನ ಹುಟ್ಟುವಿಕೆಯಿಂದ ಸಂತೋಷಗೊಂಡ ಮನಸ್ಸುಳ್ಳವನಾಗಿ **ವಿಪ್ರೈಃ** ಬ್ರಾಹ್ಮಣರಾದ **ಧೌಮ್ಯಕೃಪಾದಿಭಿಃ** ಧೌಮ್ಯಾಚಾರ್ಯರು, ಕೃಪಾಚಾರ್ಯರೇ ಮೊದಲಾದವರಿಂದ **ತಸ್ಯ** ಆ ಮಗುವಿಗೆ **ಮಂಗಲಂ** ಪುಣ್ಯಾಹವಾಚನವನ್ನು **ವಾಚಯಿತ್ವಾ** ಮಾಡಿಸಿ **ಚ** ಮತ್ತು **ಜಾತಕಂ** ಜಾತಕರ್ಮವನ್ನು **ಕಾರಯಾಮಾಸ** ಮಾಡಿಸಿದನು.

**ಹಿರಣ್ಯಂ ಗಾಂ ಮಹೀಂ ಗ್ರಾಮಾನ್‌ಹಸ್ತ್ಯಶ್ವಾನ್ನೃಪತಿರ್ವರಾನ್ ।**
**ಪ್ರಾದಾತ್ಸ್ವನ್ನಂ ಚ ವಿಪ್ರೇಭ್ಯಃ ಪ್ರಜಾತೀರ್ಥೇ ಸ ತೀರ್ಥವಿತ್ ॥೧೪॥**

**ತೀರ್ಥವಿತ್** ಶಾಸ್ತ್ರವನ್ನು ತಿಳಿದ ಅಥವಾ ಸತ್ಪಾತ್ರತೆಯನ್ನು ತಿಳಿದಿರುವ **ಸ ನೃಪತಿಃ** ಆ ಯುಧಿಷ್ಠಿರನು **ಪ್ರಜಾತೀರ್ಥೇ** ಮಗನ ಜನ್ಮವಾಗುವ ಪುಣ್ಯಕಾಲದಲ್ಲಿ (ಪುತ್ರೇ ಜಾತೇ ವ್ಯತೀಪಾತೇ ದತ್ತಂ ಭವತಿ ಚಾಕ್ಷಯಮಿತಿ ವಚನಾತ್) ಎಂಬ ಪ್ರಮಾಣಕ್ಕನುಗುಣವಾಗಿ **ವಿಪ್ರೇಭ್ಯಃ** ಬ್ರಾಹ್ಮಣರಿಗೆ **ಹಿರಣ್ಯಂ** ಬಂಗಾರವನ್ನು **ಗಾಂ** ಗೋವುಗಳನ್ನು **ಮಹೀಂ** ಭೂಮಿಯನ್ನು **ವರಾನ್** ಶ್ರೇಷ್ಠವಾದ **ಹಸ್ತ್ಯಶ್ವಾನ್** ಆನೆಗಳನ್ನು ಕುದುರೆಗಳನ್ನು **ಗ್ರಾಮಾನ್** ಗ್ರಾಮಗಳನ್ನು **ಚ** ಮತ್ತು **ಸ್ವನ್ನಂ** ಶ್ರೇಷ್ಠವಾದ ಅನ್ನವನ್ನು **ಪ್ರಾದಾತ್** ಗರ್ಭನಾಳವನ್ನು ಕತ್ತರಿಸುವದಕ್ಕಿಂತ ಪೂರ್ವದಲ್ಲಿಯೇ ಕೊಟ್ಟನು ಈ ವಿಧವಾಗಿಯೇ ಅರ್ಥಮಾಡಬೇಕು ಯಾಕೆಂದರೆ ಗರ್ಭನಾಳವನ್ನು ಕತ್ತರಿಸಿದ

ಮೇಲೆ ಸೂತಕವು ಆರಂಭವಾಗುವದು ಆಗ ಅನ್ನದಾನಮಾಡಲು ಬರುವದಿಲ್ಲ. ಆದಕ್ಕಾಗಿ ಪೂರ್ವದಲ್ಲಿಯೇ ದಾನಮಾಡಿದನು ಎಂದಭಿಪ್ರಾಯ.

**ವಿಶೇಷಃ-** ಈ ವಿಷಯದಲ್ಲಿ ಪ್ರಮಾಣವನ್ನು ತಿಳಿಸುವರು 'ಯಾವನ್ನ ಛಿದ್ಯತೇ ನಾಲಂ ತಾವನ್ನಾಪ್ನೋತಿ ಸೂತಕಮ್. ಛಿನ್ನೇ ನಾಲೇ ತತಃ ಪಶ್ಚಾತ್ಸೂತಕಂ ತು ವಿಧೀಯತೇ' ಇತಿ ವಚನಾತ್. ಈ ಮಾತಿನಿಂದ ತಿಳಿದು ಬರುವದು.

**ತಮೂಚುರ್ಬ್ರಾಹ್ಮಣಾಸ್ತುಷ್ಟಾ ರಾಜಾನಂ ಪ್ರಶ್ರಯಾನತಮ್ ।**
**ಏಷ ಹ್ಯಸ್ಮಿನ್ಪ್ರಜಾತಂತೌ ಕುರೂಣಾಂ ಪೌರವರ್ಷಭ ॥೧೭॥**

**ಹೇ ಪೌರವರ್ಷಭ** ಪುರುವಂಶದಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ **ಕುರೂಣಾಂ** ಕುರುವಂಶದಲ್ಲಿ ಹುಟ್ಟಿದವರಿಗೆ **ಅಸ್ಮಿನ್** ಕುಲದಲ್ಲಿ **ಪ್ರಜಾತಂತೌ** ಪುತ್ರಸಂತಾನದಲ್ಲಿ **ಏಷಃ ಹಿ** ಇವನೇ ಪ್ರಸಿದ್ಧನಾಗುವನು ಎಂದು **ತುಷ್ಟಾಃ** ಸಂತುಷ್ಟರಾದ **ಬ್ರಾಹ್ಮಣಾಃ** ಬ್ರಾಹ್ಮಣರು **ಪ್ರಶ್ರಯಾನತಂ** ವಿನಯದಿಂದ ತಲೆಬಾಗಿದ **ತಂ ರಾಜಾನಂ** ಆ ಯುಧಿಷ್ಠಿರನನ್ನು ಕುರಿತು **ಊಚುಃ** ಹೇಳಿದರು.

**ದೈವೇನಾಪ್ರತಿಘಾತೇನ ಕುಲೇ ಸಂಸ್ಥಾಮುಪೇಯುಷಿ.**
**ರಾತೋ ವೋ ಅನುಗ್ರಹಾರ್ಥಾಯ ವಿಷ್ಣುನಾ ಪ್ರಭವಿಷ್ಣುನಾ ॥೧೬॥**

**ತಸ್ಮಾನ್ನಾಮ್ನಾ ವಿಷ್ಣುರಾತ ಇತಿ ಲೋಕೇ ಬೃಹಚ್ಛ್ರವಾಃ.**
**ಭವಿಷ್ಯತಿ ನ ಸಂದೇಹೋ ಮಹಾಭಾಗವತೋ ಮಹಾನ್ ॥೧೭॥**

**ಅಪ್ರತಿಘಾತೇನ** ತಡೆಯಲಶಕ್ಯವಾದ **ದೈವೇನ** ಬ್ರಹ್ಮಾಸ್ತ್ರದಿಂದ **ಸಂಸ್ಥಾಂ** ಅಸ್ತಿತ್ವದ ವಿನಾಶಂ ನಾಶವು **ಉಪೇಯುಷಿ ಸತಿ** ಆಗಿಹೋಗುತ್ತಿರಲು **ವಃ** ಪಾಂಡವರಾದ ನಿಮ್ಮ **ಅನುಗ್ರಹಾರ್ಥಾಯ** ಅನುಗ್ರಹಕ್ಕಾಗಿ **ಪ್ರಭವಿಷ್ಣುನಾ** ರಕ್ಷಣಾಸಾಮರ್ಥ್ಯವೇ ಸ್ವಭಾವವಾಗಿರುವ **ವಿಷ್ಣುನಾ** ಶ್ರೀಕೃಷ್ಣನಿಂದ **ರಾತಃ** ಕೊಡಲ್ಪಟ್ಟಿರುವನು **ತಸ್ಮಾತ್** ಆ ಕಾರಣದಿಂದ **ನಾಮ್ನಾ** ಹೆಸರಿನಿಂದಲೂ **ವಿಷ್ಣುರಾತಃ** ವಿಷ್ಣುರಾತನು **ಇತಿ** ಎಂದು **ಲೋಕೇ** ಜಗತ್ತಿನಲ್ಲಿ **ಬೃಹಚ್ಛ್ರವಾಃ** ಪ್ರಸಿದ್ಧವಾದ ಯಶಸ್ಸುಳ್ಳವನು **ಮಹಾನ್** ಗುಣಗಳಿಂದ ಶ್ರೇಷ್ಠನು **ಮಹಾಭಾಗವತಃ** ಮಹಾಭಗವದ್ಭಕ್ತನು **ಭವಿಷ್ಯತಿ** ಆಗುತ್ತಾನೆ **ನ ಸಂದೇಹಃ** ಸಂಶಯವಿಲ್ಲ.

ಬ್ರಾಹ್ಮಣರ ಆ ಮಾತುಗಳನ್ನು ಕೇಳಿ ಸಂತುಷ್ಟನಾದ ಯುಧಿಷ್ಠಿರನು ಅವರನ್ನು ಪ್ರಶ್ನಿಸುತ್ತಾನೆ.

ರಾಜೋವಾಚ -

**ಅಪ್ಯೇಷ ವಂಶ್ಯಾನ್ರಾಜರ್ಷೀನ್ಪುಣ್ಯಶ್ಲೋಕಾನ್ಮಹಾತ್ಮನಃ.**
**ಅನುವರ್ತಿತಾ ಸ್ವಿದ್ಯಶಸಾ ಸಾಧುವಾದೇನ ಸತ್ತಮಾಃ ॥೧೮॥**

**ಹೇ ಸತ್ತಮಾಃ** ಸಜ್ಜನರಾದ ಬ್ರಾಹ್ಮಣರೇ **ಸಾಧುವಾದೇನ** ಸಜ್ಜನರಲ್ಲಿ ನಡೆಯುವ ಮಾತಿನಿಂದ, ಒಳ್ಳೆಯ ಮಾತಿನಿಂದ ಅಥವಾ ಒಳ್ಳೆಯದಾಗಲಿ ಎಂಬ ಮಾತಿನಿಂದ **ಮಹಾತ್ಮಾನಃ** ಮಹಾತ್ಮರಾದ **ಪುಣ್ಯಶ್ಲೋಕಾನ್** ಪುಣ್ಯವಂತರು ಎಂದು ಹೊಗಳಿಸಿಕೊಂಡಿರುವ **ವಂಶ್ಯಾನ್** ವಂಶದಲ್ಲಿ ಹುಟ್ಟಿದ **ರಾಜರ್ಷೀನ್** ರಾಜಋಷಿಗಳನ್ನು **ಏಷಃ** ಈ ನನ್ನ ಮಗನು **ಅನುವರ್ತಿತಾ ಅಪಿ ಸ್ವಿತ್** ಅನುಸರಿಸುತ್ತಾನಷ್ಟೇ.

ಬ್ರಾಹ್ಮಣಾ ಊಚುಃ -

**ಪಾರ್ಥ ಪ್ರಜಾವಿತಾ ಸಾಕ್ಷಾದಿಕ್ಷ್ವಾಕುರಿವ ಮಾನವಃ ।**
**ಬ್ರಹ್ಮಣ್ಯಃ ಸತ್ಯಸಂಧಶ್ಚ ರಾಮೋ ದಾಶರಥಿರ್ಯಥಾ ॥೧೯॥**

**ಹೇ ಪಾರ್ಥ** ಹೇ ಯುಧಿಷ್ಠಿರನೇ **ಪ್ರಜಾವಿತಾ** ಪ್ರಜೆಗಳನ್ನು ರಕ್ಷಿಸುವ **ಮಾನವಃ** ಮನುವಿನ ಮಗನಾದ **ಸಾಕ್ಷಾತ್ ಇಕ್ಷ್ವಾಕುಃ ಇವ** ಇಕ್ಷ್ವಾಕುವಿನಂತೆ ಇರುವ **ಬ್ರಹ್ಮಣ್ಯಃ** ಬ್ರಾಹ್ಮಣರಿಗೆ ಹಿತವನ್ನುಂಟು ಮಾಡುವ **ಸತ್ಯಸಂಧಶ್ಚ** ಪ್ರತಿಜ್ಞೆಮಾಡಿದ್ದನ್ನು ಸತ್ಯಗೊಳಿಸುವ **ದಾಶರಥಿಃ** ದಶರಥರಾಜನ ಮಗನಾದ **ರಾಮಃ** ಶ್ರೀರಾಮಚಂದ್ರನು **ಯಥಾ** ಹೇಗೆ ಇದ್ದನೋ ಹಾಗೆ ನಿನ್ನ ಮಗನಾಗುವನು ಎಂದು ಭಾವ.

*ಭಾಗವತತಾತ್ಪರ್ಯ-*

**ರಾಮೋ ದಾಶರಥಿರ್ಯಥಾ ಅಧಿಕದೃಷ್ಟಾಂತಃ । ಊರ್ಣನಾಭ್ಯಾದಿಕೋ ವಿಷ್ಣೋರ್ವಿಷ್ಣುರ್ವಿಷ್ಣೋಸ್ತಥೈವ ಚ । ವಿಷ್ಣುರ್ಜೀವಸ್ಯ ದೃಷ್ಟಾಂತಾ ಊನಸಾಮ್ಯಾಧಿಕಾಃ ಕ್ರಮಾದಿತಿ ಬ್ರಾಹ್ಮೇ ॥೧೯॥**

**ದಾಶರಥಿಃ ರಾಮಃ** ದಶರಥನ ಮಗನಾದ ರಾಮನು ಎಂಬುದು **ಅಧಿಕದೃಷ್ಟಾಂತಃ** ಅಧಿಕವಾದ ದೃಷ್ಟಾಂತವು **ವಿಷ್ಣೋಃ** ವಿಷ್ಣುವಿಗೆ ಊರ್ಣನಾಭ್ಯಾದಿಕಃ ಊರ್ಣನಾಭಿ

ಮೊದಲಾದವುಗಳು ತಥಾ **ಚ** ಅದೇ ರೀತಿಯಾಗಿ **ವಿಷ್ಣೋಃ** ವಿಷ್ಣುವಿಗೆ **ವಿಷ್ಣುಃ** ಪರಮಾತ್ಮನು **ಜೀವಸ್ಯ** ಜೀವನಿಗೆ **ವಿಷ್ಣುಃ** ಪರಮಾತ್ಮನು **ಊನಸಾಮ್ಯಾಧಿಕಾಃ** ಪರಮಾತ್ಮನಿಗಿಂತಲೂ ಕಡಿಮೆ, ಸಮನಾಗಿ ಮತ್ತು ಅಧಿಕವಾಗಿ **ಕ್ರಮಾತ್** ಕ್ರಮವಾಗಿ **ದೃಷ್ಟಾಂತಾಃ** ದೃಷ್ಟಾಂತಗಳಾಗುವದು ಎಂದು ಬ್ರಾಹ್ಮಪುರಾಣವು ಹೇಳುತ್ತದೆ.

**ಏಷ ಧಾತಾ ಶರಣ್ಯಂ ಚ ಯಥಾ ಹ್ಯೌಶೀನರಃ ಶಿಬಿಃ.**
**ಯಶೋ ವಿತನಿತಾ ಸ್ವಾನಾಂ ದೌಷ್ಯಂತಿರಿವ ಯಜ್ವನಾಮ್ ॥೨೦॥**

**ಔಶೀನರಃ** ಉಶೀನರರಾಜನ ಮಗನಾದ ಅಥವಾ ಉಶೀನರದೇಶಕ್ಕೆ ಒಡೆಯನಾದ **ಶಿಬಿಃ** ಶಿಬಿರಾಜನು **ಯಥಾ** ಗಿಡಗಪಕ್ಷಿಯಿಂದ ರಕ್ಷಣೆಯನ್ನು ಕೇಳಿಬಂದ ಕಪೋತವನ್ನು ಆ ಗಿಡಗಕ್ಕೆ ತನ್ನ ದೇಹದ ಮಾಂಸವನ್ನು ಕೊಟ್ಟು ಅದರ ಪ್ರಾಣವನ್ನು ರಕ್ಷಿಸಿದನೋ **ಸ್ವಾನಾಂ** ತಮ್ಮ ಬಂಧುಗಳ **ಯಜ್ವನಾಂ** ಯಾಗಗಳನ್ನು ಮಾಡುವವರ **ದೌಷ್ಯಂತಿಃ ಇವ** ದುಷ್ಯಂತನ ಮಗನಾದ ಭರತನು ರಕ್ಷಿಸಿ ಯಶಸ್ಸನ್ನು ಪಡೆಯುವಂತೆ **ಏಷಃ** ಈ ನಿನ್ನ ಮಗನಾದ ವಿಷ್ಣುರಾತನು (ಪರೀಕ್ಷಿತನು) **ಧಾತಾ** ಪ್ರಜೆಗಳ ಧಾರಣೆಯನ್ನು ಮಾಡುವನು **ಚ** ಮತ್ತು **ಶರಣ್ಯಂ** ಶರಣಾಗತರನ್ನು ರಕ್ಷಿಸುವನು **ಯಶಃ ವಿತನಿತಾ** ಯಶಸ್ಸನ್ನು ವಿಸ್ತಾರಗೊಳಿಸುವನು.

**ಧನ್ವಿನಾಮಗ್ರಣೀರೇಷಃ ತುಲ್ಯಶ್ಚಾರ್ಜುನಯೋರ್ದ್ವಯೋಃ.**
**ಹುತಾಶ ಇವ ದುರ್ಧರ್ಷಃ ಸಮುದ್ರ ಇವ ದುಸ್ತರಃ ॥೨೧॥**

**ದುರ್ಧರ್ಷಃ ಹುತಾಶಃ ಇವ** ಬೆಂಕಿಯಂತೆ ತಡೆಯಲಾಗದವನು **ದುಸ್ತರಃ** ದಾಟಲಾಗದ **ಸಮುದ್ರ ಇವ** ಸಮುದ್ರದಂತಿರುವನು **ಚ** ಮತ್ತು **ಧನ್ವಿನಾಂ ಅಗ್ರಣೀಃ** ಧನುರ್ಧಾರಿಗಳಿಗೆ ಮೊದಲಿಗನಾದ **ಏಷಃ** ಈ ವಿಷ್ಣುರಾತನು **ದ್ವಯೋಃ ಅರ್ಜುನಯೋಃ** ಕಾರ್ತವೀರ್ಯ ಮತ್ತು ಅರ್ಜುನರಿಗೆ **ತುಲ್ಯಃ** ಸಮಾನನಾಗುವನು.

**ಮೃಗೇಂದ್ರ ಇವ ವಿಕ್ರಾಂತೋ ನಿಷೇವ್ಯೋ ಹಿಮವಾನಿವ ।**
**ತಿತಿಕ್ಷುರ್ವಸುಧೇವಾಸೌ ಸಹಿಷ್ಣುಃ ಪಿತರಾವಿವ ॥೨೨॥**

**ಮೃಗೇಂದ್ರಃ** ಸಿಂಹವು **ವಿಕ್ರಾಂತಃ ಇವ** ಪರಾಕ್ರಮಶಾಲಿಯಾಗುವಂತೆ **ಹಿಮವಾನ್** ಹಿಮಾಲಯವು **ನಿಷೇವ್ಯಃ ಇವ** ಸಜ್ಜನರಿಂದ ಸೇವಿತವಾಗುವಂತೆ **ವಸುಧಾ** ಭೂಮಿಯು **ತಿತಿಕ್ಷುಃ ಇವ** ಕ್ಷಮಾಗುಣವುಳ್ಳಂತೆ **ಪಿತರೌ** ತಂದೆ ತಾಯಿಗಳ ವಿಷಯದಲ್ಲಿ

ಸಹನಸ್ವಭಾವುಳ್ಳವನಾಗುವಂತೆ **ಅಸೌ** ಈ ವಿಷ್ಣುರಾತನು ಪರಾಕ್ರಮಿಯು ಸಜ್ಜನರಿಂದ ಪೂಜ್ಯನು, ಕ್ಷಮಾಗುಣವುಳ್ಳವನು, ಸಹನಸ್ವಭಾವವುಳ್ಳವನು **ಭವಿಷ್ಯತಿ** ಆಗುವನು.

**ಪಿತಾಮಹಸಮಃ ಸಾಮ್ಯೇ ಪ್ರಸಾದೇ ಗಿರಿಶೋಪಮಃ.**
**ಆಶ್ರಯಃ ಸರ್ವಭೂತಾನಾಂ ಯತಾ ದೇವೋ ರಮಾಶ್ರಯಃ ॥೨೩॥**

**ಸಾಮ್ಯೇ** ಸರಿಯಾಗಿ ಇರುವ ವಿಷಯದಲ್ಲಿ **ಪಿತಾಮಹಸಮಃ** ಬ್ರಹ್ಮದೇವರಿಗೆ ಸಮಾನನಾಗುವನು **ಪ್ರಸಾದೇ** ಸಂತೋಷಗೊಳ್ಳುವ ವಿಷಯದಲ್ಲಿ **ಗಿರಿಶೋಪಮಃ** ರುದ್ರದೇವರಿಗೆ ಸಮಾನನಾಗುವನು **ರಮಾಶ್ರಯಃ** ಲಕ್ಷ್ಮೀಗೆ ಪತಿಯಾದ **ಯಥಾ ದೇವಃ** ಪರಮಾತ್ಮನು ಎಲ್ಲ ಜೀವರಿಗೆ ಆಶ್ರಯನಾಗುವಂತೆ **ಸರ್ವಭೂತಾನಾಂ** ಎಲ್ಲ ಪ್ರಜೆಗಳಿಗೆ **ಆಶ್ರಯಃ** ಆಶ್ರಯನಾಗುವನು.

**ಸರ್ವಸದ್ಗುಣಮಾಹಾತ್ಮ್ಯ ಏಷ ಕೃಷ್ಣಮನುವ್ರತಃ ।**
**ರಂತಿದೇವ ಇವೋದಾರೋ ಯಯಾತಿರಿವ ಧಾರ್ಮಿಕಃ ॥೨೪॥**

**ಸರ್ವಸದ್ಗುಣಮಾಹಾತ್ಮ್ಯಃ** ಸಜ್ಜನರಲ್ಲಿರುವ ಎಲ್ಲ ಗುಣಗಳಿಂದ ಮಹಾಮಹಿಮನಾದ **ಕೃಷ್ಣಂ** ಶ್ರೀಕೃಷ್ಣನನ್ನು **ಅನುವೃತಃ** ಅನುಸರಿಸಿರುವ **ಏಷಃ** ಈ ನಿನ್ನ ಮಗನಾದ ವಿಷ್ಣುರಾತನು **ರಂತಿದೇವಃ ಇವ** ರಂತಿದೇವನು ಉದಾರಸ್ವಭಾವದವನಂತೆ **ಉದಾರಃ** ಉದಾರಿಯು ಆಗುವನು **ಯಯಾತಿಃ ಇವ** ಯಯಾತಿಯು ಧಾರ್ಮಿಕನಾಗುವಂತೆ **ಧಾರ್ಮಿಕಃ** ಧಾರ್ಮಿಕನಾಗುವನು.

**ಧೃತ್ಯಾಂ ಬಲಿಸಮಃ ಕೃಷ್ಣೇ ಪ್ರಹ್ಲಾದ ಇವ ಸದ್ಗ್ರಹಃ ।**
**ಆಹರ್ತೈಷೋ ಅಶ್ವಮೇಧಾನಾಂ ವೃದ್ಧಾನಾಂ ಪರ್ಯುಪಾಸಕಃ ॥೨೫॥**

**ಧೃತ್ಯಾಂ** ಧೈರ್ಯದ ವಿಷಯದಲ್ಲಿ **ಬಲಿಸಮಃ** ಬಲಿಚಕ್ರವರ್ತಿಗೆ ಸಮಾನನಾದವನು **ಕೃಷ್ಣೇ** ಭಗವಂತನ ಭಕ್ತಿವಿಷಯದಲ್ಲಿ **ಪ್ರಹ್ಲಾದಃ ಇವ** ಪ್ರಹ್ಲಾದ ರಾಜನು ಭಕ್ತಿಮಾಡುವಂತೆ **ಸದ್ಗ್ರಹಃ** ಭಗವಂತನಲ್ಲಿ ಭಕ್ತಿಮಾಡುವವನು **ವೃದ್ಧಾನಾಂ** ಜ್ಞಾನವೃದ್ಧರ **ಪರ್ಯುಪಾಸಕಃ** ಸೇವೆಯನ್ನು ಮಾಡುವ **ಅಶ್ವಮೇಧಾನಾಂ** ಅಶ್ವಮೇಧಯಾಗಗಳನ್ನು **ಏಷಃ ಆಹರ್ತಾ** ಈ ವಿಷ್ಣುರಾತನು ಮಾಡುವವನಾಗುತ್ತಾನೆ.

**ರಾಜರ್ಷೀಣಾಂ ಜನಯಿತಾ ಶಾಸ್ತಾ ಚೋತ್ಪಥಗಾಮಿನಾಮ್ ।**
**ನಿಗ್ರಹೀತಾ ಕಲೇರೇಷ ಭುವೋ ಧರ್ಮಸ್ಯ ಕಾರಣಾತ್ ॥೨೬॥**

ಮೊದಲಾದವುಗಳು ತಥಾ **ಚ** ಅದೇ ರೀತಿಯಾಗಿ **ವಿಷ್ಣೋಃ** ವಿಷ್ಣುವಿಗೆ **ವಿಷ್ಣುಃ** ಪರಮಾತ್ಮನು **ಜೀವಸ್ಯ** ಜೀವನಿಗೆ **ವಿಷ್ಣುಃ** ಪರಮಾತ್ಮನು **ಊನಸಾಮ್ಯಾಧಿಕಾಃ** ಪರಮಾತ್ಮನಿಗಿಂತಲೂ ಕಡಿಮೆ, ಸಮನಾಗಿ ಮತ್ತು ಅಧಿಕವಾಗಿ **ಕ್ರಮಾತ್** ಕ್ರಮವಾಗಿ **ದೃಷ್ಟಾಂತಾಃ** ದೃಷ್ಟಾಂತಗಳಾಗುವದು ಎಂದು ಬ್ರಾಹ್ಮಪುರಾಣವು ಹೇಳುತ್ತದೆ.

**ಏಷ ಧಾತಾ ಶರಣ್ಯಂ ಚ ಯಥಾ ಹ್ಯೌಶೀನರಃ ಶಿಬಿಃ.**
**ಯಶೋ ವಿತನಿತಾ ಸ್ವಾನಾಂ ದೌಷ್ಯಂತಿರಿವ ಯಜ್ವನಾಮ್ ॥೨೦॥**

**ಔಶೀನರಃ** ಉಶೀನರರಾಜನ ಮಗನಾದ ಅಥವಾ ಉಶೀನರದೇಶಕ್ಕೆ ಒಡೆಯನಾದ **ಶಿಬಿಃ** ಶಿಬಿರಾಜನು **ಯಥಾ** ಗಿಡಗಪಕ್ಷಿಯಿಂದ ರಕ್ಷಣೆಯನ್ನು ಕೇಳಿಬಂದ ಕಪೋತವನ್ನು ಆ ಗಿಡಗಕ್ಕೆ ತನ್ನ ದೇಹದ ಮಾಂಸವನ್ನು ಕೊಟ್ಟು ಅದರ ಪ್ರಾಣವನ್ನು ರಕ್ಷಿಸಿದನೋ **ಸ್ವಾನಾಂ** ತಮ್ಮ ಬಂಧುಗಳ **ಯಜ್ವನಾಂ** ಯಾಗಗಳನ್ನು ಮಾಡುವವರ **ದೌಷ್ಯಂತಿಃ ಇವ** ದುಷ್ಯಂತನ ಮಗನಾದ ಭರತನು ರಕ್ಷಿಸಿ ಯಶಸ್ಸನ್ನು ಪಡೆಯುವಂತೆ **ಏಷಃ** ಈ ನಿನ್ನ ಮಗನಾದ ವಿಷ್ಣುರಾತನು (ಪರೀಕ್ಷಿತನು) **ಧಾತಾ** ಪ್ರಜೆಗಳ ಧಾರಣೆಯನ್ನು ಮಾಡುವನು **ಚ** ಮತ್ತು **ಶರಣ್ಯಂ** ಶರಣಾಗತರನ್ನು ರಕ್ಷಿಸುವನು **ಯಶಃ ವಿತನಿತಾ** ಯಶಸ್ಸನ್ನು ವಿಸ್ತಾರಗೊಳಿಸುವನು.

**ಧನ್ವಿನಾಮಗ್ರಣೀರೇಷಃ ತುಲ್ಯಶ್ಚಾರ್ಜುನಯೋರ್ದ್ವಯೋಃ.**
**ಹುತಾಶ ಇವ ದುರ್ಧರ್ಷಃ ಸಮುದ್ರ ಇವ ದುಸ್ತರಃ ॥೨೧॥**

**ದುರ್ಧರ್ಷಃ ಹುತಾಶಃ ಇವ** ಬೆಂಕಿಯಂತೆ ತಡೆಯಲಾಗದವನು **ದುಸ್ತರಃ** ದಾಟಲಾಗದ **ಸಮುದ್ರ ಇವ** ಸಮುದ್ರದಂತಿರುವನು **ಚ** ಮತ್ತು **ಧನ್ವಿನಾಂ ಅಗ್ರಣೀಃ** ಧನುರ್ಧಾರಿಗಳಿಗೆ ಮೊದಲಿಗನಾದ **ಏಷಃ** ಈ ವಿಷ್ಣುರಾತನು **ದ್ವಯೋಃ ಅರ್ಜುನಯೋಃ** ಕಾರ್ತವೀರ್ಯ ಮತ್ತು ಅರ್ಜುನರಿಗೆ **ತುಲ್ಯಃ** ಸಮಾನನಾಗುವನು.

**ಮೃಗೇಂದ್ರ ಇವ ವಿಕ್ರಾಂತೋ ನಿಷೇವ್ಯೋ ಹಿಮವಾನಿವ ।**
**ತಿತಿಕ್ಷುರ್ವಸುಧೇವಾಸೌ ಸಹಿಷ್ಣುಃ ಪಿತರಾವಿವ ॥೨೨॥**

**ಮೃಗೇಂದ್ರಃ** ಸಿಂಹವು **ವಿಕ್ರಾಂತಃ ಇವ** ಪರಾಕ್ರಮಶಾಲಿಯಾಗುವಂತೆ **ಹಿಮವಾನ್** ಹಿಮಾಲಯವು **ನಿಷೇವ್ಯಃ ಇವ** ಸಜ್ಜನರಿಂದ ಸೇವಿತವಾಗುವಂತೆ **ವಸುಧಾ** ಭೂಮಿಯು **ತಿತಿಕ್ಷುಃ ಇವ** ಕ್ಷಮಾಗುಣವುಳ್ಳಂತೆ **ಪಿತರೌ** ತಂದೆ ತಾಯಿಗಳ ವಿಷಯದಲ್ಲಿ

ಸಹನಸ್ವಭಾವುಳ್ಳವನಾಗುವಂತೆ **ಅಸೌ** ಈ ವಿಷ್ಣುರಾತನು ಪರಾಕ್ರಮಿಯು ಸಜ್ಜನರಿಂದ ಪೂಜ್ಯನು, ಕ್ಷಮಾಗುಣವುಳ್ಳವನು, ಸಹನಸ್ವಭಾವವುಳ್ಳವನು **ಭವಿಷ್ಯತಿ** ಆಗುವನು.

**ಪಿತಾಮಹಸಮಃ ಸಾಮ್ಯೇ ಪ್ರಸಾದೇ ಗಿರಿಶೋಪಮಃ.**
**ಆಶ್ರಯಃ ಸರ್ವಭೂತಾನಾಂ ಯತಾ ದೇವೋ ರಮಾಶ್ರಯಃ ॥೨೩॥**

**ಸಾಮ್ಯೇ** ಸರಿಯಾಗಿ ಇರುವ ವಿಷಯದಲ್ಲಿ **ಪಿತಾಮಹಸಮಃ** ಬ್ರಹ್ಮದೇವರಿಗೆ ಸಮಾನನಾಗುವನು **ಪ್ರಸಾದೇ** ಸಂತೋಷಗೊಳ್ಳುವ ವಿಷಯದಲ್ಲಿ **ಗಿರಿಶೋಪಮಃ** ರುದ್ರದೇವರಿಗೆ ಸಮಾನನಾಗುವನು **ರಮಾಶ್ರಯಃ** ಲಕ್ಷ್ಮೀಗೆ ಪತಿಯಾದ **ಯಥಾ ದೇವಃ** ಪರಮಾತ್ಮನು ಎಲ್ಲ ಜೀವರಿಗೆ ಆಶ್ರಯನಾಗುವಂತೆ **ಸರ್ವಭೂತಾನಾಂ** ಎಲ್ಲ ಪ್ರಜೆಗಳಿಗೆ **ಆಶ್ರಯಃ** ಆಶ್ರಯನಾಗುವನು.

**ಸರ್ವಸದ್ಗುಣಮಾಹಾತ್ಮ್ಯ ಏಷ ಕೃಷ್ಣಮನುವ್ರತಃ ।**
**ರಂತಿದೇವ ಇವೋದಾರೋ ಯಯಾತಿರಿವ ಧಾರ್ಮಿಕಃ ॥೨೪॥**

**ಸರ್ವಸದ್ಗುಣಮಾಹಾತ್ಮ್ಯಃ** ಸಜ್ಜನರಲ್ಲಿರುವ ಎಲ್ಲ ಗುಣಗಳಿಂದ ಮಹಾಮಹಿಮನಾದ **ಕೃಷ್ಣಂ** ಶ್ರೀಕೃಷ್ಣನನ್ನು **ಅನುವ್ರತಃ** ಅನುಸರಿಸಿರುವ **ಏಷಃ** ಈ ನಿನ್ನ ಮಗನಾದ ವಿಷ್ಣುರಾತನು **ರಂತಿದೇವಃ ಇವ** ರಂತಿದೇವನು ಉದಾರಸ್ವಭಾವದವನಂತೆ **ಉದಾರಃ** ಉದಾರಿಯು ಆಗುವನು **ಯಯಾತಿಃ ಇವ** ಯಯಾತಿಯು ಧಾರ್ಮಿಕನಾಗುವಂತೆ **ಧಾರ್ಮಿಕಃ** ಧಾರ್ಮಿಕನಾಗುವನು.

**ಧೃತ್ಯಾಂ ಬಲಿಸಮಃ ಕೃಷ್ಣೇ ಪ್ರಹ್ಲಾದ ಇವ ಸದ್ಗ್ರಹಃ ।**
**ಆಹರ್ತ್ಯೈಷೋ ಅಶ್ವಮೇಧಾನಾಂ ವೃದ್ಧಾನಾಂ ಪರ್ಯುಪಾಸಕಃ ॥೨೫॥**

**ಧೃತ್ಯಾಂ** ಧೈರ್ಯದ ವಿಷಯದಲ್ಲಿ **ಬಲಿಸಮಃ** ಬಲಿಚಕ್ರವರ್ತಿಗೆ ಸಮಾನನಾದವನು **ಕೃಷ್ಣೇ** ಭಗವಂತನ ಭಕ್ತಿವಿಷಯದಲ್ಲಿ **ಪ್ರಹ್ಲಾದಃ ಇವ** ಪ್ರಹ್ಲಾದ ರಾಜನು ಭಕ್ತಿಮಾಡುವಂತೆ **ಸದ್ಗ್ರಹಃ** ಭಗವಂತನಲ್ಲಿ ಭಕ್ತಿಮಾಡುವವನು **ವೃದ್ಧಾನಾಂ** ಜ್ಞಾನವೃದ್ಧರ **ಪರ್ಯುಪಾಸಕಃ** ಸೇವೆಯನ್ನು ಮಾಡುವ **ಅಶ್ವಮೇಧಾನಾಂ** ಅಶ್ವಮೇಧಯಾಗಗಳನ್ನು **ಏಷಃ ಆಹರ್ತಾ** ಈ ವಿಷ್ಣುರಾತನು ಮಾಡುವವನಾಗುತ್ತಾನೆ.

**ರಾಜರ್ಷೀಣಾಂ ಜನಯಿತಾ ಶಾಸ್ತಾ ಚೋತ್ಪಥಗಾಮಿನಾಮ್ ।**
**ನಿಗೃಹೀತಾ ಕಲೇರೇಷ ಭುವೋ ಧರ್ಮಸ್ಯ ಕಾರಣಾತ್ ॥೨೬॥**

**ರಾಜರ್ಷೀಣಾಂ** ರಾಜರ್ಷಿಗಳಾದ ಜನಮೇಜಯ ಮೊದಲಾದವರನ್ನು **ಜನಯಿತ್ವಾ** ಹುಟ್ಟಿಸುವ **ಚ** ಮತ್ತು **ಉತ್ಪಥಗಾಮಿನಾಂ** ಶಾಸ್ತ್ರವಿರುದ್ಧವಾದ ದಾರಿಯಲ್ಲಿ ನಡೆಯುತ್ತಿರುವವರ **ಶಾಸ್ತಾ** ಶಾಸನವನ್ನು ಮಾಡುವವನು **ಏಷಃ** ಈ ವಿಷ್ಣುರಾತನು **ಭುವಃ** ಗೋರೂಪವನ್ನು ಧರಿಸಿರುವ ಭೂಮಿಗೆ **ಚ** ಮತ್ತು **ಧರ್ಮಸ್ಯ** ಎತ್ತಿನ ರೂಪವನ್ನು ಧರಿಸಿರುವ ಧರ್ಮಕ್ಕೆ **ಕಾರಣಾತ್** ರಕ್ಷಣೆಯನ್ನು ಕೊಡುವ ನೆಪದಿಂದ **ಕಲೇಃ** ಶೂದ್ರವೇಷವನ್ನು ಧರಿಸಿರುವವನ **ನಿಗೃಹೀತಾ** ನಿಗ್ರಹವನ್ನು ಮಾಡುವವನು **ಭವಿಷ್ಯತಿ** ಆಗುವನು.

**ತಕ್ಷಕಾದಾತ್ಮನೋ ಮೃತ್ಯುಂ ದ್ವಿಜಪುತ್ರೋಪಸರ್ಜಿತಾತ್ ।**
**ಪ್ರಪತ್ಸ್ಯತ ಉಪಶ್ರುತ್ಯ ಮುಕ್ತಸಂಗಃ ಪದಂ ಹರೇಃ ॥೨೭॥**

**ದ್ವಿಜಪುತ್ರೋಪಸರ್ಜಿತಾತ್** ಬ್ರಾಹ್ಮಣರ ಮಗನ ಶಾಪದಿಂದ ಪ್ರೇರಿತನಾದ **ತಕ್ಷಕಾತ್** ತಕ್ಷಕಸರ್ಪದಿಂದ **ಆತ್ಮನಃ** ತನ್ನ **ಮೃತ್ಯುಂ** ಮರಣವನ್ನು **ಉಪಶ್ರುತ್ಯ** ಕೇಳಿ **ಮುಕ್ತಸಂಗಃ** ಸಾಂಸಾರಿಕಭೋಗಗಳಲ್ಲಿ ಆಸಕ್ತಿಯನ್ನು ಬಿಡುವವನಾಗಿ **ಹರೇಃ ಪದಂ** ಭಗವಂತನ ಪಾದವನ್ನು **ಪ್ರಪತ್ಸ್ಯತ** ಭಜಿಸುತ್ತಾನೆ.

**ಜಿಜ್ಞಾಸಿತಾತ್ಮಯಾಥಾತ್ಮ್ಯೋ ಮುನೇರ್ವ್ಯಾಸಸುತಾದಸೌ.**
**ಹಿತ್ವೇದಂ ನೃಪ ಗಂಗಾಯಾಂ ಯಾಸ್ಯತ್ಯದ್ಧಾ ಅಕುತೋಭಯಮ್ ॥೨೮॥**

**ಹೇ ನೃಪ** ಯುಧಿಷ್ಠಿರನೇ **ಅಸೌ** ಈ ವಿಷ್ಣುರಾತನು **ವ್ಯಾಸಸುತಾತ್** ವೇದವ್ಯಾಸದೇವರ ಮಕ್ಕಳಾದ **ಮುನೇಃ** ಮುನಿಗಳಾದ ಶುಕಾಚಾರ್ಯರಿಂದ **ಜಿಜ್ಞಾಸಿತಾತ್ಮಯಾಥಾತ್ಮ್ಯಃ** ಭಗವಂತನ ಸರ್ವೋತ್ತಮತ್ವಾದಿಗಳನ್ನು ವಿಚಾರಿಸುವವರಾಗಿ **ಗಂಗಾಯಾಂ** ಗಂಗಾನದಿಯಲ್ಲಿ **ಇದಂ** ಈ ಪಾಂಚಭೌತಿಕ ಶರೀರವನ್ನು **ಹಿತ್ವಾ** ಬಿಟ್ಟು **ಅಕುತೋಭಯಂ** ಎಲ್ಲಿ ಯಾವುದರಿಂದಲೂ ಭಯವಿಲ್ಲವೋ ಅಂತಹ ವೈಕುಂಠಲೋಕವನ್ನು ಕುರಿತು **ಯಾಸ್ಯತಿ** ಹೋಗುತ್ತಾನೆ **ಅದ್ಧಾ** ಇದು ನಿಶ್ಚಿತ.

**ಇತಿ ರಾಜ್ಞ ಉಪಾದಿಶ್ಯ ವಿಪ್ರಾ ಜಾತಕಕವಿದಾಃ.**
**ಲಬ್ಧಾಪಚಿತಯಃ ಸರ್ವೇ ಪ್ರತಿಜಗ್ಮುಃ ಸ್ವಕಾನ್ ಗೃಹಾನ್ ॥೨೯॥**

**ಇತಿ** ಪೂರ್ವದಲ್ಲಿ ಹೇಳಿದ ರೀತಿಯಾಗಿ **ರಾಜ್ಞಃ** ರಾಜನಾದ ಯುಧಿಷ್ಠಿರನಿಗೆ **ಉಪದಿಶ್ಯ** ಉಪದೇಶಿಸಿ **ಜಾತಕಕೋವಿದಾಃ** ಜಾತಕವನ್ನು ತಿಳಿದಿರುವ **ಲಬ್ಧಾಪಚಿತಯಃ**

ಸ್ವೀಕರಿಸಲ್ಪಟ್ಟ ಪೂಜೆಯುಳ್ಳ **ಸರ್ವೇ ವಿಪ್ರಾಃ** ಎಲ್ಲ ಬ್ರಾಹ್ಮಣರು **ಸ್ವಾನ್ ಗೃಹಾನ್** ತಮ್ಮ ಮನೆಗಳನ್ನು ಕುರಿತು **ಪ್ರತಿಜಗ್ಮುಃ** ತಿರುಗಿ ಹೋದರು.

ಬೇರೊಂದು ರೀತಿಯಲ್ಲಿಯೂ ಪರೀಕ್ಷಿತ್ ಎಂಬ ಹೆಸರಿಗೆ ವ್ಯಾಖ್ಯಾನಿಸುತ್ತಾರೆ.

**ಸ ಏಷ ಲೋಕೇ ವಿಖ್ಯಾತಃ ಪರೀಕ್ಷಿದಿತಿ ಯಃ ಪ್ರಭುಃ ।**
**ಸರ್ಪದೃಷಿಮನುಧ್ಯಾಯನ್ಪರೀಕ್ಷೇತ ನರೇಷ್ವಿಹ ॥೩೦॥**

**ಯಃ** ಪ್ರಸಿದ್ಧವಾದ ಚರಿತ್ರೆಯುಳ್ಳ **ಪ್ರಭುಃ** ಸಮರ್ಥನಾದ **ಯಸ್ಮಾತ್** ಯಾವಕಾರಣ **ಸರ್ಪದೃಷ್ಟಿಂ** ತಕ್ಷಕ ಎಂಬ ಸರ್ಪದ ದರ್ಶನವನ್ನು **ಅನುಧ್ಯಾಯನ್** ಯಾವಾಗಲೂ ಚಿಂತಿಸುವವನಂತೆ **ಇಹ ನರೇಷು** ತನ್ನ ಸಮೀಪಕ್ಕೆ ಬಂದಿರುವ ಮನುಷ್ಯರಲ್ಲಿ **ಪರೀಕ್ಷೇತ** ಇವನೇ ತಕ್ಷಕನಾಗಿರಬೇಕೋ ಅಥವಾ ಇಲ್ಲವೋ ಎಂದು ವಿಚಾರಿಸಬೇಕು **ತಸ್ಮಾತ್** ಆ ಕಾರಣಕ್ಕಾಗಿ **ಸ ಏಷಃ** ಅಂತಹ ಈ ನಿನ್ನ ಮಗನಾದ ವಿಷ್ಣುರಾತನು **ಲೋಕೇ** ಜಗತ್ತಿನಲ್ಲಿ **ಪರೀಕ್ಷಿತ್ ಇತಿ** ಪರೀಕ್ಷಿತನೆಂದು **ವಿಖ್ಯಾತಃ** ಪ್ರಸಿದ್ಧನಾದನು.

**ಸ ರಾಜಪುತ್ರೋ ವವೃಧೇ ಆಶು ಶುಕ್ಲ ಇವೋಡುಪಃ.**
**ಆಪೂರ್ಯಮಾಣಃ ಪಿತೃಭಿಃ ಕಾಷ್ಠಾಭಿರಿವ ಸೋ ಅನ್ವಹಮ್ ॥೩೧॥**

**ಸಃ** ಪ್ರಸಿದ್ಧನಾದ **ಉಡುಪಃ** ಚಂದ್ರನು **ಶುಕ್ಲೇ ಇವ** ಪ್ರತಿಪದಾತಿಥಿಯನ್ನು ಆರಂಭಿಸಿ ಪೂರ್ಣಿಮೆಯವರೆಗೆ **ಕಾಷ್ಠಾಭಿಃ ಇವ** ಷೋಡಶಕಲೆಗಳಿಂದ ಬೆಳೆಯುವಂತೆ **ಸಃ ರಾಜಪುತ್ರಃ** ರಾಜನ ಮಗನಾದ ಆ ಪರೀಕ್ಷಿತನು **ಆಪೂರ್ಯಮಾಣಃ** ಚೆನ್ನಾಗಿ ಪೂರ್ಣವಾಗಿ **ಪಿತೃಭಿಃ** ಯುಧಿಷ್ಠಿರಾದಿಗಳಿಂದ **ಅನ್ವಹಂ** ಯಾವಾಗಲು **ಆಶು** ಬೇಗನೆ **ವವೃಧೇ** ಬೆಳವಣಿಗೆಯನ್ನು ಹೊಂದಿದನು.

**ವಿಶೇಷ :-** ಇಲ್ಲಿ ಕಾಷ್ಠಾಭಿಃ ಎಂಬ ಪದಕ್ಕೆ ಹದಿನೈದು ಕಲೆಗಳಿಂದ ಎಂದು ವ್ಯಾಖ್ಯಾನಿಸಬಹುದು. ಆ ಶಬ್ದಕ್ಕೆ ವ್ಯಾಖ್ಯಾನವನ್ನು ಪ್ರಮಾಣ ಮೂಲಕವಾಗಿಯೇ ಮಾಡುತ್ತಾರೆ.

**ಪೂರಯಂತಿ ದಿಶಃ ಸೋಮಂ ದೇವಾ ಗಾವಃ ಸರಸ್ವತತೀತಿ ಗಾರುಡೇ॥**

**ದಿಶಃ** ದಿಗ್ದೇವತೆಗಳು **ಸೋಮಂ** ಚಂದ್ರನನ್ನು **ದೇವಾಃ** ವಹ್ನಿಮೊದಲಾದ ದೇವತೆಗಳು **ಗಾವಃ** ಕಿರಣಗಳು **ಸರಸ್ವತೀ** ಸರಸ್ವತಿದೇವಿಯು ಇವರೆಲ್ಲರು **ಪೂರಯಂತಿ** ಪೂರ್ಣಮಾಡುತ್ತಾರೆ ಎಂದು ಗರುಡ ಪುರಾಣದಲ್ಲಿದೆ.

ಪರೀಕ್ಷಿದ್ರಾಜನ ಜನ್ಮಾಂತರಕ್ಕೆ ಅಶ್ವಮೇಧಯಾಗವನ್ನು ಮಾಡುವದು ಎಂಬುದನ್ನು ತೋರಿಸುವವರಾಗಿ ಅಶ್ವಮೇಧಯಾಗವನ್ನು ಹೇಗೆ ಮಾಡಬೇಕು ಎಂಬುದನ್ನು ಹೇಳುತ್ತಾರೆ.

**ಯಕ್ಷ್ಯಮಾಣೋ ಅಶ್ವಮೇಧೇನ ಜ್ಞಾತಿದ್ರೋಹಜಿಘಾಂಸಯಾ ।**
**ರಾಜಾಲಬ್ಧಧನೋ ದಧ್ಯಾವನ್ಯತ್ರ ಕರದಂಡಯೋಃ ॥೩೨॥**

**ಜ್ಞಾತಿದ್ರೋಹಜಿಘಾಂಸಯಾ ಜ್ಞಾತಿ** ಭೀಷ್ಮಾದಿಗಳ **ದ್ರೋಹ** ಸಂಹಾರನಿಮಿತ್ತದಿಂದ ಬಂದ ಯಾವ ಪಾಪವೋ ಅದನ್ನು **ಜಿಘಾಂಸಯಾ** ಪರಿಹರಿಸಿಕೊಳ್ಳಬೇಕು ಎಂಬ ಇಚ್ಛೆಯಿಂದ ಅಥವಾ ದುರ್ಯೋಧನಾದಿಗಳ ಸಂಹಾರದ ವಿಷಯದಲ್ಲಿ ವಿಷ್ಣುದ್ವಿಟ್ಟದನುಬಂಧಿನಿಗ್ರಹರೂಪವಾದ ಕ್ಷತ್ರಿಯರ ಶ್ರೇಷ್ಠಧರ್ಮವಾದದ್ದರಲ್ಲಿ ಪಾಪಶಂಕೆಯನ್ನು ಮಾಡಿ ಅದರಿಂದ ಪಾಪ ಅದರಿಂದ ಆಗುವ ಅನಿಷ್ಟವನ್ನು ಪರಿಹರಿಸಕೊಳ್ಳಬೇಕು ಎಂಬ ಇಚ್ಛೆಯಿಂದ **ಅಶ್ವಮೇಧೇನ** ಅಶ್ವಮೇಧಯಾಗದಿಂದ **ಯಕ್ಷ್ಯಮಾಣಃ** ಭಗವಂತನನ್ನು ಪೂಜಿಸುವ ಇಚ್ಛೆಯುಳ್ಳವನಾಗಿ ಯುಧಿಷ್ಠಿರನು **ಅನ್ಯತ್ರ** ಬೇರೆ ಕಡೆಗೆ **ಕರದಂಡಯೋಃ** ಕರ ಮತ್ತು ದಂಡಗಳಿಂದ **ಅಲಬ್ಧಧನಃ** ಧನವನ್ನು ಪಡೆಯದೇ ಇದ್ದವನಾಗಿ **ರಾಜಾ** ಯುಧಿಷ್ಠಿರನು **ದಧ್ಯೌ** ಭಗವಂತನ ಧ್ಯಾನವನ್ನು ಮಾಡಿದನು.

**ತದಭಿಪ್ರೇತಮಾಲಕ್ಷ್ಯ ಭ್ರಾತರೋ ಅಚ್ಯುತನೋದಿತಾಃ ।**
**ಧನಂ ಪ್ರಹೀಣಮಾಜಹ್ರುರುದೀಚ್ಯಾ ಭೂರಿಶೋ ದಿಶಃ ॥೩೩॥**

**ತದಭಿಪ್ರೇತಂ** ಯುದ್ಧದಲ್ಲಿ ಸತ್ತು ಉಳಿದ ಕ್ಷತ್ರಿಯರಿಂದ ಹಣವನ್ನು ತೆರಿಗೆಯ ರೂಪದಲ್ಲಿ ತರಬಾರದು ಎಂಬ ಯುಧಿಷ್ಠಿರನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು **ಆಲಕ್ಷ್ಯ** ಚೆನ್ನಾಗಿ ತಿಳಿದು **ಭ್ರಾತರಃ** ಯುಧಿಷ್ಠಿರನ ತಮ್ಮಂದಿರಾದ ಭೀಮಾದಿಗಳು **ಅಚ್ಯುನೋದಿತಾಃ** ವೇದವ್ಯಾಸದೇವರ ಪ್ರೇರಣೆಗೊಳಗಾಗಿ **ಉದೀಚ್ಯಾಃ ದಿಶಃ** ಉತ್ತರದಿಕ್ಕಿಗೆ **ಪ್ರಹೀಣಂ** ವಿಷ್ಣು ಮೊದಲಾದವರಿಂದ ಯಾಗಮಾಡಿ ಉಳಿದ **ಭೂರಿಶಃ** ಬಹಳವಾದ **ಧನಂ** ಸಂಪತ್ತನ್ನು **ಆಜಹ್ರುಃ** ತಂದರು.

**ತೇನ ಸಂಭೃತಸಂಭಾರೋ ಲಬ್ಧಕಾಮೋ ಯುಧಿಷ್ಠಿರಃ.**
**ವಾಜಿಮೇಧೈಸ್ತ್ರಿಭೀ ರಾಜಾ ಯಜ್ಞೇಸಮಯಜದ್ಧರಿಮ್ ॥೩೪॥**

**ತೇನ** ಯಾಗಮಾಡಿ ಉಳಿದ ಆ ಧನದಿಂದ **ಸಂಭೃತಸಂಭಾರಃ** ಹೊಂದಲ್ಪಟ್ಟ ಯಜ್ಞಸಾಧನವುಳ್ಳವನಾದ **ಲಬ್ಧಕಾಮಃ** ಎಲ್ಲ ಕಾಮನೆಗಳನ್ನು ಪಡೆದಿರುವ **ರಾಜಾ** ರಾಜನಾದ **ಯುಧಿಷ್ಠಿರಃ** ಯುಧಿಷ್ಠಿರನು **ತ್ರಿಭಿಃ** ಮೂರು ಪಟ್ಟು ಫಲವನ್ನು ಕೊಡುವ **ವಾಜಿಮೇಧೈಃ** ಅಶ್ವಮೇಧಯಾಗಗಳಿಂದ **ಯಜ್ಞೇಶಂ** ಯಜ್ಞಗಳಿಗೆ ಸ್ವಾಮಿಯಾದ **ಹರಿಂ** ಪಾಪಪರಿಹಾರಕನಾದ ಪರಮಾತ್ಮನನ್ನು **ಅಯಜತ್** ಪೂಜಿಸಿದನು.

**ಆಹೂತೋ ಭಗವಾನ್ ರಾಜ್ಞಾ ಯಾಜಯಿತ್ವಾ ದ್ವಿಜೈರ್ನೃಪಮ್ ।**
**ಉವಾಸ ಕತಿಚಿನ್ಮಾಸಾನ್ಸುಹೃದಃ ಪ್ರಿಯಕಾಮ್ಯಯಾ ।।೩೫।।**

**ರಾಜ್ಞಾ** ರಾಜನಾದ ಯುಧಿಷ್ಠಿರನಿಂದ **ಆಹೂತಃ** ಕರೆಸಿಕೊಂಡ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು **ದ್ವಿಜೈಃ** ಬ್ರಾಹ್ಮಣರಿಂದ **ನೃಪಂ** ರಾಜನಿಗೆ **ಯಾಜಯಿತ್ವಾ** ಪೂಜೆಮಾಡಿಸಿ **ಸುಹೃದಃ** ಯುಧಿಷ್ಠಿರನಿಗೆ **ಪ್ರಿಯಕಾಮ್ಯಯಾ** ಪ್ರಿಯವಾದದ್ದನ್ನು ಉಂಟುಮಾಡಬೇಕು ಎಂಬ ಇಚ್ಛೆಯಿಂದ **ಕತಿಚಿತ್ ಮಾಸಾನ್** ಕೆಲವು ಮಾಸಗಳವರೆಗೆ **ಉವಾಸ** ವಾಸಮಾಡಿದನು.

**ತತೋ ರಾಜ್ಞಾ ಅಭ್ಯನುಜ್ಞಾತಃ ಕೃಷ್ಣಯಾ ಸಹ ಬಂಧುಭಿಃ.**
**ಯಯೌ ದ್ವಾರವತೀಂ ಬ್ರಹ್ಮನ್ಸಾರ್ಜುನೋ ಯದುಭಿರ್ವೃತಃ ।।೩೬।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಏಕಾದಶೋಽಧ್ಯಾಯಃ ।।

**ಹೇ ಬ್ರಹ್ಮನ್** ಶೌನಕರೇ **ಕೃಷ್ಣಯಾ ಸಹ** ದ್ರೌಪದಿಯಿಂದ ಕೂಡಿದ **ಬಂಧುಭಿಃ** ಬಾಂಧವರಾದ ಪಾಂಡವರಿಂದ **ತತಃ** ಅನಂತರ **ರಾಜ್ಞಾ** ರಾಜನಾದ ಯುಧಿಷ್ಠಿರನಿಂದ **ಅಭ್ಯನುಜ್ಞಾತಃ** ಅನುಮೋದಿತನಾದ **ಸಾರ್ಜುನಃ** ಅರ್ಜುನನಿಂದ ಸಹಿತನಾದ **ಯದುಭಿಃ ವೃತಃ** ಯಾದವರಿಂದ ಕೂಡಿಕೊಂಡಿರುವ ಶ್ರೀಕೃಷ್ಣನು **ದ್ವಾರವತೀಂ** ದ್ವಾರಕಾಪಟ್ಟಣವನ್ನು ಕುರಿತು **ಯಯೌ** ಹೋದನು.

ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಮುಗಿಯಿತು

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ದ್ವಾದಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ತೀರ್ಥಯಾತ್ರೆಗೆ ಹೊರಟ ವಿದುರ ಮಾರ್ಗದಲ್ಲಿ ಮೈತ್ರೇಯರಿಂದ ಉಪದೇಶ ಪಡೆದು ಹಸ್ತಿನಾವತಿಗೆ ಹಿಂತಿರುಗಿದ. ಧೃತರಾಷ್ಟ್ರ ಗಾಂಧಾರಿ ಧರ್ಮರಾಜ ಮುಂತಾದವರು ಎಲ್ಲರೂ ಅವನನ್ನು ಸ್ವಾಗತಿಸಿದರು. ಧರ್ಮರಾಜ ಯಾದವರ ಕ್ಷೇಮಸಮಾಚಾರವನ್ನು ಪ್ರಶ್ನಿಸಿದ. ಯದುಕುಲ ನಾಶದ ವೃತ್ತಾಂತ ವಿದುರನಿಗೆ ತಿಳಿದಿದ್ದರೂ ಆ ಅಪ್ರಿಯವಾರ್ತೆಯನ್ನು ಧರ್ಮರಾಜನಿಗೆ ಹೇಳಲಿಲ್ಲ. ಧೃತರಾಷ್ಟ್ರ ವೈರಾಗ್ಯವನ್ನು ಹೊಂದಿ ಪರಲೋಕಸಾಧನೆಯನ್ನು ಮಾಡಿಕೊಂಡು ಉದ್ಧೃತನಾಗಲಿ ಎಂಬ ಉದ್ದೇಶದಿಂದ ವಿದುರ ಅವನಿಗೆ ಉಪದೇಶ ಮಾಡಿದ. ವಿದುರನ ಉಪದೇಶದಿಂದ ಎಚ್ಚತ್ತು ಕೊಂಡ ಧೃತರಾಷ್ಟ್ರ ಗಾಂಧಾರೀ ಕುಂತಿಯರೊಡನೆ ವಿದುರನ ಮಾರ್ಗದರ್ಶನದಲ್ಲಿ ನಡೆದು ಬದರಿಗೆ ಹೋಗಿ ಅಲ್ಲಿ ತಪಸ್ಸು ಮಾಡಿದ. ಪಾಂಡವರು ಆಗಾಗ ಹೋಗಿ ಅವರನ್ನು ಕಂಡು ಬರುತ್ತಿದ್ದರು. ಒಮ್ಮೆ ಪಾಂಡವರು ಬಂದಾಗ ವಿದುರ ಪರಕಾಯ ಪ್ರವೇಶವೆಂಬ ಯೋಗಬಲದಿಂದ ತನ್ನ ಶರೀರವನ್ನು ಬಿಟ್ಟು ಧರ್ಮರಾಜನಲ್ಲಿ ಸೇರಿ ಐಕ್ಯಹೊಂದಿದ. ಮತ್ತೊಂದು ದಿನ ಧರ್ಮರಾಜ ಎಂದಿನಂತೆ ಅರಮನೆಯಲ್ಲಿ ಧೃತರಾಷ್ಟ್ರನಿದ್ದ ಸ್ಥಳಕ್ಕೆ ಬಂದು ನಮಿಸಿದಾಗ ಅವನ ಧ್ಯಾನದೃಷ್ಟಿಗೆ ಧೃತರಾಷ್ಟ್ರ ಮುಂತಾದವರು ಗೋಚರಿಸಲಿಲ್ಲ. ಆಗಲೇ ಸಂಜಯ ಬಂದು ಅವರು ಕಾಡ್ಗಿಚ್ಚಿನಲ್ಲಿ ಶರೀರತ್ಯಾಗ ಮಾಡಿದರೆಂದು ಹೇಳಿದ. ಧರ್ಮರಾಜ ಶೋಕತಪ್ತನಾದ. ಐದು ದಿನಗಳ ಬಳಿಕ ನಾರದರು ಬಂದು ಸಮಾಧಾನ ಹೇಳಿದರು. ವಿದುರನಿಗೆ ಇದೆಲ್ಲವೂ ಮೊದಲೇ ತಿಳಿದಿತ್ತು. ಆದ್ದರಿಂದಲೇ ತೀರ್ಥಯಾತ್ರೆ ಕೈಗೊಂಡಿದ್ದ ನೀನು ವ್ಯರ್ಥ ಶೋಕಿಸಿ ಫಲವಿಲ್ಲ. ಎಂದು ನಾರದರು ಹೇಳಿದರು.

ವಿಷಯಾಸಕ್ತಿಯು ಸಂಸಾರಕ್ಕೆ ಕಾರಣವು ವೈರಾಗ್ಯವು ಮುಕ್ತಿಗೆ ಸಾಧನ ಆದ್ದರಿಂದ ಮೋಕ್ಷಾಪೇಕ್ಷಿಯು ತನ್ನಿಂದ ತಾನೇ ಆಗಲಿ ಮತ್ತೊಬ್ಬರಿಂದ ಆಗಲಿ ವೈರಾಗ್ಯವನ್ನು ಸಂಪಾದಿಸಬೇಕು ಎಂಬ ವಿಷಯವನ್ನು ಈ ಅಧ್ಯಾಯದಲ್ಲಿ ಹೇಳುವರು. ಅದರಲ್ಲಿಯೂ ಅಂತಃಕರಣ ಶುದ್ಧಿ ಇದ್ದವರಿಗೆ ವಿಷಯ ದೃಢವಾಗುವದು ಅಂತಃಕರಣ ಶುದ್ಧಿಯಾದರೂ ಕರ್ಮದಿಂದಾಗಲಿ ತೀರ್ಥಸೇವನೆಯಿಂದಾಗಲಿ ಆಗುವದು ಎಂಬ ಅಭಿಪ್ರಾಯದಿಂದ ವಿದುರನು ತೀರ್ಥ ಸೇವನೆ ಮಾಡಿ ಯುಧಿಷ್ಠಿರಾದಿಗಳನ್ನು ನೋಡಲು ಹಸ್ತಿನಾಪುರಕ್ಕೆ ಹಿಂದಿರುಗಿದನೆಂದು ಹೇಳುವರು.

ಮುಂದಿನ ಅಧ್ಯಾಯಗಳಲ್ಲಿ ಪರೀಕ್ಷಿತನ ರಾಜ್ಯಾಭಿಷೇಕಾದಿಗಳನ್ನು ಹೇಳಲು ಧೃತರಾಷ್ಟ್ರ ಧರ್ಮರಾಜಾದಿ ಹಿರಿಯರಿರುವಾಗ ಕಿರಿಯನಾದ ಇವನಿಗೆ ರಾಜ್ಯಾಭಿಷೇಕ ಉಚಿತವಲ್ಲ ಎಂಬ ಶಂಕೆಯ ಪರಿಹಾರಕ್ಕಾಗಿ ಧೃತರಾಷ್ಟ್ರಾದಿಗಳೆಲ್ಲರ ಪ್ರಸ್ಥಾನವನ್ನು ಸವಿಸ್ತಾರವಾಗಿ ಮೂರು ಅಧ್ಯಾಯಗಳಿಂದ ಮೊದಲಿಗೆ ನಿರೂಪಿಸುವರು. ಅದರಲ್ಲಿಯೂ ಧೃತರಾಷ್ಟ್ರನ ಪ್ರಸ್ಥಾನವು (ಅರಣ್ಯಕ್ಕೆ ತೆರಳುವದು) ವಿದುರನ ಉಪದೇಶದಿಂದ ಸಾಧ್ಯವಾದುದರಿಂದ ವಿದುರಾಗಮನವನ್ನು ಹೇಳುವರು.

**ವಿದುರನಿಗೆ ಮೈತ್ರೇಯರ ಸಮಾಗಮ**

**ಸೂತ ಉವಾಚ -**

**ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।**
**ಜ್ಞಾತ್ವಾಗಾದ್ಧಸ್ತಿನಪುರಂ ತಯಾಽವಾಪ್ತವಿವಿತ್ಸಿತಃ ॥೧॥**

**ತೀರ್ಥಯಾತ್ರಾಯಾಂ** ತೀರ್ಥಯಾತ್ರಾಕಾಲದಲ್ಲಿ **ಮೈತ್ರೇಯಾತ್** ಶ್ರೀಕೃಷ್ಣನಿಂದ ಆಜ್ಞಪ್ತರಾದ ಮೈತ್ರೇಯರಿಂದ **ಆತ್ಮನಃ ಗತಿಂ** ಶ್ರೀಹರಿಯ ವಿದ್ಯೆಯನ್ನು ಅಥವಾ ಜೀವನ ಸ್ಥಿತಿಯನ್ನು **ಜ್ಞಾತ್ವಾ** ತಿಳಿದು **ತಯಾ** ತಿಳಿದ ಪರಮಾತ್ಮ ಜೀವಾತ್ಮರ ಸ್ಥಿತಿಯಿಂದ **ಅವಾಪ್ತವಿವಿತ್ಸಿತಃ** ತಿಳಿಯಲಿಚ್ಛಿಸಿದ್ದನ್ನು ತಿಳಿದವನಾಗಿ **ವಿದುರಃ** ವಿದುರನು **ಹಸ್ತಿನಾಪುರಂ** ಹಸ್ತಿನಾಪುರವನ್ನು ಕುರಿತು **ಆಗಾತ್** ಬಂದನು.

ತಿಳಿಯಬೇಕಾದ್ದನ್ನು ತಿಳಿದನೆಂಬುದನ್ನೇ ವಿವರಿಸುವರು.

**ಯಾವತಃ ಕೃತವಾನ್ ಪ್ರಶ್ನಾನ್ ಕ್ಷತ್ತಾ ಕೌಷಾರವಾಗ್ರತಃ ।**
**ಜಾತೈಕಭಕ್ತಿರ್ಗೋವಿಂದೇ ತೇಭ್ಯಶ್ಚೋಪರರಾಮ ಹ ॥೨॥**

**ಕ್ಷತ್ತಾ** ವಿದುರನು **ಕೌಷಾರವಾಗ್ರತಃ** ಕುಷಾರನ ಪುತ್ರರಾದ ಮೈತ್ರೇಯರ ಎದುರಿಗೆ **ಯಾವತಃ ಪ್ರಶ್ನಾನ್ ಕೃತವಾನ್** ಎಷ್ಟು ಪ್ರಶ್ನೆಗಳನ್ನು ಮಾಡಿದ್ದನೋ **ತೇಭ್ಯಃ** ಪರಿಹೃತವಾದ ಆ ಪ್ರಶ್ನೆಗಳಿಂದ **ಗೋವಿಂದೇ** ಶ್ರೀಕೃಷ್ಣನಲ್ಲಿ **ಜಾತೈಕಭಕ್ತಿಃ** ಅತಿಶಯವಾಗಿ ಪ್ರಧಾನವಾದ ಭಕ್ತಿಯುಂಟಾದವನಾಗಿ **ತಯಾ** ಪರಮಾತ್ಮ ವಿದ್ಯೆಯಿಂದ **ಅವಾಪ್ತವಿವತ್ಸಿತಂ** ತಿಳಿಯ ಬೇಕಾದ್ದನ್ನು ತಿಳಿದವನಾಗಿ **ಉಪರರಾಮ** ಅಲಂಬುದ್ಧಿಯುಳ್ಳವನಾದನು ಮತ್ತೆ ಪ್ರಶ್ನೆ ಕೇಳಲಿಲ್ಲವೆಂದು ಭಾವ.

**ತಂ ಬಂಧುಮಾಗತಂ ದೃಷ್ಟ್ವಾ ಧರ್ಮಪುತ್ರಃ ಸಹಾನುಜಃ ।**
**ಧೃತರಾಷ್ಟ್ರೋ ಯುಯುತ್ಸುಶ್ಚ ಸೂತಃ ಶಾರದ್ವತಃ ಪೃಥಾ ॥೩॥**

**ಗಾಂಧಾರಿ ದ್ರೌಪದೀ ಬ್ರಹ್ಮನ್ ಸುಭದ್ರಾ ಚೋತ್ತರಾಕೃತೀ ।**
**ಅನ್ಯಾಶ್ಚ ಜಾಮಯಃ ಪಾಂಡೋರ್ಜ್ಞಾತಯಃ ಸಸುತಾಸ್ತ್ರಿಯಃ ॥೪॥**

**ಪ್ರತ್ಯುಜ್ಜಗ್ಮುಃ ಪ್ರಹರ್ಷೇಣ ಪ್ರಾಣಾಂಸ್ತನ್ವ ಇವಾಗತಾನ್ ।**
**ಅಭಿಸಂಗಮ್ಯ ವಿಧಿವತ್ ಪರಿಷ್ವಂಗಾಭಿವಾದನೈಃ ॥೫॥**

**ಮುಮುಚುಃ ಪ್ರೇಮಭಾಷ್ಪೌಘಂ ಮಿಥ ಔತ್ಕಂಠ್ಯ ಕಾತರಾಃ ।**
**ರಾಜಾತ ಮರ್ಹಯಾಂ ಚಕ್ರೇ ಕೃತಾಸನ ಪರಿಗ್ರಹಮ್ ॥೬॥**

**ತಂಭುಕ್ತವಂತ ಮಾಸೀನಂ ವಿಶ್ರಾಂತಂ ಸುಖಮಾಸನೇ ।**
**ಪ್ರಶ್ರಯಾವನತೋ ರಾಜಾ ಪ್ರಾಹ ಸ್ವಾನಾಂ ಚ ಶೃಣ್ವತಾಂ ॥೭॥**

**ಆಗತಂ** ಬಂದಿರುವ **ಬಂಧುಂ** ತಮ್ಮನಾದ **ತಂ** ವಿದುರನನ್ನು **ದೃಷ್ಟ್ವಾ** ನೋಡಿ **ಸಹಾನುಜಃ ಧರ್ಮಪುತ್ರಃ** ತಮ್ಮಂದಿರಿಂದ ಸಹಿತನಾದ ಧರ್ಮರಾಜನು **ಧೃತರಾಷ್ಟ್ರಃ** ಧೃತರಾಷ್ಟ್ರನು **ಚ** ಮತ್ತು **ಯುಯುತ್ಸುಃ** ಧೃತರಾಷ್ಟ್ರನ ವೇಶ್ಯಾಪುತ್ರನಾದ ಯುಯುತ್ಸುವು **ಸೂತಃ** ಸಂಜಯನು **ಶಾರದ್ವತಃ** ಕೃಪಾಚಾರ್ಯನು **ಪೃಥಾ** ಕುಂತಿಯು **ಗಾಂಧಾರಿ** ಗಾಂಧಾರಿಯು **ದ್ರೌಪದೀ** ದ್ರೌಪದಿಯು **ಸುಭದ್ರಾ** ಸುಭದ್ರೆಯು **ಚ** ಮತ್ತು **ಉತ್ತರಾ** ಉತ್ತರೆಯು (ಅಭಿಮನ್ಯುಪತ್ನಿ) **ಕೃಪೀ** ದ್ರೋಣಾಚಾರ್ಯರ ಪತ್ನಿಯಾದ ಕೃಪಿಯು **ಅನ್ಯಾಶ್ಚ** ಇನ್ನುಳಿದ **ಪಾಂಡೋಃ** ಪಾಂಡುರಾಜನ **ಜಾಮಯಃ** ಸೊಸೆಯರು ಅಥವಾ ಅಪ್ರಸಿದ್ಧ ತಂಗಿಯರು (**ಆಗತಾನ್** ಬಂದಿರುವ **ಪ್ರಾಣಾನ್** ಪ್ರಾಣಗಳನ್ನು ದೃಷ್ಟ್ವಾ ನೋಡಿ) **ಜ್ಞಾತಯಃ** ಇನ್ನುಳಿದ ಬಂಧುಗಳು **ಸಸುತಾಃ ಸ್ತ್ರಿಯಃ** ಮಕ್ಕಳಿಂದೊಡಗೂಡಿದ

ಹೆಣ್ಣು ಮಕ್ಕಳು **ತನ್ವಃ** ಇವ ಶರೀರಗಳಂತೆ **ಪ್ರಹರ್ಕ್ಷೇಣ** ಸಂತೋಷದಿಂದ **ಪ್ರತ್ಯುಜ್ಜಗ್ಮುಃ** ಎದ್ದು ಎದುರಾಗಿ ನಡೆದರು **ವಿಧಿವತ್** ಶಾಸ್ತ್ರದಲ್ಲಿ ಹೇಳಿದಂತೆ **ಅಭಿಸಂಗಮ್ಯ** ಸತ್ಕರಿಸಿ ಸಮಾಗಮಿಸಿ **ಪರಿಷ್ವಂಗಾಭಿವಂದನೈಃ** ಆಲಿಂಗನ ನಮಸ್ಕಾರಗಳಿಂದ **ಔತ್ಕಂಠ್ಯಕಾತರಾಃ** ಉತ್ಕಂಠಪರವಶರಾಗಿ **ಮಿಥಃ** ಪರಸ್ಪರವಾಗಿ **ಪ್ರೇಮಬಾಷ್ಪೌಘಂ** ಆನಂದದ ಕಣ್ಣೀರನ್ನು **ಮುಮುಚುಃ** ಸುರಿಸಿದರು. **ಕೃತಾಸನ ಪರಿಗ್ರಹಂ** ಆಸನವನ್ನು ಸ್ವೀಕರಿಸಿದ **ತಂ** ವಿದುರನನ್ನು **ರಾಜಾ** ಧರ್ಮರಾಜನು **ಅರ್ಹಯಾಂಚಕ್ರೇ** ಪೂಜಿಸಿದನು **ಭುಕ್ತವಂತಂ** ಊಟಮಾಡಿದ **ಆಸನೇ ಸುಖಂ ಆಸೀನಂ** ಆಸನದಲ್ಲಿ ಸುಖವಾಗಿ ಕುಳಿತ (**ವಿಶ್ರಾಂತಂ** ವಿಶ್ರಾಂತಿಯನ್ನು ಪಡೆದ) **ತಂ** ವಿದುರನನ್ನು **ಸ್ವಾನಾಂ ಶೃಣ್ವತಾಂ** ತನ್ನವರೆಲ್ಲ ಕೇಳುತ್ತಿರುವಾಗ **ಪ್ರಶ್ರಯಾ ಅವನತಃ** ವಿನಯದಿಂದ ಬಾಗಿದ **ರಾಜಾ** ಧರ್ಮರಾಜನು **ಪ್ರಾಹ** ಹೇಳಿದನು.

ಯುಧಿಷ್ಠಿರ ಉವಾಚ -

> **ಅಪಿ ಸ್ಮರಥ ನೋ ಯುಷ್ಮತ್ ಪಕ್ಷಚ್ಛಾಯಾಸಮೇಧಿತಾನ್ ।**
> **ವಿಪದ್ಗಣಾದ್ವಿಷಾಗ್ನ್ಯಾದೇರ್ಮೋಚಿತಾ ಯತ್ಸಮಾತೃಕಾಃ ॥೮॥**

**ಯತ್** ಯಾವಕಾರಣ **ಸಮಾತೃಕಾಃ** ತಾಯಿಯಿಂದ ಸಹಿತರಾದ ನಾವು **ವಿಷಾಗ್ನ್ಯಾದೇಃ ವಿಪದ್ಗಣಾತ್** ವಿಷ ಅಗ್ನಿ ಮುಂತಾದ ಆಪತ್ತುಗಳಿಂದ **ಮೋಚಿತಾಃ** ಬಿಡುಗಡೆ ಮಾಡಲ್ಪಟ್ಟೆವು **ತತ್** ಆದ ಕಾರಣ ಯುಷ್ಮತ್ **ಪಕ್ಷಚ್ಛಾಯಾ ಸಮೇಧಿತಾನ್** ಪಕ್ಷಿಗಳು ಹೇಗೆ ತಮ್ಮ ಮರಿಗಳನ್ನು ಅತ್ಯಂತ ಸ್ನೇಹದಿಂದ ರೆಕ್ಕೆಯ ನೆರಳಲ್ಲಿ ಬೆಳೆಸುವವೋ ಹಾಗೆ ನಿಮ್ಮ ಪಕ್ಷಪಾತದ ಛಾಯೆಯಲ್ಲಿ ಬೆಳೆದಿರುವ **ನಃ** ನಮ್ಮನ್ನು **ಸ್ಮರಥ ಅಪಿ** ಸ್ಮರಿಸುವೆನು.

> **ಕಯಾ ವೃತ್ತ್ಯಾ ವರ್ತಿತಂ ವೈ ಚರದ್ಭಿಃ ಕ್ಷಿತಿಮಂಡಲಮ್ ।**
> **ತೀರ್ಥಾನಿ ಕ್ಷೇತ್ರಮುಖ್ಯಾನಿ ಸೇವಿತಾನೀಹ ಭೂತಲೇ ॥೯॥**

**ಕ್ಷಿತಿಮಂಡಲಮ್ ಚರದ್ಭಿಃ** ಭೂಮಂಡಲವನ್ನು ಸಂಚರಿಸುವ ನಿಮ್ಮಿಂದ **ಕಯಾ ವೃತ್ತ್ಯಾ ವರ್ತಿತಂ** ಯಾವ ಜೀವನೋಪಾಯದಿಂದ ದೇಹ ಧಾರಣ ಮಾಡಲ್ಪಟ್ಟಿತು **ತೀರ್ಥಾನಿ** ಗಂಗಾದಿನದಿಗಳು **ಕ್ಷೇತ್ರಮುಖ್ಯಾನಿ** ಕ್ಷೇತ್ರಗಳಲ್ಲಿ ಪ್ರಧಾನವಾದ ಕುರುಕ್ಷೇತ್ರ ಮುಂತಾದವುಗಳಲ್ಲಿ ಯಾವವು **ಇಹ ಭೂತಲೇ ಸೇವಿತಾನಿ** ಈ ಭೂಮಿಯಲ್ಲಿ ಸೇವಿಸಲ್ಪಟ್ಟವು.

**ಭವದ್ವಿಧಾ ಭಾಗವತಾಸ್ತೀರ್ಥಭೂತಾಸ್ಸ್ವಯಂ ಪ್ರಭೋ ।**
**ತೀರ್ಥಕುರ್ವಂತಿ ತೀರ್ಥಾನಿ ಸ್ವಾತ್ಮಸ್ಥೇನ ಗದಾಭೃತಾ ॥೧೦॥**

**ಸ್ವಾತ್ಮಸ್ಥೇನ** ತಮ್ಮ ಹೃದಯದಲ್ಲಿರುವ **ಗದಾಭೃತಾ** ಶ್ರೀಹರಿಯಿಂದ **ಸ್ವಯಂ ತೀರ್ಥಭೂತಾಃ** ಸ್ವಯಂ ಪವಿತ್ರರಾದ **ಭವದ್ವಿಧಾಃ** ತಮ್ಮಂಥ **ಭಾಗವತಾಃ** ಭಗವದ್ಭಕ್ತರು **ತೀರ್ಥಾನಿ** ತೀರ್ಥಗಳನ್ನು **ತೀರ್ಥೀಕುರ್ವಂತಿ** ಪವಿತ್ರಗೊಳಿಸುವರು **ಪ್ರಭೋ** ಸಮರ್ಥರಾದವರೇ ತಮ್ಮ ಶುದ್ಧಿಗಾಗಿ ಅಲ್ಲ ಎಂದು ಭಾವ.

**ಅಪಿ ನಃ ಸುಹೃದಸ್ತಾತ ಬಾಂಧವಾಃ ಕೃಷ್ಣದೇವತಾಃ ।**
**ದೃಷ್ಟಾಃ ಶ್ರುತಾಃ ವಾ ಯದವಃ ಸ್ವಪುರ್ಯಾಂ ಸುಖಮಾಸತೇ ॥೧೧॥**

**ತಾತ** ಚಿಕ್ಕಪ್ಪನೇ **ನಃ** ನಮ್ಮ **ಸುಹೃದಃ** ಅನಿಮಿತ್ತ ಉಪಕಾರಕರಾದ **ಬಾಂಧವಾಃ** ಬಂಧುಗಳಾದ **ಕೃಷ್ಣದೇವತಾಃ** ಶ್ರೀಕೃಷ್ಣನೇ ದೇವತೆಯಾಗಿವುಳ್ಳ **ಯಾದವಃ** ಯಾದವರು **ದೃಷ್ಟಾಃ ಶ್ರುತಾವಾ** ನೋಡಲ್ಪಟ್ಟರೆ ಕೇಳಲ್ಪಟ್ಟರೆ **ಸ್ವಪುರ್ಯಾಂ** ತಮ್ಮ ಊರಲ್ಲಿ **ಸುಖಂ ಆಸತೇ ಅಪಿ** ಸುಖವಾಗಿ ಇರುವರಷ್ಟೇ

**ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ ಸಮವರ್ಣಯತ್ ।**
**ಯಥಾನುಭೂತಂ ಭ್ರಮತಾ ವಿನಾ ಯದುಕುಲಕ್ಷಯಮ್ ॥೧೨॥**

**ಇತಿ** ಈರೀತಿ **ಉಕ್ತಃ ಧರ್ಮರಾಜೇನ** ಧರ್ಮರಾಜನಿಂದ ಪ್ರಶ್ನಿಸಿಲ್ಪಟ್ಟ **ಭ್ರಮತಾ** ಸಂಚರಿಸುವ ತನ್ನಿಂದ **ಯಥಾ ಅನುಭೂತಂ** ತಾನು ಅನುಭವಿಸದಂತೆ **ಯದುಕುಲಕ್ಷಯಂ ವಿನಾ** ಮುಂದೆ ಆಗುವ ಯಾದವರ ಕುಲನಾಶವನ್ನು ಬಿಟ್ಟು **ಸರ್ವಂ ತತ್** ಎಲ್ಲವನ್ನು **ಸಮವರ್ಣಯತ್** ಹೇಳಿದನು.

*ಭಾಗವತತಾತ್ಪರ್ಯ–*

ಇಲ್ಲಿ ಯದುಕುಲನಾಶವನ್ನು ಬಿಟ್ಟು ಎಲ್ಲವನ್ನು ಹೇಳಿದನು ಎಂದು ಹೇಳಿದ್ದರಿಂದ ಈಗಲೇ ಯದುಕುಲ ನಾಶವಾಗಿದ್ದರೂ ಅಪ್ರಿಯವಾದ್ದರಿಂದ ಹೇಳಲಿಲ್ಲವೆಂದು ಅರ್ಥವಾಗುವದು. ಅದು ಪ್ರಮಾಣ ವಿರುದ್ಧವಾದ್ದರಿಂದ ಸರಿಯಲ್ಲ. ಆದ್ದರಿಂದ ವಿವಕ್ಷಿತ ತಾತ್ಪರ್ಯ ಹೇಳಿ ಪ್ರಮಾಣ ಹೇಳುವರು.

ಯದುಕುಲಕ್ಷಯಮೇಷ್ಯತ್ ।
ಶಾಪಂ ಶ್ರುತ್ವಾ ಬ್ರಾಹ್ಮಣಾನಾಮುದ್ಧವಃ ಖಿನ್ನಮಾನಸಃ ।

ಉದಾಸೀನೆಂ ತಥಾ ಕೃಷ್ಣಮಿವ ಸುಪ್ರೀತಮೇವ ಚ ||
ನಶಿಷ್ಯಮಾಣಂ ಸ್ವಕುಲಂ ಸ್ವರ್ಯಿಯಾಸುಂ ಚ ಕೇಶವಮ್ ||

ಜ್ಞಾತ್ವಾ ಪಪ್ರಚ್ಛ ಭಗವತ್ಸ್ವರೂಪಂ ತಮುಪಹ್ವರೇ |
ಮೈತ್ರೇಯೋಽಪಿ ತದೈವಾಗಾಜ್ಜಿಜ್ಞಾಸುಸ್ತತ್ವಮುತ್ತಮಮ್ ||

ತಯೋರದಾತ್ಸ ಭಗವಾನ್ ಜ್ಞಾನಂ ನಿರ್ಮಲಮಂಜಸಾ |
ಷಡ್ವಿಂಶದ್ವತ್ಸರಾತ್ ಪೂರ್ವಂ ಸ್ವರ್ಗತೇಃ ಪುರುಷೋತ್ತಮಃ ||

ಪ್ರೇಷಯಾಮಾಸ ಚ ಹರಿರುದ್ಧವಂ ಬದರೀಮನು |
ಕಲಾಪಗ್ರಾಮಿಣಾಂ ವಕ್ತುಮೇತತ್ತತ್ತ್ವಮಶೇಷತಃ ||

ವಿದುರಂ ತೀರ್ಥಯಾತ್ರಸ್ಥಮಂತರಾಲೇ ಸ ಉದ್ಧವಃ |
ದೃಷ್ಟ್ವಾ ನಶಿಷ್ಯಮಾಣಂ ಚ ಕುಲಂ ಜಿಗಮಿಷುಂ ಹರಿಮ್ ||

ಕಥಯಿತ್ವಾ ಬದರ್ಯಾಂ ಚ ಕಲಾಪಗ್ರಾಮವಾಸಿನಾಮ್ |
ಪ್ರೋಚ್ಯ ತತ್ತ್ವಮೇಶೇಷೇಣ ವಾಸುದೇವಮುಖೋದ್ಗತಮ್ ||

ಷಡ್ವಿಂಶದ್ವರ್ಷಗಮನೇ ಪುನರಾಗತಿಮಾತ್ಮನಃ |
ತೇಷಾಮುಕ್ತ್ವಾ ಪುನಃ ಕೃಷ್ಣಸನ್ನಿಧೌ ವಿಚಚಾರ ಹ ||

ಮೈತ್ರೇಯೋ ವಿದುರಾಯೇತದೂಚಿವಾನ್ ಕೃಷ್ಣಚೋದಿತಃ |
ವಿದುರಃ ಪಾಂಡವಾನಾಂ ಚ ವಿನಾ ಯದುವಿನಾಶನಮ್ ||

ಷಡ್‌ವಿಂಶದ್ವರ್ಷತಃ ಪೂರ್ವಂ ಜ್ಞಾತ್ವಾಪ್ಯ ಪ್ರಿಯಮೇವ ತತ್ ||
ನಾವೋಚದ್ವಿದುರೋ ಧೀಮಾಂಸ್ತಸ್ಮಾನ್ನಾ ಪ್ರಿಯಮಾವದೇತ್ || ಇತಿ ಪಾದ್ಮೇ

ತಾವಚ್ಛಶಾಸ ಕ್ಷಿತಿಮೇಕಚಕ್ರಾಮೇಕಾತಪತ್ರಾಮಜಿತೇನ ಪಾರ್ಥಃ | ಇತಿ ಚೋಪರಿ | ವಿದುರಂ ಚಾಗತಂ ಪುನರಿತಿ ಚ | ಭಾರತೇ ಚೈಕವಿಂಶದ್ವರ್ಷಾತ್ ಪೂರ್ವಂ ವಿದುರಸ್ಯ ಯುಧಿಷ್ಠಿರಭಾವಃ ಉಕ್ತಃ ||

ಬ್ರಾಹ್ಮಣರ ಶಾಪದಿಂದ ಇನ್ನು 26 ವರ್ಷದ ನಂತರ ಯದುಕುಲನಾಶವಾಗುವದು ಎಂದು ಉದ್ಧವನ ಮುಖದಿಂದ ಕೇಳಿದ ಮುಂದೆ ಆಗುವ ಯದುಕುಲ ನಾಶವನ್ನು ಅಪ್ರಿಯವಾದುದರಿಂದ ವಿದುರನು ಹೇಳಲಿಲ್ಲ ಎಂದು ಭಾವ. ಉದ್ಧವನು ಬ್ರಾಹ್ಮಣರ ಶಾಪವನ್ನು ಕೇಳಿ ಯದುಕುಲವು ಮುಂದೆ ವಿನಾಶ ಹೊಂದುವದೆಂದೂ ಸಂತೋಷದಿಂದಿರುವ ಶ್ರೀಕೃಷ್ಣನು ಉದಾಸೀನನಂತೆ ಇರುವದನ್ನು ಮತ್ತು ಶ್ರೀಕೃಷ್ಣನು

ತನ್ನ ಲೋಕಕ್ಕೆ ಹೋಗಲಿಚ್ಛಿಸುವನೆಂದೂ ತಿಳಿದು ದುಃಖಿತವಾದ ಮನಸ್ಸುಳ್ಳವನಾಗಿ ಏಕಾಂತ ಸ್ಥಳದಲ್ಲಿ ಶ್ರೀಕೃಷ್ಣನ ಹತ್ತಿರ ಭಗವತ್ಸ್ವರೂಪವನ್ನು ಕೇಳಿದನು. ಅವಾಗಲೇ ಮೈತ್ರೇಯರೂ ಕೂಡ ಉತ್ತಮವಾದ ತತ್ತ್ವವನ್ನು ತಿಳಿಯಲಿಚ್ಛಿಸುತ್ತ ಬಂದರು. ಆಗ ಶ್ರೀಕೃಷ್ಣನು ಉದ್ಧವ ಮೈತ್ರೇಯರಿಗೆ ಚೆನ್ನಾಗಿ ಉತ್ತಮಜ್ಞಾನವನ್ನು ಉಪದೇಶಿಸಿದನು.

ಶ್ರೀಕೃಷ್ಣನು ತನ್ನ ಲೋಕಕ್ಕೆ ಹೋಗುವದಕ್ಕಿಂತ 26 ವರ್ಷ ಮೊದಲೇ ಕಲಾಪ ಗ್ರಾಮದಲ್ಲಿದ್ದ ತನ್ನ ಭಕ್ತರಿಗೆ ಈ ಎಲ್ಲ ತತ್ತ್ವಗಳನ್ನು ಹೇಳುವದಕ್ಕಾಗಿ ಬದರಿಗೆ ಉದ್ಧವನನ್ನು ಕಳುಹಿಸಿಕೊಟ್ಟಿದ್ದನು. ಆ ಉದ್ಧವನು ಮಾರ್ಗಮಧ್ಯದಲ್ಲಿ ತೀರ್ಥಯಾತ್ರೆ ಮಾಡುತ್ತಿದ್ದ ವಿದುರನನ್ನು ನೋಡಿ ಯದುಕುಲವು ಮುಂದೆ ವಿನಾಶ ಹೊಂದುವುದೆಂದೂ ಶ್ರೀಕೃಷ್ಣನು ಮೂಲರೂಪಕ್ಕೆ ಸೇರಲಿಚ್ಛಿಸುವನೆಂದು ಹೇಳಿ ಬದರಿಯಲ್ಲಿ ಕಲಾಪಗ್ರಾಮ ವಾಸಿಗಳಿಗೆ ಶ್ರೀಕೃಷ್ಣನ ಮುಖಾರವಿಂದದಿಂದ ಹೊರಟ ಎಲ್ಲ ತತ್ತ್ವವನ್ನೂ ಹೇಳಿ ಇನ್ನೂ 26 ವರ್ಷ ವಾದ ಮೇಲೆ ತಿರುಗಿ ತಾನು ಬದರಿಕಾಶ್ರಮಕ್ಕೆ ಬರುವನೆಂದು ಕಲಾಪಗ್ರಾಮ ವಾಸಿಗಳಿಗೆ ಹೇಳಿ ತಿರುಗಿ ಶ್ರೀಕೃಷ್ಣ ಸನ್ನಿಧಾನದಲ್ಲಿ ಸಂಚಾರ ಮಾಡುತ್ತಿದ್ದನು. ಮೈತ್ರೇಯರು ಶ್ರೀಕೃಷ್ಣನಿಂದ ಪ್ರೇರಿತರಾಗಿ ಶ್ರೀಕೃಷ್ಣನು ಹೇಳಿದ ಪ್ರಮೇಯವನ್ನು ವಿದುರನಿಗೆ ಹೇಳಿದರು. ವಿದುರನು ಪಾಂಡವರಿಗೆ ಮುಂದೆ ಯದುಕುಲವು ನಾಶವಾಗುವದು ಎಂಬುದನ್ನು ಬಿಟ್ಟು ಬೇರೆಲ್ಲ ಪ್ರಮೇಯಗಳನ್ನು ಹೇಳಿದನು. ಅಭಿಜ್ಞನಾದ ವಿದುರನು 26 ವರ್ಷಕ್ಕಿಂತ ಮೊದಲೇ ತಿಳಿದಿದ್ದರೂ ಯದುಕುಲನಾಶವು ಅಪ್ರಿಯವೇ ಎಂದು ತಿಳಿದು ಪಾಂಡವರಿಗೆ ಹೇಳಲಿಲ್ಲ. ಆದುದರಿಂದಲೇ ಯಾರೂ ಇನ್ನೊಬ್ಬರಿಗೆ ಅಪ್ರಿಯವಾದುದನ್ನು ಹೇಳಬಾರದೆಂದು ಪಾದ್ಮಪುರಾಣದಲ್ಲಿದೆ. 'ಇತ್ಥಂ ವ್ರಜನ್ ಭಾರತಮೇವ ವರ್ಷಂ ಕಾಲೇನ ಯಾವದ್ಯತವಾನ್ ಪ್ರಭಾಸಂ ತಾವತ್' ವಿದುರನು ಭಾರತ ಭೂಮಿಯಲ್ಲಿಯೇ ತೀರ್ಥಯಾತ್ರೆ ಮಾಡಿ ಪ್ರಭಾಸ ಕ್ಷೇತ್ರಕ್ಕೆ ಯಾವಾಗ ಬಂದನೋ ಆ ಕಾಲದಲ್ಲಿ ಧರ್ಮರಾಜನು ಶ್ರೀ ಕೃಷ್ಣನಿಂದೊಡಗೂಡಿ ಅಖಂಡ ಭೂಮಂಡಲವನ್ನು ಏಕಛತ್ರಾಧಿಪತ್ಯದಿಂದ ಆಳುತ್ತಿದ್ದನೆಂದು 3ನೇ ಸ್ಕಂದದಲ್ಲಿ ಹೇಳಿದೆ. ಆ ಕಾರಣ ಆ ಕಾಲದಲ್ಲಿ ಯದುಕುಲನಾಶವಾಗಿರಲಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಮುಂದೆ ಆಗುವ ಯದುಕುಲಕ್ಷಯವನ್ನು ಎಂದು ವ್ಯಾಖ್ಯಾನಿಸಿದ್ದು ಯುಕ್ತವು. ಮತ್ತು 10 ನೇ ಸ್ಕಂದದಲ್ಲಿ ಧರ್ಮರಾಜನನ್ನು ಪಟ್ಟಾಭಿಷೇಕ ಮಾಡಿ ಶ್ರೀಕೃಷ್ಣನು ದ್ವಾರಕಾಪಟ್ಟಣಕ್ಕೆ ಹೋಗಲು ಉದ್ಯುಕ್ತನಾಗುವಾಗ ಗಾಂಧಾರಿಯನ್ನು

ಧೃತರಾಷ್ಟ್ರನನ್ನು ಆ ಸಮಯದಲ್ಲಿ ಮತ್ತೆ ಬಂದಿರುವ ವಿದುರನನ್ನೂ ಸಂತೋಷಗೊಳಿಸಿದನು ಎಂದಿದೆ. ಆದ್ದರಿಂದ ವಿದುರನು ಬರುವ ಕಾಲದಲ್ಲಿ ಯದುಕುಲನಾಶವಾಗಲಿಲ್ಲವೆಂದು ತಿಳಿಯುತ್ತದೆ. ಹೀಗೆ ಅರ್ಥ ಮಾಡದಿದ್ದರೆ ಭಾರತ ವಿರೋಧ ಬರುವದು. ಭಾರತದಲ್ಲಿ ಯದುಕುಲವು ನಾಶವಾಗುವುದಕ್ಕಿಂತ 21 ವರ್ಷ ಮೊದಲೇ ವಿದುರನಿಗೆ ಧರ್ಮರಾಜನಲ್ಲಿ ಪ್ರವೇಶವು (ವಿದುರ ದೇಹತ್ಯಾಗ) ಹೇಳಲ್ಪಟ್ಟಿದೆ. ಆದಕಾರಣ ವಿದುರನು ಹೇಳುವ ಸಮಯದಲ್ಲಿ ಯದುಕುಲ ಕ್ಷಯವಾಗಿರಲಿಲ್ಲ. ಮುಂದೆ ಆಗುವದೆಂದೇ ನಿಶ್ಚಿತವಾಗುತ್ತದೆ.

**ಯದುಕುಲನಾಶವನ್ನು ಹೇಳದಿರಲು ಕಾರಣವನ್ನು ಹೇಳುವರು**

**ತದಪ್ರಿಯಂ ದುರ್ವಿಷಯಂ ನೃಣಾಂ ಸ್ವಯಮುಪಸ್ಥಿತಮ್ ।**
**ನಾವೇದಯೇತ್ ಸುಕರಣೋ ದುಃಖಿತಾನ್ ದ್ರಷ್ಟುಮ ಕ್ಷಮಃ ॥೧೩॥**

**ದುಃಖಿತಾನ್** ದುಃಖಪಡುವವರನ್ನು **ದ್ರಷ್ಟುಂ** ನೋಡಲು **ಅಕ್ಷಮಃ** ಅಸಮರ್ಥನಾದ ವಿದುರನು **ಸಕರುಣಃ** ದಯಾಯುತನು **ನೃಣಾಂ** ಜನರಿಗೆ **ಸ್ವಯಂ ಉಪಸ್ಥಿತಂ** ತಾನಾಗಿಯೇ ಒದಗಿರುವ **ದುರ್ವಿಷಯಂ** ದುಷ್ಟವಾದ **ಅಪ್ರಿಯಂ** ಸಂತೋಷಕಾರಕ ವಲ್ಲದ **ತತ್** ಆ ಯದುಕುಲ ನಾಶವನ್ನು ನ **ಆವೇದಯತ್** ತಾನು ಹೇಳಲಿಲ್ಲ.

**ಕಂಚಿತ್ಕಾಲಮಥಾವಾತ್ಸೀತ್ ಕೃತೋ ದೇವವತ್ ಸ್ವಕೈಃ ।**
**ಭ್ರಾತುರ್ಜ್ಯೇಷ್ಠಸ್ಯ ಶ್ರೇಯಸ್ಕೃತ್ ಸರ್ವೇಷಾಂ ಪ್ರೀತಿ ಮಾವಹನ್ ॥೧೪॥**

**ಸ್ವಕೈಃ** ತನ್ನವರಿಂದ **ದೇವವತ್ ಕೃತಃ** ದೇವತೆಯಂತೆ ಭಾವಿಸಲ್ಪಟ್ಟು **ಸರ್ವೇಷಾಂ** ಎಲ್ಲರಿಗೂ **ಪ್ರೀತಿಂ ಆವಹನ್** ಸಂತೋಷವನ್ನುಂಟು ಮಾಡುತ್ತ **ಜ್ಯೇಷ್ಠಸ್ಯ ಭ್ರಾತುಃ** ಹಿರಿಯ ಅಣ್ಣನಾದ ಧೃತರಾಷ್ಟ್ರನಿಗೆ **ಶ್ರೇಯಸ್ಕೃತ್** ಸತ್ತ್ವೋಪದೇಶ ಮಾಡಿ ಶ್ರೇಯಸ್ಸನ್ನುಂಟು ಮಾಡುವವನಾಗಿ **ಕಂಚಿತ್ ಕಾಲಂ** ಕೆಲವು ದಿವಸ **ಅಥ** ತೀರ್ಥಯಾತ್ರೆಯಿಂದ ಬಂದ ನಂತರ **ಅವಾತ್ಸೀತ್** ವಾಸ ಮಾಡಿದನು.

ಶೂದ್ರನಾದ ವಿದುರನು ತತ್ತ್ವೋಪದೇಶ ಹೇಗೆ ಮಾಡಿದನು ಎಂಬ ಶಂಕೆಗೆ ಇವನು ಇತರ ಶೂದ್ರರಂತೆ ಅನಧಿಕಾರಿಯಲ್ಲ. ಕಿಂತು ಎಲ್ಲ ಪಾಪಗಳಿಗೆ ಶಿಕ್ಷೆ ಕೊಡುವ ಯಮನೇ ಶಾಪದಿಂದ ಶೂದ್ರನಾದನು ಎಂದು ಹೇಳುವರು.

**ಅಭಿಭ್ರದರ್ಯಮಾ ದಂಡಂ ಯದಘಮಘಕಾರಿಷು ।**
**ಯಾವದ್‌ಬಭಾರ ಶೂದ್ರತ್ವಂ ಶಾಪಾದ್ವರ್ಷಶತಂ ಯಮಃ ॥೧೫॥**

**ಯಃ ಅರ್ಯಮಾ** ಯಾವ ವೈವಸ್ವತ ನಾಮಕ ಯಮನು **ಅಘಕಾರಿಷು** ಪಾಪ ಮಾಡಿದವರಿಗೆ **ಯಥಾಘಂ** ಪಾಪಕ್ಕನುಗುಣವಾಗಿ **ದಂಡಂ ಅಬಿಭ್ರತ್** ಶಿಕ್ಷೆಯನ್ನು ಮಾಡಿದನೋ ಪಾಪ ಫಲವನ್ನುಣಿಸಿದನೆಂದರ್ಥ. **ಸಃ** ಆ ಯಮನು **ಶಾಪಾತ್** ಮಾಂಡವ್ಯ ಋಷಿಯ ಶಾಪದಿಂದ **ಯಾವತ್ ವರ್ಷಶತಂ ತಾವತ್** ನೂರು ವರ್ಷ ಪರ್ಯಂತ **ಶೂದ್ರತ್ವಂ** ಶೂದ್ರಶರೀರವನ್ನು **ಬಭಾರ** ಧರಿಸಿದನು.

ಒಂದು ಸಲ ಕಳ್ಳರನ್ನು ಅಟ್ಟಿಸಿಕೊಂಡು ಬಂದ ರಾಜಭಟರು ನದಿಯ ತೀರದಲ್ಲಿ ತಪಸ್ಸು ಮಾಡುತ್ತ ಕುಳಿತ ಮಾಂಡವ್ಯ ಋಷಿಯ ಸಮೀಪದಲ್ಲಿ ಬಂದ ಕಳ್ಳರನ್ನು ಸಮೀಪಿಸಿ ಇವನು ಕಳ್ಳನೇ ಎಂದು ತಿಳಿದು ಕಳ್ಳರೊಡನೆ ಬಂಧಿಸಿ ರಾಜನೆದುರಿಗೆ ತಂದಿರಿಸಿ ಅವನ ಆಜ್ಞೆಯಂತೆ ಎಲ್ಲರನ್ನೂ ಶೂಲಕ್ಕೇರಿಸಿದರು.(ಆ ಶೂಲದಲ್ಲಿಯೂ ತಪಸ್ಸು ಮಾಡುವ ಅತಿಪ್ರಕಾಶಮಾನನಾದ ಇವನನ್ನು ನೋಡಿ ಜನರು ಬಂದು ಹೇಳಿದಾಗ ರಾಜನು ಗಾಬರಿಯಿಂದ ಬಂದು ಶೂಲದಿಂದಿಳಿಸಿ ಪ್ರಸನ್ನಗೊಳಿಸಿ ಕಳಿಸಿ ಕೊಟ್ಟನು.) ಆಗ ಯಮ ಸಮೀಪಕ್ಕೆ ತೆರಳಿದ ಮುನಿಯು ಕೋಪದಿಂದ ಯಮನಿಗೆ ಕೇಳಿದನು. ನನಗೆ ಯಾವ ಪಾಪಕ್ಕಾಗಿ ಶೂಲಕ್ಕೇರಬೇಕಾಯಿತೆಂದು. ಆಗ ಯಮನು ವಸಿಷ್ಠರ ಸಾಮ್ಯವನ್ನಪೇಕ್ಷಿಸಿ ತಪಸ್ಸು ಮಾಡಿದ್ದರಿಂದ ಅಯೋಗ್ಯವಾದುದನ್ನು ಪಡೆಯುವ ಪ್ರಯತ್ನ ಮಾಡಿದ್ದಕ್ಕಾಗಿ ಬಂದ ಪಾಪದಿಂದ ಎಂದು ತಿಳಿದಿದ್ದರೂ ಅವನ ತಪಸ್ಸನ್ನು ಹ್ರಾಸಮಾಡಲು (ಕಡಿಮೆಮಾಡಲು) ಶಾಪವನ್ನು ತೆಗೆದುಕೊಳ್ಳಲೆಂದೇ ಬಾಲ್ಯದಲ್ಲಿ ನೀನು ಒಂದು ನೊಣವನ್ನು ಶೂಲಕ್ಕೇರಿಸಿದ್ದಿ (ಮಳೆಯಿಂದ ಚುಚ್ಚಿದ್ದಿ) ಚಿಕ್ಕ ಅಪರಾಧಕ್ಕೆ ದೊಡ್ಡ ಶಿಕ್ಷೆ ವಿಧಿಸಿದ ಕಾರಣ ಶೂದ್ರನಾಗು ಎಂದು ಶಾಪವಿತ್ತನು. ಎಂದು ಪುರಾಣಾಂತರದಲ್ಲಿ ಶಾಪದ ಪ್ರಕಾರ ಪ್ರಸಿದ್ಧವಾಗಿದೆ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ವಿವಕ್ಷಿತ ಅನ್ವಯ ತಿಳಿಯದಿರುವದರಿಂದ 'ಯತ್ ತತ್' ಶಬ್ದಗಳನ್ನು ಅಧ್ಯಾಹಾರ ಮಾಡಿ ಅನ್ವಯ ತಿಳಿಸುವರು.

ಯೋಽರ್ಯಮಾ ದಂಡಂ ಅಭಿಭ್ರತ್ ಸಃ ವರ್ಷಶತಂ ಯಾವತ್ ಶೂದ್ರತ್ವಂ ಬಭಾರ।

ಯಮನು ಶೂದ್ರನಾಗಿ ಇಲ್ಲಿ ಬಂದರೇ ಸಂಯಮಿನಿಪುರದಲ್ಲಿ ಅಪರಾಧಿಗಳಿಗೆ ಶಿಕ್ಷೆ ವಿಧಿಸುವವರಾರು ಎಂಬ ಶಂಕೆಗೆ ಪ್ರಮಾಣದಿಂದ ಉತ್ತರಿಸುವರು.

**ನ ದೇವಾನಾಂ ನ ದೇವೀನಾಂ ಸಾಮಸ್ತ್ಯೇನ ಜನಿರ್ಭುವಿ ।**
**ಅಂಶಾಂಶೇನೈವ ಜಾಯಂತೇ ಸರ್ವೇ ತ್ವಾಜಾನಜಾದಯಃ ॥**

ಯಾವ ಸೂರ್ಯಪುತ್ರನಾದ ಯಮನು (ಪಾಪಿಷ್ಠರಿಗೆ ಪಾಪಾನುಸಾರ) ಶಿಕ್ಷೆಯನ್ನು ಕೊಡುವನೋ ಆ ಯಮನು (ಮಾಂಡವ್ಯರ ಶಾಪದಿಂದ) 100 ವರ್ಷ ಪರ್ಯಂತ ಶೂದ್ರಶರೀರ ಹೊಂದಿದನು. ದೇವತೆಗಳಿಗೂ ದೇವತಾಸ್ತ್ರೀಯರಿಗೂ ಭೂಮಿಯಲ್ಲಿ ಅಂಶಿ ರೂಪದಿಂದ ಉತ್ಪತ್ತಿಯಿಲ್ಲ. ಆಜಾನಜದೇವತೆಗಳು ಅಂದರೆ ಹೆಸರು ಇಲ್ಲದೆ ಇದ್ದು ದೇವತೆಗಳ ಕುಲದಲ್ಲಿ ಹುಟ್ಟಿದವರು. ಬ್ರಹ್ಮಾಂಡದ ಹೊರಗೆ ಇರುವ ಅಂಶಿಯ ಯಾವ ಅಂಶವಿದೆಯೋ ಅದರಿಂದ ಹುಟ್ಟುವರು. ಅಂದರೆ ತಮ್ಮ ಲೋಕಗಳಲ್ಲಿರುವ ಅಂಶದ ಅಂಶದಿಂದಲೇ ಹುಟ್ಟುತ್ತಾರೆ. ಆದ ಕಾರಣ ಯಮನು ಒಂದು ರೂಪದಿಂದ ಯಮಲೋಕದಲ್ಲಿ ಶಿಕ್ಷೆ ತೆಗೆದುಕೊಂಡಿರುವನು. ಅದಕ್ಕಾಗಿ ಶಂಕೆಗೆ ಅವಕಾಶವಿಲ್ಲ. 20ನೇ ಶ್ಲೋಕದ ತಾತ್ಪರ್ಯವು ಯಾದವಾರ್ಯರ ಪ್ರಕಾರ ಇಲ್ಲಿಯೇ ಇರಬೇಕು. ಅವತಾರಿಕೆ ಪ್ರಕಾರ ಆದರೂ ಇರಬೇಕು. ಉಳಿದವರ ಪ್ರಕಾರ 20ನೇ ಶ್ಲೋಕದ ಕೆಳಗೆ ಕೊಡಲಾಗಿದೆ

**ಧೃತರಾಷ್ಟ್ರನ ಪ್ರಸ್ಥಾನಕ್ಕೆ ವಿದುರನ ಉಪದೇಶವೇ ಕಾರಣ**

ವಿದುರನು ಬಂದ ಮೇಲೆ ಯುಧಿಷ್ಠಿರನು ಏನು ಮಾಡಿದನೆಂದು ಹೇಳುವರು.

**ಯುಧಿಷ್ಠಿರೋ ಲಬ್ಧರಾಜ್ಯೋ ದೃಷ್ಟ್ವಾ ಪೌತ್ರಂ ಕುಲಂಧರಮ್ ।**
**ಭ್ರಾತೃಭಿರ್ಲೋಕಪಾಲಾಭೈರ್ಮುಮುದೇ ಪರಯಾ ಶ್ರಿಯಾ ॥೧೬॥**

**ಯುಧಿಷ್ಠಿರಃ** ಧರ್ಮರಾಜನು **ಲಬ್ಧರಾಜ್ಯಃ** ರಾಜ್ಯವನ್ನು ಹೊಂದಿ **ಕುಲಂಧರಂ** ವಂಶವನ್ನು ಧರಿಸಿದನು. ಮುಂದುವರೆಸಿದನು ಎಂದರ್ಥ. **ಪೌತ್ರಂ** ಮೊಮ್ಮಗನಾದ ಪರೀಕ್ಷಿತನನ್ನು **ದೃಷ್ಟ್ವಾ** ನೋಡಿ **ಲೋಕಪಾಲಾಭೈಃ** ಲೋಕಪಾಲಕರಂತಿರುವ **ಭ್ರಾತೃಭಿಃ** ತಮ್ಮಂದಿರುಗಳಿಂದ **ಪರಯಾ ಶ್ರಿಯಾ** ಶ್ರೇಷ್ಠವಾದ ಸಂಪತ್ತಿನಿಂದ **ಮುಮುದೇ** ಸಂತೋಷಪಟ್ಟರು.

ಹಿಂದೆ ಶ್ರೀಕೃಷ್ಣನು ದ್ವಾರಕೆಗೆ ಹೋದನೆಂದು ಹೇಳಿದ್ದು ವಿದುರನು ಬಂದ ಮೇಲೆಯೇ ಎಂದು ತಿಳಿಸಲು ಮತ್ತೆ ಸಂಕ್ಷೇಪವಾಗಿ ಹೇಳುವರು.

**ಅಥಾಮಂತ್ರ್ಯಾಚ್ಯುತೋ ಬಂಧೂನ್ನಿರ್ವರ್ತ್ಯಾನುಗತಾನ್ವಿಭುಃ ।**
**ಅರ್ಜುನೋದ್ಧವಶೈನೇಯೈರ್ಯಯೌ ದ್ವಾರವತೀಂ ಹಯೈಃ ॥೧೭॥**

**ಅಥ** ವಿದುರನು ಬಂದ ನಂತರ **ಅಚ್ಯುತಃ** ಶ್ರೀಕೃಷ್ಣನು **ಆಮಂತ್ರ್ಯ** ಹೋಗಿ ಬರುವೆನೆಂದು ಹೇಳಿ **ವಿಭುಃ** ವ್ಯಾಪ್ತನಾದ ಶ್ರೀಕೃಷ್ಣನು **ಅನುಗತಾನ್ ಬಂಧೂನ್** ಹಿಂಬಾಲಿಸಿ ಬರುವ ಬಂಧುಗಳನ್ನು **ನಿರ್ವರ್ತ್ಯ** ತಿರುಗಿ ಕಳುಹಿಸಿ **ಅರ್ಜುನೋದ್ಧವ ಶೈನೇಯೈಃ** ಅರ್ಜುನ ಉದ್ಧವ ಸಾತ್ಯಕಿ ಇವರುಗಳಿಂದ ಸಹಿತನಾಗಿ **ಹಯೈಃ** ಕುದುರೆಗಳಿಂದ ಯುಕ್ತವಾದ ರಥದಿಂದ **ದ್ವಾರಾವತೀಂ ಯಯೌ** ದ್ವಾರಕೆಗೆ ತೆರಳಿದನು.

**ಏವಂ ಗೃಹೇಷು ಸಕ್ತಾನಾಂ ಪ್ರಮತ್ತಾನಾಂ ಗೃಹೇಹಯಾ ।**
**ಅತ್ಯಕ್ರಾಮದವಿಜ್ಞಾತಃ ಕಾಲಃ ಪರಮದುಸ್ತರಃ ॥೧೮॥**

**ಏವಂ** ಹಿಂದೆ ಹೇಳಿದ ಪ್ರಕಾರ ಶ್ರೀಹರಿಯಲ್ಲಿ ಆಸಕ್ತರಾದವರಿಗೆ ಪಾಂಡವರಂತೆ ಒಂದು ಕ್ಷಣವೂ ವ್ಯರ್ಥವಾಗದಂತೆ ಮಾಡಿಕೊಳ್ಳಬಹುದಾದ ಕಾಲವೇ ಹರಿಯಲ್ಲಿ ವಿಮುಖರಾದವರಿಗೆ **ಗೃಹೇಷು ಸಕ್ತಾನಾಂ** ಮಕ್ಕಳು ಮಡದಿ ಮಿತ್ರರಲ್ಲಿ ಹೊಟ್ಟೆತುಂಬಿಕೊಳ್ಳುವಲ್ಲಿ ಮಾತ್ರ ಆಸಕ್ತರಾದ **ಗೃಹೇಹಯಾ** ಮನೆ ಮಡದಿ ಮುಂತಾದವರ ಪೋಷಣೆಯ ಪ್ರಯತ್ನದಿಂದ **ಪ್ರಮತ್ತನಾಂ** ಪರಮಾತ್ಮನನ್ನು ಮರೆತ ಧೃತರಾಷ್ಟ್ರಾದಿಗಳಿಗೆ **ಪರಮದುಸ್ತರಃ** ದಾಟಲು ಅತ್ಯಂತ ಅಶಕ್ಯನಾದ **ಅವಿಜ್ಞಾತಃ** ತಿಳಿಯದ **ಕಾಲಃ** ಸರ್ವಸಂಹಾರಕನು, ಗುಣಪೂರ್ಣನು ಆದುದರಿಂದ ಕಾಲನಾಮಕನಾದ ಭಗವಂತನು **ಅತ್ಯಾಕ್ರಮತ್** ಧೃತರಾಷ್ಟ್ರಾದಿಗಳನ್ನು ನಾಶಗೊಳಿಸಿದನು.

**ವಿಶೇಷ :-** ಶ್ರೀಯಾದವಾರ್ಯರ ಅವತಾರಿಕೆ ಪ್ರಕಾರ ಈ ಶ್ಲೋಕದಲ್ಲಿಯ ಕಾಲಶಬ್ದಾರ್ಥವನ್ನು 15ನೇ ಶ್ಲೋಕದಲ್ಲಿ ಉದಾಹೃತಪ್ರಮಾಣಶೇಷದಿಂದ ತಿಳಿಸುವರು. 20ನೇ ಶ್ಲೋಕದಲ್ಲಿಯೂ ಕಾಲ ಶಬ್ದವಿದೆ ಕಾರಣ ಅಲ್ಲಿ ಕೆಲವರು ಹಾಕಿದ್ದಾರೆ. ಛಲಾರಿ ಪ್ರಬೋಧಿನೀ ಪ್ರಕಾರ 20ರ ಉತ್ತರಾರ್ಧ 18ರ ಉತ್ತರಾರ್ಧ ಸೇರಿಸಿ ಒಂದು ಶ್ಲೋಕದಂತೆ ಮುದ್ರಿತವಾಗಿದೆ. ಅವರ ಅಭಿಪ್ರಾಯ ಹಾಗಲ್ಲ ಎರಡೂ ಸ್ಥಳದಲ್ಲಿ ಕಾಲ ಶಬ್ದಕ್ಕೆ ಕ್ಷಣಲವಾದಿಗಳಲ್ಲ ಎಂದು ತಿಳಿಸಲು.

*ಭಾಗವತತಾತ್ಪರ್ಯ -*

**ಸಂಹರ್ತಾ ಭಗವಾನ್ವಿಷ್ಣುಃ ಕಾಲ ಇತ್ಯಭಿಧೀಯತೇ ।**
**ಅಥವಾ ಗುಣಸರ್ವಸ್ವಂ ಕಾಲಶಬ್ದೋ ವ್ಯನಕ್ತಿ ಹಿ ।। ಇತಿ ಸ್ಕಾಂದೇ**

ಕಲ ಚ್ಛೇದನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಸರ್ವಸಂಹಾರಕನಾದ ಶ್ರೀವಿಷ್ಣುವು ಕಾಲ ಎನಿಸುತ್ತಾನೆ. ಅಥವಾ ಕಲ ಕಾಮಧೇನುಃ, ಕಲ ಜ್ಞಾನೇ, ಕಲ ಬಂಧನೇ ಮುಂತಾದ ಕಲಧಾತುವಿನಿಂದ ನಿಷ್ಪನ್ನವಾದ ಕಾಲಶಬ್ದವು ಶ್ರೀಹರಿಯ ಗುಣಪೂರ್ಣತೆಯನ್ನೂ ತಿಳಿಸುವದು

**ವಿದುರಸ್ತದಭಿಪ್ರೇತ್ಯ ಧೃತರಾಷ್ಟ್ರಮಭಾಷತ ।**
**ರಾಜನ್ನಿರ್ಗಮ್ಯತಾಂ ಶೀಘ್ರಂ ಪಶ್ಯೇದಂ ಭಯಮಾಗತಂ ।।೧೯।।**

**ವಿದುರಃ** ವಿದುರನು **ತತ್** ಕಾಲಕೃತವಾದ ಪರಾಭವವನ್ನು **ಅಭಿಪ್ರೇತ್ಯ** ತಿಳಿದು **ಧೃತರಾಷ್ಟ್ರಂ** ಧೃತರಾಷ್ಟ್ರನನ್ನು ಕುರಿತು **ಹೇ ರಾಜನ್** ರಾಜನೇ **ಆಗತಂ** ಬಂದಿರುವ **ಇದಂ ಭಯಂ** ಮರಣಭಯವನ್ನು **ಪಶ್ಯ** ನೋಡು **ಶೀಘ್ರಂ** ಬೇಗನೆ **ನಿರ್ಗಮ್ಯತಾಂ** ಮನೆಯಿಂದ ಹೊರಡು ಎಂದು **ಅಭಾಷತ** ಹೇಳಿದನು.

ಭಯ ಎಂದರೆ ಅದಕ್ಕೇನಾದರೂ ಪ್ರತಿಕಾರ ಮಾಡೋಣ ಹೊರಗೇಕೆ ಹೋಗಬೇಕು ಎಂದರೆ ಹೇಳುವರು.

**ಪ್ರತಿಕ್ರಿಯಾ ನಯಸ್ಯೇಹ ಕುತಶ್ಚಿತ್ ಕರ್ಹಿಚಿತ್ ಪ್ರಭೋ ।**
**ಸ ಏಷ ಭಗವಾನ್ ಕಾಲಃ ಸರ್ವೇಷಾಂ ನಃ ಸಮಾಗತಃ ।।೨೦।।**

**ಯಸ್ಯ** ಯಾವ ಕಾಲನಿಗೆ **ಕುತಶ್ಚಿತ್** ಯಾವ ಕಾರಣದಿಂದಲೂ **ಕರ್ಹಿಚಿತ್** ಎಲ್ಲಿಯೂ **ಪ್ರತಿಕ್ರಿಯಾ** ತಿರುಗಿಸುವದು ಇವನ ಪ್ರಪಂಚದಲ್ಲಿಯೇ ಇಲ್ಲ **ಸಃ** ಅಂತಹ **ಭಗವಾನ್** ಗುಣಪೂರ್ಣನಾದ **ಕಾಲಃ** ಶ್ರೀಹರಿಯು **ನಃ ಸರ್ವೇಷಾಂ ಸಮಾಗತಃ** ಪ್ರತೀಕಾರ ಮಾಡಬೇಕಾದ ನಮಗೆಲ್ಲರಿಗೂ ಬಂದೊದಗಿರುವನು.

(ಶರೀರವಿಯೋಗ ಮಾಡಿಸಲು ಪ್ರಾಪ್ತನಾಗಿರುವನು)ಧನಾದಿಗಳಿಂದ ಪ್ರತಿಕ್ರಿಯೆ ಆಗಬಹುದಲ್ಲ ಎಂದರೆ ಹೇಳುವರು -

**ಯೇನ ಚೇಹಾಭಿಪನ್ನೋಽಯಂ ಪ್ರಾಣೈಃಪ್ರಿಯತಮೈರಪಿ ।**
**ಜನಃ ಸದ್ಯೋ ವಿಯುಜ್ಯೇತ ಕಿಮುತಾನ್ಯೈರ್ಧನಾದಿಭಿಃ ।।೨೧।।**

ಇಹ ಜೀವಲೋಕದಲ್ಲಿ **ಯೇನ** ಯಾವ ಕಾಲರೂಪಿ ಶ್ರೀಹರಿಯಿಂದ **ಅಭಿಪನ್ನಃ** ಗ್ರಸ್ತನಾದ **ಅಯಂ** ಮನುಷ್ಯನು **ಪ್ರಿಯತಮೈಃ** ಅತ್ಯಂತ ಪ್ರಿಯವಾದ **ಪ್ರಾಣೈಃ ಅಪಿ** ಪ್ರಾಣಗಳಿಂದಲೂ **ವಿಯುಜ್ಯೇತ** ವಿಯೋಗ ಹೊಂದುವನು **ಸದ್ಯಃ** ತಕ್ಷಣ **ಅನ್ಯೈಃ ಧನಾದಿಭಿಃ ವಿಯುಜ್ಯೇತ ಇತಿ ಕಿಮು** ಬೇರೆ ಧನಾದಿಗಳಿಂದ ವಿಯೋಗ ಹೊಂದುವನೆಂದೇನು ಹೇಳುವದು.

ಈಗ ಧೃತರಾಷ್ಟ್ರನಿಗೆ ಹೊರಗೆ ಹೊರಡಲು ಸಾಧನವಾದ ವೈರಾಗ್ಯದ ಮಾತುಗಳನ್ನು ಹೇಳುವನು.

**ಪಿತೃಭ್ರಾತೃಸುಹೃತ್ಪುತ್ರಾಃ ಹತಾಸ್ತೇ ವಿಗತಂ ವಯಃ ।**
**ಆತ್ಮಾ ಚ ಜರಯಾಗ್ರಸ್ತಃ ಪರಗೇಹಮುಪಾಸನೆ ॥೨೨॥**

**ಪಿತೃಭ್ರಾತೃಸುಹೃತ್ಪುತ್ರಾಃ ಪಿತೃ** ತಂದೆ **ಭ್ರಾತೃ** ತಮ್ಮ **ಸುಹೃತ್** ಉಪಕಾರ ಮಾಡಿದ ಸ್ನೇಹಿತರು **ಪುತ್ರಾಃ** ಮಕ್ಕಳು **ಹತಾಃ** ಸತ್ತಿರುವರು **ತೇ** ನಿನ್ನ **ವಯಃ ವಿಗತಂ** ವಯಸ್ಸೂ ಹೋಗಿದೆ **ಆತ್ಮಾ ಚ** ದೇಹವೂ ಸಹ **ಜರಯಾಗ್ರಸ್ತಃ** ಮುಪ್ಪಾಗಿದೆ. ಆದರೂ ನೀನು **ಪರಗೇಹಮುಪಾಸನೇ** ಮಂದಿಯ ಮನೆಯಲ್ಲಿರಲು ಇಚ್ಛಿಸುವೆ ಹೊರತು ಪರಲೋಕ ಸಾಧನ ಮಾಡಲಿಚ್ಛಿಸಲಾರಿ ಕಾರಣ ಸತ್ತಮೇಲೆ ಪರಲೋಕದಲ್ಲಿ ಸುಖವಾಗಿಲಾರದ ನಿನಗೆ ಎಂದು ಭಾವ.

ಪರಲೋಕದಲ್ಲಿ ಸುಖವಿಲ್ಲವಾದರೆ ಇಲ್ಲೇ ಇರಬಹುದೇನು ಎಂದರೆ ನೀನು ನಿರ್ಲಜ್ಜನೆಂದು ಹೇಳುವನು.

**ಅಹೋ ಮಹೀಯತೇ ಜಂತೋರ್ಜೀವಿತಾಶಾ ಯಯಾ ಭವಾನ್ ।**
**ಭೀಮಾಪವರ್ಜಿತಂ ಪಿಂಡಮಾದತ್ತೇ ಗೃಹಪಾಲವತ್ ॥೨೩॥**

**ಜಂತೋಃ** ಪ್ರಾಣಿಗಳಂತೇ **ಜೀವಿತಾಶಾಃ** ಹೀಗೆಯೇ ಬಹುಕಾಲ ಬದುಕುವೆನು ಎಂಬ ಆಸೆಯು **ಮಹೀಯತೇ** ಮಹತ್ತರವಾದುದು **ಅಹೋ** ಆಶ್ಚರ್ಯ ಅಜ್ಞಾನಾತಿರೇಕ ಏಕೆಂದರೆ **ಯಯಾ** ಯಾವ ಆಶೆಯಿಂದ **ಭವಾನ್** ನೀನು **ಭೀಮಾಪವರ್ಜಿತಂ ಪಿಂಡಂ** ಯಾವನಿಂದ ನಿನ್ನ ಮಕ್ಕಳು ಕೊಲ್ಲಲ್ಪಟ್ಟರೋ ಆ ಭೀಮಸೇನನಿಂದ ಅನಿವಾರಿತವಾದ ಅಂದರೆ ಉದಾಸೀನದಿಂದ ಕೊಟ್ಟ ಅನ್ನವನ್ನು **ಗೃಹಪಾಲವತ್** ನಾಯಿಯಂತೆ **ಆದತ್ತೇ** ತಿನ್ನುತ್ತಿರುವಿ.

ನೀನು ಹೇಳುವದು ಸರಿಯಲ್ಲ ನನ್ನ ತಮ್ಮನ ಮಗ ನನ್ನ ಮಗನೇ ಆದ್ದರಿಂದ ಅವನು ಕೊಟ್ಟ ಅನ್ನದಿಂದ ದೇಹಪೋಷಣೆ ಉಚಿತವೇ ಎಂದರೆ ನೀನು ಹೇಳುವದು ನಿಜ. ಆದರೆ ನೀನು ಅವನಿಗೆ ವಿಷ ಮುಂತಾದವನ್ನು ಕೊಟ್ಟು ಅಪಕಾರ ಮಾಡಿರುವಿ ಕಾರಣ ನಾವು ಅಪಕಾರ ಮಾಡಿದವರಿಂದಲೇ ನಮಗೆ ಉಪಕಾರವಾದರೆ ಅದು ತಿಳುವಳಿಕೆ ಇದ್ದವರಿಗೆ ಅಸಹ್ಯವೆಂದು ಹೇಳುವನು.

**ಅಗ್ನಿರ್ನಿಸೃಷ್ಟೋ ದತ್ತಶ್ಚ ಗರೋ ದಾರಾಶ್ಚ ದೂಷಿತಾಃ ।**
**ಹೃತಂ ಕ್ಷೇತ್ರಂ ಧನಂ ಯೇಷಾಂ ತದನ್ನೈರಸುಭಿಃ ಕ್ರಿಯಾತ್ ॥೨೪॥**

**ಅಗ್ನಿಃ ನಿಸೃಷ್ಟಃ** ಬೆಂಕಿಯು ಇಡಲ್ಪಟ್ಟಿತು **ಗರಃ ದತ್ತಃ** ವಿಷಕೊಟ್ಟಿದ್ದಾಯಿತು **ಚ** ಮತ್ತು **ದಾರಾಃ ದೂಷಿತಾಃ** ಪತ್ನಿಗೆ ಅವಮಾನ ಮಾಡಿದ್ದಾಯಿತು **ಯೇಷಾಂ** ಯಾರ **ಕ್ಷೇತ್ರಂ** ಭೂಮಿಯು **ಧನಂ** ಧನವು **ಹೃತಂ** ಅಪಹರಿಸಲ್ಪಟ್ಟಿತೋ **ತದನ್ನೈಃ** ಅವರ ಅನ್ನದಿಂದ ಪೋಷಿತವಾದ **ಅಸುಭಿಃ** ಪ್ರಾಣಗಳಿಂದ **ಕಿಯತ್** ಏನು ಪ್ರಯೋಜನ. ಏನೂ ಇಲ್ಲ ಅದಕ್ಕಿಂತ ಸಾಯುವದೇ ಮೇಲು ಕಾರಣ ಹೊರಡು ಎಂದರು.

ಹೇಗೋ ಮಾಡಿ ದೇಹಧಾರಣ ಮಾಡಬೇಕಲ್ಲ ಹೀಗೆ ಹೇಗೆ ಹೇಳುವೆ ಎಂದರೆ ಹೇಳುವರು.

**ತಸ್ಯಾಪಿ ತವ ದೇಹೋಽಯಂ ಕೃಪಣಸ್ಯ ಜಿಜೀವಿಷೋಃ ।**
**ಪರೈತ್ಯನಿಚ್ಛತೋ ಜೀರ್ಣೋ ಜರಯಾ ವಾಸಸೀ ಇವ ॥೨೫॥**

**ಕೃಪಣಃ ಚ** ದೀನನಾದ **ಜಿಜೀವಿಷೋಃ** ಬಹುದಿವಸ ಜೀವಿಸಲಿಚ್ಛಿಸುವ **ತಸ್ಯ ತವ** ಆ ನಿನ್ನ **ಅಯಂ ದೇಹಃ** ಈ ದೇಹವು **ಅನಿಚ್ಛತಃ ಅಪಿ** ನಿನಗಿಚ್ಛೆ ಇಲ್ಲದಿದ್ದರೂ **ಜರಯಾ ಜೀರ್ಣಃ** ಮುಪ್ಪಿನಿಂದ ಶಿಥಿಲವಾಗಿ **ವಾಸಸೀ ಇವ** ಹಳೆಯ ಬಟ್ಟೆಯು ಹಾಳಾಗುವಂತೆ **ಪರೇತಿ** ನಾಶವಾಗುವದು.

ಯಾವ ದೇಹಕ್ಕಾಗಿ ನೀನು ದೈನ್ಯದಿಂದರಬೇಕೋ ಅದೇ ದೇಹವೆ ಇನ್ನು ಮುಂದೆ ಬಹುಕಾಲ ಇರಲಾರದು. ಆ ಕಾರಣಕ್ಕಾಗಿ ಹೊರಡು ಎಂದು ಮುಂದೆ ದೇಹ ಬೀಳುವದೆಂದು ದೇಹವನ್ನು ಉಪೇಕ್ಷಿಸಿದರೆ ಆತ್ಮಹತ್ಯೆ ದೋಷ ಬರಬಹುದು. ಅದಕ್ಕೆ ಹೇಳುವನು ಅಥವಾ ವಿಷಯಾಸಕ್ತನಾದವನು ತತ್ ಕಾಲದಲ್ಲಿ (ಮರಣಕಾಲದಲ್ಲಿ) ಮಾಡಬೇಕಾದ ಪರಲೋಕ ಸಾಧನವೇನೆಂದರೆ ಆದರ ಎರಡು ರೀತಿಯನ್ನು ಎರಡು ಶ್ಲೋಕದಿಂದ ಹೇಳುವನು.

**ಗತಸ್ವಾರ್ಥಮಿಮಂ ದೇಹಂ ವಿಮುಕ್ತೋ ಮುಕ್ತಬಂಧನಃ ।**
**ಅವಿಜ್ಞಾತಗತಿರ್ಜಹ್ಯಾತ್ ಸ ವೈ ಧೀರ ಉದಾಹೃತಃ ॥೨೬॥**

**ಗತಸ್ವಾರ್ಥಂ** ಐಹಿಕ ಆಮುಷ್ಮಿಕ ಸುಖಸಾಧನವಾಗದಿರುವ ಧರ್ಮಾಚರಣಾದಿಳನ್ನು ಮಾಡಲಾಗದ **ಇಮಂ ದೇಹಂ** ಈ ದೇಹವನ್ನು **ವಿಮುಕ್ತಃ** ಬಿಡುವವನಾಗಿ ಅಂದರೆ ದೇಹಾಭಿಮಾನವನ್ನು ತೊರೆದು **ಮುಕ್ತಬಂಧನಃ** ದೇಹಾಭಿಮಾನವಿಲ್ಲದ್ದರಿಂದಲೇ ಹೆಂಡತಿ ಮಕ್ಕಳ ಮೇಲಿನ ಸ್ನೇಹಬಂಧನದಿಂದ ಮುಕ್ತನಾಗಿ **ಅವಿಜ್ಞಾತಗತಿಃ** ಯಾರಿಗೂ ತಿಳಿಯದಂತೆ ಅರಣ್ಯದಲ್ಲಿ ಸಂಚರಿಸುತ್ತ ವಾನಪ್ರಸ್ಥನಾಗಿ **ಜಹ್ಯಾತ್** ಬಿಡಬೇಕು **ಸ ವೈ ಧೀರಃ ಉದಾಹೃತಃ** ಅವನೇ ಧೀರನೆಂದು ಕರೆಯಲ್ಪಡುವನು. ಮರಣಕಾಲದಲ್ಲಿ ಮನೆಮಡದಿಯಲ್ಲಿ ಆಸಕ್ತನಾದವನು ಹೇಗೆ ಅಧೋಗತಿಗೆ ಹೋಗುವನೋ ಹಾಗೆ. ಪುರುಷಾರ್ಥ ಸಾಧನವಾಗದ ದೇಹವನ್ನು ತ್ಯಾಗಮಾಡಿದರೆ ದೋಷವಿಲ್ಲ ಕಾರಣ ನಿಜಜೀವನಕ್ಕೆ ಹೋಗಿ ತಪಶ್ಚರ್ಯೆಯಿಂದ ಈ ಶರೀರವನ್ನು ಸ್ವಾರ್ಥಸಾಧನವನ್ನಾಗಿ ಮಾಡು ಎಂದು ಭಾವ.

ಉತ್ತಮ ಪ್ರಕಾರ ಹೇಳುವನು.

**ಯಃ ಸ್ವತಃ ಪರತೋ ವೇಹ ಜಾತನಿರ್ವೇದ ಆತ್ಮವಾನ್ ।**
**ಹೃದಿ ಕೃತ್ವಾ ಹರಿಂ ಗೇಹಾತ್ ಪ್ರವ್ರಜೇತ್ ಸ ನರೋತ್ತಮಃ ॥೨೭॥**

**ಯಃ** ಯಾವನು **ಸ್ವತಃ** ತಾನಾಗಿಯೇ **ಪರತೋ ವಾ** ಬೇರೆಯವರ ಉಪದೇಶದಿಂದಲೋ **ಜಾತನಿರ್ವೇದಃ** ವೈರಾಗ್ಯವನ್ನು ಹೊಂದಿದವನು **ಆತ್ಮವಾನ್** ಮನಸ್ಸನ್ನು ವಶಪಡಿಸಿಕೊಂಡವನು **ಹೃದಿ** ಮನಸ್ಸಿನಲ್ಲಿ **ಹರಿಂ ಕೃತ್ವಾ** ಪರಮಾತ್ಮನನ್ನು ಇರಿಸಿಕೊಂಡು **ಗೇಹಾತ್** ಮನೆಯನ್ನು ತೊರೆದು **ಪ್ರವ್ರಜೇತ್** ಪರಮಹಂಸನಾಗುವನೋ **ಸಃ** ಅವನು **ಉತ್ತಮಃ** ಶ್ರೇಷ್ಠನು.

**ಅಥೋದೀಚೀಂ ದಿಶಂ ಯಾತು ಸ್ವೈರಜ್ಞಾತಗತಿರ್ಭವಾನ್ ।**
**ಇತೋರ್ವಾಕ್ ಪ್ರಾಯಶಃ ಕಾಲಃ ಪುಂಸಾಂ ಗುಣವಿಕರ್ಷಣಃ ॥೨೮॥**

**ಅಥ** ಆದ್ದರಿಂದ **ಸ್ವೈಃ ಅಜ್ಞಾತಗತಿಃ** ಏಕಾಂತ ದೇಶದಲ್ಲಿ ಗಮನ ಉಳ್ಳವನಾಗಿ **ಭವಾನ್** ತಾವು **ಉದೀಚೀಂ ದಿಶಂ** ಉತ್ತರ ದಿಕ್ಕನ್ನು ಕುರಿತು **ಯಾತು** ಹೋಗಿರಿ **ಇತೋ ಅರ್ವಾಕ್** ಇದಕ್ಕೂ ಮುಂಚೆ **ಕಾಲಃ** ಪರಮಾತ್ಮನು **ಪುಂಸಾಂ** ಅಧಿಕಾರಿಗಳ

**ಗುಣವಿಕರ್ಷಣಃ** ಜ್ಞಾನ, ಭಕ್ತಿ, ವೈರಾಗ್ಯಾದಿಗಳ ನಾಶಕನು. ಪೂರ್ವ ವಯಸ್ಸಿನಲ್ಲಿ ವಿಷಯಾಸಕ್ತಿ ಇರುವದರಿಂದ ವೈರಾಗ್ಯೋಪದೇಶ ಉಪಯೋಗವಾಗಲಾರದು ಎಂದೂ ಭಾವ. ಕಾರಣ ಕೊನೆ ವಯಸ್ಸಿನಲ್ಲಿ ವೈರಾಗ್ಯೋಪದೇಶ ಮಾಡುವಿಯಲ್ಲ ಮೊದಲೇ ಮಾಡಬಾರದಿತ್ತೆ ಎಂಬ ಶಂಕೆಗೆ ಅವಕಾಶವಿಲ್ಲ.

**ಏವಂ ರಾಜಾ ವಿದುರೇಣಾನುಜೇನ**
**ಪ್ರಜ್ಞಾಚಕ್ಷುರ್ಬೋಧಿತ ಆಜಮೀಢಃ ।**
**ಛಿತ್ವಾ ಸ್ವೇಷು ಸ್ನೇಹಪಾಶಾನ್ ದ್ರಢಿಮ್ನೋ**
**ನಿಶ್ಚಕ್ರಾಮ ಭ್ರಾತೃಸಂದರ್ಶಿತಾಧ್ವಾ ॥೨೯॥**

**ಏವಂ** ಈ ರೀತಿಯಾಗಿ **ಅನುಜೇನ ವಿದುರೇಣ** ತಮ್ಮನಾದ ವಿದುರನಿಂದ **ಬೋಧಿತಃ** ತಿಳಿ ಹೇಳಲ್ಪಟ್ಟ **ಆಜಮೀಢಃ** ಅಜಮೀಢನ ವಂಶದಲ್ಲಿ ಜನಿಸಿದ **ಪ್ರಜ್ಞಾಚಕ್ಷುಃ** ಜ್ಞಾನವೇ ಕಣ್ಣಾಗಿವುಳ್ಳ ಕುರುಡನಾದ **ರಾಜಾ** ಧೃತರಾಷ್ಟ್ರನು **ದ್ರಢಿಮ್ನಃ** ದೃಢವಾದ **ಸ್ವೇಷು** ಬಾಂಧವರಲ್ಲಿ **ಸ್ನೇಹಪಾಶಾನ್** ಸ್ನೇಹವೆಂಬ ಪಾಶವನ್ನು **ಛಿತ್ವಾ** ಕಡಿದು ಹಾಕಿ **ಭ್ರಾತೃಸಂದಿರ್ಶಿತಾಧ್ವಾ** ತಮ್ಮನು ತೋರಿಸಿದ್ದ ವನದ ಮತ್ತು ಮೋಕ್ಷದ ಮಾರ್ಗವುಳ್ಳವನಾಗಿ **ನಿಶ್ಚಕ್ರಾಮ** ಮನೆಯಿಂದ ಹೊರಗೆ ಹೊರಟನು.

**ಪತಿಂ ಪ್ರಯಾಂತಂ ಸುಬಲಸ್ಯ ಪುತ್ರೀ**
**ಪತಿವ್ರತಾ ಚಾನುಜಗಾಮ ಸಾಧ್ವೀ ।**
**ಹಿಮಾಲಯಂ ನ್ಯಸ್ತದಂಡಪ್ರಹರ್ಷಂ**
**ಮನಸ್ವಿನಾಮವಸತ್ ವಿಹಾರಮ್ ॥೩೦॥**

**ಪ್ರಯಾಂತಂ** ಮನೆಬಿಟ್ಟು ಹೊರಟ **ಪತಿಂ** ಗಂಡನನ್ನು **ಪತಿವ್ರತಾ** ಪತಿ ಸೇವೆಯೇ ವ್ರತವಾಗಿವುಳ್ಳ **ಸಾಧ್ವೀ** ಸಜ್ಜನಳಾದ **ಸುಬಲಸ್ಯ ಪುತ್ರೀ** ಸುಬಲರಾಜನ ಕುವರಿಯಾದ ಗಾಂಧಾರಿಯು **ಚ** ಮತ್ತು ಕುಂತಿಯೂ **ಅನುಜಗಾಮ** ಹಿಂಬಾಲಿಸಿದರು. **ನ್ಯಸ್ತದಂಡಪ್ರಹರ್ಷಂ** ಮನೋ, ವಾಕ್, ಕಾಯಗಳಿಂದ ಭೂತದ್ರೋಹವೆಂಬ ದಂಡವನ್ನು ತ್ಯಜಿಸಿದ ಸಂನ್ಯಾಸಿಗಳಿಗೆ ಸಂತೋಷ ಉಂಟು ಮಾಡುವ **ಮನಸ್ವಿನಾಂ** ಮನಸ್ಸನ್ನು ವಶ ಮಾಡಿಕೊಂಡ ಯೋಗಿಗಳಿಗೆ **ಸಂವಿಹಾರಂ** ಯಥೇಷ್ಟ ಸಂಚಾರವುಳ್ಳ **ಹಿಮಾಲಯಂ ಗತ್ವಾ** ಹಿಮಾಲಯಕ್ಕೆ ಹೋಗಿ **ಆವಸತ್** ಬದರಿಕಾಶ್ರಮದಲ್ಲಿ ವಾಸಮಾಡಿದನು.

**ವಿಶೇಷ :-**'ನ್ಯಸ್ತದಂಡಪ್ರಹರ್ಷಂ' 'ಮನಸ್ವಿನಾಂ ಸಂವಿಹಾರಂ' ಎಂಬ ಎರಡು ವಿಶೇಷಣಗಳಿಂದ ಇಂಥವರಿಗೆ ಹಿಮಾಲಯವು ಹಿಮಾದಿಗಳಿಂದ ದುಃಖದಾಯಕವಲ್ಲವೆಂದು ಸೂಚಿಸುವರು.

ಈಗ ಯುಧಿಷ್ಠಿರನ ಮನಸ್ಸಿನಲ್ಲಿ ಆ ವಿಧ ಶಕುನಗಳು ಕಾಣಿಸಿದ್ದರಿಂದ ತಪಸ್ಸು ಮಾಡುವ ಧೃತರಾಷ್ಟ್ರನ ಮರಣವಾಗಿದೆ ಎನಿಸಿತು ಎಂದು ಹೇಳುವರು.

**ಅಜಾತಶತ್ರುಃ ಕೃತಮೈತ್ರೋ ಹುತಾಗ್ನಿ-**
**ರ್ವಿಪ್ರಾನ್ನತ್ವಾ ತಿಲಗೋವಸ್ತ್ರರುಗ್ಮೈಃ ।**
**ಗೃಹಾನ್ ಪ್ರವಿಷ್ಟೋ ಗುರುವಂದನಾಯ**
**ನ ಚಾಪಶ್ಯತ್ ಪಿತರೌ ಸೌಬಲೀಂ ಚ ॥೩೧॥**

**ಅಜಾತಶತ್ರುಃ** ಧರ್ಮರಾಜನು **ಕೃತಮೈತ್ರಃ** ಸೂರ್ಯದೇವತಾಕವಾದ ಸಂಧ್ಯಾವಂದನ ಉಪಾಸನಾದಿಗಳನ್ನು ಮಾಡಿದವನಾಗಿ **ಹುತಾಗ್ನಿಃ** ಅಗ್ನಿಯಲ್ಲಿ ಹೋಮ ಮಾಡಿದವನಾಗಿ **ತಿಲಗೋವಸ್ತ್ರರುಗ್ಮೈಃ** ಎಳ್ಳು, ಆಕಳು, ಬಟ್ಟೆಗಳು, ಬಂಗಾರ ಇವುಗಳಿಂದ **ವಿಪ್ರಾನ್** ಬ್ರಾಹ್ಮಣರನ್ನು ಸಂತೋಷಪಡಿಸಿ **ನತ್ವಾ** ನಮಸ್ಕರಿಸಿ **ಗುರುವಂದನಾಯ** ದೊಡ್ಡಪ್ಪ ಮುಂತಾದ ಗುರುಗಳಿಗೆ ನಮಸ್ಕರಿಸಲು **ಗೃಹಾನ್ ಪ್ರವಿಷ್ಟಃ** ಮನೆಯಲ್ಲಿ ಪ್ರವೇಶ ಮಾಡಿದನು. ಅಲ್ಲಿ **ಪಿತರೌ** ಧೃತರಾಷ್ಟ್ರ ಕುಂತಿಯರನ್ನೂ ಚ ಮತ್ತು **ಸೌಬಲೀಂ** ಗಾಂಧಾರಿಯನ್ನೂ **ನ ಅಪಶ್ಯತ್** ಪ್ರತಿನಿತ್ಯ ನಮಸ್ಕರಿಸಲು ಬಂದಾಗ ಯಾವ ಆಶ್ರಮದಲ್ಲಿದ್ದರೆ ಅಲ್ಲಿಯೇ ಅವರನ್ನು ನಮಸ್ಕರಿಸುವ ಕಾಲದಲ್ಲಿ ಜ್ಞಾನದೃಷ್ಟಿಯಿಂದ ಕಾಣುತ್ತಿದ್ದನು. ಆದರೆ ಈ ದಿನ ಅಲ್ಲಿ ಅವರನ್ನು ಕಾಣಲಿಲ್ಲ. ಹಾಗಾದರೆ ಅವರು ಮೃತರಾಗಿರಬೇಕೆಂದು ಶಂಕೆಯುಳ್ಳವನಾದನು ಎಂದು ಭಾವ.

*ಭಾಗವತತಾತ್ಪರ್ಯ-*

ಮೇಲಿನ ಶ್ಲೋಕದಲ್ಲಿ ಪಿತರೌ ಎಂಬ ಪದದಿಂದ ತಂದೆತಾಯಿಗಳಾದ ಧೃತರಾಷ್ಟ್ರ ಗಾಂಧಾರಿಯರನ್ನು ಸ್ವೀಕರಿಸಲಾಗದು ಸೌಬಲೀಂ ಚ ಎಂದು ಗಾಂಧಾರಿಯನ್ನು ಪ್ರತ್ಯೇಕ ಹೇಳಿದೆ. ಇನ್ನು ಪಿತಾ ಚ ಪಿತೃವ್ಯಶ್ಚ ಪಿತರೌ ಎಂದು ಮಾಡಿ ವಿದುರಧೃತರಾಷ್ಟ್ರರನ್ನೂ ಸ್ವೀಕರಿಸಲಾಗದು ಪಿತಾಮಾತ್ರಾ ಎಂದು ವಿರೂಪೈಕಶೇಷ ವಿಧಾನವಿದೆ. ಅಲ್ಲದೆ ಇವನನ್ನು ಪಾಂಡವರು ತಂದೆಯಂತೆ ಪರಿಗಣಿಸುವರು ಮತ್ತು ಮುಖ್ಯವಾಗಿ ಧರ್ಮರಾಜನು ನೋಡುವ ಪೂರ್ವದಲ್ಲಿಯೇ ಮುಂದೆ ಹೇಳುವಂತೆ

ವಿದುರನು ನಾಶವಾದುದು ತಿಳಿದು ಬರುವದು. ಈ ಮಾತಿನ ಅಭಿಪ್ರಾಯವನ್ನು ತಿಳಿಸುವರು.

**ಪಿತರೌ ಕುಂತೀ ಧೃತರಾಷ್ಟ್ರೌ**

ಪಿತರೌ ಎಂದರೆ ಕುಂತಿ ಧೃತರಾಷ್ಟ್ರರನ್ನು ಎಂದರ್ಥ. ನ ಚಾಪಶ್ಯತ್ ಎಂಬುದಕ್ಕೆ ಧೃತರಾಷ್ಟ್ರಾದಿಗಳು ಧರ್ಮರಾಜನಿಗೆ ತಿಳಿಸದೇ ವನಕ್ಕೆ ಹೋದುದರಿಂದ ಮನೆಗೆ ಬಂದು ನೋಡಿದಾಗ ಕಾಣಿಸಲಿಲ್ಲವೆಂದು ಅರ್ಥವೇ ತೋರುವದು. ಭಾರತ ವಿರುದ್ಧವಾದ್ದರಿಂದ ಅದು ಸರಿಯಲ್ಲ.

**ನ ಚಾಪಶ್ಯತ್ । ತಸ್ಯ ಮನಸಿ ತೇಷಾಂ ವಿಪದ್ಭಾವೋ ಬಭೂವ । ಅನ್ಯಥಾ ಮಹಾಭಾರತವಿರೋಧಾತ್ ।**

**ಸ್ಕಾಂದೇ ಚ –**

**ಭೀಮ ಸಂತರ್ಜಿತೋ ರಾಜ್ಞಸ್ತ್ವನುಜ್ಞಾಂ ಪ್ರಾಪ್ಯ ಯತ್ನತಃ ।**
**ಧೃತರಾಷ್ಟ್ರೋ ವನೇವಾಸಮಕರೋದ್ವತ್ಸರತ್ರಯಮ್ ॥**

**ವಿದುರಸ್ತದ್ದಿದೃಕ್ಷಾರ್ಥಮಾಗತೇಷು ವನಂ ಪುರಾ ।**
**ಪಾಂಡವೇಷು ತು ರಾಜಾನಂ ಪ್ರವಿಶ್ಯೈಕತ್ವಮಾಗತಃ ॥**

**ತತೋ ದಾವಾಗ್ನಿನಾ ದಗ್ಧಂ ಧೃತರಾಷ್ಟ್ರಂ ಚ ಸೌಬಲೀಂ ।**
**ಶ್ರುತ್ವಾ ಕುಂತೀಂ ಚ ಚಿಂತಾಂ ತೇ ಪ್ರಾಪುಃ ಪಾಂಡುಸುತಾಸ್ತದಾ ॥**

**ತಾಂಸ್ತದಾ ನಾರದೋ ವಿದ್ವಾನ್ ಶಮಯಾಮಾಸ ಧರ್ಮವಿತ್ ।**
**ಉಕ್ತ್ವೋತ್ತಮಾಂ ಗತಿಂ ತೇಷಾಂ ನಿಷ್ಠಾಂ ತಾತ್ಕಾಲಿಕೀಂ ತಥಾ ॥ಇತ್ಯಾದಿ॥**

***ನ ಚ ಅಪಶ್ಯತ*** ಧರ್ಮರಾಜನ ಮನಸ್ಸಿನಲ್ಲಿ ಧೃತರಾಷ್ಟ್ರಾದಿಗಳು ಕಾಣದಿರುವುದರಿಂದ ಮೃತರಾಗಿರಬಹುದೇ ಎಂಬ ಶಂಕೆ ಉಂಟಾಯಿತು. ಹೀಗೆ ಅರ್ಥ ಹೇಳದೇ ವಿದುರ ಧೃತರಾಷ್ಟ್ರ ಎಂಬರ್ಥವನ್ನೇ ಒಪ್ಪಿದರೆ ಮಹಾಭಾರತ ವಿರೋಧ ಬರುವದು. (ಹೇಗೆಂದರೆ ಮಹಾಭಾರತದಲ್ಲಿ ವಿದುರನಿಂದ ಬೋಧಿಸಲ್ಪಟ್ಟ ಧೃತರಾಷ್ಟ್ರನು ತಪಸ್ಸು ಮಾಡಲು ವನಕ್ಕೆ ಹೋಗುವದಾಗಿ ಧರ್ಮರಾಜನಿಗೆ ಹೇಳಿದಾಗ ನೀವು ಹೋಗಬಾರದು ನಾವೇ ಕಾಡಿಗೆ ಹೋಗಿ ತಪಸ್ಸು ಮಾಡುವೆವು ಎಂದು ಧೃತರಾಷ್ಟ್ರನ ಮೇಲೆ ವಿಶ್ವಾಸದಿಂದ ಧರ್ಮರಾಜನು ತಡೆದನು. ಆಮೇಲೆ ಧೃತರಾಷ್ಟ್ರನು ಧರ್ಮರಾಜನ ಅನುಮತಿಯನ್ನು ಪಡೆಯಲು ಮೂರು ದಿವಸ ಉಪವಾಸ

ಮಾಡಿದನು ಆಗ ವ್ಯಾಸರು ಬಂದು ಅನುಮತಿಯನ್ನು ಕೊಡಿಸಿದ ಮೇಲೆ ಧೃತರಾಷ್ಟ್ರನು ಎಲ್ಲರನ್ನೂ ಕೇಳಿಯೇ ವಿದುರ, ಸಂಜಯ, ಕುಂತಿ, ಗಾಂಧಾರಿ, ಇವರಡೊನೆ ಅರಣ್ಯಕ್ಕೆ ಹೋಗಿರುವನು. ಅರಣ್ಯದಲ್ಲಿ ವಾಸವಾಗಿರುವಾಗ ಪಾಂಡವರು ಸಪತ್ನೀಕರಾಗಿ ಧೃತರಾಷ್ಟ್ರಾದಿಗಳನ್ನು ನೋಡಲು ಹೋಗುವರು. ಆಗ ವಿದುರನು ಧರ್ಮರಾಜನಿಂದ ಐಕ್ಯ ಹೊಂದುವನು. ಪಾಂಡವರು ತಿರುಗಿ ಹಸ್ತನಾವತಿ ಪಟ್ಟಣಕ್ಕೆ ಬಂದ ಮೇಲೆ ಧೃತರಾಷ್ಟ್ರಾದಿಗಳು ಮೂವರೂ ಅಗ್ನಿಯಲ್ಲಿ ಸುಡಲ್ಪಟ್ಟ ದೇಹವುಳ್ಳವರಾಗಿ ಪರಲೋಕಕ್ಕೆ ಹೋಗಿರುವರೆಂದು ಹೇಳಿದೆ. ಆದಕಾರಣ ಅದನ್ನು ಅನುಸರಿಸಿಯೇ ಇಲ್ಲಿಯೂ ಧರ್ಮರಾಜನು ತನ್ನ ಅನುಮತಿಯಿಂದ ಧೃತರಾಷ್ಟ್ರನು ಕಾಡಿಗೆ ಹೋದ ಮೇಲೆಯೂ ಅವರು ಇರುತ್ತಿದ್ದ ಸ್ಥಳಕ್ಕೆ ಪ್ರತಿನಿತ್ಯವೂ ನಮಸ್ಕರಿಸಿಕೊಂಡಿದ್ದವನು. ಆ ದಿವಸ ಜ್ಞಾನ ದೃಷ್ಟಿಯಿಂದ ಅವರನ್ನು ನೋಡಲಿಲ್ಲ ಎಂದೇ ಅರ್ಥ ಮಾಡಬೇಕು.

ಈ ವಿಷಯವು ಸ್ಕಾಂದಪುರಾಣಕ್ಕೂ ಸಮ್ಮತವಾದದ್ದು. ಭೀಮನಿಂದ ಧೃತರಾಷ್ಟ್ರನಿಗೆ ವೈರಾಗ್ಯ ಹುಟ್ಟುವದಕ್ಕಾಗಿ ದುರುಕ್ತಿಯಿಂದ ಅವಮಾನಿಸಲ್ಪಟ್ಟ ಧೃತರಾಷ್ಟ್ರನು ಪ್ರಯತ್ನ ಪಟ್ಟು ಧರ್ಮರಾಜನಿಂದ ಅನುಜ್ಞೆಯನ್ನು ಹೊಂದಿ ಮೂರು ವರ್ಷಪರ್ಯಂತ ಬದರಿಕಾಶ್ರಮದಲ್ಲಿ ವನದಲ್ಲಿ ವಾಸಮಾಡಿಕೊಂಡಿದ್ದನು. ಅವರನ್ನು ನೋಡುವದಕ್ಕಾಗಿ ಪಾಂಡವರು ವನಕ್ಕೆ ಬರುತ್ತಿರಲು 3 ವರ್ಷಕ್ಕಿಂತ ಮೊದಲೇ ವಿದುರನು ತನ್ನ ಸ್ವರೂಪನಾದ ಧರ್ಮರಾಜನನ್ನು ಪ್ರವೇಶ ಮಾಡಿ ಐಕ್ಯವನ್ನು ಹೊಂದಿರುವನು. ಆಮೇಲೆ ಕಾಡು ಕಿಚ್ಚಿನಿಂದ ಧೃತರಾಷ್ಟ್ರ ಗಾಂಧಾರಿ ಕುಂತಿ ಇವರು ಸುಡಲ್ಪಟ್ಟರೆಂದು (ನಾರದ ಸಂಜಯರಿಂದ) ಕೇಳಿ ಪಾಂಡವರು ವ್ಯಥೆಯನ್ನು ಹೊಂದಿದರು. ಆಗ ಧರ್ಮಜ್ಞರಾದ ನಾರದರು ಪಾಂಡವರಿಗೆ ಉತ್ತಮ ಜ್ಞಾನವನ್ನು 'ಮಾಕಂಚನ ಶುಚೋ ರಾಜನ್ ಯದೀಶ್ವರವಶಂ ಜಗತ್'' ಮುಂತಾಗಿ ಉಪದೇಶಿಸಿ ಆ ಕಾಲದಲ್ಲಿ ಮಾಡಬೇಕಾದ ಮನೋವೃತ್ತಿ ವಿಶೇಷವನ್ನು ಹೇಳಿ ಆ ಪಾಂಡವರನ್ನು ಸಮಾಧಾನ ಗೊಳಿಸಿದರು. ಈ ಎಲ್ಲ ವಿಷಯ ಸ್ಕಾಂದ ಪುರಾಣದಲ್ಲಿ ಹೇಳಿದೆ.

**ತಾವಿಮೌ ಮೇ ಭುಜಾವೃತ್ತೌ ಪೀನೌ ಚಂದನರೂಷಿತೌ ।**
**ಯಯೋರಂತರಮಾಸಾದ್ಯ ಜರಠಸ್ಯ ಸುತಾ ಹತಾಃ ॥**

ಎಂದು ಭೀಮನ ದುರುಕ್ತಿ ಈ ನನ್ನ ದುಂಡಾದ, ಪುಷ್ಟವಾದ, ಗಂಧ ಹಚ್ಚಿದ ಭುಜಗಳು ಇವುಗಳ ಮಧ್ಯದಲ್ಲಿ ಸಿಲುಕಿ ಮುದುಕನ ಮಕ್ಕಳು ಸತ್ತರು ಎಂದರ್ಥ.

**ತತ್ರ ಸಂಜಯಮಾಸೀನಂ ಪಪ್ರಚ್ಛೋದ್ವಿಗ್ನಮಾನಸಃ ।**
**ಗಾವದ್ಗಣೇ ಕ್ವ ನಸ್ತಾತೋ ವೃದ್ಧೋ ಹೀನಶ್ಚ ನೇತ್ರಯೋಃ ॥**
**ಅಂಬಾ ವಾ ಹತಪುತ್ರಾರ್ತಾ ಪಿತೃವ್ಯಃ ಕ್ವ ಗತಃ ಸುಹೃತ್ ॥೩೨॥**

**ತತ್ರ** ಆಸಮಯದಲ್ಲಿ **ಆಸೀನಂ** ವನದಿಂದ ಬಂದು ಕುಳಿತಿರುವ **ಸಂಜಯಂ** ಸಂಜಯನನ್ನು **ಉದ್ವಿಗ್ನ ಮಾನಸಃ** ದುಃಖಿತವಾದ ಮನಸ್ಸುಳ್ಳ ಧರ್ಮರಾಜನು **ಹೇ ಗಾವದ್ಗಣೇ** ಗವದ್ಗಣ ಪುತ್ರನಾದ ಸಂಜಯನೇ **ವೃದ್ಧಃ** ಮುದುಕನಾದ **ನೇತ್ರಯೋಃ ಹೀನಃ** ಕಣ್ಣುಗಳಿಲ್ಲದ **ನಃ ತಾತಃ** ನಮ್ಮ ದೊಡ್ಡಪ್ಪನು **ಕ್ವ** ಎಲ್ಲಿ **ಅಂಬಾ** ಕುಂತಿಯು **ಕ್ವ** ಎಲ್ಲಿ **ಹತಪುತ್ರಾರ್ತ** ಮಕ್ಕಳನ್ನು ಕಳೆದುಕೊಂಡು ದುಃಖಿತಳಾದ ಗಾಂಧಾರಿಯು **ಕ್ವ** ಎಲ್ಲಿ **ಸುಹೃತ್ ಪಿತೃವ್ಯಃ ಕ್ವ** ಪ್ರಿಯನಾದ ಧೃತರಾಷ್ಟ್ರನೆಲ್ಲಿ ಎಂದು ಆದರದಿಂದ ಮತ್ತೊಮ್ಮೆ **ಪಪ್ರಚ್ಛ** ಕೇಳಿದನು. ಎಲ್ಲಿದ್ದನೋ ಅಲ್ಲಿ ಕಾಣುತ್ತಿಲ್ಲ ಕಾರಣ ಆಶ್ರಮಾಂತರಕ್ಕೆ ಹೋದನೇ ಲೋಕಾಂತರಕ್ಕೆ ಹೋದನೇ ಅಥವಾ ಗಂಗೆಯಲ್ಲಿ ಹೆಂಡತಿಯೊಡನೆ ಇದ್ದನೇ ಎಂದು ಪ್ರಶ್ನಾಭಿಪ್ರಾಯ.

*ಭಾಗತವತಾತ್ಪರ್ಯ -*

ಹಿಂದೆ ಹೇಳಿದಂತೆ ವ್ಯಾಖ್ಯಾನ ಮಾಡಿದರೆ ಇಲ್ಲಿ ಸಂಜಯನನ್ನು ಕೇಳಿದ್ದು ಅದಕ್ಕೆ ಉತ್ತರವಾಗಿ ನಾನೂ ವಂಚಿತನಾದೆ ಎಂಬ ಉತ್ತರ ನೋಡಿದರೆ ಪಾಂಡವರಿಗೆ ತಿಳಿಯದೆ ಧೃತರಾಷ್ಟ್ರ ವನಕ್ಕೆ ತೆರಳಿದನೆಂದು ತೋರುತ್ತದೆ. ಕಾರಣ ಸಂಜಯನು ಉತ್ತರಾಭಿಪ್ರಾಯವನ್ನು ಪ್ರಮಾಣದಿಂದ ತಿಳಿಸುವನು.

**ಧೃತರಾಷ್ಟ್ರೇ ಮೃತೇ ಸೂತಃ ಸಂಜಯಃ ಪಾಂಡುಸೂನವೇ ।**
**ಗತಿಂ ಶಶಂಸ ಕುಂತ್ಯಾಶ್ಚ ಗಾಂಧಾರೀಧೃತರಾಷ್ಟ್ರಯೋಃ ॥**
**-ಬ್ರಹ್ಮಾಂಡೇ ಇತ್ಯಾದಿ**

**ಪಿತೃವ್ಯೋಽಪಿ ಧೃತರಾಷ್ಟ್ರ ಏವ । ದ್ವಿರುಕ್ತಿಸ್ತಾತ್ಪರ್ಯಾರ್ಥಾ ॥**

**ಯತ್ರಾಧಿಕಂ ತತ್ಪರತಾ ಬಹುವಾರಮಪಿ ಧ್ರುವಮ್ ।**
**ತದ್ವದಂತಿ ಮಹಾಪ್ರಾಜ್ಞಾ ಲೋಕವೇದಾನುಸಾರತಃ ॥ -ಇತಿ ಬ್ರಹ್ಮತರ್ಕೇ**

ಧೃತರಾಷ್ಟ್ರನು ಮೃತನಾಗುತ್ತಿರಲು ಸೂತನಾದ ಸಂಜಯನು ಧರ್ಮರಾಜನಿಗೆ ಕುಂತಿ ಗಾಂಧಾರಿ ಧೃತರಾಷ್ಟ್ರರ ಮರಣವನ್ನು ಹೇಳಿದನು. ಮುಂತಾದ ವಿಷಯ ಬ್ರಹ್ಮಾಂಡ ಪುರಾಣದಲ್ಲಿದೆ. ಧೃತರಾಷ್ಟ್ರಾದಿಗಳು ಮೃತರಾದ ಮೇಲೆ ಧರ್ಮರಾಜನು

ಸಂಜಯನ ಹತ್ತಿರ ಬಂದು ಮಾಡಿದುದು ವಿದುರ ವಿಷಯಕ ಪ್ರಶ್ನೆ ಎಂದಾದರೆ 'ಪಿತೃವ್ಯಃ ಕ್ವ ಗತಃ' ವಿದುರನೆಲ್ಲಿ ಹೋದನು. ಎಂಬ ಪ್ರಶ್ನೆ ಕೂಡಲಾರದು ಏಕೆಂದರೆ ವಿದುರನು ಮೊದಲೇ ಮೃತನಾಗಿರುವನೆಂದು ಧರ್ಮರಾಜನಿಗೆ ತಿಳಿದೇ ಇದೆ ಎಂದರೆ ಉತ್ತರ. ಪಿತೃವ್ಯ ಎಂದರೂ ಧೃತರಾಷ್ಟ್ರನೇ ಎಂದು ತಿಳಿಯಬೇಕು. ತಾತ್ಪರ್ಯಾತಿಶಯವನ್ನು ತಿಳಿಸಲು ''ಕ್ವ ನಸ್ತಾತಃ ಪಿತೃವ್ಯಕ್ವ ಗತಃ'' ಎಂದು ಎರಡು ಸಲ ಕೇಳಿದ್ದು. ಈ ವಿಷಯದಲ್ಲಿ ಪ್ರಮಾಣ ಯಾವ ಅರ್ಥದಲ್ಲಿ ಅತ್ಯಧಿಕ ತಾತ್ಪರ್ಯವಿದೆಯೋ ಅಂತಹುದನ್ನು ಮಹಾಪ್ರಾಜ್ಞರು ಲೋಕವೇದಾನುಸಾರವಾಗಿ ನಿಶ್ಚಯವಾಗಿಯೂ ಬಗೆ ಬಗೆಯಾಗಿ ಹೇಳುತ್ತಾರೆ ಎಂದು ಬ್ರಹ್ಮವೈವರ್ತದಲ್ಲಿದೆ.

**ಅಪಿ ಮಯ್ಯಕೃತಪ್ರಜ್ಞೇ ಪತ ಬಂಧುಃ ಸ್ವಭಾರ್ಯಯಾ ।**
**ಆಶಂಸಮಾನಃ ಶಮಲಂ ಗಂಗಾಯಾಂ ದುಃಖಿತೋ ಪತತ್ ॥೩೩॥**

**ಅಕೃತಪ್ರಜ್ಞೇ** ಶಿಕ್ಷಿತ ಬುದ್ಧಿಯುಳ್ಳ **ಮಯಿ** ನನ್ನ ವಿಷಯದಲ್ಲಿ **ಶಮಲಂ** ಅಪರಾಧವನ್ನು **ಆಶಂಸಮಾನಃ** ಶಂಕಿಸುವವನಾಗಿ(ಹೇಳುವವನಾಗಿ) **ಹತಬಂಧುಃ** ಬಂಧುಗಳನ್ನು ಕಳೆದುಕೊಂಡು **ದುಃಖಿತಃ** ದುಃಖವುಳ್ಳವನಾಗಿ **ಸ್ವಭಾರ್ಯಯಾ** ತನ್ನ ಹೆಂಡತಿಯೊಡನೆ **ಗಂಗಾಯಾಂ ಅಪತತ್ ಅಪಿ** ಗಂಗೆಯಲ್ಲಿ ಬಿದ್ದನೇ? ತಾನು ರಾಜನಾದನೆಂದು ನನ್ನನ್ನು ಹೊರಗೆ ಹಾಕಿದನೆಂದು ತಿಳಿದನೇ ಆದ್ದರಿಂದಲೇ ಗಂಗೆಯಲ್ಲಿ ಬಿದ್ದನೇನು ಎಂದು ಭಾವ.

**ಪಿತರ್ಯುಪರತೇ ಪಾಂಡೌ ಸರ್ವಾನ್ನಃ ಸುಹೃದಃ ಶಿಶೂನ್ ।**
**ಅರಕ್ಷತಾಂ ವ್ಯಸನತಃ ಪಿತೃವ್ಯೌ ಕ್ವ ಗತಾವಿತಃ ॥೩೪॥**

**ಪಿತರಿ** ತಂದೆಯಾದ **ಪಾಂಡೌ** ಪಾಂಡುರಾಜನು **ಉಪರತೇ** ಮರಣ ಹೊಂದಿದಾಗ **ಸುಹೃದಃ** ಪ್ರಿಯರಾದ **ಶಿಶೂನ್** ಚಿಕ್ಕ ಮಕ್ಕಳಾದ **ಸರ್ವಾನ್ ನಃ** ನಮ್ಮೆಲ್ಲರನ್ನು **ಯೌ ವ್ಯಸನತಃ** ಕಷ್ಟದಿಂದ **ಅರಕ್ಷತಾಂ** ಯಾರು ರಕ್ಷಿಸಿದರೋ **ತೌ ಪಿತೃವ್ಯೌ** ಧೃತರಾಷ್ಟ್ರ ಗಾಂಧಾರಿಯರು **ಇತಃ** ಬದರಿಯಿಂದ **ಕ್ವ ಗತೌ** ಎಲ್ಲಿ ಹೋದರು.

*ಭಾಗವತತಾತ್ಪರ್ಯ -*

''ಪಿತೃವ್ಯೌ ಗಾಂಧಾರಿ ಧೃತರಾಷ್ಟ್ರೌ''

ಇಲ್ಲಿಯೂ ಪಿತೃವ್ಯಶ್ಚ ಪಿತೃವ್ಯಾ ಚ ಪಿತೃವ್ಯೌ ಎಂಬ ಎರಡು ವಿಶೇಷದಿಂದ ಧೃತರಾಷ್ಟ್ರಗಾಂಧಾರಿಯರನ್ನೇ ಸ್ವೀಕರಿಸಬೇಕು ವಿದುರನನ್ನಲ್ಲ.

ಸೂತ ಉವಾಚ -

**ಕೃಪಯಾ ಸ್ನೇಹವೈಕ್ಲವ್ಯಾತ್ ಸೂತೋ ವಿರಹಕರ್ಷಿತಃ ।**
**ಆತ್ಮೇಶ್ವರಮಚಕ್ಷಾಣೋ ನ ಪ್ರತ್ಯಾಹಾತಿಪೀಡಿತಃ ॥೩೫॥**

**ಕೃಪಯಾ** ಕರುಣೆಯಿಂದ **ಸ್ನೇಹ ವೈಕ್ಲವ್ಯಾತ್** ಸ್ನೇಹದಿಂದ ಉಂಟಾದ ಮನಃಖೇದದಿಂದ **ಪೀಡಿತಃ** ಪೀಡಿತನಾಗಿ **ಆತ್ಮೇಶ್ವರಂ** ತನ್ನ ಒಡೆಯನಾದ ಧೃತರಾಷ್ಟ್ರನನ್ನು **ಅಚಕ್ಷಾಣಃ** ಮೃತನಾದುದರಿಂದ ಭೂಮಿಯಲ್ಲಿ ಕಾಣದಲೇ **ವಿರಹಕರ್ಷಿತಃ** ವಿಯೋಗದಿಂದ ಕೃಶನಾಗಿ **ಸೂತಃ** ಸಂಜಯನು **ನ ಪ್ರತ್ಯಾಹ** ಉತ್ತರವನ್ನು ನೀಡಲಿಲ್ಲ.

**ವಿಮೃಜ್ಯ ಪಾಣಿನಾಽಶ್ರೂಣಿ ವಿಷ್ಟಭ್ಯಾತ್ಮಾನಮಾತ್ಮನಾ ।**
**ಅಜಾತಶತ್ರುಂ ಪ್ರತ್ಯೂಚೇ ಪ್ರಭೋಃ ಪಾದಾವನುಸ್ಮರನ್ ॥೩೬॥**

**ಅಶ್ರೂಣಿ** ಕಣ್ಣೀರನ್ನು **ಪಾಣಿನಾ** ಕೈಯಿಂದ **ವಿಮೃಜ್ಯ** ಒರಿಸಿಕೊಂಡು **ಆತ್ಮಾನಂ** ತನ್ನನ್ನು **ಆತ್ಮನಾ** ಮನಸ್ಸಿನಿಂದ **ವಿಷ್ಟಭ್ಯ** ಸಂಸ್ಥಾಪಿಸಿ ಅಂದರೆ ಧೈರ್ಯ ತಂದುಕೊಂಡು **ಪ್ರಭೋಃ** ಧೃತರಾಷ್ಟ್ರನ **ಪಾದೌ** ಚರಣಗಳನ್ನು **ಅನುಸ್ಮರನ್** ಸ್ಮರಿಸುತ್ತ **ಅಜಾತಶತ್ರುಂ ಪ್ರತ್ಯೂಚೇ** ಧರ್ಮರಾಜನಿಗೆ ಉತ್ತರಿಸಿದನು.

ಸಂಜಯ ಉವಾಚ -

**ಅಹಂ ಚ ವ್ಯಂಸಿತೋ ರಾಜನ್ ಪಿತ್ರೋರ್ವಃ ಕುಲನಂದನ ।**
**ನ ವೇದ ಸಾಧ್ವ್ಯಾಃ ಗಾಂಧಾರ್ಯಾ ಮುಷಿತೋಽಸ್ಮಿ ಮಹಾತ್ಮಭಿಃ ॥೩೭॥**

**ಹೇ ಕುಲನಂದನ** ಕುಲಕ್ಕೆ ಆನಂದವೀವ **ರಾಜನ್** ಧರ್ಮರಾಜನೇ **ವಃ ಪಿತ್ರೋಃ** ನಿಮ್ಮ ತಂದೆತಾಯಿಗಳಾದ ಧೃತರಾಷ್ಟ್ರಕುಂತಿಯರಿಂದ **ಅಹಂ ಚ** ನೀನಷ್ಟೇ ಅಲ್ಲ ನಾನೂ ಸಹ **ವ್ಯಂಸಿತಃ** ವಂಚಿತನಾಗಿರುವೇನು **ಸಾಧ್ವ್ಯಾಃ** ಪತಿವ್ರತೆಯಾದ **ಗಾಂಧಾರ್ಯಾಃ** ಗಾಂಧಾರಿಯ **ಪ್ರಾಪ್ಯಸ್ಥಾನಂ ನ ವೇದ** ಪೊಂದುವ ತಾಣವನ್ನು ಅರಿತಿಲ್ಲ **ಮಹಾತ್ಮಭಿಃ** ಇವರೆಲ್ಲ ಹಿರಿಯರಿಂದ **ಮುಷಿತೋಽಸ್ಮಿ** ವಂಚಿತನಾಗಿರುವೆನು ಕೊಲ್ಲಲ್ಪಟ್ಟಿರುವೆನು ಎಂದು ಭಾವ.

*ಭಾಗವತತಾತ್ಪರ್ಯ-*

**ಮುಷಿತೋSಸ್ಮೀತಿ ಪ್ರಲಾಪಃ ।**

ವಂಚಿತನಾಗಿರುವೆನೆಂದು ಹೇಳಿದ್ದು ಪ್ರಲಾಪ ಮಾಡುವಾಗ. ಆದ ಕಾರಣ ಮೋಹವಿರಲಿಲ್ಲ ಹೀಗೆ ಹೇಗೆ ಹೇಳಿದರು ಎಂಬ ಶಂಕೆಗೆ ಅವಕಾಶವಿಲ್ಲ.

**ಸೂತ ಉವಾಚ -**

**ಏತಸ್ಮಿನ್ನಂತರೇ ವಿಪ್ರಾಃ ನಾರದಃ ಪ್ರತ್ಯದೃಶ್ಯತ ।**
**ವೀಣಾಂ ತ್ರಿತಂತ್ರೀಂ ಧ್ವನಯನ್ ಭಗವಾನ್ ಸಹ ತುಂಬುರುಃ ।।೩೮।।**

**ಹೇ ವಿಪ್ರಾಃ** ಶೌನಕಾದಿಗಳೇ **ಏತಸ್ಮಿನ್ ಅಂತರೇ** ಆ ಸಮಯದಲ್ಲಿ **ಸಹತುಂಬುರುಃ** ತುಂಬುರು ಸಹಿತನಾದ **ನಾರದಃ** ನಾರದರು **ತ್ರಿತಂತ್ರೀ** ತ್ರಿತಂತ್ರೀ ಎಂಬ ಹೆಸರಿನ **ವೀಣಾಂ** ವೀಣೆಯನ್ನು **ಧ್ವನಯನ್** ಧ್ವನಿಮಾಡುತ್ತಾ **ಪ್ರತ್ಯದೃಶ್ಯತ್** ಕಾಣಿಸಿಕೊಂಡರು.

**ರಾಜ್ಞಾSSದರೋಪನೀತಾರ್ಘ್ಯಂ ಪ್ರತ್ಯುತ್ಥಾನಾಭಿವಂದಿತಮ್ ।**
**ಪರಮಾಸನಮಾಸೀನಂ ಕೌರವೇಂದ್ರೋSಭ್ಯಭಾಷತ ।।೩೯।।**

**ರಾಜ್ಞಾ** ಧರ್ಮರಾಜನಿಂದ **ಆದರೋಪನೀತಾರ್ಘ್ಯಂ** ಭಕ್ತಿಯಿಂದ ಸಮರ್ಪಿತವಾದ ಅರ್ಘ್ಯವುಳ್ಳ **ಪ್ರತ್ಯುತ್ಥಾನಾಭಿವಂದಿತಂ** ಎದ್ದು ಹೋಗಿ ನಮಸ್ಕರಿಸಲ್ಪಟ್ಟ **ಪರಮಾಸನಮಾಸೀನಂ** ಶ್ರೇಷ್ಠವಾದ ಆಸನದಲ್ಲಿ ಕುಳಿತಿರುವ ನಾರದರನ್ನು ಕುರಿತು **ಕೌರವೇಂದ್ರಃ** ಧರ್ಮರಾಜನು **ಅಭ್ಯಭಾಷತ** ಮಾತನಾಡಿದನು.

**ಯುಧಿಷ್ಠಿರ ಉವಾಚ -**

**ನಾಹಂ ವೇದಗತಿಂ ಪಿತ್ರೋಃ ಭಗವಾನ್ ಕ್ವ ಗತಾವಿತಃ ।**
**ಕರ್ಣಧಾರ ಇವಾಪಾರೇ ಸೀದತಾಂ ಪಾರದರ್ಶನಃ ।।೪೦।।**

**ಹೇ ಭಗವಾನ್** ನಾರದರೇ **ಅಹಂ** ನಾನು **ಪಿತ್ರೋಃ** ಮೃತರಾದ ಧೃತರಾಷ್ಟ್ರ ಗಾಂಧಾರಿಯರ **ಗತಿಂ** ಪಾರಲೌಕಿಕ ಸ್ಥಿತಿಯನ್ನು **ಇತಃ** ಬದರಿಕಾಶ್ರಮದಿಂದ **ಕ್ವ ಗತೌ** ಎಲ್ಲಿ ಹೋದರು ಎಂದು **ಅಹಂ ನ ವೇದ** ನಾನು ತಿಳಿದಿಲ್ಲ. **ಅಪಾರೇ** ದಂಡೆ ಕಾಣದಿರುವ ಸಮುದ್ರದಲ್ಲಿ **ಸೀದತಾಂ** ಹೆದರುವವರಿಗೆ **ಕರ್ಣಧಾರಃ ಇವ** ನಾವಿಕನಂತೆ **ತ್ವಂ** ನೀವು **ಅಪಾರೇ** ಕೊನೆ ಗಾಣದ ಸಂಸಾರದಲ್ಲಿ **ಸೀದತಾಂ** ದುಃಖ ಪಡುವವರಿಗೆ **ಪಾಣೆದರ್ಶನಃ** ಕೊನೆಯನ್ನು (ದುಃಖದ) ತೋರಿಸುವವರು ಆದ ಕಾರಣ ತಮ್ಮನ್ನು ಪ್ರಶ್ನಿಸುವೆನು.

*ಭಾಗವತತಾತ್ಪರ್ಯ-*

'ಕ್ವ ಗತೌ ಇತ್ಯದೃಷ್ಟಾಪೇಕ್ಷಯಾ'

ಈ ಪ್ರಶ್ನೆಯೂ ಸಹ ಯಾವ ವನದಲ್ಲಿದ್ದರೋ ಅಲ್ಲಿ ಕಾಣಿಸದಿರುವದರಿಂದ, ಮರಣವನ್ನಪ್ಪಿದರು ಎಂಬ ಶಂಕೆಯಿಂದ, ಲೋಕಾಂತರ ಗಮನವಿಷಯದಲ್ಲೇನೇ ಕಾರಣ ಧೃತರಾಷ್ಟ್ರನ ಗಮನ ಗೋತ್ತೆ ಎಂಬ ಪ್ರಶ್ನೆ ಸರಿಯಲ್ಲ ಎಂಬ ಶಂಕೆ ಇಲ್ಲ.

ನಾರದ ಉವಾಚ -

**ಮಾ ಕಂಚನ ಶುಚೋ ರಾಜನ್ ಯದೀಶ್ವರ ವಶಂ ಜಗತ್ ।**
**ಸ ಸಂಯುನಕ್ತಿ ಭೂತಾನಿ ಸ ಏವ ವಿಯುನಕ್ತಿ ಚ ॥೪೦॥**

**ಯತ್** ಯಾವಕಾರಣ **ಜಗತ್** ಪ್ರಪಂಚವು **ಈಶ್ವರಂ ವಶಂ** ಭಗವಂತನ ಅಧೀನವೋ **ತತ್** ಆದಕಾರಣ **ಭೂತಾನಿ** ಪ್ರಾಣಿಗಳನ್ನು **ಸಃ** ಶ್ರೀಹರಿಯು **ಸಂಯುನಕ್ತಿ** ಅವರ ಕರ್ಮಾನುಸಾರ ಸಂಯೋಜಿಸುವನು **ಸ ಏವ ವಿಯುನಕ್ತಿ ಚ** ಅವನೇ ಅವರ ಕರ್ಮಮುಗಿದ ನಂತರ ವಿಯೋಜಿಸುವನು. ಆದ್ದರಿಂದ ನಮ್ಮ ಕೈಯ್ಯಲ್ಲಿ ಯಾವುದೂ ಇಲ್ಲದಿರುವುದರಿಂದ **ರಾಜನ್** ಧರ್ಮರಾಜನೇ **ಮಾಕಂಚನ ಶುಚಃ** ಧೃತರಾಷ್ಟ್ರಾದಿಗಳಲ್ಲಿ ಯಾರನ್ನು ಕುರಿತು ದುಃಖಿಸಬೇಡ.

ಜಗತ್ತು ಈಶ್ವರ ವಶ ಎಂಬುದನ್ನು ಉಪಪಾದಿಸುವರು

**ಯಥಾ ಗಾವೋ ನಸಿ ಪ್ರೋತಾ ತಂತ್ಯಾಂ ಬದ್ಧಾಃ ಸ್ವದಾಮಭಿಃ ।**
**ವಾಕ್ತಂತ್ಯಾಂ ನಾಮಭಿರ್ಬದ್ಧಾ ವಹಂತಿ ಬಲಿಮೀಶಿತುಃ ॥೪೨॥**

**ಯಥಾ** ಹೇಗೆ **ಗಾವಃ** ಎತ್ತುಗಳು **ನಸಿ ಪ್ರೋತಾಃ** ಮೂಗುದಾರ ಹಾಕಲ್ಪಟ್ಟು **ಸ್ವದಾಮಭಿಃ** ಆ ಮೂಗುದಾರಕ್ಕೆ ಸೇರಿಸಿ ಕಟ್ಟಿದ ತನ್ನ ಹಗ್ಗದಿಂದ **ತಂತ್ಯಾಂ** ದೀರ್ಘವಾದ ಹಗ್ಗದಲ್ಲಿ **ಬದ್ಧಾಃ** ಕಟ್ಟಲ್ಪಟ್ಟು **ಈಶಿತುಃ** ಯಜಮಾನನ **ಬಲಿಂ** ಧಾನ್ಯದ ಚೀಲಗಳನ್ನು **ವಹಂತಿ** ಹೊರುವವೋ **ತಥಾ** ಹಾಗೆಯೇ **ವಾಕ್ತಂತ್ಯಾಂ** ವಿಧಿನಿಷೇಧಾತ್ಮಕ ವೇದ ರೂಪವಾದ ತಂತಿಯಲ್ಲಿ **ನಾಮಭಿಃ** ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ, ಎಂಬ ನಾಮಗಳೆಂಬ **ಬಲಿಂ ವಹಂತಿ** ಯಜ್ಞಾದಿರೂಪ ಪೂಜೆಯನ್ನು ಮಾಡುವರು. ಆದ್ದರಿಂದ ಬ್ರಾಹ್ಮಣ ಮೊದಲಾದ ಪ್ರಪಂಚ ಈಶ್ವರಾಧೀನವು.

ಕೂಡಿಸುವದನ್ನು ಹಾಗು ಕೆಡಿಸುವದನ್ನು ದೃಷ್ಟಾಂತದಿಂದ ಉಪಪಾದಿಸುವವರು.

**ಯಥಾ ಕ್ರೀಡೋಪಸ್ಕರಾಣಾಂ ಸಂಯೋಗವಿಗಮಾವಿಹ ।**
**ಇಚ್ಛಯಾ ಕ್ರೀಡಿತುಃ ಸ್ಯಾತಾಂ ತಥೈವೇಶೇಚ್ಛಯಾ ನೃಣಾಮ್ ॥೪೩॥**

**ಯಥಾ** ಹೇಗೆ **ಕ್ರೀಡೋಪಸ್ಕಾರಾಣಾಂ** ಆಟದ ಸಾಧನಗಳ **ಸಂಯೋಗವಿಗಮೌ** ಸಂಯೋಜನ ವಿಭಜನಗಳು **ಕ್ರೀಡಿತುಃ** ಆಟವಾಡುವ ಪುರುಷನ ಇಚ್ಛೆಯಿಂದ ಆಗುತ್ತವೆಯೋ **ತಥೈವ** ಹಾಗೆಯೇ **ಈಶೇಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ನೃಣಾಂ** ತಂದೆ-ಮಕ್ಕಳು, ಗಂಡ-ಹೆಂಡತಿಯರು ಮುಂತಾದವರ **ಸಂಯೋಗವಿಗಮೌ ಸ್ಯಾತಾಂ** ಸಂಯೋಗವಿಯೋಗಗಳು ಆಗುವವು.

ಈವರೆಗೆ ನೀನು ಅಸ್ವತಂತ್ರನಾದುದರಿಂದ ಶೋಕ ಕರ್ತೃತ್ವವಿಲ್ಲವೆಂದು ಉಪಪಾದಿಸಿ ಅವರಿಗೆ ಶೋಕಕರ್ಮತೆಯೂಯುಕ್ತಿಬಾಧಿತವೆಂದು ಹೇಳುವರು. ''ಯಸ್ತರ್ಕೇಣಾನುಸಂಧಸ್ತೇ ಸಧರ್ಮಂ ವೇದನೇತರಃ'' ಎಂದು ಸ್ಮೃತಿ ಇರುವದರಿಂದ ಉಕ್ತಾರ್ಥದಲ್ಲಿ ಯುಕ್ತಿ ಹೇಳುವರು.

**ಯನ್ಮನ್ಯಸೇ ಧ್ರುವಂ ಲೋಕಮಧ್ರುವಂ ಚಾಥ ವೋ ಭಯಮ್ ।**
**ಸರ್ವಥಾ ಹಿ ನ ಶೋಚ್ಯಾಸ್ತೇ ಸ್ನೇಹಾದನ್ಯತ್ರ ಮೋಹಜಾತ್ ॥೪೪॥**

**ಧ್ರುವಂ** ನಿತ್ಯನಾದ **ಲೋಕಂ** ಪ್ರಕಾಶರೂಪನಾದ ಜೀವನಿಗಾಗಿ **ಶೋಕಃ** ದುಃಖವೆಂದು **ಯನ್ಮನ್ಯಸೇ** ತಿಳಿಯುವಿಯಾದರೆ ಅಥವಾ **ಅಧ್ರುವಂ** ಅನಿತ್ಯವಾದ **ಲೋಕಂ** ದೇಹವನ್ನುದ್ದೇಶಿಸಿ ಶೋಕ ಎಂದಾಗಲೀ ಅಥವಾ **ಉಭಯಂ** ದೇಹವಿಶಿಷ್ಟ ಜೀವನನ್ನುದ್ದೇಶಿಸಿ ಶೋಕವೆಂದಾಗಲಿ ತಿಳಿಯುವದು ಸರಿಯಲ್ಲ **ತೇ** ತಂದೆ ಮೊದಲಾದವರು **ಶೋಚ್ಯಾ ನ** ಶೋಕಾರ್ಹರಲ್ಲ ಏಕೆಂದರೆ ಅಧ್ರುವ ಪದಗಳಿಂದ ಹೇತು ಸೂಚಿಸಿರುವರು ಅಂದರೆ ಜೀವನು ನಿತ್ಯನಾದುದರಿಂದ ಅವನಿಗೆ ನಾಶವಿಲ್ಲ ಕಾರಣ ದುಃಖಿಸಬೇಕಿಲ್ಲ. ದೇಹವನ್ನಾಗಲೀ ದೇಹವಿಶಿಷ್ಟನಾದ ಜೀವನನ್ನಾಗಲಿ ಕುರಿತು ದುಃಖಪಡಬೇಕಿಲ್ಲ. ಅವೆರಡೂ ಅನಿತ್ಯವಾಗಿವೆ ಕಾರಣ ನಾಶ ಅಪರಿಹಾರ್ಯವೆಂದು ಭಾವ. ಹಾಗಾದರೆ ಮೃತರನ್ನು ಉದ್ದೇಶಿಸಿ ಜನರು ಶೋಕಪಡಲು ಕಾರಣವೇನು ಎಂದರೆ **ಮೋಹಜಾತ್ ಸ್ನೇಹಾತ್ ಅನ್ಯತ್ರ** ಇವರು ನನ್ನವರು ನಾನು ಇವರ ಪೋಷಕನು ನಾನಿಲ್ಲದೇ ಇವರು ಹೇಗೆ ಬದುಕುವರು

ಮುಂತಾದ ಭ್ರಮದಿಂದುಂಟಾದ ಸ್ನೇಹ. ಇದು ಬಿಟ್ಟರೆ ಶೋಕಕ್ಕೆ ಬೇರೆ ಕಾರಣವಿಲ್ಲ. ಸ್ನೇಹದ್ವಾರಾ ಮೋಹವೇ ಶೋಕಕಾರಣವೆಂದು ಭಾವ.

*ಭಾಗವತತಾತ್ಪರ್ಯ-*

ಇಲ್ಲಿ ಅನಿತ್ಯತ್ವಹೇತುವು ಅಶೋಚ್ಯತ್ವಸಾಧಕವಲ್ಲ ವಿರುದ್ಧವಾಗಿದೆ ಕಾರಣ ತಾತ್ಪರ್ಯ ಹೇಳುವರು.

**ಅಪರಿಹಾರ್ಯತ್ವಾದಶೋಚ್ಯಾಃ ।**

ದೇಹಾದಿಗಳ ನಾಶ ಅಪರಿಹಾರ್ಯವಾದುದರಿಂದ ಧೃತರಾಷ್ಟ್ರಾದಿಗಳು ಶೋಕಾರ್ಹರಲ್ಲವೆಂದು ಭಾವ.

ಮೋಹಕ್ಕೆ ಕಾರಣ ಹೇಳುತ್ತಾ ನೀನು ಮೋಹಸ್ನೇಹಗಳನ್ನು ಬಿಡು ಎಂದು ಹೇಳುವರು.

**ತಸ್ಮಾಜ್ಜಹ್ಯಂಗ ವೈಕ್ಲವ್ಯಮಜ್ಞಾನಕೃತಮಾತ್ಮನಃ ।**
**ಕಥಂ ತ್ವನಾಥಾಃ ಕೃಪಣಾ ವರ್ತೇರ್ರನ್ ಬತ ಮಾಮೃತೇ ॥೪೫॥**

**ತಸ್ಮಾತ್** ಶ್ರೀಹರಿಯು ಸ್ವತಂತ್ರನು ಜೀವರು ಅಸ್ವತಂತ್ರರು ಎಂಬ ನಿಶ್ಚಯವಿರುವದರಿಂದ **ಆತ್ಮನಃ** ಪರಮಾತ್ಮನ ಹಾಗು ಜೀವರ **ಅಜ್ಞಾನಕೃತಂ** ಸ್ವಾತಂತ್ರ್ಯಪಾರತಂತ್ರ್ಯಗಳ ತಿಳುವಳಿಕೆ ಇಲ್ಲದ್ದರಿಂದ ಉಂಟಾದ **ವೈಕ್ಲವ್ಯಂ** ಮೋಹವನ್ನು **ಅನಾಥಾಃ** ನನ್ನ ಹೊರತು ರಕ್ಷಕರಿಲ್ಲದ **ಕೃಪಣಾಃ** ಜೀವನೋಪಾಯ ಪಡೆಯದ ನನ್ನವರು **ಮಾಂ ಋತೇ** ನಾನಿಲ್ಲದೇ **ಕಥಂ ವರ್ತೇರನ್** ಹೇಗೆ ವರ್ತಿಸುವರು ಎಂಬ ಮೋಹವನ್ನು **ತ್ಯಜ** ಬಿಡು.

ನಾನು ಅವರಿಗೆ ಪಾಲಕ ಎಂಬುದಕ್ಕೆ ಬಾಧವಿಲ್ಲದಿರುವದರಿಂದ ಭ್ರಮ ಏಕೆ? ಅದು ಎಂದರೆ ಯುಕ್ತಿಬಾಧವನ್ನು ತೋರಿಸುವರು.

**ಕಾಲಕರ್ಮಗುಣಾಧೀನೋ ದೇಹೋಽಯಂ ಪಾಂಚಭೌತಿಕಃ ।**
**ಕಥಮನ್ಯಾಂಸ್ತು ಗೋಪಾಯೇತ್ ಸರ್ಪಗ್ರಸ್ತೋ ಯಥಾ ಪರಮ್॥೪೬॥**

**ಕಾಲಕರ್ಮಗುಣಾಧೀನಃ ಕಾಲಃ** ನೂರುವರ್ಷಆಯುಷ್ಯ ಎಂಬ ಕಾಲವು (ಪಕ್ಷಮಾಸಾದಿಗಳು) **ಕರ್ಮ** ಎಲ್ಲಿಯವರೆಗೆ ಬದುಕನ್ನು ನೀಡುವ ಅದೃಷ್ಟವು **ಗುಣ**

ಈಶ್ವರೇಚ್ಛೆಯು(ಫಲಪ್ರಾಪಕ ಪುಣ್ಯಪಾಪರೂಪ ಅದೃಷ್ಟ, ಸತ್ವಾದಿಗುಣಗಳು ಇವುಗಳೇ ನಿಮಿತ್ತ, ಉಪಾದಾನವಾಗಿವುಳ್ಳ) ಇವುಗಳ **ಅಧೀನಃ** ಅಧೀನವಾದ **ಪಾಂಚಭೌತಿಕಃ** ಪಂಚಮಹಾಭೂತನಿರ್ಮಿತವಾದ **ಅಯಂ ದೇಹಃ** ಈ ನಿನ್ನ ದೇಹವು **ಸರ್ಪಗ್ರಸ್ತಃ** ಹಾವಿನಿಂದ ಕಚ್ಚಲ್ಪಟ್ಟ ಕಪ್ಪೆಯು **ಪರಂ** ಸರ್ಪಗ್ರಸ್ತ ಮತ್ತೊಂದು ಕಪ್ಪೆಯನ್ನು **ಯಥಾ** ಹೇಗೆ **ನ ಗೋಪಾಯೇತ್** ಹೇಗೆ ರಕ್ಷಿಸಲು ಸಮರ್ಥವಲ್ಲವೋ ಹಾಗೆ **ಅನ್ಯಾನ್** ತಂದೆತಾಯಿಗಳನ್ನು **ಕಥಂ ಗೋಪಾಯೇತ್** ಹೇಗೆ ರಕ್ಷಿಸೀತು? ಸಾಧ್ಯವಿಲ್ಲ.

**ವಿಶೇಷ-** ದೇಹವಿಲ್ಲದೇ ಕೇವಲ ಚೇತನ ಇವನು ರಕ್ಷಕನಾಗಲಾರ. ಸಾಮರ್ಥ್ಯವಿಲ್ಲದ ಕಾರಣ. ಆದ್ದರಿಂದ ದೇಹ ಬೇಕು. ದೇಹವಿಶಿಷ್ಟನಾದವನು ಕಾಲಕರ್ಮಾದಿ ಪ್ರೇರಕಮೃತ್ಯುಗ್ರಸ್ತನಾಗಿರುತ್ತಾನೆ ಆದ್ದರಿಂದ ರಕ್ಷಕನಾಗಲಾರ. ಎಂದು ಹೇಳಿದರೆ ವಿಮತಃ ಅಯಂ ದೇಹವಿಶಿಷ್ಟಃ (ಪಕ್ಷ) ನ ಪರರಕ್ಷಕಃ (ಸಾಧ್ಯ) ಸ್ವಾಪೇಕ್ಷಯಾ ಪ್ರಬಲೇನ ಗ್ರಸ್ತತ್ವಾತ್(ಹೇತು) ಅಜಗರಗಲಿತಪುರುಷವತ್ (ದೃಷ್ಟಾಂತ) ಎಂಬ ಅನುಮಾನದಿಂದ ಬಾಧ. ಇಲ್ಲಿ ದೇಹವಿಶಿಷ್ಟನನ್ನು ಸ್ವೀಕಾರ ಮಾಡುವಲ್ಲಿ ದೇಹವನ್ನು ಸ್ವೀಕರಿಸಿದ್ದು. ವಿಶೇಷಣವಾದ ದೇಹನಾಶದಿಂದಲೇ ವಿಶಿಷ್ಟನಾಶವು. ಹೊರತು ವಿಶೇಷ್ಯನಾಶದಿಂದಲ್ಲ ಎಂದು ಸೂಚಿಸಲು ಎಂದು ತಿಳಿಯಬೇಕು.

ಮೊದಲನೆಯದಕ್ಕೆ ಉತ್ತರ(ಕಾಲ)ಮುಪಾದದುಃ. ಎರಡನೆಯದಕ್ಕೆ ಉತ್ತರ ಅಹಸ್ತಾನಿ ಎಂಬುದು ೪೭ನೇ ಶ್ಲೋಕದಲ್ಲಿ ಕೃಪಣಾಃ ಎಂದು ಜೀವನೋಪಾಯ ದೊರೆಯದವರೆಂದು ಏನು ಹೇಳಿದ್ದಿ ಆ ನಿಶ್ಚಯ ನಿನ್ನ ಭ್ರಮ ಎಂದು ಹೇಳುವರು.

ಅಥವಾ ನಿನಗಿರುವ ರಕ್ಷಕತ್ವ ಮುಕ್ತಿಕೊಡುವದರಿಂದಲೋ ಅಥವಾ ಅನ್ನಾದಿಗಳನ್ನು ಕೊಡುವುದರಿಂದಲೋ.

**ಅಹಸ್ತಾನಿ ಸಹಸ್ತಾನಾಮಪದೋ ದ್ವಿಚತುಷ್ಪದಾಮ್ ।।**
**ಅಣೂನಿ ತಾತ ಮಹತಾಂ ಜೀವೋ ಜೀವಸ್ಯ ಜೀವನಮ್ ।।೪೭।।**

**ಹೇ ತಾತ** ಮಗುವೇ **ಅಹಸ್ತಾನಿ** ಕೈಗಳಿಲ್ಲದ ಪಶು ಮುಂತಾದವು **ಸಹಸ್ತಾನಾಂ** ಮನುಷ್ಯರಿಗೆ **ಅಪದಃ** ಕಾಲಿಲ್ಲದ ಹುಲ್ಲು ಅನ್ನ ಮುಂತಾದವು **ದ್ವಿಚತುಷ್ಪದಾಂ** ಎರಡು ಕಾಲಿನವರಿಗೆ ನಾಲ್ಕು ಕಾಲಿನವರಿಗೂ ಅದರಲ್ಲಿಯೂ **ಅಣೂನಿ** ಚಿಕ್ಕವರಾದ ಮನುಷ್ಯರು **ಮಹತಾಂ** ದೊಡ್ಡವರಾದ ರಾಕ್ಷಸರಿಗೆ ಹೀಗೆ **ಜೀವಃ** ಜೀವನ ದೇಹವು

**ಜೀವಸ್ಯ** ಚೇತನ ಸಮೂಹಕ್ಕೆ **ಜೀವನಂ** ದೇಹಧಾರಣ ಉಪಾಯವೆಂದು ಶ್ರೀಹರಿಯೇ ಕಲ್ಪಿಸಿರುವನು ಕಾರಣ ನಾನೇ ರಕ್ಷಕನೆಂಬುದು ಭ್ರಮವೇ ಸರಿ.

ಜೀವರೇ ಪರಸ್ಪರ ರಕ್ಷಕರೆಂಬುದು ಅನುಭವಸಿದ್ಧವಾದುದು. ಅದನ್ನು ಹೇಗೆ ಅಪಲಾಪ ಮಾಡುವದು ಎಂದರೆ ಅವರವರಲ್ಲಿ ಇರುವ ಭಗವಂತನೇ ರಕ್ಷಕ ಎಂಬುದಾಗಿ ಜ್ಞಾನಿಗಳು ಪ್ರತ್ಯಕ್ಷಸಿದ್ಧವೆಂದು ಹೇಳುವರು.

**ತದಿದಂ ಭಗವಾನ್ರಾಜನ್ನೇಕ ಆತ್ಮಾಽತ್ಮನಾಂ ಸ್ವದೃಕ್ ।**
**ಅಂತರೋಽನಂತರೋ ಭಾತಿ ಪಶ್ಯ ತ್ವಂ ಮಾಯಯೋರುತಾಮ್ ॥೪೮॥**

'ಸಪ್ತಸು ಪ್ರಥಮಾ' ಎಂದಿರುವದರಿಂದ ತತ್ ಇದಂ ಎಂಬಲ್ಲಿ **ತಸ್ಮಿನ್** ಕೈಯಿಲ್ಲದವುಗಳಲ್ಲಿ **ಅಸ್ಮಿನ್** ಕೈ ಇದ್ದವುಗಳಲ್ಲಿ **ಅಂತರಃ** ಒಳಗಿದ್ದು ರಕ್ಷಿಸುವವನು **ಆತ್ಮನಾಂ** ಜೀವರಿಗೆ **ಏಕಃ** ಮುಖ್ಯವಾಗಿ **ಆತ್ಮಾ** ಆದಾನಾದಿಕರ್ತೃವು **ಸ್ವದೃಕ್** ತನ್ನ ಸಾಕ್ಷಾತ್ಕಾರ ಉಳ್ಳವನು (ಇದರಿಂದ ಈಶ್ವರಪ್ರತ್ಯಕ್ಷವೂ ಪ್ರಮಾಣವೆಂದಂತಾಯಿತು). ಜ್ಞಾನಿಗೂ ತನ್ನ ಜ್ಞಾನವನ್ನಿತ್ತವನು. **ಅನಂತರಃ** ಸ್ವಯಂ ಭೇದರಹಿತನು **ತಂ** ಆ ಭಗವಂತನನ್ನು **ಮಾಯಯಾ** ಇಚ್ಛೆಯಿಂದ **ಉರುತಾಂ** ಭೇದವಿಲ್ಲದಿದ್ದರೂ ಅನೇಕತ್ವವನ್ನು **ತ್ವಂ ಪಶ್ಯ** ನೀನು ನೋಡು. ಜ್ಞಾನಿಯಾದುದರಿಂದ ವಿಚಾರ ಮಾಡಿದರೆ ಈ ವಿಷಯ ನಿನಗೂ **ಭಾತಿ** ತಿಳಿಯುವದು.

ಕೇವಲ ಒಳಗಿದ್ದೇ ರಕ್ಷಿಸುವದಿಲ್ಲ ಹೊರಗಿನ ರೂಪದಿಂದಲೂ ರಕ್ಷಿಸುವವನು ಎಂದು ಹೇಳುವರು.

**ಸೋಽಯಮದ್ಯ ಮಹಾರಾಜ ಭಗವಾನ್ ಭೂತಭಾವನಃ ।**
**ಕಾಲರೂಪೋಽವತೀರ್ಣೋಽಸ್ಯಾಮಭವಾಯ ಸುರದ್ವಿಷಾಮ್ ॥೪೯॥**

**ಹೇ ಮಹಾರಾಜ** ಧರ್ಮರಾಜನೇ **ಸಃ** ಯಾವನು ಎಲ್ಲ ಚೇತನರನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವನೋ ಮತ್ತು ಯಾವನು ಕಾಲಾಂತರ್ಗತನಾಗಿ ರಕ್ಷಿಸುವನೆಂದು ಹೇಳಲ್ಪಟ್ಟನೋ ಅವನೇ **ಅಯಂ** ಈ **ಭೂತಭಾವನಃ** ಪ್ರಾಣಿಗಳ ವರ್ಧಕನು ಆದ **ಭಗವಾನ್** ಶ್ರೀಹರಿಯು **ಅದ್ಯ** ಈಗ **ಕಾಲರೂಪಃಸನ್** ಎಲ್ಲ ದುಷ್ಟ ಸಂಹಾರಕ ರೂಪನಾಗಿ **ಅಸ್ಯಾಂ** ಈ ಭೂಮಿಯಲ್ಲಿ **ಸುರದ್ವಿಷಾಂ** ದೈತ್ಯರ **ಅಭವಾಯ** ನಾಶಮಾಡಲು **ಅವತೀರ್ಣಃ** ಅವತಾರ ಮಾಡಿರುವನು.

ನಿಮಗೂ ನಾಶ ಸಮೀಪಿಸಿದೆ. ಆದ್ದರಿಂದಲೂ ಶೋಕ ಮಾಡಬೇಕಿಲ್ಲ ಎಂದು ಹೇಳುವರು.

**ನಿಷ್ಪಾದಿತಂ ದೇವಕೃತ್ಯಮವಶೇಷಂ ಪ್ರತೀಕ್ಷತೇ ।**
**ತಾವದ್ಯೂಯಮವೇಕ್ಷಧ್ವಂ ಭವೇದ್ಯಾವದಿಹೇಶ್ವರಃ ॥೫೦॥**

**ದೇವಕೃತ್ಯಂ ನಿಷ್ಪಾದಿತಂ** ಭೂಭಾರ ಹರಣವೆಂಬ ದೇವತೆಗಳ ಕಾರ್ಯ ಮಾಡಿ ಆಯಿತು **ಅವಶೇಷಂ** ಉಳಿದ ಯದುಕುಲನಾಶವನ್ನು **ಪ್ರತಿಕ್ಷತೇ** ಕಾಯುತ್ತಿರುವನು ನಂತರ ತನ್ನ ಲೋಕಕ್ಕೆ ತೆರಳುವನು. **ಇಹ** ಈ ಭೂಮಿಯಲ್ಲಿ **ಯಾವತ್** ಎಲ್ಲಿಯವರೆಗೆ **ಈಶ್ವರಂ** ಕೃಷ್ಣನಿರುವನೋ **ತಾವತ್** ಅಲ್ಲಿಯವರೆಗೆ **ಯೂಯಂ** ನೀವು **ಅವೇಕ್ಷಧ್ವಂ** ಇರಲು ನೋಡಿರಿ ನಂತರ ನೀವೂ ಹೊರ ನಡೆಯಬೇಕಾದವರೆ ಕಾರಣ ದುಃಖಪಡುವುದರಲ್ಲಿ ಅರ್ಥವಿಲ್ಲವೆಂದು ಭಾವ.

ಧೃತರಾಷ್ಟ್ರಾದಿಗಳ ಮರಣ ಹೇಗಾಯಿತು ಎಂಬುದನ್ನು ಹೇಳಲು ಮನೆಯಿಂದ ಹೊರಹೊರಟಾಗಿನಿಂದ ಅವರ ಸ್ಥಿತಿಯನ್ನು ಹೇಳುವರು.

**ಧೃತಾರಾಷ್ಟ್ರಃ ಸಹ ಭ್ರಾತ್ರಾ ಗಾಂಧಾರ್ಯಾ ಚ ಸ್ವಭಾರ್ಯಯಾ ।**
**ದಕ್ಷಿಣೇನ ಹಿಮವತ ಋಷಿಣಾಮಾಶ್ರಮಂ ಗತಃ ॥೫೧॥**

**ಧೃತರಾಷ್ಟ್ರಃ** ಧೃತರಾಷ್ಟ್ರನು **ಭ್ರಾತ್ರಾ** ತಮ್ಮನಾದ ವಿದುರನಿಂದ **ಸ್ವಭಾರ್ಯಯಾ ಗಾಂಧಾರ್ಯಾ** ತನ್ನ ಹೆಂಡತಿ ಗಾಂಧಾರಿಯಿಂದ **ಚ** ಮತ್ತು ಕುಂತಿಯಿಂದ **ಸಹ** ಕೂಡಿಕೊಂಡು **ಹಿಮವತಃ ದಕ್ಷಿಣೇನ** ಹಿಮಾಲಯ ಪರ್ವತದ ದಕ್ಷಿಣಭಾಗದಲ್ಲಿರುವ **ಋಷೀಣಾಂ** ಋಷಿಗಳ **ಆಶ್ರಮಂ ಗತಃ** ಆಶ್ರಮಕ್ಕೆ ಹೋದನು.

*ಭಾಗವತತಾತ್ಪರ್ಯ-*

ನಾರದರು ಬಂದರೂ ವಿದುರನಿರಲಿಲ್ಲ ಸಹ ಭ್ರಾತ್ರಾ ಎಂದು ಹೇಳಿದುದು ಹೇಗೆ ಎಂದರೆ ಹೇಳುವರು.

'ಗಮನಕಾಲೇ ಸಹ ಭ್ರಾತ್ರಾ'

ಹೊರಡುವಾಗ ತಮ್ಮನ ಜೊತೆಗೆ ಎಂದು ಅರ್ಥ. ಆದರೆ ಪೂರ್ವವೃತ್ತಾಂತ ಹೇಳಿದರೆ ಹೊರತು ಅವರು ಬಂದಾಗಿನ ಸ್ಥಿತಿಯಲ್ಲವೆಂದು ಭಾವ.

ನಿರುಕ್ತಿಯನ್ನು ತೋರಿಸುತ್ತ ಆಶ್ರಮದ ಹೆಸರು ಹೇಳುವರು.

**ಸ್ರೋತೋಭಿಃ ಸಪ್ತಭಿರ್ಯತ್ರ ಸ್ವರ್ಧುನೀ ಸಪ್ತಧಾಽಭ್ಯಗಾತ್ ।**
**ಸಪ್ತಾನಾಂ ಪ್ರೀತಯೇ ತೇನ ಸಪ್ತಸ್ರೋತಃ ಪ್ರಚಕ್ಷತೇ ॥೫೨॥**

**ಯತ್ರ** ಯಾವ ಆಶ್ರಮದಲ್ಲಿ **ಸ್ವರ್ಧುನಿ** ಸ್ವರ್ಗದ ನದಿಯಾದ ಮಂದಾಕಿನಿಯು **ಸಪ್ತಾನಾಂ ಪ್ರೀತಯೇ** ಸಪ್ತ ಋಷಿಗಳ ಪ್ರೀತಿಗಾಗಿ **ಸಪ್ತಭಿಃ ಸ್ರೋತೋಭಿಃ** ಏಳು ಸರಳುಗಳಿಂದ **ಸಪ್ತಧಾ** ಏಳು ಮಾರ್ಗಗಳಿಂದ **ಅಭ್ಯಗಾತ್** ಸಮುದ್ರವನ್ನು ಸೇರಿದಳೋ **ತೇನ** ಆ ಕಾರಣದಿಂದ **ತಂ** ಆ ಆಶ್ರಮವನ್ನು **ಸಪ್ತಸ್ರೋತಃ ಪ್ರಚಕ್ಷತೇ** ಸಪ್ತಸ್ರೋತವೆಂದು ಕರೆಯುವರು.

### ಧೃತರಾಷ್ಟ್ರ ಕೈಗೊಂಡ ಯೋಗ

ಧೃತರಾಷ್ಟ್ರನ ಯೋಗದ ರೀತಿಯನ್ನು ಹೇಳುವರು.

**ಸ್ನಾತ್ವಾ ತ್ರಿಷವಣಂ ತಸ್ಮಿನ್ ಹುತ್ವಾ ಚಾಗ್ನೀನ್ಯಥಾವಿಧಿ ।**
**ಅಬ್ಭಕ್ಷ ಉಪಶಾಂತಾತ್ಮಾ ಸ ಆಸ್ತೇ ವಿಗತೇಕ್ಷಣಃ ॥೫೩॥**

**ತಸ್ಮಿನ್** ಆ ಆಶ್ರಮದಲ್ಲಿ **ಸಃ** ಧೃತರಾಷ್ಟ್ರನು **ತ್ರಿಕ್ಷವಣಂ** ಮೂರು ಕಾಲದಲ್ಲಿ **ಸ್ನಾತ್ವಾ** ಸ್ನಾನಮಾಡಿ **ಯಥಾವಿಧಿ** ವಿಧಿಗನುಗುಣವಾಗಿ **ಅಗ್ನೀನ್ ಹುತ್ವಾ** ಅಗ್ನಿಯಲ್ಲಿ ಹೋಮಮಾಡಿ **ಅಬ್ಭಕ್ಷಃ** ಕೇವಲ ನೀರು ಕುಡಿದು **ಉಪಶಾಂತಾತ್ಮಾ** ವಿಷಯ ವಿರಕ್ತವಾದ ಮನಸುಳ್ಳವನಾಗಿ **ವಿಗತೇಕ್ಷಣಃ** ವ್ಯಾಸಾದಿಗಳಿಂದ ಉಪದಿಷ್ಟವಾದ ಜ್ಞಾನವನ್ನು ಕಳೆದು ಕೊಳ್ಳದೇ ವಿಗತೈಕ್ಷಣ ಎಂಬ ಪಾಠ ವಿದ್ದಾಗ ವಿತ್ತೈಕ್ಷಣಾದಿಗಳನ್ನು ತೊರೆದ ಎಂದರ್ಥ. (ವಿತ್ತಪುತ್ರಾದಿಗಳನ್ನಿಚ್ಛಿಸದೆ ಎಂದರ್ಥ) **ಆಸ್ತೇ** ಇದ್ದನು.

ನಾರದರು ಬಂದಾಗ ಧೃತರಾಷ್ಟ್ರ ಮೃತನಾಗಿದ್ದ ಕಾರಣ ಇಲ್ಲಿಯಾಗಲಿ ಮುಂದೆ ಆಗಲಿ ಆಸ್ತೇ ಎಂದು ವರ್ತಮಾನಾರ್ಥಕ ಲಟ್ ಪ್ರಯೋಗ ಮಾಡುವರು ಎಂದರೆ ಹೇಳುವರು.

*ಭಾಗವತತಾತ್ಪರ್ಯ* -

**ಆಸ್ತೇ ಇತ್ಯಾದ್ಯತೀತಾರ್ಥೇ । ಸ ಏಷ ತರ್ಹ್ಯಧ್ಯಾಸ್ತ ಆಸನಂ ಪಾರ್ಥಿವೋ ಚಿತಮಿತಾದಿವತ್ ॥ ಸುಪ್ತಿಙುಪಗ್ರಹಲಿಂಗನರಾಣಾಂ ಕಾಲಹಲಚ್ ಸ್ವರಕರ್ತೃಯಙಾಂ ಚ । ವತ್ಯ ಮಿಚ್ಛತಿ ಶಾಸ್ತ್ರಕೃದೇಷಾಂ ಸೋಪಿ ಚ ಸಿಧ್ಯತಿ ಬಾಹುಲಕೇನ ॥ ಇತಿ ಮಹಾವ್ಯಾಕರಣೇ**

ವ್ಯಾಸಾದಯೋ ವರ್ತಮಾನಮತೀತಾನಾಗತೇ ತಥಾ ।
ವ್ಯತ್ಯಸ್ಯಾಪಿ ವದಂತ್ಯದ್ಧಾ ಮೋಹನಾರ್ಥಂ ದುರಾತ್ಮನಾಂ ॥

ಪೌರ್ವಾಪರ್ಯಂ ಯತೋ ನೈವ ಸದೈವ ಪರಿವರ್ತನಾತ್ ।
ಅಪಶ್ಚ ವ್ಯತ್ಯಯಾದೇತದ್ವದಂತಿ ಜ್ಞಾನಚಕ್ಷುಷೇ ॥ -ಇತಿ ಬ್ರಾಹ್ಮೇ

'ಸ ಆಸ್ತೇ' 'ತಚ್ಚ ಭಸ್ಮೀ ಭವಿಷ್ಯತಿ' 'ತಮಗ್ನಿಮನುವೇಕ್ಷತಿ' ಮುಂತಾದ ಶಬ್ದಗಳು ಅತೀತಾರ್ಥ ವಿಷಯದಲ್ಲಿ ಮುಖ್ಯವೃತ್ತಿಯಿಂದಲೇ ಇರುತ್ತವೆ. ಅಂದ ಮೇಲೆ ಆಸ್ತೇ ಎಂದರೆ ಇರುತ್ತಿದ್ದನು ಎಂದರ್ಥ. ಅತೀತಾರ್ಥದಲ್ಲಿ ವರ್ತಮಾನಾರ್ಥಕ ಪ್ರಯೋಗ ತೋರಿಸುವರು. ಈ ಪರೀಕ್ಷಿದ್ರಾಜನು ರಾಜರಿಗೆ ಉಚಿತವಾದ ಆಸನದಲ್ಲಿ ಕುಳಿತು ಕೊಂಡಿದ್ದನು. ಪರೀಕ್ಷಿದ್ರಾಜನು ಮರಣ ಹೊಂದಿದ ಮೇಲೆ ಶೌನಕಾದಿಗಳನ್ನು ಕುರಿತು ಸೂತ ಪುರಾಣಿಕರು ಹೇಳಿದ ಮಾತಿದು. ಆದಕಾರಣ ಅಧ್ಯಾಸ್ತೇ = ಕುಳಿತುಕೊಂಡಿದ್ದನು ಎಂದರ್ಥ ಇತ್ಯಾದಿಗಳಂತೇ ಹೀಗೆ ಅರ್ಥ ಮಾಡಬೇಕೆಂಬ ವಿಷಯದಲ್ಲಿ ನಿಯಾಮಕ ಮಹಾವ್ಯಾಕರಣ ಸೂತ್ರವನ್ನು ಹೇಳುತ್ತಾರೆ. ಸುಪ್ ವಿಭಕ್ತಿ, ತಿಜ್ ವಿಭಕ್ತಿ, ವಿಕರಣ ಶಬ್ದಾದಿ ಪರಸ್ಮೈಪದ, ಆತ್ಮನೇಪದ, ಸ್ತ್ರೀಲಿಂಗ ಪುಲ್ಲಿಂಗಾದಿಗಳು, ಪ್ರಥಮ ಪುರಾಷಾದಿಗಳು ವರ್ತಮಾನಾದಿ ಕಾಲವಾಚಕ ಶಬ್ದಗಳು ಉದಾತ್ತಾದಿಸ್ವರಗಳು ಕರ್ತೃವಾಚಕ ಶಬ್ದಯಜ್ ಪ್ರತ್ಯಯ ಇವುಗಳಿಗೆ ಶಾಸ್ತ್ರಜ್ಞರು ವ್ಯತ್ಯಾಸವನ್ನು ಇಚ್ಛಿಸುತ್ತಾರೆ. ಆ ವ್ಯತ್ಯಾಸವೂ ಕೂಡ ಬಹುಲಶಬ್ದಗಳಿಂದ ಕೂಡಿದ ವಿಧಿಯಿಂದ ಸಿದ್ಧಿಸುತ್ತದೆ. ಎಂದು ಮಹಾವ್ಯಾಕರಣ ಸೂತ್ರದಲ್ಲಿ ಹೇಳಿದೆ. ಮೋಹಕ ವಂಚನೆಯು ಏಕೆಂದರೆ ವ್ಯಾಸಾದಿಗಳು ವರ್ತಮಾನ ಕಾಲವನ್ನು ಭೂತಭವಿಷ್ಯತ್ಕಾಲಗಳನ್ನು ನಿಶ್ಚಯವಾಗಿಯೂ ಭವಿಷ್ಯತಿ ಎಂದರೆ ಮುಂದಿನ ಕಲ್ಪದಲ್ಲಿಯೂ ಹೀಗೆ ಆಗುವದು ಎಂದರ್ಥ. ಅತೀತಕಲ್ಪದಲ್ಲಿ ಆಗಿತ್ತು ಎಂದೂ ವ್ಯಾಖ್ಯಾನ ಮಾಡಬೇಕೆ.

ದುರ್ಜನರನ್ನು ಮೋಹಿಸುವದಕ್ಕಾಗಿ ವ್ಯತ್ಯಾಸ ಮಾಡಿ ಹೇಳುತ್ತಾರೆ. ಪ್ರತಿಕಲ್ಪದಲ್ಲಿಯೂ ಕಥಾ ಪ್ರವಾಹವು ಚಕ್ರದಂತೆ ತಿರುಗುವದರಿಂದ ಅದಕ್ಕೆ ಪೌರ್ವಾಪರ್ಯವು ಸರ್ವಥಾ ಬರುವುದಿಲ್ಲ. ಆದಕಾರಣ ಜ್ಞಾನಿಗಳು ಧೃತರಾಷ್ಟ್ರನ ದೇಹದ ಭಸ್ಮೀಕರಣಾದಿಗಳನ್ನು ಹಿಂದೆ ಆಗಿರುವದನ್ನು ಮುಂದೆ ಆಗುವದು ಎಂದು ವ್ಯತ್ಯಾಸವಾಗಿ ಹೇಳುತ್ತಾರೆ. ಹೀಗೆ ಬ್ರಾಹ್ಮಪುರಾಣದಲ್ಲಿದೆ.

**ಜಿತಾಸನೋ ಜಿತಶ್ವಾಸಃ ಪ್ರತ್ಯಾಹೃತಷಡಿಂದ್ರಿಯಃ ।**
**ಹರಿಭಾವನಯಾ ಧ್ವಸ್ತರಜಃಸತ್ವತಮೋಮಲಃ ॥೫೪॥**

**ಜಿತಾಸನಃ** ಸ್ವಸ್ತಿಕಾದಿ ಆಸನಗಳನ್ನು ಗೆದ್ದ **ಜಿತಶ್ವಾಸಃ** ಪ್ರಾಣಜಯವುಳ್ಳವನಾಗಿ **ಪ್ರತ್ಯಾಹೃತಷಡಿಂದ್ರಿಯಃ** ವಿಷಯಗಳಿಂದ ಆಹೃತವಾದ ಶ್ರೋತ್ರಾದಿ ಇಂದ್ರಿಯಗಳುಳ್ಳವನಾಗಿ **ಹರಿಭಾವನಯಾ** ನಿರಂತರ ಹರಿಧ್ಯಾನದಿಂದ **ಧ್ವಸ್ತರಜಃಸತ್ವತಮೋನಿಮಿತ್ತಂ** ನಾಶಮಾಡಲ್ಪಟ್ಟ ಸತ್ವ-ರಜಸ್ಸು-ತಮಸ್ಸುಗಳೇ ನಿಮಿತ್ತವಾಗಿರುವ ಮನಸ್ಸಿನ ಮಲವುಳ್ಳ

ಈಗ ಕೊನೆಗಾಲದಲ್ಲಿ ಅವಶ್ಯ ಚಿಂತಿಸಬೇಕಾದ ಧೃತರಾಷ್ಟ್ರನಿಂದ ಚಿಂತಿತವಾದ ಲಯಪ್ರಕಾರವನ್ನು ತಿಳಿಸುವರು.

**ವಿಜ್ಞಾನಾತ್ಮನಿ ಸಂಯೋಜ್ಯ ಕ್ಷೇತ್ರಜ್ಞೇ ಪ್ರವಿಲಾಪ್ಯತಮ್ ।**
**ಬ್ರಹ್ಮಣ್ಯಾತ್ಮಾನಮಾಧಾರೇ ಘಟಾಂಬರಮಿವಾಂಬರೇ ॥೫೫॥**

ಸ್ವರೂಪ ಜ್ಞಾನದಿಂದ ತನ್ನ ಸ್ವರೂಪವನ್ನಾರಂಭಮಾಡಿ ಪರಮಾತ್ಮನವರೆಗೆ ಎಲ್ಲ ತತ್ತ್ವಗಳನ್ನು ಅಪರೋಕ್ಷೀಕರಿಸಿಕೊಂಡು **ಜಗತ್** ರುದ್ರಾದಿ ಸಮಸ್ತ ಜಗತ್ತನ್ನು **ವಿಜ್ಞಾನಾತ್ಮನಿ** ಮಹತತ್ತ್ವಾಭಿಮಾನಿಗಳಾದ (ವಿಜ್ಞಾನತತ್ತ್ವಾಭಿಮಾನಿಗಳಾದ) ಬ್ರಹ್ಮದೇವರಲ್ಲಿ **ಸಂಯೋಜ್ಯ** ಪ್ರಳಯಕಾಲದಲ್ಲಿ ಲಯಹೊಂದುವವದೆಂದು ಸ್ಮರಿಸಿ (ಧ್ಯಾನಿಸಿ) **ಕ್ಷೇತ್ರಜ್ಞೇ** ತ್ರಿಗುಣಾತ್ಮಕ ಪ್ರಕೃತಿ ನಿಯಾಮಕನಾದ ತನ್ನ ಹೃದಯದಲ್ಲಿರುವ ಆನಂದಮಯನಲ್ಲಿ **ತಂ** ಆ ವಿರಿಂಚನನ್ನು **ಪ್ರವಿಲಾಪ್ಯ** ಲಯ ಹೊಂದುವವನೆಂದು ಧ್ಯಾನಮಾಡಿ **ಆತ್ಮಾನಂ** ಅವ್ಯಕ್ತಾಂತರ್ಗತ ಕ್ಷೇತ್ರಜ್ಞನನ್ನು **ಆಧಾರೇ** ಸರ್ವ ಜಗದಾಶ್ರಯನಾದ **ಬ್ರಹ್ಮಣಿ** ವ್ಯಾಪ್ತನಾದ ಶ್ರೀಹರಿಯಲ್ಲಿ **ಪ್ರವಿಲಾಪ್ಯ** ಐಕ್ಯಹೊಂದುವನೆಂದು ಚಿಂತಿಸಿ **ತಥಾ** ಆದರಂತೆ ಮರಣಕಾಲದಲ್ಲಿ **ವಾಗಾದಿಕೇ** ವಾಗಾದಿತತ್ತ್ವಗಳನ್ನು (ತತ್ತ್ವಗಳಲ್ಲಿ ಅಭಿಮಾನಿಗಳನ್ನು ಅಭಿಮಾನಿಗಳಲ್ಲಿ) **ವಿಜ್ಞಾನಾತ್ಮನಿ** ದೇಹದಲ್ಲಿರುವ ವಿರಿಂಚನಲ್ಲಿ **ಸಂಯೋಜ್ಯ** ಲಯವಾಗುವದೆಂದು ಚಿಂತಿಸಿ **ತಂ** ವಿರಿಂಚನನ್ನು **ಕ್ಷೇತ್ರಜ್ಞೇ** ಹೃದಯದಲ್ಲಿರುವ ಹರಿಯಲ್ಲಿ **ಪ್ರವಿಲಾಪ್ಯ** ಲಯ ಹೊಂದುವನೆಂದು ಚಿಂತಿಸಿ ಲಯ ಹೊಂದುವದರಿಂದಲೇ ಶ್ರೀಹರಿಯಿಂದ ಭಿನ್ನನೆಂದೂ ಚಿಂತಿಸಿ **ಆತ್ಮಾನಂ** ಹೃದಯದಲ್ಲಿರುವ ಕ್ಷೇತ್ರಜ್ಞನನ್ನು **ಆಧಾರೇ** ಸರ್ವ ಜಗತ್ತಿಗೆ ಆಧಾರನಾದ **ಬ್ರಹ್ಮಣಿ** ಬ್ರಹ್ಮನಲ್ಲಿ **ಪ್ರವಿಲಾಪ್ಯ ಆಸ್ತೆ** ಲಯಹೊಂದಿದೆ ಎಂದು

ಮುಂದೆ ಅನ್ವಯ. ಎರಡಕ್ಕೂ ದೃಷ್ಟಾಂತ **ಘಟಾಂಬರಂ** ಘಟದಲ್ಲಿರುವ ಅವ್ಯಾಕೃತಾಕಾಶದಲ್ಲಿ ಇವ ಹೇಗೆ ಐಕ್ಯಹೊಂದುವದೋ ಹಾಗೆ ಹೃದಿಸ್ಥನಾದ ಪರಮಾತ್ಮನನ್ನು ವ್ಯಾಪ್ತನಾದ ಪರಮಾತ್ಮನಲ್ಲಿ ಐಕ್ಯ ಚಿಂತಿಸಿ. **ಘಟಾಂಬರಂ** ಘಟದಲ್ಲಿರುವ ಭೂತಾಕಾಶವನ್ನು ಘಟದ ಜೊತೆಗೆ ಹುಟ್ಟುವದನ್ನು ಘಟವು ನಾಶವಾದಾಗ **ಅಂಬರೇ** ಮಹಾಕಾಶದಲ್ಲಿ ನಾಶವಾಗುವಂತೆ ವಿರಿಂಚನು ಕ್ಷೇತ್ರಜ್ಞನಲ್ಲಿ ನಾಶ ಹೊಂದುವನೆಂದು ಚಿಂತಿಸಿ ಇರುವನು. ದೇಹಾಲಯವಾಗುವದೆಂದರ್ಥ.

*ಭಾಗವತತಾತ್ಪರ್ಯ-*

೫೫ನೇ ಶ್ಲೋಕವನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು.

ವಿಜ್ಞಾನಾತ್ಮಾ ವಿರಿಂಚೋಽಯಂ ಯಸ್ತಸ್ಮಿಲ್ಲೀಯತೇ ಜಗತ್ ।
ಯಾದಾಂಸಿ ಸಾಗರೆ ಯದ್ವತ್ ಸ ಕ್ಷೇತ್ರಜ್ಞೇ ಜನಾರ್ದನೇ ॥

ಹೃದಿಸ್ಥೇ ಚ ಸ ಚ ವ್ಯಾಪ್ತೇ ಸ್ವಾತ್ಮನ್ಯೇಕೀಭವತ್ಯುತ ।
ಪ್ರಲಯೌ ಭೇದವಂತೌ ತು ಪೂರ್ವೋಕ್ತೌ ಬ್ರಹ್ಮಕೃಷ್ಣಯೋಃ ।
ಅಂತಸ್ಥಸ್ಯ ಬಹಿಷ್ಠೇತ ಸತ್ಯ ತಸ್ಮಿನ್ನಭೇದತಃ ॥ -ಇತಿ ಬ್ರಹ್ಮವೈವರ್ತೇ

ಕಾಲೇ ತಸ್ಯ ತತ್ರ ಲಯೋ ಭವಿಷ್ಯತೀತಿ ಧ್ಯಾನಮಾತ್ರಂ ವಿಲಾಪನಂ ।

ಅವಿದ್ಯಮಾನಮಪಿ ಯೋ ಧ್ಯಾಯೇತ್ತೈವಂ ವಿನಿಶ್ಚಿತಃ ।
ಉಚ್ಯತೇ ತಸ್ಯ ಕರ್ತೇತಿ ತಥೈವ ಮುನಯೋಽಮಲಾಃ ॥

ಜಗದ್ವಿಲಾಪಯಾಮಾಸುರಿತ್ಯುಚ್ಯಂತೇಽಥ ತತ್ಸ್ಮೃತೇಃ ।
ನ ಚ ತತ್ಸ್ಮೃತಿಮಾತ್ರೇಣ ಲಯೋ ಭವತಿ ನಿಶ್ಚಿತಮ್ ॥ಇತಿ ನಾರದೀಯೇ

ಸ್ವರೂಪಂ ಜಾಯಮಾನಂ ಚ ಆಕಾಶಂ ಚ ಘಟೇ ದ್ವಿಧಾ ।
ಸ್ವರೂಪಂ ಜಾಯಮಾನೇ ತು ಘಟೇ ನಿರ್ಭೇದಮೇವ ತು ॥

ಭಿನ್ನವದ್ವ್ಯವಹಾರಸ್ಯ ಸಮರ್ಥಂ ತಲ್ಲಯೇ ಚ ತತ್ ।
ತದ್ವದೇವಾವತಾರೇಷು ದೇಹಸ್ಥಶ್ಚ ಹರಿಃ ಸ್ವಯಮ್ ॥

ಭಿನ್ನವದ್ವ್ಯವಹಾರಾಯ ಶಕ್ತೋ ಲೀನೇ ಜಗತ್ಯಪಿ ॥
ಸ ಏವ ಪೂರ್ವವಜ್ಞೇಯೋ ನಿರ್ವಿಶೇಷೇಣ ಕೇಶವಃ ।
ಜಾಯಮಾನಂ ಘಟೇ ಜಾತೇ ಜಾಯತೇ ತಲ್ಲಯೇ ತು ನ ॥

ತಸ್ಮಾದ್ಭಿನ್ನಂ ಮಹಾಕಾಶಾದೇವಂ ಜೀವೋऽಪಿ ಕೀರ್ತಿತಃ ।
ಉಪಾಧೇಶ್ಚೈವ ನಿತ್ಯತ್ವಾತ್ ನೈವ ಜೀವೋ ವಿನಶ್ಯತಿ ॥

ಸ್ವರೂಪತ್ವಾತ್ ಉಪಾಧೇಶ್ಚ ನ ಭಿನ್ನೋಪಾಧಿಕಲ್ಪನಮ್ ।
ನ ಚಾಭಿನತ್ವಮೀಶೇನ ಚಿನ್ಮಾತ್ರತ್ವಂ ಚ ಯುಜ್ಯತೇ ॥ಇತಿ ಬ್ರಹ್ಮತರ್ಕೇ

ಮಹತತ್ತ್ವಾಭಿಮಾನಿಯಾದ ಚತುರ್ಮುಖನಲ್ಲಿ ರುದ್ರವೊದಲಾದ ದೇವತಾಸಮೂಹವು ಸಮುದ್ರದಲ್ಲಿ ಜಲಚರ ಪ್ರಾಣಿಗಳು ಸೇರುವಂತೆ ಪ್ರವೇಶಿಸುತ್ತದೆ. ಆ ಚತುರ್ಮುಖನು ಗುಣತ್ರಯಾತ್ಮಕ ಪ್ರಕೃತಿಗೆ ನಿಯಾಮಕನಾದ ಹೃದಯದಲ್ಲಿರುವ ಆನಂದಮಯ ನಾಮಕನಾದ ಜನಾರ್ದನನಲ್ಲಿ ಲಯ ಹೊಂದುತ್ತಾನೆ. ಆ ಆನಂದಮಯನು ವ್ಯಾಪ್ತವಾದ ತನ್ನ ಸ್ವರೂಪದಲ್ಲಿ ಐಕ್ಯವನ್ನು ಹೊಂದುತ್ತಾನೆ. ಚತುರ್ಮುಖನಿಗೆ ಆನಂದನಾಮಕ ಶ್ರೀಹರಿಯಲ್ಲಿ ಲಯವೂ ಆನಂದಮಯನಿಗೆ ವ್ಯಾಪ್ತನಾದ ಶ್ರೀಹರಿಯಲ್ಲಿ ಹೇಳಿದ ಲಯವೂ ಇವುಗಳು ಒಂದೇ ರೀತಿ ಲಯಗಳಲ್ಲ. ಚತುರ್ಮುಖನಿಗೆ ಕ್ಷೇತ್ರಜ್ಞನಲ್ಲಿ ಲಯವೆಂದರೇ ಅವನ ಅಧೀನದಲ್ಲಿರುವನೆಂದು ಅವನಲ್ಲಿ ದೇಹ ಲಯವೆಂದೂ ಧ್ಯಾನಿಸುವದು. ಅವರಿಗೆ ಅಭೇದವಿಲ್ಲ. ದೇಹಾಂತರ್ಗತನಾದ ಆನಂದಮಯನಾಮಕ ಶ್ರೀಹರಿಗೆ ವ್ಯಾಪ್ತನಾದ ಶ್ರೀಹರಿಯಲ್ಲಿ ಲಯವೆಂದರೆ ಅಭೇದವೇ ದೇಹಲಯವಲ್ಲ ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

ಪ್ರಲಯಕಾಲದಲ್ಲಿ ರುದ್ರಾದಿಗಳಿಗೆ ಚತುರ್ಮುಖನಲ್ಲಿ ದೇಹಯಲವಾಗುತ್ತದೆ ಎಂದು ಧ್ಯಾನಿಸುವದು ಚತುರ್ಮುಖನಿಗೆ ಪರಬ್ರಹ್ಮನಲ್ಲಿ ದೇಹಲಯವಾಗುತ್ತದೆಂದು ಧ್ಯಾನಿಸುವದು. ಆನಂದಮಯನಿಗೆ ವ್ಯಾಪ್ತನಾದ ಶ್ರೀಹರಿಯಲ್ಲಿ ಐಕ್ಯವಾಗುವದೆಂದೂ ಧ್ಯಾನಿಸುವದೇ ವಿಲಾಪನವೆನಿಸುತ್ತದೆ. ಯಾವನು ಚೆನ್ನಾಗಿ ಮುಂದೆ ಆಗುವ ವಸ್ತುಗಳ ನಿಶ್ಚಯವುಳ್ಳವನಾಗಿ ಈಗ ಇಲ್ಲದಿರುವದನ್ನು ಮುಂದೆ ಆಗುವದೆಂದು ಧ್ಯಾನಿಸುತ್ತಾನೋ ಅವನು ಅದಕ್ಕೆ ಕರ್ತಾ ಎಂದು ಅನಿಸಿಕೊಳ್ಳುತ್ತಾನೆ. ಹೇಗೆಂದರೆ ಶುದ್ಧಾಂತಃಕರಣರಾಗಿ ಧ್ಯಾನಿಸುವ ಮುನಿಗಳು ಮುಂದೆ ಆಗುವ ಲಯವನ್ನು ಸ್ಮರಿಸಿಕೊಂಡು ನಾಶಮಾಡುವರೆಂದು ಅನಿಸಿಕೊಳ್ಳುತ್ತಾರೆ. ಲಯವಾಗುವದೆಂದು ನಿಶ್ಚಯವಿದ್ದರೂ ಸ್ಮರಣ ಮಾತ್ರದಿಂದ ಲಯವಾಗುವದಿಲ್ಲ. ಆದ ಕಾರಣ 'ವಿಲಾಪ್ಯ' ಎಂದು ಭಾಗವತದಲ್ಲಿದ್ದ ಪ್ರಯೋಗವು ಅಮುಖ್ಯವು ಎಂದು ನಾರದಿಯ ಪುರಾಣದಲ್ಲಿದೆ.

ಅವ್ಯಾಕೃತಾಕಾಶ ಭೂತಾಕಾಶ ಎಂದು ಆಕಾಶವು ಎರಡು ವಿಧವಾದುದು. ಘಟದೊಳಗಿನ ಅವ್ಯಾಕೃತಾಕಾಶವು ಘಟ ಹುಟ್ಟಿದ್ದರೂ ಬಾಹ್ಯಾಕಾಶದಿಂದ ಭೇದರಹಿತವಾದುದೆ. ವಿಶೇಷಶಕ್ತಿಯಿಂದ ಭೇದವ್ಯವಹಾರಕ್ಕೆ ಸಮರ್ಥವಾಗುತ್ತದೆ. ಘಟಲಯವಾದರೂ ಅದರ ಒಳಗಿನ ಅವ್ಯಾಕೃತಾಕಾಶಸ್ವರೂಪವೂ ನಾಶವಾಗಲಾರದು. ಅದರಂತೆ ರಾಮಕೃಷ್ಣಾದ್ಯವತಾರ ಹೊಂದಿದ ಶ್ರೀಹರಿಯೂ ದೇಹದೊಳಗಿನ ಶ್ರೀಹರಿ ಅಭಿನ್ನನಾದರೂ ವಿಶೇಷಶಕ್ತಿಯಿಂದ ಭೇದವ್ಯವಹಾರಕ್ಕೆ ವಿಷಯನಾಗುತ್ತಾನೆ. ದೇಹಾದಿರೂಪ ಜಗತ್ತಿನ ನಾಶ ಪ್ರಯುಕ್ತವಾಗಿ ದೇಹಾಂತರ್ಗತನಾದ ಶ್ರೀಹರಿಗೆ ನಾಶಾದಿಗಳಾಗುವದಿಲ್ಲ. ಘಟಾಕಾಶವು ಘಟವು ಹುಟ್ಟುವಾಗ ಹುಟ್ಟುತ್ತದೆ. ನಾಶವಾದಾಗ ನಾಶವಾಗುತ್ತದೆ (ಭೂತಾಕಾಶ). ಆದಕಾರಣ ಘಟಾಕಾಶವು ಮಹಾಕಾಶದಿಂದ ಬೇರೆಯೇ. ಹೀಗೆಯೇ ಜೀವನ ಉತ್ಪತ್ತಿ ನಾಶಾದಿಗಳುಳ್ಳವನಾದ ಪ್ರಯುಕ್ತ ಶ್ರೀಹರಿಯಿಂದ ಭಿನ್ನನೇ ಆಗಿರುತ್ತಾನೆ. ಜೀವೋಪಾಧಿಯು ನಿತ್ಯವಾದುದರಿಂದ ಜೀವನಿಗೂ ಸ್ವರೂಪತಃ ನಾಶವಿಲ್ಲ ಮತ್ತು ಜೀವೋಪಾಧಿಯು ಜೀವಸ್ವರೂಪವೇ ಆದುದರಿಂದ ಭಿನ್ನವಾದ ಉಪಾಧಿಯನ್ನು ಕಲ್ಪಿಸಕೂಡದು ಎಂದು ಬ್ರಹ್ಮತರ್ಕದಲ್ಲಿದೆ. ಜೀವನಿಗೆ ನಿರುಪಾಧಿಕ ಶ್ರೀಹರಿಯಿಂದ ಸ್ವಾಭಾವಿಕ ಭೇದವೇ ಅಭೇದವಿಲ್ಲ. ಉಪಾಧಿಯೂ ಕೇವಲ ಚಿದ್ರೂಪಜೀವನಿಗೆ ಸ್ವರೂಪವಾಗಿರುವದರಿಂದ ಮುಕ್ತಿಯಲ್ಲಿ ಚಿದ್ರೂಪತ್ವವು ಯುಕ್ತವೆಂದು ಹೇಳಿದೆ.

**ಧ್ವಸ್ತಮಾಯಾಗುಣೋದ್ರೇಕೋ ನಿರುದ್ಧಕರಣಾಶಯಃ ।**
**ನಿವರ್ತಿತಾಖಿಲಾಹಾರ ಆಸ್ತೇ ಸ್ಥಾಣುರಿವಾಧುನಾ ।**
**ತಸ್ಯಾಂತರಾಯೋ ನೈವಾಭೂತ್ ಸನ್ನ್ಯಸ್ತಾಖಿಲಕರ್ಮಣಃ ॥೫೬॥**

**ಧ್ವಸ್ತಮಾಯಾಗುಣೋದ್ರೇಕಃ** ನಾಶ ಹೊಂದಿದ ಪ್ರಕೃತಿ ಗುಣಗಳಾದ ಸತ್ವಾದಿಗಳ ಕಾಮಾದಿರೂಪದಿಂದ ಉತ್ಪತ್ತಿಯುಳ್ಳ ಅಂದರೆ ಕಾಮಾದಿಗಳಿಲ್ಲದ ಎಂದರ್ಥ. **ನಿರುದ್ಧ ಕರಣಾಶ್ರಯಃ** ಶ್ರೀಹರಿಯಲ್ಲಿಯೇ ತಡೆಯಲ್ಪಟ್ಟ ಇಂದ್ರಿಯಗಳು ಮತ್ತು ಮನಸುಳ್ಳ ಆದ್ದರಿಂದಲೇ **ನಿವರ್ತಿತಾಖಿಲಾಹಾರಃ** ಎಲ್ಲ ಭೋಗ್ಯಗಳನ್ನು ತ್ಯಜಿಸಿದವನಾಗಿ **ಅಧುನಾ** ಮರಣಕ್ಕಿಂತ ನಾಲ್ಕು ದಿವಸ ಮುಂಚೆ **ಸ್ಥಾಣುರಿವ** ಮೋಟ ಮರದಂತೆ ಚೆನ್ನಾಗಿ **ಆಸ್ತೇ** ಇದ್ದನು **ಸನ್ನ್ಯಸ್ತಾಖಿಲಕರ್ಮಣಃ** ಎಲ್ಲ ಕರ್ಮಗಳನ್ನು ಶ್ರೀಹರಿಯಲ್ಲಿ ಸಮರ್ಪಿಸಿರುವ **ತಸ್ಯ** ಆ ಧ್ಯಾನ ಮಾಡುವ ಧೃತರಾಷ್ಟ್ರನಿಗೆ **ಅಂತರಾಯಃ** ವಿಘ್ನವು ನ **ವಾಭೂತ್** ವೇದವ್ಯಾಸರ ಅನುಗ್ರಹದಿಂದ ಉಂಟಾಗಲಿಲ್ಲವೆಂದು ಭಾವ.

ಧ್ವಸ್ತಮಾಯಾಗುಣೋದ್ರೇಕಃ ಎಂಬಲ್ಲಿ ವಿವಕ್ಷಿತಮಾಯಾಗುಣಗಳನ್ನು ತಿಳಿಸಲು ಮಾಯಾ ಶಬ್ದಾರ್ಥವನ್ನು ಮೊದಲಿಗೆ ಪ್ರಮಾಣದಿಂದ ತಿಳಿಸುವರು.

*ಭಾಗವತತಾತ್ಪರ್ಯ -*

**ತ್ರಿಗುಣಾತ್ಮಿಕಾ ತಥಾ ಜ್ಞಾನಂ ವಿಷ್ಣುಶಕ್ತಿಸ್ತಥೈವ ಚ ।**
**ಮಾಯಾಶಬ್ದೇನ ಭಣ್ಯಂತೇ ಶಬ್ದತತ್ವಾರ್ಥವೇದಿಭಿಃ ॥**
**-ಇತಿ ನಾಮಮಹೋದಧೌ ॥**

**ಅತ್ರ ಸತ್ವಾದಯೋ ಮಾಯಾಗುಣಾಃ ।**
**ಪರಾವರೇ ತಥೈವಾರಾದುಭಯಾರ್ಥಾಭಿಧಾಯಿನಃ ॥ ಇತಿ ಚ**

ಮಾಯಾಶಬಕ್ಕೆ ತ್ರಿಗುಣಾತ್ಮಕಪ್ರಕೃತಿ, ಜ್ಞಾನ, ವಿಷ್ಣುಶಕ್ತಿ, ಇವು ಮೂರು ಅರ್ಥಗಳು ಎಂದು ಶಬ್ದತತ್ವಾರ್ಥಕೋವಿದರು ಹೇಳುತ್ತಾರೆ. ಎಂದು ನಾಮಮಹೋದಧಿ ಎಂಬ ಗ್ರಂಥದಲ್ಲಿ ಇದೆ. ಈ ರೀತಿ ಮಾಯಾಶಬ್ದಕ್ಕೆ ಅನೇಕ ಅರ್ಥ ಇರುವುದರಿಂದ ಇಲ್ಲಿ ಸತ್ವಾದಿ ಗುಣಗಳು ಮಾಯಾ ಗುಣಗಳೆನಿಸುತ್ತವೆ. ಧೃತರಾಷ್ಟ್ರನ ಮರಣಾನಂತರ ನಾರದರು ಬಂದದ್ದೆಂದು ಹೇಳಿದರೆ ''ಸ ವಾ ಅದ್ಯತನಾದ್ರಾಜನ್ ಪರತಃ ಪಂಚಮೇऽಹನಿ ಕಲೇವರಂ ಹಾಸ್ಯತಿ'' । ಇಂದಿನಿಂದ ಐದನೇ ದಿನದಲ್ಲಿ ಶರೀರವನ್ನು ಬಿಡುವನು ಎಂಬೀ ಪ್ರಮಾಣವಿರೋಧ ಬರುವದು. ಅಂದರೆ ಅಲ್ಲಿಯೂ ಪರತಃ ಎಂದರೆ ಪೂರ್ವತಃ ಎಂದೇ ಅರ್ಥ ಮಾಡಬೇಕು ಎಂಬ ವಿಷಯದಲ್ಲಿ ಕೋಶ ಹೇಳುತ್ತಾರೆ. ಪರಶಬ್ದಕ್ಕೆ ಪೂರ್ವ ಉತ್ತರ ಎಂದೂ, ಅವರ ಶಬ್ದಕ್ಕೆ ವರ, ಅವರ ಎಂದೂ, ಆರಾತ್ ಎಂಬುವುದಕ್ಕೆ ದೂರ ಸಮೀಪ ಎಂದೂ ಎರಡರ್ಥವಿದೆ. ಆದ ಕಾರಣ ಮರಣಾನಂತರ ಐದನೇ ದಿನದಲ್ಲಿ ನಾರದರು ಬಂದದ್ದು ಪರತಃ ಎಂಬುದಕ್ಕೂ ವಿರೋಧವಿಲ್ಲ.

ಧೃತರಾಷ್ಟ್ರನ ಮರಣಕಾಲ ಹೇಳುವರು.

**ಸ ವಾ ಅದ್ಯತನಾದ್ರಾಜನ್ ಪರತಃ ಪಂಚಮೇऽಹನಿ ।**
**ಕಲೇವರಂ ಹಾಸ್ಯತಿ ಹ ತಚ್ಚ ಭಸ್ಮೀ ಭವಿಷ್ಯತಿ ॥೫೭॥**

**ಹೇರಾಜನ್** ಧರ್ಮರಾಜನೇ **ಸಃ** ಧೃತರಾಷ್ಟ್ರನು **ಅದ್ಯತನಾತ್ ಅನ್ಹಃ ಪರತಃ** ಈ ದಿವಸಕ್ಕಿಂತ ಮೊದಲು **ಪಂಚಮೇ ಅಹನಿ** ಐದನೆಯ ದಿನದಲ್ಲಿ ಐದು ದಿನ ಮೊದಲೇ **ಕಲೇವರಂ ಹಾಸ್ಯತಿ** ದೇಹವನ್ನು ಬಿಟ್ಟನು **ತಚ್ಚ** ಆ ದೇಹವಾದರೂ **ಭಸ್ಮೀ ಭವಿಷ್ಯತಿ**

ಭಸ್ಮವಾಗಿ ಹೋಯಿತು. ವೈ ಶಬ್ದದಿಂದ 'ತಾಂಸ್ತದಾ ನಾರದೋ ವಿದ್ವಾನ್' ಮುಂತಾದ ಪ್ರಮಾಣಪ್ರಸಿದ್ಧಿಯನ್ನು ತಿಳಿಸುವರು.

ಹಾಗಾದರೆ ಗಾಂಧಾರಿಕುಂತಿಯರನ್ನು ಕರೆತರಲು ಹೋಗುವನೆಂದರೆ ಹೇಳುವರು.

**ದಹ್ಯಮಾನೇಽಗ್ನಿಭಿರ್ದೇಹೇ ಪತ್ಯುಃ ಪತ್ನೀ ಸಹೋಟಜೇ ।**
**ಬಹಿಃಸ್ಥಿತಾ ಪತಿಂ ಸಾಧ್ವೀ ತಮಗ್ನಿಮನುವೇಕ್ಷ್ಯತಿ ॥೫೮॥**

**ಅಗ್ನಿಭಿಃ** ಗಾರ್ಹಪತ್ಯ ಆಹವನೀಯ ದಕ್ಷಿಣಾಗ್ನಿಗಳಿಂದ **ಸಹೋಟಜೇ** ಪರ್ಣಶಾಲೆ ಸಹಿತವಾದ **ಪತ್ಯುಃ** ಗಂಡನ **ದೇಹೇ** ಶರೀರವು **ದಹ್ಯಮಾನೇ ಸತಿ** ಸುಡುತ್ತಿರಲು **ಬಹಿಃ ಸ್ಥಿತಾ** ಹೊರಗಿರುವ **ಪತ್ನೀ** ಗಾಂಧಾರಿಯು **ಸಾಧ್ವೀ** ಕುಂತಿಯು **ಪತಿಂ ತಂ ಅನು** ಗಂಡನಾದ ಧೃತರಾಷ್ಟ್ರನನ್ನು ಅನುಸರಿಸಿ **ಅಗ್ನಿಂ ವೇಕ್ಷ್ಯತಿ** ಅಗ್ನಿಯನ್ನು ಪ್ರವೇಶಿಸಿದಳು. ಆದ ಕಾರಣ ಉತ್ತಮಗತಿ ಹೊಂದಿರುವರು. ಕಾರಣ ಅವರಿಗಾಗಿ ಶೋಕಬೇಡ.

ಧೃತರಾಷ್ಟ್ರನಂತೆ ಬೇರೆಯವರ ಪ್ರೇರಣೆಯಿಂದ ಮನೆ ಬಿಟ್ಟವನಲ್ಲ ವಿದುರ ಸ್ವಂತ ಬುದ್ಧಿಯಿಂದಲೇ ಎಂದು ಹೇಳುವರು.

**ವಿದುರಸ್ತು ತದಾಶ್ಚರ್ಯಂ ನಿಶಾಮ್ಯ ಕುರುನಂದನ ।**
**ಹರ್ಷಶೋಕಯುತಸ್ತಸ್ಮಾದ್ಗಂತಾ ತೀರ್ಥನಿಷೇವಕಃ ॥೫೯॥**

**ವಿದುರಃ ತು** ಜ್ಞಾನಿಯಾದ ವಿದುರನಾದರೂ **ತತ್** ಕೌರವನಾಶರೂಪವಾದ **ಆಶ್ಚರ್ಯಂ** ಶ್ರೀಹರಿಯ ಕರ್ತವ್ಯವನ್ನು **ನಿಶಾಮ್ಯ** ಜ್ಞಾನದೃಷ್ಟಿಯಿಂದ ತಿಳಿದು ನೋಡಿ ಎಂದರ್ಥ. **ಹರ್ಷಶೋಕಯುತಃ** ಶ್ರೀಹರಿಯ ಸಾಮರ್ಥ್ಯಾನುಸಂಧಾನದಿಂದ ಸಂತೋಷ, ಬಂಧುಗಳ ಮರಣದಿಂದ ದುಃಖ, ಎರಡರಿಂದಲೂ ಕೂಡಿದವನಾದನು. **ತಸ್ಮಾತ್** ನಿಶ್ಚಿತವಾಗಿ ಮರಣ ಸಮೀಪಿಸಿದಲ್ಲಿ ಆಸಕ್ತಿಯಿಂದ ಪ್ರಯೋಜನವಿಲ್ಲದ್ದರಿಂದ ಯುದ್ಧಕ್ಕಿಂತ ಮೊದಲೇ **ತೀರ್ಥನಿಷೇವಕಃ** ಗಂಗಾದಿತೀರ್ಥಗಳು ಹಾಗೂ ಶಾಸ್ತ್ರಗಳ ಸೇವನೆಗಾಗಿ **ಗಂತಾ** ಹೋದನು. ಯುದ್ಧಾನಂತರ ಅಣ್ಣನನ್ನು ನೋಡಲು ಬಂದರೂ ಮನೆಗೆ ಬರಲಿಲ್ಲ. ಆದ್ದರಿಂದಲೇ ಧೃತರಾಷ್ಟ್ರನೊಡನೇ ಮತ್ತೆ ವನಕ್ಕೆ ಹೋದನು. ಅಲ್ಲಿಯೇ ನೀನು ಧೃತರಾಷ್ಟ್ರನನ್ನು ನೋಡಲು ಹೋದಾಗ ಮೊದಲೇ ಐಕ್ಯಹೊಂದಿರುವನು. ಕಾರಣ ಅವನ ಗತಿಯನ್ನು ನಾನು ವರ್ಣಿಸಬೇಕಿಲ್ಲ.

ಕುರುನಂದನ ಯುಧಿಷ್ಠಿರನೇ ವಿದುರನು ಪೂರ್ವದಲ್ಲೇ ಮೃತನಾದುದರಿಂದ 'ವಿದುರಸ್ತು ತದಾಶ್ಚರ್ಯಂ ನಿಶಾಮ್ಯ'ಎಂಬುದು ಸರಿಯಲ್ಲ ಎಂದರೆ. ಆದರ ಅಭಿಪ್ರಾಯ ಹೇಳುವರು

*ಭಾಗವತತಾತ್ಪರ್ಯ -*

**ಏತತ್ಸರ್ವಂ ಪೂರ್ವಮೇವ ಜ್ಞಾತ್ವಾ ತಸ್ಮಾದೇವ ಕಾರಣಾದ್ವಿದುರಃ ತೀರ್ಥಾನಿ ಯಯೌ ।।೫೯।।**

ಮುಂದೆ ಆಗುವ ಧೃತರಾಷ್ಟ್ರನ ನಾಶ, ಕೌರವ ನಾಶ ಮುಂತಾದವುಗಳನ್ನೆಲ್ಲ ಯುದ್ಧಕ್ಕಿಂತ ಮೊದಲೇ ಜ್ಞಾನದೃಷ್ಟಿಯಿಂದ ತಿಳಿದು ಸಾಯಲು ಸಿದ್ಧರಾದವರಲ್ಲಿ ಅನಾಸಕ್ತಿಯೇ ಉಚಿತವಾದುದು ಎಂದು ಭಾವಿಸಿ ವಿದುರನು ತೀರ್ಥಗಳಿಗೆ ಹೋದನು. ಎಂದು ನಾರದರು ಹಿಂದಿನ ವೃತ್ತಾಂತವನ್ನೇ ಹೇಳಿರುವರು. ಹೊರತು ತಾವು ಬಂದ ಸಮಯದಲ್ಲಿ ಹೇಳಿಲ್ಲ. ಆದ ಕಾರಣ ವಿರೋಧವಿಲ್ಲವೆಂದು ಭಾವ.

**ಇತ್ಯುಕ್ತ್ವಾಽಥಾರುಹತ್ಸ್ವರ್ಗಂ ನಾರದಃ ಸಹತುಂಬುರುಃ ।**
**ಯುಧಿಷ್ಠಿರೋ ವಚಸ್ತಸ್ಯ ಹೃದಿ ಕೃತ್ವಾಽಜಹಾಚ್ಛುಚಃ ।।೬೦।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ದ್ವಾದಶೋಽಧ್ಯಾಯಃ ।।

**ಇತ್ಯುಕ್ತ್ವಾ** ಈ ರೀತಿ ಹೇಳಿ **ಅಥ** ನಂತರ **ಸಹತುಂಬುರುಃ** ತುಂಬುರು ಸಹಿತರಾದ **ನಾರದಃ** ನಾರದರು **ಸ್ವರ್ಗಂ ಆರುಹತ್** ಸ್ವರ್ಗಲೋಕಕ್ಕೆ ಏರಿದರು. ತೆರಳಿದರು. **ಯುಧಿಷ್ಠಿರಃ** ಧರ್ಮರಾಜನು **ತಸ್ಯ** ನಾರದರ **ವಚಃ** ಮಾತನ್ನು **ಹೃದಿ ಕೃತ್ವಾ** ಮನಸ್ಸಿಗೆ ತಂದುಕೊಂಡು **ಶುಚಃ** ದುಃಖಗಳನ್ನು **ಅಜಹಾತ್** ಬಿಟ್ಟನು.

ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು ಮುಗಿಯಿತು.

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ತ್ರಯೋದಶೋಽಧ್ಯಾಯ

**ಅಧ್ಯಾಯಸಾರಾಂಶ**

ಧರ್ಮರಾಜ ಶ್ರೀ ಕೃಷ್ಣನನ್ನು ನೋಡಿ ಕ್ಷೇಮಸಮಾಚಾರವನ್ನು ತಿಳಿದು ಬರಲು ಅರ್ಜುನನನ್ನು ದ್ವಾರಕೆಗೆ ಕಳುಹಿಸಿದ. ಏಳುದಿನಗಳಾದರೂ ಅವನು ಬರಲಿಲ್ಲ. ಅಷ್ಟರಲ್ಲಿಯೇ ಧರ್ಮರಾಜನಿಗೆ ಅನೇಕ ಅಪಶಕುನಗಳು ಕಂಡವು. ಎಲ್ಲೆಡೆ ಅಧರ್ಮದ ಕಾರ್ಯಗಳು ಕಾಣತೊಡಗಿದವು. ಕೃಷ್ಣನನ್ನು ಕಾಣಲು ಹೋದ ಅರ್ಜುನ ಹಿಂತಿರುಗಿ ಬಂದ. ಧರ್ಮರಾಜನ ಎದುರಿನಲ್ಲಿ ಕಣ್ಣೀರು ಸುರಿಸುತ್ತ ನಿಂತ. ಧರ್ಮರಾಜ ಕೇಳಿದ ಶ್ರೀಕೃಷ್ಣ ಹೇಗಿರುವನು ? ನೀನು ಬಹಳ ಖಿನ್ನನಾದವನಂತೆ ಕಾಣುತ್ತಿರುವೆ ? ನಿನ್ನ ಮುಖದಲ್ಲಿ ಮೊದಲಿನ ಕಾಂತಿ ಕಂಡು ಬರುತ್ತಿಲ್ಲ. ಹಿಂದೆ ಅಲ್ಲಿಗೆ ಹೋದಾಗಲೆಲ್ಲ ಹೆಚ್ಚು ಕಾಲ ಇರುತ್ತಿದ್ದೆ ಈಗ ಬೇಗನೆ ಹಿಂತಿರುಗಿ ಬಂದೆ ಏಕೆ? ಯಾರಾದರೂ ಅವಮಾನ ಮಾಡಿದರೇ ? ಕೃಷ್ಣನ ವಿಯೋಗವಾಯಿತೇ ಹೇಳು ಎಂಬುದಾಗಿ ಅರ್ಜುನನ್ನು ವಿಚಾರಿಸಿದ.

ಶ್ರೀಹರಿಯಲ್ಲಿ ಭಕ್ತಿಯುಂಟಾಗಲು ದುರ್ನಿಮಿತ್ತಾದಿ ಸಂಸಾರಯಾತ್ರಾಪ್ರತಿಪಾದನೆ ಮಾಡಿ ಅದಕ್ಕೆ ಅನಿತ್ಯತ್ವ ತಿಳಿಸುವರು. ಅದರಲ್ಲಿಯೂ ಅವಶೇಷಂ ಪ್ರತೀಕ್ಷತೇ ಎಂದು ಹಿಂದೆ ಹೇಳಿದ ಯದುಕುಲಸಂಹಾರವನ್ನು ಹೇಳುತ್ತಾ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ್ದನ್ನು ಹೇಳಲು ಪ್ರಾರಂಭಿಸುವರು.

**ಧರ್ಮರಾಜ ಶ್ರೀಕೃಷ್ಣನನ್ನು ನೋಡಿ ಬರಲು ಅರ್ಜುನನನ್ನು ದ್ವಾರಕೆಗೆ ಕಳುಹಿಸಿದ.**

**ಸೂತ ಉವಾಚ -**

**ಸಂಪ್ರಸ್ಥಿತೇ ದ್ವಾರಕಾಯಾಂ ಜಿಷ್ಣೌ ಬಂಧುದಿದೃಕ್ಷಯಾ ।**
**ಜ್ಞಾತುಂ ಮಾಯಾ ಮನುಷ್ಯಸ್ಯ ವಾಸುದೇವಸ್ಯ ಚೇಷ್ಟಿತಮ್ ॥೧॥**

ನಾರದರ ಮಾತಿನಿಂದ ಶೋಕ ತೊರೆದು ರಾಜ್ಯಪಾಲನ ಮಾಡುವ ಧರ್ಮರಾಜನು ತನ್ನ ಅನುಮತಿಯಿಂದ, **ಜಿಷ್ಣೌ** ಅರ್ಜುನನು **ದ್ವಾರಕಾಯಾಂ ಸ್ಥಿತಾನಾಂ** ದ್ವಾರಕೆಯಲ್ಲಿರುವ **ಬಂಧೂನಾಂ** ಬಂಧುಗಳನ್ನು **ದಿದೃಕ್ಷಯಾ** ನೋಡುವ ಇಚ್ಛೆಯಿಂದ ಮತ್ತು **ಮಾಯಾಮನುಷ್ಯಸ್ಯ** ತನ್ನ ಇಚ್ಛೆಯಿಂದ ಮನುಷ್ಯರಂತೆ ದೇಹವುಳ್ಳ **ವಾಸುದೇವಸ್ಯ** ಶ್ರೀಕೃಷ್ಣನ **ಈಹಿತಂ** ವ್ಯಾಪಾರವನ್ನು **ಜ್ಞಾತುಂ** ತಿಳಿಯಲು **ಸಂಪ್ರಸ್ಥಿತೇ** ಹೋದಾಗ (ಹೋಗುತ್ತಿರಲು ಎಂದರ್ಥ)

**ವ್ಯತೀತಾಃ ಕತಿಚಿನ್ಮಾಸಾಸ್ತದಾ ತು ಶತಶೋ ನೃಪಃ ।**
**ದದರ್ಶ ಘೋರರೂಪಾಣಿ ನಿಮಿತ್ತಾನಿ ಭೃಗೂದ್ವಹ ॥೨॥**

**ಭೃಗೂದ್ವಹ** ಶೌನಕರೇ **ಕತಿಚಿನ್ಮಾಸಾಃ** (ಏಳು) ಕೆಲವು ದಿನಗಳು **ವ್ಯತೀತಾಃ** ಕಳೆದವು **ತದಾ** ಆಗ **ತು** ವಿಶೇಷವಾಗಿ **ನೃಪಃ** ಧರ್ಮರಾಜನು **ಶತಶಃ** ನೂರುಗಟ್ಟಲೆ ಅಂದರೆ ಸಾವಿರಾರು **ಘೋರರೂಪಾಣಿ** ಭಯಂಕರವಾಗಿರುವ ಅನಿಷ್ಟಸೂಚಕಗಳಾದ **ನಿಮಿತ್ತಾನಿ** ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವಾದ ಉತ್ಪಾತಗಳನ್ನು **ದದರ್ಶ** ನೋಡಿದನು.

*ಭಾಗವತತಾತ್ಪರ್ಯ-*

ಇಲ್ಲಿ ಮಾಸಶಬ್ದದಿಂದ ಪ್ರಸಿದ್ಧ ತಿಂಗಳುಗಳನ್ನು ಸ್ವೀಕರಿಸಬಾರದೆಂದು ತಿಳಿಸಲು ವ್ಯಾಖ್ಯಾನಿಸುವರು.

**''ಮಾಸಶಬ್ದೇನಾಹ ನೋಚ್ಯಂತೇ''**

ಏಕೆಂದರೆ ಹೇಳುವರು

**ತಥಾಹಿ ಮಹಾಭಾರತೇ -**

**ಅಹಸ್ತು ಮಾಸಶಬ್ದೋಕ್ತ ಯತ್ರ ಚಿಂತಾಯುತಂ ವ್ರಜೇತ್ । ಏವಂ ವತ್ಸರಭಾದ್ಯಂ ಚ ವಿಪರೀತೇ ವಿಪರ್ಯಯಃ ॥ ಇತಿ ನಾಮಮಹೋದಧೌ॥**

ಯಾವ ಕಾರಣ ಮಹಾಭಾರತದಲ್ಲಿ ಕತಿಚಿದ್ದಿವಸಾಗತಾಃ ೭೭ ಎಂದು ಸ್ಪಷ್ಟವಾಗಿ ಹೇಳಿದೆಯೋ ಆದಕಾರಣ ಮಾಸ ಶಬ್ದದಿಂದ (ಇಲ್ಲಿಯೂ ಮುಂದೆಯೂ) ದಿವಸಗಳು ಹೇಳಲ್ಪಡುತ್ತವೆ. ಚಿಂತೆಯಿಂದ ಹೋಗುವದಿವಸವು ಮಾಸಶಬ್ದದಿಂದ ಹೇಳಲ್ಪಡುವದು. ಹೀಗೆಯೇ ವತ್ಸರ ಶಬ್ದದಿಂದಲೂ ನಕ್ಷತ್ರಗಣನೆಯಿಂದ ಮಾಡಿದ ಕಾಲ ವಿಶೇಷದಿಂದಲೂ ದುಃಖಯುಕ್ತವಾಗಿದ್ದರೆ ದಿವಸವೇ ಹೇಳಲ್ಪಡುತ್ತದೆ ಸುಖದಿಂದ

ಕಳೆದ ಮಾಸಾದಿಗಳಲ್ಲಿ ಇದಕ್ಕೆ ವಿಪರೀತವಾಗಿ ಅಂದರೆ ಸುಖಯುಕ್ತ ಮಾಸ ವತ್ಸರಗಳು ಕಳೆದಾಗ ಅಹಃ ಶಬ್ದದಿಂದ ಮಾಸಾದಿಗಳು ಹೇಳಲ್ಪಡುತ್ತವೆ. ಪ್ರಕೃತ ಚಿಂತಾಯುಕ್ತಗಳಾದ ದಿವಸಗಳಾದುದರಿಂದ ದಿವಸಗಳಲ್ಲಿ ಮಾಸಾಃ ಎಂದು ಪ್ರಯೋಗ ಮಾಡಿರುವರು ಎಂದು ಭಾವ.

**ಕಾಲಸ್ಯ ಚ ಗತಿಂ ರೌದ್ರಾಂ ವಿಪರ್ಯಸ್ತರ್ತುಧರ್ಮಿಣಃ ।**
**ಪಾಪೀಯಸಾಂ ನೃಣಾಂ ವಾರ್ತಾಂ ಕ್ರೋಧಲೋಭಾನೃತಾತ್ಮನಾಮ್ ॥೩॥**

**ವಿಪಯಸ್ತಋತುಧರ್ಮಿಣಃ** ವ್ಯತ್ಯಾಸವಾದ ವಸಂತಾದಿ ಋತುಗಳ ಧರ್ಮವಾದ ಹೂ ಬಿಡುವದೇ ಮೊದಲಾದವುಗಳುಳ್ಳ **ಕಾಲಸ್ಯ** ಕಾಲದ **ರೌದ್ರಾಂ** ಘೋರವಾದ **ಗತಿಂ** ಗಮನವನ್ನು **ದೃಷ್ಟ್ವಾ** ನೋಡಿ **ಕ್ರೋಧಲೋಭಾ ನೃತಾತ್ಮನಾಮ್** ಸಿಟ್ಟು, ಕೃಪಣತೆ ಸುಳ್ಳುಗಳಿಂದ ಕೂಡಿದ ಮನಸುಳ್ಳ **ನೃಣಾಂ** ಜನರ **ಪಾಪೀಯಸೀಂ** ಪಾಪಿಷ್ಠವಾದ **ವಾರ್ತಾಂ** ಜೀವನೋಪಾಯವನ್ನು **ದೃಷ್ಟ್ವಾ** ನೋಡಿ ಸುದ್ದಿಯನ್ನು ಕೇಳಿ.

**ಜಿಹ್ಮಪ್ರಾಯಂ ವ್ಯವಹೃತಂ ಸಾಧ್ಯಮಿಶ್ರಂ ಚ ಸೌಹೃದಮ್ ।**
**ಪಿತೃಮಾತೃಸುಹೃದ್ಭ್ರಾತೃದಂಪತೀನಾಂ ಚ ಕಲ್ಕಿತಾಮ್ ॥೪॥**

**ಜಿಹ್ಮಪ್ರಾಯಂ** ಬಹಳ ಕಪಟವುಳ್ಳ **ವ್ಯವಹೃತಂ** ಕ್ರಯವಿಕ್ರಯ ಮಾಡುವದು ಕೊಳ್ಳುವದೇ ಮೊದಲಾದ ವ್ಯವಹಾರವನ್ನು **ಸಾಧ್ಯಮಿಶ್ರಂ** ಪ್ರಯೋಜನವನ್ನು ಒಳಗೊಂಡ **ಸಾಹೃದಂ** ಸಖ್ಯವನ್ನು **ಪಿತೃಮಾತೃಸುಹದ್ಭ್ರಾತೃದಂಪತೀನಾಂ ಕಲ್ಕಿತಾಂ** ತಂದೆ ತಾಯಿ ಅನಿಮಿತ್ತ ಉಪಕಾರಕರು ಸ್ನೇಹಿತರು ಅಣ್ಣ ತಮ್ಮಂದಿರು ಗಂಡ ಹೆಂಡತಿಯರಲ್ಲಿ ಪರಸ್ಪರಕಲಹವನ್ನು **ದೃಷ್ಟ್ವಾ** ನೋಡಿ

**ನಿಮಿತ್ತಾನ್ಯತ್ಯರಿಷ್ಟಾನಿ ಕಾಲೇ ತ್ವನುಗತೇ ನೃಣಾಮ್ ।**
**ಲೋಭಾದ್ಯಧರ್ಮಪ್ರಕೃತಿಂ ದೃಷ್ಟ್ವೋವಾಚಾನುಜಂನೃಪಃ ॥೫॥**

**ಕಾಲೇ ತು ಅನುಗತೇ** ಕಲಿಸ್ವಾಮಿಕವಾದ ಕಾಲವು ಪ್ರಾಪ್ತವಾದಾಗ **ಅರಿಷ್ಟಾನಿ** ಅನಿಷ್ಟ ಸೂಚಕಗಳಾದ **ನಿಮಿತ್ತಾನಿ** ಮುಂದೆ ಹೇಳುವ ಭುಜ ಹಾರುವದೆ ಮೊದಲಾದ ಅಪಶಕುನಗಳನ್ನು **ನೃಣಾಂ** ಜನರ **ಲೋಭಾತ್** ಲೋಭದಿಂದ **ಅಧರ್ಮಪ್ರಕೃತಿಂ** ಪಾಪದಲ್ಲಿ ಪ್ರವೃತ್ತಿಯನ್ನು **ದೃಷ್ಟ್ವಾ** ನೋಡಿ **ನೃಪಃ** ಧರ್ಮರಾಜನು **ಅನುಜಂ** ಭೀಮನನ್ನು ಕುರಿತು **ಉವಾಚ** ಹೇಳಿದನು.

ಯುಧಿಷ್ಠಿರ ಉವಾಚ -

**ಸಂಪ್ರೇಷಿತೇ ದ್ವಾರಕಾಯಾಂ ಜಿಷ್ಣೌ ಬಂಧುದಿದೃಕ್ಷಯಾ ।**
**ಜ್ಞಾತುಂ ಚ ಪುಣ್ಯಶ್ಲೋಕಸ್ಯ ಕೃಷ್ಣಸ್ಯ ಚ ವಿಚೇಷ್ಟಿತಮ್ ॥೬॥**

**ದ್ವಾರಕಾಯಾಂ** ದ್ವಾರಕೆಯಲ್ಲಿರುವ **ಬಂಧುದಿದೃಕ್ಷಯಾ** ಬಾಂಧವರನ್ನು ನೋಡುವ ಇಚ್ಛೆಯಿಂದಲೂ **ಪುಣ್ಯಶ್ಲೋಕಸ್ಯ** ಪುಣ್ಯಕೀರ್ತಿಯುಳ್ಳ **ಕೃಷ್ಣಸ್ಯ** ಶ್ರೀಕೃಷ್ಣನ **ವಿಚೇಷ್ಟಿತಂ ಜ್ಞಾತುಂ ಚ** ವ್ಯಾಪಾರವನ್ನು ತಿಳಿಯುವದಕ್ಕಾಗಿಯೂ **ಜಿಷ್ಣೌ ಸಂಪ್ರೋಷಿತೇ** ಅರ್ಜುನನನ್ನು ಕಳುಸುತ್ತಿರಲಾಗಿ.

**ಗತಾಃ ಸಪ್ತಾಧುನಾ ಮಾಸಾ ಭೀಮಸೇನ ತವಾನುಜಃ ।**
**ನಾಯಾತಿ ಕಸ್ಯ ವಾ ಹೇತೋರ್ನಾಹಂ ವೇದೇದಮಂಜಸಾ ॥೭॥**

**ಅಧುನಾ** ಈಗ **ಸಪ್ತ ಮಾಸಾಃ** ಏಳು ದಿನಗಳು **ಗತಾಃ** ಉರುಳಿದವು **ಭೀಮಸೇನ** ಎಲೋ ಭೀಮಸೇನನೇ **ತವ ಅನುಜಃ** ನಿನ್ನ ತಮ್ಮ ಅರ್ಜುನನು **ಕಸ್ಯ ವಾ ಹೇತೋಃ** ಯಾವ ಕಾರಣದಿಂದಾಗಿ **ನ ಆಯಾತಿ** ಬರಲಿಲ್ಲವೋ **ಇದಂ** ಈ ಕಾರಣವನ್ನು **ಅಂಜಸಾ ಅಹಂ ನ ವೇದ** ಚೆನ್ನಾಗಿ ನಾನು ತಿಳಿಯಲಾರೆ.

**ಅಪಿ ದೇವರ್ಷಿಣಾಽಽದಿಷ್ಟ ಸ ಕಾಲಃ ಪ್ರತ್ಯುಪಸ್ಥಿತಃ ।**
**ಯದಾತ್ಮನೋಽಂಗಮಾಕ್ರೀಡಂ ಭಗವಾನುತ್ಸಿಸೃಕ್ಷತಿ ॥೮॥**

**ಯದಾ** ಯಾವಾಗ **ಆತ್ಮನಃ** ತನ್ನ **ಆಕ್ರೀಡಂ** ಕ್ರೀಡಾಸ್ಥಾನವಾದ **ಅಂಗಂ** ಪೃಥಿವಿಯನ್ನು **ಭಗವಾನ್** ಶ್ರೀಕೃಷ್ಣನು **ಉತ್ಸಿಸೃಕ್ಷತಿ** ಬಿಡಲಿಚ್ಛಿಸುವನೋ **ಸಃ ಕಾಲಃ** ಆ ಕಾಲವು **ದೇವರ್ಷಿಣಾ** ನಾರದರಿಂದ **ಆದಿಷ್ಟಃ** ''ಯೂಯಂ ತಾವದವೇಕ್ಷಧ್ವಂ'' ಎಂದು ಹೇಳಲ್ಪಟ್ಟಿತ್ತು. ಅದು **ಪ್ರತಿ** ಈಗ **ಉಪಸ್ಥಾಪಿತಃ ಅಪಿ** ಪ್ರಾಪ್ತವಾಯಿತೇನು?

*ಭಾಗವತತಾತ್ಪರ್ಯ-*

ಇಲ್ಲಿ ಅಂಗವೆಂದರೆ ದೇಹವೆಂದು ಅನ್ಯಥಾ ಪ್ರತೀತಿಯನ್ನು ನಿವಾರಿಸಲು ಪ್ರಮಾಣ ಸಹಿತವಾಗಿ ವ್ಯಾಖ್ಯಾನಿಸುವರು.

''ಅಂಗಂ ಪೃಥಿವೀಂ'' ।
ಯದಾ ತ್ಯಾಗಾದಿರುಚ್ಯೇತ ಪೃಥಿವ್ಯಾದ್ಯೇವ ಕಲ್ಪನಾ ।
ತದಾ ಜ್ಞೇಯಾ ನ ಹಿ ಸ್ವಾಂಗಂ ಕದಾಚಿತ್ ವಿಷ್ಣುರುತ್ಸೃಜೇತ್ ॥ ಇತಿ ಬ್ರಹ್ಮತರ್ಕೇ

ಅಂಗಂ ಎಂದರೆ ಭೂಲೋಕವನ್ನು ಎಂದರ್ಥ. ಯಾವಾಗ ಅಂಗತ್ಯಾಗ ದೇಹತ್ಯಾಗಾದಿಗಳು ವಿಯೋಗ(ಪುರಾಣಾದಿಗಳಲ್ಲಿ) ಹೇಳಲ್ಪಡುತ್ತದೋ ಅಲ್ಲಿ ಅಂಗ ಶಬ್ದದಿಂದ ಪೃಥಿವ್ಯಾದಿಗಳನ್ನೇ ಇಟ್ಟುಕೊಳ್ಳಬೇಕು ದೇಹವನ್ನಲ್ಲ. ಏಕೆಂದರೇ ಸ್ವರೂಪಭೂತದೇಹವನ್ನು ಯಾವ ಕಾಲದಲ್ಲಿಯೂ ಶ್ರೀಹರಿಯು ಬಿಡಲಾರನು ಎಂದು ಬ್ರಹ್ಮತರ್ಕದಲ್ಲಿದೆ.

ನಮ್ಮ ಎಲ್ಲ ಪುರುಷಾರ್ಥಕ್ಕೆ ಕಾರಣನು ಶ್ರೀಕೃಷ್ಣನು. ಅವನು ಅತ್ಯಂತ ಇಷ್ಟತಮನು. ಅವನ ವಿಯೋಗವೇ ಈ ಉತ್ಪಾತಗಳಿಗೆ ಸೂಚಕ ಎಂದು ಹೇಳುವರು.

**ಯೇಷಾಂ ನಃ ಸಂಪದೋ ರಾಜ್ಯಂ ದಾರಾಃ ಪ್ರಾಣಾಃ ಕುಲಂ ಪ್ರಜಾಃ ।**
**ಆಸನ್ ಸಪತ್ನವಿಜಯೋ ಲೋಕಾಶ್ಚ ಯದನುಗ್ರಹಾತ್ ॥೯॥**

**ಯೇಷಾಂ ನಃ** ಯಾವ ನಮಗೆ **ಸಂಪದಃ** ಐಶ್ವರ್ಯವು **ರಾಜ್ಯಂ** ರಾಜ್ಯವು **ದಾರಾಃ** ಪತ್ನಿಯು **ಪ್ರಾಣಾಃ** ಇಂದ್ರಿಯಗಳು **ಕುಲಂ** ವಂಶವು **ಪ್ರಜಾಃ** ಮಕ್ಕಳು **ಸಪತ್ನವಿಜಯಃ** ಶತ್ರುಗಳ ಸೋಲು **ಲೋಕಾಶ್ಚ** ಯಜ್ಞ ಮಾಡುವದರಿಂದ ಸ್ವರ್ಗಾದಿಗಳು **ಯದನುಗ್ರಹಾತ್ ಆಸನ್** ಯಾವನ ಅನುಗ್ರಹದಿಂದ ಆದವೋ **ತೇಷಾಂ ನಃ** ಆ ನಮಗೆ **ಸಃ ಕಾಲಃ ಪ್ರಾಪ್ತಃ** ಆ ಸಮಯವು ನಮಗೆ ಒದಗಿಬಂದಿದೆ.

ಏಕೆ ಈ ರೀತಿ ಶಂಕಿಸುವೆ ಎಂದರೆ ಹೇಳುವನು.

**ಪಶ್ಯೋತ್ಪಾತಾನ್ನರವ್ಯಾಘ್ರಭೌಮಾನ್ ದಿವ್ಯಾನ್ ಸದೈಹಿಕಾನ್ ।**
**ಘೋರಮಾಶಂಸತೋಽದೂರಾದ್ಭಯಂ ನೋ ಬುದ್ಧಿಮೋಹನಮ್ ॥**

**ನರವ್ಯಾಘ್ರ** ಪುರುಷಶ್ರೇಷ್ಠನೇ **ಭೌಮಾನ್** ಭೂಕಂಪ ಮೊದಲಾದ ಭೂಮಿಗೆ ಸಂಬಂಧಪಟ್ಟ **ದಿವ್ಯಾನ್** ಆಕಾಶದಲ್ಲಿ ಸೂರ್ಯನಿಗೆ ಖಣ ಕಟ್ಟುವದೆ ಮೊದಲಾದವು **ಸದೈಹಿಕಾನ್** ದೇಹದಲ್ಲಿ ಉಂಟಾಗುವ ಕಣ್ಣು, ತೊಡೆ, ಭುಜಗಳು ಹಾರುವದೆ ಮೊದಲಾದವುಗಳಿಂದ ಸಹಿತವಾದ **ನಃ** ನಮ್ಮ **ಬುದ್ಧಿಮೋಹನಂ** ಬುದ್ಧಿಗೆ ಮೋಹವನ್ನುಂಟು ಮಾಡುವ **ಅದೂರಾತ್** ಸಮೀಪದಲ್ಲಿಯೇ **ಘೋರಂ** ಅಸಹ್ಯವಾದ **ಭಯಂ** ಭಯವನ್ನು **ಆಶಂಸತಃ** ತಿಳಿಸುವ **ಉತ್ಪಾತಾನ್ ಪಶ್ಯ** ಅಪಶಕುನಗಳನ್ನು ನೋಡು ಇದರಿಂದಲೇ ಶಂಕೆ ಎಂದು ಭಾವ.

**ಧರ್ಮರಾಜನಿಗಾದ ದೈಹಿಕ ಅಪಶಕುನಗಳು**

ದೈಹಿಕ ಅಪಶಕುನಗಳನ್ನು ತಿಳಿಸುವರು.

**ಊರ್ವಕ್ಷಿಬಾಹವೋ ಮಹ್ಯಂ ಸ್ಫುರಂತ್ಯಂಗ ಪುನಃ ಪುನಃ ।**
**ವೇಪಥುಶ್ಚಾಪಿ ಹೃದಯೇ ಆರಾದ್ದಾಸ್ಯಂತಿ ವಿಪ್ರಿಯಮ್ ॥೧೧॥**

**ಹೇ ಅಂಗ** ಪ್ರಿಯನಾದ ಭೀಮಸೇನನೇ **ಮಹ್ಯಂ** ನನ್ನ **ಊರು** ಎಡಗಡೆಯ ತೊಡೆಯು **ಅಕ್ಷಿ** ಕಣ್ಣು **ಬಾಹವಃ** ಭುಜಗಳು **ಸ್ಫುರಂತಿ** ಕಂಪಿಸುವವು **ಪುನಃ ಪುನಃ** ಮತ್ತೆ ಮತ್ತೆ **ಹೃದಯೇ** ಹೃದಯದಲ್ಲಿ **ವೇಪಥುಃ** ನಡುಕ ಉಂಟಾಗುವದು ಇವೆಲ್ಲವು **ಮಹ್ಯಂ** ನನಗೆ **ಆರಾತ್** ಸಮೀಪದಲ್ಲಿಯೇ **ವಿಪ್ರಿಯಂ ದಾಸ್ಯಂತಿ** ಕೆಡಕನ್ನುಂಟು ಮಾಡುವವು.

ಪಾರ್ಥಿವ ಅಪಶಕುನ ತಿಳಿಸುವರು.

**ಶಿವೈಷೋದ್ಯಂತಮಾದಿತ್ಯಮಭಿರೌತ್ಯನಲಾನನಾ ।**
**ಮಾಮಂಗ ಸಾರಮೇಯೋಽಯಮಭಿಧಾವತ್ಯಭೀತವತ್ ॥೧೨॥**

**ಅಂಗ** ಮಗುವೇ **ಅನಲಾನನಾ** ಮುಖದಿಂದ ಬೆಂಕಿಯನ್ನು ಕಾರುವ **ಏಷಾ ಶಿವಾ** ಈ ಹೆಣ್ಣು ನರಿಯು **ಉದ್ಯಂತಂ** ಹುಟ್ಟುತ್ತಿರುವ **ಆದಿತ್ಯಂ ಅಭಿರೌತಿ** ಸೂರ್ಯನಿಗೆ ಎದುರಾಗಿ ಕೂಗುವದು **ಅಯಂ ಸಾರಮೇಯಃ** ಈ ನಾಯಿಯು **ಅಭೀತವತ್** ಹೆದರಿಕೆಯು ಇಲ್ಲದಂತೆ **ಮಾಂ ಅಭಿಧಾವತಿ** ಎದುರಾಗಿ ಬರುವದು.

**ಶಸ್ತಾಃ ಕುರ್ವಂತಿ ಮಾಂ ಸವ್ಯಂ ದಕ್ಷಿಣಂ ಪಶವೋಽಪರೇ ।**
**ವಾಹಾಂಶ್ಚ ಪುರುಷವ್ಯಾಘ್ರ ಲಕ್ಷಯೇ ರುದತೋ ಮಮ ॥೧೩॥**

**ಶಸ್ತಾಃ** ಪ್ರಶಸ್ತವಾದ ಆಕಳು ಮೊದಲಾದವು(ಭಾರದ್ವಾಜಾದಿಗಳು) **ಮಾಂ ಸವ್ಯಂ ಕುರ್ವಂತಿ** ನನ್ನನ್ನು ಎಡಕ್ಕೆ ಮಾಡುವವು ಅಂದರೆ ಅಪ್ರದಕ್ಷಿಣ ಮಾಡುವವು ಕತ್ತೆ ಕುರಿ ಮೊದಲಾದವು **ಹೇ ಪುರುಷವ್ಯಾಘ್ರ** ಪುರುಷ ಶ್ರೇಷ್ಠನೇ **ಮಮ** ನನ್ನ **ವಾಹಾಂಶ್ಚ** ಕುದುರೆಗಳನ್ನು **ರುದತಃ ಲಕ್ಷಯೇ** ಅಳುತ್ತಿರುವಂತೆ ಭಾವಿಸುವೆನು.

**ಮೃತ್ಯುದೂತಃ ಕಪೋತೋಽಗ್ರಾವುಲೂಕಃ ಕಂಪಯನ್ಮನಃ ।**
**ಪ್ರತ್ಯುಲೂಕಶ್ಚ ಹುಂಕಾರೈರನಿದ್ರೌ ಶೂನ್ಯಮಿಚ್ಛತಃ ॥೧೪॥**

**ಮೃತ್ಯುದೂತಃ** ಮರಣ ಸೂಚಕವಾಗಿ **ಕಪೋತಃ** ಪಾರಿವಾಳವು **ಅಗ್ನೌ ಪದಂ ಕರೋತಿ** ಬೆಂಕಿಯಲ್ಲಿ ಕಾಲಿಡುವದು **ಉಲೂಕಃ ಪ್ರತ್ಯುಲೂಕಶ್ಚ** ಗೂಗಿಯು ಅದಕ್ಕೆ ಪ್ರತಿ ಪಕ್ಷಿಯಾದ ಗೂಗಿಯೂ ಸೇರಿ **ಅನಿದ್ರೌ** ನಿದ್ರೆರಹಿತವಾಗಿ **ಹುಂಕಾರೈಃ** ಕೂಗುತ್ತ **ಶೂನ್ಯಂ ಇಚ್ಛತಃ** ಜಗತ್ತನ್ನು ಶೂನ್ಯಮಾಡಲಿಚ್ಛಿಸುವವು ಅಂದರೆ ಜಗತ್ತಿನ ನಾಶಸೂಚಕ ಹುಂಕಾರ ಮಾಡುವವು ಎಂದರ್ಥ.

ಇದು ಸ್ವಪ್ನದಲ್ಲಿ ಕಂಡದ್ದು ಎಂದು ತಿಳಿಯಬೇಕು. ಈ ಶ್ಲೋಕದಲ್ಲಿ 'ಕಪೋತೋಽಗ್ನೌ' ಎಂಬ ಸಾಕಾಂಕ್ಷವಾದ (ಅಪೂರ್ಣ)ವಾಕ್ಯವನ್ನು ಪ್ರಮಾಣ ಸಹಿತವಾಗಿ ಅಧ್ಯಾಹಾರ ಮಾಡಿ ವ್ಯಾಖ್ಯಾನಿಸುವರು.

*ಭಾಗವತತಾತ್ಪರ್ಯ-*

**'ಅಗ್ನೌ ಪದಂ ಕರೋತಿ' । 'ಯದೂಲೂಕೋ ವಹತಿ ಮೋಘಮೇತದ್ಯತ್ ಕಪೋತಃ ಪದಮಗ್ನೌ ಕರೋತಿ' ಇತಿ ಹಿ ಶ್ರುತಿಃ ।**

ಯಾವುದಾದರೂ ಕಾರ್ಯ ಮಾಡಬೇಕೆಂದು ವಿಚಾರ ಮಾಡುವಾಗ ಗೂಗಿಯು ಕೂಗಿದರೆ, ಪಾರಿವಾಳವು ಬೆಂಕಿಯಲ್ಲಿ ಕಾಲಿಟ್ಟಂತೆ ಕಾಣಿಸಿದರೆ, ಆ ಕಾರ್ಯವಾಗಲಾರದು ಎಂದರ್ಥ.

**ಧೂಮ್ರಾ ದಿಶಃ ಪರಿಧಯಃ ಕಂಪತೇ ಭೂಃ(ಕುಃ) ಸಹಾದ್ರಿಭಿಃ ।**
**ನಿರ್ಘಾತಶ್ಚ ಮಹಾಂಸ್ತಾತ ಸಾಕಂ ಚ ಸ್ತನಯಿತ್ನುಭಿಃ ॥೧೫॥**

**ತಾತ** ಭೀಮನೇ **ದಿಶಃ** ದಿಕ್ಕುಗಳು **ಪರಿಧಯಃ** ಸೂರ್ಯ ಚಂದ್ರರ ಸುತ್ತಲೂ ಖಣವು **ದೂಮ್ರಾಃ** ಹೊಗೆಯ ಬಣ್ಣವಾಗುವದು **ಸಹಾದ್ರಿಭಿಃ** ಬೆಟ್ಟಗಳೊಡನೆ **ಕುಃ** ಪೃಥಿವಿಯು **ಕಂಪತೇ** ನಡಗುವದು **ಸ್ತನಯಿತ್ನುಭಿಃ ಸಾಕಂ** ಮೋಡವಿಲ್ಲದ ಸಿಡಿಲುಗಳಿಂದ ಅಥವಾ ಅಕಾಲಮೋಡಗಳಿಂದ ಕೂಡಿ **ಮಹಾನ್ ನಿರ್ಘಾತಶ್ಚ** ಸಿಡಿಲು ಬೀಳುವದು ಗರ್ಜಿಸುವದು.

**ವಾಯುರ್ವಾತಿ ಖರಸ್ಪರ್ಶೋ ರಜಸಾ ವಿಸೃಜಂಸ್ತಮಃ ।**
**ಅಸೃಗ್ವರ್ಷಂತಿ ಜಲದಾಃ ಬೀಭತ್ಸಮಿವ ಸರ್ವತಃ ॥೧೬॥**

**ಖರಸ್ಪರ್ಶಃ** ಅಸಹ್ಯವಾದ ಸ್ಪರ್ಶವುಳ್ಳ **ವಾಯುಃ ವಾತಿ** ಗಾಳಿ ಬೀಸುವದು ರಜಸಾ ಧೂಳಿಯಿಂದ **ತಮಃ ವಿಸೃಜನ್** ಕತ್ತಲೆಯನ್ನು ವಿಶೇಷವಾಗಿ ಹುಟ್ಟಿಸುತ್ತ ಬೀಸುವದು

**ಸರ್ವತಃ** ಸುತ್ತಲೂ **ಭೀಭತ್ಸಂ ಇವ** ಭಯಂಕರವಾಗಿರುವ **ಅಸೃಕ್** ರಕ್ತವನ್ನು **ಜಲದಾಃ** ಮೋಡಗಳು **ವರ್ಷಂತಿ** ಸುರಿಸುವವು.

**ಸೂರ್ಯಂ ಹತಪ್ರಭಂ ಪಶ್ಯೇ ಗೃಹಮರ್ದಂ ಮಿಥೋ ದಿವಿ ।**
**ಸಸಂಕುಲೇ ತು ಭಗಣೇ ಜ್ವಲಿತೇ ಇವ ರೋದಸಿ ॥೧೭॥**

**ದಿವಿ** ಆಕಾಶದಲ್ಲಿ **ಹತಪ್ರಭಂ ಸೂರ್ಯಂ** ಕಾಂತಿ ಇಲ್ಲದ ಸೂರ್ಯನನ್ನು **ಮಿಥಃ** ಪರಸ್ಪರವಾಗಿ **ಗೃಹಮರ್ದಂ** ಗ್ರಹಗಳ ಯುದ್ಧವನ್ನು **ಪಶ್ಯೇ** ಕಾಣುವೆನು **ಭಗಣೇ** ನಕ್ಷತ್ರಸಮೂಹವು **ಸಸಂಕುಲೇ** ಎಲ್ಲವೂ ಸೇರಿದಂತೆ ಆಗುತ್ತಿರಲು **ರೋದಸೀ** ದ್ಯಾವಾಪೃಥಿವಿಗಳು **ಜ್ವಲಿತೇ ಇವ** ಉರಿಯುವಂತೆ **ಭಾತಿ** ತೋರುವವು.

**ನದ್ಯೋ ನದಾಶ್ಚ ಕ್ಷುಭಿತಾಃ ಸರಾಂಸಿ ಚ ಮನಾಂಸಿ ಚ ।**
**ನ ಜ್ವಲತ್ಯಗ್ನಿರಾಜ್ಯೇನ ಕಾಲೋಽಯಂ ಕಿಂ ವಿಧಾಸ್ಯತಿ ॥೧೮॥**

**ನದ್ಯಃ** ನದಿಗಳು **ನದಾಶ್ಚ** ಶೋಣ ಭದ್ರಾ ಮುಂತಾದ ಗಂಡು ನದಿಗಳು **ಕ್ಷುಭಿತಾಃ** ಕಲುಷಿತವಾಗಿರುವವು **ಸರಾಂಸಿ** ಸರೋವರಗಳು **ಮನಾಂಸಿ ಚ** ಮನುಷ್ಯರ ಮನಸ್ಸುಗಳು **ಕ್ಷುಭಿತಾನಿ** ಕಲುಷಿತವಾಗಿರುವವು **ಆಜ್ಯೇನ** ತುಪ್ಪದಿಂದ **ಅಗ್ನಿಃ** ಅಗ್ನಿಯು **ನ ಜ್ವಲತಿ** ಉರಿಯಲಾರದು. **ಅಯಂ ಕಾಲಃ ಕಿಂ ವಿಧಾಸ್ಯತಿ** ಇಂತಹ ಕಾಲವು ಏನು ಅನಿಷ್ಟ ಉಂಟುಮಾಡುವದೋ ಏನೋ.

**ನ ಪಿಬಂತಿ ಸ್ತನಂ ವತ್ಸಾಃ ನ ದುಹ್ಯಂತಿ ಚ ಮಾತರಃ ।**
**ರುದಂತ್ಯಶ್ರುಮುಖಾ ಗಾವೋ ನ ಹೃಷ್ಯಂತ್ಯೃಷಭಾ ವ್ರಜೇ ।**
**ದೈವತಾನಿ ರುದಂತೀವ ಖಿದ್ಯಂತಿ ಹ್ಯುಚ್ಚಲಂತಿ ಚ ॥೧೯॥**

**ವತ್ಸಾಃ** ಕರುಗಳು **ಸ್ತನಂ ನ ಪಿಬಂತಿ** ಹಾಲು ಕುಡಿಯಲಾರವು **ಮಾತರಃ** ಗೋಮಾತೆಗಳು **ನ ದುಹ್ಯಂತಿ** ಹಾಲುಕೊಡಲಾರವು. **ಅಶ್ರುಮುಖಾಃ ಗಾವಃ** ಕಣ್ಣೀರು ಸುರಿಸುತ್ತ ಆಕಳುಗಳು **ರುದಂತಿ** ಅಳುತ್ತವೆ **ಋಷಭಾಃ** ಎತ್ತುಗಳು **ವ್ರಜೇ** ಹಸುಗಳ ಕೊಟ್ಟಿಗೆಯಲ್ಲಿ **ನ ಹೃಷ್ಯಂತಿ** ಸಂತೋಷವಾಗಿ ಕ್ರೀಡಿಸುವದಿಲ್ಲ **ರುದಂತೀವ** ಅಳುತ್ತಿರುವಂತೆ ಇರುವ **ದೈವತಾನಿ** ಪ್ರತಿಮೆಗಳು **ಖಿದ್ಯಂತೀವ** ವ್ಯಥೆ ಪಡುವಂತೆ **ಉಚ್ಚಲಂತೀವ** ಚಲಿಸುವಂತೆ ತೋರುವವು.

**ಇಮೇ ಜನಪದಾಃ ಗ್ರಾಮಾಃ ಪುರೋದ್ಯಾನಕರಾಶ್ರಮಾಃ ।**
**ಭ್ರಷ್ಟಶ್ರಿಯೋ ನಿರಾನಂದ ಕಿಮಘಂ ದರ್ಶಯಂತಿ ನಃ ॥೨೦॥**

**ಇಮೇ ಜನಪದಾಃ** ಈ ಪಟ್ಟಣಗಳು **ಗ್ರಾಮಾಃ** ಹಳ್ಳಿಗಳು **ಪುರೋದ್ಯಾನಕರಾಶ್ರಮಾಃ** ರಾಜಧಾನಿ, ತೋಟಗಳು, ಆಶ್ರಮಗಳು **ಭ್ರಷ್ಟಶ್ರಿಯಃ** ಸಂಪತ್ತನ್ನು ಕಳೆದುಕೊಂಡು **ನಿರಾನಂದಾಃ** ಸುಖವಿಲ್ಲವುಗಳಾಗಿ **ನಃ** ನಮಗೆ **ಕಿಂ ಅಘಂ ದರ್ಶಯಂತಿ** ಏನು ಅನಿಷ್ಟ ತೋರಿಸುವವೋ?

**ಮನ್ಯ ಏತೈರ್ಮಹೋತ್ಪಾತೈರ್ನೂನಂ ಭಗವತಃ ಪದೈಃ ।**
**ಅನನ್ಯಪುರುಷಸ್ತ್ರೀಭಿರ್ಹೀನಾ ಭೂರ್ಹತಸೌಭಗಾ ॥೨೧॥**

**ಏತೈಃ** ಈ ಎಲ್ಲ **ಮಹೋತ್ಪಾತೈಃ** ಅಪಶಕುನಗಳಿಂದ **ಅನನ್ಯಪುರುಷಸ್ತ್ರೀಭಿಃ** ಸೌಂದರ್ಯವಿಷಯದ ಮತ್ತೊಬ್ಬ ಪುರುಷಸ್ತ್ರೀಯರಿಂದ ರಹಿತವಾದ ಅಂದರೆ ಅಸದೃಶವಾದ **ಭಗವತಃ** ಶ್ರೀಕೃಷ್ಣನ **ಪದೈಃ** ಪಾದಗಳಿಂದ(ಸ್ವರೂಪದಿಂದ )**ಹೀನಾಃ** ರಹಿತಳಾದ **ಭೂಃ** ಭೂಮಿಯು **ಹತಸೌಭಗಾ** ಭಾಗ್ಯರಹಿತಳಾಗಿರುವಳೆಂದು **ನೂನಂ ಮನ್ಯೇ** ನಿಶ್ಚಯವಾಗಿ ತಿಳಿಯುವೆ. **ಅನನ್ಯಪುರುಷಸ್ತ್ರೀಭಿಃ** ಅನನ್ಯ ಭಗವದೇಕ ಶರಣರಾದ ಪುರುಷರು ಮತ್ತು ಸ್ತ್ರೀಯರಿಂದಲೂ **ಹೀನಾ** ರಹಿತಳಾದ ಎಂದೂ ಅರ್ಥಮಾಡಬಹುದು. ಅನನ್ಯಪುರುಷಸ್ತ್ರೀಭಿಃ ಎಂಬ ಪಾಠವಿದ್ದಲ್ಲಿ ಬೇರೆ ಪುರುಷರಲ್ಲಿ ಇಲ್ಲದಿರುವ ಶೋಭೆಯುಳ್ಳ ಎಂದರ್ಥ ಮಾಡಬೇಕು.

**ಇತಿ ಚಿಂತಯತಸ್ತಸ್ಯ ದೃಷ್ಟಾರಿಷ್ಟೇನ ಚೇತಸಾ ।**
**ರಾಜ್ಞಃ ಪ್ರತ್ಯಾಗಮದ್ಬ್ರಹ್ಮನ್ಯದುಪುರ್ಯಾಃ ಕಪಿಧ್ವಜಃ ॥೨೨॥**

**ತಸ್ಯ ರಾಜ್ಞಃ** ಧರ್ಮರಾಜನ **ಇತಿ** ಈ ರೀತಿಯಾದ **ದೃಷ್ಟಾರಿಷ್ಟೇನ ಚೇತಸಾ** ಅರಿಷ್ಟಗಳನ್ನು ಕಂಡ ಮನಸ್ಸಿನಿಂದ **ಚಿಂತಯತಃ ಸತಃ** ವಿಚಾರ ಮಾಡುತ್ತಿರಲು **ಬ್ರಹ್ಮನ್** ಶೌನಕರೇ **ಯದುಪುರ್ಯಾಃ** ದ್ವಾರಕೆಯಿಂದ **ಕಪಿಧ್ವಜಃ** ಅರ್ಜುನನು **ಪ್ರತ್ಯಾಗಮತ್** ತಿರುಗಿ ಬಂದನು.

**ತಂ ಪಾದಯೋರ್ನಿಪತಿತಮಯಥಾಪೂರ್ವಮಾತುರಮ್ ।**
**ಅಧೋ ವದನಮಬ್ಬಿಂದೂನ್ಸೃಜಂತಂ ನಯನಾಬ್ಜಯೋಃ ॥೨೩॥**

**ಪಾದಯೋಃ** ತನ್ನ ಪಾದಗಳ ಮೇಲೆ **ನಿಪತಿತಂ** ಬಿದ್ದಿರುವ **ಅಯಥಾಪೂರ್ವಂ** ಮೊದಲಿನಂತೆ ಇಲ್ಲದ **ಆತುರಂ** ರೋಗಿಷ್ಟನಂತೆ ಕಾಣುವ **ಅಧೋ ವದನಂ** ಕೆಳಗೆ ಮುಖ ಮಾಡಿದ **ನಯನಾಬ್ಜಯೋಃ** ಕಮಲದಂತಿರುವ ಕಣ್ಣುಗಳಿಂದ **ಬಿಂದೂನ್ ಮುಂಚಂತಂ** ನೀರನ್ನು ಸುರಿಸುವ ಅರ್ಜುನನನ್ನು

**ವಿಲೋಕ್ಯೋದ್ವಿಗ್ನಹೃದಯೋ ವಿಚ್ಛಾಯಮನುಜಂ ನೃಪಃ ।**
**ಪೃಚ್ಛತಿ ಸ್ಮ ಸುಹೃನ್ಮಧ್ಯೇ ಸಂಸ್ಮರನ್ನಾರದೇರಿತಮ್ ॥೨೪॥**

**ನೃಪಃ** ಯುಧಿಷ್ಠಿರನು **ವಿಚ್ಛಾಯಂ** ಕಳೆಗುಂದಿದ **ಅನುಜಂ** ತಮ್ಮನನ್ನು **ವಿಲೋಕ್ಯ** ನೋಡಿ **ಉದ್ವಿಗ್ನಹೃದಯಃ** ತ್ವರಿತಮನಸ್ಸುಳ್ಳವನಾಗಿ **ನಾರದೇರಿತಂ** ನಾರದರು ಹೇಳಿದ್ದನ್ನು **ಸಂಸ್ಮರನ್** ಜ್ಞಾಪಕ ಮಾಡಿಕೊಂಡು **ಸುಹೃನ್ಮಧ್ಯೇ** ಬಂಧುಗಳ ಮಧ್ಯದಲ್ಲಿ **ಪೃಚ್ಛತಿ ಸ್ಮ** ಕೇಳಿದನು.

**ಯುಧಿಷ್ಠಿರ ಉವಾಚ –**

**ಕಚ್ಚಿದಾನರ್ತಪುರ್ಯಾಂ ನಃ ಸ್ವಜನಾಃ ಸುಖಮಾಸತೇ ।**
**ಮಧುಭೋಜನದಶಾರ್ಹಾರ್ಹಸಾತ್ವತಾಂಧಕವೃಷ್ಣಯಃ ॥೨೫॥**

**ಆನರ್ತಪುರ್ಯಾಂ** ದ್ವಾರಕಾಪಟ್ಟಣದಲ್ಲಿ **ನಃ** ನಮ್ಮ **ಸ್ವಜನಾಃ** ಬಾಂಧವರಾದ ಮಧು, ಭೋಜ, ದಶಾರ್ಹ, ಅರ್ಹಸಾತ್ವಕ, ಅಂಧಕ, **ವೃಷ್ಣಯಃ** ಈ ಹೆಸರಿನ ಯಾದವರು **ಸುಖಂ ಆಸತೇ ಕಚ್ಚಿತ್** ಸುಖವಾಗಿರುವರಷ್ಟೇ.

**ಶೂರೋ ಮಾತಾಮಹಃ ಕಚ್ಚಿತ್ ಸ್ವಸ್ತ್ಯಾಸ್ತೇ ಚಾಥ ಮಾರಿಷಃ ।**
**ಮಾತುಲಃ ಸಾನುಜಃ ಕಚ್ಚಿತ್ ಕುಶಲ್ಯಾನಕದುಂದುಭಿಃ ॥೨೬॥**

**ಮಾರಿಷಃ** ಮಾನನೀಯನಾದ(ಮಾರಿಷ್ಯತೇ ವಚಸಾ ಅಪಿ ಅವಮಾನಹಿಂಸಾರ್ಹಃ ನ ಭವತೀತಿ ಮಾರಿಷಃ) **ಮಾತಾಮಹಃ** ತಾಯಿಯ ತಂದೆಯಾದ **ಶೂರಃ** ಶೂರರಾಜನು **ಸ್ವಸ್ತಿ ಆಸ್ತೇ ಕಚ್ಚಿತ್** ಸುಖವಾಗಿರುವನಷ್ಟೇ **ಅಥ** ನಂತರ **ಸಾನುಜಃ** ತಮ್ಮಂದಿರಿಂದ ಸಹಿತನಾಗಿ **ಮಾತುಲಃ** ಸೋದರಮಾವನಾದ (ತಾಯಿಯ ಸಹೋದರನು) **ಆನಕದುಂದುಭಿಃ** ವಸುದೇವನು **ಕುಶಲೀ ಕಚ್ಚಿತ್** ಕುಶಲದಿಂದ ಇರುವನಷ್ಟೇ.

**ಸಪ್ತಸ್ವಸಾರಃ ತತ್ಪತ್ನ್ಯೋ ಮಾತುಲಾನ್ಯಃ ಸಹಾತ್ಮಜಾಃ ।**
**ಆಸತೇ ಸಸ್ನುಷಾಃ ಕ್ಷೇಮಂ ದೇವಕೀಪ್ರಮುಖಾಃ ಸ್ತ್ರಿಯಃ ॥೨೭॥**

**ಸಪ್ತಸ್ವಸಾರಃ** ಏಳು ಜನ ಅಕ್ಕತಂಗಿಯರಾದ **ತತ್ಪತ್ನ್ಯಃ** ವಸುದೇವನ ಹೆಂಡಂದಿರಾದ **ಮಾತುಲಾನ್ಯಃ** ಸೋದರಮಾವನ ಹೆಂಡಂದಿರಾದ **ದೇವಕೀಪ್ರಮುಖಾಃ ಸ್ತ್ರಿಯಃ** ದೇವಕೀ ಮುಂತಾದ ಹೆಣ್ಣು ಮಕ್ಕಳು **ಸಹಾತ್ಮಜಾಃ** ಮಕ್ಕಳಿಂದ ಸಹಿತರಾಗಿ **ಸಸ್ನುಷಾಃ** ಸೊಸೆಯಂದಿರಿಂದ ಸಹಿತರಾಗಿ **ಕ್ಷೇಮಂ ಆಸತೇ** ಕ್ಷೇಮವಾಗಿರುವರಷ್ಟೇ.

**ಕಚ್ಚಿದ್ರಾಜಾಹುಕೋ ಜೀವತ್ಯಸತ್ಪುತ್ರೋಽಸ್ಯ ಚಾನುಜಃ ।**
**ಹೃದಿಕಃ ಸಸುತೋಽಕ್ರೂರೋ ಜಯಂತಗದಸಾರಣಾಃ ॥೨೮॥**

**ರಾಜಾ** ರಾಜನಾದ **ಆಹುಕಃ** ಆಹುಕನ ಮಗನಾದ ಉಗ್ರಸೇನನು **ಅಸತ್ಪುತ್ರಃ** ದುಷ್ಟನಾದ ಕಂಸನಿಗೆ ಮಗನಾಗಿವುಳ್ಳವನು **ಜೀವತಿ ಕಚ್ಚಿತ್** ಬದುಕಿರುವನಷ್ಟೇ ಮತ್ತು **ಅಸ್ಯ** ಉಗ್ರಸೇನನ **ಅನುಜಃ** ತಮ್ಮನಾದ ದೇವಕನು **ಸಸುತಃ** ಕೃತವರ್ಮನೆಂಬ ಮಗನಿಂದ ಸಹಿತನಾದ **ಹೃದಿಕಃ** ಹೃದಿಕನು ಅಥವಾ **ಸಸುತಃ ಅಕ್ರೂರಃ** ಮಕ್ಕಳಿಂದ ಸಹಿತನಾದ ಅಕ್ರೂರನು **ಜಯಂತಗದಸಾರಣಃ** ಜಯಂತ, ಗದ, ಸಾರಣರು ಕುಶಲರಾಗಿರುವರಷ್ಟೇ.

**ಆಸತೇ ಕುಶಲಂ ಕಚ್ಚಿದ್ಯೇ ಚ ಶತ್ರುಜಿದಾದಯಃ ।**
**ಕಚ್ಚಿದಾಸ್ತೇ ಸುಖಂ ರಾಮೋ ಭಗವಾನ್ ಸಾತ್ವತಾಂ ಪತಿಃ ॥೨೯॥**

**ಯೇ ಶತ್ರುಜಿದಾದಯಃ** ಯಾವ ಶತ್ರುಜಿತ ಮೊದಲಾದ ಶ್ರೀಕೃಷ್ಣನ ತಮ್ಮಂದಿರು ಇರುವರೋ ಅವರು **ಕುಶಲಂ ಆಸತೇ ಕಚ್ಚಿತ್** ಕುಶಲವಾಗಿರುವರೋ **ಭಗವಾನ್** ಪೂಜ್ಯನಾದ **ಸಾತ್ವತಾಂ ಪತಿಃ** ಯಾದವರಿಗೆ ನಾಯಕನಾದ **ರಾಮಃ** ಬಲರಾಮನು **ಸುಖಂ ಆಸ್ತೇ ಕಚ್ಚಿತ್** ಸುಖವಾಗಿರುವನೆ.

**ಪ್ರದ್ಯುಮ್ನಃ ಸರ್ವವೃಷ್ಣೀನಾಂ ಸುಖಮಾಸ್ತೇ ಮಹಾರಥಃ ।**
**ಗಂಭೀರರಯೋಽನಿರುದ್ಧೋ ವರ್ತತೇ ಭಗವಾನ್ ಉತ ॥೩೦॥**

**ಸರ್ವವೃಷ್ಣೀನಾಂ** ಎಲ್ಲ ಯಾದವರ ಮಧ್ಯದಲ್ಲಿ **ಮಹಾರಥಃ** ಮಹಾರಥಿಕನಾದ **ಪ್ರದ್ಯುಮ್ನಃ** ಪ್ರದ್ಯುಮ್ನನು **ಸುಖಂ ಆಸ್ತೇ** ಸುಖವಾಗಿದ್ದಾನೆ ತಾನೇ **ಗಂಭೀರರಯಃ** ಯುದ್ಧದಲ್ಲಿ ಮಹಾವೇಗವುಳ್ಳ **ಭಗವಾನ್ ಅನಿರುದ್ಧಃ** ಪೂಜ್ಯನಾದ ಅನಿರುದ್ಧನು **ವರ್ತತೇ ಉತ** ಸಂತೋಷವಾಗಿರುವನಷ್ಟೇ.

**ಸುಷೇಣಶ್ಚಾರುದೇಷ್ಣಶ್ಚ ಸಾಂಬೋ ಜಾಂಬವತೀಸುತಃ ।**
**ಅನ್ಯೇ ಚ ಕಾರ್ಷ್ಣಿಪ್ರವರಾಃ ಸಪುತ್ರಾಃ ಋಷಭಾದಯಃ ॥೩೦॥**

**ಸುಷೇಣಃ** ಸುಷೇಣನು **ಚ** ಮತ್ತು **ಚಾರುದೇಷ್ಣಃ** ಚಾರುದೇಷ್ಣನು(ಇವರು ರುಕ್ಮಿಣಿ ಪುತ್ರರು) **ಜಾಂಬವತೀಸುತಃ** ಜಾಂಬವತಿಯ ಮಗನಾದ **ಸಾಂಬಃ** ಸಾಂಬನು **ಅನ್ಯೇಚ** ಇನ್ನುಳಿದ **ಸಪುತ್ರಾಃ** ಮಕ್ಕಳಿಂದ ಸಹಿತರಾದ **ಋಷಭಾದಯಃ** ಋಷಭ ಮುಂತಾದ **ಕಾರ್ಷ್ಣಿಪ್ರವರಾಃ** ಕೃಷ್ಣನ ಮಕ್ಕಳಲ್ಲಿ ಶ್ರೇಷ್ಠರಾದವರು.

**ತಥೈವಾನುಚರಾಃ ಶೌರೇಃ ಶ್ರುತಸೇನೋದ್ಧವಾದಯಃ ।**
**ಸುನಂದನಂದಶೀರ್ಷಣ್ಯಾ ಯೇ ಚಾನ್ಯೇ ಸಾತ್ವತರ್ಷಭಾಃ ॥೩೧॥**

**ತಥಾ ಏವ** ಹಾಗೆಯೇ **ಶೌರೇಃ** ಶ್ರೀಕೃಷ್ಣನ **ಅನುಚರಾಃ** ಭೃತ್ಯರಾದ **ಶ್ರುತಸೇನೊದ್ಧವಾದಯಃ** ಶ್ರುತಸೇನ ಉದ್ಧವ ಮೊದಲಾದವರು **ಸುನಂದನಂದ ಶೀರ್ಷಣ್ಯಾಃ** ಸುನಂದನಂದರೆ ಪ್ರಧಾನರಾಗಿವುಳ್ಳವರು **ಯೇ ಚ ಅನ್ಯೇ ಸಾತ್ವತರ್ಷಭಾಃ** ಇನ್ನುಳಿದ ಯಾದವಶ್ರೇಷ್ಠರು.

**ಅಪಿ ಸ್ವಸ್ತ್ಯಾಸತೇ ಸರ್ವೇ ರಾಮಕೃಷ್ಣಭುಜಾಶ್ರಯಾಃ ।**
**ಅಪಿ ಸ್ಮರಂತಿ ಕುಶಲಮಸ್ಮಾಕಂ ಬದ್ಧಸೌಹೃದಾಃ ॥೩೨॥**

**ರಾಮಕೃಷ್ಣಭುಜಾಶ್ರಯಾಃ** ಬಲರಾಮ ಶ್ರೀಕೃಷ್ಣರ ಭುಜವನ್ನಾಶ್ರಯಿಸಿದ **ಸರ್ವೇ** ಎಲ್ಲರೂ **ಸ್ವಸ್ತಿ ಆಸತೇ ಅಪಿ** ಸುಖವಾಗಿರುವರಲ್ಲವೇ **ಬದ್ಧಸೌಹೃದಾಃ** ನಮ್ಮ ಮೇಲಿನ ಸ್ನೇಹದಿಂದ **ಅಸ್ಮಾಕಂ** ನಮ್ಮ **ಕುಶಲಂ ಸ್ಮರಂತಿ ಅಪಿ** ಕ್ಷೇಮವನ್ನು ನೆನಪಿಸುವರೆ

**ಭಗವಾನಪಿ ಗೋವಿಂದೋ ಬ್ರಹ್ಮಣ್ಯೋ ಭಕ್ತವತ್ಸಲಃ ।**
**ಕಚ್ಚಿತ್ಪುರೇ ಸುಧರ್ಮಾಯಾಂ ಸುಖಮಾಸ್ತೇ ಸುಹೃದೇ ವೃತಃ ॥೩೪॥**

**ಬ್ರಹ್ಮಣ್ಯಃ** ಬ್ರಾಹ್ಮಣ ವತ್ಸಲನಾದ **ಭಕ್ತವತ್ಸಲಃ** ಭಕ್ತಪ್ರಿಯನಾದ **ಭಗವಾನ್** ಷಡ್ಗುಣ ಸಂಪನ್ನನಾದ **ಗೋವಿಂದಃ** ಶ್ರೀಕೃಷ್ಣನು **ಸುಹೃದ್ ವೃತಃ** ಬಂಧು ಸಹಿತನಾಗಿ **ಪುರೇ** ದ್ವಾರಕೆಯಲ್ಲಿ **ಸುಧರ್ಮಾಯಾಂ** ಸುಧರ್ಮ ಎಂಬ ಸಭೆಯಲ್ಲಿ **ಸುಖಂ ಆಸ್ತೇ ಕಚ್ಚಿತ್** ಅನ್ಯರಿಗೆ ಸುಖಜನಕನಾಗಿರುವನಷ್ಟೇ.

*ಭಾಗವತತಾತ್ಪರ್ಯ-*

ಮೇಲಿನ ಶ್ಲೋಕದಲ್ಲಿ ಎಲ್ಲರ ಕುಶಲ ಪ್ರಶ್ನೆ ಮಾಡಿದಂತೆ ತೋರುವುದು.ಅದು ಸರಿಯಲ್ಲ ಕಾರಣ ಅಭಿಪ್ರಾಯ ಹೇಳುವರು.

**ಯಥಾಽನ್ಯೇಷಾಂ ಸುಖಂ ಭವಿಷ್ಯತಿ ತಥಾ । ನಿತ್ಯಸುಖತ್ವಾದ್ಧರೇಃ । ಅತ್ಯುತ್ತಮಾನಾಂ ಕುಶಲಪ್ರಶ್ನೋ ಲೋಕಸುಖೇಚ್ಛಯಾ । ನಿತ್ಯದಾಽಽಪ್ತಸುಖತ್ವಾತ್ತು ನ ತೇಷಾಂ ಯುಜ್ಯತೇ ಕ್ವಚಿತ್ ॥ ಇತಿ ನಾರದೀಯೇ ॥೩೪॥**

ಶ್ರೀಕೃಷ್ಣನಿಗೆ ನಿತ್ಯದಲ್ಲಿಯೂ ಸುಖವಿದ್ದುದರಿಂದ ಇತರರಿಗೆ ಸುಖ ಆಗುವ ಹಾಗೆ ಇದ್ದಾನೋ ಎಂದು ಅರ್ಥ ಮಾಡಬೇಕು. ಸರ್ವೋತ್ತಮನಾದ ಭಗವಂತನ ಅವತಾರಗಳು ಲೋಕಕ್ಕೆ ಸುಖವನ್ನು ಮಾಡಬೇಕೆಂಬ ಇಚ್ಛೆಯಿಂದ ಕುಶಲಪ್ರಶ್ನೆಯು. ನಿರಂತರದಲ್ಲಿಯೂ ಸುಖಪರಿಪೂರ್ಣಗಳೇ ಆದುದರಿಂದ ಆ ಭಗವದವತಾರಗಳಿಗೆ ಎಂದೂ ಹುಟ್ಟತಕ್ಕ ಸುಖವಿಲ್ಲ ಎಂದು ನಾರದಪುರಾಣದಲ್ಲಿದೆ. ಯಾವಾಗಲಾದರೊಮ್ಮೆ ಸುಖ ಬರುವ ವಿಷಯದಲ್ಲಿ ಈ ರೀತಿ ಪ್ರಶ್ನೆ ಮಾಡಬಹುದೇ ಹೊರತು ನಿತ್ಯಸುಖ ಇರುವವರನ್ನಲ್ಲವೆಂದು ಭಾವ.

ಇದನ್ನೇ ನಾಲ್ಕು ಶ್ಲೋಕಗಳಿಂದ ತಿಳಿಸುವರು.

**ಮಂಗಲಾಯ ಚ ಲೋಕಾನಾಂ ಕ್ಷೇಮಾಯ ಚ ಭವಾಯ ಚ ।**
**ಆಸ್ತೇ ಯದುಕುಲಾಂಭೋಧಾವಾದ್ಯೋಽನಂತಸುಖಃ ಪುಮಾನ್ ॥೩೫॥**

**ಲೋಕಾನಾಂ** ಜನರ **ಮಂಗಲಾಯ** ಶುಭವನ್ನುಂಟುಮಾಡಲು **ಕ್ಷೇಮಾಯ** ಪ್ರಾಪ್ತವಾದುದರ ರಕ್ಷಣೆಗಾಗಿ **ಭವಾಯ** ಅಪ್ರಾಪ್ತಲಾಭಕ್ಕಾಗಿ **ಯದುಕುಲಾಂಭೋಧೌ** ಯದುಕುಲಸಮುದ್ರದಲ್ಲಿ **ಅನಂತಸುಖಃ** ಬಲರಾಮನೇ ಸಖನಾಗಿವುಳ್ಳ **ಆದ್ಯಃ ಪುಮಾನ್** ಸರ್ವಜಗತ್ತಿಗೆ ಕಾರಣನಾದ ಶ್ರೀಕೃಷ್ಣನು **ಆಸ್ತೇ** ಇರುವನು.

**ಯದ್ಬಾಹುದಂಡೈರ್ಗುಪ್ತಾಯಾಂ ಸ್ವಪುರ್ಯಾಂ ಯದವೋಽರ್ಚಿತಾಃ ।**
**ಕ್ರೀಡಂತಿ ಪರಮಾನಂದಂ ಮಹಾಪೌರುಷಿಕಾ ಇವ ॥೩೬॥**

**ಯದವಃ** ಯಾದವರು **ಯದ್ಬಾಹುದಂಡೈಃ** ಯಾವ ಶ್ರೀಕೃಷ್ಣನ ಬಾಹುಗಳಿಂದ **ಗುಪ್ತಾಯಾಂ** ರಕ್ಷಿತವಾದ **ಸ್ವಪುರ್ಯಾಂ** ತಮ್ಮ ಪಟ್ಟಣದಲ್ಲಿ **ಮಹಾಪೌರುಷಿಕಾ ಇವ** ಶ್ರೀಹರಿಯ ಭಕ್ತರಾದ ಮುಕ್ತರಂತೆ **ಅರ್ಚಿತಾಃ** ಎಲ್ಲರಿಂದ ಪೂಜಿತರಾಗಿ **ಪರಮಾನಂದಂ ಕ್ರೀಡಂತಿ** ಪರಮಾನಂದವಾಗುವಂತೆ ಕ್ರೀಡಿಸುವರು.

**ಯತ್ಪಾದಶುಶ್ರೂಷಣಮುಖ್ಯಕರ್ಮಣಾ**
**ಸತ್ಯಾದಯೋ ದ್ವ್ಯಷ್ಟಸಹಸ್ರಯೋಷಿತಃ ।**
**ನಿರ್ಜಿತ್ಯ ಸಂಖ್ಯೇ ತ್ರಿದಶಾಂಸ್ತದಾಶಿಷೋ**
**ಹರಂತಿ ವಜ್ರಾಯುಧವಲ್ಲಭೋಚಿತಾಃ ॥೩೭॥**

**ಯತ್ಪಾದಶುಶ್ರೂಷಣಮುಖ್ಯಕರ್ಮಣಾ** ಯಾವ ಶ್ರೀಕೃಷ್ಣನ ಸೇವೆಯೇ ತಪಸ್ಸು ಮೊದಲಾದವುಗಳಿಗಿಂತ ಶ್ರೇಷ್ಠವಾದ ಕರ್ಮದಿಂದ **ಸತ್ಯಾದಯಃ** ಸತ್ಯಭಾಮೆಯೇ ಮೊದಲಾದ **ದ್ವ್ಯಷ್ಟಸಹಸ್ರಯೋಷಿತಃ** ಹದಿನಾರು ಸಾವಿರ ಸ್ತ್ರೀಯರು **ಸಂಖ್ಯೇ** ಯುದ್ಧದಲ್ಲಿ **ತ್ರಿದಶಾನ್** ಇಂದ್ರಾದಿದೇವತೆಗಳನ್ನು **ನಿರ್ಜಿತ್ಯ** ಸೋಲಿಸಿ **ವಜ್ರಾಯುಧವಲ್ಲಭೋಚಿತಃ** ಇಂದ್ರನ ಪತ್ನಿಯಾದ ಶಚಿಗೆ ಯೋಗ್ಯವಾದ **ತದಾಶಿಷಃ ಹರಂತಿ** ಅವರಿಗೆ ಅಭೀಷ್ಟವಾದ ಪಾರಿಜಾತಾದಿಗಳನ್ನು ಅವರಿಂದ ಕಿತ್ತುಕೊಳ್ಳುವರು.

**ಯದ್ಬಾಹುದಂಡಾಭ್ಯುದಯಾನುಜೀವಿನೋ**
**ಯದುಪ್ರವೀರಾಃ ಹ್ಯಕುತೋ ಭಯಾಃ ಮುಹುಃ ।**
**ಅಧಿಕ್ರಮಂತ್ಯಂಘ್ರಿಭಿರಾಹೃತಾಂ ಬಲಾತ್**
**ಸಭಾಂ ಸುಧರ್ಮಾಂ ಸುರಸತ್ತಮೋಚಿತಾಮ್ ॥೩೮॥**

**ಯದ್ಬಾಹುದಂಡಾಭ್ಯುದಯಾನುಜೀವಿನಃ** ಯಾವ ಶ್ರೀಕೃಷ್ಣನ ಭುಜದಂಡಗಳ ಪ್ರಭಾವದಿಂದ ಬದುಕುವ ಆದ್ದರಿಂದಲೇ **ಅಕುತೋಭಯಾಃ** ಯಾರಿಂದಲೂ ಭಯವಿಲ್ಲದೇ **ಯದುಪ್ರವೀರಾಃ** ಯಾದವಶ್ರೇಷ್ಠರು **ಸುರಸತ್ತಮೋಚಿತಾಂ** ಇಂದ್ರನಿಗೆ ಉಚಿತವಾದ **ಬಲಾತ್ ಆಹೃತಾಂ** ಬಾಹುಬಲದಿಂದ ತರಲ್ಪಟ್ಟ **ಸುಧರ್ಮಾಂ ಸಭಾಂ** ಸುಧರ್ಮ ಎಂಬ ಸಭೆಯನ್ನು **ಅಂಘ್ರಿಭಿಃ** ತಮ್ಮ ಪಾದಗಳಿಂದ **ಮುಹುಃ** ಪ್ರತಿದಿನವೂ **ಅಧಿಕ್ರಮಂತಿ** ಆಕ್ರಮಿಸಿ ಇರುವರು. ಅಂಥ ಗೋವಿಂದನು ಸುಖಂ ಆಸ್ತೇ ಎಂದು ಹಿಂದೆ ಅನ್ವಯ. ಇದರಿಂದ **ಲೋಕಾನಾಂ** ಯಾದವರಿಗೂ ಸತ್ಯಭಾಮಾದಿ ಸ್ವಸ್ತ್ರೀಯರಿಗೂ ಸುಖವಾಗುವಂತೆ ಇರುವನಷ್ಟೇ ಎಂದು ಪ್ರಶ್ನಾಭಿಪ್ರಾಯ ತಿಳಿಸಿದಂತಾಯಿತು ಎಂದು ತಿಳಿಯಿರಿ.

**ಕಚ್ಚಿತ್ತೇಽನಾಮಯಂ ತಾತ ಭ್ರಷ್ಟತೇಜಾ ವಿಭಾಸಿ ಮೇ ।**
**ಅಲಬ್ಧಮಾನೋಽವಜ್ಞಾತಃ ಕಿಂ ವಾ ತಾತ ಚಿರೋಷಿತಃ ॥೩೯॥**

**ಹೇ ತಾತ** ಎಲೋ ಅರ್ಜುನನೇ **ತೇ ಅನಾಮಯಂ ಕಚ್ಚಿತ್** ನಿನ್ನ ಆರೋಗ್ಯ ಚೆನ್ನಾಗಿದೆಯಷ್ಟೇ **ಮೇ** ನನಗೆ **ಭ್ರಷ್ಟತೇಜಾಃ ವಿಭಾಸಿ** ಕಾಂತಿಯನ್ನು ಕಳೆದು ಕೊಂಡವನಂತೆ ಕಾಣುವಿ. ಅದಕ್ಕೆ ಕಾರಣವೇನು **ಅಲಬ್ಧಮಾನಃ ಕಿಂ** ಬಂಧುಗಳಿಂದ ಮಾನ ದೊರೆಯಲಿಲ್ಲವೇ? **ಅವಜ್ಞಾತಃ ಕಿಂ** ಮಾನ ಸಿಗುವದು ಬೇಡ ತಿರಸ್ಕಾರ ಹೊಂದಿದೆಯಾ? ಪಾಪ ಅರ್ಜುನನೇ **ಚಿರೋಷಿತಃ** ಹಿಂದೆ ದ್ವಾರಕೆಗೆ ಹೋದಾಗ ಬಹುಕಾಲ ವಾಸಿಸಿದ್ದಿ ಈಗ ಏಳೇ ದಿನದಲ್ಲಿ ತಿರುಗಿ ಬಂದಿರುವಿ ಕಾರಣ ಅವಮಾನಾದಿಗಳಾಗಿರಬಹುದೇ ಎಂದು ಭಾವ.

*ಭಾಗವತತಾತ್ಪರ್ಯ -*

ಇಲ್ಲಿ ಚಿರೋಷಿತಃ ಎನ್ನುವದು ಸರಿಯಲ್ಲ ಏಳೇ ದಿನಕ್ಕೆ ತಿರುಗಿ ಬಂದಿರುವನೆಂದು ಹಿಂದೆಯೇ ಹೇಳಿದೆ. ಅದಕ್ಕೆ ಕಾರಣವನ್ನು ವಿವಕ್ಷಿತ ತಾತ್ಪರ್ಯ ಮೂಲಕ ಹೇಳುವರು. 'ಪೂರ್ವಂ ಚಿರೋಷಿತಃ' ।

ಹಿಂದೆ ದ್ವಾರಕೆಗೆ ಹೋದಾಗ ಬಹಳ ದಿವಸ ದ್ವಾರಕೆಯಲ್ಲಿ ವಾಸಮಾಡಿದ್ದಿ. ಈಗ ಬೇಗನೇ ಬಂದಿರುವಿ ಕಾರಣ ಅವಮಾನಾದಿಗಳೇನಾದರೂ ಆದವೇ ಎಂದು ಭಾವ

**ಕಚ್ಚಿನ್ನಾಭಿಹಿತೋ ಭಾವೈಃ ಶಬ್ದಾದಿಭಿರಮಂಗಲೈಃ ।**
**ನ ದತ್ತಂ ಯುಕ್ತಮರ್ಥಿಭ್ಯ ಆಶಯಾ ಯತ್ಪ್ರತಿಶ್ರುತಮ್ ॥೪೦॥**

**ಅಮಂಗಲೈಃ** ಅಶುಭವಾದ **ಶಬ್ದಾದಿಭಿಃ ಭಾವೈಃ** ಶಬ್ದ ಸ್ಪರ್ಶ ರೂಪ ರಸ ಗಂಧ ಮೊದಲಾದ ಪದಾರ್ಥಗಳಿಂದ ಅಭಿಹಿತ **ನ ಕಚ್ಚಿತ್** ಸಂಬದ್ಧನಾಗಿಲ್ಲ ತಾನೇ **ಆಶಯಾ ಯುಕ್ತಂ** ಅವರ ಆಶೆಗೆ ವಿಷಯವಾದ **ಯತ್ಪ್ರತಿಶ್ರುತಂ** ಏನು ಕೊಡುವನೆಂದು ಪ್ರತಿಜ್ಞೆ ಮಾಡಿದ್ದಿಯೋ **ತತ್** ಅದು **ಅರ್ಥಿಭ್ಯಃ ನ ದತ್ತಂ ಕಚ್ಚಿತ್** ಕೊಡಲಿಲ್ಲವೇ?

**ಕಚ್ಚಿತ್ ತ್ವಂ ಬ್ರಾಹ್ಮಣಂ ಬಾಲಂ ಗಾಂ ವೃದ್ಧಂ ರೋಗಿಣಂ ಸ್ತ್ರಿಯಮ್ ।**
**ಶರಣ್ಯೋಪಸೃತಂ ಸತ್ತ್ವಂ ನಾತ್ಯಾಕ್ಷೀಃ ಶರಣಪ್ರದಃ ॥೪೧॥**

**ಶರಣಪ್ರದಃ** ನೀನು ಹಿಂದೆ ಮೊರೆ ಹೊಕ್ಕವರಿಗೆ ಆಶ್ರಯದಾತನು **ಶರಣ್ಯೋಪಸೃತಂ** ಶರಣು ಹೊಂದಲು ಯೋಗ್ಯನಾದ **ಬ್ರಾಹ್ಮಣಂ** ಬ್ರಾಹ್ಮಣನನ್ನು **ಬಾಲಂ** ಹುಡುಗನನ್ನು **ಗಾಂ** ಆಕಳನ್ನು **ವೃದ್ಧಂ** ಮುದುಕರನ್ನು **ರೋಗಿಣಂ** ರೋಗ ಬಂದವನನ್ನು **ಸ್ತ್ರಿಯಂ** ಸ್ತ್ರೀಯರನ್ನು **ಸತ್ವಂ** ಪ್ರಾಣಸಮೂಹವನ್ನು **ನ ಅತ್ಯಾಕ್ಷೀಃ** ರಕ್ಷಿಸದೇ ಬಿಟ್ಟಿಲ್ಲತಾನೇ.

**ಕಚ್ಚಿತ್ತ್ವಂ ನಾಗಮೋಽಗಮ್ಯಾಂ ಗಮ್ಯಾಂ ವಾಽಸತ್ಕೃತಾಂ ಸ್ತ್ರಿಯಮ್ ।**
**ಪರಾಜಿತೋ ವಾಽಥ ಭವಾನ್ನೋತ್ತಮೈರ್ನಾಧಮೈಃ ಪಥಿ ॥೪೨॥**

**ತ್ವಂ** ನೀನು **ಅಗಮ್ಯಾಂ** ಗಮನಮಾಡಲು ಅಯೋಗ್ಯಳಾದ ವಿಧವೆ ಅಥವಾ ನಿಷಿದ್ಧಳಾದ ಪರಸ್ತ್ರೀ **ಗಮ್ಯಾಂ** ಗಮನಯೋಗ್ಯಳಾದರೂ **ಅಸತ್ಕೃತಾಂ**(ಅಸಂಸ್ಕೃತಾಂ) ಸ್ನಾನಾದಿಸಂಸ್ಕಾರವಿಲ್ಲದ ಅಥವಾ ನೀನು ಮದುವೆಯಾಗದ **ಸ್ತ್ರಿಯಮ್** ಸ್ತ್ರೀಯರನ್ನು **ನ ಆಗಮಃ ಕಚ್ಚಿತ್** ಗಮನ ಮಾಡಿಲ್ಲವಷ್ಟೇ **ಪಥಿ** ಹಾದಿಯಲ್ಲಿ **ಉತ್ತಮೈಃ ಆಧಮೈಃ** ದೊಡ್ಡವರಿಂದಲೋ, ನೀಚರಿಂದಲೋ, **ಪರಾಜಿತಃ ಭವಾನ್ ನ ಕಿಂ** ನೀನು ಸೋತಿಲ್ಲ ತಾನೇ ?

**ಅಪಿ ಸ್ವಿತ್ ಪರ್ಯಭುಂಕ್ಥಾಸ್ತ್ವಂ ಸಂಭೋಜ್ಯಾನ್ ವೃದ್ಧಬಾಲಕಾನ್ ।**
**ಜುಗುಪ್ಸಿತಂ ಕರ್ಮ ಕಿಂಚಿತ್ ಕೃತವಾನಸದಕ್ಷಮಮ್ ॥೪೩॥**

**ತ್ವಂ** ನೀನು **ಆವೃದ್ಧಬಾಲಕಾನ್** ಬಾಲಕರಿಂದ ಪ್ರಾರಂಭಿಸಿ ವೃದ್ಧರ ವರೆಗೆ ಎಲ್ಲರನ್ನು **ಸಂಭೋಜ್ಯ** ಊಟಮಾಡಿಸಿ **ಪರ್ಯಭುಂಕ್ಥಾಃ ಕಚ್ಚಿತ್** ಊಟಮಾಡಿರುವಿ ತಾನೇ ಅಥವಾ **ಸಂಭೋಜ್ಯಾನ್** ಉಣಿಸಲು ಯೋಗ್ಯರಾದ **ವೃದ್ಧಬಾಲಕಾನ್** ಮುದುಕರು ಮಕ್ಕಳುಗಳನ್ನು ಬಿಟ್ಟು ಊಟಮಾಡಿದೆಯಾ? **ಅಕ್ಷಮಂ** ಮಾಡಬಾರದ **ಜುಗುಪ್ಸಿತಂ** ಶಾಸ್ತ್ರನಿಷಿದ್ಧವಾದ **ಅಸತ್‌ಕರ್ಮ** ದುಷ್ಟಕಾರ್ಯವನ್ನು **ಕಿಂಚಿತ್ ಕೃತವಾನ್ ಕಚ್ಚಿತ್** ಏನಾದರೂ ಮಾಡಿದೆಯಾ?

**ಕಚ್ಚಿತ್ ಪ್ರೇಷ್ಠತಮೇನಾಥ ಹೃದಯೇನಾತ್ಮಬಂಧುನಾ ।**
**ಶೂನ್ಯೋಽಸಿ ರಹಿತೋ ನಿತ್ಯಂ ಮನ್ಯಸೇ ತೇಽನ್ಯಥಾ ಹಿ ರುಕ್ ॥೪೪॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ತ್ರಯೋದಶೋಧ್ಯಾಯಃ ॥

**ಹಿ** ಯಾವ ಕಾರಣ **ತೇ** ನಿನ್ನ **ರುಕ್** ಕಾಂತಿಯು **ಅನ್ಯಥಾ** ಮೊದಲಿನಂತಿಲ್ಲ ಕಾರಣ ನಿತ್ಯಂ ಸರ್ವದಾ **ಪ್ರೇಷ್ಠತಮೇನ** ಅತ್ಯಂತ ಪ್ರಿಯನಾದ **ಹೃದಯೇನ** ಮನೋಗತನಾದ **ಆತ್ಮಬಂಧುನಾ** ನಿನಗೆ ಬಂಧುವಾದ ಶ್ರೀಕೃಷ್ಣನಿಂದ **ರಹಿತಃ ಅಪಿ** ರಹಿತನಾಗಿರುವಿ **ಯತಃ** ಯಾವ ಕಾರಣ **ಆತ್ಮಾನಂ** ನಿನ್ನನ್ನು **ಶೂನ್ಯೋಽಸಿ** ಶೂನ್ಯನಾಗಿರುವೆನೆಂದು **ಮನ್ಯಸೇ ಕಚ್ಚಿತ್** ತಿಳಿದಿರುವಿಯಷ್ಟೇ? ಆದ್ದರಿಂದ ಈ ರೀತಿ ಪ್ರಶ್ನೆ ಕೇಳಿದನೆಂದು ಭಾವ.

ಇಲ್ಲಿಗೆ ಹದಿಮೂರನೇ ಅಧ್ಯಾಯವು ಮುಗಿಯಿತು

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಚತುರ್ದಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಅರ್ಜುನ ಶ್ರೀಕೃಷ್ಣನ ವಿಯೋಗದಿಂದ ಖಿನ್ನಮನಸ್ಕನಾಗಿದ್ದ. ಧರ್ಮರಾಜನ ಪ್ರಶ್ನೆಗಳಿಗೆ ಉತ್ತರಿಸುವ ಸ್ಥಿತಿಯಲ್ಲಿ ಅವನಿರಲಿಲ್ಲ. ನಾನು ಪರಮಾಪ್ತನಾದ ಶ್ರೀಕೃಷ್ಣನ ಒಡನಾಟದಿಂದ ವಂಚಿತನಾಗಿದ್ದೇನೆ. ನಮ್ಮ ಪ್ರತಿ ಹಂತದ ವಿಜಯಗಳಿಗೂ, ಸುಖಸಮೃದ್ಧಿಗಳಿಗೂ ಅವನೇ ಕಾರಣನಾಗಿದ್ದ. ನಾನು ಅವನನ್ನು ಮನುಷ್ಯನೆಂದು ತಿಳಿದು ಅವನ ಜೊತೆಗೆ ಸಮಾನ ಆಸನದಲ್ಲಿ ಕೂಡುತ್ತಿದ್ದೆ. ಒಂದೇ ಆಸನದಲ್ಲಿ ಮಲಗುತ್ತಿದ್ದೆ. ಅವನ ಮುಂದೆ ಅದೆಷ್ಟು ಬಾರಿ ನನ್ನ ಹೆಗ್ಗಳಿಕೆಯ ಮಾತುಗಳನ್ನು ಆಡಿದ್ದೇನೋ ಗೊತ್ತಿಲ್ಲ ಅದೆಲ್ಲವನ್ನೂ ಅವನು ಸಹಿಸಿದ. ಅವನು ಇಲ್ಲದ ನನ್ನ ತೇಜಸ್ಸು ಅವನೊಂದಿಗೇ ಹೊರಟು ಹೋಯಿತು. ಇನ್ನೂ ಅನೇಕ ಘಟನೆಗಳನ್ನು ಮೆಲಕು ಹಾಕುತ್ತಿದ್ದಂತೆ ಅವನ ಮನಸ್ಸು ಕೃಷ್ಣನ ಪಾದಕಮಲದಲ್ಲಿಯೇ ಆಸಕ್ತವಾಯಿತು.

**ಶ್ರೀಕೃಷ್ಣನ ವಿಯೋಗದಿಂದ ದುಃಖಿತನಾದ ಅರ್ಜುನ**

ಭಗವಂತನಲ್ಲಿ ಭಕ್ತಿ ಮಾಡಬೇಕೆಂದು ಹೇಳಲು ದುಃಖಗಳನ್ನು ಹೇಳುವ ನೆಪದಿಂದ ಭಗವಂತನ ಮಹಿಮೆಯನ್ನು ಈ ಅಧ್ಯಾಯದಲ್ಲಿ ಹೇಳುವರು.

**ಸೂತ ಉವಾಚ -**

**ಏವಂ ಕೃಷ್ಣಸಖಃ ಕೃಷ್ಣೋ ಭ್ರಾತ್ರಾ ರಾಜ್ಞಾ ವಿಕಲ್ಪಿತಃ ।**
**ನಾನಾಶಂಕಾಸ್ಪದಂ ರೂಪಂ ಕೃಷ್ಣವಿಶ್ಲೇಷಕರ್ಶಿತಃ ॥೧॥**

**ಶೋಕಾಗ್ನಿಶುಷ್ಯದ್ವದನಹೃತ್ಸರೋಜಂ ಹತಪ್ರಭಮ್ ।**
**ವಿಭುಂ ತಮೇವಾನುಧ್ಯಾಯನ್ ನಾಶಕ್ನೋತ್ಪ್ರತಿಭಾಷಿತುಮ್ ॥೨॥**

**ನಾನಾಶಂಕಾಸ್ಪದಂ** ಹಿಂದಿನ ಅಧ್ಯಾಯದಲ್ಲಿ ಹೇಳಿದ ಅನೇಕ ಶಂಕೆಗಳಿಗೆ ವಿಷಯವಾದ **ಶೋಕಾಗ್ನಿಶುಷ್ಯದ್ವದನಹೃತ್ಸರೋಜಂ** ದುಃಖವೆಂಬ ಅಗ್ನಿಯಿಂದ ಒಣಗಿದ ಮುಖ ಹೃದಯಕಮಲಗಳುಳ್ಳ **ಹತಪ್ರಭಂ** ಕಾಂತಿಯಿಲ್ಲದ **ರೂಪಂ** ಶರೀರವನ್ನು **ದೃಷ್ಟ್ವಾ** ನೋಡಿ **ಭ್ರಾತ್ರಾ ರಾಜ್ಞಾ** ಅಣ್ಣನಾದ ಧರ್ಮರಾಜನಿಂದ **ವಿಕಲ್ಪಿತಃ** ಹೀಗೋ ಹಾಗೋ ಎಂದು ಅನೇಕ ಪ್ರಶ್ನೆ ಮಾಡಲ್ಪಟ್ಟು **ಕೃಷ್ಣವಿಶ್ಲೇಷಕರ್ಶಿತಃ** ಶ್ರೀಕೃಷ್ಣನ ಸ್ನೇಹಿತನಾದ ಅರ್ಜುನನು **ತಮೇವ ವಿಭುಂ** ಆ ಕೃಷ್ಣನನ್ನೇ **ಅನುಧ್ಯಾಯನ್** ಸ್ಮರಿಸುತ್ತಾ **ಪ್ರತಿಭಾಷಿತುಂ ನ ಅಶಕ್ನೋತ್** ಉತ್ತರ ಕೊಡಲು ಸಮರ್ಥನಾಗಲಿಲ್ಲ.

**ಕೃಚ್ಛ್ರೇಣ ಸಂಸ್ತಭ್ಯ ಶುಚಃ ಪಾಣಿನಾಮೃಜ್ಯ ನೇತ್ರಜಮ್ ।**
**ಪಾರೋಕ್ಷ್ಯೇಣ ಸಮುನ್ನದ್ಧಪ್ರಣಯೌತ್ಕಂಠ್ಯಕಾತರಃ ॥೩॥**

**ಶುಚಃ** ಅನೇಕಕಾರಣಗಳಿಂದಾಗಿ ದುಃಖಗಳನ್ನು **ಕೃಚ್ಛ್ರೇಣ** ಕಷ್ಟದಿಂದ **ಸಂಸ್ತಭ್ಯ** ತಡೆದುಕೊಂಡು **ನೇತ್ರಜಂ** ಕಣ್ಣೀರನ್ನು **ಪಾಣಿನಾ** ಕೈಯಿಂದ **ಆಮೃಜ್ಯ** ಒರಿಸಿಕೊಂಡು **ಪಾರೋಕ್ಷ್ಯೇಣ** ಶ್ರೀಕೃಷ್ಣನು ಕಣ್ಣಿಗೆ ಕಾಣದ್ದರಿಂದ **ಸಮುನ್ನದ್ಧ** ಸಮೃದ್ಧವಾದ **ಪ್ರಣಯೌತ್ಕಂಠ್ಯ** ಯಾವಾಗ ನೋಡಿಯೇನೋ ಎಂಬ ಸ್ನೇಹದ ಉತ್ಕಂಠೆಯಿಂದ **ಕಾತರಃ** ವಿವಶನಾದವನಾಗಿ

**ಸಖ್ಯಂ ಮೈತ್ರೀಂ ಸೌಹೃದಂ ಚ ಸಾರಥ್ಯಾದಿಷು ಸಂಸ್ಮರನ್ ।**
**ನೃಪಮಗ್ರಜಮಿತ್ಯಾಹ ಬಾಷ್ಪಗದ್ಗದಯಾ ಗಿರಾ ॥೪॥**

**ಸಾರಥ್ಯಾದಿಷು** ಸಾರಥ್ಯ ಮಾಡುವದೆ ಮೊದಲಾದ ಕಾರ್ಯಗಳಲ್ಲಿ **ಸಖ್ಯಂ** ಸ್ನೇಹವನ್ನು **ಮೈತ್ರೀಂ** ಉಪಕಾರವನ್ನು ಕಷ್ಟಗಳಿಗೆ ನಿಮಿತ್ತಗಳನ್ನು ತಿಳಿಸಿ ರಕ್ಷಿಸುವುದನ್ನು **ಸೌಹೃದಂ** ಪ್ರತ್ಯುಪಕಾರದ ಅಪೇಕ್ಷೆ ಇಲ್ಲದೇ ಉಪಕಾರ ಮಾಡುವದನ್ನು ಅಥವಾ ಬಂಧುತ್ವವನ್ನು ಸ್ನೇಹವನ್ನು **ಸಂಸ್ಮರನ್** ನೆನಪಿಸಿಕೊಳ್ಳುತ್ತ **ಬಾಷ್ಪಗದ್ಗದಯಾ ಗಿರಾ** ಕಣ್ಣೀರಿನಿಂದ ಕಂಠ ಬಿಗಿದು(ತಡೆಯಿಂದ), ಸ್ಖಲಿಸುವ ಮಾತುಗಳಿಂದ **ಅಗ್ರಜಂ ನೃಪಂ** ಅಣ್ಣನಾದ ಧರ್ಮರಾಜನಿಗೆ **ಇತಿ ಆಹ** ಮುಂದೆ ಹೇಳಿದ ಪ್ರಕಾರ ಹೇಳಿದನು.

ಅರ್ಜುನ ಉವಾಚ -

**ವಂಚಿತೋಽಹಂ ಮಹಾರಾಜನ್ ಹರಿಣಾ ಬಂಧುರೂಪಿಣಾ ।**
**ಯೇನ ಮೇಽಪಹೃತಂ ತೇಜೋ ದೇವವಿಸ್ಮಾಪನಂ ಮಹತ್ ॥೫॥**

**ಮಹಾರಾಜನ್** ಧರ್ಮರಾಜನೇ **ಯೇನ** ಯಾವನಿಂದ **ಮೇ** ನನ್ನ **ಮಹತ್ತೇಜಃ** ಸಾಮರ್ಥ್ಯವು **ದೇವವಿಸ್ಮಾಪನಂ** ದೇವತೆಗಳಿಗೂ ಆಶ್ಚರ್ಯ ಉಂಟುಮಾಡುವ **ಅಪಹೃತಂ** ತನ್ನೊಡನೆ ಕೊಂಡೊಯ್ಯಲ್ಪಟ್ಟಿತೋ **ತೇನ ಬಂಧುರೂಪಿಣಾ** ಆ ಮುಖ್ಯಬಂಧುವಾದ **ಹರಿಣಾ** ಶ್ರೀಕೃಷ್ಣನಿಂದ **ಅಹಂ** ನಾನು **ವಂಚಿತಃ** ವಂಚಿಸಲ್ಪಟ್ಟೆನು ಇದು ಪ್ರಲಾಪ ಮಾತ್ರ ಹೊರತು ಶ್ರೀಹರಿಯಲ್ಲಿ ದೋಷಾರೋಪವಲ್ಲ ಅವನ ವಿಯೋಗವಾಗಿದೆ ಎಂದಿಷ್ಟೇ ಅರ್ಥ ವಿಯೋಗವೂ ಕೂಡ ಸ್ವೀಕೃತವಾದ ಹೃದಯದಲ್ಲಿ ಸನ್ನಿಹಿತನೆ ಆಗಿರುವನು. ಕಾರಣ ಶೋಕದಿಂದ ಹೀಗಾಗಿರುವನೆಂದು ಭಾವ.

**ಯಸ್ಯ ಕ್ಷಣನಿಯೋಗೇನ ಲೋಕೋ ಹ್ಯಪ್ರಿಯದರ್ಶನಃ ।**
**ಉಕ್ಥೇನ ರಹಿತೋ ಹ್ಯೇಷ ಮೃತಕಃ ಪ್ರೋಚ್ಯತೇ ಯಥಾ ॥೬॥**

ಯಸ್ಯ ಮುಂತಾದ ಯಚ್ಛಬ್ದಗಳಿಗೆ 'ತೇನಾಹಮದ್ಯ ಮುಷಿತ' ಎಂದು ಮುಂದೆ ಹೇಳುವದರಿಂದ ಅನ್ವಯ ತಿಳಿಯಬೇಕು.

**ಯಥಾ** ಹೇಗೆ **ಉಕ್ಥೇನ** ಮುಖ್ಯಪ್ರಾಣನಿಂದ **ರಹಿತಃ** ಇಲ್ಲವಾದ **ಏಷಃ** ತಂದೆ ಮೊದಲಾದವರ ದೇಹವು **ಮೃತಕಃ ಪ್ರೋಚ್ಯತೇ** ಶವವೆಂದು ಹೇಳಿಸಿಕೊಳ್ಳುವದು. ಆದ್ದರಿಂದ ಅಪ್ರಿಯವಾಗಿ ಕಾಣುವದು **ತಥಾ** ಹಾಗೆ **ಯಸ್ಯ** ಯಾವ ಕೃಷ್ಣನ ಕ್ಷಣ **ನಿಯೋಗೇನ** ಒಂದು ಕ್ಷಣ ಇಲ್ಲದಿರುವದರಿಂದ **ಲೋಕಃ** ಭೂಲೋಕವು **ಅಪ್ರಿಯದರ್ಶನಃ** ಹೇಯವೆಂದು ಕಾಣುವದು.

'ಮೈತ್ರೀಂ ಸಂಸ್ಮರನ್' ಎಂಬುದನ್ನೇ ವಿವರಿಸುವರು.

**ಯತ್ಸಂಶ್ರಯಾ ದ್ದ್ರುಪದಗೇಹ ಉಪಾಗತಾನಾಂ**
**ರಾಜ್ಞಾಂ ಸ್ವಯಂ ವರಮುಖೇ ಸ್ಮರದುರ್ಮದಾನಾಮ್ ।**
**ತೇಜೋ ಹೃತಂ ಖಲು ಮಯಾ ವಿಹತಶ್ಚ ಮತ್ಸ್ಯಃ**
**ಸಜ್ಜೀಕೃತೇನ ಧನುಷಾಽಧಿಗತಾ ಚ ಕೃಷ್ಣಾ ॥೭॥**

**ಯತ್ಸಂಶ್ರಯಾತ್** ಯಾವ ಶ್ರೀಕೃಷ್ಣನನ್ನು ಆಶ್ರಯಿಸುವದರಿಂದ ಅವನ ಬಲದಿಂದ **ದ್ರುಪದಗೇಹೇ** ದ್ರುಪದರಾಜನ ಅರಮನೆಯಲ್ಲಿ **ಉಪಾಗತಾನಾಂ** ಬಂದು ಸೇರಿರುವ **ಸ್ಮರದುರ್ಮದಾನಾಂ** ಕಾಮನಿಮಿತ್ತ ಉಂಟಾದ ದುಷ್ಟಮದವುಳ್ಳ **ರಾಜ್ಞಾಂ** ರಾಜರ **ತೇಜಃ** ಸಾಮರ್ಥ್ಯವು **ಸಜ್ಜೀಕೃತೇನ ಧನುಷಾ ಮಯಾ** ಎದೆ ಏರಿಸಿದ ಧನುಸ್ಸುಳ್ಳ ನನ್ನಿಂದ

**ಹೃತಂ** ಅಪಹರಿಸಲ್ಪಟ್ಟಿತು **ಸ್ವಯಂವರಮುಖೇ** ಶ್ರೇಷ್ಠವಾದ ಸ್ವಯಂವರದಲ್ಲಿ **ಮತ್ಸ್ಯಃ** ಮೇಲೆ ಯಂತ್ರದಲ್ಲಿ ಲಕ್ಷ್ಯವಾಗಿರಿಸಿದ ಮೀನವು **ವಿಹತಃ** ಧನುಸ್ಸಿನಿಂದ ಕೆಡವಲ್ಪಟ್ಟಿತು **ಕೃಷ್ಣಾ ಚ ಅಧಿಗತಾ** ದ್ರೌಪದಿಯು ಲಭಿಸಿದಳು.

**ಯತ್ಸನ್ನಿಧಾವಹಮು ಖಾಂಡವಮಗ್ನಯೇಽದಾ-**
**ಮಿಂದ್ರಂ ಚ ಸಾಮರಗಣಂ ತರಸಾ ವಿಜಿತ್ಯ ।**
**ಲಬ್ಧಾ ಸಭಾ ಮಯಕೃತಾಽದ್ಭುತಶಿಲ್ಪಮಾಯಾ**
**ದಿಗ್ಭ್ಯೋಽಹರನ್ನೃಪತಯೋ ಬಲಿಮಧ್ವರೇ ತೇ ॥೮॥**

**ಯತ್ಸನ್ನಿಧೌ** ಯಾವ ಶ್ರೀಕೃಷ್ಣನ ಸನ್ನಿಧಾನದಲ್ಲಿ **ಅಹಂ** ನಾನೇ **ಸಾಮರಗಣಂ** ದೇವತೆಗಳ ಸಮೂಹದಿಂದ ಕೂಡಿದ **ಇಂದ್ರಂ ಚ** ಇಂದ್ರನನ್ನು **ತರಸಾ** ಶೀಘ್ರದಲ್ಲಿ **ವಿಜಿತ್ಯ** ಗೆದ್ದು **ಅಗ್ನಯೇ** ಅಗ್ನಿಗೆ **ಖಾಂಡವಂ** ಖಾಂಡವ ವನವನ್ನು **ಅದಾಂ** ಕೊಟ್ಟೆನು **ಅದ್ಭುತಶಿಲ್ಪಮಾಯಾ** ಆಶ್ಚರ್ಯವನ್ನುಂಟುಮಾಡುವ ಶಿಲ್ಪಕಲೆ ಮತ್ತು ನೀರನ್ನು ನೆಲವೆಂದು ತಿಳಿಸುವ ಮಾಯೆಯಿಂದ ಕೂಡಿದ **ಮಯಕೃತಾ** ಖಾಂಡವದಾಹದಲ್ಲಿ ರಕ್ಷಿತನಾದ ಮಯನಿಂದ ನಿರ್ಮಿತವಾದ **ಸಭಾ** ಸಭಾಗೃಹವು **ಲಬ್ಧಾ** ಪ್ರಾಪ್ತವಾಯಿತು **ತೇ** ನಿನ್ನ **ಅಧ್ವರೇ**ರಾಜಸೂಯಯಾಗದಲ್ಲಿ **ದಿಗ್ಭ್ಯಃ ಆಗತಾಃ** ದಿಕ್ಕುವಿದಿಕ್ಕುಗಳಿಂದ ಬಂದ **ನೃಪತಯಃ** ರಾಜರುಗಳು **ಬಲಿಂ ಅಹರನ್** ಕರವನ್ನು ತಂದಿತ್ತರು

**ಯತ್ಸನ್ನಿಧೌ ನೃಪಶಿರೋಂಘ್ರಿಮಹನ್ಮಖಾರ್ಥಂ**
**ಆರ್ಯೋಽನುಜಸ್ತವ ಗದಾಯುಧಸತ್ವವೀರ್ಯಃ ।**
**ತೇನಾಹೃತಾಃ ಪ್ರಮಥನಾಥಮಖಾಯ ಭೂಪಾ**
**ಯನ್ಮೋಚಿತಾಭ್ಯುದನಯನ್ ಬಲಿಮಧ್ವರೇ ತೇ ॥೯॥**

**ಯತ್ಸನ್ನಿಧೌ** ಯಾವ ಶ್ರೀಕೃಷ್ಣನ ಸನ್ನಿಧಾನದಲ್ಲಿ **ನೃಪಶಿರೋಂಘ್ರಿಂ** ರಾಜರುಗಳ ತಲೆಗಳಲ್ಲಿ ಕಾಲಿರಿಸಿದ ಜರಾಸಂಧನನ್ನು **ಮಹನ್ಮಖಾರ್ಥಂ** ರಾಜಸೂಯಯಾಗಕ್ಕಾಗಿ **ತವ** ನಿನ್ನ **ಅನುಜಃ** ತಮ್ಮನಾದ **ಆರ್ಯಃ** ನನಗೆ ಹಿರಿಯನಾದ **ಗದಾಯುಧಸತ್ವವೀರ್ಯಃ** ಗದಾವೆಂಬ ಆಯುಧ ಮತ್ತು **ಸತ್ವ** ಮನೋಬಲ ಅಥವಾ ಜ್ಞಾನಬಲ **ವೀರ್ಯಃ** ಶರೀರದಲ್ಲಿ ಬಲವುಳ್ಳ ಭೀಮಸೇನನು **ಅಹನತ್** ಸಂಹರಿಸಿದನು **ಪ್ರಮಥನಾಥಮಖಾಯ** ರುದ್ರದೇವತಾಕ ಯಜ್ಞಕ್ಕಾಗಿ **ತೇನ** ಜರಾಸಂಧನಿಂದ **ಆಹೃತಾಃ** ಪಶುಗಳಾಗಿ ತಂದಿರಿಸಿದ **ಭೂಪಾಃ** ರಾಜರುಗಳು **ಯನ್ಮೋಚಿತಾಃ** ಯಾವ

ಶ್ರೀಕೃಷ್ಣನಿಂದ ಬಿಡುಗಡೆ ಹೊಂದಿದವರಾಗಿ **ತೇ ಅಧ್ವರೇ** ನಿನ್ನ ಯಜ್ಞದಲ್ಲಿ **ಬಲಿಂ** ಕರವನ್ನು **ಅಭ್ಯುದನಯನ್** ತಂದು ಸಮರ್ಪಿಸಿದರು.

ಕೇವಲ ನನಗೆ, ಭೀಮನಿಗೆ ಮಾತ್ರ ಶ್ರೀಕೃಷ್ಣನಿಂದ ಉಪಕಾರವಲ್ಲ ಕಿಂತು ನಿನ್ನ ಪತ್ನಿಗೂ ಉಪಕಾರ ಮಾಡಿರುವನೆಂದು ಹೇಳುವನು.

**ಪತ್ನ್ಯಾಸ್ತವಾಪಿ ಮುಖಕ್ಲೃಪ್ತಮಹಾಭಿಷೇಕ**
**ಶ್ಲಾಘಿಷ್ಠಚಾರುಕಬರಂ ಕಿತವೈಃ ಸಭಾಯಾಮ್ ।**
**ಸ್ಪೃಷ್ಟಂ ವಿಕೀರ್ಯ ಪದಯೋಪತಿತಾಶ್ರುಮುಖ್ಯೋ**
**ಯೈಸ್ತತ್ ಸ್ತ್ರಿಯೋ ನ್ಯಕೃತ ತತ್ಸವಿಮುಕ್ತಕೇಶ್ಯಃ ॥೧೦॥**

**ಯತದಯೋಃ** ಯಾವ ಕೃಷ್ಣನ ಪಾದಗಳಲ್ಲಿ **ಪತಿತಯೋಃ** ದುಃಖದಿಂದ ಎರಗಿದ(ನಮಸ್ಕರಿಸಿದ) **ಪತಿತಾಶ್ರುಮುಖ್ಯಃ** ಕಾಲಿನ ಮೇಲೆ ನಮಸ್ಕರಿಸಿದಂತೆ ಬಿದ್ದ ಕಣ್ಣೀರೆಂಬ ಪ್ರಧಾನಿಯು **ತವ** ನಿನ್ನ **ಪತ್ನ್ಯಾಃ** ಹೆಂಡತಿಯಾದ ದ್ರೌಪದಿಯ **ಮಖ** ರಾಜಸೂಯಯಾಗದಲ್ಲಿ **ಕ್ಲೃಪ್ತ** ನಿಯತವಾದ (ಕೃತವಾದ) **ಮಹಾಭಿಷೇಕೇಣ** (ಅವಭೃತದಿಂದ) ಮಂತ್ರಪೂತ ಅಭಿಷೇಕದಿಂದ **ಶ್ಲಾಘಿಷ್ಠಚಾರುಕಬರಂ** ಅತ್ಯಂತ ಸ್ತುತ್ಯವಾದ **ಚಾರು** ಮನೋಹರವಾದ **ಕಬರಂ** ತುರುಬು(ಇದರಿಂದ ಪಾಪಿಗಳಿಗೆ ಮುಟ್ಟಲು ಯೋಗ್ಯರಲ್ಲ ಎಂದು ಸೂಚಿಸುವರು) **ಕಿತವೈಃ** ವಂಚಕರಾದ **ಯೈಃ** ಯಾವ ದುಶ್ಶಾಸನಾದಿಗಳಿಂದ **ವಿಕೀರ್ಯ** ಬಿಚ್ಚಿ **ಸ್ಪೃಷ್ಟಂ** ಎಳೆಯಲ್ಪಟ್ಟಿತ್ತೋ **ತತ್ ಸ್ತ್ರಿಯಃ** ಅವರ ಹೆಂಡಂದಿರು **ತತ್** ಶ್ರೀಕೃಷ್ಣನ ಪಾದದಲ್ಲಿ ಬಿದ್ದದ್ದರಿಂದಲೇ ಅವನಿಗೆ ನಮಸ್ಕರಿಸದ ಸಾಮರ್ಥ್ಯದಿಂದಲೇ **ಸ ವಿಮುಕ್ತಯೇ ಕೇಶ್ಯಃ ನ್ಯಕೃತ** ಏಕಕಾಲದಲ್ಲಿ ಪತಿಗಳನ್ನು ಕಳೆದುಕೊಂಡಿದ್ದರಿಂದ ಕೂದಲಿಲ್ಲದಂತೆ ಮಾಡಿತು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಹಿಂದಿನಂತೆ ಯಚ್ಛಬ್ದವಿಲ್ಲದ್ದರಿಂದ 'ತೇನ' ಎಂಬ ಮುಂದಿನ ಶ್ಲೋಕದಲ್ಲಿ ಅನ್ವಯವಾಗಲಾರದು ಕಾರಣ ಯಚ್ಛಬ್ದಾಧ್ಯಾಹಾರಮಾಡಿ ಸಮನ್ವಯ ಮಾಡುವರು.

'ಯತ್ಪಾದಯೋಃ ಪತಿತಾಶ್ರುಪ್ರಧಾನಃ' ।

ತತ್ ಸ್ತ್ರಿಯಃ ಎಂಬಲ್ಲಿ ತತ್‌ಶಬ್ದದಿಂದ ಯಾರನ್ನು ತೆಗೆದುಕೊಳ್ಳಬೇಕು ಎಂದು ತಿಳಿಸುವರು.

**ಯೈಃ ಕಬರಂ ಸ್ಪೃಷ್ಟಂ ತತ್ ಸ್ತ್ರಿಯಃ ತತ್ಪದಯೋಃ ಪತಿತತ್ವಾದೇವ । ಸಹ ವಿಮುಕ್ತಕೇಶ್ಯಃ ನ್ಯಕೃತ ।**

ದ್ರೌಪದಿಯು ಶ್ರೀಕೃಷ್ಣನ ಚರಣಕ್ಕೆ ಎರಗಿದಾಗ ಧಾರಾಕಾರವಾಗಿ ಬಿದ್ದ ಕಣ್ಣೀರೆಂಬ ಮಂತ್ರಿಯು (ಯಾವ ದುಶ್ಶಾಸನಾದಿಗಳಿಂದ ದ್ರೌಪದಿಯ ಕೇಶಬಂಧವು ಸೆಳೆಯಲ್ಪಟ್ಟಿತ್ತೋ) ದುಶ್ಶಾಸನಾದಿಗಳ ಹೆಂಡಂದಿರನ್ನು ಏಕಕಾಲದಲ್ಲಿಯೇ ಬಿಚ್ಚಿದ ಕೂದಲುಳ್ಳವರನ್ನಾಗಿ ಮಾಡಿತು.

ಯಾದವಾರ್ಯರ ಪ್ರಕಾರ ಸಹ ವಿಮುಕ್ತಕೇಶ್ಯಃ ಎಂದು ತಾತ್ಪರ್ಯ. ಪಾದವಿಮುಕ್ತಕೇಶ್ಯಃ ಎನ್ನಲು ಮುಂಡಿತಕೇಶರು ಎಂದರ್ಥ. ವಿಜಯಧ್ವಜರು ಭೀಮನ ಗದೆಯಿಂದ ತೊಡೆ ಒಡಿಸಿಕೊಂಡು, ಪತಿಗಳನ್ನಾಲಿಂಗಿಸಿಕೊಂಡು, ತಲೆ ಒರೆಸಿಕೊಂಡು, ದುಃಖಿಸಿದರು ಎಂದಿರುವರು.

**ಅರ್ಜುನ ಶ್ರೀಕೃಷ್ಣ ತನಗೆ ಮಾಡಿದ ಉಪಕಾರವನ್ನು ಸ್ಮರಿಸುವನು.**

ಮತ್ತೆ ಶ್ರೀಕೃಷ್ಣನು ತನಗೆ ಮಾಡಿದ ಉಪಕಾರ ಸ್ಮರಿಸುವನು.

**ಯತ್ತೇಜಸಾಽಥ ಭಗವಾನ್ಯುಧಿ ಶೂಲಪಾಣಿ**
**ರ್ವಿಸ್ಮಾಪಿತಃ ಸ ಗಿರಿಶೋಽಸ್ತ್ರಮದಾನ್ನಿಜಂ ಮೇ ।**
**ಅನ್ಯೇಽಪಿ ಚಾಹಮಮುನೈವ ಕಲೇವರೇಣ**
**ಪ್ರಾಪ್ತೋ ಮಹೇಂದ್ರಭವನೇ ಮಹದಾಸನಾರ್ಥಮ್ ॥೧೧॥**

**ಯತ್ತೇಜಸಾ** ಯಾವ ಶ್ರೀಕೃಷ್ಣನ ಸಾಮರ್ಥ್ಯದಿಂದ **ಯುಧಿ** ವರಾಹ ನಿಮಿತ್ತ ಯುದ್ಧದಲ್ಲಿ **ಭಗವಾನ್** ಪೂಜ್ಯರಾದ **ಶೂಲಪಾಣಿಃ** ರುದ್ರದೇವರು **ವಿಸ್ಮಾಪಿತಃ** ಆಶ್ಚರ್ಯಗೊಳಿಸಲ್ಪಟ್ಟರು **ಸಃ ಗಿರೀಶಃ** ಆ ರುದ್ರದೇವರು **ಮೇ** ನನಗೆ **ನಿಜಂ** ತಮ್ಮ **ಅಸ್ತ್ರಂ** ಪಾಶುಪತಾಸ್ತ್ರವನ್ನು **ಅದಾತ್** ಕೊಟ್ಟರು (**ಸಗಿರಿಜಃ** ಎಂಬ ಪಾಠದಲ್ಲಿ ಪಾರ್ವತಿಸಹಿತನಾದ ಎಂದರ್ಥ.) **ಅನ್ಯೇಽಪಿ** ಉಳಿದ ದೇವತೆಗಳು ತಮ್ಮ ಅಸ್ತ್ರಗಳನ್ನಿತ್ತರು **ಮಹದಾಸನಾರ್ಥಂ** ಇಂದ್ರನ ಆಸನಕ್ಕಾಗಿ **ಅಮುನಾ ಏವ ಕಲೇವರೇಣ** ಇದೇ ದೇಹದಿಂದ **ಮಹೇಂದ್ರಭವನೇ ಪ್ರಾಪ್ತಃ** ಸ್ವರ್ಗಕ್ಕೆ ಬಂದನು **ಆಸನಾರ್ಥಂ** ಆಸನದಲ್ಲಿ ಕುಳಿತುಕೊಳ್ಳುವದಕ್ಕಾಗಿ ಭಾಗವನ್ನು ಹೊಂದಿದನು ಎಂದರ್ಥ.

**ತತ್ರೈವ ಮೇ ವಿಹರತೋ ಭುಜದಂಡಯುಗ್ಮಂ**
**ಗಾಂಡೀವಲಕ್ಷಣಮರಾತಿವಧಾಯ ದೇವಾಃ ।**
**ಸೇಂದ್ರಾಃ ಶ್ರಿತಾ ಯದನುಭಾವಿತಮಾಜಮೀಢ**
**ತೇನಾಹಮದ್ಯ ಮುಷಿತಃ ಪುರುಷೇಣ ಭೂಮ್ನಾ ॥೧೨॥**

**ತತ್ರೈವ** ಸ್ವರ್ಗದಲ್ಲಿಯೇ **ವಿಹರತಃ** ಕ್ರೀಡಿಸುವ **ಮೇ** ನನ್ನ **ಯದನುಭಾವಿತಂ** ಯಾವ ಶ್ರೀಕೃಷ್ಣನಿಂದ ಪ್ರಭಾಯುತವಾಗಿ ಮಾಡಲ್ಪಟ್ಟ **ಗಾಂಡೀವಲಕ್ಷಣಂ** ಗಾಂಡೀವಧನುಸ್ಸೇ ಚಿನ್ಹವಾಗಿವುಳ್ಳ **ಭುಜದಂಡಯುಗ್ಮಂ** ಭುಜಗಳೆಂಬ ಎರಡು ದಂಡಗಳನ್ನು **ಅರಾತಿವಧಾಯ** ನಿವಾತಕವಚರೆಂಬ ಶತ್ರುಗಳ ಸಂಹಾರಕ್ಕಾಗಿ **ಸೇಂದ್ರಾಃ** ಇಂದ್ರ ಸಹಿತರಾದ **ದೇವಾಃ** ದೇವತೆಗಳು **ಶ್ರಿತಾಃ** ಆಶ್ರಯಿಸಿದರು. ಹೇ **ಆಜಮೀಢ** ಅಜಮೀಢ ವಂಶದಲ್ಲಿ ಜನಿಸಿದ ಯುಧಿಷ್ಠಿರನೇ **ತೇನ** ಆ **ಭೂಮ್ನಾ** ಪೂರ್ಣನಾದ **ಪುರುಷೇಣ** ಸರ್ವದೇಹಾಂತರ್ಯಾಮಿಯಾದ ಶ್ರೀಹರಿಯಿಂದ **ಅಹಂ** ನಾನು **ಅದ್ಯ** ಈಗ **ಮುಷಿತಃ ಅಸ್ಮಿ** ಅಪಹರಿಸಲ್ಪಟ್ಟ ಅಪರೋಕ್ಷವುಳ್ಳವನಾಗಿದ್ದೇನೆ. ಅಂದರೆ ಈಗ ಶ್ರೀಹರಿಯು ಕಾಣದಾಗಿರುವನು.

**ಯದ್ಬಾಂಧವಾಃ ಕುರುಬಲಾಬ್ಧಿಮನಂತಪಾರ-**
**ಮೇಕೋ ರಥೇನ ತರಸಾಽತರಮಾರ್ಯಸತ್ವಃ ।**
**ಪ್ರತ್ಯಾಹೃತಂ ಪುರಧನಂ ಚ ಮಯಾ ಪರೇಷಾಂ**
**ತೇಜಃ ಪರಂ ಮಣಿಮಯಂ ಚ ಹೃತಂ ಶಿರೋಭ್ಯಃ ॥೧೩॥**

**ಯದ್ಬಾಂದವಾಃ** ಯಾವ ಶ್ರೀಕೃಷ್ಣನ ಸ್ನೇಹವುಳ್ಳವನಾಗಿ (ಬಂಧುಸಂಬಂಧಿ ಯಾದುದು ಭಾಂದವಸ್ನೇಹ ಎಂದರ್ಥ) **ಆರ್ಯಸತ್ವಃ** ಶ್ರೇಷ್ಠಬಲವುಳ್ಳ **ಏಕಃ** ನಾನೊಬ್ಬನೇ **ಅನಂತಪಾರಂ** ಕೊನೆಗಾಣದ **ಕುರುಬಲಾಬ್ಧಿಂ** ಕೌರವಸೈನ್ಯ ಸಮುದ್ರವನ್ನು **ರಥೇನ** ರಥದಿಂದ **ತರಸಾ** ವೇಗವಾಗಿ **ಅತರಂ** ದಾಟಿದೆನು. ಮತ್ತು ಯಾವನ ಸ್ನೇಹವುಳ್ಳ **ಮಯಾ** ನನ್ನಿಂದ **ಪುರಧನಂ** ಅತಿಯಾದ ಗೋಸಂಪತ್ತು **ಪ್ರತ್ಯಾಹೃತಂ** ವಿರಾಟನಗರಕ್ಕೆ ತಿರುಗಿಸಲ್ಪಟ್ಟಿತು ಮತ್ತು **ಪರೇಷಾಂ** ಶತ್ರುಗಳಾದ ಕೌರವರ **ಶಿರೋಭ್ಯಃ** ತಲೆಗಳಿಂದ **ಮಣಿಮಯಂ** ರತ್ನಖಚಿತವಾದ ಕಿರೀಟ ರೂಪವಾದ ಧನವು **ಪರಂ** ಉತ್ತಮವಾದ **ತೇಜಃ** ಸಾಮರ್ಥ್ಯವೂ ಕೂಡ **ಹೃತಂ** ಸಮ್ಮೋಹನಾಸ್ತ್ರದಿಂದ ಅವರನ್ನು ದ್ರೋಹಗೊಳಿಸಿ ಅಪಹರಿಸಲ್ಪಟ್ಟಿತು.

**ಯೋ ಭೀಷ್ಮಕರ್ಣಗುರುಶಲ್ಯಚಮೂಷ್ವದಭ್ರ-**
**ರಾಜನ್ಯವರ್ಯ ರಥಮಂಡಲಮಂಡಿತಾಸು ।**
**ಅಗ್ರೇಚರೋ ಮಮ ರಥೇ ರಥಯೂಥಪಾನಾ-**
**ಮಾಯುರ್ಮನಾಂಸಿ ಚ ದೃಶಾ ಸಹಸಾ ಯದಾರ್ಚ್ಛತ್ ॥೧೪॥**

**ಯಃ** ಯಾವ ಶ್ರೀಕೃಷ್ಣನು **ಅದಭ್ರ** ಅನಲ್ಪರಾದ **ರಾಜನ್ಯವರ್ಯ** ಕ್ಷತ್ರಿಯಶ್ರೇಷ್ಠರ **ರಥಮಂಡಲಮಂಡಿತಾಸು** ರಥಗಳ ಸಮೂಹದಿಂದ ಅಲಂಕೃತವಾದ **ಭೀಷ್ಮಕರ್ಣಗುರುಶಲ್ಯಚಮೂಷು** ಭೀಷ್ಮ, ಕರ್ಣ, ದ್ರೋಣಾಚಾರ್ಯ, ಶಲ್ಯ ಇವರುಗಳ ಸೈನ್ಯಗಳಲ್ಲಿ ಇರುವ **ಮಮ ರಥೇ** ನನ್ನ ರಥದಲ್ಲಿ **ಅಗ್ರೇಚರಃ** ಸಾರಥಿಯಾಗಿ ನನ್ನ ಮುಂದೆ ನಡೆದವನಾಗಿ **ರಥಯೂಥಪಾನಾಂ** ಸೇನಾಧಿಪತಿಗಳಾದ ಭೀಷ್ಮಾದಿಗಳ **ಆಯುಃ** ಆಯುಷ್ಯವನ್ನು **ಮನಾಂಸಿ ಚ** ಧೈರ್ಯಗಳನ್ನು **ದೃಶಾ ಚ** ಕೇವಲ ನೋಟದಿಂದಲೇ **ಸಹಸಾ** ಶೀಘ್ರವಾಗಿ **ಆರ್ಚ್ಛತ್** ಅಪಹರಿಸಿದನು

**ಯದ್ದೋಷ್ಷು ಮಾಂ ಪ್ರಣಿಹಿತಂ ಗುರುಭೀಷ್ಮಕರ್ಣ**
**ದ್ರೌಣಿತ್ರಿಗರ್ತಶಲಸೈಂಧವಬಾಲ್ಹಿಕಾದ್ಯೈಃ ।**
**ಅಸ್ತ್ರಾಣ್ಯಮೇಯಮಹಿಮಾನಿ ನಿರೂಪಿತಾನಿ**
**ನೋಪಸ್ಪೃಶುರ್ನೃಹರಿದಾಸಮಿವಾಸುರಾಣಿ ॥೧೫॥**

**ಆಸುರಾಣಿ** ಹಿರಣ್ಯಕಶಿಪುವಿನಿಂದ ಬಿಡಲ್ಪಟ್ಟ ಅಸ್ತ್ರಗಳು **ನೃಹರಿದಾಸಂ ಇವ** ಪ್ರಲ್ಹಾದನನ್ನು ತಾಪಗೊಳಿಸದಿರುವಂತೆ **ಯದ್ದೋಷ್ಷು** ಯಾವ ಶ್ರೀಕೃಷ್ಣನ ಭುಜಗಳಲ್ಲಿ **ಪ್ರಣಿಹಿತಂ** ಸ್ಥಾಪಿತನಾದ ಯಾವನಿಂದ ರಕ್ಷಿತನಾದ ಎಂದರ್ಥ. **ಮಾಂ** ನನ್ನನ್ನು **ಗುರುಭೀಷ್ಮಕರ್ಣದ್ರೌಣಿತ್ರಿಗರ್ತಶಲಸೈಂಧವಬಾಲ್ಹಿಕಾದ್ಯೈಃ ಗುರು** ಗುರುಗಳಾದ ದ್ರೋಣಾಚಾರ್ಯ **ಭೀಷ್ಮ** ಭೀಷ್ಮಾಚಾರ್ಯ **ಕರ್ಣ** ಕರ್ಣ **ದ್ರೌಣಿ** ಅಶ್ವತ್ಥಾಮಾಚಾರ್ಯ **ತ್ರಿಗರ್ತಶಲಸೈಂಧವಬಾಲ್ಹಿಕಾದ್ಯೈಃ** ತ್ರಿಗರ್ತದೇಶಾಧಿಪತಿಯಾದ ಸುಶರ್ಮಶಲ ಸೋಮದತ್ತನ ಮಗ ಸೈಂಧವ ಜಯದ್ರಥ ಬಾಲ್ಹೀಕ ಇವರೇ **ಆದ್ಯೈಃ** ಮೊದಲಾದವರಿಂದ **ನಿರೂಪಿತಾನಿ** ಪ್ರಯೋಗಿಸಲ್ಪಟ್ಟ **ಅಪ್ರಮೇಯಮಹಿಮಾನಿ ಅಸ್ತ್ರಾಣಿ** ಅಚಿಂತ್ಯ ಸಾಮರ್ಥ್ಯವುಳ್ಳ ಅಸ್ತ್ರಗಳು **ನ ಉಪಸ್ಪೃಶುಃ** ತಾಪಕೊಡಲಿಲ್ಲ.

**ಯನ್ಮೇ ನೃಪೇಂದ್ರ, ತದತರ್ಕ್ಯವಿಹಾರ ಈಶೋ**
**ಯೋ ಲಬ್ಧರೂಪಮವದದ್ರಣಮೂರ್ಧ್ನಿ ದರ್ಶೀ ।**

**ಯನ್ಮಾಯಯಾಽಽವೃತದೃಶೋ ನ ವಿದುಃ ಪರಂ ತತ್**
**ಸೂತ್ರಾದಯೋಽಹಮಹಮಸ್ಮಿ ಮಮೇತಿ ಭವ್ಯಾಃ** ॥೧೬॥

**ಹೇ ನೃಪೇಂದ್ರ** ರಾಜನೇ **ಯನ್ಮಾಯಯಾ** ಯಾವನ ಇಚ್ಛೆಯಿಂದ **ಆವೃತದೃಶಃ** ಆವರಿಸಲ್ಪಟ್ಟ ಸ್ವರೂಪಜ್ಞಾನವುಳ್ಳವರಾಗಿ **ಪರಂ** ಸರ್ವೋತ್ತಮನಾದ **ತತ್** ಆ ರೂಪವನ್ನು **ಸೂತ್ರಾದಯಃ** ವಾಯುಮುಂತಾದವರು **ನ ವಿದುಃ** ತಿಳಿಯಲಾರರು. **ತತ್** ಆದ್ದರಿಂದ **ಅಲಬ್ಧರೂಪಂ** ತನ್ನ ಪ್ರಸಾರವಿಲ್ಲದೇ ಯಾರಿಗೂ ಕಾಣದಿರುವ ಯಾವ ರೂಪವಿದೆಯೋ **ತತ್** ಅದನ್ನು **ರಣಮೂರ್ಧ್ನಿ** ಶ್ರೇಷ್ಠವಾದ ಯುದ್ಧದಲ್ಲಿ **ದರ್ಶೀ** ತೋರಿಸುತ್ತಾ **ಮೇ** ನನಗೆ **ಅವದತ್** ಹೇಳಿದನು **ಅಹಂ** ನಾನು **ಕರ್ತಾ** ಮಾಡುವವನು **ಮಮ** ಇದು ನನ್ನದು ಎಂದು **ಭವ್ಯಾಃ** ಅನುಭವಿಸಲು ಯೋಗ್ಯವಾದ **ಸೂತ್ರಾದಯಃ** ಎಂದನ್ವಯ. ಅಂದರೆ ಶ್ರೀಹರಿಯ ಇಚ್ಛೆಯಿಂದ ಆವೃತ ಸ್ವರೂಪಜ್ಞಾನವುಳ್ಳ ಜನರು ನಾನು ನನ್ನದೆಂಬ ಭ್ರಾಂತಿವುಳ್ಳವರಾದ್ದರಿಂದ ವಾಯುದೇವರನ್ನು ಬಿಟ್ಟು ಭ್ರಾಂತಿ. ಇಲ್ಲಿ ಛತ್ರಿನ್ಯಾಯದಿಂದ ಹೇಳಿದೆ. ವಾಯ್ವಾದಿಗಳು ತಿಳಿಯುವದಿಲ್ಲವೋ ಅಂಥ ಸೂತ್ರಾದ್ಯುತ್ತಮರೂಪವನ್ನು **ಅವದತ್** ತಿಳಿಸಿದನೆಂದರ್ಥ.

ಈಗ ತನ್ನ ಅಪರಾಧಗಳನ್ನು ಸ್ಮರಿಸಿ ಸಂತಾಪದಿಂದ ಹೇಳುವನು.

**ಸೌತ್ಯೇ ವೃತಃ ಕುಮತಿನಾತ್ಮದ ಈಶ್ವರೋ ಮೇ**
**ಯತ್ಪಾದಪದ್ಮಮಭವಾಯ ಭಜಂತಿ ಭವ್ಯಾಃ ।**
**ಸಂಶ್ರಾಂತವಾಹಮರಯೋ ರಥಿನೋ ಭುವಿಷ್ಠಂ**
**ನ ಪ್ರಾಹುರನ್ಯದನುಭಾವನಿರಸ್ತಚಿತ್ತಾಃ** ॥೧೭॥

**ಭವ್ಯಾಃ** ಮುಕ್ತಿಯೋಗ್ಯರಾದ ಮಹಾತ್ಮರು **ಅಭವಾಯ** ಮೋಕ್ಷಪಡೆಯಲು **ಯತ್ಪಾದಪದ್ಮಂ** ಯಾವನ ಪಾದಕಮಲಗಳನ್ನು **ಭಜಂತಿ** ಸೇವಿಸುವರೋ **ಯದನುಭಾವನಿರಸ್ತಚಿತ್ತಾಃ** ಯಾವ ಶ್ರೀಕೃಷ್ಣನ ಸಾಮರ್ಥ್ಯದಿಂದ ಮೋಹಿತವಾದ ಮನಸುಳ್ಳವರಾಗಿ **ರಥಿನಃ** ರಥಾರೂಢರಾದ **ಅರಯಃ** ಶತ್ರುಗಳಾದ ಕರ್ಣಾದಿಗಳು **ಶ್ರಾಂತವಾಹಂ** ಶ್ರಮಹೊಂದಿದ ಕುದುರೆಯುಳ್ಳ **ಭುವಿಷ್ಠಂ** ಭೂಮಿಯಲ್ಲಿ ನಿಂತ **ನ ಪ್ರಾಹರನ್** ಹೊಡೆಯಲಿಲ್ಲ. **ಸಃ** ಅಂಥ **ಆತ್ಮದಃ** ಏಕಾಂತ ಭಕ್ತರಿಗೆ ತನ್ನನ್ನೇ ಕೊಡುವ **ಈಶ್ವರಃ** ಸರ್ವೇಶ್ವರನಾದ ಶ್ರೀಕೃಷ್ಣನ **ಮೇ** ನನ್ನಿಂದ **ಕುಮತಿನಾ** ಇವನು ನನ್ನ ಸೋದರಮಾವನ ಮಗನೆಂಬ ದುರ್ಬುದ್ಧಿಯಿಂದ **ಸೌತ್ಯೇ ವೃತಃ** ಸಾರಥ್ಯಕ್ಕಾಗಿ

ಸ್ವೀಕರಿಸಲ್ಪಟ್ಟನು. ಆದ್ದರಿಂದ ನಾನು ಮಹಾಪಾಪಿಯು ಎಂದು ಭಾವ. ಜಯದ್ರಥನ ವಧಸಮಯದಲ್ಲಿ ನನ್ನ ರಥ ಕುದುರೆಗಳಿಗೆ ನೀರು ಕುಡಿಯದೆ ಶ್ರಮವಾದಾಗ ವರುಣಾಸ್ತ್ರದಿಂದ ನಾನು ಸಂತಾಪಿಸಿದ ನೀರನ್ನು ಕುಡಿಯಲು ಕುದುರೆಗಳು ಹೋದಾಗ ಭೂಮಿಯಲ್ಲಿ ನಿಂತ ನಿನ್ನನ್ನು ಎಂದರ್ಥ.

ಅವನ ಮಾತುಗಳು ನನ್ನ ಮನಸ್ಸಿನಿಂದ ಮರೆಯಲಾರದು ಎಂದು ಹೇಳುವರು.

**ನರ್ಮಾಣ್ಯುದಾರರುಚಿರಸ್ಮಿತಶೋಭನಾನಿ**
**ಹೇ ಪಾರ್ಥ ಹೇಽರ್ಜುನ ಸಖೇ ಕುರು ನಂದನೇತಿ ।**
**ಸಂಜಲ್ಪಿತಾನಿ ನರದೇವ ಹೃದಿಸ್ಪೃಶಾನಿ**
**ಸ್ಮರ್ತುರ್ಲುಠಂತಿ ಹೃದಯಂ ಮಮ ಮಾಧವಸ್ಯ ॥೧೮॥**

**ಹೇ ನರದೇವ** ರಾಜನೇ **ಮಾಧವಸ್ಯ** ಶ್ರೀಕೃಷ್ಣನ **ಉದಾರರುಚಿರಸ್ಮಿತ ಶೋಭನಾನಿ ಉದಾರ** ಗಂಭೀರವಾದ **ರುಚಿರ** ಮನೋಹರವಾದ **ಸ್ಮಿತ** ಮಂದಹಾಸದಿಂದ **ಶೋಭನಾನಿ** ಮಂಗಳವಾದ **ನರ್ಮಾಣಿ** ಪರಿಹಾಸ ವಾಕ್ಯಗಳು ಮತ್ತು ಆ ಆ ಕೆಲಸಗಳನ್ನು ಹೇಳುವಾಗ **ಹೇ ಪಾರ್ಥ** ಹೇ ಅರ್ಜುನ, ಹೇ ಸಖ, ಹೇ ಕುರುನಂದನ, **ಇತಿ** ಎಂಬ **ಸಂಜಲ್ಪಿತಾನಿ** ಮಧುರ ಮಾತುಗಳು **ಹೃದಿಸ್ಪೃಶಾನಿ** ಮನೋಜ್ಞವಾದವುಗಳು **ಸ್ಮರ್ತುಃ** ಈಗ ಸ್ಮರಿಸುವ **ಮಮ ಹೃದಯಂ ಪ್ರಾಪ್ಯ ಲುಂಠತಿ** ಮನಸ್ಸಿನಲ್ಲಿ ಬಂದು ಅಲ್ಲಿಯೇ ಸುತ್ತುವವು ಹೃದಯ ಬಿಟ್ಟು ಹೋಗಲಾರವು ಎಂದು ಭಾವ.

ನಾನು ಅಪರಾಧ ಮಾಡಿದರೂ ಅವನ ಮನಸ್ಸಿನಲ್ಲಿ ಪ್ರತಿಯಾಗಿ ಅಪಕಾರ ಬುದ್ಧಿ ನನ್ನ ವಿಷಯದಲ್ಲಿ ಉಂಟಾಗಲಿಲ್ಲವೆಂದು ಹೇಳುವನು.

**ಶಯ್ಯಾಸನಾಟನವಿಕತ್ಥನಭೋಜನಾದಿ-**
**ಷ್ವೈಕ್ಯಾದ್ವಯಸ್ಯ ಋಭುಮಾನಿತಿ ವಿಪ್ರಲಬ್ಧಃ ।**
**ಸಖ್ಯುಃ ಸಖೇವ ಪಿತೃವತ್ತನಯಸ್ಯ ಸರ್ವಂ**
**ಸೇಹೇ ಮಹಾಮಹಿತಯಾ ಕುಮತೇರಘಂ ಮೇ ॥೧೯॥**

**ಶಯ್ಯಾಸನಾಟನವಿಕತ್ಥನಭೋಜನಾದಿಷು ಶಯ್ಯಾ** ಹಾಸಿಗೆ **ಆಸನ** ಕೂಡುವ ಸ್ಥಳ **ವಿಕತ್ಥನ** ತಮ್ಮ ಗುಣಗಳನ್ನು ಹೇಳಿಕೊಳ್ಳುವದು **ಭೋಜನ** ಊಟಮಾಡುವದು ಇವೇ ಮೊದಲಾದವುಗಳಲ್ಲಿ **ಐಕ್ಯಾತ್** ನಿಯಮವಾಗಿ ಜೊತೆಗೆ ಇರುವದರಿಂದ **ವಯಸ್ಯಃ**

**ಇತಿ** ಗೆಳೆಯನೆಂದು **ಋಭುಮಾನ್** ದೇವತೆಗಳೇ ಸೇವಕನಾಗಿವುಳ್ಳ ಶ್ರೀಹರಿಯು **ವಿಪ್ರಲಬ್ಧಃ** ತಿರಸ್ಕರಿಸಲ್ಪಟ್ಟನು. ದೊಡ್ಡವರೊಡನೆ ಒಂದೇ ಆಸನಾದಿಗಳಲ್ಲಿ ಇರುವದೇ ಅವರ ತಿರಸ್ಕಾರವಿದ್ದಂತೆ. ಹೀಗೆ ನಾನು ತಿರಸ್ಕರಿಸಿದರೂ **ಮಹಾಮಹಿತಯಾ** ಮಹಾಮಹಿಮನಾದುದರಿಂದ **ಕುಮತೇಃ** ದುಷ್ಟಬುದ್ಧಿಯಾದ **ಮೇ** ನನ್ನ **ಅಘಂ** ಪಾಪವನ್ನು **ಸಖ್ಯುಃ ಅಘಂ ಸಖಾ** ಗೆಳೆಯನ ತಪ್ಪುಗಳನ್ನು ಗೆಳಯನು ಸಹಿಸುವಂತೆ **ತನುಜಸ್ಯ ಅಘಂ ಪಿತೃವತ್** ಮಗನ ತಪ್ಪನ್ನು ತಂದೆಯು ಸಹಿಸುವಂತೆ **ಸೇಹೇ** ಸಹಿಸಿದನು.

ನೀನು ಶಂಕಿಸಿದ ನೀಚರಿಂದ ಪರಾಭವವು ಶ್ರೀಕೃಷ್ಣನ ವಿಯೋಗದಿಂದ ಪ್ರಾಪ್ತವಾಗಿದೆ ಎಂದು ಹೇಳುವನು.

**ಸೋಽಹಂ ನೃಪೇಂದ್ರ ರಹಿತಃ ಪುರುಷೋತ್ತಮೇನ**
**ಸಖ್ಯಾ ಪ್ರಿಯೇಣ ಸುಹೃದಾ ಹೃದಯೇನ ಶೂನ್ಯಃ ।**
**ಅಧ್ವನ್ಯುರುಕ್ರಮಪರಿಗ್ರಹಮಂಗರಕ್ಷನ್**
**ಗೋಪೈರಸದ್ಭಿರಬಲೇವ ವಿನಿರ್ಜಿತೋಽಸ್ಮಿ ॥೨೦॥**

**ಹೇ ನೃಪೇಂದ್ರ** ರಾಜನೇ **ಪ್ರಿಯೇಣ** ಎಲ್ಲಕ್ಕಿಂತಲೂ ಪ್ರಿಯನಾದ **ಸುಹೃದಾ** ಅನಿಮಿತ್ತ ಬಂಧುವಾದ **ಸಖ್ಯಾ** ಅನಾದ್ಯನಂತಕಾಲದಲ್ಲಿ ಜೊತೆಗಿರುವ **ಪುರುಷೋತ್ತಮೇನ** ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಶ್ರೀಕೃಷ್ಣನಿಂದ **ರಹಿತಃ** ಕಾಣದಂತಾಗಿರುವೆನೋ ಆ ಕಾರಣ **ಹೃದಯೇನ ಶೂನ್ಯಃ** ಮಾಡಬೇಕಾದ ಕಾರ್ಯ ಮಾಡುವ ಮನಸಿಲ್ಲದವನಾಗಿರುವೆ. ಆದ್ದರಿಂದಲೇ ಅಂಗರಾಜನೇ **ಅಧ್ವನಿ** ಹಾದಿಯಲ್ಲಿ **ಉರುಕ್ರಮಸ್ಯ** ಶ್ರೀಕೃಷ್ಣನ **ಪರಿಗ್ರಹಂ** ಹದಿನಾರು ಸಾವಿರ ನೂರುಜನ ಪತ್ನಿಯರನ್ನು **ರಕ್ಷನ್** ಕಾಪಾಡುವಾಗ **ಅಸದ್ಭಿಃ** ನೀಚರಾದ **ಗೋಪೈಃ** ದನಕಾಯುವರಿಂದ **ಅಬಲಾ ಇವ** ಸ್ತ್ರೀಯಂತೆ **ವಿನಿರ್ಜಿತಃ ಅಸ್ಮಿ** ಸೋಲಲ್ಪಟ್ಟಿರುವೆನು.

ಶ್ರೀಕೃಷ್ಣನ ವಿಯೋಗದಿಂದಲೇ ಈ ಪರಾಭವ ನನಗೆ ಎಂಬುದನ್ನೇ ವಿಶದಪಡಿಸುವನು.

**ತದ್ವೈ ಧನುಸ್ತ ಇಷವಃ ಸರಥೋ ಹಯಾಸ್ತೇ**
**ಸೋಽಹಂ ರಥೀ ನೃಪತಯೋ ಯತ ಆನಮಂತಿ ।**

**ಸರ್ವಂ ಕ್ಷಣೇನ ತದಭೂದಸದೀಶರಿಕ್ತಂ**
**ಭಸ್ಮನ್ ಹುತಂ ಕುಹಕರಾದ್ಧಮಿವೋಪ್ತಮೂಷೇ ॥೨೧॥**

**ಧನುಃ** ಧನುಸ್ಸು **ತದ್ವೈ** ಅದೇ (ಗಾಂಡಿವನೇ ಇನ್ನು ಅರ್ಜುನನಲ್ಲದೆ) **ತೇ ಇಷವಃ** ಅಂಥವೇ ಬಾಣಗಳು (ಬಿಟ್ಟ ಬಾಣಗಳು ವಾಪಸ್ಸು ಬಂದಿಲ್ಲ ತಾನೇ) **ಸಃ ರಥಃ** ಅಂಥದೇ ರಥವು **ತೇ ಹಯಾಃ** ಅಂಥವೇ ಕುದುರೆಗಳು **ಸೋಽಹಂ ರಥೀ** ಹೇ ರಥಿಕನೇ ನಾನು **ಯತಃ** ಯಾವನಿಗೆ **ನೃಪತಯಃ** ರಾಜರು **ಆನಮಂತಿ** ನಮಸ್ಕರಿಸುವರು **ತತ್ ಸರ್ವಂ** ಅವೆಲ್ಲವು **ಈಶರಿಕ್ತಂ** ಶ್ರೀಕೃಷ್ಣನಿಂದ ಅರಕ್ಷಿತವಾಗಿ **ಕ್ಷಣೇನ** ಒಂದು ಕ್ಷಣದಲ್ಲಿ **ಅಸತ್ ಅಭೂತ್** ಕಾರ್ಯಾಕ್ಷಮವಾಯಿತು. ಹೇಗೆಂದರೆ **ಭಸ್ಮನ್ ಹುತಂ** ಇವನ ಬುದ್ಧಿಯಲ್ಲಿ ಮಂತ್ರೋಚ್ಚಾರಣ ಮಾಡಿ ಹೋಮ ಮಾಡಿದಂತೆ **ಕುಹಕರಾದ್ಧಂ ಇವ** ಮಾಯಾವಿಯಾದ ಐಂದ್ರಜಾಲಿಕನಿಂದ ಲಬ್ಧವಾದ ಹಣ್ಣು ಮುಂತಾದವುಗಳಂತೆ ಅವಿದ್ಯಮಾನವಾದುದರಿಂದ ಕೆಲಸಕ್ಕೆ ಬಾರದ. **ಉಷೆ** ಮರುಭೂಮಿಯಲ್ಲಿ **ಉಪ್ತಂ** ಬಿತ್ತಲ್ಪಟ್ಟ ಬೀಜದಂತೆ ಎಂದು ಭಾವ.

**ವಿಶೇಷ :-** ಮೊದಲನೆಯ ದೃಷ್ಟಾಂತದಲ್ಲಿ ಮಂತ್ರೋಚ್ಚಾರಣದಿಂದುಂಟಾದ ಸ್ವಲ್ಪ ಪುಣ್ಯವಿದೆ. ಸರ್ವಥಾ ವ್ಯರ್ಥವಲ್ಲ ಕಾರಣ ಎರಡನೆಯ ದೃಷ್ಟಾಂತ ಅಲ್ಲಿಯೂ ಸಂಪೂರ್ಣ ವೈಯರ್ಥ್ಯವಿಲ್ಲ ಹಣ್ಣು ತಿನ್ನಲು ನಮಗೆ ಬರದಿದ್ದರೂ ವಿದ್ಯೆಯಿಂದ ಸಂತುಷ್ಟರಾದ ಅವನಿಗೆ ದುಡ್ಡು ಕೊಡುವನು ಕಾರಣ ಮೂರನೆಯ ದೃಷ್ಟಾಂತ ಮರುಭೂಮಿಯಲ್ಲಿ ಬಿತ್ತಿದರೆ ಯಾರಿಗೂ ಏನೂ ಪ್ರಯೋಜನವಿಲ್ಲ ಎಂದು ಭಾವ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ 'ಸಃ ರಥಃ ತೇ ಹಯಾಃ' ಎಂದು ತತ್ ಶಬ್ದದಿಂದ ಯುದ್ಧಕಾಲದ ರಥ ಕುದುರೆಗಳೇ ಸ್ವೀಕರಿಸಿದಂತೆ ತೋರುವದು ಕಾರಣ ಆ ಯತ್‌ತಚ್ಛಬ್ದಗಳ ಅರ್ಥ ಹೇಳುವರು.

'ಸ ರಥೋ ಹಯಾಸ್ತೇ ತಾದೃಶಾಃ ಇತ್ಯರ್ಥಃ' । ತ ಇಷವ ಇತೀವ ।
ಸದೃಶೇ ವಾ ಪ್ರಧಾನೇ ವಾ ಕಾರಣೇ ತದಿತ್ಯಯಂ ।
ಶಬ್ದಃ ಸಂಘಟತೇ ಭೇದೇ ವಿದ್ಯಮಾನೇಽಪಿ ತತ್ತ್ವತಃ ॥ -ಇತಿ ಬ್ರಹ್ಮತರ್ಕೇ
ತದ್ರಥಹಯಾನಾಂ ದಾಹೋಕ್ತೇಃ ॥

**ಇತಿ** ಗೆಳೆಯನೆಂದು **ಋಭುಮಾನ್** ದೇವತೆಗಳೇ ಸೇವಕನಾಗಿವುಳ್ಳ ಶ್ರೀಹರಿಯು **ವಿಪ್ರಲಬ್ಧಃ** ತಿರಸ್ಕರಿಸಲ್ಪಟ್ಟನು. ದೊಡ್ಡವರೊಡನೆ ಒಂದೇ ಆಸನಾದಿಗಳಲ್ಲಿ ಇರುವದೇ ಅವರ ತಿರಸ್ಕಾರವಿದ್ದಂತೆ. ಹೀಗೆ ನಾನು ತಿರಸ್ಕರಿಸಿದರೂ **ಮಹಾಮಹಿತಯಾ** ಮಹಾಮಹಿಮನಾದುದರಿಂದ **ಕುಮತೇಃ** ದುಷ್ಟಬುದ್ಧಿಯಾದ **ಮೇ** ನನ್ನ **ಅಘಂ** ಪಾಪವನ್ನು **ಸಖ್ಯುಃ ಅಘಂ ಸಖಾ** ಗೆಳೆಯನ ತಪ್ಪುಗಳನ್ನು ಗೆಳಯನು ಸಹಿಸುವಂತೆ **ತನುಜಸ್ಯ ಅಘಂ ಪಿತೃವತ್** ಮಗನ ತಪ್ಪನ್ನು ತಂದೆಯು ಸಹಿಸುವಂತೆ **ಸೇಹೇ** ಸಹಿಸಿದನು.

ನೀನು ಶಂಕಿಸಿದ ನೀಚರಿಂದ ಪರಾಭವವು ಶ್ರೀಕೃಷ್ಣನ ವಿಯೋಗದಿಂದ ಪ್ರಾಪ್ತವಾಗಿದೆ ಎಂದು ಹೇಳುವನು.

**ಸೋಽಹಂ ನೃಪೇಂದ್ರ ರಹಿತಃ ಪುರುಷೋತ್ತಮೇನ**
**ಸಖ್ಯಾ ಪ್ರಿಯೇಣ ಸುಹೃದಾ ಹೃದಯೇನ ಶೂನ್ಯಃ ।**
**ಅಧ್ವನ್ಯುರುಕ್ರಮಪರಿಗ್ರಹಮಂಗರಕ್ಷನ್**
**ಗೋಪೈರಸದ್ಭಿರಬಲೇವ ವಿನಿರ್ಜಿತೋಽಸ್ಮಿ ॥೨೦॥**

**ಹೇ ನೃಪೇಂದ್ರ** ರಾಜನೇ **ಪ್ರಿಯೇಣ** ಎಲ್ಲಕ್ಕಿಂತಲೂ ಪ್ರಿಯನಾದ **ಸುಹೃದಾ** ಅನಿಮಿತ್ತ ಬಂಧುವಾದ **ಸಖ್ಯಾ** ಅನಾದ್ಯನಂತಕಾಲದಲ್ಲಿ ಜೊತೆಗಿರುವ **ಪುರುಷೋತ್ತಮೇನ** ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಶ್ರೀಕೃಷ್ಣನಿಂದ **ರಹಿತಃ** ಕಾಣದಂತಾಗಿರುವೆನೋ ಆ ಕಾರಣ **ಹೃದಯೇನ ಶೂನ್ಯಃ** ಮಾಡಬೇಕಾದ ಕಾರ್ಯ ಮಾಡುವ ಮನಸಿಲ್ಲದವನಾಗಿರುವೆ. ಆದ್ದರಿಂದಲೇ ಅಂಗರಾಜನೇ **ಅಧ್ವನಿ** ಹಾದಿಯಲ್ಲಿ **ಉರುಕ್ರಮಸ್ಯ** ಶ್ರೀಕೃಷ್ಣನ **ಪರಿಗ್ರಹಂ** ಹದಿನಾರು ಸಾವಿರ ನೂರುಜನ ಪತ್ನಿಯರನ್ನು **ರಕ್ಷನ್** ಕಾಪಾಡುವಾಗ **ಅಸದ್ಭಿಃ** ನೀಚರಾದ **ಗೋಪೈಃ** ದನಕಾಯುವರಿಂದ **ಅಬಲಾ ಇವ** ಸ್ತ್ರೀಯಂತೆ **ವಿನಿರ್ಜಿತಃ ಅಸ್ಮಿ** ಸೋಲಲ್ಪಟ್ಟಿರುವೆನು.

ಶ್ರೀಕೃಷ್ಣನ ವಿಯೋಗದಿಂದಲೇ ಈ ಪರಾಭವ ನನಗೆ ಎಂಬುದನ್ನೇ ವಿಶದಪಡಿಸುವನು.

**ತದ್ವೈ ಧನುಸ್ತ ಇಷವಃ ಸರಥೋ ಹಯಾಸ್ತೇ**
**ಸೋಽಹಂ ರಥೀ ನೃಪತಯೋ ಯತ ಆನಮಂತಿ ।**

**ಸರ್ವಂ ಕ್ಷಣೇನ ತದಭೂದಸದೀಶರಿಕ್ತಂ**
**ಭಸ್ಮನ್ ಹುತಂ ಕುಹಕರಾದ್ಧಮಿವೋಪ್ತಮೂಷೇ** ॥೨೧॥

**ಧನುಃ** ಧನುಸ್ಸು **ತದ್ವೈ** ಅದೇ (ಗಾಂಡಿವನೇ ಇನ್ನು ಅರ್ಜುನನಲ್ಲದೆ) **ತೇ ಇಷವಃ** ಅಂಥವೇ ಬಾಣಗಳು (ಬಿಟ್ಟ ಬಾಣಗಳು ವಾಪಸ್ಸು ಬಂದಿಲ್ಲ ತಾನೇ) **ಸಃ ರಥಃ** ಅಂಥದೇ ರಥವು **ತೇ ಹಯಾಃ** ಅಂಥವೇ ಕುದುರೆಗಳು **ಸೋಽಹಂ ರಥೀ** ಹೇ ರಥಿಕನೇ ನಾನು **ಯತಃ** ಯಾವನಿಗೆ **ನೃಪತಯಃ** ರಾಜರು **ಆನಮಂತಿ** ನಮಸ್ಕರಿಸುವರು **ತತ್ ಸರ್ವಂ** ಅವೆಲ್ಲವು **ಈಶರಿಕ್ತಂ** ಶ್ರೀಕೃಷ್ಣನಿಂದ ಅರಕ್ಷಿತವಾಗಿ **ಕ್ಷಣೇನ** ಒಂದು ಕ್ಷಣದಲ್ಲಿ **ಅಸತ್ ಅಭೂತ್** ಕಾರ್ಯಾಕ್ಷಮವಾಯಿತು. ಹೇಗೆಂದರೆ **ಭಸ್ಮನ್ ಹುತಂ** ಇವನ ಬುದ್ಧಿಯಲ್ಲಿ ಮಂತ್ರೋಚ್ಚಾರಣ ಮಾಡಿ ಹೋಮ ಮಾಡಿದಂತೆ **ಕುಹಕರಾದ್ಧಂ ಇವ** ಮಾಯಾವಿಯಾದ ಐಂದ್ರಜಾಲಿಕನಿಂದ ಲಬ್ಧವಾದ ಹಣ್ಣು ಮುಂತಾದವುಗಳಂತೆ ಅವಿದ್ಯಮಾನವಾದುದರಿಂದ ಕೆಲಸಕ್ಕೆ ಬಾರದ. **ಉಷೆ** ಮರುಭೂಮಿಯಲ್ಲಿ **ಉಪ್ತಂ** ಬಿತ್ತಲ್ಪಟ್ಟ ಬೀಜದಂತೆ ಎಂದು ಭಾವ.

**ವಿಶೇಷ** :-ಮೊದಲನೆಯ ದೃಷ್ಟಾಂತದಲ್ಲಿ ಮಂತ್ರೋಚ್ಚಾರಣದಿಂದುಂಟಾದ ಸ್ವಲ್ಪ ಪುಣ್ಯವಿದೆ. ಸರ್ವಥಾ ವ್ಯರ್ಥವಲ್ಲ ಕಾರಣ ಎರಡನೆಯ ದೃಷ್ಟಾಂತ ಅಲ್ಲಿಯೂ ಸಂಪೂರ್ಣ ವೈಯರ್ಥ್ಯವಿಲ್ಲ ಹಣ್ಣು ತಿನ್ನಲು ನಮಗೆ ಬರದಿದ್ದರೂ ವಿದ್ಯೆಯಿಂದ ಸಂತುಷ್ಟರಾದ ಅವನಿಗೆ ದುಡ್ಡು ಕೊಡುವನು ಕಾರಣ ಮೂರನೆಯ ದೃಷ್ಟಾಂತ ಮರುಭೂಮಿಯಲ್ಲಿ ಬಿತ್ತಿದರೆ ಯಾರಿಗೂ ಏನೂ ಪ್ರಯೋಜನವಿಲ್ಲ ಎಂದು ಭಾವ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ 'ಸಃ ರಥಃ ತೇ ಹಯಾಃ' ಎಂದು ತತ್ ಶಬ್ದದಿಂದ ಯುದ್ಧಕಾಲದ ರಥ ಕುದುರೆಗಳೇ ಸ್ವೀಕರಿಸಿದಂತೆ ತೋರುವದು ಕಾರಣ ಆ ಯತ್‌ತಚ್ಛಬ್ದಗಳ ಅರ್ಥ ಹೇಳುವರು.

> 'ಸ ರಥೋ ಹಯಾಸ್ತೇ ತಾದೃಶಾಃ ಇತ್ಯರ್ಥಃ' । ತ ಇಷವ ಇತೀವ ।
> ಸದೃಶೇ ವಾ ಪ್ರಧಾನೇ ವಾ ಕಾರಣೇ ತದಿತ್ಯಯಂ ।
> ಶಬ್ದಃ ಸಂಘಟತೇ ಭೇದೇ ವಿದ್ಯಮಾನೇಽಪಿ ತತ್ತ್ವತಃ ॥ -ಇತಿ ಬ್ರಹ್ಮತರ್ಕೇ
> ತದ್ರಥಹಯಾನಾಂ ದಾಹೋಕ್ತೇಃ ॥

ಹಿಂದಿನ ರಥಕ್ಕೆ ಸದೃಶವಾದ ರಥವು ಯುದ್ಧಕಾಲದ ಕುದುರೆಗಳಿಗೆ ಸದೃಶಗಳಾದ ಕುದುರೆಗಳು. ಹೀಗೇಕೆ ಅರ್ಥ ಮಾಡಬೇಕೆಂದರೆ 'ತೇ ಇಷವಃ' ಎಂಬಲ್ಲಿ ಯುದ್ಧಕಾಲದಲ್ಲಿ ಬಿಟ್ಟ ಬಾಣಗಳು ತಿರುಗಿ ಅರ್ಜುನನ ಸಮೀಪಕ್ಕೆ ಬಾರದಿರುವದರಿಂದ ಸದೃಶಗಳೆಂದೇ ಅರ್ಥ ಹೇಳಬೇಕು. ಅದರಂತೆ ಇಲ್ಲಿಯೂ ಹಾಗೆ ಅರ್ಥ. ಆ ವಿಷಯದಲ್ಲಿ ಪ್ರಮಾಣ ತೋರಿಸುವರು.

ಯಥಾರ್ಥವಾಗಿ ಪರಸ್ಪರ ಭೇದವಿದ್ದರೂ ತತ್ಸದೃಶ,ಪ್ರಧಾನ,ಕಾರಣ ಈ 3 ಅರ್ಥಗಳಲ್ಲಿ ತತ್ ಅದುವೇ ಎಂದು ಅಭೇದ ವ್ಯಪದೇಶವು ಇರುತ್ತದೆ ಎಂದು ಬ್ರಹ್ಮತರ್ಕದಲ್ಲಿದೆ. ಯುದ್ಧಕಾಲದ ರಥ ಕುದುರೆ, ಇಟ್ಟುಕೊಂಡರೆ ಬಾಧಕ ಹೇಳುವರು. ಯುದ್ಧ ಮುಗಿದ ಮೇಲೆ ಆಗಿದ್ದ ರಥ ಕುದುರೆಗಳು ಅಶ್ವತ್ಥಾಮಾದಿಗಳು ಬಿಟ್ಟಿರುವ ಅಸ್ತ್ರದ ತೇಜಸ್ಸಿನಿಂದ ಶ್ರೀಕೃಷ್ಣನು ರಥದಿಂದ ಇಳಿದೊಡನೆ ಸುಟ್ಟು ಹೋಗಿವೆ ಎಂದು ಭಾರತದಲ್ಲಿ ಹೇಳಿದೆ. ಯುದ್ಧಕಾಲದಲ್ಲಿ ಅಶ್ವತ್ಥಾಮಾದಿಗಳು ಅರ್ಜುನನ ರಥ ಸುಡಲಿಕ್ಕೆ ಅಸ್ತ್ರಗಳನ್ನು ಪ್ರಯೋಗಿಸಿದರೂ ಶ್ರೀಕೃಷ್ಣನ ಸನ್ನಿಧಾನದಿಂದ ಸುಡಲಿಲ್ಲ. ಯುದ್ಧಾನಂತರ ಶ್ರೀಕೃಷ್ಣನ ವಿಯೋಗದಿಂದ ಆ ರಥಾದಿಗಳು ಆ ಅಸ್ತ್ರಗಳಿಂದಲೇ ಸುಟ್ಟು ಹೋದವು. ಎಂದು ಭಾರತದಲ್ಲಿದೆ.

ಮೇಲಿನ ಪ್ರಮಾಣದ ಪ್ರಕಾರ ತತ್ಶಬ್ದ ಪ್ರಯೋಗಕ್ಕೆ ಉದಾಹರಣ ಕೆಳಗಿನಂತಿದೆ.

ಸಾದೃಶ್ಯಾರ್ಥದಲ್ಲಿ 'ತತ್ತ್ವಮಸಿ' ಮುಂತಾದವು ಏಕೆಂದರೆ ಪ್ರಧಾನ ಕಾರಣಾರ್ಥದಲ್ಲಿ ಅದಕ್ಕೆ ತತ್ಸದೃಶಃ, ತತ್ಪ್ರಧಾನಃ, ತತ್ಕಾರಣಕಃ, ಎಂದು ವ್ಯಾಖ್ಯಾನಿಸಿದ್ದಾರೆ. ಅಥವಾ ಸಾದೃಶ್ಯಾರ್ಥಕ್ಕೆ. ಈಗಿನ ಪ್ರಯೋಗವೇ ಉದಾಹರಣ - ಪ್ರಾಧಾನ್ಯಾರ್ಥದಲ್ಲಿ ಪ್ರಯೋಗ ತಂ ದುರ್ಜಯಂ ಶತ್ರುಮಸಹ್ಯವೇಗಮರಂತುದಂ ತಾನ್ನ ವಿಜಿತ್ಯ ಕೇಚಿತ್ । ಎಂಬ 11ನೇ ಸ್ಕಂಧ ಭಿಕ್ಷುಗೀತೆಯಲ್ಲಿ ಇದೆ.

**ಏಕಸ್ಥಾನಾಧಿಪತ್ಯೇ ತು ಭಿನ್ನಾನಾಮಪಿ ಯುಜ್ಯತೇ ।**
**ಅಭೇದೇ ನ ಪರಾಮರ್ಶಃ ಸಾದೃಶ್ಯೇನಾಪಿ ವಸ್ತುನೋಃ ॥**

ಎಂದಿದೆ. ಕಾರಣತ್ವೇ ಪ್ರಯೋಗ 'ಸ ಏಷ ಭಗವಾನ್ ದ್ರೋಣೇ ಪ್ರಜಾರೂಪೇಣ ವರ್ತತೇ' ಎಂದು ಇದೇ ಸ್ಕಂಧದ ಏಳನೇ ಅಧ್ಯಾಯದಲ್ಲಿ ಹೇಳಿದೆ. ಸಮಭಿವ್ಯಾಹೃತ ಪದಾರ್ಥಗಳಿಗೆ ಭೇದವಿದ್ದರೂ ಪ್ರಯೋಗ ಕಂಡಿದೆ.

ಈಗ ದ್ವಾರಕಾಪಟ್ಟಣದಲ್ಲಿ ಎಲ್ಲ ಕುಶಲವೇ ಎಂಬ ಪ್ರಶ್ನೆಗೆ ಉತ್ತರಿಸುವನು

**ರಾಜಂಸ್ತ್ವಯಾಭಿಪೃಷ್ಟಾನಾಂ ಸುಹೃದಾಂ ನಃ ಸುಹೃತ್ಪುರೇ ।**
**ವಿಪ್ರಶಾಪವಿಮೂಢಾನಾಂ ನಿಘ್ನತಾಂ ಮುಷ್ಟಿಭಿರ್ಮಿಥಃ ॥೨೨॥**

**ಸುಹೃತ್ ಪುರೇ** ದ್ವಾರಕೆಯಲ್ಲಿ **ರಾಜನ್** ಧರ್ಮರಾಜನೇ **ತ್ವಯಾ ಅಭಿಪೃಷ್ಟಾನಾಂ** ನಿನ್ನಿಂದ ಕೇಳಲ್ಪಟ್ಟ **ನಃ ಸುಹೃದಾಂ** ನಮ್ಮ ಬಾಂಧವರಲ್ಲಿ **ವಿಪ್ರಶಾಪವಿಮೂಢಾನಾಂ** ಬ್ರಾಹ್ಮಣರ ಶಾಪದಿಂದ ಕಾರ್ಯಾಕಾರ್ಯ ಗಳನ್ನರಿಯದ **ಮಿಥಃ** ಪರಸ್ಪರ **ಮುಷ್ಟಿಭಿಃ** ಮುಷ್ಟಿಗಳಿಂದ **ನಿಘ್ನತಾಂ** ಹೊಡೆದುಕೊಳ್ಳುವ.

**ವಾರುಣೀಂ ಮದಿರಾಂ ಪೀತ್ವಾ ಮದೋನ್ಮಥಿತಚೇತಸಾಮ್ ।**
**ಅಜಾನತಾಮಿವಾತ್ಮಾನಂ ಚತುಃ ಪಂಚಾವಶೇಷಿತಾಃ ॥೨೩॥**

**ವಾರುಣೀ** ವರುಣನಿರ್ಮಿತವಾದ **ಮದಿರಾಂ ಪೀತ್ವಾ** ಮದಜನಕವಾದ ಸುರಾಪಾನಮಾಡಿ **ಮದೋನ್ಮಥಿತಚೇತಸಾಂ** ಮದದಿಂದ ಕದಡಿದ ಮನಸುಳ್ಳ **ಆತ್ಮಾನಂ ಅಜಾನತಾಂ** ತಮ್ಮನ್ನೇ ತಾವು ತಿಳಿಯದಂತೆ ಹೊಡದಾಡಿ **ಚತುಃ ಪಂಚ ಅವಶೇಷಿತಾಃ** ನಾಲ್ಕು ಐದು ಜನ ಉಳಿಸಲ್ಪಟ್ಟಿರುವರು.

ಈ ಯಾದವ ನಾಶವೂ ಶ್ರೀಕೃಷ್ಣನಿಂದಲೇ ಆದುದು ಎಂದು ಹೇಳುವರು.

**ಪ್ರಾಯೇಣೈತದ್ಭಗವತಃ ಈಶ್ವರಸ್ಯ ವಿಚೇಷ್ಟಿತಮ್ ।**
**ಮಿಥೋ ನಿಘ್ನಂತಿ ಭೂತಾನಿ ಭಾವಯಂತಿ ಚ ಯನ್ಮಿಥಃ ॥೨೪॥**

**ಭೂತಾನಿ** ಪ್ರಾಣಿಗಳು **ಮಿಥಃ** ಪರಸ್ಪರ **ನಿಘ್ನಂತಿ** ನಾಶ ಮಾಡುವವು **ಭಾವಯಂತಿ** ಹುಟ್ಟಿಸುವವು **ಪಾಲಯಂತಿ** ರಕ್ಷಿಸುವರು **ಇತಿ ಯತ್** ಎಂದೇನಿದೆಯೋ **ತತ್** ಅದು **ಭಗವತಃ ಈಶ್ವರಸ್ಯ** ಭಗವಂತನಾದ ಈಶ್ವರನ **ಪ್ರಾಯೇಣ ವಿಚೇಷ್ಟಿತಂ** ಪ್ರಧಾನ ವ್ಯಾಪಾರವು ಅಂದರೆ ಅವನೇ ಎಲ್ಲರಲ್ಲಿದ್ದು ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವವನು ಎಂದು ಭಾವ.

**ಜಲೌಕಸಾಂ ಜಲೇ ಯದ್ವನ್ಮಹಾಂತೋಽದಂತ್ಯಣೀಯಸಃ ।**
**ದುರ್ಬಲಾನ್ ಬಲಿನೋ ರಾಜನ್ ಮಹಾಂತೋ ಬಲಿನೋ ಮಿಥಃ ॥**

**ಜಲೇ** ನೀರಿನಲ್ಲಿ **ಜಲೌಕಸಾಂ** ಜಲಚರಪ್ರಾಣಿಗಳಲ್ಲಿ **ಮಹಾಂತಃ** ದೊಡ್ಡಪ್ರಾಣಿಗಳು **ಅಣಿಯಸಃ** ಚಿಕ್ಕಪ್ರಾಣಿಗಳನ್ನು **ಯದ್ವತ್** ಹೇಗೆ **ಅದಂತಿ** ತಿನ್ನುವವೋ **ತದ್ವತ್** ಹಾಗೆಯೇ **ರಾಜನ್** ಯುಧಿಷ್ಠಿರನೇ **ಮಹಾಂತಃ** ದೊಡ್ಡವರು **ಬಲಿನಃ** ಬಲಿಷ್ಠರಾದವರು **ದುರ್ಬಲಾನ್** ಬಲಹೀನರನ್ನು ಅಲ್ಲದೇ **ಮಿಥಃ** ಪರಸ್ಪರವಾಗಿಯೂ **ಅದಂತಿ** ತಿನ್ನುವರು.

**ಏವಂ ಬಲಿಷ್ಠೈರ್ಯದುಭಿರ್ಮಹದ್ಭಿರಿತರಾನ್ವಿಭುಃ ।**
**ಯದೂನ್ಯದುಭಿರನ್ಯೋನ್ಯಂ ಭೂಭಾರಂ ಸಂಜಹಾರ ಹ ।**
**ಕಂಟಕಂ ಕಂಟಕೇನೈವ ದ್ವಯಂ ಚಾಪೀಶಿತುಃ ಸಮಮ್ ॥೨೬॥**

**ಏವಂ** ಅದೇ ರೀತಿಯಾಗಿ (ಮೀನುಗಳಂತೆ) **ಬಲಿಷ್ಠೈಃ** ಬಹಳ ಬಲವುಳ್ಳ **ಯದುಭಿಃ** ಯಾದವರಿಂದ **ವಿಭುಃ** ಶ್ರೀಹರಿಯು **ಮಹದ್ಭಿಃ** ದೊಡ್ಡವರಿಂದ **ಇತರಾನ್** ದುರ್ಬಲರನ್ನು ಸೂಕ್ಷ್ಮರನ್ನು ಭೂಮಿಗೆ ಭಾರರಾದ ರಾಜರನ್ನು ಮತ್ತು **ಯದೂನ್** ಯಾದವರನ್ನು **ಯದುಭಿಃ** ಯಾದವರಿಂದಲೇ **ಅನ್ಯೋನ್ಯಂ** ಪರಸ್ಪರವಾಗಿ **ಭೂಭಾರಂ** ಭೂಮಿಗೆ ಭಾರರಾದ ರಾಜರ ಸಮೂಹವನ್ನು **ಕಂಟಕಂ** ಕಾಲಿಗೆ ನಟ್ಟ ಮುಳ್ಳನು **ಕಂಟಕೇನ ಇವ** ಮತ್ತೊಂದು ಪ್ರಬಲ ಮುಳ್ಳಿನಿಂದಲೇ ತೆಗೆಯುವಂತೆ **ಸಂಜಹಾರ** ಸಂಹರಿಸಿದನು. **ಈಶಿತುಃ** ಅವರವರ ಕರ್ಮಾನುಸಾರ ಫಲಕೊಡುವ ಶ್ರೀಹರಿಗೆ **ದ್ವಯಂ ಅಪಿ ಸಮಂ** ಯಾದವರ ರಕ್ಷಣೆ ಮತ್ತು ನಾಶ ಸಮವೇ ರಕ್ಷಣೆಯಿಂದ ಸುಖವಿಲ್ಲ ನಾಶದಿಂದ ದುಃಖವಿಲ್ಲ ಅವರ ಕರ್ಮಾನುಸಾರ ರಕ್ಷಣೆಯನ್ನು ಮತ್ತು ನಾಶವನ್ನು ಮಾಡುವನು ಆದ್ದರಿಂದ ಅವನಿಗೇನೂ ಬರಬೇಕಿಲ್ಲ.

**ದೇಶಕಾಲಾರ್ಥಯುಕ್ತಾನಿ ಹೃತ್ತಾಪೋಪಶಮಾನಿ ಚ ।**
**ಹರಂತಿ ಸ್ಮರತಶ್ಚಿತ್ತಂ ಗೋವಿಂದಾಭಿಹಿತಾನಿ ಮೇ ॥೨೭॥**

**ದೇಶಕಾಲಾರ್ಥಯುಕ್ತಾನಿ** ಆಯಾ ಕಾಲ ಆಯಾ ದೇಶ ಆಯಾ ವಸ್ತುಗಳಿಗೆ ಉಚಿತವಾದ **ಹೃತ್ತಾಪೋಪಶಮಾನಿ** ಮನಸ್ಸಿನ ತಾಪ ಕಳೆಯುವ ಅಹಂಕಾರಾಶ್ರಿತ ಸಂಸಾರ ಸಮುದ್ರವನ್ನೇ ಒಣಗಿಸುವ **ಗೋವಿಂದಸ್ಯ** ಶ್ರೀಕೃಷ್ಣನ **ಅಭಿಹಿತಾನಿ** ಮಾತುಗಳನ್ನು **ಸ್ಮರತಃ** ಸ್ಮರಿಸುವ **ಮೇ** ನನ್ನ **ಚಿತ್ತಂ** ಮನಸ್ಸನ್ನು **ಹರಂತಿ** ಅಪಹರಿಸುವವು. ಚಿತ್ತಭ್ರಂಶವಾದುದರಿಂದ ಮುಂದೇನೂ ಹೇಳಲಾರೆ ಎಂದು ಭಾವ.

ಸೂತ ಉವಾಚ -

**ಏವಂ ಚಿಂತಯತೋ ಜಿಷ್ಣೋಃ ಕೃಷ್ಣಪಾದಸರೋರುಹಮ್ ।**
**ಸೌಹಾರ್ದೇನಾತಿಗಾಢೇನ ಶಾಂತಾಽಽಸೀದ್ವಿಮಲಾ ಮತಿಃ ॥೨೮॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ಚತುರ್ದಶೋಽಧ್ಯಾಯಃ ॥

**ಏವಂ** ಈ ರೀತಿಯಾಗಿ **ಅತಿಗಾಢೇನ ಸೌಹಾರ್ದೇನ** ಅತ್ಯಂತ ದೃಢವಾದ ಸ್ನೇಹರೂಪವಾದ ಭಕ್ತಿಯಿಂದ **ಕೃಷ್ಣಪಾದಸರೋರುಹಂ** ಶ್ರೀಕೃಷ್ಣನ ಪಾದಾರವಿಂದಗಳನ್ನು **ಚಿಂತಯತಃ** ಸ್ಮರಿಸುವ **ಜಿಷ್ಣೋಃ** ಅರ್ಜುನನ **ವಿಮಲಾ** ವಿಷಯರಾಗವಿಲ್ಲದ **ಮತಿಃ** ಮನನ ಸಮರ್ಥವಾದ ಬುದ್ಧಿಯು **ಶಾಂತಾ ಆಸೀತ್** ಸುಖಪೂರ್ಣವಾಯಿತು ಮೊದಲಿಗಿಂತ ಅತಿಶಯವಾಗಿ ಭಗವಂತನಲ್ಲಿ ಬುದ್ಧಿ ಆಸಕ್ತವಾಯಿತು. ಶ್ರೀಕೃಷ್ಣನ ಗುಣಗಳನ್ನು ಆಲೋಚಿಸಿ ಪರಮಾನಂದ ಮಗ್ನನಾದನೆಂದು ಭಾವ.

ಇಲ್ಲಿಗೆ ಹದಿನಾಲ್ಕನೇ ಅಧ್ಯಾಯ ಮುಗಿಯಿತು.

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಪಂಚದಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಶ್ರೀಕೃಷ್ಣನ ನಿರ್ಗಮನಾನಂತರ ಕಲಿ ಭೂಲೋಕದಲ್ಲಿ ಸಂಚರಿಸುತ್ತಿರುವದನ್ನು ಕಂಡು ಧರ್ಮರಾಜ ಸ್ವರ್ಗಕ್ಕೆ ಮಹಾಪ್ರಸ್ಥಾನ ಕೈಗೊಳ್ಳಲು ನಿರ್ಧರಿಸಿದ. ಸಿಂಹಾಸನದಲ್ಲಿ ಪರೀಕ್ಷಿತನನ್ನು ಕೂಡಿಸಿ ತಾನು ಹೊರಟ. ಅವನ ಜೊತೆಗೆ ಅವನ ತಮ್ಮಂದಿರೂ ದ್ರೌಪದಿಯೂ ಅವನನ್ನು ಹಾಗೇ ಹಿಂಬಾಲಿಸಿದರು. ಎಲ್ಲರೂ ಭಗವಂತನ ಧ್ಯಾನಮಾಡುತ್ತಾ ಗಂಧಮಾದನ ಪರ್ವತದ ನಾರಾಯಣಾಶ್ರಮದಲ್ಲಿ ಶರೀರ ತ್ಯಾಗ ಮಾಡಿದರು. ತಮ್ಮ ತಮ್ಮ ಮೂಲರೂಪಗಳನ್ನು ಸೇರಿಕೊಂಡರು. ಮೊದಲಿಗೆ ದ್ರೌಪದಿ ಬಳಿಕ ಸಹದೇವ ನಕುಲ ಅರ್ಜುನ ಭೀಮಸೇನರು ಕ್ರಮವಾಗಿ ಶರೀರತ್ಯಾಗ ಮಾಡಿ ಮೂಲರೂಪದಲ್ಲಿ ಸೇರಿಕೊಂಡರು. ಧರ್ಮರಾಜ ಸಶರೀರನಾಗಿ ಸ್ವರ್ಗಕ್ಕೆ ಹೋಗಿ ಅಲ್ಲಿ ಶರೀರತ್ಯಾಗ ಮಾಡಿ ಮೂಲರೂಪದಲ್ಲಿ ಸೇರಿಕೊಂಡ.

**ಪಾಂಡವರ ಮಹಾಪ್ರಸ್ಥಾನ**

ನಾನಾವಿಧ ಕ್ಷತ್ರಿಯರ ಹತ್ಯೆಯಿಂದ ಬಂದ ಪಾಪಯುಕ್ತವಾದ ತಾಮಸವಾದ ಅರ್ಜುನನ ಬುದ್ಧಿಗೆ ನೈರ್ಮಲ್ಯ ಹೇಗೆ ಸಾಧ್ಯ ಎಂದು ಶಂಕಿಸಿ ಇವನು ಜೀವನ್ಮುಕ್ತರಲ್ಲಿ ಒಬ್ಬನಾದ್ದರಿಂದ ಭಗವದರ್ಪಣ ಬುದ್ಧಿಯಿಂದ ಮಾಡಿದ ದುಷ್ಟ ಕ್ಷತ್ರಿಯರ ಹತ್ಯೆ ಮಾಡಿದ ಅವನ ಮತಿಗೆ ನೈರ್ಮಲ್ಯಯುಕ್ತವೇ? ಎಂದು ತಿಳಿಸುವರು ಈ ಶ್ಲೋಕದಲ್ಲಿ.

**ವಾಸುದೇವಾಂಘ್ರ್ಯಭಿಧ್ಯಾನಪರಿಬೃಂಹಿತರಂಹಸಾ ।**
**ಭಕ್ತ್ಯಾ ನಿರ್ಮಥಿತಾಶೇಷಕಷಾಯಧಿಷಣೋಽರ್ಜುನಃ ॥೧॥**

**ಗೀತಂ ಭಗವತಾ ಜ್ಞಾನಂ ಯುತ್ತತ್ಸಂಗ್ರಾಮಮೂರ್ಧನಿ ।**
**ಕಾಲಕರ್ಮತಮೋರುದ್ಧಂ ಪುನರಧ್ಯಗಮದ್ವಿಭುಃ ॥೨॥**

**ವಿಶೋಕೋ ಬ್ರಹ್ಮಸಂಪತ್ತ್ಯಾ ಸಂಛಿನ್ನದ್ವೈತಸಂಶಯಃ ।**
**ಲೀನಪ್ರಕೃತಿನೈರ್ಗುಣ್ಯಾದಲಿಂಗತ್ವಾದಸಂಭವಃ ॥೩॥**

**ವಾಸುದೇವಾಂಘ್ರ್ಯಭಿಧ್ಯಾನಪರಿಬೃಂಹಿತರಂಹಸಾ** ಪರಮಾತ್ಮನ ಪಾದಗಳನ್ನು ಚೆನ್ನಾಗಿ ಧ್ಯಾನಿಸಿದ್ದರಿಂದ ಅಭಿವೃದ್ಧವಾದ ವೇಗವುಳ್ಳ **ಭಕ್ತ್ಯಾ** ಭಕ್ತಿಯಿಂದುಂಟಾದ **ಬ್ರಹ್ಮಸಂಪತ್ತ್ಯಾ** ಈ ಬ್ರಹ್ಮಕಲ್ಪವನ್ನಾರಂಭಿಸಿ ಇಪ್ಪತ್ತು ಕಲ್ಪಗಳ ಹಿಂದೆ ಉಂಟಾದ ಬ್ರಹ್ಮಾಪರೋಕ್ಷ ಜ್ಞಾನದಿಂದ **ಸಂಛಿನ್ನದ್ವೈತಸಂಶಯಃ** ಚೆನ್ನಾಗಿ ನಾಶವಾದ ವಿಪರೀತಜ್ಞಾನ ಮತ್ತು ಸಂಶಯವುಳ್ಳ ಅಥವಾ ಚೆನ್ನಾಗಿ ಸುಟ್ಟುಹೋದ **ದ್ವೈತಸ್ಯ** ಭಗವಂತನ ಜ್ಞಾನಕ್ಕೆ ಅನುಕೂಲವಲ್ಲದ ವಿಷಯಗಳ ಅನುಭವವುಳ್ಳ ಉಪಲಕ್ಷಣಯಾ ಮುಂದೆ ಅನುವಾದ ಮಾಡಿದ್ದರಿಂದ ಲೀನಪ್ರಕೃತಿಯು ನಿರ್ಗುಣನು ಅಲಿಂಗನು, ಅಕರ್ಮನು ಆದನು. ಮತ್ತು **ಅಸಂಭವಃ** ಅಜ್ಞಾನಿಯಂತೆ ಅಪ್ರಾರಬ್ಧ ನಿಮಿತ್ತ ಉತ್ಪತ್ತಿ ಇಲ್ಲದವನು ಇದಕ್ಕೆ ಕಾರಣ ಹೇಳಲು ಲೀನಪ್ರಕೃತಿಃ ಮುಂತಾದವು.

**ಲೀನಪ್ರಕೃತಿಃ** ದಗ್ಧವಾದ ಸ್ವಗುಣಾಚ್ಛಾದಿಕಾರೂಪ ಪ್ರಕೃತಿಯುಳ್ಳವನು **ನಿರ್ಗುಣ** ಸತ್ವಾದಿ ಗುಣಗಳನ್ನು ಕಳೆದುಕೊಂಡ(ಲೀನಾ ಪ್ರಕೃತಿಃ ಯಸ್ಯ ಸಃ ಲೀನಪ್ರಕೃತಿಃ ಭಾವಪ್ರಧಾನ. ಆದ್ದರಿಂದ ಲೀನಪ್ರಕೃತಿತ್ವಂ ಚ ನಿರ್ಗತಾಃ ಗುಣಾಃ ಯಸ್ಮಾತ್ ಸಃ ನಿರ್ಗುಣಃ ಸತ್ಯಭಾವಃ ನೈರ್ಗುಣ್ಯಂ ಚ ತಸ್ಮಾತ್ ದ್ವಂದ್ವೈಕವದ್ಭಾವ ಲೀನ ಪ್ರಕೃತಿನೈರ್ಗುಣ್ಯಾತ್) ಆದ್ದರಿಂದ **ಅಲಿಂಗತ್ವಾತ್** ದಗ್ಧವಾದ್ದರಿಂದ **ಅಲಿಂಗತ್ವಾತ್** ದಗ್ಧವಾದ ಸೂಕ್ಷ್ಮವಾದ ಲಿಂಗಶರೀರವುಳ್ಳವನಾದ್ದರಿಂದ ಪ್ರಾರಬ್ಧಕರ್ಮವು ನಾಶವಾದ್ದರಿಂದಲೂ **ನಿರ್ಮಥಿತಾಶೇಷಕಷಾಯಧಿಷಣಃ** ವಿಶೇಷವಾಗಿ ನಾಶ ಮಾಡಲ್ಪಟ್ಟ ಎಲ್ಲ ದುಷ್ಪ್ರಾರಬ್ಧಫಲೋತ್ಕರ್ಷವುಳ್ಳ ಬ್ರಹ್ಮಾಪರೋಕ್ಷವುಳ್ಳವನೂ ಆದ ಅರ್ಜುನನು **ಭಗವತಾ** ಶ್ರೀಕೃಷ್ಣನಿಂದ **ಸಂಗ್ರಾಮಮೂರ್ಧನಿ** ಯುದ್ಧದ ಮೊದಲು **ಗೀತಂ** ಗೀತೋಪದೇಶದಿಂದುಂಟಾದ **ಯತ್ ಜ್ಞಾನಂ** ಯಾವ ಜ್ಞಾನವಿದೆಯೋ **ತತ್** ಅದು **ಕಾಲಕರ್ಮತಮೋರುದ್ಧಂ** ದುಷ್ಟಪ್ರಾರಬ್ಧದಿಂದ ಉಪೋದ್ಬಲಿತವಾದ ದ್ವಾಪರಾಂತ್ಯರೂಪವಾದ ಕಾಲದಲ್ಲಿ ಸುಟ್ಟಕಟ್ಟಿಗೆಯಂತಿರುವ ತಮೋಗುಣದಿಂದ ಅವ್ಯಕ್ತ(ಮರೆ)ವಾದುದನ್ನು **ಪುನಃ ಅಧ್ಯಗಮತ್** ಪ್ರಾರಬ್ಧಪುಣ್ಯದಿಂದ

ವ್ಯಕ್ತಮಾಡಿಕೊಂಡನು. **ತತಃ** ಆದ್ದರಿಂದ **ವಿಶೋಕಃ** ಮರಣದಿಂದ ಉಂಟಾಗುವ ಶೋಕವಿಲ್ಲದವನಾದನು ಎಂದರ್ಥ.

*ಭಾಗವತತಾತ್ಪರ್ಯ-*

ಹಿಂದಿನ ಅಧ್ಯಾಯದ ಕೊನೆಯಲ್ಲಿ ಅರ್ಜುನನು ಮನನ ಮಾಡಿದನೆಂದು ಹೇಳಿದರು. ಮನನಾ ನಂತರದಲ್ಲಿರುವ ಅರ್ಜುನನ ಅವಸ್ಥೆಯನ್ನು ಈ ಅಧ್ಯಾಯದ ಪ್ರಾರಂಭ (ವಾಸುದೇವ) ಶ್ಲೋಕದಲ್ಲಿ ಹೇಳಿದೆ. ಆದರೆ ಈ ಶ್ಲೋಕದಲ್ಲಿ ನಿರ್ಮಥಿತಾಶೇಷಕಷಾಯಧಿಷಣಃ ಎಂದು ಅರ್ಜುನನ ಜ್ಞಾನದಿಂದ ಅಶೇಷಕಷಾಯಪದವಾಚ್ಯವಾದ ಕರ್ಮಕ್ಷಯ ಹೇಳಿದೆ. ಇದು ಸರಿಯಲ್ಲ. ಅರ್ಜುನನು ಅಪರೋಕ್ಷಜ್ಞಾನಿಯಾದುದರಿಂದ ಹಿಂದೆಯೇ ಜ್ಞಾನವಾದಾಗಲೇ ಕರ್ಮಕ್ಷಯವಾಗಿದೆ. ಪ್ರಾರಬ್ಧಕರ್ಮಭೋಗವಿಲ್ಲದೇ ಕ್ಷಯವಿಲ್ಲ. ಮುಂಬರುವ ಕರ್ಮಗಳ ಸಂಬಂಧವಿಲ್ಲ ಎಂದು ಹೇಳಿದೆ. ಕಾರಣ ಇಲ್ಲಿ ಯಾವ ಕರ್ಮಕ್ಕೆ ಮಥನ ಎಂದು ಶಂಕಿಸಿ ಅಭಿಪ್ರಾಯ ಹೇಳುವರು.

**ಜ್ಞಾನಿನಾಂ ಪ್ರಾರಬ್ಧಸ್ಯೈವ ವಿನಿರ್ಮಥನಂ ಯೋಗ್ಯಸ್ಯ ।**
**ಮಹತಾ ಕಾರಣೇನೈವ ಪ್ರಾರಬ್ಧಾನ್ಯಪಿ ಕಾನಿಚಿತ್ ।**
**ಕರ್ಮಾಣಿ ಕ್ಷಯಮಾಯಾಂತಿ ಬ್ರಹ್ಮದೃಷ್ಟಿಮತಃ ಕ್ವಚಿತ್ ॥**
**-ಇತಿ ಭವಿಷ್ಯತ್ಪರ್ವಣಿ॥**

**ತೇಷಾಮಪಿಕಾಮ್ಯಕರ್ಮಫಲದೃಷ್ಟೇಶ್ಚ॥೧॥**

ಅಪರೋಕ್ಷಜ್ಞಾನಿಗಳ ಪ್ರಾರಬ್ಧಕರ್ಮಕ್ಕೇನೇ ಭೋಗದಿಂದ ವಿಶೇಷವಾಗಿ ನಾಶವು (ಅಪ್ರಾರಬ್ಧವೂ ಮೊದಲೇ ನಷ್ಟವಾಗಿರುವದರಿಂದ ಸಂಚಿತ ಕರ್ಮಕ್ಕಿಲ್ಲ)ಪ್ರಾರಬ್ಧ ಕರ್ಮಗಳಲ್ಲಿಯೂ ನಾಶಯೋಗ್ಯವಾದ ಕೆಲವು ಕರ್ಮಗಳಿಗೇನೆ ಭೋಗದಿಂದ ನಾಶವು 'ನಾಭುಕ್ತಂ ಕ್ಷೀಯತೇ ಕರ್ಮ' ಎಂದು ವಚನವಿರುವದರಿಂದ ಎಲ್ಲ ಪ್ರಾರಬ್ಧಕರ್ಮಗಳು ಜ್ಞಾನಿಗಳಿಂದ ಅನುಭವಿಸಲ್ಪಡುವವು. ಆದರೂ ಅಜ್ಞಾನಿಗಳು ಹೇಗೆ ನಿಷಿದ್ಧಕರ್ಮಗಳನ್ನೂ ಭುಂಜಿಸುವರೋ ಹಾಗೆ ಇವರಲ್ಲಿ ಫಲಹ್ರಾಸ ಉಂಟು. ಇಲ್ಲಿ ಹಿಂದೆ 'ನ ವೈ ಜನೋ ಜಾತು ಕಥಂಚನಾವ್ರಜೇನ್ಮುಕುಂದ ಸೇವ್ಯನ್ಯವದಂಗ ಸಂಸೃತಿ' । ಎಂದು ಹೇಳಿದೆ. ಅಂದ ಮೇಲೆ ಇಲ್ಲಿಯ ಅಶೇಷಕಷಾಯಪದಕ್ಕೆ ಸಂಕೋಚಮಾಡಿ ದುಷ್ಟಕರ್ಮಫಲದ ಉತ್ಕರ್ಷವೆಂದು ಹೇಳಬೇಕು. ಏಕೆಂದರೆ

ಮಹತ್ತರ ಕಾರಣದಿಂದ ಅಂದರೆ ಜ್ಞಾನ ಭಕ್ತಿಗಳ ಅಭಿವೃದ್ಧಿಯಿಂದ ಕೆಲವು ದುಷ್ಟಪ್ರಾರಬ್ಧಗಳು ವಸ್ತುತಃ ಭಾರಿ ಫಲ ಕೊಡಬೇಕಾದವುಗಳು ಕ್ಷಯಂ ಆಯಾಂತಿ ಅಷ್ಟು ಫಲಕೊಡಲಾರವು. ಇದಕ್ಕೆ ಯುಕ್ತಿ ಹೇಳುವರು. ಜ್ಞಾನಿಗಳಿಗೂ ಈಗ ಕಾಮ್ಯವಾದ ಪ್ರಾರಬ್ಧಕರ್ಮದ ಫಲವು ಕಂಡದ್ದರಿಂದ ಸಂಪೂರ್ಣ ಪ್ರಾರಬ್ಧಕರ್ಮಕ್ಕೆ ಈಗಲೇ ನಾಶವಿಲ್ಲ. ಹಾಗಿದ್ದಲ್ಲಿ ಅವರಿಗೆ ಈಗ ಕಾಮ್ಯನಿಷಿದ್ಧಫಲ ಕಾಣಬಾರದಿತ್ತು ಕಂಡಿವೆ. ಆ ಕಾರಣ ಅಶೇಷನಾಶವಿಲ್ಲ 'ಈಷದ್ವಿನಾಶಸ್ತು ಫಲದ್ವಾರೈವ' ಎಂದು ಸುಧೆಯಲ್ಲಿ ಹೇಳಿದ್ದರಿಂದ ಮತ್ತು 'ನಾಭುಕ್ತಂ ಕ್ಷಿಯತೇ ಕರ್ಮ' ಎಂಬ ವಚನದ ಪ್ರಕಾರ ಪ್ರಾರಬ್ಧಕರ್ಮನಾಶವಾಗುವದು ಇದರ ಅರ್ಥ ಫಲದ ಉತ್ಕರ್ಷನಾಶವೆಂದೇ ಹೊರತು ಸರ್ವಥಾ ಕರ್ಮನಾಶವಲ್ಲ. ಅಥವಾ 'ನಾಭುಕ್ತಂ ಕ್ಷೀಯತೇ ಕರ್ಮ' ಎಂಬ ಮಾತಿನ ಪ್ರಕಾರ ಪ್ರಾರಬ್ಧ ಕರ್ಮಗಳಿಗೆ ಸರ್ವಾತ್ಮನಾ ನಾಶವಿಲ್ಲವೆಂದೇ ಏಕೆ ಅರ್ಥ ಹೇಳಬಾರದು. ಎಂದರೆ ಹೇಳಿದ್ದು 'ಮಹತಾ ಕಾರಣೇನ' ಎಂದು ಈ ವಿಷಯದಲ್ಲಿ ಯುಕ್ತಿ ಹೇಳಿದ್ದು. 'ತೇಷಾಮಪಿ ಕಾಮ್ಯಕರ್ಮಫಲದೃಷ್ಟೇಃ' ಎಂಬುದು. ಇಲ್ಲಿ ಕಾಮ್ಯಕರ್ಮಪದದಿಂದ ಬ್ರಹ್ಮಹತ್ಯೆಯ ಫಲವಾದ ಕ್ಷಯರೋಗ. ಅದರ ನಿವೃತ್ತಿಗಾಗಿ ಮಾಡುವ ಪ್ರಾಯಶ್ಚಿತ್ತವಿಧಿಗಳು ವಿವಕ್ಷಿತವಾಗಿವೆ. ಅಂದರೆ 'ಬ್ರಹ್ಮಹಾ ಕ್ಷಯರೋಗಿ ಸ್ಯಾತ್' ಎಂದಿರುವದರಿಂದ ಕ್ಷಯವು ಬ್ರಹ್ಮಹತ್ಯೆಯ ಫಲ ಎಂದು ಸಿದ್ಧವಾಗಿದೆ. ಆ ಬ್ರಹ್ಮಹತ್ಯೆಯಿಂದ ಉಂಟಾದ ಕ್ಷಯಾದಿಗಳು ಪ್ರಾರಬ್ಧವೇ. ಈ ಪ್ರಾರಬ್ಧ ಕರ್ಮದ ಫಲವಾದ ಕ್ಷಯರೋಗ ಪ್ರಾಯಶ್ಚಿತ್ತದಿಂದ ಹೋಗುವದು. ಅಂದಮೇಲೆ ಪ್ರಾರಬ್ಧಕರ್ಮಕ್ಕೆ ಸರ್ವಥಾ ಉಪಮರ್ದವಿಲ್ಲ ಎನ್ನಲಾಗುವದಿಲ್ಲ. ಇಲ್ಲವಾದರೆ ಪ್ರಾಯಶ್ಚಿತ್ತವಿಧಿಗಳು ವ್ಯರ್ಥವಾಗಬೇಕಾಗುವದು. ಉಪಮರ್ದ ಉಂಟು.

*ಭಾಗವತತಾತ್ಪರ್ಯ-*

೨ನೇ ಶ್ಲೋಕದಲ್ಲಿ ಕಾಲಕರ್ಮತಮೋರುದ್ಧಂ ಎಂದು ಕಾಲತಮಸ್ಸುಗಳಿಗೂ ಕರ್ಮದಂತೆ ಸ್ವತಂತ್ರವಾಗಿ ಜ್ಞಾನಪ್ರತಿಬಂಧಕತ್ವ ಹೇಳುವಂತೆ ತೋರುವದು. ಅದು ಸರಿಯಲ್ಲ. ಪ್ರಾರಬ್ಧಕರ್ಮವಿಲ್ಲದಿದ್ದರೆ ಕಾಲತಮೋಗುಣವಿದ್ದರೂ ಜ್ಞಾನವಾಗುವದು ಕಂಡಿದೆ. ಕಾರಣವನ್ನು ಹೇಳುವರು.

ತಮ ಆದಿ ನಿರೋಧಶ್ಚ ಪ್ರಾರಬ್ಧಕರ್ಮಣೈವ ।
ಜ್ಞಾನಾದಿವ್ಯಕ್ತಿರವ್ಯಕ್ತಿಃ ಸುಖದುಃಖಾದಿಕಂ ತಥಾ ।
ಸುದೃಷ್ಟಬ್ರಹ್ಮತತ್ತ್ವಾನಾಂ ಭವತ್ಯಾರಬ್ಧಕರ್ಮಣಾ ॥ -ಇತಿ ಬ್ರಹ್ಮವೈವರ್ತೇ

ವ್ಯಕ್ತಮಾಡಿಕೊಂಡನು. **ತತಃ** ಆದ್ದರಿಂದ **ವಿಶೋಕಃ** ಮರಣದಿಂದ ಉಂಟಾಗುವ ಶೋಕವಿಲ್ಲದವನಾದನು ಎಂದರ್ಥ.

*ಭಾಗವತತಾತ್ಪರ್ಯ-*

ಹಿಂದಿನ ಅಧ್ಯಾಯದ ಕೊನೆಯಲ್ಲಿ ಅರ್ಜುನನು ಮನನ ಮಾಡಿದನೆಂದು ಹೇಳಿದರು. ಮನನಾ ನಂತರದಲ್ಲಿರುವ ಅರ್ಜುನನ ಅವಸ್ಥೆಯನ್ನು ಈ ಅಧ್ಯಾಯದ ಪ್ರಾರಂಭ (ವಾಸುದೇವ) ಶ್ಲೋಕದಲ್ಲಿ ಹೇಳಿದೆ. ಆದರೆ ಈ ಶ್ಲೋಕದಲ್ಲಿ ನಿರ್ಮಥಿತಾಶೇಷಕಷಾಯಧಿಷಣಃ ಎಂದು ಅರ್ಜುನನ ಜ್ಞಾನದಿಂದ ಅಶೇಷಕಷಾಯಪದವಾಚ್ಯವಾದ ಕರ್ಮಕ್ಷಯ ಹೇಳಿದೆ. ಇದು ಸರಿಯಲ್ಲ. ಅರ್ಜುನನು ಅಪರೋಕ್ಷಜ್ಞಾನಿಯಾದುದರಿಂದ ಹಿಂದೆಯೇ ಜ್ಞಾನವಾದಾಗಲೇ ಕರ್ಮಕ್ಷಯವಾಗಿದೆ. ಪ್ರಾರಬ್ಧಕರ್ಮಭೋಗವಿಲ್ಲದೇ ಕ್ಷಯವಿಲ್ಲ. ಮುಂಬರುವ ಕರ್ಮಗಳ ಸಂಬಂಧವಿಲ್ಲ ಎಂದು ಹೇಳಿದೆ. ಕಾರಣ ಇಲ್ಲಿ ಯಾವ ಕರ್ಮಕ್ಕೆ ಮಥನ ಎಂದು ಶಂಕಿಸಿ ಅಭಿಪ್ರಾಯ ಹೇಳುವರು.

**ಜ್ಞಾನಿನಾಂ ಪ್ರಾರಬ್ಧಸ್ಯೈವ ವಿನಿರ್ಮಥನಂ ಯೋಗ್ಯಸ್ಯ ।**
**ಮಹತಾ ಕಾರಣೇನೈವ ಪ್ರಾರಬ್ಧಾನ್ಯಪಿ ಕಾನಿಚಿತ್ ।**
**ಕರ್ಮಾಣಿ ಕ್ಷಯಮಾಯಾಂತಿ ಬ್ರಹ್ಮದೃಷ್ಟಿಮತಃ ಕ್ವಚಿತ್ ॥**
**-ಇತಿ ಭವಿಷ್ಯತ್ಪರ್ವಣಿ॥**

**ತೇಷಾಮಪಿಕಾಮ್ಯಕರ್ಮಫಲದೃಷ್ಟೇಶ್ಚ॥೧॥**

ಅಪರೋಕ್ಷಜ್ಞಾನಿಗಳ ಪ್ರಾರಬ್ಧಕರ್ಮಕ್ಕೇನೇ ಭೋಗದಿಂದ ವಿಶೇಷವಾಗಿ ನಾಶವು (ಅಪ್ರಾರಬ್ಧವೂ ಮೊದಲೇ ನಷ್ಟವಾಗಿರುವದರಿಂದ ಸಂಚಿತ ಕರ್ಮಕ್ಕಿಲ್ಲ)ಪ್ರಾರಬ್ಧ ಕರ್ಮಗಳಲ್ಲಿಯೂ ನಾಶಯೋಗ್ಯವಾದ ಕೆಲವು ಕರ್ಮಗಳಿಗೇನೆ ಭೋಗದಿಂದ ನಾಶವು 'ನಾಭುಕ್ತಂ ಕ್ಷೀಯತೇ ಕರ್ಮ' ಎಂದು ವಚನವಿರುವದರಿಂದ ಎಲ್ಲ ಪ್ರಾರಬ್ಧಕರ್ಮಗಳು ಜ್ಞಾನಿಗಳಿಂದ ಅನುಭವಿಸಲ್ಪಡುವವು. ಆದರೂ ಅಜ್ಞಾನಿಗಳು ಹೇಗೆ ನಿಷಿದ್ಧಕರ್ಮಗಳನ್ನೂ ಭುಂಜಿಸುವರೋ ಹಾಗೆ ಇವರಲ್ಲಿ ಫಲಹ್ರಾಸ ಉಂಟು. ಇಲ್ಲಿ ಹಿಂದೆ 'ನ ವೈ ಜನೋ ಜಾತು ಕಥಂಚನಾವ್ರಜೇನ್ಮುಕುಂದ ಸೇವ್ಯನ್ಯವದಂಗ ಸಂಸೃತಿ' । ಎಂದು ಹೇಳಿದೆ. ಅಂದ ಮೇಲೆ ಇಲ್ಲಿಯ ಅಶೇಷಕಷಾಯಪದಕ್ಕೆ ಸಂಕೋಚಮಾಡಿ ದುಷ್ಟಕರ್ಮಫಲದ ಉತ್ಕರ್ಷವೆಂದು ಹೇಳಬೇಕು. ಏಕೆಂದರೆ

ಮಹತ್ತರ ಕಾರಣದಿಂದ ಅಂದರೆ ಜ್ಞಾನ ಭಕ್ತಿಗಳ ಅಭಿವೃದ್ಧಿಯಿಂದ ಕೆಲವು ದುಷ್ಟಪ್ರಾರಬ್ಧಗಳು ವಸ್ತುತಃ ಭಾರಿ ಫಲ ಕೊಡಬೇಕಾದವುಗಳು ಕ್ಷಯಂ ಆಯಾಂತಿ ಅಷ್ಟು ಫಲಕೊಡಲಾರವು. ಇದಕ್ಕೆ ಯುಕ್ತಿ ಹೇಳುವರು. ಜ್ಞಾನಿಗಳಿಗೂ ಈಗ ಕಾಮ್ಯವಾದ ಪ್ರಾರಬ್ಧಕರ್ಮದ ಫಲವು ಕಂಡದ್ದರಿಂದ ಸಂಪೂರ್ಣ ಪ್ರಾರಬ್ಧಕರ್ಮಕ್ಕೆ ಈಗಲೇ ನಾಶವಿಲ್ಲ. ಹಾಗಿದ್ದಲ್ಲಿ ಅವರಿಗೆ ಈಗ ಕಾಮ್ಯನಿಷಿದ್ಧಫಲ ಕಾಣಬಾರದಿತ್ತು ಕಂಡಿವೆ. ಆ ಕಾರಣ ಅಶೇಷನಾಶವಿಲ್ಲ 'ಈಷದ್ವಿನಾಶಸ್ತು ಫಲದ್ವಾರ್ರೈವ' ಎಂದು ಸುಧೆಯಲ್ಲಿ ಹೇಳಿದ್ದರಿಂದ ಮತ್ತು 'ನಾಭುಕ್ತಂ ಕ್ಷಿಯತೇ ಕರ್ಮ' ಎಂಬ ವಚನದ ಪ್ರಕಾರ ಪ್ರಾರಬ್ಧಕರ್ಮನಾಶವಾಗುವದು ಇದರ ಅರ್ಥ ಫಲದ ಉತ್ಕರ್ಷನಾಶವೆಂದೇ ಹೊರತು ಸರ್ವಥಾ ಕರ್ಮನಾಶವಲ್ಲ. ಅಥವಾ 'ನಾಭುಕ್ತಂ ಕ್ಷೀಯತೇ ಕರ್ಮ' ಎಂಬ ಮಾತಿನ ಪ್ರಕಾರ ಪ್ರಾರಬ್ಧ ಕರ್ಮಗಳಿಗೆ ಸರ್ವಾತ್ಮನಾ ನಾಶವಿಲ್ಲವೆಂದೇ ಏಕೆ ಅರ್ಥ ಹೇಳಬಾರದು. ಎಂದರೆ ಹೇಳಿದ್ದು 'ಮಹತಾ ಕಾರಣೇನ' ಎಂದು ಈ ವಿಷಯದಲ್ಲಿ ಯುಕ್ತಿ ಹೇಳಿದ್ದು. 'ತೇಷಾಮಪಿ ಕಾಮ್ಯಕರ್ಮಫಲದೃಷ್ಟೇಃ' ಎಂಬುದು. ಇಲ್ಲಿ ಕಾಮ್ಯಕರ್ಮಪದದಿಂದ ಬ್ರಹ್ಮಹತ್ಯೆಯ ಫಲವಾದ ಕ್ಷಯರೋಗ. ಅದರ ನಿವೃತ್ತಿಗಾಗಿ ಮಾಡುವ ಪ್ರಾಯಶ್ಚಿತ್ತವಿಧಿಗಳು ವಿವಕ್ಷಿತವಾಗಿವೆ. ಅಂದರೆ 'ಬ್ರಹ್ಮಹಾ ಕ್ಷಯರೋಗಿ ಸ್ಯಾತ್' ಎಂದಿರುವದರಿಂದ ಕ್ಷಯವು ಬ್ರಹ್ಮಹತ್ಯೆಯ ಫಲ ಎಂದು ಸಿದ್ಧವಾಗಿದೆ. ಆ ಬ್ರಹ್ಮಹತ್ಯೆಯಿಂದ ಉಂಟಾದ ಕ್ಷಯಾದಿಗಳು ಪ್ರಾರಬ್ಧವೇ. ಈ ಪ್ರಾರಬ್ಧ ಕರ್ಮದ ಫಲವಾದ ಕ್ಷಯರೋಗ ಪ್ರಾಯಶ್ಚಿತ್ತದಿಂದ ಹೋಗುವದು. ಅಂದಮೇಲೆ ಪ್ರಾರಬ್ಧಕರ್ಮಕ್ಕೆ ಸರ್ವಥಾ ಉಪಮರ್ದವಿಲ್ಲ ಎನ್ನಲಾಗುವದಿಲ್ಲ. ಇಲ್ಲವಾದರೆ ಪ್ರಾಯಶ್ಚಿತ್ತವಿಧಿಗಳು ವ್ಯರ್ಥವಾಗಬೇಕಾಗುವದು. ಉಪಮರ್ದ ಉಂಟು.

*ಭಾಗವತತಾತ್ಪರ್ಯ-*

೨ನೇ ಶ್ಲೋಕದಲ್ಲಿ ಕಾಲಕರ್ಮತಮೋರುದ್ಧಂ ಎಂದು ಕಾಲತಮಸ್ಸುಗಳಿಗೂ ಕರ್ಮದಂತೆ ಸ್ವತಂತ್ರವಾಗಿ ಜ್ಞಾನಪ್ರತಿಬಂಧಕತ್ವ ಹೇಳುವಂತೆ ತೋರುವದು. ಅದು ಸರಿಯಲ್ಲ. ಪ್ರಾರಬ್ಧಕರ್ಮವಿಲ್ಲದಿದ್ದರೆ ಕಾಲತಮೋಗುಣವಿದ್ದರೂ ಜ್ಞಾನವಾಗುವದು ಕಂಡಿದೆ. ಕಾರಣವನ್ನು ಹೇಳುವರು.

> ತಮ ಆದಿ ನಿರೋಧಶ್ಚ ಪ್ರಾರಬ್ಧಕರ್ಮಣೈವ ।
> ಜ್ಞಾನಾದಿವ್ಯಕ್ತಿರವ್ಯಕ್ತಿಃ ಸುಖದುಃಖಾದಿಕಂ ತಥಾ ।
> ಸುದೃಷ್ಟಬ್ರಹ್ಮತತ್ತ್ವಾನಾಂ ಭವತ್ಯಾರಬ್ಧಕರ್ಮಣಾ ॥ -ಇತಿ ಬ್ರಹ್ಮವೈವರ್ತೇ

ತಮಸ್ಸಿನಿಂದಲೂ ಕಾಲದಿಂದಲೂ ಉಂಟಾಗುವ ಜ್ಞಾನದ ತಡೆಯು(ನಿರೋಧ) ಪ್ರಾರಬ್ಧಕರ್ಮದಿಂದಲೇ. ಉಂಟಾಗುವ ಜ್ಞಾನನಿರೋಧಕ್ಕೆ ತಮಃ ಕಾಲಗಳು ಅತಿಶಯಾಧಾಯಕಗಳೇ ಹೊರತು ಮುಖ್ಯಕಾರಣಗಳಲ್ಲ. ಎಂದು ಪ್ರಮಾಣದ ಅರ್ಥ. ಸರಿಯಾದ ಬ್ರಹ್ಮಾಪರೋಕ್ಷಜ್ಞಾನಿಗಳಿಗೆ ಜ್ಞಾನಭಕ್ತ್ಯಾದಿಗೆ ಆ ವ್ಯಕ್ತಿಯು ಮತ್ತು ಅವುಗಳು ವ್ಯಕ್ತಿಯು, ಸುಖದುಃಖಾದಿಗಳೂ ಪ್ರಾರಬ್ಧಕರ್ಮದಿಂದಲೇ ಆಗುತ್ತವೆಂದು ಬ್ರಹ್ಮವೈವರ್ತದಲ್ಲಿದೆ. ಅಂದರೆ ಪುಣ್ಯರೂಪಪ್ರಾರಬ್ಧಕರ್ಮದಿಂದ ಜ್ಞಾನಾದಿಗಳ ಅಭಿವ್ಯಕ್ತಿಯೂ ಸುಖವೂ ಆಗುತ್ತದೆ. ಪಾಪರೂಪ ಪ್ರಾರಬ್ಧದಿಂದ ಅಜ್ಞಾನಾದಿಗಳ ಅಭಿವ್ಯಕ್ತಿ ಜ್ಞಾನದ ತಿರೋಧಾನರೂಪ ದುಃಖಾದಿಗಳಾಗುತ್ತವೆ ಎಂದೂ ಭಾವ.

*ಭಾಗವತತಾತ್ಪರ್ಯ -*

೩ನೇ ಶ್ಲೋಕದಲ್ಲಿ 'ಬ್ರಹ್ಮಸಂಪತ್ಯಾ' ಎಂಬುದಕ್ಕೆ ಬ್ರಹ್ಮಪ್ರಾಪ್ತಿಯಿಂದ ಎಂದರ್ಥ ತೋರುವದು. ಆ ಕಾರಣಕ್ಕಾಗಿ ಸಂಪತ್ತಿಶಬ್ದಾರ್ಥವನ್ನು ಹೇಳುವರು.

ಬ್ರಹ್ಮಸಂಪತ್ತಿರವಗತಿಃ ।

ಪರಬ್ರಹ್ಮನ ಪರೋಕ್ಷಜ್ಞಾನವು ಸಂಪತ್ತಿಶಬ್ದಾರ್ಥ ಹೊರತು ಪ್ರಾಪ್ತಿಯಲ್ಲ. ಇನ್ನು ಅರ್ಜುನನಿಗೆ ಪ್ರಾಪ್ತಿಯಾಗಿಲ್ಲ.

ಇಲ್ಲಿಯೇ ಸಂಚ್ಛಿನ್ನದ್ವೈತಸಂಶಯಃ ಎಂಬಲ್ಲಿರುವ ದ್ವೈತ ಸಂಶಯ ಎಂಬ ಪದಕ್ಕೆ ಭೇದಭ್ರಮವೆಂಬ ಅರ್ಥವನ್ನು ನಿರಾಕರಿಸಲು ವಿವಕ್ಷಿತಾರ್ಥವನ್ನು ಪ್ರಮಾಣಪೂರ್ವಕವಾಗಿ ಹೇಳುವರು.

ಭಗವಂತಂ ವಿನಾನ್ಯಜ್ಞಪ್ರವೃತ್ಯಾದಿಪ್ರಕಾಶನಮ್ ।
ಪ್ರಾರಬ್ಧಕರ್ಮಣೈವ ಸ್ಯಾತ್ ಕದಾಚಿತ್ ಜ್ಞಾನಿನಾಮಪಿ ।
ತಾ ದ್ವೈತದೃಷ್ಟಿಂ ಮೇ ದೇವ ಛಿಂದಿ ಜ್ಞಾನವರಾಸಿನಾ ॥ -ಇತಿ ಬ್ರಾಹ್ಮೇ

ಶ್ರೀಹರಿಪೂಜಾದಿರೂಪ ಕಾರ್ಯವನ್ನು ಬಿಟ್ಟು ಪೂಜಾತ್ವೇನ ಅನುಸಂಧಾನವಿಲ್ಲದೆ ಎಂದರ್ಥ. ವಿಷಯಗಳಲ್ಲಿ ಪ್ರವೃತ್ತಿ ಇವುಗಳಿಂದುಂಟಾಗುವ ಸುಖಾದಿಗಳು ಅವುಗಳ ಅನುಭವ ಇವುಗಳು ಕದಾಚಿತ್ ಜ್ಞಾನಿಗಳಿಗೂ ಉಂಟಾಗುತ್ತವೆ. ಇಂತಹ ನಿಂದ್ಯವಾದ ಪ್ರವೃತ್ಯಾದಿಗಳು ದ್ವೈತದೃಷ್ಟಿ ಎನಿಸುತ್ತವೆ. ಅವುಗಳನ್ನು ಅಪರೋಕ್ಷ ಜ್ಞಾನವೆಂಬ ಉತ್ತಮ ಖಡ್ಗದಿಂದ ವಿನಾಶ ಪಡಿಸು ಎಂದು ಬ್ರಾಹ್ಮಪುರಾಣದಲ್ಲಿದೆ.

ತದೇವ ಸಂಛಿನ್ನದ್ವೈತಸಂಶಯತ್ವಂ । ಲೀನಪ್ರಕೃತಿತ್ವಂ ನೈರ್ಗುಣ್ಯಂ ಚ ಲೀನ ಪ್ರಕೃತಿನೈರ್ಗುಣ್ಯಂ । ತಸ್ಮಾತ್ ಅಸೂಕ್ಷ್ಮಶರೀರತ್ವಾತ್ ಅನಾರಬ್ಧಕರ್ಮಮೂಲತ್ವಾತ್ । ಅಸಂಭವಃ ಪುನರುತ್ಪತ್ತಿವರ್ಜಿತಃ । ಜ್ಞಾನೋದಯಕಾಲೇ ಏವ ಏವಂ ಭೂತಃ ಸನ್ ಪುನರಧ್ಯಗಚ್ಛತ್ ॥

ಪ್ರಕೃತಿಂ ಸ್ವಾತ್ಮಸಂಶ್ಲಿಷ್ಟಾನ್ ಗುಣಾನ್ ಸತ್ವಾದಿಕಾನಪಿ ।
ಕರ್ಮಾಣಿ ಸೂಕ್ಷ್ಮದೇಹಂ ಚ ಜಾಯಮಾನಾ ಹರೇರ್ದೃಶಃ ॥

ದಹೇದಥಾಪಿ ಸಂದಗ್ಧೇಂಧನವತ್ತತ್ಪುನಃ ಪುನಃ ।
ಯಾವದಾರಬ್ಧಕರ್ಮ ಸ್ಯಾದಾವಿರ್ಾಪಿ ತಿರೋ ವ್ರಜೇತ್ ॥

-ಇತಿ ಬ್ರಹ್ಮತರ್ಕೇ

ಉದಾಹೃತ ಪ್ರಮಾಣದಲ್ಲಿ ಹೇಳಿದ ಶ್ರೀಹರಿಯನ್ನು ಅನುಸಂಧಾನ ಮಾಡಿಕೊಳ್ಳದೇ ವಿಷಯಾನುಭವಾದಿಗಳನ್ನು ಛೇದಿಸುವದೇ ಸಂಛಿನ್ನದ್ವೈತ ಸಂಶಯತ್ವವು. ದಗ್ಧಪ್ರಾಯವಾದ ತನ್ನ ಗುಣಕ್ಕೆ ಆಚ್ಛಾದಕವಾದ ಪ್ರಕೃತಿ ಇರುವುದೇಕೇ ಮತ್ತು ಸತ್ವಾದಿಗುಣ ಕಾರ್ಯ ಇಲ್ಲದಿರುವಿಕೆ ಇದೆ. ಲೀನ ಪ್ರಕೃತಿನೈರ್ಗುಣ್ಯವು. ಆದುದರಿಂದಲೂ ಅಲಿಂಗತ್ವಾತ್ ಸೂಕ್ಷ್ಮಲಿಂಗಶರೀರ ಇಲ್ಲ. ಅಸಂಭವಃ ಅನಾರಬ್ಧಕರ್ಮಗಳು ಜ್ಞಾನವು ಹುಟ್ಟಿದೊಡನೇ ನಷ್ಟವಾಗಿರುವದರಿಂದ ಅವುಗಳ ನಿಮಿತ್ತ ಉತ್ಪತ್ತಿ ಇಲ್ಲದಿರುವವನು. ಜ್ಞಾನ ಹುಟ್ಟಿದ ಕಾಲದಲ್ಲಿಯೇ ಶ್ರೀಹರಿ ವಿಷಯಕ ಮಿಥ್ಯಾಜ್ಞಾನ ಸಂದೇಹಗಳಿಲ್ಲದವನಾಗಿ ಮತ್ತೆ ಪ್ರಾರಬ್ಧಪುಣ್ಯದಿಂದ ಜ್ಞಾನವನ್ನು ಅಭಿವ್ಯಕ್ತ ಮಾಡಿಕೊಂಡನು. ನನ್ನಲ್ಲಿ ಸಂಬದ್ಧವಾದ ಸ್ವಗುಣಾಚ್ಛಾದಿಕಾರೂಪವಾದ ದುಷ್ಟಪ್ರಕೃತಿಯನ್ನು ಜೀವಸ್ವರೂಪಕ್ಕೆ ಆಚ್ಛಾದಕವಾದ ಸತ್ವಾದಿಗುಣರೂಪವಾದ ಜಡಪ್ರಕೃತಿಯನ್ನು ಅನಾರಬ್ಧಕರ್ಮಗಳನ್ನು ಲಿಂಗಶರೀರವನ್ನೂ ಕೂಡ ಅಪರೋಕ್ಷಜ್ಞಾನವು ಅವುಗಳಿಂದ ವಿಶೇಷಕಾರ್ಯವಾಗದಂತೆ ಮಾಡುತ್ತದೆ. ಆದರೂ ಚೆನ್ನಾಗಿ ದಗ್ಧಪ್ರಾಯಪ್ರಕೃತ್ಯಾದಿಗಳು ದಗ್ಧವಾದ ಇಂಧನ(ಕಟ್ಟಿಗೆ)ದಂತೆ ದುಷ್ಟವಾದ ಪ್ರಾರಬ್ಧಕರ್ಮಬಲದಿಂದ ಮತ್ತೆ ತನ್ನ ಕಾರ್ಯ ಹುಟ್ಟಿಸಲು ಸಮರ್ಥವಾಗುವದು. ಅಂದರೆ ಕಾಲಕರ್ಮಾದಿಗಳ ಸಹಾಯದಿಂದ ಜ್ಞಾನಪ್ರತಿಬಂಧಕವಾಗುತ್ತದೆ. ಪುಣ್ಯಪ್ರಾರಬ್ಧಕರ್ಮದಿಂದ ಕದಾಚಿತ್ ತನ್ನ ಕಾರ್ಯವನ್ನು ಮಾಡುವಲ್ಲಿ ಶಕ್ತವಾಗುವದಿಲ್ಲ. ಅಂದರೆ ಆ ಕಾಲದಲ್ಲಿ ಜ್ಞಾನಾಭಿವ್ಯಕ್ತಿಗೆ ಪ್ರತಿಬಂಧಕವಾಗುವದಿಲ್ಲ ಎಂದು ಬ್ರಹ್ಮತರ್ಕದಲ್ಲಿದೆ.

ಇಲ್ಲಿಯವರೆಗೆ ಶ್ರೀಕೃಷ್ಣನು ಪರಂಧಾಮಕ್ಕೆ ಹೋಗಿರುವದನ್ನು, ಯಾದವರ ನಾಶವನ್ನು ಹೇಳಿ, ಪಾಂಡವರ ಸ್ವರ್ಗಾರೋಹಣವನ್ನು ಆರಂಭಿಸುವರು

**ನಿಶಮ್ಯ ಭಗವನ್ಮಾರ್ಗಂ ಸಂಸ್ಥಾಂ ಯದುಕುಲಸ್ಯ ಚ ।**
**ಸ್ವಃಪಥಾಯ ಮತಿಂ ಚಕ್ರೇ ನಿವೃತ್ತಾತ್ಮಾ ಯುಧಿಷ್ಠಿರಃ ॥೪॥**

**ಭಗವನ್ಮಾರ್ಗಂ** ಕೃಷ್ಣನ ಸ್ವಧಾಮಗಮನ ಪ್ರಕಾರವನ್ನು **ಚ** ಮತ್ತು **ಯದುಕುಲಸ್ಯ** ಯದುವಂಶದ **ಸಂಸ್ಥಾಂ** ನಾಶವನ್ನು **ನಿಶಮ್ಯ** ಕೇಳಿ **ನಿವೃತ್ತಾತ್ಮಾ** ರಾಜ್ಯಾದಿಭೋಗದಿಂದ ಹಿಂದುರುಗಿದ ಮನಸುಳ್ಳ **ಯುಧಿಷ್ಠಿರಃ** ಧರ್ಮರಾಜನು **ಸ್ವಃಪಥಾಯ** ಸ್ವರ್ಗಮಾರ್ಗಕ್ಕೆ **ಮತಿಂ ಚಕ್ರೇ** ಹೊರಡುವ ನಿಶ್ಚಯ ಮಾಡಿದನು. ಇಚ್ಛೆ ಮಾಡಿದನು.

ಸ್ವರ್ಗಕ್ಕೆ ಹೋಗುವ ನಿರ್ಣಯವನ್ನು ಧರ್ಮರಾಜನು ಏಕೆ ಮಾಡಿದನೆಂದು ಹೇಳುವರು.

**ಯದಾ ಮುಕುಂದೋ ಭಗವಾನಿಮಾಂ ಮಹೀಂ**
**ಜಹೌ ಸ್ವತನ್ವಾ ಶ್ರವಣೀಯಸತ್ಕಥಃ ।**
**ತದಾ ಹರಾವಪ್ರತಿಬದ್ಧಚೇತಸಾ-**
**ಮಭದ್ರಹೇತುಃ ಕಲಿರನ್ವವರ್ತತ ॥೫॥**

**ಯದಾ** ಯಾವಾಗ **ಶ್ರವಣೀಯಸತ್ಕಥಃ** ಅವಶ್ಯ ಕೇಳಲೇಬೇಕಾದ ಚರಿತ್ರೆಯುಳ್ಳ **ಭಗವಾನ್ ಮುಕುಂದಃ** ಷಡ್ಗುಣಶಾಲಿಯಾದ ಶ್ರೀಕೃಷ್ಣನು **ಸ್ವತನ್ವಾ** ತನ್ನಸ್ವರೂಪ ಭೂತದೇಹದಿಂದ **ಇಮಾಂ ಮಹೀಂ ಜಹೌ** ಈ ಭೂಮಿಯನ್ನು ಬಿಟ್ಟನೋ **ತದಾ** ಆಗ **ಹರೌ** ಶ್ರೀಹರಿಯ ವಿಷಯದಲ್ಲಿ **ಅಪ್ರತಿಬದ್ಧಚೇತಸಾಂ** ಜಾಗ್ರತವಾಗದ ಮನಸುಳ್ಳ ಜನರಿಗೆ **ಅಭದ್ರಹೇತುಃ** ಪಾಪಗಳಿಗೆ, ಅಮಂಗಳಕ್ಕೆ ಕಾರಣನಾದ **ಕಲಿಃ** ಕಲಿಯು **ಅನ್ವವರ್ತತ** ಸ್ವೇಚ್ಛಾನುಸಾರ ಪ್ರವರ್ತಿಸಿದನು.

**ಯುಧಿಷ್ಠಿರಸ್ತತ್ಪರಿಸರ್ಪಣಂ ಬುಧಃ**
**ಪುರೇ ಚ ರಾಷ್ಟ್ರೇ ಚ ಗೃಹೇ ತಥಾऽತ್ಮನಿ**
**ವಿಭಾವ್ಯ ಲೋಭಾನೃತಜಿಹ್ಮಹಿಂಸನಾ-**
**ದ್ಯಧರ್ಮಚಕ್ರಂ ಗಮನಾಯ ಪರ್ಯಧಾತ್ ॥೬॥**

**ಬುಧಃ** ವಿವೇಕಜ್ಞಾನಿಯಾದ **ಯುಧಿಷ್ಠಿರಃ** ಧರ್ಮರಾಜನು **ಪುರೇ ಚ** ಊರಲ್ಲಿ **ರಾಷ್ಟ್ರೇ ಚ** ರಾಷ್ಟ್ರದಲ್ಲಿಯೂ **ಗೃಹೇ ಚ** ಹೆಂಡತಿಯಲ್ಲಿಯೂ **ಆತ್ಮನಿ** ತನ್ನಲ್ಲಿಯೂ **ಲೋಭ** ಜಿಪುಣತೆ **ಅನೃತ** ಸುಳ್ಳು **ಜಿಹ್ಮ** ಕೌಟಿಲ್ಯ **ಹಿಂಸನ** ಹಿಂಸಿಸುವದೇ **ಆದ್ಯಧರ್ಮಚಕ್ರಂ** ಮೊದಲಾದ ಅಧರ್ಮ ಸಮೂಹವುಳ್ಳ **ತತ್ಪರಿಸರ್ಪಣಂ** ಕಲಿಯ ವ್ಯಾಪ್ತಿಯನ್ನು **ವಿಭಾವ್ಯ** ತಿಳಿದು **ಗಮನಾಯ ಪರ್ಯಧಾತ್** ಸ್ವರ್ಗಕ್ಕೆ ಹೋಗಲು ನಿಶ್ಚಯಿಸಿದನು. 'ಪ್ರಣಿಧಾನಂ ತೇ ಉ ನಿಕ್ಷೇಪಃ ಪರಿಧಾನಂ ತು ನಿಶ್ಚಯಃ' ಎಂದು ಅಭಿಧಾನವಿದೆ.

**ಸ್ವರಾಟ್ ಪೌತ್ರಂ ವಿನೀತಂ ತಮಾತ್ಮನೋಽನವಮಂ ಗುಣೈಃ ।**
**ತೋಯಂ ನಿವ್ಯಾಃ ಪತಿಂ ಭೂಮೇರಭ್ಯಷಿಂಚದ್ಗಜಾಹ್ವಯೇ ॥೭॥**

**ಸ್ವರಾಟ್** ಚಕ್ರವರ್ತಿಯಾದ ಧರ್ಮರಾಜನು **ವಿನೀತಂ** ವಿನಯ ಸಂಪನ್ನನಾದ **ಆತ್ಮನಃ** ತನಗೆ **ಗುಣೈಃ ಅನವಮಂ** ಮೊಮ್ಮಗನಾಗಲು ಬೇಕಾದ ಶ್ರೀಹರಿಯ ಉಪಾಸನಾದಿ ಗುಣಗಳಿಂದ ಕಡಿಮೆಯಿಲ್ಲದೆ **ಪೌತ್ರಂ** ಅಭಿಮನ್ಯುಸುತನಾದ ಪರೀಕ್ಷಿತನನ್ನು **ತೋಯಂ ನಿವ್ಯಾಃ** ಸುತ್ತಲೂ ಇರುವ ಸಮುದ್ರದ ನೀರೇ ವಸ್ತ್ರವಾಗಿವುಳ್ಳ **ಭೂಮೇಃ ಪತಿಂ** ರಾಜನನ್ನಾಗಿ **ಗಜಾಹ್ವಯೇ** ಹಸ್ತಿನಾಪುರದಲ್ಲಿ **ಅಭ್ಯಷಿಂಚತ್** ಪಟ್ಟಾಭಿಷೇಕ ಮಾಡಿದನು.

*ಭಾಗವತತಾತ್ಪರ್ಯ -*

ಇಲ್ಲಿ ತನಗೆ ಗುಣದಲ್ಲಿ ಕಡಿಮೆ ಇಲ್ಲದ ಎಂದು ಹೇಳಿದ್ದು ಬಾಧಿತವು ಏಕೆಂದರೆ ಪರೀಕ್ಷಿತನು ಚಕ್ರವರ್ತಿಗಳಲ್ಲಿ ಸೇರಿದವನು. ಧರ್ಮರಾಜನು ದೇವತೆಯಾದವನು ಅವನಿಗಿಂತ ತಾರತಮ್ಯದಲ್ಲಿ ಬಹಳ ಕಡಿಮೆ. ಅದಕ್ಕಾಗಿ ಯುಧಿಷ್ಠಿರನಿಗೆ ವಿವಕ್ಷಿತ ಅರ್ಥವನ್ನು ತಾತ್ಪರ್ಯದ ಮೂಲಕ ಹೇಳುವರು.

**'ಪೌತ್ರತ್ವೇ ಯೋಗ್ಯತ್ವಂ ಅನವತ್ವಮ್' ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು.

**ಇಂದ್ರಾದ್ಯುತ್ತಮತಾಽನ್ಯೇಷಾಂ ಸಮ ಕೌ ವಾ ಸ್ವಕೇ ಕುಲೇ ।**
**ಉತ್ತಮತ್ವಮುಪಾಸ್ತ್ಯಾದಿಯೋಗ್ಯತಾಯಾ ನಿಗದ್ಯತೇ ॥ -ಇತಿ ಬ್ರಹ್ಮತರ್ಕೇ**

ದೇವತಾ ಅವತಾರನಾದ ತನ್ನ ಮೊಮ್ಮಗನಾಗಲು ಯೋಗ್ಯನಾದ ಭಗವದುಪಾಸನಾದಿ ಧರ್ಮಗಳಿಂದ ಪೂರ್ಣನಾದುದರಿಂದ ತನಗಿಂತ

ಕಡಿಮೆಯಾದವನಲ್ಲ ಎಂದು ಹೇಳಿದ್ದೇ ಹೊರತು ಯುಧಿಷ್ಠಿರ ಸಾಮ್ಯವಿದ್ದುದರಿಂದಲ್ಲ. ತಮ್ಮ ಕುಲದಲ್ಲಿ ಹುಟ್ಟಿದ ಅಧಮರಾದವರಿಗೆ ಮನುಷ್ಯರಾಗಿ ಜನಿಸಿದ ಇಂದ್ರಾದಿಗಳಿಗಿಂತ ಉತ್ತಮತ್ವವನ್ನು ಎಲ್ಲಿ ಹೇಳುವದೋ ಅಲ್ಲಿ ತಮ್ಮ ಕುಲದಲ್ಲಿ ಹುಟ್ಟಿದ ಇತರ ರಾಜರಿಗಿಂತ ಭಗವದುಪಾಸನಾದಿಯೋಗ್ಯತೆಯಲ್ಲಿ ಉತ್ತಮತ್ವವೇ ಹೇಳಲ್ಪಡುವದೇ ಹೊರತು ಇಂದ್ರಾದಿಗಳಿಗಿಂತ ಉತ್ತಮತೆಯನ್ನಲ್ಲ ಇಂದ್ರಾದಿಗಳಿಂದ ಸಮತ್ವ ಹೇಳಿದ ಸ್ಥಳದಲ್ಲಿ ಇಂದ್ರಾದಿಗಳಿಗೆ ಸಮೋಪಾಸ್ಯತ್ವವಿದ್ದಂತೆ ತನ್ನ ಕುಲದಲ್ಲಿ ಹುಟ್ಟಿದ ಇಂದ್ರನಿಂದ ನಿಕೃಷ್ಟನಾದವನಿಗೂ ದೇವೇತರರಿಗೆ ಸರ್ವೋಪಾಸ್ಯತ್ವವಿದೆ ಎಂಬ ಅಭಿಪ್ರಾಯದಿಂದ ಹೇಳಿದ್ದು ಎಂದು ಬ್ರಹ್ಮ ತರ್ಕದಲ್ಲಿದೆ.

**ಮಧುರಾಯಾಂ ತತೋ ವಜ್ರಂ ಶೂರಸೇನಪತಿಂ ತತಃ ।**
**ಪ್ರಾಜಾಪತ್ಯಾಂ ನಿರುಪ್ಯೇಷ್ಟಿಮಗ್ನೀನಪಿಬದೀಶ್ವರಃ ॥೮॥**

**ತತಃ** ನಂತರ **ಮಧುರಾಯಾಂ** ಮಧುರಾಪಟ್ಟಣದಲ್ಲಿ **ವಜ್ರಂ** ಅನಿರುದ್ಧನ ಮಗನಾದ ವಜ್ರ ಎಂಬುವನನ್ನು **ಶೂರಸೇನಪತಿಂ** ಶೂರಸೇನದೇಶಕ್ಕೆ ರಾಜನನ್ನಾಗಿ **ಅಭ್ಯಷಿಂಚತ್** (ಹಿಂದಿನ ಶ್ಲೋಕದಿಂದ ಶೇಷಮಾಡಿಕೊಳ್ಳಬೇಕು.) ಪಟ್ಟಾಭಿಷೇಕ ಮಾಡಿದನು. **ತತಃ** ನಂತರ **ಪ್ರಾಜಾಪತ್ಯಾಂ ಇಷ್ಟಿಂ ನಿರೂಪ್ಯ** ಪ್ರಜಾಪತಿದೇವತಾಕ ವಾದ ಯಜ್ಞವನ್ನು ಮಾಡಿ **ಈಶ್ವರಃ** ಭೂಮಿಗೆ ಒಡೆಯನಾದ ಅಥವಾ ರಾಜ್ಯವನ್ನು ಬಿಟ್ಟು ಹೋಗಲು ಸಮರ್ಥನಾದ ಧರ್ಮರಾಜನು **ಅಗ್ನೀನ್** ಗಾರ್ಹಪತ್ಯ, ಆಹವನಿಯ, ದಕ್ಷಿಣಾಗ್ನಿಗಳನ್ನು **ಅಪಿಬತ್** ತನ್ನಲ್ಲಿ ಸಮಾರೋಪ ಮಾಡಿಕೊಂಡನು.

**ವಿಸೃಜ್ಯ ತತ್ರ ತತ್ಸರ್ವಂ ದುಕೂಲವಲಯಾದಿಕಮ್ ।**
**ನಿರ್ಮಮೋ ನಿರಹಂಕಾರಃ ಸಂಚ್ಛಿನ್ನಾಶೇಷಬಂಧನಃ ॥೯॥**

**ತತ್ರ** ಆ ಸಮಯದಲ್ಲಿ **ದುಕೂಲವಲಯಾದಿಕಂ ಸರ್ವಂ** ಕೊನೆಗೆ ರೇಷ್ಮೇವಸ್ತ್ರ ಮೊದಲಾದವುಗಳನ್ನೆಲ್ಲ **ವಿಸೃಜ್ಯ** ತೆಗೆದಿರಿಸಿ **ನಿರ್ಮಮಃ** ಮಮಕಾರವಿಲ್ಲದೆ **ನಿರಹಂಕಾರಃ** ಅಹಂಕಾರವನ್ನು ಬಿಟ್ಟು **ಸಂಚ್ಛಿನ್ನಾಶೇಷಬಂಧನಃ** ಎಲ್ಲ ವಿಷಯ ಸ್ನೇಹವನ್ನು ಕಳೆದುಕೊಂಡು

ಮರಣಕಾಲದಲ್ಲಿ ಪ್ರತಿಯೊಬ್ಬನು ಚಿಂತಿಸಬೇಕಾದ ವಾಗಾದಿಗಳ ಪ್ರಲಯವನ್ನು ಶ್ರುತ್ಯಾದಿಗಳಲ್ಲಿ ಹೇಳಿದ್ದನ್ನು ಧರ್ಮರಾಜನು ಮಾಡಿದನೆಂದು ಹೇಳುವರು.

**ವಾಚಂ ಜುಹಾವ ಮನಸಿ ತತ್ಪ್ರಾಣ ಇತರೇ ಪರಮ್ ।**
**ಧೃತ್ಯಾ ಹ್ಯಪಾನಂ ಸೋತ್ಸರ್ಗಂ ತತ್ಪರತ್ವೇ ಹ್ಯಜೊಹವೀತ್ ॥೧೦॥**

**ತ್ರಿತ್ವೇ ಹುತ್ವಾಽಥ ಪಂಚತ್ವಂ ತಚ್ಚೈಕತ್ವೇಽಜುಹೊನ್ಮುನಿಃ ।**
**ಸರ್ವಮಾತ್ಮನ್ಯಜಹವಿದ್ ಬ್ರಹ್ಮಣ್ಯಾತ್ಮನಮವ್ಯಯೇ ॥೧೧॥**

**ವಾಚಂ** ವಾಗಭಿಮಾನಿನಿಯಾದ ಉಮಾದೇವಿಯನ್ನು **ಮನಸಿ** ಉಮಾಳಿಗೆ ಮನೋಭಿಮಾನಿಯಾದ ರುದ್ರನಲ್ಲಿ **ಜುಹಾವ** ಮುಂದೆ ಆಗುವ ಲಯವನ್ನು ಚಿಂತಿಸಿದನು. **ತತ್** ಮನಸ್ಸು ಮನೋಭಿಮಾನಿ ರುದ್ರನನ್ನು **ಪ್ರಾಣೇ** ರುದ್ರಜನಕನಾದ ಪ್ರಾಣವೃತ್ತಿಪ್ರೇರಕನಾದ ಮುಖ್ಯ ಪ್ರಾಣಾವತಾರನಾದ ಪ್ರಾಣನಲ್ಲಿ **ಜುಹಾವ** ಲಯವಾಗುವನೆಂದು ತಿಳಿದನು **ಪರಂ** ಮನಸ್ಸಿಗಿಂತ ಉತ್ತಮ ರುದ್ರ ಅವನಿಗೂ ಉತ್ತಮ ಪ್ರಾಣ ಆ ಪ್ರಾಣನನ್ನು **ಇತರೇ** ಪ್ರಾಣಜನಕನಾದ ಅಪಾನನಲ್ಲಿ **ಜುಹಾವ** 'ಲಯ ಚಿಂತಿಸಿದನು. **ಧೃತ್ಯಾ** ಮನೋಧೈರ್ಯದಿಂದ (ಏಕಾಗ್ರತೆಯಿಂದ ಎಂದರ್ಥ) **ಸೋತ್ಸರ್ಗಂ ಅಪಾನಂ** ವಿಸರ್ಜನರೂಪವೃತ್ತಿ ಸಹಿತನಾದ ಅಪಾನನನ್ನು **ತತ್ಪರತ್ವೇ** (ಧರ್ಮಿಪ್ರಧಾನನಿರ್ದೇಶೇ) ಅಪಾನನ ಪೂರ್ವದಲ್ಲಿರುವ ಅರ್ಥಾತ್ ಕಾರಣನಾದ ವ್ಯಾನನಲ್ಲಿ **ಅಜೋಹವೀತ್** ಮುಂದೆ ಆಗುವ ಲಯವನ್ನು ಚಿಂತಿಸಿದನು. ಅಪಾನನಿಗೆ ವ್ಯಾನನಲ್ಲಿ ಲಯ ಎಂದು ತಿಳಿದನು. ಇದರಂತೆ ವಾಗಾದಿಗಳಲ್ಲಿಯು ತತ್ತದ್ವೃತ್ತಿಸಾಹಿತ್ಯವನ್ನು ತಿಳಿಯಬೇಕು.

ಹಿ ಶಬ್ದಗಳೆರಡು ಪ್ರಮಾಣಪ್ರಸಿದ್ಧಿಯನ್ನು ತಿಳಿಸುವವು **ಅಥ** ಅಪಾನವ್ಯಾನಲಯ ಚಿಂತನವಾದ ಮೇಲೆ ಉದಾನಸಮಾನರು **ತ್ರಿತ್ವೆ** ತ್ರಿತ್ವಸಂಖ್ಯಾವಿಶಿಷ್ಟರಾದ ಉದಾನ ಸಮಾನ ಜನಕರಾದ ಪ್ರಾಣಾಪಾನವ್ಯಾನರಲ್ಲಿ **ಹುತ್ವಾ** ಲಯಹೊಂದುವರು ಎಂದು ಚಿಂತಿಸಿ **ತತ್ಪಂಚತ್ವಂ** ಪ್ರಾಣಾದಿ ಪಂಚಕವನ್ನು **ಏಕತ್ವೇ** ಇವರಿಗೆ ಜನಕನಾದ ಪ್ರಾಣನಾಮಕ ಮುಖ್ಯವಾಯುವಿನಲ್ಲಿ ಮೂಲರೂಪದಲ್ಲಿ **ಅಜಹೋತ್** ಮುಂದಾಗುವ ಲಯಚಿಂತನ ಮಾಡಿದನು. **ಮುನಿಃ** ಮುನಿಯು **ಸರ್ವಂ** ಎಲ್ಲರಿಗೂ ಕಾರಣನಾದ ಮೂಲ ಪ್ರಾಣನನ್ನು **ಆತ್ಮನಿ** ಮುಖ್ಯಪ್ರಾಣಜನಕನಾದ ಹೃದಯದಲ್ಲಿರುವ ವಿಷ್ಣುವಿನಲ್ಲಿ **ಅಜುಹೋತ್** ಲಯಚಿಂತಿಸಿದನು **ಆತ್ಮಾನಂ** ಹೃದಯದಲ್ಲಿರುವ ವಿಷ್ಣುವನ್ನು **ಅವ್ಯಯೇ** ಬೇರೆಯವರಲ್ಲಿ ಲಯ ಚಿಂತಿಸಲಾಗದ ನಾಶರಹಿತನಾದ ವಿಷ್ಣುವಿನಲ್ಲಿ ಅಭಿವ್ಯಕ್ತಿಕಾರಣನಾದ **ಬ್ರಹ್ಮಣಿ** ಪರಿಪೂರ್ಣನಾದ, ವ್ಯಾಪ್ತನಾದ, ಶ್ರೀಹರಿಯಲ್ಲಿ **ಅಜುಹೋತ್** ಐಕ್ಯವನ್ನು ಚಿಂತಿಸಿದನು.

*ಭಾಗವತತಾತ್ಪರ್ಯ -*

ಮೇಲಿನ ಎರಡು ಶ್ಲೋಕಗಳನ್ನು ದುರ್ಗಮಾರ್ಥಗಳಾದ್ದರಿಂದ ವ್ಯಾಖ್ಯಾನಿಸುವರು

ಪ್ರಾಣಂ ಅಪಾನೇ ತಂ ವ್ಯಾನೇ ಸಮಾನೋದಾನೌ ತೇಷು । ತಾಂಶ್ಚ ಮೂಲಪ್ರಾಣೇ । ಆತ್ಮಾ ಹೃದಿಸ್ಥೋ ವಿಷ್ಣುಃ । ಬ್ರಹ್ಮ ಸರ್ವಗತಮ್ ।।

ಉಮಾ ವಾಗಾತ್ಮಿಕಾ ರುದ್ರಾಜ್ಜಾತಾ ಸಾ ಮನ ಆತ್ಮನಃ ।
ಪ್ರಾಣಾಹ್ವಯಾತ್ ಸ ವಾಯೋಶ್ಚ ಸೋಽಪಾನಾದಾತ್ಮರೂಪತಃ ।।

ಸ್ವರೂಪಾದೇವ ಸ ವ್ಯಾನಾದುದಾನೋ ವ್ಯಾನತಸ್ತಥಾ ।
ತಸ್ಮಾತ್ಸಮಾನೋ ವ್ಯಾನಾಚ್ಚಾಪ್ಯಪಾನಃ ಪ್ರಾಣ ಏವ ಚ ।।

ಅಪಾನಾತ್ತಿ ಸೃಭಿಶ್ಚಾಪಿ ಸಮಾನೋದಾನಯೋರ್ಜನಿಃ ।
ತ್ರಯಾಣಾಮಥ ಪಂಚಾನಾಮನಾದ್ವಾ ಪ್ರಾಣತೋ ಭವಃ ।
ಏಕಸ್ಯೈವ ಸ್ವರೂಪಾಣಿ ಪ್ರಾಣಸ್ಯೈತಾನಿ ಪಂಚ ಚ ।।

ಸ ಚ ಪ್ರಾಣೋ ಹರೇರ್ಜಾತೋ ಹೃದಿಸ್ಥಾದಾತ್ಮನೋ ಮತಃ ।
ಸ ಆತ್ಮಾ ಬ್ರಹ್ಮಣೋ ಜಾತೋ ವಿಶ್ವರೂಪಾಜ್ಜನಾರ್ದನಾತ್ ।।

ಏತೇಷಾಂ ಬ್ರಹ್ಮಪರ್ಯಂತಂ ವಿಲಯೋತ್ಪತ್ತಿಚಿಂತನಂ ।
ಬ್ರಹ್ಮಯಜ್ಞ ಇತಿ ಪ್ರೋಕ್ತಃ ಸರ್ವಸಂಸಾರಮೋಚಕಃ ।।

-ಇತಿ ನಾರಾಯಣಾಧ್ಯಾತ್ಮೇ।।

ಅಸ್ಯಾಸ್ಮಿನ್ ವಿಲಯೋ ಭವತೀತ್ಯೇವಂ ವಿಜ್ಞಾನಮಾಹುತಿಃ ।
ನ ತು ತತ್ಕಾಲ ವಿಲಯಸ್ತ್ವನ್ಯೋ೯ವಾತಸ್ಯ ದರ್ಶನಾತ್ ।। -ಇತಿ ಬ್ರಹ್ಮತರ್ಕೇ

ಪ್ರಾಣನನ್ನು ಅಪಾನನಲ್ಲಿ ಅಪಾನನನ್ನು ವ್ಯಾನನಲ್ಲಿಯೂ, ಪ್ರಾಣಾಪಾನ ವ್ಯಾನರಲ್ಲಿ, ಸಮಾನ ಉದಾನರನ್ನು ಈ ಐದು ಮಂದಿ ಪ್ರಾಣರನ್ನು ಸರ್ವರಿಗೂ ಮೂಲನಾದ ಮುಖ್ಯ ವಾಯುವಿನಲ್ಲಿಯೂ. ಮುಂದೆ ಆಗುವ ಲಯವನ್ನು ಚಿಂತಿಸಿದನು. ಆತ್ಮಾ ಹೃದಯದಲ್ಲಿರುವ ಶ್ರೀವಿಷ್ಣುವು ಬ್ರಹ್ಮ ಸರ್ವತ್ರ ವ್ಯಾಪ್ತನು ಯಾರಿಗೆ ಯಾರಿಂದ ಉತ್ಪತ್ತಿಯೋ ಅವರಿಗೆ ಅವರಲ್ಲಿ ಲಯವೆಂದು ಹೇಳಿದಂತಾಯಿತು. ಆದ್ದರಿಂದ ವಾಗಾದಿಗಳಿಗೆ ಮನ ಆದಿಗಳಿಂದ ಉತ್ಪತ್ತಿ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು. ವಾಗಭಿಮಾನಯೂ, ವಾಕ್‌ಶಬ್ದ ವಾಚ್ಯಳೂ ಆದ ಪಾರ್ವತಿಯು ಮನೋಭಿಮಾನಿಯಾದ ರುದ್ರನಿಂದ ಹುಟ್ಟಿದಳು. ಆದಕಾರಣ

ರುದ್ರನಲ್ಲಿ ಲಯವು. ಆ ರುದ್ರನು ಪ್ರಾಣನಾಮಕ ಮುಖ್ಯವಾಯುವಿನಿಂದ ಹುಟ್ಟಿದವನು. ಅಲ್ಲಿ ಲಯ. ಆ ಪ್ರಾಣನು ತನ್ನ ಸ್ವರೂಪನೇ ಆದ ಅಪಾನನಿಂದಲೂ. ಆ ಅಪಾನನು ತನ್ನ ಸ್ವರೂಪನಾದ ವ್ಯಾನನಿಂದಲೂ. ಹಾಗೆಯೇ ಉದಾನನು ವ್ಯಾನನಿಂದಲೂ. ಉದಾನನಿಂದ ಸಮಾನನು. ವ್ಯಾನನಿಂದ ಅಪಾನನು. ಪ್ರಾಣನು ಅಪಾನಿಂದ ಪ್ರಾಣಾಪಾನವ್ಯಾನ ಎಂಬ ತ್ರಿಮೂರ್ತಿಗಳಿಂದ ಸಮಾನ ಉದಾನರಿಗೆ ಉತ್ಪತ್ತಿಯೂ. ಸಮಾನ ಉದಾನರಿಗೆ ಮೂರರಲ್ಲಿ ಲಯ ಗ್ರಂಥಾಂತರದಲ್ಲಿ ಹೇಳಿದ ಪ್ರಾಕಾರಾಂತರ ಹೇಳುತ್ತಾರೆ. ಪ್ರಾಣ, ಅಪಾನ, ವ್ಯಾನ, ಈ ಮೂವರಿಗೆ ಮುಖ್ಯವಾಯುವೆಂದು ಹೆಸರುಳ್ಳ ಮೂಲರೂಪದಿಂದ ಉತ್ಪತ್ತಿಯು ಪ್ರಾಣ ಮೊದಲಾದ ಐದು ಮುಖ್ಯಪ್ರಾಣ ರೂಪಗಳಿಗೆ ಚೇಷ್ಟಕನಾದ ಮೂಲರೂಪ ಪ್ರಾಣರಿಂದ ಉತ್ಪತ್ತಿಯು. ಆದಕಾರಣ ಅಲ್ಲಿಯೇ ಲಯವೆಂದು ಚಿಂತಿಸಬೇಕು. ಪ್ರಧಾನನಾದ ಮುಖ್ಯ ಪ್ರಾಣನದೇ ಈ ಐದು ರೂಪಗಳು. ಆದಾಗಲೂ ರೂಪಭೇದದಿಂದ ಜನ್ಯಜನಕಭಾವವು ಕೂಡುತ್ತದೆ. ಆ ಮುಖ್ಯಪ್ರಾಣನು ಹೃದಯದಲ್ಲಿರುವ ಶ್ರೀಹರಿಯಿಂದ ಜನಿಸಿದನು. ಹೃದಯದಲ್ಲಿರುವ ಶ್ರೀಹರಿಯು ಸರ್ವತ್ರ ವ್ಯಾಪ್ತನಾದ ಶ್ರೀಹರಿಯಿಂದ ವ್ಯಕ್ತನಾದನು. ಈ ವಾಗಾದಿ ಬ್ರಹ್ಮಪರ್ಯಂತ ದೇವತೆಗಳಿಗೆ ಲಯವಾಗುತ್ತದೆಂದು ಉತ್ಪತ್ತಿಯಂದೂ ಧ್ಯಾನಿಸುವದೇ ಬ್ರಹ್ಮಯಜ್ಞ ಎನಿಸುತ್ತದೆ. ಹೀಗೆ ತಿಳಿದರೆ ನಾನಾರೀತಿಯಾದ ಕಷ್ಟದಿಂದ ಕೂಡಿದ ಸಂಸಾರದ ಬಿಡುಗಡೆಗೆ ಕಾರಣವಾಗುತ್ತದೆ ಎಂದು ನಾರಾಯಣಾಧ್ಯಾತ್ಮದಲ್ಲಿ ಹೇಳಿದೆ. ಕೆಳಗಿನ ದೇವತೆಗಳಿಗೆ ಉತ್ತಮ ದೇವತೆಗಳಲ್ಲಿ ವಿಲಯವೆಂದು ತಿಳಿದುಕೊಳ್ಳುವದೇ ಆಹುತಿಯು. ಹೋಮಿಸಿದನೆಂಬುದರ ಅಭಿಪ್ರಾಯವು ಧರ್ಮರಾಜನು ಲಯವನ್ನು ಚಿಂತಿಸಿದಾಗ ದೇವತೆಗಳಿಗೆ ಲಯವಾಗಲಿಲ್ಲ ದೇವತೆಯನ್ನು ಉದ್ದೇಶಿಸಿ ಅಗ್ನಿಯಲ್ಲಿ ಹಾಕುವದು.(ಏಕೆಂದರೆ) ಧರ್ಮರಾಜನು ಧ್ಯಾನಿಸಿದ ಮೇಲೆಯೂ ವಾಗಾದಿಗಳಿಂದ ಆರಂಭಿಸಿ ಬ್ರಹ್ಮನ ವರೆಗೆ ದೇವತೆಗಳು ಇದ್ದಾರೆ ಎಂದು ಬ್ರಹ್ಮತರ್ಕದಲ್ಲಿದೆ.

ಈ ವರೆಗೆ ಒಳಗಿನ ಸ್ಥಿತಿಯನ್ನು ಹೇಳಿದರು. ಇನ್ನು ಹೊರಗಿನ ಸ್ಥಿತಿಯನ್ನು ಹೇಳುವರು.

**ಚೀರವಾಸಾ ನಿರಾಹಾರೋ ಬದ್ಧವಾಙ್ ಮುಕ್ತಮೂರ್ಧಜಃ ।**
**ದರ್ಶಯನ್ನಾತ್ಮನೋ ರೂಪಂ ಜಡೋನ್ಮತ್ತಪಿಶಾಚವತ್ ।**
**ಅನಪೇಕ್ಷಮಾಣೋ ನಿರಗಾದಶೃಣ್ವನ್ ಬಧಿರೋ ಯಥಾ ॥೧೨॥**

**ಚೀರವಾಸಾಃ** ನಾರು ಬಟ್ಟೆಯುಟ್ಟ **ನಿರಾಹಾರಃ** ಮನುಷ್ಯಾನ್ನ ಬಿಟ್ಟವನಾಗಿ **ಬದ್ಧವಾಕ್** ಮೌನಿಯಾಗಿ **ಮುಖಮೂರ್ಧಜಾಃ** ಮುಖದಲ್ಲಿ ಕೇಶವುಳ್ಳವನಾಗಿ ಜಟಾಧಾರಿಯಾಗಿ ಎಂದರ್ಥ **ಜಡೋನ್ಮತ್ತಪಿಶಾಚವತ್** ದಡ್ಡನಂತೆ, ಹುಚ್ಚನಂತೆ, ಪಿಶಾಚದಂತೆ **ಆತ್ಮನಃ** ತನ್ನ **ರೂಪಂ** ರೂಪವನ್ನು **ದರ್ಶಯನ್** ತೋರಿಸುತ್ತಾ **ಬಧಿರಂ ಯಥಾ** ಕಿವುಡನಂತೆ **ಅಶೃಣ್ವತ್** ಏನನ್ನೂ ಕೇಳದೇ **ಅನಪೇಕ್ಷಮಾಣಃ** ಯಾರ ಅಪ್ಪಣೆಯನ್ನೂ ಇಚ್ಛಿಸದೆ **ನಿರಗಾತ್** ಮನೆಯಿಂದ ಹೊರಹೊರಟನು.

**ಉದೀಚೀಂ ಪ್ರವಿವೇಶಾಶಾಂ ಗತಪೂರ್ವಾಂ ಮಹಾತ್ಮಭಿಃ ।**
**ಹೃದಿ ಬ್ರಹ್ಮ ಪರಂ ಧ್ಯಾಯನ್ನಾವರ್ತೇತ ಗತೋ ಯತಃ ॥೧೩॥**

**ಹೃದಿ** ಮನಸ್ಸಿನಲ್ಲಿ **ಪರಂ ಬ್ರಹ್ಮ ಧ್ಯಾಯನ್** ಶ್ರೀಹರಿಯನ್ನು ಧ್ಯಾನ ಮಾಡುತ್ತಾ **ಯತಃ** ಯಾವ ಮಾರ್ಗದಿಂದ **ಗತಃ** ಹೊಂದುವನು **ನ ಆವರ್ತೇತ** ಮತ್ತೆ ಮನೆಗೆ ತಿರುಗಿ ಬರುವದಿಲ್ಲವೋ **ತಾಂ** ಅಂಥ **ಮಹಾತ್ಮಭಿಃ ಗತಪೂರ್ವಾಂ** ಹಿರಿಯರಿಂದ ಹಿಂದೆ ಹೋದ **ಉದೀಚೀಂ ಆಶಾಂ** ಉತ್ತರ ದಿಕ್ಕಿನಲ್ಲಿರುವ ವೀರಾಧ್ವ ಎಂಬ ಹೆಸರಿನ ಮಾರ್ಗವನ್ನು **ಪ್ರವಿವೇಶ** ಪ್ರವೇಶ ಮಾಡಿದನು.

*ಭಾಗವತತಾತ್ಪರ್ಯ-*

ಇಲ್ಲಿ ಉತ್ತರ ದಿಕ್ಕಿಗೆ ಹೋಗುವ ಮಾತ್ರದಿಂದ ಮುಕ್ತಿಯಾಗುತ್ತದೆ ಎಂದು ತೋರುವದು ಅದಕ್ಕಾಗಿ ವ್ಯಾಖ್ಯಾನಿಸುವರು. ನಾವರ್ತೇತ ವೀರಗತಿಮ್ । ಹಿಂದೆರಳುವುದಿಲ್ಲವೆಂದು ನಿಶ್ಚಯ ಮಾಡಿಕೊಂಡು ಶರೀರವು ಬೀಳುವ ಪರ್ಯಂತ ಹೋಗುತ್ತಲೇ ಇದ್ದು ಧೀರರು ಯಾವ ಮಾರ್ಗದಲ್ಲಿ ಹೋಗುತ್ತಾರೋ ಅಂತಹ ಮಾರ್ಗವು ವೀರಗತಿ ಎನ್ನಿಸುವದು. ಆ ಮಾರ್ಗದಲ್ಲಿ ಧರ್ಮರಾಜನು ಹೋದನು ಹೊರತು ಮುಕ್ತಿಯಲ್ಲ ಎಂದೂ ಭಾವ.

**ಸರ್ವೇ ತಮನು ನಿರ್ಜಗ್ಮುರ್ಭ್ರಾತರಃ ಕೃತನಿಶ್ಚಯಾಃ ।**
**ಕಲಿನಾಽಧರ್ಮಮಿಶ್ರೇಣ ದೃಷ್ಟ್ವಾ ಸ್ಪೃಷ್ಟಾಃ ಪ್ರಜಾ ಭುವಿ ।೧೪॥**

**ಭುವಿ** ಭೂಮಿಯಲ್ಲಿ **ಅಧರ್ಮಮಿಶ್ರೇಣ** ಅಧರ್ಮವೇ ಪ್ರಧಾನವಾಗಿವುಳ್ಳ **ಕಲಿನಾ** ಕಲಿಯಿಂದ **ಸ್ಪೃಷ್ಟಾಃ** ಪ್ರವಿಷ್ಟರಾದ **ಪ್ರಜಾಃ** ಪ್ರಜರನ್ನು **ದೃಷ್ಟ್ವಾ** ನೋಡಿ **ಕೃತನಿಶ್ಚಯಾಃ** ಸ್ವರ್ಗಕ್ಕೆ ತೆರಳಲು ನಿಶ್ಚಯಿಸಿದ **ಭ್ರಾತರಃ** ಭೀಮಸೇನಾದಿಗಳು **ಸರ್ವೇ** ಎಲ್ಲರೂ **ತಂ ಅನು ನಿರ್ಜಗ್ಮುಃ** ಧರ್ಮರಾಜನನ್ನು ಹಿಂಬಾಲಿಸಿ ಹೋದರು.

**ತೇ ಸಾಧುಕೃತಸರ್ವಾರ್ಥಾಃ ಜ್ಞಾತ್ವಾऽऽತ್ಯಂತಿಕಮಾತ್ಮನಃ ।**
**ಮನಸಾ ಧಾರಯಾಮಾಸುರ್ವೈಕುಂಠಚರಣಾಂಬುಜಮ್ ॥೧೫॥**

**ತೇ** ಪಾಂಡವರು **ಸಾಧುಕೃತಸರ್ವಾರ್ಥಾಃ** ಚೆನ್ನಾಗಿ ಧರ್ಮಾದಿ ಪುರುಷಾರ್ಥಗಳನ್ನು ಸಂಪಾದಿಸಿದವರಾಗಿ **ಆತ್ಮನಃ** ಪರಮಾತ್ಮನ ಸ್ವರೂಪವನ್ನು **ಆತ್ಯಂತಿಕಂ** ಅತ್ಯಂತ ಶ್ರೇಯಸಾಧನವೆಂದು **ಜ್ಞಾತ್ವಾ** ತಿಳಿದು **ವೈಕುಂಠಚರಣಾಂಬುಜಂ** ಶ್ರೀಹರಿಯ ಪಾದಕಮಲವನ್ನು **ಮನಸಾ ಧಾರಯಾಮಾಸುಃ** ಅಖಂಡ ಸ್ಮರಣ ಮಾಡಿದರು.

ಅಥವಾ **ಆತ್ಮನಃ** ತಮ್ಮ **ಆತ್ಯಂತಿಕಂ** ಕೊನೆಕಾಲಕ್ಕೆ ಮಾಡಬೇಕಾದುದನ್ನು **ಜ್ಞಾತ್ವಾ** ತಿಳಿದು **ಸಾಧುಕೃತಸರ್ವಾರ್ಥಾಃ** ಧರ್ಮಾದಿಗಳನ್ನು ಚೆನ್ನಾಗಿ ಅನುಷ್ಠಾನ ಮಾಡಿದವರು. ಅಥವಾ **ಸಾಧುನಾ** ಪುಣ್ಯಕರ್ಮದಿಂದ **ಕೃತಸರ್ವಾರ್ಥಾಃ** ಛಿನ್ನಗಳಾದ ನಿರಾಕರಿಸಲ್ಪಟ್ಟ **ಸರ್ವಾರ್ಥಾಃ** ಶಬ್ದಾದಿ ವಿಷಯಗಳುಳ್ಳ (ಕೃ ಛೇದನೇ ಎಂದು ಧಾತು ಇದೆ)

**ತದ್ಧ್ಯಾನೋದ್ರಿಕ್ತಯಾ ಭಕ್ತ್ಯಾ ವಿಶುದ್ಧಧಿಷಣಾಃ ಪರೇ ।**
**ತಸ್ಮಿನ್ನಾರಾಯಣಪದ ಏಕಾಂತಮತಯೋऽಪತನ್ ॥೧೬॥**

ಈ ರೀತಿಯಾಗಿ ಶ್ರೀಹರಿಯ ಚರಣಕಮಲಗಳನ್ನು ಮನಸ್ಸಿನಲ್ಲಿರಿಸಿ **ತದ್ಧ್ಯಾನೋದ್ರಿಕ್ತಯಾ** ಅವನ ಧ್ಯಾನದಿಂದ ಅಭಿವೃದ್ಧವಾದ **ಭಕ್ತ್ಯಾ** ಭಕ್ತಿಯಿಂದ **ವಿಶುದ್ಧಧಿಷಣಾಃ** ನಿರ್ಮಲ ಬುದ್ಧಿಉಳ್ಳವರಾಗಿ ಏಳು ದಿನದಲ್ಲಿ ಭೂಪ್ರದಕ್ಷಿಣೆ ಮಾಡಿ ಗಂಧ ಮಾದನ ಪರ್ವತದಲ್ಲಿ ಬದರಿ ಎಂಬ ನಾರಾಯಣಾಶ್ರಮವನ್ನು ಹೊಂದಿ **ತಸ್ಮಿನ್ ಪರೇ** ಸರ್ವೋತ್ತಮನಾದ **ನಾರಾಯಣಪದೇ** ನಾರಾಯಣಾಶ್ರಮದಲ್ಲಿ **ಏಕಾಂತಮತಯಃ** ನಾರಾಯಣನನ್ನು ಧ್ಯಾನ ಮಾಡುತ್ತ **ಅಪತನ್** ಶರೀರತ್ಯಾಗ ಮಾಡಿದರು.

**ಅವಾಪುರ್ದುರ್ವಾಪಂ ತೇ ಅಸದ್ಭಿರ್ವಿಷಯಾತ್ಮಭಿಃ ।**
**ವಿಧೂತಕಲ್ಮಷಸ್ಥಾನಂ ವಿರಜೇನಾತ್ಮನೈವ ಹಿ ॥೧೭॥**

**ವಿಷಯಾತ್ಮಭಿಃ** ಶಬ್ದಾದಿವಿಷಯದಲ್ಲಿ ಮನಸುಳ್ಳ **ಅಸದ್ಭಿಃ** ಅಮಂಗಲ ಜನರಿಂದ **ದುರವಾಪಂ** ಹೊಂದಲಾಗದ **ವಿಧೂತಕಲ್ಮಷಸ್ಥಾನಂ** ಜರಾಮರಣಾದಿ ದೋಷಗಳಿಲ್ಲದ ತಮ್ಮ ಮೂಲರೂಪವನ್ನು **ವಿರಜೇನ ಆತ್ಮನಾ** ದೋಷರಹಿತವಾದ ಮನಸ್ಸಿನಿಂದ **ಅವಾಪುಃ** ಹೊಂದಿದರು. ಏವ ಶಬ್ದದಿಂದ ಮನಸ್ಸೇ ಪ್ರಧಾನ ಸಾಧನವೆಂದು ತಿಳಿಸುವರು ಹಿಶಬ್ದ ಪ್ರಮಾಣ ಪ್ರಸಿದ್ಧಿ ತಿಳಿಸುವದು. ಮತ್ತು ಏವಕಾರ ದೇವದೂತರು

ತೋರಿಸಿದ ಮಾಯೆಯಿಂದ ಧರ್ಮರಾಜನು ನೋಡಿದ ಭೀಮಾದಿಗಳ ದುಃಖವನ್ನುಂಟು ಮಾಡುವ ಲೋಕವನ್ನು ಹೊಂದಲಿಲ್ಲವೆಂದು ಭಾವ. ಹಿಶಬ್ದದಿಂದ ದೋಷದಿಂದ ದೇಹಪಾತದಲ್ಲಿ ಪ್ರಾರಬ್ಧಕರ್ಮನಾಶದಿಂದ ಎಂಬರ್ಥದಲ್ಲಿ ಶ್ರುತಿರೂಪ ಪ್ರಮಾಣ ಪ್ರಸಿದ್ಧಿಯನ್ನು ತಿಳಿಸುವರು. ಶ್ರುತಿಯನ್ನು ಸಕಲಸುರೋತ್ತಮ ಶಶಿಶಕಲ ಮೌಲಿಪುರಸ್ಸರಸುರಗಣೈಃ ಆರಾಧಿತಚರಣೈ ಶ್ರೀಭಗವತ್ಪಾದೈಃ ಉದಾಹೃತಾ ।

ಸಕಲಪುರಾಣಸಾರಸಂಗ್ರಹಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ

**ದ್ರೌಪದೀ ಚ ತದಾಜ್ಞಾಯ ಪತೀನಾಮನಪೇಕ್ಷತಾಮ್ ।**
**ವಾಸುದೇವೇ ಭಗವತಿ ಏಕಾಂತಮತಿರಾಪತತ್ ॥೧೮॥**

**ದ್ರೌಪದೀ ಚ** ದ್ರೌಪದಿಯೂ **ಸಹ ಪತೀನಾಂ** ಗಂಡಂದಿರ **ಅನಪೇಕ್ಷತಾಂ** ದೇಹಾದಿಗಳಲ್ಲಿ ಅಭಿಮಾನವಿಲ್ಲದಿರುವದನ್ನು **ಆಜ್ಞಾಯ** ತಿಳಿದು **ವಾಸುದೇವೇ ಭಗವತಿ** ಭಗವಂತನಾದ ಶ್ರೀಕೃಷ್ಣನಲ್ಲಿ **ಏಕಾಂತಮತಿಃ** ತಾರತಮ್ಯಾಂತಗತನೆಂದು ತಿಳಿದವಳಾಗಿ **ಅಪತತ್** ದೇಹತ್ಯಾಗ ಮಾಡಿದಳು. ಇಲ್ಲಿ ಕ್ರಮ ವಿವಕ್ಷಿತವಾಗಿಲ್ಲ. ಭಾರತದಲ್ಲಿ ದ್ರೌಪದೀದೇಹ ಪಾತವನ್ನೇ ಮೊದಲು ಹೇಳಿದೆ.

**ಯಃ ಶ್ರದ್ಧಯೈತದ್ಭಗವತ್ಪ್ರಯಾಣಂ**
**ಪಾಂಡೋಃ ಸುತಾನಾಮಪಿ ಸಂಪ್ರಯಾಣಮ್ ।**
**ಶ್ರುಣೋತ್ಯಲಂ ಸ್ವಸ್ತ್ಯಯನಂ ಪವಿತ್ರಂ**
**ಲಬ್ಧ್ವಾ ಹರೌ ಭಕ್ತಿಮುಪೈತಿ ಶಾಂತಿಮ್ ॥೧೯॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ಪಂಚದಶೋಽಧ್ಯಾಯಃ ॥

**ಸ್ವಸ್ತ್ಯಯನಂ** ಮಂಗಳ ಪ್ರದನಾದ **ಪವಿತ್ರಂ** ಪವಿತ್ರನಾದ (**ಏತತ್**) **ಯಃ** ಯಾರು **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಏತತ್** ಈ **ಭಗವತ್ಪ್ರಯಾಣಂ** ಭಗವಂತನು ತನ್ನ ಧಾಮಕ್ಕೆ ತೆರಳಿದ್ದನ್ನು **ಪಾಂಡೋಃ ಸುತಾನಾಂ ಅಪಿ** ಆ ಪಾಂಡವರ **ಸಂಪ್ರಯಾಣಂ** ಸ್ವರ್ಗಾರೋಹಣವನ್ನು **ಅಲಂ** ತ್ರಿಕರ್ಣಶುದ್ಧಿಯನ್ನು **ಶ್ರುಣೋತಿ** ಮಾಡಿಕೊಳ್ಳುವನೋ **ಸಃ** ಅವನು **ಹರೌ ಭಕ್ತಿಂ ಲಬ್ಧ್ವಾ** ಶ್ರೀಹರಿಯಲ್ಲಿ ಭಕ್ತಿಯನ್ನು ಪಡೆದು **ಶಾಂತಿಂ ಉಪೈತಿ** ಮುಕ್ತಿಯನ್ನು ಪಡೆಯುವನು.

ಇಲ್ಲಿಗೆ ಹದಿನೈದನೇ ಅಧ್ಯಾಯವು ಮುಗಿಯಿತು.

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಷೋಡಶೋऽಧ್ಯಾಯಃ

**ಅಧ್ಯಾಯಸಾರಾಂಶ**

ಧರ್ಮರಾಜಾದಿಗಳ ನಿರ್ಗಮನಾನಂತರ ಪರೀಕ್ಷಿತ ರಾಜ್ಯಭಾರ ಮಾಡಿದ. ಉತ್ತರನ ಮಗಳಾದ ಇರಾವತಿಯನ್ನು ಮದುವೆಯಾಗಿ ಅವಳಲ್ಲಿ ಜನಮೇಜಯ ಮುಂತಾದ ನಾಲ್ವರು ಮಕ್ಕಳನ್ನು ಪಡೆದು ಮೂರು ಅಶ್ವಮೇಧಯಾಗ ಮಾಡಿದ.

ಒಮ್ಮೆ ದಿಗ್ವಿಜಯ ಮಾಡಲು ಹೊರಟಾಗ ದೂರದಲ್ಲಿ ಒಂದು ದೃಶ್ಯವನ್ನು ಗಮನಿಸಿದ. ಒಂದು ಕಡೆ ಯಮಧರ್ಮರಾಜ ಎತ್ತಿನ ರೂಪದಿಂದ, ಭೂದೇವಿ ಗೋರೂಪದಿಂದಲೂ ನಿಂತಿದ್ದಾರೆ. ಹಸು ಕಣ್ಣೀರು ಸುರಿಸುತ್ತಿದೆ. ಎತ್ತು ಮೂರು ಕಾಲು ಮುರಿದುಕೊಂಡು ಒಂಟಿಕಾಲಲ್ಲಿ ನಿಂತಿದೆ. ರಾಜವೇಷಧರಿಸಿದ ಕಲಿ ಕಾಲಿನಿಂದ ಎರಡೂ ಪ್ರಾಣಿಗಳನ್ನು ಒದೆಯುತ್ತಿದ್ದಾನೆ. ಈ ದೃಶ್ಯವನ್ನು ಪರೀಕ್ಷಿತ ಕಂಡ. ಹಸು ಎತ್ತುಗಳು ಹೀಗೆ ಮಾತನಾಡಿಕೊಳ್ಳುತ್ತಿದ್ದವು. ಎತ್ತು ಹಸುವಿಗೆ ಕೇಳಿತು ನೀನೇಕೆ ಕಣ್ಣೀರು ಸುರಿಸುತ್ತಿರುವೆ? ನಾನು ಒಂಟಿ ಕಾಲಲ್ಲಿ ನಿಂತಿರುವೆನೆಂದೇ? ಶ್ರೀಕೃಷ್ಣ ಪರಂಧಾಮಕ್ಕೆ ತೆರಳಿದನೆಂದೇ? ಆಗ ಹಸು ಹೇಳಿತು ನೀನು ಇಷ್ಟು ಹೊತ್ತಿನ ವರೆಗೆ ಚೆನ್ನಾಗಿ ನಡೆಯುತ್ತಿದ್ದೆ. ಇದಕ್ಕೆ ಶ್ರೀಕೃಷ್ಣ ನಮ್ಮ ಜೊತೆಗೆ ಇದ್ದ. ಇವತ್ತು ಅವನು ಇಲ್ಲದ ಭೂಮಿ ಅನಾಥವಾಗಿದೆ. ಅವನ ವಿರಹವನ್ನು ಯಾರು ತಾನೇ ಸಹಿಸಬಲ್ಲರು ಎಂದು ಮಾತನಾಡುತ್ತಿರುವಾಗ ಪರೀಕ್ಷಿತ ಅಲ್ಲಿಗೆ ಬಂದ.

**ಕಲಿನಿಗ್ರಹಗೈದ ಪರೀಕ್ಷಿತ**

ಪರೀಕ್ಷಿತನು ಕಲಿಯನ್ನು ನಿಗ್ರಹಿಸಿದ ಕಥೆಯನ್ನು ಈ ಅಧ್ಯಾಯದಲ್ಲಿ ಹೇಳುತ್ತಿದ್ದಾರೆ. ಭಗವಂತನಲ್ಲಿ ಭಕ್ತಿಯನ್ನು ಮಾಡಲು ಭಕ್ತನಾದ ಪರೀಕ್ಷಿತನು ಕಲಿನಿಗ್ರಹ ಮಾಡಿದ

ಮಾಹಾತ್ಮ್ಯವರ್ಣನ ಮಾಡಿ ಶ್ರೀಹರಿಮಹಿಮೆಯನ್ನೇ ಪ್ರತಿಪಾದಿಸುವರು. ಪರೀಕ್ಷಿತನ ರಾಜ್ಯಪಾಲನಾದಿಗಳನ್ನು ಮೊದಲಿಗೆ ಹೇಳುವರು.

ಸೂತ ಉವಾಚ-

**ತತಃ ಪರೀಕ್ಷಿದ್ದ್ವಿಜವರ್ಯಶಿಕ್ಷಯಾ**
**ಮಹೀಂ ಮಹಾಭಾಗವತಃ ಶಶಾಸ ಹ ।**
**ಯಥಾ ಹಿ ಸೂತ್ಯಾಮಭಿಜಾತಕೋವಿದಾಃ**
**ಸಮಾದಿಶನ್ ವಿಪ್ರಮಹದ್ಗುಣಾಂಸ್ತಥಾ ॥೧॥**

**ತತಃ** ಪಾಂಡವರು ಸ್ವರ್ಗಕ್ಕೆ ತೆರಳಿದ ನಂತರ **ದ್ವಿಜವರ್ಯಶಿಕ್ಷಯಾ** ಕೃಪಾಚಾರ್ಯರೆ ಮೊದಲಾದ ಬ್ರಾಹ್ಮಣಶ್ರೇಷ್ಠರ ಸದ್ವಿದ್ಯೋಪದೇಶದಿಂದ ಅವರು ಹೇಳಿದಂತೆ **ಮಹಾಭಾಗವತಃ** ದೊಡ್ಡಭಗವದ್ಭಕ್ತನಾದ **ಪರೀಕ್ಷಿತ್** ಪರೀಕ್ಷಿತ್ ರಾಜನು **ಸೂತ್ಯಾಂ** ಅವನು ಹುಟ್ಟಿದಾಗ **ಹೇ ವಿಪ್ರ** ಎಲೋ ಶೌನಕರೇ **ಅಭಿಜಾತಕೋವಿದಃ** ಹುಟ್ಟಿದವರು ಮುಂದೆ ಮಾಡುವ ಕಾರ್ಯಗಳನ್ನು ತಿಳಿಯುವದರಲ್ಲಿ ಕುಶಲರಾದ ಜಾತಕವನ್ನರಿತ ಬ್ರಾಹ್ಮಣರು **ಮಹದ್ಗುಣಾನ್** ಮಹಾತ್ಮರಾದ ಇಕ್ವಾಕುಮುಂತಾದವರ ಪ್ರಜಾರಕ್ಷಣೆ ಮುಂತಾದ ಗುಣಗಳನ್ನು **ಸಮಾದಿಶನ್ ಯಥಾ ತಥಾ** ಯಾವ ರೀತಿ ಹೇಳಿದ್ದರೋ ಅದೇ ರೀತಿ **ಮಹೀಂ ಶಶಾಸ** ಭೂಮಿಯನ್ನು ಆಳಿದನು.

**ಸ ಉತ್ತರಸ್ಯ ತನಯಾಮುಪಯೇಮ ಇರಾವತೀಮ್ ।**
**ಜನಮೇಜಯಾದೀಂಶ್ಚತುರಸ್ತಸ್ಯಾಮುತ್ಪಾದಯತ್ಸುತಾನ್ ॥೨॥**

**ಸಃ** ಪರೀಕ್ಷಿತನು **ಉತ್ತರಸ್ಯ** ವಿರಾಟನ ಮಗನಾದ ಉತ್ತರ ಕುಮಾರನ **ತನಯಾಂ** ಮಗಳಾದ **ಇರಾವತೀಂ** ಇರಾವತಿಯನ್ನು **ಉಪಯೇಮೇ** ವಿವಾಹವಾದನು **ತಸ್ಯಾಂ** ಅವಳಲ್ಲಿ **ಜನಮೇಜಯಾದೀನ್** ಜನಮೇಜಯನೇ ಮುಂತಾದ **ಚತುರಃ** ನಾಲ್ಕು **ಸುತಾನ್** ಮಕ್ಕಳನ್ನು **ಉತ್ಪಾದಯತ್** ಹುಟ್ಟಿಸಿದನು.

**ಆಜಹಾರಾಶ್ವಮೇಧಾಂಸ್ತ್ರೀನ್ ಗಂಗಾಯಾಂ ಭೂರಿದಕ್ಷಿಣಾನ್ ।**
**ಶಾರದ್ವತಂ ಗುರುಂ ಕೃತ್ವಾ ದೇವಾ ಯತ್ರಾಕ್ಷಿಗೋಚರಾಃ ॥೩॥**

**ಶಾರದ್ವತಂ** ಕೃಪಾಚಾರ್ಯರನ್ನು **ಗುರುಂ ಕೃತ್ವಾ** ಗುರುಗಳನ್ನಾಗಿ ಮಾಡಿಕೊಂಡು **ಗಂಗಾಯಾಂ** ಗಂಗಾತೀರದಲ್ಲಿ **ಭೂರಿದಕ್ಷಿಣಾನ್** ಬಹಳ ದಕ್ಷಿಣೆಯುಳ್ಳ **ಯತ್ರ** ಯಾವ

ಅಶ್ವಮೇಧಗಳಲ್ಲಿ **ಅಕ್ಷಿಗೋಚರಾಃ ದೇವಾಃ** ದೇವತೆಗಳು ಪ್ರತ್ಯಕ್ಷವಾಗಿದ್ದರೋ ಅಂಥಹ **ತ್ರೀನ್ ಅಶ್ವಮೇಧಾನ್** ಮೂರು ಅಶ್ವಮೇಧಗಳನ್ನು **ಆಜಹಾರ** ಮಾಡಿದನು.

**ನಿಜಗ್ರಾಹೌಜಸಾ ಧೀರಃ ಕಲಿಂ ದಿಗ್ವಿಜಯೇ ಕ್ವಚಿತ್ ।**
**ನೃಪಲಿಂಗಧರಂ ಶೂದ್ರಂ ಘ್ನಂತಂ ಗೋಮಿಥುನಂ ಪದಾ ॥೪॥**

**ಕ್ವಚಿತ್** ಏಕಾಂತದೇಶದಲ್ಲಿ **ದಿಗ್ವಿಜಯೇ** ದಿಗ್ವಿಜಯಕಾಲದಲ್ಲಿ **ನೃಪಲಿಂಗಧರಂ** ರಾಜನ ಚಿನ್ಹೆಗಳನ್ನು ಧರಿಸಿದ **ಗೋಮಿಥುನಂ** ಆಕಳು ಮತ್ತು ಎತ್ತು ಎರಡನ್ನೂ **ಪದಾ ಘ್ನಂತಂ** ಕಾಲಿನಿಂದ ಒದೆಯುತ್ತಿರುವ ಆದ್ದರಿಂದ **ಶೂದ್ರಂ** ಶೂದ್ರನಾದ **ಕಲಿಂ** ಕಲಿಯನ್ನು **ಧೀರಃ** ಧೈರ್ಯಶಾಲಿಯಾದ ಪರೀಕ್ಷಿತನು **ಓಜಸಾ** ಸ್ವಾಭಾವಿಕಸಾಮರ್ಥ್ಯ-ದಿಂದ **ನಿಜಗ್ರಾಹ** ನಿಗ್ರಹಮಾಡಿದನು.

**ಶೌನಕ ಉವಾಚ -**

**ಕಸ್ಯ ಹೇತೋರ್ನಿಜಗ್ರಾಹ ಕಲಿಂ ದಿಗ್ವಿಜಯೇ ನೃಪಃ ।**
**ನೃದೇವಚಿನ್ಹಧೃಕ್ ಶೂದ್ರಃ ಕೋಽಸೌ ಗಾಂ ಯಃ ಪದಾಽಹನತ್ ॥೫॥**

**ನೃಪಃ** ಪರೀಕ್ಷಿತನು **ದಿಗ್ವಿಜಯೇ** ದಿಕ್ಕುಗಳನ್ನು ಗೆಲ್ಲುವ ಕಾಲದಲ್ಲಿ **ಕಲಿಂ** ಕಲಿಯನ್ನು **ಕಸ್ಯ ಹೇತೋಃ** ಯಾವ ಮಹಾಪರಾಧಕ್ಕಾಗಿ **ನಿಜಗ್ರಾಹ** ನಿಗ್ರಹಿಸಿದನು **ನೃದೇವಚಿನ್ಹಧೃಕ್** ರಾಜವೇಷಧರಿಸಿದ **ಯಃ** ಯಾವನು **ಗಾಂ** ಆಕಳನ್ನು **ಪದಾ ಅಹನತ್** ಕಾಲಿನಿಂದ ಒದ್ದನೊ **ಅಸೌ ಕಃ** ಅವನಾವ ಸಜ್ಜನನು ಸಜ್ಜನನಲ್ಲ **ಕಿಂತು ಕಃ** ಕುತ್ಸಿತನು ಎಂದು ಭಾವ.

*ಭಾಗವತತಾತ್ಪರ್ಯ -*

ಇಲ್ಲಿ ಕೋಽಸೌ ಎಂಬುದು ಪ್ರಶ್ನಾರ್ಥಕ ಎನಿಸುವದು ಕಾರಣ ಅರ್ಥ ಹೇಳುವರು.

''ಕೋಽಸಾವಿತ್ಯಾಕ್ಷೇಪಃ ಕಲಿಮಿತ್ಯುಕ್ತತ್ವಾತ್'' ।

ಕಲಿಂ ಎಂದೇ ಹೇಳಿದ್ದರಿಂದ ಇವನು ಕಲಿ ಎಂದು ತಿಳಿದೇ ಇದೆ. ಕಾರಣ ಪ್ರಶ್ನೆ ಕೂಡುವುದಿಲ್ಲ. ಅದು ಆಕ್ಷೇಪಾರ್ಥಕವೆಂದು ತಿಳಿಯಬೇಕು. ಆಗ ಕಾಲಿನಿಂದ ಒದ್ದ ಕಲಿಯು ಕುತ್ಸಿತನೆಂದರ್ಥವಾಗುವದು.

**ತತ್ಕಥ್ಯತಾಂ ಮಹಾಭಾಗ ಯದಿ ವಿಷ್ಣುಕಥಾಶ್ರಯಮ್ ।**
**ಅಥ ವಾऽಸ್ಯ ಪದಾಂಭೋಜಮಕರಂದಲಿಹಾಂ ಸತಾಂ ॥೬॥**

**ಹೇ ಮಹಾಭಾಗ** ಸೂತರೇ **ಯದಿ ವಿಷ್ಣುಕಥಾಶ್ರಯಂ** ಒಂದು ವೇಳೆ ಶ್ರೀಹರಿಯ ಕಥೆಯನ್ನು ಒಳಗೊಂಡಿದ್ದರೆ **ಅಥವಾ** ಅಥವಾ **ಯದಿ** ಒಂದುವೇಳೆ **ಅಸ್ಯ** ಪರಮಾತ್ಮನ **ಪದಾಂಭೋಜ** ಪಾದಕಮಲದ **ಮಕರಂದಲಿಹಾಂ** ಮಕರಂದ ಸ್ಥಾನೀಯ ಸೌಂದರ್ಯವನ್ನು ಆಸ್ವಾದಿಸುವ ಹರಿಭಕ್ತರಾದ **ಸತಾಂ** ಸಜ್ಜನರ **ಕಥಾಶ್ರಯಂ** ಕಥೆಯಿಂದ ಕೂಡಿದ್ದರೆ **ತತ್** ಕಲಿಬಂಧನವು **ಕಥ್ಯತಾಂ** ಹೇಳಲ್ಪಡಲಿ.

ಭಾಗವತತಾತ್ಪರ್ಯ -

ಅಥವಾ ಎಂಬ ನಿಪಾತಸಮುದಾಯ ಪಕ್ಷಾಂತರ ದ್ಯೋತಕವಾದರೆ ಅಪೇಕ್ಷಿತವಾದ ಯದಿ ಎಂಬ ಪದ ಅಧ್ಯಾಹಾರ ಮಾಡಬೇಕಾಗುವದು. ಅದನ್ನು ತಾತ್ಪರ್ಯ ಮೂಲಕ ವ್ಯಾಖ್ಯಾನಿಸುವರು.

ಅಥೇತಿ ಪಕ್ಷಾಂತರೇ ವಾ ಯದಿ ।

ಅಥಶಬ್ದವು ಪಕ್ಷಾಂತರೇ ಅರ್ಥಾಂತರ ಎಂಬರ್ಥದಲ್ಲಿದೆ. ವಾಶಬ್ದವು, ಯದಿಶಬ್ದ ಸಮಾನಾರ್ಥಕವಾಗಿದೆ ಎಂದು ಭಾವ.

**ಕಿಮನ್ಯೈರಸದಾಲಾಪೈರಾಯುಷೋ ಯದಸದ್ವ್ಯಯಃ ।**
**ಕ್ಷುದ್ರಾಯುಷಾಂ ನೃಣಾಮಂಗ ಮರ್ತ್ಯಾನಾಂ ಋತಿಮಿಚ್ಛತಾಂ ॥೭॥**

**ಅನ್ಯಥಾ** ವಿಷ್ಣುವೈಷ್ಣವಕಥಾಶ್ರವಣವಾಗದಿದ್ದರೆ **ಅನ್ಯೈಃ** ವಿಷ್ಣುವೈಷ್ಣವರನ್ನು ಬಿಟ್ಟು ಬೇರೆ ವಿಷಯಗಳುಳ್ಳವರು ಆದ್ದರಿಂದಲೇ **ಅಸದಾಲಾಪೈಃ** ಅಮಂಗಲ ಹರಟೆಯಿಂದ **ಕಿಂ** ಏನು ಪ್ರಯೋಜನ ? ಏನೂ ಇಲ್ಲ. ಅಷ್ಟೇ ಅಲ್ಲ **ಯತ್ ಆಯುಷಃ ಅಸದ್ವ್ಯಯಃ** ಯಾವುದರಿಂದ ಅಮಂಗಲವಾಗುವದು. ನರಕಕ್ಕೆ ಸಾಧನ ಮತ್ತು ಆಯುಷ್ಯನಾಶ ಇವುಗಳಾಗುವವು. ಮರಣ ಶಂಕೆಯಲ್ಲಿರುವ ನಿನಗೆ ನಾನು ಹೇಗೆ ಹೇಳಲಿ ಎಂದರೆ **ಕ್ಷುದ್ರಾಯುಷಾಂ** ಅಲ್ಪಾಯುಷಿಗಳಾದ **ಮರ್ತ್ಯಾನಾಂ** ಮರಣ ಸ್ವಭಾವದವರಾದ **(ಋತಿಮಿಚ್ಛತಾಂ** ಜ್ಞಾನವನ್ನು ಇಚ್ಛಿಸುವ**)ಮೃತಿಂ ಇಚ್ಛತಾಂ** ಉತ್ಕ್ರಾಂತಿಯನ್ನಿಚ್ಛಿಸುವ ನಮಗೆ ಅನ್ಯಕಥೆಯಿಂದ ಏನು ಪ್ರಯೋಜನ ? ಶ್ರೀಹರಿಕಥಾಯುಕ್ತವಾದದ್ದನ್ನು ಹೇಳಿರಿ ಎಂದು ಭಾವ.

*ಭಾಗವತತಾತ್ಪರ್ಯ -*

ಕಿಮನ್ಯೈಃ ಎಂಬುದಕ್ಕೆ ಹಿಂದಿನಿಂದ ಸಂಗತಿ ತೋರುವದಿಲ್ಲ. ಆದರ ಸಾಂಗತ್ಯವನ್ನು ಅಧ್ಯಾಹಾರ ಮಾಡಿ ಅಪೇಕ್ಷಿತಾರ್ಥವನ್ನು ತಿಳಿಸುವರು.

**ಅನ್ಯಥಾ ಚೇದಾಯುಷೋಽಸದ್ವ್ಯಯ ಇತ್ಯರ್ಥಃ ।**

ವಿಷ್ಣುವೈಷ್ಣವ ಕಥಾಶ್ರವಣವಾಗದಿದ್ದರೆ ಆಯುಷ್ಯದ ಅಪವ್ಯಯವಾಗುವದು. ಆ ಕಾರಣ ಬೇರೆ ಕಥೆಗಳಿಂದ ಏನೂ ಪ್ರಯೋಜನವಿಲ್ಲವೆಂದು ಭಾವ. ವಾಶಬ್ದ ಯದಿ ಎಂಬರ್ಥದಲ್ಲಿದೆ ಎನ್ನಲು ಪ್ರಮಾಣ ತಿಳಿಸುವರು.

**'ಯದ್ಯರ್ಥೇ ಚ ವಿಕಲ್ಪಾರ್ಥೇ ವಾಶಬ್ದಃ ಸಮುದೀರ್ಯತೇ ॥**

**-ಇತಿ ನಾಮಮಹೋದಧೌ**

ಯದಿ ಎಂಬರ್ಥದಲ್ಲಿ ವಿಕಲ್ಪ ಎಂಬರ್ಥದಲ್ಲಿಯೂ ವಾಶಬ್ದವು ಹೇಳಲ್ಪಟ್ಟಿದೆ. ಎಂದು ನಾಮ ಮಹೋದಧಿಯಲ್ಲಿದೆ.

**ಇಹೋಪಹೂತೋ ಭಗವನ್ಮೃತ್ಯುಃ ಶಾಮಿತ್ರಕರ್ಮಣಿ ।**
**ನ ಕಶ್ಚಿನ್ಮ್ರಿಯತೇ ತಾವದ್ಯಾವದಾಸ್ತೇ ಇಹಾಂತಕಃ ॥೮॥**

**ಇಹ** ಸತ್ರದಲ್ಲಿ **ಶಾಮಿತ್ರಕರ್ಮಣಿ** ಪಶುವನ್ನು ಸಂಹರಿಸುವವನಿಗೆ(ವಿಧ್ಯುಕ್ತವಾಗಿ) ಶಮಿತಾ ಎನ್ನುವರು ಕಾರಣ ವನ ಸಂಬಂಧಿಯಾದ್ದರಿಂದ **ಶಾಮಿತ್ರಕರ್ಮಣಿ** ಪಶು ಹಿಂಸೆಗಾಗಿ **ಭಗವಾನ್ ಮೃತ್ಯುಃ** ಷಡ್ಗುಣೈಶ್ವರ್ಯಸಂಪನ್ನರಾದ, ದುಷ್ಟಸಂಹಾರಕರಾದ ನರಸಿಂಹದೇವರು **ಉಪಹೂತಃ** ಹೇ ಸ್ವಾಮಿಯೇ ಇಲ್ಲಿ ಬಂದು ಯಜ್ಞಪಶುವನ್ನು ಮಾತ್ರ ಹಿಂಸಿಸು ಹೊರತು ಬೇರೆಯವರನ್ನು ಸಂಹರಿಸುವದು ಬೇಡ ಎಂದು ಪ್ರಾರ್ಥನೆ ಮಾಡಿ ಮಂತ್ರಗಳಿಂದ ಕರೆಯಲ್ಪಡುವನು **ಇಹ** ಇಲ್ಲಿ **ಅಂತಕಃ** ನರಸಿಂಹದೇವರು **ಯಾವತ್** ಎಲ್ಲಿಯ ವರೆಗೆ **ಆಸ್ತೇ** ಇರುವರೋ **ತಾವತ್** ಅಲ್ಲಿಯ ವರೆಗೆ **ನ ಕಶ್ಚಿನ್ಮ್ರಿಯತೇ** ಯಾರೂ ಸಾಯುವದಿಲ್ಲ.

**ಏತದರ್ಥಂ ಹಿ ಭಗವಾನಾಹೂತಃ ಪರಮರ್ಷಿಭಿಃ ।**
**ಅಹೋ ನೃಲೋಕೇ ಪೀಯೇತ ಹರಿಲೀಲಾಮೃತಂ ವಚಃ ॥೯॥**

**ನೃಲೋಕೇ** ಮನುಷ್ಯ ಲೋಕದಲ್ಲಿಯೂ **ಹರಿಲೀಲಾಮೃತಂ ವಚಃ** ಶ್ರೀಹರಿಯ ಚರಿತವೆಂಬ ಅಮೃತವುಳ್ಳ ಮಾತುಗಳನ್ನು **ಪೀಯೇತ ಇತಿ** ಕುಡಿಯಬೇಕು.

ಮೃತ್ಯುಭಯವಿಲ್ಲದೇ **ಏತದರ್ಥಂ ಹಿ** ಇದಕ್ಕಾಗಿಯೇ **ಪರಮರ್ಷಿಭಿಃ** ಋಷಿಶ್ರೇಷ್ಠರಿಂದ **ಭಗವಾನ್** ಪರಮಾತ್ಮನು **ಆಹೂತಃ** ಆಮಂತ್ರಿಸಲ್ಪಟ್ಟಿರುವನು ಪಶುವನ್ನು ಹಿಂಸಿಸುವದು ಮುಖ್ಯಪ್ರಯೋಜನವಲ್ಲವೆಂದು ಭಾವ.

*ಭಾಗವತತಾತ್ಪರ್ಯ -*

ಈ ಶ್ಲೋಕದಲ್ಲಿ ಪೂರ್ವೋತ್ತರಾರ್ಧಗಳಿಗೆ ಅನ್ವಯ ತೋರುವದಿಲ್ಲ ಅದಕ್ಕಾಗಿ ಇತಿ ಶಬ್ದವನ್ನು ಅಧ್ಯಾಹಾರಮಾಡಿ ಅನ್ವಯ ತಿಳಿಸುವರು.

ಏತದರ್ಥಂ ಹಿ ಮೃತ್ಯುರೂಪಹೂತಃ । ಅಹೋ ನೃಲೋಕೇ ಪೀಯೇತ ಇತಿ ।।

ಶ್ರೀಹರಿಯ ಚರಿತ್ರೆಯೆಂಬ ಅಮೃತವನ್ನು ಭೂಲೋಕದಲ್ಲಿಯೂ ಕುಡಿಯಲಿ ಎಂಬ ಉದ್ದೇಶದಿಂದಲೇ ಶ್ರೀನರಸಿಂಹನು ಮಂತ್ರಗಳಿಂದ ಕರೆಸಲ್ಪಟ್ಟಿದ್ದಾನೆ ಆಶ್ಚರ್ಯ.

**ಶ್ರೀಹರಿಯ ಕಥೆ ಕೇಳದಿದ್ದರೆ ಆಯುಷ್ಯ ವ್ಯರ್ಥ**

ಶ್ರೀಹರಿಯ ಕಥೆಯಿಲ್ಲದಿದ್ದರೆ ಆಯುಷ್ಯ ವ್ಯರ್ಥ ಎಂದು ಹೇಳಿದ್ದನ್ನೇ ವಿವರಿಸುವರು.

**ಮಂದಸ್ಯ ಮಂದಪ್ರಜ್ಞಸ್ಯ ಪ್ರಾಯೋ ಮಂದಾಯುಷಶ್ಚ ವೈ ।**
**ನಿದ್ರಯಾ ಹ್ರಿಯತೇ ನಕ್ತಂ ದಿವಾ ಚಾಪ್ಯರ್ಥಕರ್ಮಭಿಃ ।।೧೦।।**

**ಮಂದಸ್ಯ** ಆಲಸ್ಯನಾದ (ನಿರ್ಭಾಗ್ಯನಾದ) **ಮಂದಪ್ರಜ್ಞಸ್ಯ** ಅಲ್ಪ ಬುದ್ಧಿಯುಳ್ಳ **ಪ್ರಾಯಃ** ಬಹುತೇಕವಾಗಿ **ಮಂದಾಯುಷಃ** ಅಲ್ಪಾಯುಷಿಯಾದವನ **ನಕ್ತಂ** ರಾತ್ರಿಯು **ನಿದ್ರಯಾ** ನಿದ್ದೆಯಿಂದ **ದಿವಾ ಚ** ಹಗಲೂ ಸಹ **ಅರ್ಥಕರ್ಮಭಿಃ** ದ್ರವ್ಯಸಂಪಾದನೆಗಾಗಿ ವ್ಯಾಪಾರಗಳಿಂದ **ಹ್ರಿಯತೇ** ಕಳೆಯುತ್ತದೆ ಆದ ಕಾರಣ ಶ್ರೀಹರಿಕಥಾಮೃತದ ಮಾತುಗಳನ್ನು ಕೇಳಲಿ ಎಂದು ನರಸಿಂಹದೇವರನ್ನು ಕರೆದಿರುವನು ಎಂದನ್ವಯ.

ಸೂತ ಉವಾಚ -

**ಯದಾ ಪರೀಕ್ಷಿತ್ ಕುರಜಾಂಗಲೇ ವಸನ್**
**ಕಲಿಂ ಪ್ರವಿಷ್ಟಂ ನಿಜಚಕ್ರವರ್ತಿತೇ ।**
**ನಿಶಮ್ಯ ವಾರ್ತಾಮನತಿಪ್ರಿಯಾಂ ತತಃ**
**ಶರಾಸನಂ ಸಂಯುಗರೋಚಿರಾದದೇ ।।೧೧।।**

**ಯದಾ** ಯಾವಾಗ **ಪರೀಕ್ಷಿತ್** ಪರೀಕ್ಷಿತ್ ರಾಜನು **ಕುರುಜಾಂಗಲೇ** ಕುರುದೇಶದಲ್ಲಿ **ನಿಜಚಕ್ರವರ್ತಿತೇ** ತನ್ನ ಆಜ್ಞೆಯಿಂದ ಅಥವಾ ಸೇನೆಯಿಂದ ರಕ್ಷಿತವಾದ ರಾಷ್ಟ್ರದಲ್ಲಿ **ಪ್ರವಿಷ್ಟಂ ಕಲಿಂ ಶುಶ್ರಾವ** ಪ್ರವೇಶಿಸಿದ ಕಲಿಯನ್ನು ಕೇಳಿದನು **ತತಃ** ಆಗ **ಅನತಿಪ್ರಿಯಾಂ ವಾರ್ತಾಂ ನಿಶಮ್ಯ** ಸಂಪೂರ್ಣ ನಾಶ ಮಾಡಲಾಗುವದಿಲ್ಲವೆಂದು ಬಹಳ ಪ್ರಿಯವಲ್ಲದ, ತಾತ್ಕಾಲಿಕ ದುಷ್ಟನಿಗ್ರಹವೆಂಬ ಧರ್ಮ ಲಾಭವಾಗುವದರಿಂದ ಸ್ವಲ್ಪಪ್ರಿಯವಾದ, ಆ ವಾರ್ತೆಯನ್ನು ಕೇಳಿ **ಸಂಯುಗರೋಚಿಃ** ಯುದ್ಧವನ್ನಿಚ್ಛಿಸು- ವವನಾಗಿ **ಶರಾಸನಂ ಆದದೇ** ಧನುಸ್ಸನ್ನು ಕೈಗೆ ತೆಗೆದುಕೊಂಡನು.

**ಸ್ವಲಂಕೃತಂ ಶ್ಯಾಮತುರಂಗಯೋಜಿತಂ**
**ರಥಂ ಮೃಗೇಂದ್ರಧ್ವಜಮಾಸ್ಥಿತಂ ಪುರಾತ್ ।**
**ವೃತೋ ರಥಾಶ್ವಾದ್ವಿಪಪತ್ತಿಯುಕ್ತಯಾ**
**ಸ್ವಸೇನಯಾ ದಿಗ್ವಿಜಯಾಯ ನಿರ್ಗತಃ ॥೧೨॥**

**ಸ್ವಲಂಕೃತಂ** ಚೆನ್ನಾಗಿ ಅಲಂಕರಿಸಲ್ಪಟ್ಟ **ಶ್ಯಾಮತುರಂಗಯೋಜಿತಂ** ನೀಲಿ ಕುದುರೆಗಳನ್ನು ಕಟ್ಟಿದ ಅಥವಾ ಹೊಸಮಾರ್ಗಗಳಲ್ಲಿಯೂ ಚೆನ್ನಾಗಿ ನಡೆಯಬಲ್ಲ **ಮೃಗೇಂದ್ರಧ್ವಜಂ** ಸಿಂಹಧ್ವಜವುಳ್ಳ **ರಥಂ ಆಸ್ಥಿತಃ** ರಥದಲ್ಲಿ ಕುಳಿತು **ರಥಾಶ್ವಾದ್ವಿಪ ಪತ್ತಿಯುಕ್ತಯಾ** ರಥಗಳು, ಕುದುರೆಗಳು, ಆನೆಗಳು, ಕಾಲಾಳುಗಳು ಇವುಗಳಿಂದ ಕೂಡಿದ **ಸ್ವಸೇನಯಾ** ತನ್ನ ಸೇನೆಯಿಂದ **ವೃತಃ** ಸುತ್ತುವರೆಯಲ್ಪಟ್ಟ **ದಿಗ್ವಿಜಯಾಯ** ದಿಕ್ಕುಗಳನ್ನು ಗೆಲ್ಲುವದಕ್ಕಾಗಿ **ಪುರಾತ್ ನಿರ್ಗತಃ** ಪಟ್ಟಣದಿಂದ ಹೊರಹೊರಟನು.

**ಭದ್ರಾಶ್ವಂ ಕೇತುಮಾಲಂ ಚ ಭಾರತಂ ಚೋತ್ತರಾನ್ ಕುರೂನ್ ।**
**ಕಿಂಪುರುಷಾದೀನಿ ಸರ್ವಾಣಿ ವಿಜಿತ್ಯ ಜಗೃಹೇ ಬಲಿಂ ॥೧೩॥**

**ಭದ್ರಾಶ್ವಂ** ಭದ್ರಾಶ್ವವೆಂಬ **ಕೇತುಮಾಲಂ** ಕೇತುಮಾಲವೆಂಬ **ಭಾರತಂ ಚ** ಭಾರತವೆಂಬ ಖಂಡಗಳನ್ನು **ಉತ್ತರಕುರೂನ್** ಉತ್ತರಕುರುದೇಶವನ್ನು **ಕಿಂಪುರುಷಾದೀನಿ** ಕಿಂಪುರುಷ ಮೊದಲಾದ ಖಂಡಗಳನ್ನು **ಸರ್ವಾಣಿ** ಎಲ್ಲವನ್ನು **ವಿಜಿತ್ಯ** ಗೆದ್ದು **ಬಲಿಂ ಜಗೃಹೇ** ಕರವನ್ನು ಸ್ವೀಕರಿಸಿದನು. ಭದ್ರಾಶ್ವಾದಿಗಳು ಇವುಗಳೆಲ್ಲ ಪೂರ್ವಪಶ್ಚಿಮ ದಕ್ಷಿಣೋತ್ತರಗಳಲ್ಲಿ ಸಮುದ್ರಕ್ಕೆ ಅಂಟಿಕೊಂಡಿರುವ ಖಂಡಗಳು ಮೇರು ಪರ್ವತದ ಪೂರ್ವಕ್ಕೆ, ಇಲಾವೃತಖಂಡದ ಉತ್ತರಕ್ಕೆ, ರಮ್ಯಕ ಮತ್ತು ಹಿರಣ್ಮಯ ದಕ್ಷಿಣಕ್ಕೆ, ಹರಿವರ್ಷ ಮತ್ತು ಕಿಂಪುರುಷ ಖಂಡಗಳಿವೆ ಅವುಗಳನ್ನು ಗೆದ್ದ ಎಂದರ್ಥ.

**ತತ್ರ ತತ್ರೋಪಶೃಣ್ವಾನಃ ಸ್ವಪೂರ್ವೇಷಾಂ ಮಹಾತ್ಮನಾಮ್ ।**
**ಪ್ರಗೀಯಮಾನಂ ಪುರತಃ ಕೃಷ್ಣಮಾಹಾತ್ಮ್ಯಸೂಚಕಂ ॥೧೪॥**

**ತತ್ರ ತತ್ರ** ಆ ಆ ಖಂಡಗಳಲ್ಲಿ **ಪುರತಃ** ತನ್ನ ಮುಂದೆ **ಪ್ರಗೀಯಮಾನಂ** ಗಾಯಕರಿಂದ ಗಾನ ಮಾಡಲ್ಪಡುವ **ಕೃಷ್ಣಮಾಹಾತ್ಮ್ಯಸೂಚಕಂ** ಶ್ರೀಕೃಷ್ಣನ ಮಹಿಮೆಯನ್ನು ತಿಳಿಸುವ **ಸ್ವಪೂರ್ವೇಷಾಂ ಮಹಾತ್ಮನಾಂ** ತಮ್ಮ ಪೂರ್ವಜರಾದ ಪಾಂಡವರ **ಯಶಃ** ಕೀರ್ತಿಯನ್ನು **ಉಪಶೃಣ್ವಾನಃ** ಕೇಳುವವನಾಗಿದ್ದನು.

**ಆತ್ಮಾನಂ ಚ ಪರಿತ್ರಾತಮಶ್ವತ್ಥಾಮ್ನೋಽಸ್ತ್ರತೇಜಸಃ ।**
**ಸ್ನೇಹಂ ಚ ವೃಷ್ಣಿಪಾರ್ಥಾನಾಂ ತೇಷಾಂ ಭಕ್ತಿಂ ಚ ಕೇಶವೇ ॥೧೫॥**

**ಅಶ್ವತ್ಥಾಮ್ನಃ** ಅಶ್ವತ್ಥಾಮಾಚಾರ್ಯರ **ಅಸ್ತ್ರತೇಜಸಃ** ಬ್ರಹ್ಮಾಸ್ತ್ರದ ಸಾಮರ್ಥ್ಯದಿಂದ **ಪರಿತ್ರಾತಂ** ರಕ್ಷಿತನಾದ **ಆತ್ಮಾನಂ** ತನ್ನನ್ನು **ವೃಷ್ಣಿಪಾರ್ಥಾನಾಂ ಸ್ನೇಹಂ ಚ** ಯಾದವರ ಪಾಂಡವರ ಸ್ನೇಹವನ್ನು **ತೇಷಾಂ** ಅವರಿಬ್ಬರ **ಕೇಶವೇ ಭಕ್ತಿಂ ಚ** ಶ್ರೀಕೃಷ್ಣನಲ್ಲಿ ಮಾಡುವ ಭಕ್ತಿಯನ್ನು **ಗೀಯಮಾನಂ ಶೃಣ್ವನ್** ಗಾನ ಮಾಡುವದನ್ನು ಕೇಳಿ

**ತೇಭ್ಯಃ ಪರಮಸಂತುಷ್ಟಃ ಪ್ರೀತ್ಯುಜ್ಜೃಂಭಿತಲೋಚನಃ ।**
**ಮಹಾಧನಾನಿ ವಾಸಾಂಸಿ ದದೌ ಹಾರಾನ್ಮಹಾಮನಾಃ ॥೧೬॥**

**ತೇಭ್ಯಃ** ಗಾಯಕರ ಮೇಲೆ **ಪರಮಸಂತುಷ್ಟಃ** ಬಹಳಪ್ರೀತನಾಗಿ **ಪ್ರೀತ್ಯುಜ್ಜೃಂಭಿತ-ಲೋಚನಃ** ಪ್ರೀತಿಯಿಂದ ಅರಳಿದ ಕಣ್ಣುಳ್ಳ **ಮಹಾಮನಾಃ** ವಿಶಾಲ ಮನಸ್ಸಿನ ಪರೀಕ್ಷಿತನು **ಮಹಾಧನಾನಿ** ಬಹಳ ಬೆಲೆ ಬಾಳುವ **ವಾಸಾಂಸಿ** ವಸ್ತ್ರಗಳನ್ನು **ಹಾರಾನ್** ಹಾರಗಳನ್ನೂ (ಅವರಿಗೆ) **ದದೌ** ಕೊಟ್ಟನು.

**ಸಾರಥ್ಯಪಾರ್ಷದಸೇವನಸಖ್ಯದೌತ್ಯ-**
**ವೀರಾಸನಾನುಗಮನಸ್ತವನಪ್ರಣಾಮೈಃ ।**
**ಸ್ನಿಗ್ಧೇಷು ಪಾಂಡುಷು ಜಗತ್ಪ್ರಣತಸ್ಯ ವಿಷ್ಣೋಃ**
**ಭಕ್ತಿಂ ಕರೋತಿ ನೃಪತಿಶ್ಚರಣಾರವಿಂದೇ ॥೧೭॥**

**ಸ್ನಿಗ್ಧೇಷು** ಸ್ವತ ಏವ ಭಕ್ತರಾದ **ಪಾಂಡುಷು** ಪಾಂಡವರ ವಿಷಯದಲ್ಲಿ **ಜಗತ್ಪ್ರಣತಸ್ಯ** ಮುಕ್ತಾಮುಕ್ತ ಪ್ರಪಂಚದಿಂದ ವಂದ್ಯನಾದ **ವಿಷ್ಣೋಃ** ಶ್ರೀಕೃಷ್ಣ ಮಾಡಿದ **ಸಾರಥ್ಯಪಾರ್ಷದಸೇವನಸಖ್ಯದೌತ್ಯವೀರಾಸನಾನುಗಮನಸ್ತವನ ಪ್ರಣಾಮೈಃ** ಸಾರಥ್ಯ

ಸಾರಥಿಯ ಕೆಲಸ **ಪಾರ್ಷದ** ಸಭಾಪತಿಯ ಕರ್ಮ ಅಥವಾ ದ್ವಾರಪಾಲಕತೆಯನ್ನು **ಸೇವನ** ಅವರು ಹೇಳಿದ್ದನ್ನು ಮಾಡುವದು ಅವರ ಮನಸ್ಸಿನಂತೆ ಮಾಡುವದು ಎಂದರ್ಥ. **ಸಖ್ಯ** ಗೆಳೆಯನ ಕಾರ್ಯವನ್ನು **ದೌತ್ಯ** ದೂತನು ಮಾಡುವ ಅವರ ಸಂದೇಶವನ್ನು ಇನ್ನೊಬ್ಬರಿಗೆ ತಲುಪಿಸುವದು. **ವೀರಾಸನಂ** ಖಡ್ಗವನ್ನು ಕೈಯಲ್ಲಿ ಹಿಡಿದು ಸ್ವಾಮಿಯನ್ನು ಸಂರಕ್ಷಿಸಲು ರಾತ್ರಿಯಲ್ಲಿ ಎಚ್ಚರವಿರುವದು **ಅನುಗಮನ** ಹಿಂಬಾಲಿಸಿ ಹೋಗುವದು **ಸ್ತವನ** ಸ್ತೋತ್ರ ಮಾಡುವದು **ಪ್ರಣಾಮೈಃ** ನಮಸ್ಕರಿಸುವದು ಅಥವಾ ವೀರಾಸನಾನುಗಮನ ಎಂದರೆ ಸಿಂಹಾಸನದ ಕೆಳಗೆ ಕೂಡುವದು ಇವುಗಳಿಂದ **ವಿಷ್ಣೋಃ ಚರಣಾರವಿಂದೇ** ಶ್ರೀಕೃಷ್ಣನ ಪಾದಕಮಲಗಳಲ್ಲಿ **ನೃಪತಿಃ** ಪರೀಕ್ಷಿತನು **ಭಕ್ತಿಂ ಕರೋತಿ** ಏನಿದು ಶೌರ್ಯ ತನ್ನ ಭಕ್ತರ ಮೇಲೆ ಮಾಡುವ ಅಪಾರ ಕರುಣೆ ಇದು ಎಂದು ವಿಶೇಷಭಕ್ತಿಯಿಂದ ಮಾಡುವನೆಂದು ಭಾವ.

*ಭಾಗವತತಾತ್ಪರ್ಯ -*

ಇಲ್ಲಿ 'ನೃಪತಿಃ ಭಕ್ತಿಂ ಕರೋತಿ' ಎಂದು ಹೇಳಿದ್ದರಿಂದ ಮೊದಲು ಭಕ್ತಿ ಇರಲಿಲ್ಲ ಈಗ ಭಕ್ತಿ ಮಾಡುವನು ಎಂದು ತೋರುವದು ಅಲ್ಲದೆ ಸಾರಥ್ಯಾದಿನಿಮಿತ್ತಗಳಿಂದ ಸ್ನಿಗ್ಧೇಷು ಎಂದದ್ದರಿಂದ ಸ್ವಾಭಾವಿಕ ಭಕ್ತಿ ಇರಲಿಲ್ಲವೆಂದೂ ತೋರುವದು ಕಾರಣ ಅನ್ವಯ ತೋರಿಸುತ್ತ ವ್ಯಾಖ್ಯಾನಿಸುವರು.

**'ಸ್ನಿಗ್ಧೇಷು ಪಾಂಡುಷು ವಿಷ್ಣೋಃ ಸಾರಥ್ಯಾದಿಭಿಃ ವಿಶೇಷತಃ ಭಕ್ತಿಂ ಕರೋತಿ' ।**

ಭಗವದ್ಭಕ್ತಿ ಪಾಂಡವರಿಗೆ ಸ್ವಾಭಾವಿಕ. ಆ ಪಾಂಡವರ ವಿಷಯದಲ್ಲಿ ಶ್ರೀಕೃಷ್ಣನು ಸಾರಥ್ಯವನ್ನು ಮಾಡಿದನು. ಆ ಸಾರಥ್ಯದ ಗಾನವನ್ನು ಎಲ್ಲರು ಕೇಳಿದರು. ಬ್ರಹ್ಮಾದಿಗಳಿಂದ ವಂದ್ಯನಾದ ಶ್ರೀಕೃಷ್ಣ ಮಹಾಕರುಣಾಳು ಎಂದು ಪರೀಕ್ಷಿತನು ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ವಿಶೇಷ ಭಕ್ತಿಯನ್ನು ಮಾಡುತ್ತಾನೆ. ಇವನೂ ಪರಮಾತ್ಮನಲ್ಲಿ ಸ್ವಾಭಾವಿಕವಾಗಿ ಭಕ್ತಿ ಇದ್ದವನೇ.

**ತಸ್ಮೈವಂ ವರ್ತಮಾನಸ್ಯ ಪೂರ್ವೇಷಾಂ ವೃತ್ತಮನ್ವಹಮ್ ।**
**ನಾತಿದೂರೇ ಕಿಲಾಶ್ಚರ್ಯಂ ಯದಾಸೀತ್ತನ್ನಿಬೋಧ ಮೇ ॥೧೮॥**

**ಅನ್ವಹಂ** ಪ್ರತಿದಿನವೂ **ಪೂರ್ವೇಷಾಂ ವೃತ್ತಂ** ತಂದೆ ತಾಯಂದಿರ ಆಚರಣೆಯನ್ನೂ **ಏವಂ ವರ್ತಮಾನಸ್ಯ ತಸ್ಯ** ಅದೇ ರೀತಿ ನಡೆಸಿಕೊಂಡು ಬರುತ್ತಿರುವ **ತಸ್ಯ**

ಪರೀಕ್ಷಿತನಿಗೆ **ನಾತಿ ದೂರೇ** ಸಮೀಪದಲ್ಲಿಯೇ **ಆಶ್ಚರ್ಯಂ ಯದಾಸೀತ್ ಕಿಲ ತತ್ ಮೇ ನಿಬೋಧ** ಏನು ಅದ್ಭುತ ನಡೆಯಿತೋ ಅದನ್ನು ನನಗೆ ಹೇಳು.

**ಧರ್ಮಃಪದೈಕೇನ ಚರನ್ ವಿಚ್ಛಾಯಾಮುಪಲಭ್ಯ ಗಾಮ್ ।**
**ಪೃಚ್ಛತಿ ಸ್ಮಾಶ್ರುವದನಾಂ ವಿವತ್ಸಾಮಿವ ಮಾತರಮ್ ॥೧೯॥**

**ಧರ್ಮಃ** ಧರ್ಮಾಭಿಮಾನಿಯಾದ ಯಮನು ಎತ್ತಿನ ರೂಪದಿಂದ **ಏಕೇನ ಪದಾ ಚರನ್** ಸತ್ಯವೆಂಬ ಒಂದೇ ಕಾಲಿನಿಂದ ನಡೆಯುತ್ತ **ವಿಚ್ಛಾಯಾಂ ಗಾಂ ಉಪಲಭ್ಯ** ಕಾಂತಿಯಿಲ್ಲದ **ಗಾಂ ಉಪಲಭ್ಯ** ಗೋರೂಪದ ಭೂಮಿಯನ್ನು ಸಮೀಪಿಸಿ **ವಿವತ್ಸಾಂ ಮಾತರಂ ಇವ** ಮಗುವಿಲ್ಲದ ತಾಯಿಯಂತೆ **ಅಶ್ರುವದನಾಂ** ಕಣ್ಣೀರು ಸುರಿಸುವ ಮುಖವುಳ್ಳವಳನ್ನು **ಪೃಚ್ಛತಿ ಸ್ಮ** ಕೇಳಿದನು.

ಧರ್ಮ ಉವಾಚ -

**ಕಚ್ಚಿದ್ಭದ್ರೇಽನಾಮಯಮಾತ್ಮನಸ್ತೇ**
**ವಿಚ್ಛಾಯಾಸಿ ಮ್ಲಾಯತಾ ಯನ್ಮುಖೇನ ।**
**ಆಲಕ್ಷಯೇ ಭವತೀಮಂತರಾಧಿಂ**
**ದೂರೇ ಬಂಧುಂ ಕಂಚನ ಶೋಚಸೀವ ॥೨೦॥**

**ಹೇ ಭದ್ರೇ** ಎಲೆ ಗೋವೇ (ಭದ್ರಾ ಗೌರ್ಗೋಮತಲ್ಲಿಕಾ ಎಂದು ಅಭಿಧಾನ) **ತೇ** ನಿನ್ನ **ಆತ್ಮನಃ** ದೇಹಕ್ಕೆ **ಅನಾಮಯಂ ಕಚ್ಚಿತ್** ಆರೋಗ್ಯವಿದೆಯೇ? **ಯತ್** ಯಾವ ಕಾರಣ **ಮ್ಲಾಯತಾ ಯನ್ಮುಖೇನ** ಬಾಡಿದ ಮುಖದಿಂದ **ವಿಚ್ಛಾಯಾ ಅಸಿ** ಕಾಂತಿರಹಿತಳಾಗಿರುವಿ **ತತ್** ಆದ್ದರಿಂದ **ಭವತೀಂ** ನಿನ್ನನ್ನು **ಅಂತರಾಧಿಂ** ಮನೋವ್ಯಥೆಯುಳ್ಳವಳೆಂದು **ಆಲಕ್ಷಯೇ** ಗುರುತಿಸುವೆನು ಮತ್ತು **ದೂರೇ ಸ್ಥಿತಂ** ದೂರದಲ್ಲಿರುವ **ಕಂಚನಬಂಧುಂ** ಒಬ್ಬ ಬಂಧುವಿಗಾಗಿ **ಶೋಚಸೀ ಇವ** ದುಃಖಿಸುತ್ತಿರುವಂತೆಯೂ ತಿಳಿಯುವೆನು.

**ಪಾದೈರ್ನ್ಯೂನಂ ಶೋಚಸಿ ಮೈಕಪಾದ**
**ಮುತಾತ್ಮಾನಂ ವೃಷಲೈರ್ಭೋಕ್ಷ್ಯಮಾಣಮ್ ।**
**ಅಥೋ ಸುರಾದೀನ್ ಹೃತಯಜ್ಞಭಾಗಾನ್**
**ಪ್ರಜಾ ಉತಸ್ವಿನ್ಮಘವತ್ಯವರ್ಷತಿ ॥೨೧॥**

**ಪಾದೈಃ ನ್ಯೂನಂ** ತಪಸ್ಸು ಶೌಚ ಮೊದಲಾದ ಮೂರು ಪಾದಗಳಿಂದ ರಹಿತನಾದ ಆದ್ದರಿಂದಲೇ **ಏಕಪಾದಂ** ಸತ್ಯ ಒಂದೇ ಪಾದವುಳ್ಳ **ಮಾ** ನನ್ನನ್ನು ಕುರಿತು **ಶೋಚಸಿ** ದುಃಖಿಸುವಿಯಾ **ಉತ** ಅಥವಾ **ವೃಷಲೈಃ ಭೋಕ್ಷ್ಯಮಾಣಂ ಆತ್ಮಾನಂ** ಧರ್ಮವನ್ನು ನಾಶಮಾಡುವ, ದುಷ್ಟರಾದ, ಶೂದ್ರಪ್ರಾಯರಾದ ರಾಜರುಗಳಿಂದ ಇನ್ನು ಮುಂದೆ ಅನುಭವಿಸುವ ನಿನಗಾಗಿ **ಶೋಚಸಿ** ದುಃಖಿಸುವಿಯಾ **ಅಥ** ಇಲ್ಲವಾದರೆ **ಹೃತಯಜ್ಞಭಾಗಾನ್ ಸುರಾದೀನ್** ಯಜ್ಞಾದಿಗಳನ್ನೇ ಮಾಡದಿರುವದರಿಂದ ಅಪಹರಿಸಲ್ಪಟ್ಟ ಯಜ್ಞಭಾಗವುಳ್ಳ ದೇವತೆಗಳಿಗಾಗಿ ಚಿಂತಿಸುವಿಯಾ **ಉತಸ್ವಿತ್** ಅಥವಾ **ಮಘವತಿ ಅವರ್ಷತಿ ಪ್ರಜಾಃ ಶೋಚಸಿ** ಇಂದ್ರನು ಮಳೆಗರೆಯದಿರುವಾಗ ಅನ್ನವಿಲ್ಲದೆ ಕಷ್ಟಪಡುವ ಪ್ರಜರಿಗಾಗಿ ದುಃಖಿಸುವಿಯಾ.

**ಅರಕ್ಷ್ಯಮಾಣಾ ಸ್ತ್ರಿಯ ಉರ್ವಿ ಬಾಲಾನ್**
**ಶೋಚಸ್ಯಥೋ ಪುರುಷಾದ್ಯೈರಿವಾರ್ತಾನ್ ।**
**ವಾಚಂ ದೇವೀ ಬ್ರಹ್ಮಕುಲೇ ಕುಕರ್ಮಣ್ಯ**
**ಬ್ರಹ್ಮಣ್ಯೇ ರಾಜಕುಲೇ ಕುಲಾಗ್ರ್ಯ್ಯಮ್ ॥೨೨॥**

**ಹೇ ಉರ್ವಿ** ಭೂಮಿಯೇ **ಅರಕ್ಷ್ಯಮಾಣಾಃ ಸ್ತ್ರಿಯಃ** ಗಂಡಂದಿರಿಂದ ರಕ್ಷಿಸದಿರುವ ಹೆಣ್ಣು ಮಕ್ಕಳಿಗಾಗಿಯೋ **ಅಥೋ** ಅಥವಾ **ಪುರುಷಾದ್ಯೈಃ** ಇವ ರಾಕ್ಷಸರಂತಿರುವ, ತಂದೆಯಿಂದ ರಕ್ಷಿಸದಿರುವ, ಅಷ್ಟೇ ಅಲ್ಲದೇ ಅವರಿಂದ **ಆರ್ತಾನ್** ದುಃಖಿತರಾದ **ಬಾಲಾನ್ ಉದ್ದಿಶ್ಯ** ಮಕ್ಕಳಿಗಾಗಿಯೋ **ಕುಲಾಗ್ರ್ಯ್ಯಂ** ಶ್ರೇಷ್ಠಕುಲದಲ್ಲಿರುವ ಸದಾಚಾರಿಗಳಾದ ತ್ರೈವರ್ಣಿಕರು(ವೇದಾಧ್ಯಯನ ಮಾಡಿರುವವರು) **ದೇವೀಂ** ಪ್ರಕಾಶಮಾನವಾದ **ವಾಚಂ** ವೇದವಾಣಿಯನ್ನು ಕುರಿತು ಅಥವಾ **ಬ್ರಹ್ಮಕುಲೇ** ಬ್ರಾಹ್ಮಣರು **ಕುಕರ್ಮಣಿ** ದುಷ್ಪ್ರತಿಗ್ರಹ ಮತ್ತು ಕೃಷಿಮಾಡುವದೇ ಮುಂತಾದ ಕಾರ್ಯ ಮಾಡುವದಕ್ಕಾಗಿ ಅಥವಾ **ರಾಜಕುಲೇ ಅಬ್ರಹ್ಮಣ್ಯೇ** ಕ್ಷತ್ರಿಯರು ಬ್ರಾಹ್ಮಣರಿಗೆ ಅವಮಾನ ಮಾಡುವದಕ್ಕೆ **ವೈಶ್ಯೇ** ವೈಶ್ಯರು **ದುರಾಚಾರೇ ಸತಿ** ದುರಾಚಾರಿಗಳಾಗಿ ಇರುವರೆಂದು **ಶೋಚಸಿ** ದುಃಖಿಸುವಿಯೋ

**ಕಿಂಕ್ಷತ್ರಬಂಧೂನ್ ಕಲಿನೋಪಸೃಷ್ಟಾನ್**
**ರಾಷ್ಟ್ರಾಣಿ ವಾ ತೈರವರೋಪಿತಾನಿ ।**

**ಇತಸ್ತತೋ ವಾಶನಪಾನವಾಸಸ್ನಾನ-**
**ವ್ಯವಾಯೋತ್ಸುಕಜೀವಲೋಕಂ** **॥೨೩॥**

**ಕಲಿನಾ** ಕಲಿಯಿಂದ **ಉಪಸೃಷ್ಟಾನ್** ಎಲ್ಲ ಕಡೆಗೆ ಹೋಗಿ ಪೀಡೆಕೊಡುವ **ಕ್ಷತ್ರಬಂಧೂನ್** ರಾಜರನ್ನು ಉದ್ದೇಶಮಾಡಿ **ವಾ** ಅಥವಾ **ತೈಃ** ಕ್ಷತ್ರಬಂಧುಗಳಿಂದ **ಅವರೋಪಿತಾನಿ** ನಾಶಗೊಳಿಸಿದ **ರಾಷ್ಟ್ರಾಣಿ** ರಾಷ್ಟ್ರಗಳಿಗಾಗಿಯೇ **ವಾ** ಅಥವಾ **ಇತಸ್ತತಃ** ಇತ್ತ ಅತ್ತ ಎಲ್ಲಿ ಬೇಕಲ್ಲಿ ವಿಧಿನಿಷೇಧವಿಲ್ಲದೆ **ಅಶನ** ಉಣ್ಣುವವರು **ಪಾನ** ಕುಡಿಯುವವರು **ವಾಸ** ವಸ್ತ್ರಧರಿಸುವವರು, ಸ್ನಾನಮಾಡುವವರು, **ವ್ಯವಾಯ** ಹಳ್ಳಿಯ ಕೆಲಸಗಳು ಇವುಗಳಲ್ಲಿ **ಉತ್ಸುಕ** ಉತ್ಸಾಹವುಳ್ಳ **ಜೀವಲೋಕಂ** ಜನರಿಗಾಗಿ **ಶೋಚಸಿ** ಚಿಂತೆಮಾಡುವೆಯಾ

**ಯದ್ವಾಂಬ ತೇ ಭೂರಿ ಭಾರಾವತಾರಕೃತಾವತಾರಸ್ಯ ಹರೇರ್ಧರಿತ್ರಿ ।**
**ಅಂತರ್ಹಿತಸ್ಯ ಸ್ಮರತೀ ವಿಸೃಷ್ಟಾ ಕರ್ಮಾಣಿ ನಿರ್ವಾಣವಿಲಂಬಿತಾನಿ ॥**

**ಹೇ ಅಂಬ** ತಾಯಿಯೇ **ಹೇ ಧರಿತ್ರಿ** ಭೂಮಿಯೇ **ತೇ** ನಿನ್ನ **ಭೂರಿ** ಬಹಳವಾದ **ಭಾರಾವತಾರಕೃತಾವತಾರಸ್ಯ ಭಾರಾವತಾರ,** ಭಾರವನ್ನಿಳಿಸಲು **ಕೃತ,** ಮಾಡಲ್ಪಟ್ಟ **ಅವತಾರಸ್ಯ** ಅವತಾರವುಳ್ಳ **ಅಂತರ್ಹಿತಸ್ಯ** ಈಗ ಅಂತರ್ಧಾನನಾದ **ಹರೇಃ** ಶ್ರೀಕೃಷ್ಣನ **ನಿರ್ವಾಣವಿಲಂಬಿತಾನಿ** ಮೋಕ್ಷಸುಖವನ್ನು ಕೊಡುವ **ಕರ್ಮಾಣಿ** ಕಾರ್ಯಗಳನ್ನು **ಸ್ಮರತೀ** ಸ್ಮರಿಸುವವಳಾಗಿ **ವಿಸೃಷ್ಟಾ** ಅವನಿಂದ ಬಿಡಲ್ಪಟ್ಟಿರುವಿ ಎಂದು **ಶೋಚಸಿ** ದುಃಖಿಸುವಿಯಾ.

**ವಿಶೇಷ :-** ಯದ್ವಾಥ ತೇ ಎಂದು ಪಾಠವಿದ್ದಾಗ ಪಕ್ಷಾಂತರ ತಿಳಿಸುವ ನಿಪಾತಸಮುದಾಯ ಎಂದಿಟ್ಟುಕೊಳ್ಳಬೇಕು.

**ಶ್ರೀಹರಿಯ ಚರಿತ್ರೆಗಳು ಅಧಿಕಸುಖದಾಯಕಗಳು**

ಶ್ರೀಹರಿಯ ಚರಿತ್ರೆಗಳು ತಮ್ಮನ್ನು ಧ್ಯಾನಿಸುವ ಉತ್ತಮರಿಗೆ ಅಧಮರ ಮೋಕ್ಷಸುಖಕ್ಕಿಂತ ಹೆಚ್ಚು ಸುಖ ಕೊಡುವವು

**ಇದಂ ಮಮಾಚಕ್ಷ್ವ ತವಾಧಿಮೂಲಂ**
**ವಸುಂಧರೇ ಯೇನ ವಿಕರ್ಶಿತಾಸಿ ।**

**ಕಾಲೇನ ವಾತೇ ಬಲಿನಾವಲೀಢಂ**
**ಸುರಾರ್ಚಿತಂ ಕಿಂ ಪ್ರಭುಣಾಽದ್ಯ ಸೌಭಗಮ್ ॥೨೫॥**

**ಹೇ ವಸುಂಧರೇ** ಭೂಮಿಯೇ **ತವ ಆಧಿಮೂಲಂ** ನಿನ್ನ ಮನೋವ್ಯಥೆಗೆ ಕಾರಣವು **ಇದಂ** ಇದು ಎಂದು **ಮಮ** ನನಗೆ **ಆಚಕ್ಷ್ವ** ಹೇಳು **ಯೇನ** ಯಾರಿಂದ **ವಿಕರ್ಶಿತಾಸಿ** ಅತ್ಯಂತ ಕೃಶಳಾಗಿರುವಿ **ಅದ್ಯ** ಈಗ **ಪ್ರಭುಣಾ** ಸಮರ್ಥನಾದ **ಬಲಿನಾ** ಬಲಿಷ್ಠನಾದ **ಕಾಲೇನ** ಕಾಲದಿಂದ **ಸುರಾರ್ಚಿತಂ** ದೇವತೆಗಳಿಂದ ಪೂಜಿತವಾದ **ತೇ** ನಿನ್ನ **ಸೌಭಗಂ** ಸೌಭಾಗ್ಯವು **ಅವಲೀಢಂ ಕಿಂ** ನುಂಗಲ್ಪಟ್ಟಿತೆ ಹೇಳು.

ಧರೋವಾಚ -

**ಭವಾನ್ ಹಿ ವೇದ ತತ್ಸರ್ವಂ ಯನ್ಮಾಂ ಧರ್ಮಾನುಪೃಚ್ಛಸಿ ।**
**ಚತುರ್ಭಿಃ ವರ್ತಸೇ ಯೇನ ಪಾದೈರ್ಲೋಕಸುಖಾವಹೈಃ ॥೨೬॥**

**ಹೇ ಧರ್ಮ** ಎಲೋ ಧರ್ಮನೇ ಮನೋವ್ಯಥೆಗೆ ಕಾರಣವೇನೆಂದು **ತ್ವಂ** ನೀನು **ಮಾಂ** ನನ್ನನ್ನು **ಅನುಪೃಚ್ಛಸಿ** ಕೇಳುವಿಯೋ **ತತ್ಸರ್ವಂ** ಅದೆಲ್ಲವನ್ನು **ಭವಾನ್ ವೇದ ಹಿ** ನೀನು ತಿಳಿದೇ ಇರುವಿ ಆದರೂ **ಯೇನ** ಯಾವ ಶ್ರೀಕೃಷ್ಣನಿಂದ **ತ್ವಂ** ನೀನು **ಲೋಕಸುಖಾವಹೈಃ** ಜನರಿಗೆ ಸುಖಕೊಡುವ ತಪಸ್ಸು, ಶೌಚ, ದಯಾ, ಸತ್ಯವೆಂಬ **ಚತುರ್ಭಿಃ** ನಾಲ್ಕು **ಪಾದೈಃ** ಅಂಶಗಳಿಂದ **ವರ್ತಸೇ** ಕಲಿಯುಗದಲ್ಲಿಯೂ ಇರುವಿ.

**ಸತ್ಯಂ ಶೌಚಂ ದಯಾ ದಾನಂ ತ್ಯಾಗಃ ಸಂತೋಷ ಆರ್ಜವಮ್ ।**
**ಶಮೋ ದಮಃ ತಪಃ ಸಾಮ್ಯಂ ತಿತಿಕ್ಷೋಪರತಿಃ ಶ್ರುತಮ್ ॥೨೭॥**

**ಜ್ಞಾನಂ ವಿರಕ್ತಿರೈಶ್ವರ್ಯಂ ಶೌರ್ಯಂ ತೇಜೋ ಧೃತಿಃ ಸ್ಮೃತಿಃ ।**
**ಸ್ವಾತಂತ್ರ್ಯಂ ಕೌಶಲಂ ಕಾಂತಿಃ ಸೌಭಗಂ ಮಾರ್ದವಂ ಕ್ಷಮಾ ॥೨೮॥**

**ಪ್ರಾಗಲ್ಭ್ಯಂ ಪ್ರಶ್ರಯಃ ಶೀಲಂ ಸಹ ಓಜೋ ಬಲಂ ಭಗಃ ।**
**ಗಾಂಭೀರ್ಯಂ ಸ್ಥೈರ್ಯಮಾಸ್ತಿಕ್ಯಂ ಕೀರ್ತಿರ್ಮಾನೋಽನಹಂಕೃತಿಃ ॥**

**ಇಮೇ ಚಾನ್ಯೇ ಚ ಭಗವನ್ನಿತ್ಯಾ ಯತ್ರ ಮಹಾಗುಣಾಃ ।**
**ಪ್ರಾರ್ಥ್ಯಾ ಮಹತ್ವಮಿಚ್ಛದ್ಭಿಃ ನ ಚ ಯಾಂತಿ ಸ್ಮ ಕರ್ಹಿಚಿತ್ ॥೩೦॥**

**ಸತ್ಯಂ** ನಿರ್ದುಃಖಾನಂದಾನುಭವವು **ಶೌಚಂ** ನಿತ್ಯ ಶುದ್ಧಿಯು (ಪ್ರಕೃತಿ ಸಂಬಂಧವಿಲ್ಲದ್ದರಿಂದ ನಿತ್ಯವಾದ ಬಾಹ್ಯ ಮತ್ತು ಆಂತರಶುದ್ಧಿಯು ಶ್ರೀಹರಿಯಲ್ಲಿ ಮಾತ್ರ ಇರುವದು)**ದಯಾ** ಸಜ್ಜನರಾದ ಆರ್ತರಾದ ಜನರಲ್ಲಿ ಮನಸ್ಸು ಕರಗುವದು **ದಾನಂ** ಭಕ್ತನಾಗದವನಿಗೆ ಸುಖ, ಅಭಕ್ತರಿಗೆ ದುಃಖ, ಮತ್ತು ಮಧ್ಯಮರಿಗೆ ಮಿಶ್ರಫಲ ಕೊಡುವದು **ತ್ಯಾಗಃ** ತನ್ನವನಲ್ಲದವನನ್ನು ತನ್ನವನು ಎಂದು ತಿಳಿಯುವ ಮಿಥ್ಯಾಭಿಮಾನ ಬಿಡುವದು **ಸಂತೋಷಃ** ಸ್ವರೂಪಾನಂದಾನುಭವದಿಂದ ಇತರ ವಿಷಯಗಳಲ್ಲಿ ಅಲಂಬುದ್ಧಿಯು, **ಆರ್ಜವಂ** ವ್ಯವಹಾರಗಳಲ್ಲಿ ವಕ್ರತೆ ಇಲ್ಲದಿರುವದು ಮನೋವಾಕ್ಕಾಯಗಳಲ್ಲಿ ಏಕರೂಪತೆ **ಶಮಃ** ಸ್ವತಃ ಪ್ರಿಯರೂಪನಾದ್ದರಿಂದ ಇದು ಪ್ರಿಯ ಇದು ಅಪ್ರಿಯ ಎಂಬ ವ್ಯತ್ಯಾಸವಿಲ್ಲದಿರುವುದು ಅಥವಾ 2.ಶಂರೂಪತಯಾ ಮಿಯತೇ ಇತಿ ಶಮಃ । ಸುಖರೂಪನೆಂದು ತಿಳಿಯಲ್ಪಡುವುದು. **ದಮಃ** ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರುವುದು (ಇದು ಭಗವಂತನಿಗೆ ಹಾಗು ಜೀವರಿಗೆ ಸಮಾನ. ಆದರೆ ಪರಮಾತ್ಮನಿಗೆ ಸ್ವತಃ. ಅವನ ಅನುಗ್ರಹದಿಂದ ಇತರರಿಗೆ ಎಂಬ ವೈಲಕ್ಷಣ್ಯವನ್ನು ತಿಳಿಯಬೇಕು) ಶತ್ರುನಿಗ್ರಹ ಎಂದೂ ಅರ್ಥ. **ತಪಃ** ಆಲೋಚನ ಮತ್ತು ಮುಕ್ತಿವಿಷಯಕ ಜ್ಞಾನವು ಸಾಮ್ಯಂ ಎಲ್ಲ ಅವತಾರ ಮತ್ತು ಅಂತರ್ಯಾಮಿರೂಪಗಳಲ್ಲಿ ದೋಷವಿಲ್ಲದೆ ಗುಣಪೂರ್ಣವಾಗಿದ್ದು ಸಮವಾಗಿರುವುದು. ಇದ್ದುದ್ದನ್ನು ಇದ್ದಂತೆಯೇ ತಿಳಿಯುವುದು **ಸಾಮ್ಯಂ** ಎಲ್ಲ ಅವತಾರಗಳು ಮತ್ತು ಅಂತರ್ಯಾಮಿ ರೂಪಗಳು ದೋಷರಹಿತ ಮತ್ತು ಗುಣಪೂರ್ಣವಾಗಿವೆ. ಆ ಎಲ್ಲ ರೂಪಗಳು ಸಮಾನವಾಗಿರುವದು 2.ಇದ್ದದ್ದನ್ನು ಇದ್ದಂತೆ ತಿಳಿಯುವುದು **ತಿತಿಕ್ಷಾ** ಮಹಾಪರಾಧಗಳನ್ನೂ ಸಹಿಸುವುದು. (ಭೃಗುಋಷಿಗಳು ಕಾಲಿನಿಂದ ಒದ್ದರೂ ಸಹಿಸಿದನು) **ಉಪರತಿಃ** ಸ್ವರೂಪದಲ್ಲಿ ಆಸಕ್ತಿಯು 2. (ಉಪರತಿ ಎನ್ನುವಲ್ಲಿ ಉ=ರುದ್ರ ಅವನಿಗೆ ಪತಿ ಮುಖ್ಯಪ್ರಾಣ ಎಂದರ್ಥ) ರುದ್ರನನ್ನು ಕಾಪಾಡುವ ಪ್ರಾಣದೇವರಲ್ಲಿ ಪ್ರೀತಿಯು 3.ಕೃತಕೃತ್ಯನಾದ್ದರಿಂದ ವ್ಯರ್ಥವಾದ ಎಲ್ಲ ವ್ಯವಹಾರದಲ್ಲಿಯೂ ಉಪರಮವು **ಶ್ರುತಂ** ಎಲ್ಲವನ್ನು ಶ್ರವಣ ಮಾಡುವ ಶಕ್ತಿಯು, 2.ಶ್ರುತಿಗಳಲ್ಲಿ ಪ್ರಸಿದ್ಧವಾಗಿರುವುದು **ಜ್ಞಾನಂ** ಸರ್ವಜ್ಞತೆಯು **ವಿರಕ್ತಿಃ** ತನ್ನನ್ನು ಬಿಟ್ಟು ಮಿಕ್ಕ ವಿಷಯಗಳು ಆಸಾರವೆಂಬ ಬುದ್ಧಿಯು **ಐಶ್ವರ್ಯಂ** ಎಲ್ಲ ಜಗತ್ತನ್ನೂ ನಿಯಮನ ಮಾಡುವ ಸಾಮರ್ಥ್ಯವು **ಶೌರ್ಯಂ** ಯುದ್ಧದಲ್ಲಿ ಪಲಾಯನ ಮಾಡದಿರುವದು **ತೇಜಃ** ಬೇರೆಯವರಿಂದ ಅಪ್ರಧೃಷ್ಯತೆ **ಧೃತಿಃ**

'ಏಷ ಸೇತುರ್ವಿಧೃತಿಃ' ಎಂದೂ ಶ್ರುತಿಯಿದೆ ಎಲ್ಲವನ್ನು ಧಾರಣ ಮಾಡುವದು. ವಿಕಾರಕ್ಕೆ ಕಾರಣವಿದ್ದರೂ ವಿಕಾರವಾಗದಿರುವದು. **ಸ್ಮೃತಿಃ** ಕಳೆದು ಹೋದ ಮುಂದೆ ಬರುವ ಅನಂತ ಬ್ರಹ್ಮಾಂಡಗಳ ಸ್ಮರಣೆಯು(ಅತೀತಾನಗತ ಅನಂತ ಬ್ರಹ್ಮಾಂಡಗಳ ಜ್ಞಾನ) **ಸ್ವಾತಂತ್ರ್ಯಂ** ಅಪರಾಧೀನತೆ **ಕೌಶಲಂ** ಎಲ್ಲ ಕೆಲಸಗಳಲ್ಲಿ ವೈಚಿತ್ರವನ್ನುಂಟು ಮಾಡುವ ಬುದ್ಧಿಯು **ಕಾಂತಿಃ** ದೇಹದಲ್ಲಿರುವ ಪ್ರಕಾಶವು, **ಸೌಭಗಂ** ಶುಭವನ್ನು ಮಾತ್ರ ಹೊಂದುವಿಕೆ **ಮಾರ್ದವಂ** ಭಕ್ತರಲ್ಲಿ ಮೃದುತ್ವವು(ಉಭಯತ್ರ ಸಮಾನ) **ಕ್ಷಮಾ** ಸಿಟ್ಟು ಬಾರದಿರುವದು **ಪ್ರಾಗಲ್ಭ್ಯಂ** ಧಾರ್ಷ್ಟ್ಯ **ಪ್ರಶ್ರಯಃ** ವಿನಯ **ಶೀಲಂ** ಲೋಕ ಮನೋಹರವಾದ ಸ್ವಭಾವವು **ಸಹಃ** ಸಹನಶಕ್ತಿಯು, ಪ್ರಾಣದ ಸ್ವಾಭಾವಿಕ ಸಾಮರ್ಥ್ಯವು **ಓಜಃ** ಮತ್ತೊಬ್ಬರನ್ನು ಪರಾಭವಗೊಳಿಸುವ ಶಕ್ತಿ(ಸೋಲಿಸುವ ಶಕ್ತಿ) **ಬಲಂ** ತನ್ನ ಇಚ್ಛೆಯಂತೆ ಮಾಡುವ ಶಕ್ತಿಯು **ಭಗಃ** ಷಡ್ಗುಣವಿರುವ ಭಾಗ್ಯವು **ಗಾಂಭೀರ್ಯಂ** ಪರರಿಗೆ ಅರಿಯಲಾಗದ ವ್ಯಕ್ತಿತ್ವ **ಸ್ಥೈರ್ಯಂ** ನಿತ್ಯ ಅಕಂಪನವು **ಆಸ್ತಿಕ್ಯಂ** ವೇದಾದಿಗಳಲ್ಲಿ ಹೇಳಿದ್ದು ಇದೇ ಎಂದು ತಿಳಿಯುವದು, **ಕೀರ್ತಿಃ** ದಿಕ್ಕುಗಳಲ್ಲಿ ಖ್ಯಾತಿಯು **ಮಾನಃ** ನಾರದ ಮೊದಲಾದ ಭಕ್ತರ ವಿಷಯದಲ್ಲಿ ತೋರುವ ಮರ್ಯಾದೆಯು **ಅನಹಂಕೃತಿಃ** ಅಹಂ ಎಂದು ಬುದ್ಧಿ ಇಲ್ಲದಿರುವದು. **ಯತ್ರ** ಯಾವ ಶ್ರೀಕೃಷ್ಣನಲ್ಲಿ **ಇಮೇ** ಮೇಲೆ ಹೇಳಿದ ಸತ್ಯ ಮುಂತಾದ ಗುಣಗಳು **ಅನ್ಯೇ ಚ** ಹೇಳದಿರುವ ಬೇರೆ **ಮಹತ್ವಂ** ಪ್ರತಿಬಿಂಬರಾದ ತಮ್ಮಲ್ಲಿ ಆ ವಿಧ ಗುಣಗಳು ಬರುವದಕ್ಕಾಗಿ **ಇಚ್ಛದ್ಭಿಃ** ಇಚ್ಛಿಸುವ **ಪುರುಷೈಃ** ಚೇತನರಿಂದ **ಪ್ರಾರ್ಥ್ಯಾಃ** ಉಪಾಸಿಸಲು ಯೋಗ್ಯವಾದ **ಮಹಾಗುಣಾಃ** ಪ್ರತ್ಯೇಕವಾದ ಅನಂತವಾದ ಗುಣಗಳು ಇರುವವು **ಕರ್ಹಿಚಿತ್** ಎಂದೂ **ನ ಚ ಯಾಂತಿ** ಯಾವನನ್ನು ಬಿಟ್ಟು ಹೋಗುವದಿಲ್ಲವೋ ಆ ಗುಣಗಳು **ನಿತ್ಯಾಃ** ನಿತ್ಯವಾಗಿವೆ **ಸ್ಮ** ಹೀಗೆ ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ.

**ವಿಶೇಷ :-** ಈ ಮೇಲೆ ಹೇಳಿದ ಗುಣಗಳಿಂದ ಶ್ರೀಹರಿಯನ್ನು ಉಪಾಸನೆ ಮಾಡುವದರಿಂದ ಪ್ರತಿಬಿಂಬರಾದ ಜೀವರಲ್ಲಿ -

**ಸತ್ಯಂ** ಪ್ರಾಣಿಗಳಿಗೆ ಹಿತವನ್ನುಂಟು ಮಾಡುವ ಯಥಾರ್ಥಮಾತನಾಡುವಿಕೆ **ಶೌಚಂ** ಮಣ್ಣು ನೀರುಗಳಿಂದ ಮತ್ತು ರಾಗವಿಲ್ಲದಿರುವುದರಿಂದ ಉಂಟಾಗುವ ಶುಚಿತ್ವವು **ದಯಾ** ಸಜ್ಜನರಾದ ಆರ್ತರಾದ ಜನರಲ್ಲಿ ಮನಸ್ಸು ಕರಗುವದು **ದಾನಂ** ಧರ್ಮಬುದ್ಧಿಯಿಂದ ಯೋಗ್ಯರಾದವರಿಗೆ ಹಣದಾನಮಾಡುವುದು **ತ್ಯಾಗಃ** ಸನ್ಯಾಸವು **ಸಂತೋಷಃ** ಹರೀಚ್ಛೆಯಿಂದ ಒದಗಿಬಂದ ಭೋಗದಲ್ಲಿ ತೃಪ್ತಿಯು **ಆರ್ಜವಂ**

ವ್ಯವಹಾರಗಳಲ್ಲಿ ವಕ್ರತೆ ಇಲ್ಲದಿರುವದು ಮನೋವಾಕ್ಕಾಯಗಳಲ್ಲಿ ಏಕರೂಪತೆ **ಶಮಃ** ಸ್ವತಃ ಪ್ರಿಯರೂಪನಾದ್ದರಿಂದ ಇದು ಪ್ರಿಯ ಇದು ಅಪ್ರಿಯ ಎಂಬ ವ್ಯತ್ಯಾಸವಿಲ್ಲದಿರುವುದು ಅಥವಾ 2.ಶಂರೂಪತಯಾ ಮಿಯತೇ ಇತಿ ಶಮಃ ।. ಸುಖರೂಪನೆಂದು ತಿಳಿಯಲ್ಪಡುವುದು. **ದಮಃ** ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರುವುದು (ಶ್ರೀಹರಿಯ ಅನುಗ್ರಹದಿಂದ)ಶತ್ರುನಿಗ್ರಹ ಎಂದೂ ಅರ್ಥ. **ತಪಃ** ಕೃಚ್ಛಚಾಂದ್ರಾಯಣ ಮೊದಲಾದ ಉಪವಾಸ ನಿಯಮವು **ಸಾಮ್ಯಂ** ಇದ್ದದ್ದನ್ನು ಇದ್ದಂತೆ ತಿಳಿಯುವುದು **ತಿತಿಕ್ಷಾ** ಸುಖದುಃಖಾದಿದ್ವಂದ್ವಗಳನ್ನು ಸಹಿಸುವಿಕೆಯೂ **ಉಪರತಿಃ** ಕಾಮ್ಯಕರ್ಮದಿಂದ ನಿವೃತ್ತಿಯು **ಶ್ರುತಂ** ಶಾಸ್ತ್ರಾರ್ಥತಾತ್ಪರ್ಯಗ್ರಹಣವು **ಜ್ಞಾನಂ** ಪರೋಕ್ಷ ಮತ್ತು ಅಪರೋಕ್ಷ ಜ್ಞಾನವು **ವಿರಕ್ತಿಃ** ಶಬ್ದಾದಿವಿಷಯಗಳಲ್ಲಿ ರಾಗವಿಲ್ಲದಿರುವುದು **ಐಶ್ವರ್ಯಂ** ಅಣಿಮಾದಿ ಅಷ್ಟೈಶ್ವರ್ಯ ಸಿದ್ಧಿಯು **ಶೌರ್ಯಂ** ಯುದ್ಧದಲ್ಲಿ ಪಲಾಯನ ಮಾಡದಿರುವದು **ತೇಜಃ** ಬ್ರಹ್ಮವರ್ಚಸ್ಸು **ಧೃತಿಃ** ನಾಲಿಗೆ ಮತ್ತು ಗುಹ್ಯೇಂದ್ರಿಯ ಜಯವು **ಸ್ಮೃತಿಃ** ತಿಳಿದುದನ್ನು ಸ್ಮರಿಸುವಿಕೆಯು **ಸ್ವಾತಂತ್ರ್ಯಂ** ಸ್ವತಂತ್ರನಾದ ಶ್ರೀಹರಿಯ ಅಧೀನನೆಂಬ ಭಾವನೆಯು **ಕೌಶಲಂ** ಶಿಲ್ಪವಿದ್ಯೆ ಮೊದಲಾದುದರಲ್ಲಿ ನಿಪುಣತೆಯು **ಕಾಂತಿಃ** ಭಗವಂತನಲ್ಲಿ ಭಕ್ತಿಯ ಅಪೇಕ್ಷೆಯು **ಸೌಭಗಂ** ಲೋಕದ ಮನಸ್ಸನ್ನು ಹರಣಮಾಡುವ ಶಕ್ತಿಯು **ಮಾರ್ದವಂ** ಭಕ್ತರಲ್ಲಿ ಮೃದುತ್ವವು **ಕ್ಷಮಾ** ಸಿಟ್ಟು ಬಾರದಿರುವದು **ಪ್ರಾಗಲ್ಭ್ಯಂ** ಧಾರ್ಷ್ಟ್ಯ **ಪ್ರಶ್ರಯಃ** ವಿನಯವು **ಶೀಲಂ** ಲೋಕ ಮನೋಹರವಾದ ಸ್ವಭಾವವು **ಸಹಃ** ಸಹನಶಕ್ತಿಯು **ಓಜಃ** ಮನೋಬಲವು **ಬಲಂ** ಶರೀರ ಮೊದಲಾದುದನ್ನು ಧರಿಸುವ ಶಕ್ತಿಯು **ಭಗಃ** ಉತ್ಪತ್ತಿಮೊದಲಾದವುಗಳನ್ನು ತಿಳಿಯುವುದು **ಗಾಂಭೀರ್ಯಂ** ಸ್ತಿಮಿತವಾಗಿರುವುದು **ಸ್ಥೈರ್ಯಂ** ಧರ್ಮವನ್ನು ಬಿಡದಿರುವುದು **ಆಸ್ತಿಕ್ಯಂ** ಗುರುಗಳ ವಾಕ್ಯದಲ್ಲಿ ಶ್ರದ್ಧೆಯು **ಕೀರ್ತಿಃ** ಹರಿನಾಮಕೀರ್ತನೆಯು **ಮಾನಃ** ಅಭಿಮಾನವು **ಅನಹಂಕೃತಿಃ** ನಾನು ಸ್ವತಂತ್ರಕರ್ತನಲ್ಲ ಶ್ರೀಹರಿಯು ನನ್ನಲ್ಲಿ ನಿಂತು ಎಲ್ಲವನ್ನೂ ಮಾಡುತ್ತಿರುವನೆಂಬ ಬುದ್ಧಿಯು ಈ ಗುಣಗಳು ಅವರವರ ಯೋಗ್ಯತಾನುಸಾರ ಪ್ರಕಾಶಕ್ಕೆ ಬರುವವು.

**ತೇನಾಹಂ ಗುಣಪಾತ್ರೇಣ ಶ್ರೀನಿವಾಸೇನ ಸಾಂಪ್ರತಮ್ ।**
**ಶೋಚಾಮಿ ರಹಿತಂ ಲೋಕಂ ಪಾಪ್ಮನಾ ಕಲಿನೇಕ್ಷಿತಮ್ ॥೩೦॥**

**ಆತ್ಮಾನಂ ಚಾನುಶೋಚಾಮಿ ಭವಂತಂ ಚಾಮರೋತ್ತಮ ।**
**ದೇವಾನ್ನೃಷೀನ್ ಪಿತೃನ್ ಋಷೀನ್ ಸಾಧೂನ್**
**ಸರ್ವಾನ್ ವರ್ಣಾಂಸ್ತಥಾಶ್ರಮಾನ್ ॥೩೨॥**

**ಹೇ ಅಮರೋತ್ತಮ** ದೇವೋತ್ತಮನೇ **ತೇನ** ಆ **ಗುಣಪಾತ್ರೇಣ** ಗುಣಾಶ್ರಯನಾದ **ಶ್ರೀನಿವಾಸೇನ** ಕೃಷ್ಣನಿಂದ **ಸಾಂಪ್ರತಂ** ಈಗ **ರಹಿತಂ** ಇಲ್ಲದಿರುವ **ಪಾಪ್ಮನಾ ಕಲಿನಾ ಈಕ್ಷಿತಂ** ಪಾಪಿಯಾದ ಕಲಿಯಿಂದ ದೃಷ್ಟವಾದ **ಲೋಕಂ** ಜಗತ್ತನ್ನು **ಆತ್ಮಾನಂ** ನನ್ನನ್ನು **ಭವಂತಂ ಚ** ನಿಮ್ಮನ್ನು **ದೇವಾನ್** ದೇವತೆಗಳನ್ನು **ಋಷೀನ್** ಋಷಿಗಳನ್ನು **ಪಿತೃನ್** ಪಿತೃಗಳನ್ನು **ಸರ್ವಾನ್** ಎಲ್ಲ **ವರ್ಣಾನ್** ಜಾತಿಗಳನ್ನು **ಆಶ್ರಮಾನ್** ಆಶ್ರಮಗಳನ್ನೂ **ಶೋಚಾಮಿ** ಚಿಂತಿಸುವೆನು ಎಲ್ಲರಿಗಾಗಿ ದುಃಖಿಸುವೆನು ಎಂದು ಭಾವ.

*ಭಾಗವತತಾತ್ಪರ್ಯ-*

2ನೇ ಶ್ಲೋಕದಲ್ಲಿ ತ್ಯಾಗ ಶಬ್ದಕ್ಕೆ ವಿಷಯತ್ಯಾಗ ಎಂದರ್ಥ ಮಾಡಿದರೆ ಮುಂದಿನ ಶ್ಲೋಕದಲ್ಲಿಯ ವಿರಕ್ತಿ ಪದದಿಂದ ಹೇಳಿದ್ದನ್ನೇ ಹೇಳಿದಂತೆ ಆಗುವದು. ಅಂದರೆ ಪುನರುಕ್ತಿ ಎಂಬ ದೋಷಬರುವದು. ಆದ ಕಾರಣ ಇಲ್ಲಿ ವಿವಕ್ಷಿತಾರ್ಥವನ್ನು ಹೇಳುವರು.

**ತ್ಯಾಗೋ ಮಿಥ್ಯಾಭಿಮಾನವರ್ಜನಮ್ ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು

**ಮಿಥ್ಯಾಭಿಮಾನ ವಿರತಿಸ್ತ್ಯಾಗ ಇತ್ಯಭಿಧೀಯತೇ ॥**

**-ಇತಿ ನಾರಾಯಣಾಧ್ಯಾತ್ಮೇ**

ತನ್ನದಲ್ಲದ್ದನ್ನು ತನ್ನದೆಂದು ತಿಳಿಯುವದೆಂಬ ಭ್ರಾಂತಿಯನ್ನು ಪರಿತ್ಯಾಗ ಮಾಡುವದೇ ತ್ಯಾಗ. ಅಸ್ವಕೀಯದಲ್ಲಿ ಸ್ವಕೀಯತ್ವ ಭ್ರಾಂತಿಯನ್ನು ಬಿಡುವದು ತ್ಯಾಗವೆನಿಸುತ್ತದೆ. ಅಂದರೆ ತನ್ನದಲ್ಲದ್ದನ್ನು ತನ್ನದು ಎಂದು ತಿಳಿದಿದ್ದೇನೆ ಇದು ನನಗೆ ಬಂದದ್ದು ಭ್ರಮ ಎಂದು ತಿಳಿಯುವದು ಎಂದು ನಾರಾಯಣಾಧ್ಯಾತ್ಮದಲ್ಲಿದೆ.

ಭಗ ಶಬ್ದಕ್ಕೆ ಪೌನರುಕ್ತ್ಯ ಬರದಂತೆ ಸೌಭಗ ಶಬ್ದಾರ್ಥ ತಿಳಿಸುವರು.

**ಏಕಾಂತತಃ ಶುಭಭಾಗಿತ್ವಂ ಸೌಭಾಗ್ಯಮ್ ।**

ಪ್ರಮಾಣ ಹೇಳುವರು.

**ಶುಭೈಕಭಾಗೀ ಸುಭಗೋ ದುರ್ಭಗಸ್ತದ್ವಿಪರ್ಯಯಃ ॥ -ಇತಿ ಗೀತಾಕಲ್ಪೇ**

ನಿಯಮದಿಂದ ಶುಭವನ್ನೇ ಹೊಂದುವುದು ಸೌಭಾಗ್ಯವು. ಶುಭವನ್ನು ಮಾತ್ರ ಹೊಂದುವವನು ಸುಭಗನು ಆದಕ್ಕಿಂತ ವ್ಯತ್ಯಾಸವಾಗಿರುವವನು ದುರ್ಭಗನು ಅಂದರೆ ಭಾಗ್ಯರಹಿತನು ಎಂದರ್ಥ. ಎಂದು ಗೀತಾಕಲ್ಪದಲ್ಲಿ ಹೇಳಿದೆ.

'ಸುಭಗಸ್ಯ ಇದಂ ಸೌಭಗಂ' ಎಂದು ಪ್ರಸಿದ್ಧವಿದೆ. ಭಗ ಎಂದರೆ ಐಶ್ವರ್ಯಾದಿ ಷಡ್ಗುಣಗಳು ಕಾರಣ ಪೌನರುಕ್ತ್ಯವಿಲ್ಲವೆಂದು ಭಾವ. ಅನಂತರದಲ್ಲಿರುವ ಸೌಭಗ ಶಬ್ದವನ್ನು ಶಮಾದಿ ಶಬ್ದಗಳಿಗಿಂತ ಮೊದಲಿಗೆ ವ್ಯಾಖ್ಯಾನಿಸಿದ್ದು ಶಮಾದಿಶಬ್ದಗಳು ಸೌಭಗ ಶಬ್ದಾಂತರ್ಗತ ಶುಭಧರ್ಮಪ್ರದರ್ಶಕಗಳಾದುದರಿಂದ ಸೌಭಗ ಶಬ್ದರೂಪವೆಂದು ತಿಳಿಸಲು ಎಂದು ತಿಳಿಯಬೇಕು. ಶಮಃ ಕ್ಷಮಾ ತಿತಿಕ್ಷಾ ಶಬ್ದಗಳಿಗೆ ಪೌನರುಕ್ತ್ಯ ಶಂಕಾಪರಿಹಾರಕ್ಕೆ ಪ್ರಮಾಣದಿಂದ ಬೇರೆ ಬೇರೆ ಅರ್ಥ ತಿಳಿಸುವರು.

**ಶಮಃಪ್ರಿಯಾದಿಬುದ್ಧ್ಯುಜ್ಝಾ ಕ್ಷಮಾ ಕ್ರೋಧಾದ್ಯನುತ್ಥಿತಿಃ ।**
**ಮಹಾವಿರೋಧಕರ್ತುಶ್ಚ ಸಹನಂ ತು ತಿತಿಕ್ಷಣಂ ॥ -ಇತಿ ಪಾದ್ಮೇ**

**ಸ್ವಯಂ ಸರ್ವಸ್ಯ ಕರ್ತೃತ್ವಾತ್ ಕುತಸ್ತಸ್ಯ ಪ್ರಿಯಾಪ್ರಿಯೇ ॥ -ಇತಿ ಚ**

**ಪ್ರಿಯಮೇವ ಯತಃ ಸರ್ವಮಪ್ರಿಯಂ ನಾಸ್ತಿ ಕುತ್ರಚಿತ್ ।**
**ಸ್ವಯಮೇವ ಯತಃ ಕರ್ತಾ ಶಾಂತೋಽತೋ ಹರಿರೀಶ್ವರಃ ॥**
**-ಇತಿ ಬ್ರಹ್ಮತರ್ಕೇ**

**ಮಾನಃ ಪರೇಷಾಮ್ ॥**

ಪ್ರಿಯ ಅಪ್ರಿಯ ಬುದ್ಧಿರಾಹಿತ್ಯವು ಶಮವು. ಕ್ಷಮಾ ಎಂದರೆ ದ್ವೇಷಗಳನ್ನು ಕಂಡರೂ ಕ್ರೋಧ ಹುಟ್ಟದಿರುವುದು ಮತ್ತು ವಧಾದಿಗಳನ್ನು ಮಾಡದರುವದು. ಮಹಾವಿರೋಧ ಮಾಡಿದವನ ವಿಷಯದಲ್ಲಿಯೂ ಪ್ರತಿಯಾಗಿ ಅಪಕಾರ ಮಾಡದಿರುವುದು ತಿತಿಕ್ಷೆಯು ಎಂದು ಪಾದ್ಮಪುರಾಣದಲ್ಲಿದೆ. ಶ್ರೀಹರಿಯು ತಾನೇ ಸರ್ವಕರ್ತೃನಾದುದರಿಂದ ಆತನಿಗೆ ಪ್ರಿಯಾಪ್ರಿಯಗಳಿಲ್ಲ. ಪ್ರಮಾಣ ಶ್ರೀಹರಿಗೆ ಸರ್ವವೂ ಪ್ರಿಯವೇ ಆಗಿದೆ. ಅಪ್ರಿಯವು ಸರ್ವಥಾ ಇಲ್ಲ. ತಾನೇ ಸರ್ವರನ್ನೂ ಸೃಷ್ಟಿಸಿದವನಾದುದರಿಂದ ಸರ್ವೇಶ್ವರನಾದ ಶ್ರೀಹರಿಯು ಶಾಂತನು ಎಂದು ಬ್ರಹ್ಮತರ್ಕದಲ್ಲಿದೆ. ಇತರರಾದ ನಾರದಾದಿಗಳಿಗೆ ಮಾಡತಕ್ಕ ಸನ್ಮಾನವು ಮಾನ

ಎನಿಸುತ್ತದೆ. ಶಮಶಬ್ದ ಪರ್ಯಾಯ ಶಾಂತ ಶಬ್ದವು. ಅಪ್ರಿಯವಿಲ್ಲದ್ದರಿಂದ ಉಭಯಾಭಾವ ಹೇಳಿದೆ. ಹೊರತು ಎರಡೂ ಇಲ್ಲದ್ದರಿಂದಲ್ಲವೆಂದು ಭಾವ. ಅಪ್ರಿಯಬುದ್ಧಿ ಇಲ್ಲವೆಂದು ಭಾವ.

ಮಹತ್ವವಿಚ್ಛದ್ಭಿಃ ಎಂಬಲ್ಲಿ ಮಹತ್ವವು ಭಗವದ್ಗುಣಪ್ರತಿಬಿಂಬ ಗುಣತ್ವವನ್ನು ಇಚ್ಛಿಸುವ ಎಂದು ಹೇಳಿದ್ದರಿಂದ ಮುಕ್ತರಿಗೂ ಗುಣಭೇದ ತೋರುವುದು. ಅದರ ಅಭಿಪ್ರಾಯ ಹೇಳುವರು.

**ಗುಣ್ಯೈಃ ಸ್ವರೂಪಭೂತೈಸ್ತು ಗುಣ್ಯಸೌ ಹರಿರೀಶ್ವರಃ ।**
**ನ ವಿಷ್ಣೋರ್ನ ಚ ಮುಕ್ತಾನಾಂ ಕೋಽಪಿ ಭಿನ್ನೋ ಗುಣೋ ಮತಃ ॥**

**-ಇತಿ ಬ್ರಹ್ಮತರ್ಕೇ॥**

ಸರ್ವನಿಯಾಮಕನಾದ ಶ್ರೀಹರಿಯು ತನ್ನ ಸ್ವರೂಪಭೂತಗುಣಗಳಿಂದ ಗುಣಿ ಎನಿಸುತ್ತಾನೋ ಹಾಗೆಯೇ ಮುಕ್ತರೂ ಕೂಡ ಸ್ವರೂಪಗುಣಗಳಿಂದ ಗುಣವುಳ್ಳವರು. ಶ್ರೀವಿಷ್ಣುವಿಗೂ ಮುಕ್ತರಿಗೂ ತಮ್ಮಿಂದ ಭಿನ್ನವಾದ ಗುಣವು ಯಾವವು ಇಲ್ಲವೆಂದು ಬ್ರಹ್ಮತರ್ಕದಲ್ಲಿದೆ.

**ಶ್ರೀಕೃಷ್ಣನ ಮಹಿಮೆ**

ಶ್ರೀಕೃಷ್ಣ ವಿರಹವು ಸಹಿಸಲಾಗದು ಎಂದು ತಿಳಿಸಲು ಅವನ ಮಹಿಮೆಯನ್ನು ಹೇಳುವರು ಮೂರು ಶ್ಲೋಕಗಳಿಂದ

**ಬ್ರಹ್ಮಾದಯೋ ಯೋ ಬಹುತಿಥಂ ಯದಪಾಂಗಮೋಕ್ಷ-**
**ಕಾಮಾ ಯಥೋಕ್ತವಿಧಿನಾ ಭಗವತ್ಪ್ರಪನ್ನಾಃ ।**
**ಸಾ ಶ್ರೀಃ ಸ್ವವಾಸಮರವಿಂದವನೇ ವಿಹಾಯ**
**ಯತ್ಪಾದಸೌಭಗಮಲಂ ಭಜತೇಽನುರಕ್ತಾಃ ॥೩೩॥**

**ಬ್ರಹ್ಮಾದಯಃ** ಬ್ರಹ್ಮಾದಿದೇವತೆಗಳು **ಯದಪಾಂಗಮೋಕ್ಷಕಾಮಾಃ** ಯಾವ ಲಕ್ಷ್ಮೀದೇವಿಯ ಕಡೆಗಣ್ಣು ನೋಟವನ್ನು ಇಚ್ಛಿಸುವವರಾಗಿ **ಬಹುತಿಥಂ** ಬಹಳ ಕಾಲದವರೆಗೆ **ಯಥೋಕ್ತವಿಧಿನಾ** ನಮ್ಮಲ್ಲಿ ಜೀವೋತ್ತಮಳು ಲಕ್ಷ್ಮೀದೇವಿ, ಅವಳಿಗಿಂತ ಉತ್ತಮನು ಭಗವಂತನು ಎಂದು ಶಾಸ್ತ್ರೋಕ್ತ ಅನುಸಂಧಾನದಿಂದ **ಭಗವತ್ಪ್ರಪನ್ನಾಃ** ಲಕ್ಷ್ಮೀದೇವಿಯ ಕಟಾಕ್ಷವನ್ನು ಇಚ್ಛಿಸಿ ಅವಳ ಪತಿಯೆಂದು ಶ್ರೀಹರಿಯನ್ನು ಭಜಿಸಿದರು ಎಂದರ್ಥ. (ವಿಜಯಧ್ವಜರ ಪ್ರಕಾರ - ಲಕ್ಷ್ಮೀದೇವಿಯನ್ನು ಸೇವಿಸುವರೋ) ಸಾ

**ಶ್ರೀಃ** ಆ ಲಕ್ಷ್ಮೀದೇವಿಯು **ಸ್ವವಾಸಂ** ತನ್ನ ವಾಸಸ್ಥಳವಾದ **ಅರವಿಂದವನೇ** ಕಮಲವನವನ್ನು **ವಿಹಾಯ** ಬಿಟ್ಟು **ಅನುರಕ್ತಾ** ಮಾಹಾತ್ಮ್ಯಜ್ಞಾನವನ್ನು ಸ್ಮರಿಸಿ ಭಕ್ತಿಯುಳ್ಳವಳಾಗಿ **ಯತ್ಪಾದಸೌಭಗಂ** ಯಾವ ಶ್ರೀಕೃಷ್ಣನ ಪಾದದಲ್ಲಿರುವ ಲಾವಣ್ಯವನ್ನು **ಅಲಂ ಭಜತೇ** ಶ್ರದ್ಧೆಯಿಂದ ಸೇವೆಮಾಡಿದಳು.

**ತಸ್ಯಾಹಮಬ್ಜಕುಲಿಶಾಂಕುಶಕೇತುಕೇತ್ಯೈಃ**
**ಶ್ರೀಮತ್ಪದೈರ್ಭಗವತಃ ಸಮಲಂಕೃತಾಂಗೀ ।**
**ತ್ರೀನತ್ಯರೋಚಮುಪಲಬ್ಧತಪೋವಿಭೂತಿ-**
**ರ್ಲೋಕಾನ್ ಸ ಮಾಂ ವ್ಯಸೃಜದುತ್ಸ್ಮಯತೀಂ ತದಂತೇ ॥೩೪॥**

**ತತಃ ಭಗವತಃ** ಆ ಕೃಷ್ಣನ **ಅಬ್ಜಕುಲಿಶಾಂಕುಶಕೇತುಕೇತ್ಯೈಃ** ಕಮಲ, ವಜ್ರ, ಅಂಕುಶ, ಧ್ವಜಗಳೆಂಬ ಚಿನ್ಹೆಗಳಿಂದ ಕೂಡಿದ **ಶ್ರೀಮತ್ಪದೈಃ** ಕಾಂತಿಯುತವಾದ ಪಾದಗಳಿಂದ **ಸಮಲಂಕೃತಾಂಗೀ** ಚೆನ್ನಾಗಿ ಅಲಂಕರಿಸಲ್ಪಟ್ಟ ದೇಹವುಳ್ಳ **ಅಹಂ** ನಾನು **ಉಪಲಬ್ಧತಪೋವಿಭೂತಿಃ** ತಪಸ್ಸಿನ ಫಲರೂಪವಾದ ಐಶ್ವರ್ಯವನ್ನು ಪಡೆದವಳಾಗಿ **ತ್ರೀನ್ ಲೋಕಾನ್** ಮೂರು ಲೋಕಗಳನ್ನು **ಅತ್ಯರೋಚಂ** ಮೀರಿದ ಶೋಭೆವುಳ್ಳವಳಾಗಿದ್ದೇನೆ **ಸಃ** ಶ್ರೀಕೃಷ್ಣನು **ತದಂತೇ** ತಪಸ್ಸಿನ ಫಲವಾದ ವಿಭೂತಿ ಮುಗಿದ ಮೇಲೆ **ಉತ್ಸ್ಮಯತೀಂ** ನನ್ನ ಸಮಾನಳಾರು ಎಂದು ಗರ್ವಪಡುವ **ಮಾಂ** ನನ್ನನ್ನು **ವ್ಯಸೃಜತ್** ಪರಿತ್ಯಾಗಮಾಡಿದನು.

**ಯೋ ವೈ ಮಮಾತಿಭರಮಾಸುರವಂಶರಾಜ್ಞಾ-**
**ಮಕ್ಷೌಹಿಣೀ ಶತಮಪಾನುದದಾತ್ಮತಂತ್ರಃ ।**
**ತ್ವಾಂ ದುಸ್ಥಮೂನಪದಮಾತ್ಮನಿ ಪೌರುಷೇಣ**
**ಸಂಪಾದಯನ್ಯದುಷು ರಮ್ಯಮಬಿಭ್ರದಂಗಮ್ ॥೩೫॥**

**ಯಃ** ಯಾವ **ಆತ್ಮತಂತ್ರಃ** ಸ್ವತಂತ್ರನಾದ ಶ್ರೀಕೃಷ್ಣನು **ಮಮ** ನನಗೆ **ಅತಿಭಾರಂ** ಅತ್ಯಂತಭಾರವಾದ ಆ **ಸುರವಂಶರಾಜ್ಞಾಂ** ರಾಜವಂಶದಲ್ಲಿ ಜನಿಸಿದ ಅಸುರರ **ಅಕ್ಷೋಹಿಣೀಶತಂ** ಸಾವಿರಾರು ಅಕ್ಷೌಹಿಣಿಗಳನ್ನು **ಅಪಾನುದತ್** ಪರಿಹರಿಸಿದನು **ತ್ವಾಂ ಚ** ನಿನ್ನನ್ನು **ಊನಪಾದಂ** ಕಾಲಬಲದಿಂದ ಮೂರುಪಾದಗಳನ್ನು ಕಳೆದುಕೊಂಡದ್ದರಿಂದ **ದುಃಸ್ಥಂ** ದುಃಖದಲ್ಲಿರುವವನನ್ನು **ಪೌರುಷೇಣ** ಪರಾಕ್ರಮದಿಂದ **ಆತ್ಮನಿ** ಸ್ವಸ್ವರೂಪದಲ್ಲಿ **ಸ್ಥಿತಂ ಸಂಪಾದಯನ್** ಸಂಪೂರ್ಣನಾಲ್ಕು ಪಾದಗಳಿಂದ ಇರುವಂತೆ ಮಾಡಲು

**ಯದುಷು** ಯಾದವರಲ್ಲಿ ರಮ್ಯಂ **ಅಂಗಂ ಅಭಿಭ್ರತ್** ಸುಂದರವಾದ ದೇಹವನ್ನು ವ್ಯಕ್ತಮಾಡಿದನು.

**ಕಾ ವಾ ಸಹೇತ ವಿರಹಂ ಪುರುಷೋತ್ತಮಸ್ಯ**
**ಪ್ರೇಮಾವಲೋಕರುಚಿರಸ್ಮಿತವಲ್ಗುಜಲ್ಪೈಃ ।**
**ಸ್ಥೈರ್ಯಂ ಸಮಾನಮಹರನ್ಮಧುಮಾನಿನೀನಾಂ**
**ರೋಮೋತ್ಸವೋ ಮಮ ಪದಂಘ್ರಿವಿಟಂಕಿತಾಯಾಃ ॥೩೬॥**

**ಯಃ** ಯಾವನು **ಪ್ರೇಮಾವಲೋಕರುಚಿರಸ್ಮಿತವಲ್ಗುಜಲ್ಪೈಃ ಪ್ರೇಮಾವಲೋಕ** ಪ್ರೀತಿ ಪೂರ್ವಕ ನೋಟ **ರುಚಿರಸ್ಮಿತ** ಮನೋಹರ ಮಂದಹಾಸ **ವಲ್ಗುಜಲ್ಪೈಃ** ಮಧುರ ಮಾತುಗಳಿಂದ **ಮಧುಮಾನಿನೀನಾಂ** ಮದ್ಯಪಾನ ಮಾಡಿದ ಸ್ತ್ರೀಯರ ಅಥವಾ ಮಧುಕುಲದಲ್ಲಿರುವ ಸ್ತ್ರೀಯರ **ಸಮಾನಂ** ಗರ್ವಸಹಿತವಾದ **ಸ್ಥೈರ್ಯಂ** ಸ್ತಬ್ಧತೆಯನ್ನು **ಅಹರತ್** ಅಪಹರಿಸಿದನು. ಮತ್ತು **ಯಸ್ಯ** ಯಾರ **ಅಂಘ್ರಿವಿಟಂಕಿತಾಯಾಃ** ಪಾದಗಳಿಂದ ಸ್ಪರ್ಶಿಸಲ್ಪಟ್ಟ **ಮಮ** ನನಗೆ **ರೋಮೋತ್ಸವಃ ಅಭೂತ್** ರೋಮಾಂಚನ ಉಂಟಾಯಿತೋ ಅಂಥ **ಪುರುಷೋತ್ತಮಸ್ಯ** ಕೃಷ್ಣನ **ವಿರಹಂ** ವಿಯೋಗವನ್ನು **ಕಾ ವಾ ಸಹೇತ** ಯಾರು ತಾನೇ ಸಹಿಸುವರು ಯಾರೂ ಸಹಿಸಲಾರರು.

**ಸೂತ ಉವಾಚ-**

**ತಯೋರೇವಂ ಕಥಯತೋಃ ಪೃಥಿವೀ ಧರ್ಮಯೋಸ್ತದಾ ।**
**ಪರೀಕ್ಷಿನ್ನಾಮರಾಜರ್ಷಿಃ ಪ್ರಾಪ್ತಃ ಪ್ರಾಚೀಂ ಸರಸ್ವತೀಮ್ ॥೩೭॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ಷೋಡಶೋಽಧ್ಯಾಯಃ ॥

**ತಯೋಃ ಪೃಥಿವೀಧರ್ಮಯೋಃ** ಆ ಪೃಥಿವಿ ಮತ್ತು ಧರ್ಮ **ಏವಂ ಕಥಯತೋಃ** ಈ ರೀತಿ ಮಾತಾಡುತ್ತಿರಲು **ತದಾ** ಆ ಕಾಲದಲ್ಲಿ **ಪರೀಕ್ಷಿನ್ನಾಮರಾಜರ್ಷಿಃ** ಪರೀಕ್ಷಿತ್ ಎಂಬ ರಾಜಶ್ರೇಷ್ಠನು **ಪ್ರಾಚೀಂ ಸರಸ್ವತೀಂ ಪ್ರಾಪ್ತಃ** ಪೂರ್ವಕ್ಕೆ ಹರಿಯುವ ಸರಸ್ವತಿ ನದಿಯ ಹತ್ತಿರ ಬಂದನು.

ಇಲ್ಲಿಗೆ ಹದಿನಾರನೇ ಅಧ್ಯಾಯವು ಮುಗಿಯಿತು.

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಸಪ್ತದಶೋಽಧ್ಯಾಯಃ

**ಅಧ್ಯಾಯಸಾರಾಂಶ**

ರಾಜವೇಷಧರಿಸಿದ ಕಲಿ ಕೈಯಲ್ಲಿ ಕೋಲನ್ನು ಹಿಡಿದು ಕೊಂಡು ಎತ್ತು ಹಾಗು ಹಸುಗಳನ್ನು ಹೊಡೆಯುತ್ತಿದ್ದ. ಇದನ್ನು ನೋಡಿದ ಪರೀಕ್ಷಿತ ಆರ್ಭಟಿಸಿದ. ಯಾರು ನೀನು ? ಏಕೆ ಈ ಎತ್ತು ಹಾಗೂ ಗೋವುಗಳನ್ನು ಹಿಂಸಿಸುತ್ತಿರುವಿ ? ಆ ಮೂಕ ಪ್ರಾಣಿಗಳನ್ನು ನೋಡಿ ಗೋಮಾತೆ ನೀನು ದುಃಖಿಸಬೇಡ. ದುಷ್ಟರಿಗೆ ಶಾಸನ ಮಾಡಲು ನಾನಿದ್ದೇನೆ. ನಿರಪರಾಧಿಗಳನ್ನು ಪೀಡಿಸುವವನು ದೇವತೆಯಾದರೂ ಸರಿ ನಾನು ಅವನ ಭುಜಗಳನ್ನು ಕತ್ತರಿಸುತ್ತೇನೆ. ಹೀಗೆ ಅವರಲ್ಲಿ ಸಂಭಾಷಣೆ ನಡೆಯಿತು. ನಂತರ ಎಲ್ಲ ವಾರ್ತೆಯನ್ನು ತಿಳದ ಪರೀಕ್ಷಿತ ಕಲಿಯನ್ನು ಕೊಲ್ಲಲು ಮುಂದಾದಾಗ ಕಲಿ ಶರಣಾಗಿ ಬಿಟ್ಟ. ನೀನು ಈ ಕೂಡಲೇ ಇಲ್ಲಿಂದ ತೊಲಗು ಎಂದು ಗರ್ಜಿಸಿದ. ದಯಮಾಡಿ ನಾನು ಬದುಕುವದಕ್ಕೆ ಸ್ಥಳವನ್ನು ಕೊಡು. ನಾನು ಇಲ್ಲಿಂದ ಹೊರಡುತ್ತೇನೆ ಎಂದಾಗ ಪರೀಕ್ಷಿತ ದ್ಯೂತ, ಮದ್ಯಪಾನ, ನಿಷಿದ್ಧ ಸ್ತ್ರೀಸಂಗ,ಪ್ರಾಣಿಹಿಂಸೆ,ಬಂಗಾರದ ಮೋಹ ಈ ಐದು ಸ್ಥಾನಗಳಲ್ಲಿ ನೀನು ವಾಸವಾಗಿರು ಎಂದು ಹೇಳಿ ಕಳುಹಿಸಿದ.

**ಸೂತ ಉವಾಚ –**

**ತತ್ರ ಗೋಮಿಥುನಂ ರಾಜಾ ಹನ್ಯಮಾನಮನಾಥವತ್ ।**
**ದಂಡಹಸ್ತಂ ಚ ವೃಷಲಂ ದದೃಶೇ ನೃಪಲಾಂಛನಮ್ ॥೧॥**

**ತತ್ರ** ಕುರುಕ್ಷೇತ್ರದ ನದೀತೀರದಲ್ಲಿ **ರಾಜಾ** ರಾಜನು **ಅನಾಥವತ್** ರಕ್ಷಕರಿಲ್ಲದವರಂತೆ **ಹನ್ಯಮಾನಂ** ಹೊಡಿಸಿಕೊಳ್ಳಲ್ಪಡುತ್ತಿರುವ **ಗೋಮಿಥುನಂ** ಎತ್ತು

ಮತ್ತು ಆಕಳು ಎರಡನ್ನು **ದಂಡಹಸ್ತಂ** ಹೊಡೆಯುತ್ತಿರುವ **ನೃಪಲಾಂಛನಂ** ರಾಜವೇಷದ **ವೃಷಲಂ** ಶೂದ್ರನನ್ನು **ದದೃಶೇ** ನೋಡಿದನು.

**ಪರೀಕ್ಷಿತ-ಗೋಮಿಥುನಗಳ ಪರಸ್ಪರ ಸಂವಾದ**

ಗೋಮಿಥುನವನ್ನು ಪ್ರತ್ಯೇಕ ಹೇಳಿ ರಾಜನು ಅವುಗಳನ್ನು ಪ್ರಶ್ನಿಸಿದ್ದನ್ನು ಹೇಳುವರು

**ವೃಷಂ ಮೃಣಾಲಧವಲಂ ಮೇಹಂತಮಿವ ಬಿಭ್ಯತಮ್ ।**
**ವೇಪಮಾನಂ ಪದೈಕೇನ ಸೀದಂತಂ ಶೂದ್ರಪೀಡಿತಮ್ ॥೨॥**

**ಮೃಣಾಲಧವಲಂ** ಕಮಲದ ನಾಲದಲ್ಲಿಯ ದಾರದಂತೆ ಬೆಳ್ಳಗಿರುವ **ಬಿಭ್ಯತಂ ಇವ** ಹೆದರಿದಂತೆ ಮತ್ತೆ ಮತ್ತೆ **ಮೇಹಂತಂ** ಸೆಗಣಿ ಹಾಕುತ್ತಿರುವ **ವೇಪಮಾನಂ** ನಡಗುತ್ತಿರುವ **ಏಕೇನ ಪದಾ ಸೀದಂತಂ** ಒಂದೇ ಕಾಲಿನಿಂದ ಕುಂಟನಂತೆ ನಿಂತಿರುವ **ಶೂದ್ರಪೀಡಿತಂ** ಕಲಿಯಿಂದ ಪೀಡಿತವಾದ **ವೃಷಂ** ಎತ್ತನ್ನು **ಪಪ್ರಚ್ಛ** ಕೇಳಿದನು.

*ಭಾಗವತತಾತ್ಪರ್ಯ-*

ಬಿಭ್ಯತಮಿವ ಮೇಹಂತಂ ।

ಹೆದರಿದವನಂತೆ ಸೆಗಣಿ ಹಾಕುವದನ್ನು.

**ಗಾಂ ಚ ಧರ್ಮದುಘಾಂ ದೀನಾಂ ಭೃಶಂ ಶೂದ್ರಪದಾಹತಾಮ್ ।**
**ವಿವತ್ಸಾಮಶ್ರುವದನಾಂ ಕೃಶಾಂ ಯವಸಮಿಚ್ಛತೀಮ್ ॥೩॥**

**ಧರ್ಮದುಘಾಂ** ಯಜ್ಞೋಪಯುಕ್ತ ಹಾಲನ್ನು ಕರೆಯುವ **ಭೃಶಂ** ಬಹಳ **ದೀನಾಂ** ದುಃಖಿತಳಾದ **ಶೂದ್ರಪದಾ** ಕಲಿಯ ಕಾಲಿನಿಂದ **ಆಹತಾಂ** ಒದೆಯಲ್ಪಟ್ಟ **ವಿವತ್ಸಾಂ ಇವ** ಮಕ್ಕಳಿಲ್ಲದ ತಾಯಿ ಕಣ್ಣೀರಿಡುವಂತೆ **ಅಶ್ರುವದನಾಂ** ಕಣ್ಣೀರಿಡುವ **ಕೃಶಾಂ** ಸೊರಗಿದ **ಯವಸಂ ಇಚ್ಛತೀಂ** ಹುಲ್ಲನ್ನಿಚ್ಛಿಸುವ **ಗಾಂ** ಆಕಳನ್ನು **ಅಪಶ್ಯತ್** ನೋಡಿದನು.

**ಪಪ್ರಚ್ಛ ರಥಮಾರೂಢಃ ಕಾರ್ತಸ್ವರಪರಿಚ್ಛದಮ್ ।**
**ಮೇಘಗಂಭೀರಯಾ ವಾಚಾ ಸಮಾರೋಪಿತಕಾರ್ಮುಕಃ ॥೪॥**

**ಕಾರ್ತಸ್ವರಪರಿಚ್ಛದಂ** ಚಿನ್ನದಿಂದ ಅಲಂಕೃತವಾದ **ರಥಂ** ರಥವನ್ನು **ಆರೂಢಃ** ಏರಿದವನಾಗಿ **ಸಮಾರೋಪಿತಕಾರ್ಮುಕಃ** ಬಿಲ್ಲಿನ ಹೆದೆ ಏರಿಸಿದವನಾಗಿ **ಮೇಘಗಂಭೀರಯಾ ವಾಚಾ** ಮೋಡದ ಧ್ವನಿಯಂತೆ ಗಂಭೀರವಾದ ಮಾತುಗಳಿಂದ **ಪಪ್ರಚ್ಛ** ಕೇಳಿದನು.

ಶೂದ್ರನಿಗೆ ಕೇಳಿದ್ದನ್ನು ಹೇಳುವರು

**ಕಸ್ತ್ವಂ ಮಚ್ಛರಣೇ ಲೋಕೇ ಬಲಾದ್ಧಂಸ್ಯಬಲೌ ಬಲೀ ।**
**ನರದೇವೋಽಸಿ ವೇಷೇಣ ನಟವತ್ ಕರ್ಮಣಾಽದ್ವಿಜಃ ॥೫॥**

**ಮಚ್ಛರಣೇ** ನನ್ನಿಂದ ರಕ್ಷಿತವಾದ **ಲೋಕೇ** ಲೋಕದಲ್ಲಿರುವ **ಅಬಲೌ** ದುರ್ಬಲರಾದವರಲ್ಲಿ **ಬಲೀ** ಬಲಿಷ್ಠನಾದ **ನಟವತ್** ಪಾತ್ರಧಾರಿಯಂತೆ **ವೇಷೇಣ** ಕೇವಲ ವೇಷದಿಂದ **ನರದೇವಃ ಅಸಿ** ರಾಜನಾಗಿರುವಿ **ಕರ್ಮಣಾ** ಕಾರ್ಯದಿಂದ **ಅದ್ವಿಜಃ** ತ್ರಿವರ್ಣಬಾಹ್ಯನಾಗಿರುವಿ(ಶೂದ್ರ) **ತ್ವಂ** ನೀನು **ಬಲಾತ್** ಬಲಾತ್ಕಾರದಿಂದ **ಹಂಸಿ** ಸಂಹರಿಸುವಿ **ತ್ವಂ ಕಃ** ನೀನ್ಯಾರು ಎಂದು ಕೇಳಿದನು.

**ಸ ತ್ವಂ ಕೃಷ್ಣೇ ಗತೇ ದೂರಂ ಸಹ ಗಾಂಡೀವಧನ್ವನಾ ।**
**ಶೋಚ್ಯೋಽಸ್ಯಶೋಚ್ಯಾನ್ರಹಸಿ ಪ್ರಹರನ್ವಧಮರ್ಹಸಿ ॥೬॥**

**ಗಾಂಢೀವಧನ್ವನಾ ಸಹ** ಅರ್ಜುನನಿಂದ ಕೂಡಿದ **ಕೃಷ್ಣೇ** ಶ್ರೀಕೃಷ್ಣನು **ದೂರಂಗತೇ ಸತಿ** ಅದೃಶ್ಯನಾಗುತ್ತಿರಲು **ತ್ವಂ** ನೀನು **ರಹಸಿ** ಏಕಾಂತದಲ್ಲಿ **ಅಶೋಚ್ಯಾನ್** ನಿರಪರಾಧಿಗಳಾದವರನ್ನು **ಪ್ರಹರನ್** ಹೊಡೆಯುವವನಾಗಿ ಇರುವಿಯಾ **ಸಃ ತ್ವಂ** ಆ ನೀನು **ಶೋಚ್ಯಃ** ಅಪರಾಧಿಯು ಆ ಕಾರಣಕ್ಕೆ **ವಧಂ ಅರ್ಹಸಿ** ವಧಿಸಲು ಯೋಗ್ಯನಾಗಿರುವಿ.

ಈಗ ಎತ್ತನ್ನು ಕೇಳುವನು

**ತ್ವಂ ವಾ ಮೃಣಾಲಧವಳಃ ಪಾದೈರ್ನ್ಯೂನಃ ಪದಾ ಚರನ್ ।**
**ವೃಷರೂಪೇಣ ಕಿಂ ಕಶ್ಚಿದ್ದೇವೋ ನ ಪರಿಖೇದಯನ್ ॥೭॥**

**ಪಾದೈಃ ನ್ಯೂನಃ** ಮೂರು ಕಾಲುಗಳಿಲ್ಲದ **ಪದಾ ಚರನ್** ಒಂದೇ ಕಾಲಿನಿಂದ ಸಂಚರಿಸುವ **ಮೃಣಾಲಧವಳಃ** ಕಮಲದ ದೇಟಿನಂತೆ ಶುಭ್ರವಿರುವ **ತ್ವಂ ವಾ** ನೀನಾದರೂ **ವೃಷರೂಪೇಣ** ಎತ್ತಿನ ವೇಷದಿಂದ **ನಃ** ನಮ್ಮ ಬುದ್ಧಿಯನ್ನು

**ಪರಿಖೇದಯನ್** ದುಃಖಗೊಳಿಸುತ್ತ ಬಂದ **ಕಶ್ಚಿದ್ದೇವಃ** (ನಮಗೆ ತಿಳಿಯದ) ಯಾವ ದೇವತೆಯು ಕಿಂ ಆಗಿರುವೆಯಾ?

ದುಃಖಕ್ಕೆ ಕಾರಣವನ್ನು ಹೇಳುತ್ತಾರೆ

**ನ ಜಾತು ಕೌರವೇಂದ್ರಾಣಾಂ ದೋರ್ದಂಡಪರಿರಂಭಿತೇ ।**
**ಭೂತಲೇ ನಿಪತಂತ್ಯಸ್ಮಿನ್ ವಿನಾ ತ್ವಾಂ ಪ್ರಾಣಿನಾಂ ಶುಚಃ ॥೮॥**

**ಕೌರವೇಂದ್ರಾಣಾಂ** ಕುರುಕುಲಶ್ರೇಷ್ಠರಾದ ಪಾಂಡವರ **ದೋರ್ದಂಡ-ಪರಿರಂಭಿತೇ** ಭುಜಗಳಿಂದ ರಕ್ಷಿತವಾದ **ಅಸ್ಮಿನ್ ಭೂತಲೇ** ಈ ಭೂಮಿಯಲ್ಲಿ **ಪ್ರಾಣಿನಾಂ ಶುಚಃ** ಪ್ರಾಣಿಗಳ ಶೋಕನಿಮಿತ್ತಕವಾದ ಕಣ್ಣೀರು **ತ್ವಾಂ ವಿನಾ** ನಿನ್ನನ್ನು ಬಿಟ್ಟು **ಜಾತು** ಇದುವರೆಗೆ ಎಂದೂ **ನ ನಿಪತಂತಿ** ಬೀಳಲಾರವು ನೀನಾದರೂ ಕಣ್ಣೀರು ಹಾಕುವಿ ಕಾರಣ ನಮಗೆ ದುಃಖ ಪಡಿಸುವಿ.

**ಮಾ ಸೌರಭೇಯಾನುಶುಚೋ ವ್ಯೇತು ತೇ ವೃಷಲಾದ್ಭಯಮ್ ।**
**ಮಾ ರೋದೀರಂಬ ಭದ್ರಂ ತೇ ಖಲಾನಾಂ ಮಯಿ ಶಾಸ್ತರಿ ॥೯॥**

**ಹೇ ಸೌರಭೇಯ** ಎಲೋ ಸುರಭಿಪುತ್ರನೇ **ಮಾ ಅನುಶುಚಃ** ಶೋಕಮಾಡಬೇಡ **ತೇ** ನಿನಗೆ **ವೃಷಲಾತ್** ಶೂದ್ರನಿಂದ **ಭಯಂ** ಭಯವು **ವ್ಯೇತು** ಹೋಗಲಿ **ಹೇ ಅಂಬ** ಗೋಮಾತೆಯೇ **ಖಲಾನಾಂ** ದುಷ್ಟರ **ಶಾಸ್ತರಿ** ಶಾಸಕನಾದ **ಮಯಿ** ನಾನು ಬದುಕಿರುವಾಗಲೇ **ಭದ್ರಂ** ನಿನಗೆ ಕಲ್ಯಾಣವೇ ಆಗುವುದು ಕಾರಣ **ಮಾ ರೋದೀಃ** ಅಳಬೇಡ.

ಕೇವಲ ನಿನ್ನ ಉಪಕಾರಕ್ಕಾಗಿಯಷ್ಟೇ ಅಲ್ಲ ನನ್ನ ಹಿತಕ್ಕಾಗಿಯೂ ಇವನನ್ನು ಕೊಲ್ಲುವೆನು ಎಂದು ಹೇಳುವನು ಎರಡು ಶ್ಲೋಕಗಳಿಂದ

**ಯಸ್ಯ ರಾಷ್ಟ್ರೇ ಪ್ರಜಾ ಮಾತರ್ಹಿಂಸ್ಯಂತೇ ಸಾಧ್ವಸಾಧುಭಿಃ ।**
**ತಸ್ಯ ಮತ್ತಸ್ಯ ನಶ್ಯಂತಿ ಕೀರ್ತಿರಾಯುರ್ಭಗೋ ಗತಿಃ ॥೧೦॥**

**ಯಸ್ಯ** ಯಾವನ **ರಾಷ್ಟ್ರೇ** ರಾಜ್ಯದಲ್ಲಿ **ಪ್ರಜಾಃ** ಪ್ರಜೆಗಳು **ಅಸಾಧುಭಿಃ** ದುಷ್ಟರಿಂದ **ಸಾಧು** ಚೆನ್ನಾಗಿ (ಬಹಳ) **ಹಿಂಸ್ಯಂತೇ** ಹಿಂಸಿಸಲ್ಪಡುವರೋ **ಮತ್ತಸ್ಯ ತಸ್ಯ** ಪ್ರಮಾದ ಮಾಡಿದ ಆ ರಾಜನ **ಕೀರ್ತಿಃ** ಕೀರ್ತಿಯು **ಆಯುಃ** ಆಯುಷ್ಯವು **ಭಗಃ** ಐಶ್ವರ್ಯವು **ಗತಿಃ** ಪಾರಲೌಕಿಕಗತಿಯು **ನಶ್ಯಂತಿ** ಎಲ್ಲವೂ ನಾಶವಾಗುವವು.

**ಏಷ ರಾಜ್ಞಃ ಪರೋ ಧರ್ಮೋ‌ಃ ಹ್ಯಾರ್ತಾನಾಮಾರ್ತಿನಿಗ್ರಹಃ ।**
**ಅತ ಏನಂ ವಧಿಷ್ಯಾಮಿ ಭೂತದ್ರುಹಮಸತ್ತಮಮ್ ॥೧೧॥**

**ಹಿ** ಯಾವ ಕಾರಣ **ಆರ್ತಾನಾಂ** ದುಃಖಿತರ **ಆರ್ತಿನಿಗ್ರಹಃ** ದುಃಖನಾಶನವು ಏನಿದಿಯೋ **ಏಷಃ** ಇದು **ರಾಜ್ಞಃ** ರಾಜರ **ಪರೋ ಧರ್ಮಃ** ಮುಖ್ಯಧರ್ಮವು **ಅತಃ** ಆದ್ದರಿಂದ **ಭೂತದ್ರುಹಂ** ಪ್ರಾಣಿಗಳ ದ್ರೋಹಿಯಾದ **ಅಸತ್ತಮಂ** ಅತಿದುಷ್ಟನಾದ **ಏನಂ** ಇವನನ್ನು **ವಧಿಷ್ಯಾಮಿ** ಸಂಹರಿಸುವೆನು.

ಪರೀಕ್ಷಿತನು ಮತ್ತೆ ಎತ್ತಿಗೆ ಕೇಳುವನು

**ಕೋಽವೃಶ್ಚತವ ಪಾದಾಂಸ್ತ್ರೀನ್ ಸೌರಭೇಯ ಚತುಷ್ಪದಃ ।**
**ಮಾ ಭೂವಂ ಸ್ತ್ವಾದೃಶಾ ರಾಷ್ಟ್ರೇ ರಾಜ್ಞಾಂ ಕೃಷ್ಣಾನುವರ್ತಿನಾಮ್॥೧೨॥**

**ಹೇ ಸೌರಭೇಯ** ಸುರುಭಿ ಪುತ್ರನೇ **ಚತುಷ್ಪದಃ** ನಾಲ್ಕು ಕಾಲಿನ **ತವ** ನಿನ್ನ **ತ್ರೀನ್ ಪಾದಾನ್** ಮೂರು ಕಾಲುಗಳನ್ನು **ಕಃ ಅವೃಶ್ಚತ್** ಯಾವನು ಕತ್ತರಿಸಿದನು ಹೇಳು **ಕೃಷ್ಣಾನುವರ್ತಿನಾಂ ರಾಜ್ಞಾಂ** ಶ್ರೀಕೃಷ್ಣನ ಭಕ್ತರಾದ ನಮ್ಮ **ರಾಷ್ಟ್ರೇ** ರಾಷ್ಟ್ರದಲ್ಲಿ **ತ್ವಾದೃಶಾಃ** ನಿನ್ನಂಥವರು **ಮಾಭೂವನ್** ಇರಬಾರದು.

**ಆಖ್ಯಾಹಿ ವೃಷ ಭದ್ರಂ ವಃ ಸಾಧೂನಾಮಕೃತಾಗಸಾಮ್ ।**
**ಆತ್ಮವೈರೂಪ್ಯಕರ್ತಾರಂ ಪಾರ್ಥಾನಾಂ ಕೀರ್ತಿದೂಷಕಮ್ ॥**
**ಗಲೇಽನಾಗಸ್ಯಾಘಂ ಯುಂಜನ್ ಸರ್ವತೋಽಸ್ಯ ಚ ಮದ್ಭಯಮ್ ॥**

**ಹೇ ವೃಷ** ಎಲೋ ಎತ್ತೇ **ಅಕೃತಾಗಸಾಂ** ಅಪರಾಧ ಮಾಡದಿರುವ **ಸಾಧೂನಾಂ ವಃ** ಸಜ್ಜನರಾದ ನಿಮಗೆ **ವೈರೂಪ್ಯಕರ್ತಾರಂ** ಮೂರು ಕಾಲು ಇಲ್ಲದಂತೆ ವಿಕಾರ ಮಾಡಿದವನನ್ನು **ಆಖ್ಯಾಹಿ** ಹೇಳು **ಗಲೇ** ಸೌರಭೇಯನೇ **ಅನಾಗಸ್ಯ** ಅಪರಾಧ ಇಲ್ಲದವರಿಗೆ **ಅಘಂ ಯುಂಜನ್** ಅಪರಾಧ ಮಾಡುವ **ಅಸ್ಯ** ಇವನಿಗೆ **ಇಹ** ಇಲ್ಲಿ ಮತ್ತು **ಸರ್ವತಃ** ಪರಲೋಕಗಳಲ್ಲಿ **ಮದ್ಭಯಂ** ನನ್ನಿಂದ ಭಯವಿರುವದು ಆದ್ದರಿಂದ **ವಃ** ನಿಮಗೆ **ಭದ್ರಂ ಭವಿಷ್ಯತಿ** ಕಲ್ಯಾಣವಾಗುವದು

**ವಿಶೇಷ :- ಮಹದ್ಭಯಂ** ಎಂಬ ಪಾಠದಲ್ಲಿ ಮಹಾಭಯವು ಮತ್ತೆ **ಭವಿಷ್ಯತಿ** ನನ್ನಿಂದ ಆಗುವದು ಎಂದು ಶೇಷಪೂರ್ತಿ ಮಾಡಿ ಅರ್ಥೈಸಬೇಕು. **ಪಾರ್ಥಾನಾಂ ಕೀರ್ತಿದೂಷಕಂ** ಪಾಂಡವರ ಯಶವನ್ನು ಕೆಡೆಸುವ ಇವನಿಗೆ ಎಂದನ್ವಯ. ಗಲಾ

ಎನ್ನುವದಕ್ಕೆ ಕೋಶ ಹೀಗಿದೆ. 'ಸೌರಭೇಯೀ ಗಲಾ ಧೇನುರ್ಭದ್ರಾ ನಂದಾಽಮೃತಸ್ರವಾ' । ಎಂದು.

ಅವರನ್ನು ಶಿಕ್ಷಿಸಲು ನಾನು ಅಸಮರ್ಥನೆಂದು ತಿಳಿಯಬೇಡಿ ಎಂದು ಹೇಳುವರು

**ಅನಾಗಸ್ಸ್ವಿಹ ಭೂತೇಷು ಯ ಆಗಸ್ಕೃನ್ನಿರಂಕುಶಃ ।**
**ಆಹರ್ತಾಽಸ್ಮಿ ಭುಜಂ ಸಾಕ್ಷಾದಮರ್ತ್ಯಸ್ಯಾಪಿ ಸಾಂಗದಮ್ ॥೧೪॥**

**ಇಹ** ಈ ಪ್ರಪಂಚದಲ್ಲಿ **ಅನಾಗಸ್ಸು** ನಿರಪರಾಧಿಗಳಾದ **ಭೂತೇಷು** ಪ್ರಾಣಿಗಳಲ್ಲಿ **ನಿರಂಕುಶಃ** ಅನಿವಾರಿತನಾಗಿ (ತಡೆಯಿಲ್ಲದವನಾಗಿ) **ಯಃ** ಯಾವನು **ಆಗಸ್ಕೃತ್** ಅಪರಾಧವನ್ನು ಎಸಗುವನೋ **ತಸ್ಯ** ಅವನ **ಸಾಕ್ಷಾತ್** ಪ್ರತ್ಯಕ್ಷವಾಗಿ (ನಿಜವಾದ) **ಅಮರ್ತ್ಯಸ್ಯಾಪಿ** ದೇವತೆಯೇ ಆಗಿದ್ದರೂ **ಸಾಂಗದಂ** ಬಾಹುಭೂಷಣ ಸಹಿತವಾದ **ಭುಜಂ** ಕೈಯನ್ನು **ಆಹರ್ತಾ ಅಸ್ಮಿ** ಕತ್ತರಿಸುವೆನು

**ವಿಶೇಷ :-** ಸಾಂಗದಂ ಎಂದದ್ದರಿಂದ ಮೂಲದಿಂದಲೇ ಕಿತವನೆಂದು ಸೂಚಿತವಾಗುವದು.

**ರಾಜರ ಧರ್ಮ**

ಈ ರೀತಿ ಒಬ್ಬರನ್ನು ನಿಗ್ರಹಿಸಿ ಇನ್ನೊಬ್ಬರಿಗೆ ಅನುಗ್ರಹ ಮಾಡಿದರೆ ನಿನಗೇನು ಪ್ರಯೋಜನ ಎಂದರೆ ಹೇಳುವನು.

**ರಾಜ್ಞೋ ಹಿ ಪರಮೋ ಧರ್ಮಃ ಸ್ವಧರ್ಮಸ್ಯಾನುಪಾಲನಮ್ ।**
**ಶಾಸತೋಽನ್ಯಾನ್ಯಥಾಶಾಸ್ತ್ರಮನಾಪದ್ಯುತ್ಪಥಾನಿಹ ॥೧೫॥**

**ಇಹ** ಭಾರತ ವರ್ಷದಲ್ಲಿ **ಅನಾಪದಿ** ಆಪತ್ತು ಇಲ್ಲದಿರುವಾಗ **ಉತ್ಪಥಾನ್** ಹಾದಿ ಬಿಟ್ಟ **ಅನ್ಯಾನ್** ಅಧರ್ಮಿಗಳನ್ನು **ಯಥಾಶಾಸ್ತ್ರಂ** ಶಾಸ್ತ್ರಾನುಸಾರ **ಶಾಸತಃ** ದಂಡಿಸುವವನಿಗೆ **ಸ್ವಧರ್ಮಸ್ಯ ಅನುಪಾಲನಂ** ತನ್ನ ಧರ್ಮಪಾಲನೆಯೇ **ರಾಜ್ಞಃ** ರಾಜನಿಗೆ **ಪರಮಃ ಧರ್ಮಃ** ಮುಖ್ಯವಾಗಿ ಪುಣ್ಯ ಬರುವದು.

ಧರ್ಮ ಉವಾಚ -

**ಏತದ್ವಃ ಪಾಂಡವೇಯಾನಾಂ ಯುಕ್ತಮಾರ್ತಾಭಯಂ ವಚಃ ।**
**ಯೇಷಾಂ ಗುಣಗಣೈಃ ಕೃಷ್ಣೋ ದೌತ್ಯಾದೌ ಭಗವಾನ್ ವೃತಃ ॥೧೬॥**

**ಭಗವಾನ್ ಕೃಷ್ಣಃ** ಷಡ್ಗುಣಸಂಪನ್ನನಾದ ಶ್ರೀಕೃಷ್ಣನು **ಯೇಷಾಂ** ಯಾವ ಪಾಂಡವರ **ಗುಣಗಣೈಃ** ಜ್ಞಾನಭಕ್ತಿವಿರಕ್ತಿ ಮುಂತಾದ ಗುಣಸಮುದಾಯಗಳಿಂದ **ದೌತ್ಯಾದೌ** ಸಂದೇಶವನ್ನು ತರುವದಕ್ಕಾಗಿ **ವೃತಃ** ಸ್ವೀಕೃತನಾದನೋ **ತೇಷಾಂ** ಅಂತಹ **ಪಾಂಡವೇಯಾನಾಂ** ಪಾಂಡವರ ವಂಶದಲ್ಲಿ ಜನಿಸಿದ **ವಃ** ನಿಮಗೆ **ಏತತ್** ಈ **ಆರ್ತಾಭಯಂ** ದುಃಖಿತರಿಗೆ ಅಭಯಪ್ರದ **ವಚಃ** ಮಾತು **ಯುಕ್ತಂ** ಉಚಿತವೇ ಆಗಿದೆ.

**ನ ವಯಂ ಕ್ಲೇಶಬೀಜಾನಿ ಯತಃ ಸ್ಯುಃ ಪುರುಷರ್ಷಭ ।**
**ಪುರುಷಂ ತಂ ವಿಜಾನೀಮಃ ವಾಕ್ಯಭೇದವಿಮೋಹಿತಾಃ ॥೧೭॥**

**ಹೇ ಪುರುಷರ್ಷಭ** ಪುರುಷ ಶ್ರೇಷ್ಠನೇ **ಯತಃ** ಯಾರಿಂದ **ಕ್ಲೇಶಬೀಜಾನಿ** ಪ್ರಾಣಿಗಳಿಗೆ ಕಷ್ಟಕಾರಣಗಳು **ಸ್ಯುಃ** ಉಂಟಾಗುವವು **ತಂ ಪುರುಷಂ** ಆ ಮನುಷ್ಯನನ್ನು **ವಾಕ್ಯಭೇದವಿಮೋಹಿತಾಃ** ಆ ಆ ವಾದಿಗಳ ಮಾತುಗಳಿಂದ ಮೋಹಿತರಾದ **ವಯಂ** ನಾವು **ನ ವಿಜಾನೀಮಃ** ತಿಳಿಯಲಾರೆವು

**ವಿಶೇಷ :-** ಶ್ರೀವಿಜಯಧ್ವಜರ ಪ್ರಕಾರ **ವಾಕ್ಯಭೇದವಿಮೋಹಿತಾಃ** ಅನೇಕ ಕ್ಲೇಶಬೀಜಪ್ರತಿಪಾದಕ ವೇದವಾಕ್ಯಗಳಿಂದ ವಿಮೋಹಿತರಾಗಿ ಎಂದು ತಿಳಿಯಬೇಕು. 'ವಾಕ್ಯಭೇದವಿಮೋಹಿತಾಃ' ಎಂಬುದಕ್ಕೆ ವಿಜಯಧ್ವಜೀಯ ಪ್ರಕಾರ ಅನೇಕಕ್ಲೇಶಬೀಜಪ್ರತಿಪಾದಕ ವೇದವಾಕ್ಯಗಳಿಂದ ಎಂದರ್ಥ. ಕಾರಣ ಎಲ್ಲ ಪಕ್ಷಗಳಿಗೂ ಶ್ರೀಹರಿ ಎಂದೇ ಅರ್ಥ ಮಾಡಿರುವರು. ಯಾದವಾರ್ಯರ ಪ್ರಕಾರ ವಾದಿಗಳ ವಾಕ್ಯದಿಂದ ಎಂದರ್ಥ. ಕಾರಣ ಹೀಗೆ ಅರ್ಥ ಮಾಡಬೇಕಿಲ್ಲ. ಕಲಿಯೇ ಕಾರಣನೆಂದು ತಿಳಿದು ಎಂದರ್ಥ ಮಾಡಿದರೆ ಸಾಕು.

**ಕೇಚಿದ್ವೈಕಲ್ಪವಚಸ ಆಹುರಾತ್ಮಾನಮಾತ್ಮನಃ ।**
**ದೈವಮೇಕೇ ಪರೇ ಕರ್ಮ ಸ್ವಭಾವಮಪರೇ ಪ್ರಭುಮ್ ॥೧೮॥**

**ಕೇಚಿತ್** ಕೆಲವು **ವಿಕಲ್ಪವಚಸಃ** ವಿಕಲ್ಪ ಎಂದರೆ ಭೇದ ಅದಕ್ಕೆ ಸಂಬಂಧಿಯಾದುದು ವೈಕಲ್ಪ್ಯ ಎಂದರೆ ಭೇದ ಪ್ರತಿಪಾದಕವಾದ ಮಾತುಗಳುಳ್ಳವರು ಎಂದರೆ ಪ್ರಕೃತಿಪುರುಷರಿಗೆ ಭೇದ ಹೇಳುವ ಸಾಂಖ್ಯರು **ಆತ್ಮನಃ** ಜೀವರಿಗೆ **ಕ್ಲೇಶಬೀಜಂ** ಕಷ್ಟಕಾರಣವೆಂದು **ಆತ್ಮಾನಂ** ಅಂತಃಕರಣವನ್ನು (ಪ್ರಧಾನವನ್ನು) ಹೇಳುವರು ಅಥವಾ ಸಂದಿಗ್ಧವಾಗಿ ಮಾತಾನಾಡುವವರು. ಕೆಲವರು ತನಗೆ ತಾನೇ ಕಷ್ಟಕ್ಕೆ ಕಾರಣ ಎಂದು

ಹೇಳುವರು **ಅಪರೇ** ಮೀಮಾಂಸಕರು **ಕರ್ಮ** ತಾನು ಮಾಡಿದ (ಸಂಪಾದಿಸಿದ) ಪುಣ್ಯಪಾಪರೂಪಕರ್ಮ ಸುಖದುಃಖಕ್ಕೆ ಕಾರಣವೆನ್ನುವರು **ಏಕೇ** ವೈದಿಕರು **ದೈವಂ** ಈಶ್ವರನನ್ನು ಕಾರಣನೆಂದು ಹೇಳುವರು **ಅಪರೇ** ಚಾರ್ವಾಕರು **ಸ್ವಭಾವಂ** ಆ ಆ ವಸ್ತು ಸ್ವಭಾವವೇ **ಪ್ರಭುಂ** ಸುಖದುಃಖ ಕೊಡಲು ಸಮರ್ಥವೆಂದು ಹೇಳುವರು **ಅಪರೇ** ಕೆಲವರು **ಸ್ವಭಾವಂ** ಸ್ವಶಬ್ದವಾಚ್ಯ ಶ್ರೀಹರಿಯಿಂದ ಜನಿಸಿದ ಕಾಲವನ್ನು **ಪ್ರಭುಂ** ಸುಖದುಃಖಕೊಡಲು ಸಮರ್ಥವೆಂದು ಹೇಳುವರು ಸ್ವಸ್ಮಾತ್ ಭಾವಃ ಉತ್ಪತ್ತಿಃ ಯಸ್ಯ ಸಃ ಸ್ವಭಾವಃ ಕಾಲಃ । 'ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ' ಇತಿ ಶ್ರುತಿಃ ।

**ಅಪ್ರತರ್ಕ್ಯಾದನಿರ್ವಾಚ್ಯಾದಿತಿ ಕೇಷ್ವಪಿ ನಿಶ್ಚಯಃ ।**
**ಅತ್ರಾನುರೂಪಂ ರಾಜರ್ಷೇ ವಿಮೃಶಸ್ವ ಮನೀಷಯಾ ॥೧೯॥**

**ಅಪ್ರತರ್ಕ್ಯಾತ್** ಅನಂತವಾದ್ದರಿಂದ ಸರ್ವರೀತಿಯಿಂದಲೂ ತರ್ಕಕ್ಕೆ ವಿಷಯ ವಲ್ಲದ **ಅನಿರ್ವಾಚ್ಯಾತ್** ಪ್ರಧಾನದದೆಸೆಯಿಂದ (ಎಲ್ಲ ಜೀವರೂ ಪ್ರಕೃತಿಯಿಂದ ಆವರಿಸಲ್ಪಟ್ಟಿರುವುದರಿಂದ ಕ್ಲೇಶಪರಂಪರೆ ಎಂದು **ಕೇಷುಚಿತ್** ಕೆಲವರ **ನಿಶ್ಚಯಃ** ತಿಳಿವಳಿಕೆಯು 2.**ಅಪ್ರತರ್ಕ್ಯಾತ್** ಹೆಚ್ಚಾಗಿ ತರ್ಕಕ್ಕೆ ಯೋಗ್ಯವಲ್ಲದ **ಅನಿರ್ವಾಚ್ಯಾತ್** ಸದಸದ್ವಿಲಕ್ಷಣವಾದ ಅಜ್ಞಾನದಿಂದ ಕ್ಲೇಶವೆಂದು **ಕೇಶ್ವಪಿ** ಮಯಾವಾದಿಗಳ **ನಿಶ್ಚಯಃ** ಸಿದ್ಧಾಂತವು. **ರಾಜರ್ಷೇ** ರಾಜಶ್ರೇಷ್ಠನೇ **ಅತ್ರ** ಇವುಗಳಲ್ಲಿ **ಅನುರೂಪಂ** ಶ್ರುತಿಸ್ಮೃತಿಗಳಿಗೆ ಅನುಕೂಲವಾದ ಒಂದು ಸಿದ್ಧಾಂತವನ್ನು **ಸ್ವಮನೀಷಯಾ** ನಿನ್ನ ಬುದ್ಧಿಯಿಂದ **ವಿಮೃಶ** ವಿಚಾರಮಾಡು.

**ಏವಂ ಧರ್ಮೇ ಪ್ರವದತಿ ಸ ಸಮ್ರಾಟ್ ದ್ವಿಜಸತ್ತಮಾಃ ।**
**ಸಮಾಹಿತೇನ ಮನಸಾ ವಿದಿತ್ವಾ ಪ್ರತ್ಯಚಷ್ಟ ತಮ್ ॥೨೦॥**

**ಏವಂ** ಈ ರೀತಿಯಾಗಿ **ಧರ್ಮೇ** ಎತ್ತಿನ ರೂಪದಲ್ಲಿರುವ ಧರ್ಮದೇವತೆಯು **ಪ್ರವದತಿ** ಹೇಳುತ್ತಿರಲು **ಸಃ ಸಾಮ್ರಾಟ್** ಆ ರಾಜನು **ಸಮಾಹಿತೇನ ಮನಸಾ** ಏಕಾಗ್ರಮನಸ್ಸಿನಿಂದ **ವಿದಿತ್ವಾ** ಆಲೋಚನೆ ಮಾಡಿ ಕಲಿಯೇ ಘಾತಕನೆಂದು ತಿಳಿದು **ತಂ** ಆ ಕಲಿಗೆ **ಪ್ರತ್ಯಚಷ್ಟ** ಉತ್ತರಿಸಿದನು.

**ವಿಶೇಷ :-** ತನ್ನ ಅಧೀನವಾದ ಕಾಲಕರ್ಮಪ್ರಧಾನಗಳಿಂದ ಶ್ರೀಹರಿಯೇ ಅಸ್ವತಂತ್ರರಾದ ಜೀವರಿಗೆ ದುಃಖವನ್ನು ಕೊಡುವದಕ್ಕೆ ಮುಖ್ಯ ಕಾರಣ. ಪಾಪಾದಿಗಳು

ಅಮುಖ್ಯ ಕಾರಣಗಳು. ಕರ್ಮಗಳೇ ಸ್ವತಂತ್ರ, ಭಗವಂತ ಅಸ್ವತಂತ್ರ ಎಂದು ಹೇಳುವ ಪಕ್ಷಗಳು ಹೇಯ ಎಂದು ತಿಳಿಯಬೇಕು. ಈ ರೀತಿಯಾಗಿಯೂ ಅರ್ಥ. **ವಿದಿತ್ವಾ** ಆತ್ಮಾದಿಶಬ್ದವಾಚ್ಯನಾದ ಪರಮಾತ್ಮನನ್ನು ಕ್ಲೇಶಕಾರಣನೆಂದು ತಿಳಿದು ಎಂದರ್ಥ. ಆದಾನಕರ್ತೃವಾದ್ದರಿಂದ ಆತ್ಮಾ, ದೇವೋತ್ತಮನಾದ್ದರಿಂದ ದೈವ, ಕ್ರಿಯಾವಿಷಯನಾದ್ದರಿಂದ, ಸಕಲಕರಣಶಕ್ತಿ ಇರುವದರಿಂದ ಕರ್ಮ, ತನ್ನಿಂದಲೇ ಪ್ರಕಾಶಿಸುವದರಿಂದ ಸ್ವಭಾವ ಅಥವಾ ಸ್ವಯಂಪ್ರಕಾಶ, ಅಪ್ರತ್ಯಕ್ಷ ದುಷ್ಟ ತರ್ಕವಿಷಯವಲ್ಲದವ, ಅಪ್ರಸಿದ್ಧನಾದ್ದರಿಂದ ಅನಿರ್ವಾಚ್ಯ. ಹೀಗೆ ಎಲ್ಲ ಪಕ್ಷಗಳಲ್ಲಿಯೂ ಶ್ರೀಹರಿಯೇ ಕ್ಲೇಶಬೀಜನೆಂದು ಹೇಳಲ್ಪಡುವನು.

*ಭಾಗವತತಾತ್ಪರ್ಯ–*

**ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥**

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥**

**ಅಹಿಂಸಾ ಸಮತಾ ತುಷ್ಟಿಃ ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಃ ॥**

ಹೀಗೆ ಪ್ರಮಾಣವಿದೆ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ವೇನಾತಃ ಶ್ಚ್ಯವಂತಿ ತೇ ॥**

ಎಂದು ಸ್ಮೃತಿ ಇದೆ. ಕಾರಣ ಬೇರೆ ಕಲ್ಪಿಸುವುದು ಅಜ್ಞಾನಿವಿಷಯಕ. ಅಷ್ಟು ಅರ್ಥವನ್ನು 'ಸಮಾಹಿತೇನ' 'ಸಮ್ರಾಟ್' ಎಂಬೆರಡು ಪದಗಳು ಹೇಳುತ್ತವೆ. ಸಮ್ಯಕ್ ರಾಜತೇ ಪ್ರಕಾಶತೇ ಸರ್ವಂ ಅಸ್ಯ ಇತಿ ಸಮ್ರಾಟ್ । ಸಮಾಹಿತೇನ ಚೇತಸಾ (ಮನಸಾ) **ಜ್ಞಾನೇನ ಪರಮಂ ಧರ್ಮಂ** ಭಗವಂತನನ್ನು **ಪ್ರತ್ಯಾಚಷ್ಟ** ನೋಡಿದನು. ಅಪರೋಕ್ಷಜ್ಞಾನದಿಂದ ನಿಜರೂಪವನ್ನು ನೋಡಿದನು ನೋಡಿ ಹೇಳಿದನು ಎಂದರ್ಥ.

**ಅಸಜ್ಜನರು ಮಾಡಿದ ಪಾಪಗಳನ್ನು ಹೇಳುವದು ದೋಷವಲ್ಲ**

'ನ ವಯಂ ತು ವಿಜಾನೀಮಃ' ಎಂಬ ನಿನ್ನ ಮಾತು ಶ್ರೀಹರಿಯಿಂದ ಭಿನ್ನರಾದ ಕ್ಲೇಶಪ್ರದರ ಅಭಿಪ್ರಾಯದಿಂದಲೋ ಅಥವಾ ಶ್ರೀಹರಿಯ ಅಭಿಪ್ರಾಯದಿಂದಲೋ

ಎಂದು ಎರಡು ಪಕ್ಷಗಳಲ್ಲ ಮೊದಲನೇ ಪಕ್ಷದಲ್ಲಿ ಅವನ ವಾಕ್ಯಾಭಿಪ್ರಾಯ ಹೇಳುವನು

**ಧರ್ಮಂ ಬ್ರವೀಷಿ ಧರ್ಮಜ್ಞ ಧರ್ಮೋಽಸಿ ವೃಷರೂಪಧೃಕ್ ।**
**ಯದಧರ್ಮಕೃತಸ್ಥಾನಂ ಸೂಚಕಸ್ಯಾಪಿ ತದ್ಭವೇತ್ ॥೨೧॥**

**ಹೇ ಧರ್ಮಜ್ಞ** ಅಸಜ್ಜನರು ಮಾಡುವ ಪಾಪಗಳನ್ನು ಹೇಳಿದರೂ ದೋಷವಿಲ್ಲ ಅಷ್ಟೇ ಅಲ್ಲ ವಿಪರೀತವಾಗಿ ಪುಣ್ಯವೇ ಬರುವುದು ಎಂಬ ಧರ್ಮವನ್ನು ತಿಳಿದವನೇ (ಆ ಎತ್ತೇ ನಿನಗೆ ಹೇಳಿದ್ದು ಸಜ್ಜನರು ಮಾಡಿದ ಪಾಪವನ್ನು ಹೇಳಬಾರದು ಎಂದು)**ಧರ್ಮಂ** ಧರ್ಮವನ್ನು ಜನರಿಗೆ ತಿಳಿಸಲೆಂದೇ **ಬ್ರವೀಷೀ** ಹೇಳುವೆ ಯಾಕೆಂದರೆ **ಧರ್ಮಃ ಅಸಿ** ನೀನು ಧರ್ಮದೇವತೆಯಾಗಿರುವಿ(ಪಾದತ್ರಯ ಇಲ್ಲವೆಂದು ತಿಳಿಸಲು) **ವೃಷರೂಪಧೃಕ್** ಎತ್ತಿನರೂಪ ಧರಿಸಿರುವಿ ಸಜ್ಜನನಿಗೆ ಆದರ ಫಲವಾಗಿ ಬರುವ ನರಕವೇನಿದೆ **ತತ್** ಅದು **ಸೂಚಕಸ್ಯ ಅಪಿ ಭವೇತ್** ಹೇಳಿದವನಿಗೂ ಆಗುವದು ಆದ ಕಾರಣ ಸಜ್ಜನರ ಪಾಪ ಸರ್ವಥಾ ಹೇಳಬಾರದು ಎಂದು ಭಾವ.

*ಭಾಗವತತಾತ್ಪರ್ಯ-*

ಇಲ್ಲಿ ಸಾಮಾನ್ಯವಾಗಿ ಪಾಪ ಮಾಡಿದ್ದನ್ನು ಹೇಳಿದವನಿಗೆ ಆ ಪಾಪದ ಫಲವಾಗುವುದು ಎಂದು ಹೇಳಿದ್ದರಿಂದ ಯಾರು ಪಾಪ ಮಾಡಿದರೂ ಹೇಳಬಾರದು ಎಂದು ತೋರುವದು ಕಾರಣ ಅಭಿಪ್ರಾಯ ಹೇಳುವರು.

**ಅಸತಾ ಸೂಚಕಸ್ಯ ನ ದೋಷಃ ತಥಾಽಪಿ ಸತಾಂ ನ ಸೂಚನೀಯಮಿತಿ ದರ್ಶಯಿತುಮ್ । ಜ್ಞಾತುಂ ಶಕ್ಯತ್ವಾಚ್ಚ ರಾಜ್ಞಃ ॥**

ಈ ವಾಕ್ಯಕ್ಕೆ ಈರೀತಿ ಅರ್ಥ ಹೇಳದಿದ್ದರೆ ಬಾಧಕ ಪ್ರಮಾಣ ಹೇಳುವರು.

**ಯದ್ಯಧರ್ಮಕೃತಃ ಸದ್ಭಿಃ ಸ ನ ವಾಚ್ಯಃ ಕಥಂಚನ ।**

**ಅಸತ್ಕೃತಮಧರ್ಮಂ ತು ವದನ್ ಧರ್ಮಮವಾಪ್ನುಯಾತ್ । ಇತಿವ್ಯಾಸಸ್ಮೃತೌ**

ಯದ್ಯಪಿ ದುರ್ಜನರು ಮಾಡಿದ ದೋಷಗಳನ್ನು ತಿಳಿಸುವ ಪುರುಷನಿಗೆ ದೋಷಕ್ಕೆ ಫಲವಾದ ನರಕವಾಗಲಾರದು. ಆದರೂ ಸಜ್ಜನರು ಮಾಡಿದ ಪಾಪವನ್ನು ತಿಳಿಸಬಾರದು ಎಂಬ ಧರ್ಮವನ್ನು ಜನರಿಗೆ ತಿಳಿಸಲು ನಾನು ಅದನ್ನು ತಿಳಿದಿಲ್ಲ

ಎಂದು ಹೇಳಿದ್ದು ಸಜ್ಜನರು ಅಧರ್ಮ ಮಾಡಿದರೆ ಸರ್ವಥಾ ಆ ಅಧರ್ಮವನ್ನು ಹೇಳಬಾರದು. ಅಸಜ್ಜನರು ಮಾಡಿದ ಅಧರ್ಮವನ್ನು ವಿಶೇಷವಾಗಿ ಹೇಳುವವನು ಪುಣ್ಯವನ್ನೇ ಹೊಂದುವನು ಎಂದು ವ್ಯಾಸಸ್ಮೃತಿಯಲ್ಲಿ ಹೇಳಿದೆ.

ಎರಡನೇ ಪಕ್ಷದಲ್ಲಿ 'ನ ವಯಂ' ಎಂಬ ವಾಕ್ಯಾಭಿಪ್ರಾಯ ಹೇಳುವನು.

**ಅಥವಾ ದೇವಮಾಯಯಾ ನೂನಂ ಗತಿರಗೋಚರಾ ।**
**ಚೇತಸೋ ವಚಸಶ್ಚಾಪಿ ಭೂತಾನಾಮಿತಿ ನಿಶ್ಚಯಃ ॥೨೨॥**

**ಅಥವಾ** ಪಕ್ಷಾಂತರದಲ್ಲಿ **ದೇವಮಾಯಾಯಾಃ** ಕ್ಲೇಶಜನಕವಾದ ಈಶ್ವರೇಚ್ಛೆಯ **ಗತಿಃ** ಸ್ಥಿತಿಯು **ಭೂತಾನಾಂ** ಪ್ರಾಣಿಗಳ **ಚೇತಸಃ** ಮನಸ್ಸಿಗೂ **ವಚಸಃ** ಮಾತಿಗೂ **ಅಗೋಚರಾ** ತಿಳಿಯಲು ಹೇಳಲು ಶಕ್ಯವಲ್ಲ ಎಂದು ತಿಳಿಸಲು ನಿನ್ನ ಯೋಗ್ಯತಾನುಸಾರ ಈಶ್ವರ ಮಾಯೆಯನ್ನು ತಿಳಿದಿದ್ದರೂ ನೀನು ಛತ್ರಿ ನ್ಯಾಯದಿಂದ ನ ವಯಂ ಜಾನೀಮಃ ಎಂದು ಹೇಳಿರುವಿ **ಇತಿ ನಿಶ್ಚಯಃ** ಎಂದು ನಮಗೆ ನಿಶ್ಚಯವಿದೆ ಎಂದರ್ಥ.

**ವಿಶೇಷ :-** ಈಶ್ವರ ಪ್ರಕೃತನಾಗಿದ್ದರೂ ಅವನ ಮಾಯೆಗೆ ಅಜ್ಞೇಯತ್ವ ಹೇಳಿದ್ದು ಈಶ್ವರನೂ ಕೂಡ ಇಚ್ಛಾದ್ವಾರಾ ಸುಖದುಃಖಕಾರಣನೆಂದು ಸೂಚಿಸಲು.

*ಭಾಗವತತಾತ್ಪರ್ಯ-*

ಇಲ್ಲಿಯೂ ಸಾಮಾನ್ಯವಾಗಿ ಹೇಳಿದ್ದರಿಂದ ಧರ್ಮನಿಗೂ ತಿಳಿದಿಲ್ಲವೆಂದು ತೋರುವುದು ಅದಕ್ಕಾಗಿ ಅಭಿಪ್ರಾಯ ಹೇಳುವರು.

ತಸ್ಯ ಗೋಚರತ್ವೇಽಪಿ ಭೂತಾನಾಮಗೋಚರಾ ಇತಿ ಜ್ಞಾಪಯಿತುಂ ವಾ ।

ಧರ್ಮನ ಮಾತುಮನಸ್ಸುಗಳಿಗೆ ಶ್ರೀಹರಿಯ ಇಚ್ಛೆಯ ರೀತಿಯು ತಿಳಿದರೂ ಇತರ ಪ್ರಾಣಿಗಳ (ಜನರ) ಮಾತುಮನಸ್ಸಿಗೆ ನಿಲುಕುವವನಲ್ಲ ಎಂದು ತಿಳಿಸುವದಕ್ಕಾಗಿ ನಾವು ತಿಳಿದಿಲ್ಲವೆಂದು ಹೇಳಿದ್ದು.

ವೃಷರೂಪದ ಧರ್ಮನಿಗೆ ಒಂದೇ ಪಾದ ಇರುವದಕ್ಕೆ ನಿಮಿತ್ತವನ್ನು ತಾನೇ ಚೆನ್ನಾಗಿ ವಿಚಾರ ಮಾಡಿ ಹೇಳುವನು.

**ತಪಃ ಶೌಚಂ ದಯಾ ಸತ್ಯಂ ಇತಿ ಪಾದಾಃ ಕೃತೇ ಕೃತಾಃ ।**
**ಅಧರ್ಮಾಂಗೈಸ್ತ್ರಯೋ ಭಗ್ನಾ ಸ್ಮಯಸಂಗಮದೈಸ್ತವ ॥೨೩॥**

**ತಪಃ** ತಪಸ್ಸು **ಶೌಚಂ** ಶುದ್ಧಿಯು **ದಯಾ** ದಯೆಯು **ಸತ್ಯಂ** ಯಥಾರ್ಥ ಮಾತು ಇತಿ ಎಂಬ ನಾಲ್ಕು **ಪಾದಾಃ** ಪಾದಗಳು **ಕೃತೇ** ಕೃತಯುಗದಲ್ಲಿ **ತವ** ನಿನಗೆ **ಕೃತಾಃ** ಇದ್ದವು ಅದರಲ್ಲಿ ಮೊದಲನೆಯ ಮೂರು ಪಾದಗಳು **ಅಧರ್ಮಾಂಗೈಃ** ಅಧರ್ಮದ ಅವಯವಗಳಾದ **ಸ್ಮಯಸಂಗಮದೈಃ** ಅಹಂಕಾರ ವಿಷಯಾಸಕ್ತಿ ಮತ್ತು ಮದಗಳಿಂದ **ಭಗ್ನಾಃ** ಗರ್ವದಿಂದ ತಪಸ್ಸು, ಸ್ತ್ರೀಸಂಗದಿಂದ ಶುಚಿತ್ವ, ಮದದಿಂದ ದಯೆಯು ಮುರಿದು ಹೋಗಿರುವವು.

**ಇದಾನೀಂ ಧರ್ಮಪಾದಸ್ತೇ ಸತ್ಯಂ ನಿರ್ವರ್ತಸೇ ಯತಃ ।**
**ತಂ ಜಿಘೃಕ್ಷತ್ಯಧರ್ಮೋಽಯಮನೃತೇನೈಧಿತಃ ಕಲಿಃ ॥೨೫॥**

**ಇದಾನೀಂ** ಕಲಿಯುಗದಲ್ಲಿ **ಯತಃ** ಯಾವ ಪಾದದಿಂದ **ನಿರ್ವರ್ತಸೇ** ನಡೆಯುತ್ತಿರುವಿಯೋ **ಹೇ ಧರ್ಮ** ಎಲೋ ಧರ್ಮನೇ **ತೇ** ನಿನ್ನ **ಸಃ ಪಾದಃ** ಆ ಪಾದವು **ಸತ್ಯಂ** ಸತ್ಯವೆಂಬುದು ಇದೊಂದೇ ಉಳಿದಿರುವುದು. **ಅಧರ್ಮಃ** ಅಧರ್ಮಾಭಿಮಾನಿಯಾದ ಕ್ಷತ್ರಿಯ ವೇಷದ ಕಲಿಯು **ಅನೃತೇನ ಏಧಿತಃ** ಸುಳ್ಳೆಂಬ ಅಧರ್ಮಪಾದದಿಂದ ಬೆಳೆದ ಕಲಿಯು **ತಂ** ಸತ್ಯವೆಂಬ ನಿನ್ನ ಪಾದವನ್ನು **ಜಿಘೃಕ್ಷತಿ** ಸ್ವೀಕರಿಸಲಿಚ್ಛಿಸುವನು ಈ ಯುಗದಲ್ಲಿ ಕ್ರಮವಾಗಿ ಸತ್ಯವು ನಾಶವಾಗುವುದು ಎಂದು ಭಾವ.

ಇಲ್ಲಿಯ ವರೆಗೆ ವೃಷಭ ಸ್ವರೂಪ ಹೇಳಿ ಈಗ ಗೋಸ್ವರೂಪ ಹೇಳುವನು.

**ಇಯಂ ಚ ಭೂರ್ಭಗವತಾ ನ್ಯಾಸಿತೋರುಭರಾ ಸತೀ ।**
**ಶ್ರೀಮದ್ಭಿಸ್ತತ್ಪದನ್ಯಾಸೈಃ ಸರ್ವತಃ ಕೃತಕೌತುಕಾ ॥೨೬॥**

**ಇಯಂ ಚ** ಈ ಗೋವು ಆದರೂ **ಭೂಃ** ಭೂಮಿಯು **ಭಗವತಾ** ಶ್ರೀಕೃಷ್ಣನಿಂದ **ನ್ಯಾಸಿತೋರುಭರಾ** ನ್ಯಾಸಿತ ಇಳಿಸಲ್ಪಟ್ಟ ಉರು ಬಹಳವಾದ **ಭರಾ ಸತೀ** ಭಾರವುಳ್ಳವಳಾಗಿ **ಶ್ರೀಮದ್ಭಿಃ** ಕಾಂತಿಯುತವಾದ **ತತ್ಪದನ್ಯಾಸೈಃ** ಅವನ ಪಾದಗಳ ಸ್ಪರ್ಶದಿಂದ **ಸರ್ವತಃ** ಎಲ್ಲೆಡೆ **ಕೃತಕೌತುಕಾ** ರೋಮಾಂಚಿತಳಾದವಳಾಗಿ

**ಶೋಚಂತ್ಯಶ್ರುಕಲಾ ಸಾಧ್ವೀ ದುರ್ಭಗೇವೋಜ್ಝಿತಾಧುನಾ ।**
**ಅಬ್ರಹ್ಮಣ್ಯಾಃ ನೃಪವ್ಯಾಜಾಃ ಶೂದ್ರಾ ಭೋಕ್ಷ್ಯಂತಿ ಮಾಮಿತಿ ॥೨೭॥**

**ಸೇಯಂ** ಅದೇ **ಸಾಧ್ವೀ** ಸಚ್ಚರಿತ್ರಳಾದ ಭೂಮಿಯು **ಅಧುನಾ** ಈಗ **ಉಜ್ಝಿತಾ** ಪರಮಾತ್ಮನಿಂದ ವಿಯುಕ್ತಳಾಗಿ **ದುರ್ಭಗಾ ಇವ** ಭಾಗ್ಯಹೀನಳಂತೆ **ಅಶ್ರುಕಲಾ** ಕಣ್ಣೀರುದುರಿಸುತ್ತ **ಅಬ್ರಹ್ಮಣ್ಯಾಃ** ಅಬ್ರಾಹ್ಮಣರಲ್ಲಿ ಭಕ್ತಿ ಇಲ್ಲದ **ಶೂದ್ರಾಃ** ವರ್ಣ ಬಾಹ್ಯರು **ನೃಪವ್ಯಾಜಾಃ** ರಾಜವೇಷದವರು **ಮಾಂ ಭೋಕ್ಷ್ಯಂತಿ** ಅನುಭವಿಸಿರುವರು **ಇತಿ ಶೋಚಂತಿ** ದುಃಖಿಸುವಳು.

**ವಿಶೇಷ :-** ಶೋಚಂತೀ ಎಂಬ ಪಾಠವಿದ್ದಾಗ ಆಸ್ತೇ ಎಂದು ಶೇಷ ಮಾಡಬೇಕು.

ಸೂತ ಉವಾಚ -

**ಇತಿ ಧರ್ಮಂ ಮಹೀಂ ಚೈವ ಸಾಂತಯಿತ್ವಾ ಮಹಾರಥಃ ।**
**ನಿಶಾತಮಾದದೇ ಖಡ್ಗಂ ಕಲಯೇಽಧರ್ಮಹೇತವೇ ॥೨೮॥**

**ಮಹಾರಥಃ** ರಥಿಕನಾದ ಪರೀಕ್ಷಿತನು **ಇತಿ** ಈ ರೀತಿಯಾಗಿ **ಧರ್ಮಂ** ಧರ್ಮನನ್ನು **ಚ** ಮತ್ತು **ಮಹೀಂ** ಭೂಮಿಯನ್ನು **ಸಾಂತಯಿತ್ವಾ** ಸಮಾಧಾನಗೊಳಿಸಿ **ಅಧರ್ಮಹೇತವೇ** ಪಾಪ ಪ್ರವರ್ತಕನಾದ **ಕಲಯೇ** ಕಲಿಯನ್ನು ಸಂಹರಿಸಲು **ನಿಶಾತಂ** ಹರಿತವಾದ **ಖಡ್ಗಂ** ಕತ್ತಿಯನ್ನು **ಆದದೇ** ಸ್ವೀಕರಿಸಿದನು.

**ತಂ ಜಿಘಾಸುಮಭಿಪ್ರೇತ್ಯ ವಿಹಾಯ ನೃಪಲಾಂಛನಮ್ ।**
**ತತ್ಪಾದಮೂಲಂ ಶಿರಸಾ ಸಮಗಾದ್ಭಯವಿಹ್ವಲಃ ॥೨೯॥**

**ಸಃ** ಕಲಿಯು **ಜಿಘಾಂಸುಂ** ಕೊಲ್ಲಲಿಚ್ಛಿಸುವ **ತಂ** ಪರೀಕ್ಷಿತನನ್ನು **ಅಭಿಪ್ರೇತ್ಯ** ನೋಡಿ (ತಿಳಿದು) **ನೃಪಲಾಂಛನಂ** ರಾಜಚಿನ್ಹೆಯನ್ನು **ವಿಹಾಯ** ತ್ಯಜಿಸಿ **ಭಯವಿಹ್ವಲಃ** ಭಯಕಾತರನಾಗಿ **ತತ್ಪಾದಮೂಲಂ** ಆ ಪರೀಕ್ಷಿದ್ರಾಜನ ಪಾದಗಳನ್ನು **ಶಿರಸಾ ಸಮಗಾತ್** ನಮಸ್ಕರಿಸಿದನು.(ಸಾಷ್ಟಾಂಗ ನಮಸ್ಕಾರ ಮಾಡಿದನು)

**ಪತಿತಂ ಪಾದಯೋರ್ವೀರಃ ಕೃಪಯಾ ದೀನವತ್ಸಲಃ ।**
**ಶರಣ್ಯೋ ನಾವಧೀತ್ ಶ್ಲೋಕ್ಯ ಆಹ ಚೇದಂ ಹಸನ್ನಿವ ॥೩೦॥**

**ವೀರಃ** ಸಮರ್ಥನಾದ **ದೀನವತ್ಸಲಃ** ದುಃಖಿತರಲ್ಲಿ ವಾತ್ಸಲ್ಯವುಳ್ಳ **ಶರಣ್ಯಃ** ಮೊರೆಹೊಂದಲು ಯೋಗ್ಯರಾದ **ಶ್ಲೋಕ್ಯಃ** ಒಳ್ಳೆಯ ಕೀರ್ತಿಗೆ ಅರ್ಹನಾದ ಪರೀಕ್ಷಿತನು **ಪಾದಯೋಃ ಪತಿತಂ** ಕಾಲಿಗೆ ಬಿದ್ದ ಕಲಿಯನ್ನು **ಕೃಪಯಾ** ಕರುಣೆಯಿಂದ **ನ ಅವಧೀತ್** ಕೊಲ್ಲಲಿಲ್ಲ. **ಹಸನ್ ಇವ ಆಹ ಚ** ನಗುತ್ತ ಹೇಳಿದನೂ ಕೂಡ.

ರಾಜೋವಾಚ -

**ನ ತೇ ಗುಡಾಕೇಶಯಶೋಧರಾಣಾಂ**

**ಬದ್ಧಾಂಜಲೇರ್ಭೋರ್ಭಯಮಸ್ತಿ ಕಿಂಚಿತ್ ।**

**ನ ವರ್ತಿತವ್ಯಂ ಭವತಾ ಕಥಂಚಿತ್**

**ಕ್ಷೇತ್ರೇ ಮದೀಯೇ ತ್ವಮಧರ್ಮಬಂಧುಃ ॥೩೦॥**

**ಭೋ** ಎಲೋ ಕಲಿಯೇ **ಗುಡಾಕೇಶಯಶೋಧರಾಣಾಂ** ಅರ್ಜುನನ ಕೀರ್ತಿಧಾರಿಗಳಾದ ನಮಗೆ (ನಮ್ಮಿಂದ) **ಬದ್ಧಾಂಜಲೇಃ ತೇ** ಕೈ ಜೋಡಿಸಿದ ನಿನಗೆ **ಕಿಂಚಿತ್ ಭಯಂ ನ** ಯಾವ ಭಯವೂ ಇಲ್ಲ ಆದರೆ **ತ್ವಂ** ನೀನು **ಅಧರ್ಮಬಂಧುಃ** ಅಧರ್ಮವೇ ಬಂಧು ಆಗಿವುಳ್ಳವನು ಆದ್ದರಿಂದ **ಮದೀಯೇ ಕ್ಷೇತ್ರೇ** ನನ್ನ ದೇಹ ಆರಂಭಿಸಿ ಎಲ್ಲ ರಾಷ್ಟ್ರದಲ್ಲಿಯೂ **ಕಥಂಚಿತ್** ಯಾವ ಅಂಶದಿಂದಲೂ **ಭವತಾ** ನಿನ್ನಿಂದ **ನ ವರ್ತಿತವ್ಯಂ** ಇರಕೂಡದು.

**ಅಧರ್ಮಬಂಧುತ್ವ**

ಅಧರ್ಮಬಂಧುತ್ವವನ್ನೇ ಉಪಪಾದಿಸುವನು.

**ತ್ವಾಂ ವರ್ತಮಾನಂ ನರದೇವದೇಹೇ-**

**ಷ್ವನುಪ್ರವೃತ್ತೋಽಯಮಧರ್ಮಯೂಥಃ ।**

**ಲೋಭೋಽನೃತಂ ಚೌರ್ಯಮನಾರ್ಯಮಂಹೋ**

**ಜ್ಯೇಷ್ಠಾ ಚ ಮಾಯಾ ಕಲಹಶ್ಚ ದಂಭಃ ॥೩೧॥**

**ನರದೇವದೇಹೇಷು** ಧರ್ಮಪಾಲಕರಾದ ರಾಜರುಗಳ ದೇಹಗಳಲ್ಲಿ **ವರ್ತಮಾನಂ** ಇರುವ **ತ್ವಾಂ** ನಿನ್ನನ್ನು **ಅನು** ಅನಂತರ **ಲೋಭಃ** ಇನ್ನೊಬ್ಬರ ದ್ರವ್ಯ ಅಪೇಕ್ಷಿಸುವದು ಅಥವಾ ಸದ್ವಿನಿಯೋಗ ಮಾಡುವ ಪ್ರಸಂಗ ಬಂದಾಗಲೂ ತಮ್ಮ ಹಣ ಖರ್ಚು ಮಾಡದಿರುವದು **ಅನೃತಂ** ಸುಳ್ಳು **ಚೌರ್ಯಂ** ಕಳ್ಳತನ **ಅನಾರ್ಯಂ** ದೌರ್ಜನ್ಯವು **ಅಂಹಃ** ವಿಹಿತ ಕರ್ಮ ಮಾಡದೇ ನಿಷಿದ್ಧ ಕಾರ್ಯ ಮಾಡುವದರಿಂದ ಬಂದ ಪಾಪವು **ಜ್ಯೇಷ್ಠಾ** ದಾರಿದ್ರವು **ಮಾಯಾ** ಕಪಟವು **ಕಲಹಃ** ಜಗಳವು **ದಂಭಃ** ಗರ್ವವು **ಅಯಂ** ಮೇಲೆ ಹೇಳಿದ **ಅಧರ್ಮಯೂಥಃ** ಅಧರ್ಮ ಸಮೂಹವು **ಯತಃ** ಯಾವಕಾರಣ **ಪ್ರವೃತ್ತಃ ಭವತಿ** ಪ್ರಾರಂಭವಾಗುವುದು ಆದಕಾರಣ **ಅಧರ್ಮಬಂಧುಃ** ಪಾಪ ಪ್ರವರ್ತಕನು.

**ನ ವರ್ತಿತವ್ಯಂ ತದಧರ್ಮಬಂಧೋ**
**ಧರ್ಮೇಣ ಸತ್ಯೇನ ಚ ವರ್ತಿತವ್ಯೇ ।**
**ಬ್ರಹ್ಮಾವರ್ತೇ ಯತ್ರ ಯಜಂತಿ ಯಜ್ಞೈಃ**
**ಯಜ್ಞೇಶ್ವರಂ ಬ್ರಹ್ಮವಿತಾನಯಜ್ಞಾಃ** ॥೩೨॥

**ಯತ್** ಯಾವ ಕಾರಣದಿಂದ ನೀನಿದ್ದಕಡೆ ಈ ಎಲ್ಲ ಅಧರ್ಮವೂ ಇರುವುದೋ **ತತ್** ಆ ಕಾರಣದಿಂದ **ಅಧರ್ಮಬಂಧೋ** ಅಧರ್ಮಬಂಧುವಾದ ಕಲಿಯೇ **ಯತ್ರ** ಯಾವ ಪ್ರದೇಶದಲ್ಲಿ **ಬ್ರಹ್ಮವಿತಾನಯಜ್ಞಾಃ** ವೇದಾಧ್ಯಯನ ಚರು ಪುರೋಡಾಶ ಹೋಮರೂಪವಾದ ವಿಸ್ತಾರವಾದ ಯಜ್ಞಗಳನ್ನು ಮಾಡುವ ಋಷಿಗಳು **ಯಜ್ಞೈಃ** ಯಜ್ಞಗಳಿಂದ **ಯಜ್ಞೇಶ್ವರಂ** ಯಜ್ಞಕ್ಕೆ ನಿಯಾಮಕನಾದ ಶ್ರೀಹರಿಯನ್ನು **ಯಜಂತಿ** ಯಾಗದಿಂದ ಪೂಜಿಸುವರೋ **ತತ್ರ** ಅಂತಹ **ಧರ್ಮೇಣ** ಧರ್ಮದಿಂದಲೂ **ಸತ್ಯೇನ** ಸತ್ಯದಿಂದಲೂ **ವರ್ತಿತವ್ಯಂ** ಇರಬೇಕಾದ **ಬ್ರಹ್ಮಾವರ್ತೇ** ಹಿಮವತ್‌ಪರ್ವತ ಮತ್ತು ವಿಂಧ್ಯಪರ್ವತಗಳ ನಡುವಣ ಪುಣ್ಯಭೂಮಿಯಲ್ಲಿ **ನ ವರ್ತಿತವ್ಯಮ್** ನಿನ್ನಿಂದ ಇರಲಾಗದು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ 'ಬ್ರಹ್ಮವಿತಾನಯಜ್ಞಾಃ' ಎಂಬ ಶಬ್ದಕ್ಕೆ ಸರಿಯಾದ ಅರ್ಥವಾಗುವದಿಲ್ಲ. ಅದಕ್ಕೆ ವ್ಯಾಖ್ಯಾನಿಸುವರು.

ಬ್ರಹ್ಮಯಜ್ಞಾ ವಿತಾನಯಜ್ಞಾಶ್ಚ ।

ಪಾರ್ವತ್ಯಾದಿಗಳನ್ನು ಆರಂಭಮಾಡಿ ಬ್ರಹ್ಮಾದಿದೇವತೆಗಳವರೆಗೆ ನಾಶೋತ್ಪತ್ತಿಗಳನ್ನು ಚಿಂತಿಸುವವರು ಅಥವಾ ಸ್ವಾಧ್ಯಾಯವೆಂಬ ಜ್ಞಾನಯಜ್ಞವುಳ್ಳವರು ಬ್ರಹ್ಮಯಜ್ಞವುಳ್ಳವರು ಮತ್ತು ಪುರೋಡಾಶಾದಿದ್ರವ್ಯವಿಸ್ತಾರದಿಂದ ಯಜ್ಞಮಾಡುವವರು ವಿತಾನಯಜ್ಞರು.

**ಯಸ್ಮಿನ್ ಪರಿರ್ಭಗವಾನೀಜ್ಯಮಾನ**
**ಇಷ್ಟಾತ್ಮಮೂರ್ತಿರ್ಯಜತಾಂ ಶಂ ತನೋತಿ ।**
**ಕಾಮಾನಮೋಘಾನ್ ಸ್ಥಿರಜಂಗಮಾನಾಮ್**
**ಅಂತರ್ಬಹಿರ್ವಾಯುರಿವೇಶ ಆತ್ಮಾ** ॥೩೩॥

**ಯಸ್ಮಿನ್** ಯಾವ ಬ್ರಹ್ಮಾವರ್ತದಲ್ಲಿ **ಭಗವಾನ್** ಐಶ್ವರ್ಯಶಾಲಿಯಾದ **ಇಷ್ಟಾತ್ಮಮೂರ್ತಿಃ** ಇಚ್ಛೆಯಿಂದ ಸ್ವೀಕರಿಸಿದ ಸ್ವರೂಪಭೂತವಾದ ದೇಹವುಳ್ಳ **ವಾಯು** **ಇವ** ವಾಯುವಿನಂತೆ **ಸ್ಥಿರಜಂಗಮಾನಾಂ** ಚರಾಚರ ಪದಾರ್ಥಗಳ **ಅಂತಃ ಬಹಿಃ** ಒಳಗೂ ಹೊರಗೂ **ಆತ್ಮಾ** ವ್ಯಾಪ್ತನಾದ **ಈಶಃ** ಪ್ರೇರಕನಾದ **ಇಜ್ಯಮಾನಃ** ಪೂಜಿಸಲ್ಪಡುವ **ಹರಿಃ** ಶ್ರೀಹರಿಯು **ಯಜತಾಂ** ಯಜ್ಞಮಾಡುವವರಿಗೆ **ಶಂ ತನೋತಿ** ಸುಖವನ್ನುಂಟುಮಾಡುವನು **ಅಮೋಘಾನ್ ಕಾಮಾನ್ ತನೋತಿ** ಅಭಿಲಾಷೆಗಳನ್ನು ಪೂರೈಸುವನು.

*ಭಾಗವತತಾತ್ಪರ್ಯ -*

ಇಷ್ಟಾಮೂರ್ತಿಶಬ್ದವನ್ನು ವ್ಯಾಖ್ಯಾನಿಸುವರು.

ಇಷ್ಟಾತ್ಮಮೂರ್ತಿರಿಚ್ಛಾತನುಃ ।

ಸ್ವೇಚ್ಛೆಯಿಂದ ಗೃಹೀತವಾದ ಸ್ವರೂಪದೇಹವುಳ್ಳವನು ಎಂದರ್ಥ.

**ಪರೀಕ್ಷಿತೈವಮಾದಿಷ್ಟಃ ಸ ಕಲಿರ್ಜಾತವೇಪಥುಃ ।**
**ತಮುದ್ಯತಾಸಿಮಾಹೇದಂ ದಂಡಪಾಣಿಮಿವೋದ್ಯತಮ್ ॥೩೪॥**

**ಪರೀಕ್ಷಿತಾ** ಪರೀಕ್ಷಿತರಾಜನಿಂದ **ಏವಂ** ಈರೀತಿ **ಆದಿಷ್ಟಃ** ಆಜ್ಞಪ್ತನಾದ **ಸಃ ಕಲಿಃ** ಆ ಕಲಿಯು **ಜಾತವೇಪಥುಃ** ನಡುಕ ಹುಟ್ಟಿದವನಾಗಿ **ದಂಡಪಾಣಿಂ ಇವ** ಯಮನಂತೆ **ಉದ್ಯತಂ** ಕೊಲ್ಲಲುದ್ಯುಕ್ತನಾದ **ಉದ್ಯತಾಸಿಂ** ಖಡ್ಗವನ್ನೆತ್ತಿದ **ತಂ** ಪರೀಕ್ಷಿತನನ್ನು ಕುರಿತು **ಇದಂ ಆಹ** ಮುಂದೆ ಹೇಳುವ ಮಾತನ್ನು ಹೇಳಿದನು.

**ಯತ್ರ ಕ್ವ ವಾಥ ವತ್ಸ್ಯಾಮಿ ಸಾರ್ವಭೌಮ ತವಾಜ್ಞಯಾ ।**
**ಲಕ್ಷಯೇ ತತ್ರ ತತ್ರಾಪಿ ತ್ವಾಮಾತ್ತೇಷು ಶರಾಸನಮ್ ॥೩೫॥**

**ಹೇ ಸಾರ್ವಭೌಮ** ರಾಜನೇ **ತವ ಆಜ್ಞಯಾ** ನಿನ್ನ ಆಜ್ಞೆಯಂತೆ **ಯತ್ರ ಕ್ವ ವಾ** ಬ್ರಹ್ಮಾವರ್ತ ದೇಶವನ್ನು ಬಿಟ್ಟು ಬೇರೆ ಎಲ್ಲಿ ಯಾದರೂ **ಅಹಂ ವತ್ಸ್ಯಾಮಿ** ಇರುವೆನು ಆದರೆ **ತತ್ರ ತತ್ರಾಪಿ** ಅಲ್ಲಲ್ಲಿಯೂ **ಆತ್ತೇಷು ಶರಾಸನಂ** ಧನುರ್ಬಾಣಗಳನ್ನು ಸ್ವೀಕರಿಸಿದ **ತ್ವಾಮೇವ ಲಕ್ಷಯೇ** ನಿನ್ನನ್ನೇ ಕಾಣುವೆನು ಅಲ್ಲಿ ನೀನು ನನ್ನನ್ನು ಕೊಲ್ಲಲು ಬರುವವನೇ ಎಂದು ಭಾವ.

**ತನ್ಮೇ ಧರ್ಮಭೃತಾಂ ಶ್ರೇಷ್ಠ ಸ್ಥಾನಂ ನಿರ್ದೇಷ್ಟುಮರ್ಹಸಿ ।**
**ಯತ್ರೈವ ನಿಯತೋ ವತ್ಸ್ಯ ಆತಿಷ್ಠಂಸ್ತೇಽನುಶಾಸನಮ್ ॥೩೬॥**

**ತತ್** ಆದ್ದರಿಂದ **ಧರ್ಮಭೃತಾಂ ಶ್ರೇಷ್ಠ** ಧರ್ಮವಂತರಲ್ಲಿ ಶ್ರೇಷ್ಠನೇ **ತೇ** ನಿನ್ನ **ಅನುಶಾಸನಂ** ಆಜ್ಞೆಯನ್ನು **ಆತಿಷ್ಠನ್** ಪಾಲಿಸುತ್ತ **ಯತ್ರ** ಎಲ್ಲಿ **ನಿಯತೋ ವತ್ಸ್ಯೇ** ನಿಶ್ಚಲವಾಗಿ ಇರಬಲ್ಲೆನೋ **ತತ್** ಅಂಥ **ಸ್ಥಾನಂ** ಸ್ಥಳವನ್ನು **ಮೇ** ನನಗೆ **ನಿರ್ದೇಷ್ಟುಂ ಅರ್ಹಸಿ** ಆಜ್ಞಾಪಿಸಲರ್ಹನಾಗಿರುವಿ.

ಸೂತ ಉವಾಚ -

**ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।**
**ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥೩೮॥**

ದ್ಯೂತದಲ್ಲಿ ಅನೃತ, ಪಾನದಲ್ಲಿ ಮದ, ಸ್ತ್ರೀಯರಲ್ಲಿ ಸಂಗವೆಂಬ ಕಾಮ, ಹಿಂಸಾದಲ್ಲಿ ನಿರ್ದಯ ಎಂಬ ಸ್ಮಯ, ಹೀಗೆ ನಾಲ್ಕು ಒಂದೆಡೆಯಲ್ಲಿವೆಯೋ ಅಂಥ ಸ್ಥಾನವನ್ನು ಕೊಡು ಎಂದು ಪುನಃ ಕಲಿಯು ಕೇಳಿದಾಗ ಹೀಗೆ **ಅಭ್ಯರ್ಥಿತಃ** ಕಲಿಯಿಂದ ಪ್ರಾರ್ಥಿತನಾಗಿ **ತದಾ** ಆಗ **ತಸ್ಮೈ** ಆ **ಕಲಯೇ** ಕಲಿಗೆ **ಸ್ಥಾನಾನಿ** ಸ್ಥಳಗಳನ್ನು **ದದೌ** ಕೊಟ್ಟನು **ದ್ಯೂತಂ** ಜೂಜು **ಪಾನಂ** ಮದ್ಯಪಾನ **ಸ್ತ್ರಿಯಃ** ಸ್ತ್ರೀಯರು **ಸೂನಾಃ** ಪ್ರಾಣಿಹಿಂಸಾ **ಯತ್ರ** ಯಾವ ಸ್ಥಾನದಲ್ಲಿ **ಚತುರ್ವಿಧಃ ಅಧರ್ಮಃ** ಸ್ಮಯ, ಸಂಗ, ಮದ, ಅನೃತವೆಂಬ ನಾಲ್ಕು ಅಧರ್ಮಗಳಿರುವವೋ ಆ ವಿಧವಾದ ಸ್ಥಾನಗಳನ್ನಿತ್ತನು.

**ಪುನಶ್ಚ ಯಾಚಮಾನಾಯ ಜಾತರೂಪಮದಾತ್ ಪ್ರಭುಃ ।**
**ತತೋಽನೃತಂಮದಃಕಾಮೋರಜೋವೈರಂಚ ಪಂಚಮಮ್ ॥೩೯॥**

**ಪುನಃ** ಮತ್ತೆ **ಯಾಚಮಾನಾಯ** ಬೇಡುತ್ತಿರುವ ಕಲಿಗೆ **ಜಾತರೂಪಂ** ಚಿನ್ನವನ್ನು **ಪ್ರಭುಃ** ಪರೀಕ್ಷಿತನು **ಅದಾತ್** ಕೊಟ್ಟನು **ತತಃ** ಆ ಚಿನ್ನದಿಂದ **ಕಾಮಃ** ಸಂಗವೆನಿಸುವ ಕಾಮವು **ರಜಃ** ರಾಗ ಮೂಲಕವಾದ ಹಿಂಸೆಯು **ಅನೃತಂ** ಸುಳ್ಳು **ಮದಃ** ಮದವು **ಪಂಚಮಂ** ಐದನೆಯದಾದ **ವೈರಂ ಚ** ದ್ವೇಷವೂ ಉಂಟಾಗುವವು.

**ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ।**
**ಔತ್ತರೇಯೇಣ ದತ್ತಾನಿ ನ್ಯವಸತ್ತನ್ನಿದೇಶಕೃತ್ ॥೪೦॥**

**ಅಧರ್ಮಪ್ರಭವಃ** ಅಧರ್ಮಜನಕನಾದ **ಕಲಿಃ** ಕಲಿಯು **ತನ್ನಿದೇಶಕೃತ್** ರಾಜನ ಆಜ್ಞೆಯನ್ನು ಪರಿಪಾಲಿಸುವವನಾಗಿ **ಔತ್ತರೇಯೇಣ** ಪರೀಕ್ಷಿತನಿಂದ **ದತ್ತಾನಿ** ಕೊಡಲ್ಪಟ್ಟ **ಅಮೂನಿ ಪಂಚ ಸ್ಥಾನಾನಿ** ದ್ಯೂತ ಮುಂತಾದ ಐದು ಸ್ಥಳಗಳಲ್ಲಿ **ನ್ಯವಸತ್** ವಾಸ ಮಾಡಿದನು.

**ಅಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್ ।**
**ವಿಶೇಷತೋ ಧರ್ಮಶೀಲೋ ರಾಜಾ ಲೋಕಪತಿರ್ಗುರುಃ ॥೪೦॥**

**ಅಥ** ಆದ್ದರಿಂದ **ಬುಭೂಷುಃ ಪುರುಷಃ** ಮುಕ್ತನಾಗಲಿಚ್ಛಿಸುವವನು **ಕ್ವಚಿತ್** ಯಾವ ಕಾಲದಲ್ಲಿಯೂ **ಏತಾನಿ** ಈ ದ್ಯೂತಾದಿಗಳನ್ನು **ನ ಸೇವೇತ** ಸೇವಿಸಬಾರದು ಆದರಲ್ಲಿಯೂ **ವಿಶೇಷತಃ** ವಿಶೇಷವಾಗಿ **ಧರ್ಮಶೀಲಃ** ಧರ್ಮ ಮಾಡುವ ಸ್ವಭಾವವುಳ್ಳ **ಲೋಕಪತಿಃ ರಾಜಾ** ಜಗತ್ತನ್ನಾಳುವ ರಾಜನು **ಗುರುಃ** ಧರ್ಮೋಪದೇಶ ಮಾಡುವವನು **ನ ಸೇವೇತ** ಇವುಗಳನ್ನು ಮಾಡಬಾರದು.

*ಭಾಗವತತಾತ್ಪರ್ಯ -*

ವೇದ ವಿಹಿತವಾದ ಪಾನ, ಸ್ತ್ರೀ, ಸೂನಾಗಳು, ಧರ್ಮಸಾಧನವಾದುದರಿಂದ ಇವುಗಳನ್ನು ಸೇವಿಸಬಾರದು ಎಂದು ಹೇಳಿದುದು ಹೇಗೆ ಎಂದರೆ ವೇದದ ಅಭಿಪ್ರಾಯವನ್ನು ಸ್ಪಷ್ಟಪಡಿಸುವರು

ವಿಹಿತಾತಿರೇಕೇಣ ನ ಸೇವೇತ ।

ವಿಹಿತವಾದುದನ್ನು ಬಿಟ್ಟು ಹೆಚ್ಚಿನದನ್ನು ಸೇವಿಸಬಾರದೆಂದರ್ಥ.

**ವೃಷಸ್ಯ ನಷ್ಟಾಂಸ್ತ್ರೀನ್ ಪಾದಾನ್ ತಪಃ ಶೌಚಂ ದಯಾಮಿತಿ ।**
**ಪ್ರತಿಸಂದಧ ಆಶ್ವಾಸ್ಯ ಮಹೀಂ ಚ ಸಮವರ್ಧಯತ್ ॥೪೧॥**

**ವೃಷಸ್ಯ** ಧರ್ಮನ **ನಷ್ಟಾನ್** ನಾಶವಾದ **ತಪಃ ಶೌಚಂ ದಯಾಂ ಇತಿ ತ್ರೀನ್ ಪಾದಾನ್** ತಪಸ್ಸು ಶುದ್ಧಿ ದಯೆಗಳೆಂಬ ಮೂರು ಪಾದಗಳನ್ನು **ಪ್ರತಿಸಂದಧೇ** ಅಭಿವೃದ್ಧಿಪಡಿಸಿದನು (ತಪಆದಿಗಳನ್ನು ಪ್ರವರ್ತಿಸಿದನೆಂದರ್ಥ)

**ಸ ಏಷ ಏತರ್ಹ್ಯಧ್ಯಾಸ್ತ ಆಸನಂ ಪಾರ್ಥಿವೋಚಿತಮ್ ।**
**ಪಿತಾಮಹೇನೋಪನ್ಯಸ್ತಂ ರಾಜ್ಞಾರಣ್ಯಂ ವಿವಿಕ್ಷತಾ ॥೪೨॥**

**ಸಃ ಏಷಃ** ಆ ಕಲಿಯನ್ನು ನಿಗ್ರಹ ಮಾಡಿದ ಈ ಪರೀಕ್ಷಿತನು **ಏತರ್ಹಿ** ಈಗ (ಸಮೀಪಕಾಲದಲ್ಲಿ) **ಅರಣ್ಯಂ** ಬಂದವನನ್ನು ರಕ್ಷಿಸುವದರಿಂದ ಅರಣ್ಯವೆನಿಸುವ ಅಡವಿಯನ್ನು **ವಿವಿಕ್ಷತಾ** ಪ್ರವೇಶಿಸಲಚ್ಛಿಸುವ **ಪಿತಾಮಹೇನ** ಅಜ್ಜನಾದ **ರಾಜ್ಞಾ** ಧರ್ಮರಾಜನಿಂದ **ಉಪನ್ಯಸ್ತಂ** ಕೊಡಲ್ಪಟ್ಟ **ಪಾರ್ಥಿವೋಚಿತಂ ಆಸನಂ ಅಧ್ಯಾಸ್ತೇ** ರಾಜರಿಗೆ ಉಚಿತವಾದ ಸಿಂಹಾಸನದಲ್ಲಿ ಇರುವನು ಆದ್ದರಿಂದ ಈಗ ನಿಮ್ಮ ಸತ್ರ ನಡೆದಿದೆಯಂದು ಭಾವ.

**ಆಸ್ತೇಽಧುನಾ ಸ ರಾಜರ್ಷಿಃ ಕೌರವೇಂದ್ರಃ ಶ್ರಿಯೋಲ್ಲಸನ್ ।**
**ಗಜಾಹ್ವಯೇ ಮಹಾಭಾಗಶ್ಚಕ್ರವರ್ತೀ ಬೃಹಚ್ಛ್ರವಾಃ ॥೪೩॥**

**ಬೃಹಚ್ಛ್ರವಾಃ** ಮಹಾಕೀರ್ತಿಶಾಲಿಯಾದ **ಚಕ್ರವರ್ತೀ** ಸಮಸ್ತ ಭೂಮಂಡಲಕ್ಕೆ ಅಧಿಪತಿಯಾದ **ಮಹಾಭಾಗಃ** ಬಹುಪುಣ್ಯವಂತನಾದ ಐಶ್ವರ್ಯವಂತನಾದ **ಕೌರವೇಂದ್ರಃ** ಕುರುಕುಲಕ್ಕೆ ಶ್ರೇಷ್ಠನಾದ **ಸಃ ರಾಜರ್ಷಿಃ** ಆ ಪರೀಕ್ಷಿತನು **ಶ್ರಿಯಾ ಉಲ್ಲಸನ್** ಕಾಂತಿಯಿಂದ(ಸಂಪತ್ತಿನಿಂದ) ಶೋಭಿಸುತ್ತಾ **ಗಜಾಹ್ವಯೇ** ಹಸ್ತಿನಾಪುರದಲ್ಲಿ **ಅಧುನಾ ಆಸ್ತೇ** (ಸಮೀಪದಲ್ಲಿಯೇ) ಇಲ್ಲಿಯೇ ಇದ್ದನು.

**ಇತ್ಥಂ ಭೂತಾನುಭಾವೋಽಯಮಭಿಮನ್ಯುಸುತೋ ನೃಪಃ ।**
**ಯಸ್ಯ ಪಾಲಯತಃ ಕ್ಷೋಣೀಂ ಯೂಯಂ ಸತ್ರಾಯ ದೀಕ್ಷಿತಾಃ ॥೪೪॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ಸಪ್ತದಶೋಽಧ್ಯಾಯಃ ॥

**ಯಸ್ಯ** ಯಾವನ **ಕ್ಷೋಣೀಂ** ಭೂಮಿಯನ್ನು **ಪಾಲಯತಃ ಸತಃ** ಆಳುತ್ತಿರುವಾಗ **ಯೂಯಂ** ನೀವು **ಸತ್ರಾಯ ದೀಕ್ಷಿತಃ** ಸತ್ರದಲ್ಲಿ ದಿಕ್ಷೆ ಸ್ವೀಕರಿಸಿದಿರೋ **ಅಯಂ** ಈ **ಅಭಿಮನ್ಯುಸುತಃ** ಅಭಿಮನ್ಯು ಪುತ್ರನಾದ **ನೃಪಃ** ಪರೀಕ್ಷಿತರಾಜನು **ಇತ್ಥಂ ಭೂತಾನುಭಾವಃ** ಕಲಿಯನ್ನು ಬಂಧಿಸುವ ಶಕ್ತಿಯುಳ್ಳವನು.

**ವಿಶೇಷ :-** 'ಯಸ್ಯ ಪಾಲಯತಕ್ಷೋಣೀ' ಎಂಬುದರಿಂದ ಪರೀಕ್ಷಿತನು ಬದುಕಿರುವಾಗಲೇ ಶೌನಕರ ಸತ್ರ ಆರಂಭವಾಗಿತ್ತು. ಸೂತರು ಸತ್ರಕ್ಕೆ ಬಂದುದು ಮಾತ್ರ ಪರೀಕ್ಷಿತನ ಮರಣಾನಂತರವೆ. ಏಕೆಂದರೆ ರಾಜನು ಪ್ರಾಯೋಪವೇಶಕ್ಕೆ ಕುಳಿತಾಗ ಶುಕಾಚಾರ್ಯರು ಉಪದೇಶಿಸಿದ ಪುರಾಣವನ್ನು ನಾನು ಕೇಳಿರುವೆನು ಅದನ್ನೇ ನಿನಗೆ ಹೇಳುವೆನು ಎಂದು ಹಿಂದೆ ಸೂತರು ಹೇಳಿದ್ದಾರೆ.

ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಅಷ್ಟಾದಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಪರೀಕ್ಷಿತನು ಒಮ್ಮೆ ಬೇಟೆಯಾಡಲು ಹೋದಾಗ ಬಳಲಿ ಬಾಯಾರಿದ. ಎಲ್ಲಿಯೂ ನೀರು ಕಾಣದೇ ಶಮೀಕಋಷಿಗಳ ಆಶ್ರಮವನ್ನು ಪ್ರವೇಶಿಸಿದ. ಮುನಿ ಧ್ಯಾನದಲ್ಲಿದ್ದ ಕಾರಣ ರಾಜನಿಗೆ ಗೌರವವನ್ನು ಸಲ್ಲಿಸಲಿಲ್ಲ. ಕಣ್ಣು ತೆಗೆದು ನೋಡಲೂ ಇಲ್ಲ. ಋಷಿಗಳು ತನ್ನನ್ನು ತಿರಸ್ಕಾರಮಾಡುತ್ತಿದ್ದಾರೆ ಎಂದು ತಪ್ಪು ಭಾವಿಸಿ ಕುಪಿತನಾಗಿ ರಾಜ ಅಲ್ಲಿಯೇ ಇದ್ದ ಸತ್ತ ಹಾವನ್ನು ಋಷಿಯ ಕೊರಳಿಗೆ ಹಾಕಿ ಅಲ್ಲಿಂದ ಹೊರಟು ಬಿಟ್ಟ. ದಾರಿಯಲ್ಲಿ ಅವನಿಗೆ ತಾನು ಮಾಡಿದ್ದು ತಪ್ಪು ಎಂದು ಅನಿಸಿತು. ಇತ್ತ ಶಮೀಕ ಋಷಿಗಳ ಮಗನಾದ ಬಾಲಕ ಶೃಂಗಿಯು ರಾಜ ತಮ್ಮ ತಂದೆಗೆ ಮಾಡಿದ ಅಪಚಾರವನ್ನು ಕೇಳಿ ಕೋಪದಿಂದ ಶಪಿಸಿದ. ಇಂದಿಗೆ ಏಳು ದಿನದಲ್ಲಿ ತಕ್ಷಕ ಕಚ್ಚಿ ಪರೀಕ್ಷಿತ ಸಾಯಲಿ ಎಂದು. ಋಷಿಕುಮಾರನ ಶಾಪದಿಂದ ಧೃತಿಗೆಡದೇ ಭಾಗವತ ಶ್ರವಣದಿಂದ ಆತ್ಮೋದ್ಧಾರಮಾಡಿಕೊಂಡ.

ಈ ಅಧ್ಯಾಯದಲ್ಲಿ ಪರೀಕ್ಷಿತನ ಮರಣಕ್ಕೆ ನಿಮಿತ್ತ ತೇಜಸ್ವಿಯಾದ ಬ್ರಾಹ್ಮಣಕುಮಾರನ ಶಾಪ. ಬ್ರಾಹ್ಮಣಾಪರಾಧ ನಿಮಿತ್ತಕವಾಗಿ ಪರೀಕ್ಷಿತನು ಆ ಕುಮಾರನಿಂದ ಶಾಪವನ್ನು ಸ್ವೀಕರಿಸಿದ. ಶ್ರೀಕೃಷ್ಣನ ಅನುಗ್ರಹದಿಂದ ಅವನ ಮನಸ್ಸಿಗೆ ಯಾವ ವಿಧವಾದ ದುಃಖವೆನಿಸಲಿಲ್ಲ. ಕಿಂತು ಆ ಸಂದರ್ಭದಲ್ಲಿ ಪರೀಕ್ಷಿತರಾಜನು ಮೋಕ್ಷಕ್ಕೆ ಸಾಧನವಾದ ಜ್ಞಾನಾದಿಗಳನ್ನೇ ಶುಕಾಚಾರ್ಯರಿಂದ ಸಂಪಾದಿಸಿದನು ಎಂದು ಹೇಳುವರು.

**ಪರೀಕ್ಷಿತನಿಗೆ ಬ್ರಾಹ್ಮಣಕುಮಾರನ ಶಾಪ**

**ಸೂತ ಉವಾಚ -**

**ಯೋ ವೈ ದ್ರೌಣ್ಯಸ್ತ್ರವಿಪ್ಲುಷ್ಟೋ ನ ಮಾತುರುದರೇ ಮೃತಃ ।**
**ಅನುಗ್ರಹಾದ್ಭಗವತಃ ಕೃಷ್ಣಸ್ಯಾದ್ಭುತಕರ್ಮಣಃ ॥೧॥**

**ಯಃ** ಯಾವನು **ಅದ್ಭುತಕರ್ಮಣಃ** ಆಶ್ಚರ್ಯವನ್ನುಂಟುಮಾಡುವ **ಭಗವತಃ** ಐಶ್ವರ್ಯಶಾಲಿಯಾದ **ಕೃಷ್ಣಸ್ಯ** ಶ್ರೀಕೃಷ್ಣನ **ಅನುಗ್ರಹಾತ್** ಅನುಗ್ರಹದಿಂದ **ದ್ರೌಣ್ಯಸ್ತ್ರವಿಪ್ಲುಷ್ಟಃ** ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಸುಟ್ಟರೂ **ಮಾತುಃ** ತಾಯಿಯ **ಉದರೇ** ಹೊಟ್ಟೆಯಲ್ಲಿ **ನ ಮೃತಃ** ಸಾಯಲಿಲ್ಲ.

**ಬ್ರಹ್ಮಶಾಪೋತ್ಥಿತಾದ್ಯಸ್ತು ತಕ್ಷಕಾತ್ಪ್ರಾಣವಿಪ್ಲವೇ ।**
**ನ ಸಮ್ಮುಮೋಹೋರುಭಯಾದ್ಭಗವತ್ಯರ್ಪಿತಾಶಯಃ ॥೨॥**

**ಯಃ ತು** ಯಾವನಾದರೂ **ಭಗವತ್ಯರ್ಪಿತಾಶಯಃ** ಶ್ರೀಕೃಷ್ಣನಲ್ಲಿ ಮನಸಿಟ್ಟವನಾಗಿ **ಬ್ರಹ್ಮಶಾಪೋತ್ಥಿತಾತ್** ಬ್ರಾಹ್ಮಣನ ಶಾಪದಿಂದ ಪ್ರೇರಿತನಾದ ತಕ್ಷಕಸರ್ಪದಿಂದ **ಪ್ರಾಣವಿಪ್ಲವೇ** ಪ್ರಾಣ ಹೋಗುವ ಕಾಲ ಬಂದರೂ **ಉರುಭಯಾತ್** ಬಹಳವಾದ ಭಯವುಳ್ಳ ಮರಣದಿಂದ **ನ ಸಮ್ಮುಮೋಹ** ಭ್ರಾಂತನಾಗಲಿಲ್ಲ.

**ಉತ್ಸೃಜ್ಯ ಸರ್ವತಃ ಸಂಗಂ ವಿಜ್ಞಾನಾರ್ಜಿತಸಂಸ್ಥಿತಿಃ ।**
**ವೈಯಾಸಕೇರ್ಜಹೌ ಶಿಷ್ಯೋ ಗಂಗಾಯಾಂ ಸ್ವಕಲೇವರಮ್ ॥೩॥**

ಮೋಹಗೊಳ್ಳಲಿಲ್ಲ ಅಷ್ಟೇ ಅಲ್ಲ ಕಿಂತು **ಸರ್ವತಃ ಸಂಗಂ** ಎಲ್ಲ ವಿಷಯಗಳ ಸ್ನೇಹವನ್ನು **ಉತ್ಸೃಜ್ಯ** ಬಿಟ್ಟು **ವೈಯಾಸಕೇಃ ಶಿಷ್ಯಃ ಭೂತ್ವಾ** ಶುಕಾಚಾರ್ಯರ ಶಿಷ್ಯನಾಗಿ ಅವರ ಉಪದೇಶದಿಂದ ಪ್ರಾಪ್ತವಾದ **ವಿಜ್ಞಾನಾರ್ಜಿತಸಂಸ್ಥಿತಿಃ** ಬ್ರಹ್ಮಜ್ಞಾನದಿಂದ ಸಂಪಾದಿತವಾದ ವೈಕುಂಠವೆಂಬ ಸರಿಯಾದ ಸ್ಥಾನವುಳ್ಳವನಾಗಿ **ಗಂಗಾಯಾಂ** ಗಂಗಾನದಿಯಲ್ಲಿರುವ ಮನೆಯಲ್ಲಿ **ಸ್ವಕಲೇವರಂ** ತನ್ನ ದೇಹವನ್ನು **ಜಹೌ** ಬಿಟ್ಟನು.

*ಭಾಗವತತಾತ್ಪರ್ಯ-*

ಇಲ್ಲಿರುವ ವಿಜ್ಞಾನಪದಕ್ಕೆ ವಿವಕ್ಷಿತಾರ್ಥವನ್ನು ಪ್ರಮಾಣದಿಂದ ತಿಳಿಸುವರು.

ವಿಜ್ಞಾನಮಾತ್ಮಯೋಗ್ಯಂ ಸ್ಯಾತ್ ಜ್ಞಾನಂ ಸಾಧಾರಣಂ ಸ್ಮೃತಂ ॥

-ಇತಿ ಭಾಗವತ ತಂತ್ರೇ

ತನಗೆ ಯೋಗ್ಯವಾದ ಮುಕ್ತಿಯನ್ನು ಸಾಧಿಸುವದರಲ್ಲಿ ಸಮರ್ಥವಾದ ಬಿಂಬಾಪರೋಕ್ಷಜ್ಞಾನವು ವಿಜ್ಞಾನವೆನಿಸುತ್ತದೆ. ಎಲ್ಲ ಅಧಿಕಾರಿಗಳಿಗೆ ಸಾಧಾರಣವಾದ ಹರಿಸರ್ವೋತ್ತಮತ್ವಾದಿಜ್ಞಾನವು ಜ್ಞಾನವೆನಿಸುತ್ತದೆ ಎಂದು ಭಾಗವತತಂತ್ರದಲ್ಲಿದೆ.

ಇದೆಲ್ಲ ಆಶ್ಚರ್ಯವಲ್ಲವೆಂದು ಹೇಳುವರು.

**ನೋತ್ತಮಶ್ಲೋಕವಾರ್ತಾನಾಂ ಜುಷತಾಂ ತತ್ಕಥಾಮೃತಮ್ ।**
**ಸ್ಯಾತ್ಸಂಭ್ರಮೋಽಂತಕಾಲೇಽಪಿ ಸ್ಮರತಾಂ ತತ್ಪದಾಂಬುಜಮ್ ॥೪॥**

**ಉತ್ತಮಶ್ಲೋಕವಾರ್ತಾನಾಂ** ಶ್ರೀಹರಿಯ ವಾರ್ತೆಯೊಂದನ್ನೇ ಆಲಿಸುವ **ತತ್ಕಥಾಮೃತಂ ಜುಷತಾಂ** ಅವನ ಕಥಾಮೃತವನ್ನು ಸೇವಿಸುವ **ತತ್ಪದಾಂಬುಜಂ ಸ್ಮರತಾಂ** ಅವನ ಪಾದಕಮಲವನ್ನು ಧ್ಯಾನಿಸುವವರಿಗೆ **ಅಂತಕಾಲೇ ಅಪಿ** ಮರಣಕಾಲ ನಿಶ್ಚಿತವಾದರೂ **ಸಂಭ್ರಮಃ** ಮನಸ್ಸಿಗೆ ವ್ಯಥೆಯು **ನ ಸ್ಯಾತ್** ಆಗಲಾರದು.

ಕಲಿಯಿಂದ ವ್ಯಾಪ್ತವಾದ ಮನಸ್ಸುಳ್ಳ ಜ್ಞಾನಿಗಳಿಗೆ ಮರಣಸಮಯದಲ್ಲಿ ಮನಸ್ಸಿಗೆ ಖೇದ ಆಗದಿರುವದು ಹೇಗೆ ಎಂದರೆ ಹೇಳುವರು.

**ತಾವತ್ಕಲಿರ್ನ ಪ್ರಭವೇತ್ ಪ್ರವಿಷ್ಟೋಽಪೀಹ ಸರ್ವತಃ ।**
**ಯಾವದೀಶೋ ಮಹಾನುರ್ವ್ಯಾಮಾಭಿಮನ್ಯವ ಏಕರಾಟ್ ॥೫॥**

**ಯಾವತ್** ಎಲ್ಲಿಯವರೆಗೆ **ಅಭಿಮನ್ಯವಃ** ಅಭಿಮನ್ಯುಪುತ್ರನಾದ ಪರೀಕ್ಷಿತನು **ಮಹಾನ್ ಈಶಃ** ಸಪ್ತದ್ವೀಪದಿಂದ ಸಹಿತವಾದ ಭೂಮಿಗೆ ಅಧಿಪತಿಯು **ಏಕರಾಟ್** ಚಕ್ರವರ್ತಿಯಾಗಿ **ಉರ್ವ್ಯಾಂ ಆಸ್ತೇ** ಭೂಮಿಯಲ್ಲಿ ಇರುವನೋ **ತಾವತ್** ಅಲ್ಲಿಯವರೆಗೆ **ಇಹ** ಈ ಭೂಲೋಕದಲ್ಲಿ **ಸರ್ವತಃ** ಎಲ್ಲ ಕಡೆಗೆ **ಪ್ರವಿಷ್ಟೋಽಪಿ** ಪ್ರವೇಶಿಸಿದರೂ **ಕಲಿಃ ನ ಪ್ರಭವೇತ್** ಕಲಿಯು ತನ್ನ ಕಾರ್ಯ ಮಾಡಲು ಸಮರ್ಥನಾಗಲಾರ.

**ವಿಶೇಷ-**'ನ ವರ್ತಿತವ್ಯಂ ಭವತಾ' ಎಂಬ ಹಿಂದಿನ ಆಜ್ಞೆಗೂ ನಿನ್ನ ಸಾಮರ್ಥ್ಯವನ್ನು ದ್ಯೂತಾದಿಗಳಲ್ಲೇ ತೋರಿಸು ಎಲ್ಲ ಕಡೆ ಬೇಡವೆಂದೇ ಅರ್ಥ. ಆದ್ದರಿಂದ ವಿರೋಧವಿಲ್ಲ.

ಆಗ ಕಲಿ ಪ್ರವೇಶವೇ ಆಗಿರಲಿಲ್ಲವೆಂದೇಕೆ ಹೇಳಬಾರದು ಎಂದರೆ ಹೇಳುವರು.

**ಯಸ್ಮಿನ್ನಹನಿ ಯರ್ಹ್ಯೇವ ಭಗವಾನುತ್ಸಸರ್ಜ ಗಾಮ್ ।**
**ತದೈವೇಹಾನುವೃತ್ತೋಽಸಾವಧರ್ಮಪ್ರಭವಃ ಕಲಿಃ ॥೬॥**

**ಯಸ್ಮಿನ್ ಅಹನಿ** ಯಾವ ದಿನ **ಯರ್ಹಿ ಏವ** ಯಾವ ಕ್ಷಣದಲ್ಲಿ **ಗಾಂ** ಭೂಮಿಯನ್ನು **ಭಗವಾನ್** ಶ್ರೀಕೃಷ್ಣನು **ಉತ್ಸಸರ್ಜ** ತ್ಯಜಿಸಿದನೋ **ತದೈವ** ಆಗಲೇ **ಅಧರ್ಮಪ್ರಭವಃ** ಅಧರ್ಮಜನಕನಾದ **ಕಲಿಃ** ಕಲಿಯು **ಅನುವೃತ್ತಃ** ಪ್ರವೇಶ ಮಾಡಿದನು.

ಅಧರ್ಮಕಾರಣನಾದ ಕಲಿಯನ್ನು ಕೊಂದುಬಿಡಲಿಲ್ಲವೇಕೆ ಎಂದರೆ ಹೇಳುವರು.

**ನಾನುದ್ವೇಷ್ಟಿ ಕಲಿಂ ಸಮ್ರಾಟ್ ಸಾರಂಗ ಇವ ಸಾರಭುಕ್ ।**
**ಕುಶಲಾನ್ಯಾಶು ಸಿದ್ಧ್ಯಂತಿ ನೇತರಾಣಿ ಕೃತಾನಿ ಯತ್ ॥೭॥**

**ಸಾರಂಗ ಇವ** ಭ್ರಮರದಂತೆ **ಸಾರಕೃತಾನಿ ಭುಕ್** ಸಾರಗ್ರಾಹಿಯಾದ **ಸಮ್ರಾಟ್** ರಾಜನು **ಯತ್** ಯಾವ ಕಾರಣ **ಕೃತಾನಿ** ಮಾಡಿದ **ಕುಶಲಾನಿ** ಪುಣ್ಯಗಳು **ಆಶು** ಸ್ವಲ್ಪ ಅನುಷ್ಠಾನಮಾಡಿದರೂ **ಸಿಧ್ಯಂತಿ** ಮಹಾಫಲಕಾರಣವಾಗುವವು **ಇತರಾಣಿ** ಪಾಪಗಳು **ಆಶು ನ ಸಿದ್ಧ್ಯಂತಿ** ಬಹಳ ಮಾಡಿದರೂ ಸ್ವಲ್ಪ ಫಲಪ್ರದವಾಗುವವು. ಈ ಸಾರವನ್ನು ಅರಿತದ್ದರಿಂದ **ನ ಅನುದ್ವೇಷ್ಟಿ** ಸಂಪೂರ್ಣ ದ್ವೇಷಿಸಲಿಲ್ಲ (ಕೊಲ್ಲಲಿಲ್ಲ).

ದ್ವೇಷವಿಲ್ಲವೆಂದರೇ ಸ್ನೇಹ ಮಾಡಿದ ಎಂದರ್ಥವಾಗುವದು ಅದನ್ನೂ ಮಾಡಲಿಲ್ಲ. ಕಿಂತು ಉದಾಸೀನನಾಗಿ ಇದ್ದ ಎಂದು ಹೇಳುವರು.

**ಕಿಂ ನು ಬಾಲೇಷು ಶೂರೇಣ ಕಲಿನಾ ಶೂರಭೀರುಣಾ ।**
**ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತೇ ॥೮॥**

**ಬಾಲೇಷು** ಧೈರ್ಯ ಇಲ್ಲದವರಲ್ಲಿ **ಶೂರೇಣ** ಶೌರ್ಯ ತೋರಿಸುವ **ಶೂರಭೀರುಣಾ** ಧೀರರಿಗೆ ಹೆದರುವ **ಪ್ರಮತ್ತೇಷು ನೃಷು** ಜೋರಾಗಿರುವ ಜನರಲ್ಲಿ **ಅಪ್ರಮತ್ತಃ** ಸ್ವಯಂ ಸಾವಧಾನವಾಗಿರುವ ಇವನಿಂದ **ಕಿಂ ನು** ಏನಾದೀತು? ಏನೂ ಆಗಲಾರದು **ವೃಕಃ ಇವ ವರ್ತತೇ** ತೋಳದಂತಿರುವನು. (ಧರ್ಮಜ್ಞಾನಾದಿಗಳನ್ನು ವೃಣೋತೀತಿ ವೃಕಃ ನಾಶಗೊಳಿಸುವನು ಎಂದರ್ಥ)

**ಉಪವರ್ಣಿತಮೇತದ್ವಃ ಪುಣ್ಯಂ ಪಾರೀಕ್ಷಿತಂ ಮಯಾ ।**
**ವಾಸುದೇವಕಥೋಪೇತಮಾಖ್ಯಾನಂ ಯದಪೃಚ್ಛಥ ॥೯॥**

**ಯೂಯಂ** ನೀವು **ಯದಪೃಚ್ಛಥ** ಏನನ್ನು ಕೇಳಿದಿರೋ **ತತ್** ಆ **ವಾಸುದೇವಕಥೋಪೇತಂ** ಶ್ರೀಕೃಷ್ಣನ ಕಥೆಯಿಂದ ಕೂಡಿದ **ಪುಣ್ಯಂ** ಪುಣ್ಯಜನಕವಾದ **ಪಾರೀಕ್ಷಿತಂ** ಪರೀಕ್ಷಿತನ **ಆಖ್ಯಾನಂ** ಕಥೆಯನ್ನು **ವಃ** ನಿಮಗೆ **ಉಪವರ್ಣಿತಂ ಮಯಾ** ನನ್ನಿಂದ ಹೇಳಲ್ಪಟ್ಟಿದೆ.

**ಯಾಃ ಯಾಃ ಕಥಾಃ ಭಗವತಃ ಕಥನೀಯೋರುಕರ್ಮಣಃ ।**
**ಗುಣಕರ್ಮಾಶ್ರಯಾ ಪುಂಭಿಃ ಸೇವ್ಯಾಸ್ತಾಸ್ತಾ ಬುಭೂಷುಭಿಃ ॥೧೦॥**

**ಬುಭೂಷುಭಿಃ** ಮೋಕ್ಷೇಚ್ಛುಗಳಾದ **ಪುಂಭಿಃ** ಅಧಿಕಾರಿಗಳಿಂದ **ಯಾಃ ಯಾಃ** ಯಾವ ಯಾವ **ಕಥನೀಯೋರುಕರ್ಮಣಃ** ಅವಶ್ಯ ಹೇಳಲೇಬೇಕಾದ ಶ್ರೇಷ್ಠವಾದ ಕರ್ಮಗಳುಳ್ಳ **ಭಗವತಃ** ಭಗವಂತನ **ಗುಣಕರ್ಮಾಶ್ರಯಾಃ** ಗುಣಕರ್ಮಗಳಿಗೆ ಆಶ್ರಯವಾದ **ಕಥಾಃ** ಕಥೆಗಳುಂಟೋ **ತಾಃ** ಅವುಗಳು **ಸೇವ್ಯಾಃ** ಕೇಳಲ್ಪಡಬೇಕು.

ವಿಸ್ತಾರವಾಗಿ ಹೇಳುವದಕ್ಕಾಗಿ ಸೂತನನ್ನು ಆಶೀರ್ವಾದದಿಂದ ಅಭಿನಂದಿಸುವರು.

**ಋಷಯ ಊಚುಃ–**

**ಸೂತ ಜೀವ ಸಮಾಃ ಸೌಮ್ಯ ಶಾಶ್ವತೀರ್ವಿಶದಂ ಯಶಃ ।**
**ಯಸ್ತ್ವಂ ಶಂಸಸಿ ಕೃಷ್ಣಸ್ಯ ಮರ್ತ್ಯಾನಾಮಮೃತಂ ಹಿ ನಃ ॥೧೧॥**

**ಹಿ** ಯಾವ ಕಾರಣ **ಮರ್ತ್ಯಾನಾಂ** ಮರಣಶೀಲರಾದ **ನಃ** ನಮಗೆ **ಅಮೃತಂ** ಮರಣ ನಿವರ್ತಕವಾದ **ಕೃಷ್ಣಸ್ಯ** ಶ್ರೀಕೃಷ್ಣನ **ವಿಶದಂ** ವಿಸ್ತಾರವಾದ **ಯಶಃ** ಕೀರ್ತಿಯನ್ನು **ಶಂಸಸಿ** ಹೇಳುವಿ **ತತ್** ಆದ್ದರಿಂದ **ಸೌಮ್ಯ** ಸುಮಾಪುತ್ರನಾದ (ಸುಮಾ-ರೋಮಹರ್ಷಣರ ಪತ್ನಿ) **ಸೂತ** ಸೂತನೇ **ತ್ವಂ** ನೀನು **ಶಾಶ್ವತೀಃ ಸಮಾಃ** ಬಹು ವರ್ಷ **ಜೀವ** ಬದುಕಲು ಪ್ರಾಣಧಾರಣೆಮಾಡು.

ಆಶೀರ್ವಾದಕ್ಕೆ ಮತ್ತೊಂದು ಕಾರಣ ಹೇಳುವರು.

**ಕರ್ಮಣ್ಯಸ್ಮಿನ್ನನಾಶ್ವಾಸ್ಯೇ ಧೂಮಧೂಮ್ರಾತ್ಮನಾಂ ಭವಾನ್ ।**
**ಆಪಾಯಯತಿ ಗೋವಿಂದಪಾದಪದ್ಮಾಸವಂ ಮಧು ॥೧೨॥**

**ಅನಾಶ್ವಾಸ್ಯೇ** ವಿಶ್ವಾಸಮಾಡಲಾಗದ (ಬಹಳ ವೈಗುಣ್ಯ ಇರುವಕಾರಣ ಫಲನಿಶ್ಚಯವಿಲ್ಲದ್ದರಿಂದ) **ಅಸ್ಮಿನ್ ಕರ್ಮಣಿ** ಈ ಸತ್ರದಲ್ಲಿ **ಧೂಮಧೂಮ್ರಾತ್ಮನಾಂ** ಹೊಗೆಯಿಂದ ಕಪ್ಪಾದ ದೇಹವುಳ್ಳ ನಮ್ಮನ್ನು **ಭವಾನ್** ತಾವು **ಗೋವಿಂದಪಾದ-**

**ಯಸ್ಮಿನ್ನಹನಿ ಯರ್ಹ್ಯೇವ ಭಗವಾನುತ್ಸಸರ್ಜ ಗಾಮ್ ।**
**ತದೈವೇಹಾನುವೃತ್ತೋಽಸಾವಧರ್ಮಪ್ರಭವಃ ಕಲಿಃ ॥೬॥**

**ಯಸ್ಮಿನ್ ಅಹನಿ** ಯಾವ ದಿನ **ಯರ್ಹಿ ಏವ** ಯಾವ ಕ್ಷಣದಲ್ಲಿ **ಗಾಂ** ಭೂಮಿಯನ್ನು **ಭಗವಾನ್** ಶ್ರೀಕೃಷ್ಣನು **ಉತ್ಸಸರ್ಜ** ತ್ಯಜಿಸಿದನೋ **ತದೈವ** ಆಗಲೇ **ಅಧರ್ಮಪ್ರಭವಃ** ಅಧರ್ಮಜನಕನಾದ **ಕಲಿಃ** ಕಲಿಯು **ಅನುವೃತ್ತಃ** ಪ್ರವೇಶ ಮಾಡಿದನು.

ಅಧರ್ಮಕಾರಣನಾದ ಕಲಿಯನ್ನು ಕೊಂದುಬಿಡಲಿಲ್ಲವೇಕೆ ಎಂದರೆ ಹೇಳುವರು.

**ನಾನುದ್ವೇಷ್ಟಿ ಕಲಿಂ ಸಮ್ರಾಟ್ ಸಾರಂಗ ಇವ ಸಾರಭುಕ್ ।**
**ಕುಶಲಾನ್ಯಾಶು ಸಿದ್ಧ್ಯಂತಿ ನೇತರಾಣಿ ಕೃತಾನಿ ಯತ್ ॥೭॥**

**ಸಾರಂಗ ಇವ** ಭ್ರಮರದಂತೆ **ಸಾರಕೃತಾನಿ ಭುಕ್** ಸಾರಗ್ರಾಹಿಯಾದ **ಸಮ್ರಾಟ್** ರಾಜನು **ಯತ್** ಯಾವ ಕಾರಣ **ಕೃತಾನಿ** ಮಾಡಿದ **ಕುಶಲಾನಿ** ಪುಣ್ಯಗಳು **ಆಶು** ಸ್ವಲ್ಪ ಅನುಷ್ಠಾನಮಾಡಿದರೂ **ಸಿಧ್ಯಂತಿ** ಮಹಾಫಲಕಾರಣವಾಗುವವು **ಇತರಾಣಿ** ಪಾಪಗಳು **ಆಶು ನ ಸಿದ್ಧ್ಯಂತಿ** ಬಹಳ ಮಾಡಿದರೂ ಸ್ವಲ್ಪ ಫಲಪ್ರದವಾಗುವವು. ಈ ಸಾರವನ್ನು ಅರಿತದ್ದರಿಂದ **ನ ಅನುದ್ವೇಷ್ಟಿ** ಸಂಪೂರ್ಣ ದ್ವೇಷಿಸಲಿಲ್ಲ (ಕೊಲ್ಲಲಿಲ್ಲ).

ದ್ವೇಷವಿಲ್ಲವೆಂದರೇ ಸ್ನೇಹ ಮಾಡಿದ ಎಂದರ್ಥವಾಗುವದು ಅದನ್ನೂ ಮಾಡಲಿಲ್ಲ. ಕಿಂತು ಉದಾಸೀನನಾಗಿ ಇದ್ದ ಎಂದು ಹೇಳುವರು.

**ಕಿಂ ನು ಬಾಲೇಷು ಶೂರೇಣ ಕಲಿನಾ ಶೂರಭೀರುಣಾ ।**
**ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತೇ ॥೮॥**

**ಬಾಲೇಷು** ಧೈರ್ಯ ಇಲ್ಲದವರಲ್ಲಿ **ಶೂರೇಣ** ಶೌರ್ಯ ತೋರಿಸುವ **ಶೂರಭೀರುಣಾ** ಧೀರರಿಗೆ ಹೆದರುವ **ಪ್ರಮತ್ತೇಷು ನೃಷು** ಜೋರಾಗಿರುವ ಜನರಲ್ಲಿ **ಅಪ್ರಮತ್ತಃ** ಸ್ವಯಂ ಸಾವಧಾನವಾಗಿರುವ ಇವನಿಂದ **ಕಿಂ ನು** ಏನಾದೀತು? ಏನೂ ಆಗಲಾರದು **ವೃಕಃ ಇವ ವರ್ತತೇ** ತೋಳದಂತಿರುವನು. (ಧರ್ಮಜ್ಞಾನಾದಿಗಳನ್ನು ವೃಣೋತೀತಿ ವೃಕಃ ನಾಶಗೊಳಿಸುವನು ಎಂದರ್ಥ)

**ಉಪವರ್ಣಿತಮೇತದ್ವಃ ಪುಣ್ಯಂ ಪಾರೀಕ್ಷಿತಂ ಮಯಾ ।**
**ವಾಸುದೇವಕಥೋಪೇತಮಾಖ್ಯಾನಂ ಯದಪೃಚ್ಛಥ ॥೯॥**

**ಯೂಯಂ** ನೀವು **ಯದಪೃಚ್ಛತ** ಏನನ್ನು ಕೇಳಿದಿರೋ **ತತ್** ಆ **ವಾಸುದೇವಕಥೋಪೇತಂ** ಶ್ರೀಕೃಷ್ಣನ ಕಥೆಯಿಂದ ಕೂಡಿದ **ಪುಣ್ಯಂ** ಪುಣ್ಯಜನಕವಾದ **ಪಾರೀಕ್ಷಿತಂ** ಪರೀಕ್ಷಿತನ **ಆಖ್ಯಾನಂ** ಕಥೆಯನ್ನು **ವಃ** ನಿಮಗೆ **ಉಪವರ್ಣಿತಂ ಮಯಾ** ನನ್ನಿಂದ ಹೇಳಲ್ಪಟ್ಟಿದೆ.

**ಯಾಃ ಯಾಃ ಕಥಾಃ ಭಗವತಃ ಕಥನೀಯೋರುಕರ್ಮಣಃ ।**
**ಗುಣಕರ್ಮಾಶ್ರಯಾ ಪುಂಭಿಃ ಸೇವ್ಯಾಸ್ತಾಸ್ತಾ ಬುಭೂಷುಭಿಃ ॥೧೦॥**

**ಬುಭೂಷುಭಿಃ** ಮೋಕ್ಷೇಚ್ಛುಗಳಾದ **ಪುಂಭಿಃ** ಅಧಿಕಾರಿಗಳಿಂದ **ಯಾಃ ಯಾಃ** ಯಾವ ಯಾವ **ಕಥನೀಯೋರುಕರ್ಮಣಃ** ಅವಶ್ಯ ಹೇಳಲೇಬೇಕಾದ ಶ್ರೇಷ್ಠವಾದ ಕರ್ಮಗಳುಳ್ಳ **ಭಗವತಃ** ಭಗವಂತನ **ಗುಣಕರ್ಮಾಶ್ರಯಾಃ** ಗುಣಕರ್ಮಗಳಿಗೆ ಆಶ್ರಯವಾದ **ಕಥಾಃ** ಕಥೆಗಳುಂಟೋ **ತಾಃ** ಅವುಗಳು **ಸೇವ್ಯಾಃ** ಕೇಳಲ್ಪಡಬೇಕು.

ವಿಸ್ತಾರವಾಗಿ ಹೇಳುವದಕ್ಕಾಗಿ ಸೂತನನ್ನು ಆಶೀರ್ವಾದದಿಂದ ಅಭಿನಂದಿಸುವರು.

**ಋಷಯ ಊಚುಃ-**

**ಸೂತ ಜೀವ ಸಮಾಃ ಸೌಮ್ಯ ಶಾಶ್ವತೀರ್ವಿಶದಂ ಯಶಃ ।**
**ಯಸ್ತ್ವಂ ಶಂಸಸಿ ಕೃಷ್ಣಸ್ಯ ಮರ್ತ್ಯಾನಾಮಮೃತಂ ಹಿ ನಃ ॥೧೧॥**

**ಹಿ** ಯಾವ ಕಾರಣ **ಮರ್ತ್ಯಾನಾಂ** ಮರಣಶೀಲರಾದ **ನಃ** ನಮಗೆ **ಅಮೃತಂ** ಮರಣ ನಿವರ್ತಕವಾದ **ಕೃಷ್ಣಸ್ಯ** ಶ್ರೀಕೃಷ್ಣನ **ವಿಶದಂ** ವಿಸ್ತಾರವಾದ **ಯಶಃ** ಕೀರ್ತಿಯನ್ನು **ಶಂಸಸಿ** ಹೇಳುವಿ **ತತ್** ಆದ್ದರಿಂದ **ಸೌಮ್ಯ** ಸುಮಾಪುತ್ರನಾದ (ಸುಮಾ-ರೋಮಹರ್ಷಣರ ಪತ್ನಿ) **ಸೂತ** ಸೂತನೇ **ತ್ವಂ** ನೀನು **ಶಾಶ್ವತೀಃ ಸಮಾಃ** ಬಹು ವರ್ಷ **ಜೀವ** ಬದುಕಲು ಪ್ರಾಣಧಾರಣೆಮಾಡು.

ಆಶೀರ್ವಾದಕ್ಕೆ ಮತ್ತೊಂದು ಕಾರಣ ಹೇಳುವರು.

**ಕರ್ಮಣ್ಯಸ್ಮಿನ್ನನಾಶ್ವಾಸ್ಯೇ ಧೂಮಧೂಮ್ರಾತ್ಮನಾಂ ಭವಾನ್ ।**
**ಆಪಾಯಯತಿ ಗೋವಿಂದಪಾದಪದ್ಮಾಸವಂ ಮಧು ॥೧೨॥**

**ಅನಾಶ್ವಾಸ್ಯೇ** ವಿಶ್ವಾಸಮಾಡಲಾಗದ (ಬಹಳ ವೈಗುಣ್ಯ ಇರುವಕಾರಣ ಫಲನಿಶ್ಚಯವಿಲ್ಲದ್ದರಿಂದ) **ಅಸ್ಮಿನ್ ಕರ್ಮಣಿ** ಈ ಸತ್ರದಲ್ಲಿ **ಧೂಮಧೂಮ್ರಾತ್ಮನಾಂ** ಹೊಗೆಯಿಂದ ಕಪ್ಪಾದ ದೇಹವುಳ್ಳ ನಮ್ಮನ್ನು **ಭವಾನ್** ತಾವು **ಗೋವಿಂದಪಾದ-**

**ಪದ್ಮಾಸವಂ** ಶ್ರೀಕೃಷ್ಣನ ಪಾದಕಮಲಗಳ ಮಧುರವಾದ **ಮಧು** ಮಕರಂದವನ್ನು **ಆಪಾಯಯತಿ** ಪಾನಮಾಡಿಸುತ್ತೀರಿ.

**ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।**
**ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥ ೧೩॥**

**ಭಗವತ್ಸಂಗಿಸಂಗಸ್ಯ** ಭಗವದ್ಭಕ್ತರ ಸಂಗದಿಂದಾಗುವ ಸುಖದ **ಲವೇನಾಪಿ** ಏಕದೇಶದಿಂದಲೂ **ಸ್ವರ್ಗಂ** ಸ್ವರ್ಗವನ್ನು **ಅಪುನರ್ಭವಂ** ಅಲ್ಪಾಧಿಕಾರಿಗಳ ಮೋಕ್ಷಸುಖವನ್ನು **ನ ತುಲಯಾಮಃ** ಸಮವೆಂದು ಹೇಳಲು ಸಮರ್ಥರಲ್ಲ ಎಂದ ಮೇಲೆ **ಮರ್ತ್ಯಾನಾಂ ಆಶಿಷಃ ಕಿಮುತ** ಮನುಷ್ಯರಿಗೆ ಇರುವ ರಾಜ್ಯ ಮೊದಲಾದವುಗಳು ಸಮವಲ್ಲವೆಂದೇನು ಹೇಳುವದು.

**ವಿಶೇಷಃ**-'ಅನಾಶ್ವಾಸ್ಯೇ' ಮುಂತಾಗಿ ಕರ್ಮನಿಂದನೆ ವಾಕ್ಯಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಲ್ಲ ಗೋವಿಂದಪಾದಪದ್ಮಾಸವಸ್ತುತಿ ಮಾಡುವಲ್ಲಿ ತಾತ್ಪರ್ಯವೆಂದು ತಿಳಿಯಬೇಕು. ಆದ್ದರಿಂದಲೇ 'ಕೋ ಹಿ ತದ್ವೇದ ' ಮುಂತಾದ ವಾಕ್ಯಕ್ಕೆ ಶಾಸ್ತ್ರದಲ್ಲಿ ಹೀಗೆ ತಾತ್ಪರ್ಯ ಹೇಳಿದೆ. ಗೋವಿಂದಪಾದಪದ್ಮಾಸವಪಾನದಂಥ ಸುಖವೇ ಮತ್ತೊಂದಿಲ್ಲ ಎಂದು ಹೇಳುವರು ತುಲಯಾಮಃ ಎಂಬ ಶ್ಲೋಕದಿಂದ.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಶೌನಕಾದಿಗಳಿಗೆ ಈ ಶ್ರವಣದಿಂದಾಗುವ ಸುಖದ ಲೇಶಕ್ಕಿಂತ ಅಲ್ಪಾಧಿಕಾರಿಗಳ ಮೋಕ್ಷಸುಖವನ್ನು ಅಲ್ಪವೆಂದು ಹೇಳಿರುವರು. ಸಂಸಾರದಲ್ಲಿರುವ ಶೌನಕಾದಿಗಳಿಗೆ ಆಗುವ ಸುಖಕ್ಕಿಂತ ಮೋಕ್ಷಸುಖ ಕಡಿಮೆ ಎಂದು ಹೇಳಿದಂತೆ ತೋರುವದು. ಅದು ಪ್ರಮಾಣ ವಿರುದ್ಧವಾದುದು. ಆ ವಿರೋಧ ಪರಿಹಾರವನ್ನು ತಾತ್ಪರ್ಯದಿಂದ ಮಾಡುವರು.

ಸಮ್ಯಕ್ ಸ್ವರೂಪಸ್ಯಾವ್ಯಕ್ತಿರಭಾವೋ ಜನನಸ್ಯ ಚ ।
ಅಲ್ಪಯತ್ನಾತ್ತತೋ ವೃದ್ಧಿಹೇತೋಃ ಸತ್ಸಂಗತಿರ್ವರಾ ॥-ಇತಿ ವಾಯುಪ್ರೋಕ್ತೇ

ಯಾವುದು ಅಲ್ಪಾಧಿಕಾರಿಗಳಿಗೆ ಅಪರೋಕ್ಷಜ್ಞಾನವಾಗುವದರಿಂದ ಸ್ವರೂಪಾನಂದಾಭಿವ್ಯಕ್ತಿಯು ಪ್ರಾರಬ್ಧನಿಮಿತ್ತಜನನಾಭಾವರೂಪ ಅನಿಷ್ಟನಿವೃತ್ತಿ ಆಗುತ್ತದೋ ಅಂತಹ ಅಧಿಕಾರಿಗಳ ಮುಕ್ತಿಗಿಂತ ಉತ್ತಮರಾದ ಜೀವನ್ಮುಕ್ತರಿಗೆ

ಮೋಕ್ಷದಲ್ಲಿ ಅಧಿಕಸುಖಾಭಿವ್ಯಕ್ತಿಗೆ ಕಾರಣವಾದ ಸಜ್ಜನರ ಸಹವಾಸವು ಶ್ರೇಷ್ಠವು ಎಂದು ವಾಯುಪುರಾಣದಲ್ಲಿ ಹೇಳಿದೆ.

ಇಲ್ಲಿಯವರೆಗೆ ನಾನು ಹೇಳಿದ ಕಥಾಮೃತಪಾನ ಮಾಡಿದ್ದರಿಂದ ನಿಮಗೆ ಇಂತಹ ಸುಖದ ಅಭಿವ್ಯಕ್ತಿಯಾಗಿದೆ ಆದ್ದರಿಂದ ಮತ್ತೆ ಏನು ಕೇಳುವದು ಎಂದು ನಿಲ್ಲಿಸಬೇಡಿ ನಮಗಿನ್ನೂ ಸಾಕು ಎಂದೆನಿಸಿಲ್ಲ ಎಂದು ಹೇಳುವರು.

**ಕೋ ನಾಮ ತೃಪ್ಯೇದ್ರಸವಿತ್ಕಥಾಯಾಂ**
**ಮಹತ್ತಮೈಕಾಂತಪರಾಯಣಸ್ಯ ।**
**ನಾಂತಂ ಗುಣಾನಾಮಗುಣಸ್ಯ ಜಗ್ಮುಃ**
**ಯೋಗೇಶ್ವರಾ ಯೇ ಭವಪಾದ್ಮಮುಖ್ಯಾಃ ॥೧೪॥**

**ಯೇ** ಯಾವ **ಭವಪಾದ್ಮಮುಖ್ಯಾಃ** ಶಿವಬ್ರಹ್ಮಮೊದಲಾದ **ಯೋಗೇಶ್ವರಾಃ** ಯೋಗಿಶ್ರೇಷ್ಠರು ಇರುವರೋ **ತೇ** ಅವರು **ಅಗುಣಸ್ಯ** ಸತ್ವಾದಿಗುಣರಹಿತನಾದ ಅಥವಾ ಪ್ರಧಾನನಾದ **ಯಸ್ಯ** ಯಾವ ಭಗವಂತನ **ಗುಣಾನಾಂ** ಜ್ಞಾನಾನಂದಾದಿ ಶುಭಧರ್ಮಗಳ **ಅಂತಂ** ಕೊನೆಯನ್ನು **ನ ಜಗ್ಮುಃ** ಹೊಂದಿಲ್ಲವೋ **ಮಹತ್ತಮೈಕಾಂತಪರಾಯಣಸ್ಯ** ಅತ್ಯಂತದೊಡ್ಡವರಾದ ಬ್ರಹ್ಮಾದಿಗಳಿಗೆ ನಿಯಮೇನ ಮುಖ್ಯಾಶ್ರಯನಾದ ಅಥವಾ ಮಹಾತ್ಮರಾದವರಿಂದ ನಿಯಮೇನ ಉತ್ಕೃಷ್ಟಳಾದ ಲಕ್ಷ್ಮೀದೇವಿಗೂ ಆಶ್ರಯನಾದ ಶ್ರೀಹರಿಯ **ಕಥಾಯಾಂ** ಕಥಾಶ್ರವಣದಲ್ಲಿ **ರಸವಿತ್** ಸಾರಜ್ಞನಾದವನು **ಕಃ ತೃಪ್ಯೇತ** ಯಾವನು ತೃಪ್ತಿಹೊಂದಿಯಾನು.

**ತತೋ ಭವಾನ್ ವೈ ಭಗವತ್ಪ್ರಧಾನೋ**
**ಮಹತ್ತಮೈಕಾಂತಪರಾಯಣಸ್ಯ ।**
**ಹರೇರುದಾರಂ ಚರಿತಂ ವಿಶುದ್ಧಂ**
**ಶುಶ್ರೂಷತಾಂ ನೋ ವಿತನೋತು ವಿದ್ವನ್ ॥೧೫॥**

**ತತಃ** ಅಲಂಬುದ್ಧಿ ಇಲ್ಲದ್ದರಿಂದ **ಶುಶ್ರೂಷತಾಂ** ಕೇಳಲಪೇಕ್ಷಿಸುವ **ನಃ** ನಮಗೆ **ಹೇ ವಿದ್ವನ್** ಜ್ಞಾನಿಯೇ **ಭಗವತ್ಪ್ರಧಾನಃ** ಭಗವಂತನೇ ಎಲ್ಲ ವ್ಯಾಪಾರಗಳಿಗೆ ಉದ್ದೇಶ್ಯನಾಗಿರುವ **ಭವಾನ್** ತಾವು **ಮಹತ್ತಮೈಕಾಂತಪರಾಯಣಸ್ಯ** ರಮಾಬ್ರಹ್ಮಾದಿಗಳಿಗೆ ಆಶ್ರಯನಾದ **ಹರೇಃ** ಶ್ರೀಹರಿಯ **ವಿಶುದ್ಧಂ** ನಿರ್ದುಷ್ಟವಾದ **ಉದಾರಂ** ಉತ್ಕೃಷ್ಟವಾದ **ಚರಿತಂ** ಚರಿತ್ರೆಯನ್ನು **ವಿತನೋತು** ವಿಸ್ತಾರಮಾಡಿರಿ.

**ತನ್ನಃ ಪರಂ ಪುಣ್ಯಮಸಂವೃತಾರ್ಥ**
**ಮಾಖ್ಯಾನಮತ್ಯದ್ಭುತಯೋಗನಿಷ್ಠಮ್ ।**
**ಆಖ್ಯಾಹ್ಯನಂತಾಚರಿತೋಪಪನ್ನಂ**
**ಪಾರೀಕ್ಷಿತಂ ಭಾಗವತಾಭಿರಾಮಮ್ ॥೧೬॥**

**ಪರಂ** ಉತ್ಕೃಷ್ಟವಾದ **ಪುಣ್ಯಂ** ಪವಿತ್ರಗೊಳಿಸುವ ಚಿತ್ತಶೋಧಕವಾದ **ಅಸಂವೃತಾರ್ಥಂ** ಸ್ಪಷ್ಟವಾದ **ಅತ್ಯದ್ಭುತಯೋಗನಿಷ್ಠಂ** ಲೋಕವಿಲಕ್ಷಣ ಫಲಸಾಧಕಗಳಾದ ಹರಿಭಕ್ತಿ ನಿವೃತ್ತಕರ್ಮರೂಪಜ್ಞಾನೋಪಾಯಗಳಲ್ಲಿ ತಾತ್ಪರ್ಯಾತಿಶಯವುಳ್ಳ **ಅನಂತಾಚರಿತೋಪಪನ್ನಂ** ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ ಶ್ರೀಹರಿಯ ಚರಿತ್ರೆಯಿಂದ ಕೂಡಿದ **ಪಾರೀಕ್ಷಿತಂ** ಪರೀಕ್ಷಿತನಿಗೆ ಹೇಳಿದ್ದರಿಂದ ಪರೀಕ್ಷಿತಸಂಬಂಧಿಯಾದ **ಭಾಗವತಾಭಿರಾಮಂ** ಭಗವದ್ಭಕ್ತರಿಗೆ ಮನೋಹರವಾದ **ತದಾಖ್ಯಾನಂ** ಭಾಗವತಪುರಾಣವನ್ನು **ಆಖ್ಯಾಹಿ** ಹೇಳು. (ವಿಶೇಷಃ- **ಪಾರೀಕ್ಷಿತಂ** ಉಳಿದ ಪರೀಕ್ಷಿತನ ಕಥೆಯನ್ನು ಹೇಳು ಎಂದರ್ಥ.)

ಅದನ್ನು ಶುಕಪರೀಕ್ಷಿತರ ಸಂವಾದರೂಪವಾಗಿಯೇ ಹೇಳು ಎಂದು ಹೇಳುವನು.

**ಸ ವೈ ಮಹಾಭಾಗವತಃ ಪರಿಕ್ಷಿದ್ಯೇನಾಪವರ್ಗಾಖ್ಯಮದಭ್ರಬುದ್ಧಿಃ ।**
**ಶ್ರುತೇನ ವೈಯಾಸಕಿಶಬ್ದಿತೇನ ಭೇಜೇ ಖಗೇಂದ್ರಧ್ವಜಪಾದಮೂಲಮ್ ॥**

**ಅದಭ್ರಬುದ್ಧಿಃ** ಬಹುಬುದ್ಧಿಶಾಲಿಯಾದ **ಮಹಾಭಾಗವತಃ** ಭಗವದ್ಭಕ್ತನಾದ **ಸಃ ಪರೀಕ್ಷಿತ್** ಆ ಪರೀಕ್ಷಿತನು **ವೈಯಾಸಕಿಶಬ್ದಿತೇನ** ವ್ಯಾಸಪುತ್ರ ಶುಕಾಚಾರ್ಯರಿಂದ ಹೇಳಿದ್ದನ್ನು **ಶ್ರುತೇನ ಯೇನ** ಕೇಳಲ್ಪಟ್ಟ ಯಾವ ಜ್ಞಾನದಿಂದ **ಅಪವರ್ಗಾಖ್ಯಂ** ಮೋಕ್ಷವೆಂಬ ಹೆಸರುಳ್ಳ **ಖಗೇಂದ್ರಧ್ವಜಪಾದಮೂಲಂ** ಗರುಡಧ್ವಜನಾದ ಶ್ರೀಹರಿಯ ಪಾದಗಳನ್ನು (ವೈಕುಂಠವನ್ನು) **ಭೇಜೆ** ಹೊಂದಿದನೋ ಆ ಕಥೆಯನ್ನು ಹೇಳಿರಿ. **ವೈ** ಆ ಕಥೆಯನ್ನು ಕೇಳಬೇಕಾದದ್ದು ಅವಶ್ಯಕ

ಮಹಾತ್ಮರಾದ ಶೌನಕಾದಿಗಳಿಂದ ಭಾಗವತ ಹೇಳುವದಕ್ಕೆ ನಿಯೋಜಿಸಲ್ಪಟ್ಟ ಸೂತರು ತಮ್ಮನ್ನು ಶ್ಲಾಘನೆ ಮಾಡಿಕೊಳ್ಳುವರು

ಸೂತೋವಾಚ –

**ಅಹೋ ವಯಂ ಜನ್ಮಭೃತೋ ಮಹಾತ್ಮನ್**
**ವೃದ್ಧಾನುವೃತ್ಯಾಽಪಿ ವಿಲೋಮಜಾತಾಃ ।**
**ದೌಷ್ಕುಲ್ಯಮಾಧಿಂ ವಿಧುನೋತಿ ಶೀಘ್ರಂ**
**ಮಹತ್ತಮಾನಾಮಭಿಧಾನಯೋಗಃ ॥೧೮॥**

**ಹೇ ಮಹಾತ್ಮನ್** ಶೌನಕರೇ **ವಿಲೋಮಜಾತಾಃ ಅಪಿ** ನೀಚಕುಲದಲ್ಲಿ ಜನಿಸಿದ್ದರೂ **ವಯಂ** ನಾವು **ವೃದ್ಧಾನುವೃತ್ಯಾ** ಜ್ಞಾನವೃದ್ಧರಾದ ಶುಕಾಚಾರ್ಯರ ಸೇವೆಯಿಂದ (ಅವರ ಶಿಷ್ಯನಾದುದರಿಂದ) **ಜನ್ಮಭೃತಃ ಅಭೂಮ** ಜನ್ಮದ ಸಾರ್ಥಕತೆಯುಳ್ಳವರಾಗಿ **ಅಭೂಮ** ಆಗಿರುವೆವು. **ಅಹೋ** ನಮ್ಮ ಗುರುಗಳ ಮಹಾತ್ಮ್ಯವು, ಆಶ್ಚರ್ಯಕರವು (ನಮ್ಮ ಭಾಗ್ಯವು) ಏಕೆಂದರೆ **ಮಹತ್ತಮಾನಾಂ ಅಭಿಧಾನಯೋಗಃ** ದೊಡ್ಡವರ ಗೋಷ್ಠೀ ಅಥವಾ ಹೆಸರಿನ ಸಂಬಂಧವು (ಮಹಾತ್ಮರಾದ ಪರೀಕ್ಷಿತಮೊದಲಾದ ವೈಷ್ಣವರ ಕಥೆಯನ್ನು ಶುಕಾಚಾರ್ಯರು ಹೇಳಿದಂತೆ ಹೇಳುವದೆಂಬ ಉಪಾಯವು) **ದೌಷ್ಕುಲ್ಯಂ** ದುಷ್ಟಕುಲದಲ್ಲಿ ಜನಿಸಿರುವೆನೆಂಬ **ಆಧಿಂ** ಮನೋವ್ಯಥೆಯನ್ನು **ವಿಧುನೋತಿ** ಕಳೆಯುವದು ॥18॥

ಭಗವದ್ಭಕ್ತರೊಡನೆ ಮಾತನಾಡುವುದೇ ಮನೋವ್ಯಥೆಯನ್ನು ಹೋಗಲಾಡಿಸುವಾಗ ಹೇಳುವದೇನು ? ಎಂದು ತಿಳಿಸುತ್ತಾರೆ.

**ಕುತಃ ಪುನರ್ಗೃಣತೋ ನಾಮ ತಸ್ಯ**
**ಮಹತ್ತಮೈಕಾಂತಪರಾಯಣಸ್ಯ ।**
**ಯೋಽನಂತಶಕ್ತಿರ್ಭಗವಾನನಂತೋ**
**ಮಹದ್ಗುಣತ್ವಾದ್ಯಮನಂತಮಾಹುಃ ॥೧೯॥**

ಭಗವಚ್ಛಬ್ದಮುಖ್ಯವಾಚ್ಯನಾದ **ಯಃ** ಯಾವನು **ಅನಂತಶಕ್ತಿಃ** ಅಪರಿಮಿತಶಕ್ತಿಯುಳ್ಳವನು **ಭಗವಾನ್** ಐಶ್ವರ್ಯಶಾಲಿಯು **ಅನಂತಃ** ದೇಶಕಾಲಗಳಿಂದ ಅಪರಿಚ್ಛಿನ್ನನು **ಯಂ** ಯಾರನ್ನು **ಮಹದ್ಗುಣತ್ವಾತ್** ಅಪರಿಚ್ಛಿನ್ನಗುಣವುಳ್ಳವನಾದುದರಿಂದ **ಅನಂತಂ ಆಹುಃ** ''ಸತ್ಯಂ ಜ್ಞಾನಮನಂತಂ ಬ್ರಹ್ಮ'' ಮುಂತಾದ ಉಪನಿಷತ್ತುಗಳು ಹೇಳುವವೋ **ತಸ್ಯ** ಅಂತಹ **ಮಹತ್ತಮೈಕಾಂತಪರಾಯಣಸ್ಯ** ಬ್ರಹ್ಮಾದ್ಯುತ್ತಮರಿಗೆ ಆಶ್ರಯನಾದ ಶ್ರೀಹರಿಯ **ನಾಮ**

ಹೆಸರನ್ನು **ಗೃಣತಃ** ಸ್ಮರಿಸುವವನಿಗೆ **ಕುತಃ ಪುನಃ** ಮನೋವ್ಯಾಧಿಯು ಕಳೆಯುವದೆಂದು ಹೇಳುವದೇನು ?

ವಿಶೇಷ- ಶುಕಾಚಾರ್ಯರು ಹೇಳಿದ್ದು ವೈಷ್ಣವಕಥೆ. ಅದನ್ನು ಹೇಳುವದರಿಂದಲೇ ನೀಚಕುಲದಲ್ಲಿ ಹುಟ್ಟಿದ ನಿಮಿತ್ತ ಮನೋವ್ಯಥೆ ಹೋಗುವದು. ಅವರು ಹೇಳಿದಂತೆ ವಿಷ್ಣುಕಥೆಯನ್ನೇ ಹೇಳಿದರೆ ಮನೋವ್ಯಥೆ ಹೋಗುವದು ಕೈಮುತ್ಯಸಿದ್ಧ ಎಂದು ಅಭಿಪ್ರಾಯ.

*ಭಾಗವತತಾತ್ಪರ್ಯ-*

**ಅನಂತಃ ದೇಶತಃ ಕಾಲತಶ್ಚ।**

ಶಕ್ತಿಯು ಎಲ್ಲ ಕಾರ್ಯ ಮಾಡಲು ಪ್ರಧಾನವಾದ್ದರಿಂದ ಪ್ರತ್ಯೇಕ ಹೇಳಿರುವರು. ಛಾಂದಸವಾದ್ದರಿಂದ ಮಹಚ್ಛಬ್ದಕ್ಕೆ ಮಹಾದೇಶವಾಗಿಲ್ಲ. 19ನೇ ಶ್ಲೋಕದಲ್ಲಿ ಮಹದ್ಗುಣತ್ವಾದ್ಯಮನಂತಮಾಹುಃ । ಗುಣಾನಂತ್ಯವನ್ನು ಪ್ರತ್ಯೇಕ ಹೇಳಿದ್ದರಿಂದ ಅನಂತಃ ಎಂಬುದಕ್ಕೆ ದೇಶಕಾಲಾನಂತ್ಯಗಳು ಮಾತ್ರವಿವಕ್ಷಿತ ಎಂದು ತಾತ್ಪರ್ಯದ ಅಭಿಪ್ರಾಯ.

ಹಿಂದಿನ ಶ್ಲೋಕಗಳಲ್ಲಿ ಮಹತ್ತಮೈಕಾಂತಪರಾಯಣತ್ವವನ್ನು ಸಾಧಿಸಲು ಅನಂತ ಶಕ್ತಿತ್ವಮುಂತಾದ ನಾಲ್ಕು ಹೇತುಗಳನ್ನು ಹೇಳಿದೆ. ಅವುಗಳಲ್ಲಿ ಗುಣಾನಂತ್ಯಕ್ಕೆ, ಹೇಳಿದ ಸಾಧ್ಯದ ಜೊತೆಗೆ ವ್ಯತಿರೇಕವ್ಯಾಪ್ತಿಯನ್ನು ತೋರಿಸಲು, ಉಳಿದವರಿಗೆ ಗುಣಗಳಿಂದ ಶ್ರೀಹರಿಯ ಸಾಮ್ಯವಾಗಲಿ ಆಧಿಕ್ಯವಾಗಲಿ ಇಲ್ಲ ಎಂಬುದಕ್ಕೆ ಯುಕ್ತಿಯನ್ನು ಹೇಳುವರು.

**ಏತಾವತಾಲಂ ನನು ಸೂಚಿತೇನ**
**ಗುಣೈರಸಾಮ್ಯೇಽನತಿಶಾಯನೇಽಸ್ಯ ।**
**ಹಿತ್ವೇತರಾನ್ಪ್ರಾರ್ಥಯತೋ ವಿಭೂತಿ-**
**ರ್ಯಸ್ಯಾಂಘ್ರಿರೇಣುಂ ಜುಷತೇಽನಭೀಪ್ಸೋಃ ॥೨೦॥**

**ಅಸ್ಯ** ಶ್ರೀಹರಿಯ **ಗುಣೈಃ ಅಸಾಮ್ಯೇ** ಗುಣಗಳಿಂದ ಇವನಿಗೆ ಸಮಾನರಾಗಿ ಯಾರೂ ಇಲ್ಲ ಎಂಬ ವಿಷಯದಲ್ಲಿ ಹಾಗೂ **ಅನತಿಶಾಯನೇ** ಆಧಿಕ್ಯವಿಲ್ಲ ಎಂಬ ವಿಷಯದಲ್ಲಿ **ವಿಭೂತಿಃ** ಮಹಾಲಕ್ಷ್ಮಿಯು (ವಿವಾಹಸಮಯದಲ್ಲಿ) **ಪ್ರಾರ್ಥಯತಃ**

ತನ್ನ ಅನುಗ್ರಹವನ್ನು ಅಪೇಕ್ಷಿಸುವ **ಇತರಾನ್** ಬ್ರಹ್ಮಾದಿಗಳನ್ನು **ಹಿತ್ವಾ** ಇವರು ನನ್ನ ಅನುಗ್ರಹದಿಂದ ಉಪಜೀವಿಸುವವರು ಆದ್ದರಿಂದ ಅವರನ್ನು ಬಿಟ್ಟು **ಅನಭೀಪ್ಸೋಃ** ಸ್ವತಂತ್ರನಾದ್ದರಿಂದ ತನ್ನನ್ನು ಅನುಗ್ರಹಿಸಲಿಚ್ಛಿಸುವ **ಯಸ್ಯ** ಯಾವ ಶ್ರೀಹರಿಯ **ಅಂಘ್ರಿರೇಣುಂ** ಪಾದಧೂಳಿಯನ್ನು **ಜುಷತೇ** ಸೇವಿಸುವಳು ಇದರಿಂದ **ಸೂಚಿತೇನ** ಸೂಚಿಸಲ್ಪಟ್ಟ ಲಕ್ಷ್ಮೀಪತಿತ್ವಲಿಂಗವಿರುವದರಿಂದ **ಏತಾವತಾ ಅಲಂ ನನು** ಇಷ್ಟು ಸಾಕು ತಾನೇ ಇದರಿಂದ ವಿಷ್ಣುವು ಬ್ರಹ್ಮಾದಿಗಳಿಗಿಂತ ಗುಣಗಳಿಂದ ಅತ್ಯುತ್ತಮನೆಂದು ಹೇಳುವದರಿಂದ ಉಳಿದವರಲ್ಲಿ ಗುಣಪೂರ್ತಿಯೂ ಇಲ್ಲ ಮಹತ್ತಮೈಕಾಂತ ಪರಾಯಣತ್ವವೂ ಇಲ್ಲ ಎಂದು ಉಪಪಾದಿಸಿದಂತಾಯಿತು

**ವಿಶೇಷ-**''ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ'' ''ಶ್ರೀಮನ್ಮಂದ-ಕಟಾಕ್ಷಲಬ್ಧವಿಭವಬ್ರಹ್ಮೇಂದ್ರಗಂಗಾಧರಾಃ'' ಮುಂತಾದ ಶ್ರುತಿಸ್ಮೃತಿಗಳಿಂದ ಉಳಿದವರೆಲ್ಲ ಲಕ್ಷ್ಮೀಗಿಂತ ಕಡಿಮೆ ಎಂದು ಸಿದ್ಧವಾದ್ದರಿಂದ ಲಕ್ಷ್ಮೀಪತಿತ್ವವು ವಿಷ್ಣು ಸರ್ವೋತ್ತಮತ್ವಕ್ಕೆ ಮುಖ್ಯಯುಕ್ತಿಯಾಗುವದು.

**ಅಥಾಪಿ ಯತ್ಪಾದನಖಾವಸೃಷ್ಟಂ**
**ಜಗದ್ವಿರಿಂಚೋಪಹೃತಾರ್ಹಣಾಂಭಃ ।**
**ಸೇಶಂ ಪುನಾತ್ಯನ್ಯತಮೋ ಮುಕುಂದಾತ್**
**ಕೋ ನಾಮ ಲೋಕೇ ಭಗವತ್ಪದಾರ್ಥಃ ॥೨೧॥**

**ಯತ್ಪಾದನಖಾವಸೃಷ್ಟಂ** ಯಾರ ಕಾಲಿನ ಉಗುರಿನ ಸಂಬಂಧವಾದರೂ **ವಿರಿಂಚೋಪಹೃತಾರ್ಹಣಾಂಭಃ** ಬ್ರಹ್ಮದೇವರಿಂದ ಸಮರ್ಪಿತವಾದ ಪೂಜೆಗೆ ಸಾಧನವಾದ ನೀರು (ಬ್ರಹ್ಮದೇವರು ಪರಮಾತ್ಮನ ಪಾದಪೂಜೆ ಮಾಡಿದ ಪಾದೋದಕವು) **ಸೇಶಂ** ರುದ್ರದೇವರಿಂದ ಸಹಿತರಾದ **ಜಗತ್** ಅಧಿಕಾರಿ ಜನರನ್ನು **ಪುನಾತಿ** ಮನಶ್ಶುದ್ಧಿದ್ವಾರಾ ಮುಕ್ತರನ್ನಾಗಿಮಾಡುವದು **ಅತಃ** ಆದ್ದರಿಂದ **ಮುಕುಂದಾತ್ ಅನ್ಯತಮಃ** ಪರಮಾತ್ಮನನ್ನು ಬಿಟ್ಟು ಬೇರೆಯವನು **ಕೋ ನಾಮ** ಯಾವನು ತಾನೇ **ಭಗವತ್ಪದಾರ್ಥಃ** ಭಗವಚ್ಛಬ್ದಮುಖ್ಯಾರ್ಥನು ? ಯಾವನೂ ಇಲ್ಲ.

**ವಿಶೇಷ ಃ-** ಜಗತ್ತಿನಲ್ಲಿ ಉತ್ತಮರಾದ ಚತುರ್ಮುಖಬ್ರಹ್ಮ ರುದ್ರಾದಿದೇವತೆಗಳಿಗೆ ಪೂಜಕತ್ವ ಪೂತತ್ವಗಳಿಂದ ನೀಚತ್ವ ತಿಳಿಯುವದು ಇದರಂತೆ ಶಕ್ತ್ಯಾ ಅನಂತ್ಯ ದೇಶತ ಕಾಲತಃ ಅನಂತ್ಯಗಳಿಗೆ ಸ್ವತಂತ್ರನಾಗಿ ವ್ಯತಿರೇಕ ವ್ಯಾಪ್ತಿ ಉಪಪಾದಿಸಬೇಕು.

ಇಲ್ಲಿಯವರೆಗೆ ಹೇಳಿದ ಹೇತುಗಳಿಗೆ ವ್ಯಾಪ್ತಿಯನ್ನು ಹೇಳಿ ಪಕ್ಷದಲ್ಲಿ ಸಾಧ್ಯವನ್ನು ನಿಗಮನ ಮಾಡುತ್ತ ಮಹತ್ತಮೈಕಾಂತಪರಾಯಣತ್ವವನ್ನು ವಿವರಿಸುವರು.

**ಯತ್ರಾನುರಕ್ತಾ ಸಹಸೈವ ಧೀರಾಃ**
**ವ್ಯಪೋಹ್ಯ ದೇಹಾದಿಷು ಸಂಗಮೂಢಮ್ ।**
**ವ್ರಜಂತಿ ತತ್ಪಾರಮಹಂಸ್ಯಸತ್ಯಂ**
**ಯಸ್ಮಿನ್ನಹಿಂಸೋ ಪರಮಶ್ಚ ಧರ್ಮಃ ॥೨೨॥**

**ಯತ್ರ** ಯಾವ ಶ್ರೀಹರಿಯಲ್ಲಿ **ಅನುರಕ್ತಾಃ** ಮಹಾತ್ಮ್ಯಜ್ಞಾನಾನುಸಾರ ಸ್ನೇಹವುಳ್ಳ **ಧೀರಾಃ** ಹರಿವಿಷಯಕ ಬುದ್ಧಿಯಲ್ಲಿಯೇ ಸಂತೋಷಪಡುವವರು **ಸಹಸಾ ಏವ** ತಕ್ಷಣದಲ್ಲೇ ವಿಮರ್ಶಾತ್ಮಕಜ್ಞಾನದಿಂದ **ದೇಹಾದಿಷು** ಮನೆ ಮಡದಿ ಮಕ್ಕಳು ಮುಂತಾದವುಗಳಲ್ಲಿ **ಊಢಂ** ನಿರೂಢವಾದ (ಬಲವಾಗಿರುವ) **ಸಂಗಂ** ಸ್ನೇಹವನ್ನು **ವ್ಯಪೋಹ್ಯ** ತೊರೆದು **ಯಸ್ಮಿನ್** ಯಾವ ಪರಮಹಂಸಾಶ್ರಮದಲ್ಲಿ **ಅಹಿಂಸೋ ಪರಮಶ್ಚ** ವಿಹಿತಹಿಂಸೆಯನ್ನೂ ಮಾಡದಿರುವರು (ವಿಜಯಧ್ವಜೀಯ-**ಅಹಿಂಸೋಪರಮಃ ಅಹಿಂಸಾ,** ವಿಹಿತಾತಿರಿಕ್ತ ಹಿಂಸಾವರ್ಜನಾದ **ಉಪರಮಃ ಉಂ** ರುದ್ರನನ್ನು **ಪಾತಿ** ರಕ್ಷಿಸುತ್ತಾನೆ **ಪಿಬತಿ** ಸಂಹರಿಸುತ್ತಾನೆ ಕಾರಣ **ಉಪ** ವಿಷ್ಣುವು ಅವನಲ್ಲಿ **ರಮಃ** ರಮಣವು ವಿಷ್ಣುಸರ್ವೋತ್ತಮತ್ವ ಪ್ರತಿಪಾದನವು ಯಾರಿಗೆ ಧರ್ಮವಾಗಿರುವದೋ ಹೀಗೂ ಅರ್ಥ.) ಮತ್ತು ವಿಷಯ ನಿವೃತ್ತಿಗಳು **ಧರ್ಮಃ** ಧರ್ಮವಾಗಿರುವವೋ (ವಿಹಿತವಾಗಿರುವವೋ) **ತತ್** ಆ **ಪಾರಮಹಂಸ್ಯಸತ್ಯಂ** ಸನ್ಯಾಸಾಶ್ರಮದಿಂದ ಪ್ರಾಪ್ಯನಾದ ಬ್ರಹ್ಮನನ್ನು **ವ್ರಜಂತಿ** ಹೊಂದುವರು.

*ಭಾಗವತತಾತ್ಪರ್ಯ-*

ಈ ಶ್ಲೋಕದಲ್ಲಿ ಪಾರಮಹಂಸ್ಯಸತ್ಯಂ ಎಂದರೆ ಸನ್ಯಾಸಿಗಳ ಸಂಬಂಧಿ ಸತ್ಯವಚನ ಎಂದು ತೋರುವದು ಅದಕ್ಕೆ ತಾತ್ಪರ್ಯದಿಂದ ಹೀಗೆ ಉತ್ತರ ಹೇಳುವರು.

''ಪರಮಹಂಸಾಶ್ರಮಪ್ರಾಪ್ಯಂ ಸತ್ಯಂ ಬ್ರಹ್ಮ'' ।

ಪರಮಹಂಸರಿಂದ ಹೊಂದಲ್ಪಡುವ ಬ್ರಹ್ಮನೇ ಸತ್ಯಶಬ್ದಕ್ಕೆ ಅರ್ಥವೆಂದು ಭಾವ. ಇದರಿಂದ ಮಹಾತ್ಮರು ಎಂದರೇ ಪರಮಹಂಸರಾದ ಬ್ರಹ್ಮಾದಿಗಳು ಅವರಿಗೆ ವಿಷಯ ವೈರಾಗ್ಯಭಕ್ತಿಜ್ಞಾನಮುಂತಾದ ಏಕಾಂತನಿಯಮದಿಂದ ಪರಾಯಣ ಕೊನೆಗೆ ಪ್ರಾಪ್ಯ

ಎಂದು ಮಹತ್ತಮೈಕಾಂತಪರಾಯಣತ್ವವನ್ನು ವಿವರಿಸಿದಂತಾಯಿತು. ಯೋऽನಂತಶಕ್ತಿಃ ಎಂದಾರಂಭಿಸಿ ಯತ್ರಾನುರಕ್ತಾಃ ಎಂಬುವವರೆಗೆ ಯಚ್ಛಬ್ದಗಳಿಗೆ ಕುತಃ ಪುನಃ ಎಂಬ ಶ್ಲೋಕದಲ್ಲಿಯ ತಸ್ಯ ಎಂಬ ಪದದಿಂದ ಅನ್ವಯವೆಂದು ತಿಳಿಯಬೇಕು.

ವಿಷ್ಣು ಅನಂತನಾಗಿದ್ದಾನೆ. ಅವನನ್ನು ಸಂಪೂರ್ಣವಾಗಿ ನಿನಗೆ ಹೇಳಲಾಗುವದಿಲ್ಲ. ಇದು ನಿಜವೆಂದು ಹೇಳುವರು.

**ಅಹಂ ಹಿ ಪೃಷ್ಟೋऽಸ್ಯ ಗುಣಾನ್ಭವದ್ಭಿ-**
**ರಾಚಕ್ಷ ಆತ್ಮಾವಗಮೋऽತ್ರ ಯಾವಾನ್ ।**
**ನಭಃ ಪತಂತ್ಯಾತ್ಮಸಮಂ ಪತತ್ರಿಣ-**
**ಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ ॥೨೩॥**

**ಭವದ್ಭಿಃ** ನಿಮ್ಮಿಂದ **ಅಸ್ಯ ಗುಣಾನ್** ಶ್ರೀಹರಿಯ ಗುಣಗಳನ್ನು **ಪೃಷ್ಟಃ** ಹೇಳೆಂದು ಪ್ರಶ್ನಿಸಲ್ಪಟ್ಟು **ಅಹಂ** ನಾನು **ಅತ್ರ** ವಿಷ್ಣುವಿನ ಸ್ವರೂಪವಿಷಯದಲ್ಲಿ **ಯಾವಾನ್** ಎಷ್ಟು **ಆತ್ಮಾವಗಮಃ** ನನಗೆ ತಿಳಿದಿದೆಯೋ **ತಾವತ್ ಆಚಕ್ಷೇ** ಅಷ್ಟನ್ನೇ ಹೇಳಬಲ್ಲೆ ಹೆಚ್ಚಿಗೆ ಹೇಳಲಾರೆ. ನಿನಗೆ ಸಾಮರ್ಥ್ಯವಿಲ್ಲವಾದರೂ ಬೇರೆಯವರು ಸಂಪೂರ್ಣ ಹೇಳುವರೇ ಎಂದರೆ ಇಲ್ಲವೆಂದು ಉದಾಹರಣೆ ಕೊಟ್ಟು ಹೇಳುವರು. **ಯಥಾ** ಹೇಗೆ **ಪತತ್ರಿಣಃ** ಪಕ್ಷಿಗಳು **ನಭಃ** ಆಕಾಶವನ್ನು **ಆತ್ಮಸಮಂ** ತಮ್ಮ ಶಕ್ತ್ಯನುಸಾರ **ಪತಂತಿ** ಹಾರುವವೋ **ತಥಾ** ಹಾಗೆಯೇ **ವಿಪಶ್ಚಿತಃ** ಜ್ಞಾನಿಗಳು **ವಿಷ್ಣುಗತಿಂ** ಶ್ರೀಹರಿಯ ಸ್ವರೂಪವನ್ನು **ಸಮಂ** ತಮ್ಮ ಬುದ್ಧಿಗನುಗುಣವಾಗಿ ಹೇಳುವರು. ಹೊರತು ಎಲ್ಲವನ್ನಲ್ಲ ಎಂದು ಭಾವ.

**ಏಕದಾ ಧನುರುದ್ಯಮ್ಯ ವಿಚರನ್ ಮೃಗಯಾಂ ವನೇ ।**
**ಮೃಗಾನನುಗತಃ ಶ್ರಾಂತಃ ಕ್ಷುಧಿತಸ್ತೃಷಿತೋ ಭೃಶಮ್ ॥೨೪॥**

**ಏಕದಾ** ಒಂದು ಸಲ **ಧನುಃ ಉದ್ಯಮ್ಯ** ಧನುಸ್ಸನ್ನು ಎತ್ತಿಕೊಂಡು **ಮೃಗಯಾಂ ಉದ್ದಿಶ್ಯ** ಬೇಟೆಗಾಗಿ **ವನೇ ಚರನ್** ಅಡವಿಯಲ್ಲಿ ಸಂಚರಿಸುತ್ತ **ಮೃಗಾನ್ ಅನುಗತಃ** ಮೃಗಗಳನ್ನು ಬೆನ್ನು ಹತ್ತಿ ಹೋಗಿ **ಶ್ರಾಂತಃ** ಶ್ರಮವುಳ್ಳವನು **ಕ್ಷುಧಿತಃ** ಹಸಿದವನು **ಭೃಶಂ ತೃಷಿತಃ** ಬಹಳ ನೀರಡಿಸಿದವನಾಗಿದ್ದನು.

**ಜಲಾಶಯಮಚಕ್ಷಾಣಃ ಪ್ರವಿವೇಶ ಸ ಆಶ್ರಮಮ್ ।**
**ದದರ್ಶ ಮುನಿಮಾಸೀನಂ ಶಾಂತಂ ಮೀಲಿತಲೋಚನಮ್ ॥೨೫॥**

**ಸಃ** ಪರೀಕ್ಷಿತನು **ಜಲಾಶಯಂ** ಸರೋವರಮುಂತಾದವನ್ನು **ಅಚಕ್ಷಾಣಃ** ಕಾಣದೇ **ಆಶ್ರಮಂ** ಆಶ್ರಮವನ್ನು **ಪ್ರವಿವೇಶ** ಪ್ರವೇಶಿಸಿದನು **ಮೀಲಿತಲೋಚನಂ** ಕಣ್ಣುಮುಚ್ಚಿದ **ಶಾಂತಂ** ಅಸಂಪ್ರಜ್ಞಾತಸಮಾಧಿಯಲ್ಲಿರುವ **ಆಸೀನಂ** ಕುಳಿತಿರುವ **ಮುನಿಂ** ಮುನಿಯನ್ನು **ದದರ್ಶ** ನೋಡಿದನು.

**ಪ್ರತಿರುದ್ಧೇಂದ್ರಿಯಪ್ರಾಣಮನೋಬುದ್ಧಿಮುಪಾರತಮ್ ।**
**ಸ್ಥಾನತ್ರಯಾತ್ಪರಂ ಪ್ರಾಪ್ತಂ ಬ್ರಹ್ಮಭೂತಮವಿಕ್ರಿಯಮ್ ॥೨೬॥**

**ಪ್ರತಿರುದ್ಧೇಂದ್ರಿಯಪ್ರಾಣಮನೋಬುದ್ಧಿವ್ ಪ್ರತಿರುದ್ಧ** ಪರಮಾತ್ಮನಲ್ಲಿ ಸ್ಥಾಪಿತವಾದ **ಇಂದ್ರಿಯಪ್ರಾಣಮನೋಬುದ್ಧಿಂ** ಇಂದ್ರಿಯಗಳು ಪ್ರಾಣ ಮತ್ತು ಮನಸ್ಸು ಬುದ್ಧಿಯುಳ್ಳ **ಉಪಾರತಮ್** ವಿಷಯವಿರಕ್ತನಾದ (**ಉಪೇ** ರುದ್ರಪಾಲಕನಾದ ಶ್ರೀಹರಿಯಲ್ಲಿ **ಆರತಂ** ಚೆನ್ನಾಗಿ ರತನಾದ) **ಸ್ಥಾನತ್ರಯಾತ್ ಪರಂ** ಜಾಗ್ರತ, ಸ್ವಪ್ನ, ಸುಷುಪ್ತಿರೂಪ ಅವಸ್ಥಾತ್ರಯಗಳಿಗಿಂತ ಉತ್ತಮವಾದ ವಿಲಕ್ಷಣವಾದ ಅವಸ್ಥಾ ಎಂದರೆ ಅಸಂಪ್ರಜ್ಞಾತಸಮಾಧಿಯನ್ನು **ಪ್ರಾಪ್ತಂ** ಹೊಂದಿದ **ಬ್ರಹ್ಮಭೂತಂ** ಸಮಾಧಿ ಯಲ್ಲಿರುವದರಿಂದ **ಅವಿಕ್ರಿಯಂ** ವಿಹಿತವಾದ ಕ್ರಿಯೆಗಳನ್ನು ಅನುಷ್ಠಾನ ಮಾಡದಿರುವ.

*ಭಾಗವತತಾತ್ಪರ್ಯ-*

ಇಲ್ಲಿ ಬ್ರಹ್ಮಭೂತ ಎಂಬುದಕ್ಕೆ ಬ್ರಹ್ಮನಿಂದ ಐಕ್ಯ ಹೊಂದಿದ ಎಂದರ್ಥ ತೋರುವದು. ಆ ತೋರುವ ಐಕ್ಯ ಸರಿಯಲ್ಲ ಎಂಬುದನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು.

ಸ್ವತೋ ಮನಃ ಸ್ಥಿತಿರ್ವಿಷ್ಣೌ ಬ್ರಹ್ಮಭಾವ ಉದಾಹೃತಃ । -ಇತಿ ಬ್ರಹ್ಮಾಂಡೇ

ಕೆಲವು ಪಾಠಗಳಲ್ಲಿ ಬ್ರಹ್ಮಭೂತಂ, ಬ್ರಹ್ಮಣಿ ಭೂತಂ ಎಂದೂ ಪಾಠವಿದೆ. ಬ್ರಹ್ಮಭೂತಂ ಎಂಬುದಕ್ಕೆ ಸ್ವತ ಏವ ಮನಸ್ಸನ್ನು ಇಟ್ಟಿರುವವನೆಂದರ್ಥ. ವಿಷಯಗಳಲ್ಲಿ ಮನಸ್ಸಿಡದೇ ಉಪಾಸ್ಯನಾದ ಶ್ರೀವಿಷ್ಣುವಿನಲ್ಲಿ ಮನಸ್ಸು ಇಡುವಿಕೆಯು ಬ್ರಹ್ಮಭಾವ ಎನಿಸುವದು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ. ಮೊದಲಿನ ವಾಕ್ಯ ಇಲ್ಲದಿರುವ ಪಾಠದಲ್ಲಿ ಪ್ರಮಾಣವಚನಾನುಸಾರ ಬ್ರಹ್ಮಣಿ ಭೂತಂ ಎಂದರ್ಥ ಮಾಡಿದಂತಾಯಿತು ಎಂದು ವ್ಯಾಖ್ಯಾನಿಸಬೇಕು.

**ವಿಪ್ರಕೀರ್ಣಜಟಾಚ್ಛನ್ನಂ ರೌರವೇಣಾಜಿನೇನ ಚ ।**
**ವಿಶುಷ್ಯತ್ತಾಲುರುದಕಂ ತಥಾಭೂತಮಯಾಚತ ॥೨೭॥**

**ವಿಪ್ರಕೀರ್ಣಜಟಾಚ್ಛನ್ನಂ** ಹರವಿದ ಜಟೆಯಿಂದ ಆವರಿಸಿದ **ಚ** ಮತ್ತು **ರೌರವೇಣ ಅಜಿನೇನ** ರುರು ಎಂಬ ಪ್ರಾಣಿಯ ಚರ್ಮದಿಂದ ಆಚ್ಛಾದಿತನಾದ ಮುನಿಯನ್ನು ಕಂಡನು **ವಿಶುಷ್ಯತ್ತಾಲುಃ** ಒಣಗಿದ ನಾಲಿಗೆಯ ಮೂಲವುಳ್ಳ ರಾಜನು **ತಥಾಭೂತಂ** ಅಸಂಪ್ರಜ್ಞಾತಸಮಾಧಿಯಲ್ಲಿರುವ ಮುನಿಯನ್ನು **ಉದಕಂ ಅಯಾಚತ** ನೀರನ್ನು ಕೇಳಿದನು.

**ಅಲಬ್ಧತೃಣಭೂಮ್ಯಾದಿರಸಂಪ್ರಾಪ್ತಾರ್ಘ್ಯಸೂನೃತಃ ।**
**ಅವಜ್ಞಾತಮಿವಾತ್ಮಾನಂ ಮನ್ಯಮಾನಶ್ಚುಕೋಪ ಹ ॥೨೮॥**

**ಅಲಬ್ಧತೃಣಭೂಮ್ಯಾದಿಃ** ದೊರೆಯದಿರುವ ಹುಲ್ಲಿನ ಆಸನ ಕೂಡಲು ಸ್ಥಳ ಮಧುಪರ್ಕಾದಿಗಳುಳ್ಳ **ಅಸಂಪ್ರಾಪ್ತಾರ್ಘ್ಯಸೂನೃತಃ** ಅರ್ಘ್ಯ, ಸ್ವಾಗತ ವಚನಗಳನ್ನು ಪಡೆಯದ **ಆತ್ಮಾನಂ** ತನ್ನನ್ನು **ಅವಜ್ಞಾತಂ** ಇವ ಅವಮಾನಿತನಂತೆ **ಮನ್ಯಮಾನಃ** ತಿಳಿದವನಾಗಿ **ಚುಕೋಪ ಹ** ಸಿಟ್ಟಾದನು.

**ಅಭೂತಪೂರ್ವಃ ಸಹಸಾ ಕ್ಷುತ್ತೃಡ್ಭ್ಯಾಮರ್ದಿತಾತ್ಮನಃ ।**
**ಬ್ರಾಹ್ಮಣಂ ಪ್ರತ್ಯಭೂತ್ ಬ್ರಹ್ಮನ್ಮತ್ಸರೋ ಮನ್ಯುರೇವ ಚ ॥೨೯॥**

**ಬ್ರಹ್ಮನ್** ಶೌನಕರೇ **ಕ್ಷುತ್ತೃಡ್ಭ್ಯಾಂ** ಹಸವೆ ನೀರಡಿಕೆಗಳಿಂದ **ಅರ್ದಿತಾತ್ಮನಃ** ದುಃಖಿತವಾದ ಮನುಸ್ಸುಳ್ಳ ಪರೀಕ್ಷಿತನಿಗೆ **ಸಹಸಾ** ತಕ್ಷಣದಲ್ಲಿ **ಬ್ರಾಹ್ಮಣಂ ಪ್ರತಿ** ಮುನಿಯ ಮೇಲೆ **ಅಭೂತಪೂರ್ವಃ** ಹಿಂದೆಂದೂ ಬರದ **ಮನ್ಯುಃ** ಕೋಪವು ಮತ್ತು **ಮತ್ಸರಃ** ಇವನು ನನ್ನ ವಶನಲ್ಲ ಎಂಬ ಮನಸ್ಸಿಗೆ ಖೇದವು **ಅಭೂತ್** ಆಯಿತು.

*ಭಾಗವತತಾತ್ಪರ್ಯ-*

ಇಲ್ಲಿ ಮನ್ಯು ಮತ್ಸರ ಶಬ್ದಗಳ ಭಿನ್ನಾರ್ಥಗಳನ್ನು ತಿಳಿಸುವರು.

ಅಪ್ರೀತಿರ್ಮದ್ವಶೋ ನಾಯಮಿತಿ ಮತ್ಸರ ಈರಿತಃ ॥

-ಇತಿ ನಾಮಮಹೋದಧೌ

ಇವನು ನನ್ನ ವಶನಲ್ಲ ಎಂಬ ಮನೋವ್ಯಥೆಯೇ ಮಾತ್ಸರ್ಯ. ಇನ್ನು ಮನ್ಯುಎಂದರೆ ಕ್ರೋಧ ಎಂದು ನಾಮಮಹೋದಧಿಯಲ್ಲಿ ಹೇಳಿದೆ.

**ಸ ತು ಬ್ರಹ್ಮಋಷೇರಂಸೇ ಗತಾಸುಮುರಗಂ ರುಷಾ ।**
**ವಿನಿರ್ಗಚ್ಛನ್ಧನುಷ್ಕೋಟ್ಯಾ ನಿಧಾಯ ಪುರಮಾಗಮತ್ ॥೩೦॥**

**ಸಃ** ಪರೀಕ್ಷಿತರಾಜರು **ಬ್ರಹ್ಮಋಷೇಃ ಅಂಸೇ** ಆ ಋಷಿಗಳ ಕುತ್ತಿಗೆಯಲ್ಲಿ **ರುಷಾ** ಸಿಟ್ಟಿನಿಂದ **ಗತಾಸುಂ** ಸತ್ತ **ಉರಗಂ** ಹಾವನ್ನು **ವಿನಿರ್ಗಚ್ಛನ್** ತಿರುಗಿ ಹೋಗುವಾಗ **ಧನುಷ್ಕೋಟ್ಯಾ** ಬಿಲ್ಲಿನ ತುದಿಯಿಂದ **ನಿಧಾಯ** ಹಾಕಿ **ಪುರಂ ಆಗತಃ** ಊರಿಗೆ ಬಂದನು.

ಊರಿಗೆ ಬರುವಾಗ ಮಾಡಿದ ರಾಜನ ವಿಚಾರ ತಿಳಿಸುವರು.

**ಏಷ ಕಿಂ ನಿಭೃತಾಶೇಷಕರಣೋ ಮೀಲಿತೇಕ್ಷಣಃ ।**
**ಮುಧಾ ಸಮಾಧಿರಾಹೋಸ್ವಿತ್ ಕಿನ್ನಃ ಸ್ಯಾತ್ ಕ್ಷತ್ರಬಂಧುಭಿಃ ॥೩೧॥**

**ಏಷಃ** ಈ ಬ್ರಹ್ಮಋಷಿಯು **ಕಿಂ** ಏನು **ನಿಭೃತಾಶೇಷಕರಣಃ** ಭಗವಂತನ ವಿಷಯದಲ್ಲಿ ಅತಿಶಯವಾಗಿ ಸ್ಥಾಪಿಸಿಲ್ಪಟ್ಟ ಎಲ್ಲ ಇಂದ್ರಿಯಗಳುಳ್ಳವನಾಗಿರುವನೋ **ಆಹೋಸ್ವಿತ್** ಅಥವಾ **ನಃ** ನಮಗೆ **ಕ್ಷತ್ರಬಂಧುಭಿಃ** ರಾಜರಿಂದ **ಕಿಂ ಸ್ಯಾತ್** ಏನು ಪ್ರಯೋಜನವಾದೀತು ಎಂದು ನಮ್ಮ ಅವಜ್ಞೆಯಿಂದ **ಮುಧಾ** ಸುಳ್ಳು **ಸಮಾಧಿಃ** ಸಮಾಧಿಯ ಮಾಡಿ **ಮೀಲಿತೇಕ್ಷಣಃ** ಕಣ್ಣು ಮುಚ್ಚಿರುವನೋ ಎಂದು ಆಲೋಚಿಸುತ್ತ ಊರಿಗೆ ಬಂದನು.

**ತಸ್ಯ ಪುತ್ರೋಽತಿತೇಜಸ್ವೀ ವಿಹರನ್ ಬಾಲಕೋರ್ಭಕೈಃ ।**
**ರಾಜ್ಞಾಽಘಂ ಪ್ರಾಪಿತಂ ತಾತಂ ಶ್ರುತ್ವಾ ತತ್ರೇದಮಬ್ರವೀತ್ ॥೩೨॥**

**ಅರ್ಭಕೈಃ** ಮಕ್ಕಳೊಡನೆ **ವಿಹರನ್** ಕ್ರೀಡಿಸುವ **ತಸ್ಯ** ಋಷಿಯ **ಅತಿತೇಜಸ್ವೀ** ಮಹಾಸಮರ್ಥನಾದ **ಪುತ್ರಃ** ಮಗನು **ರಾಜ್ಞಾ** ರಾಜನಿಂದ **ಅಘಂ ಪ್ರಾಪಿತಂ** ಅವಮಾನಿತನಾದ **ತಾತಂ** ತನ್ನ ತಂದೆಯನ್ನು **ಶ್ರುತ್ವಾ** ಕೇಳಿ **ತತ್ರ** ಬಾಲಕರ ಮಧ್ಯದಲ್ಲಿ **ಏವಂ** ಈ ರೀತಿ **ಅಬ್ರವೀತ್** ಮಾತನಾಡಿದರು.

**ಅಹೋ ಅಧರ್ಮಃ ಪಾಲಾನಾಂ ಪೃಥ್ವ್ಯಾಃ ಬಲಿಭುಜಾಮಿವ ।**
**ಸ್ವಾಮಿನ್ಯಘಂ ಯದ್ದಾಸಾನಾಂ ದ್ವಾರಪಾನಾಂ ಶುನಾಮಿವ ॥೩೩॥**

**ಬಲಿಭುಜಾಂ ಇವ** ಬಲಿಯನ್ನು ತಿನ್ನುವ ಕಾಗೆಯಂತೆ **ದ್ವಾರಪಾನಾಂ ಶುನಾಂ ಇವ** ಬಾಗಿಲು ಕಾಯುವ ನಾಯಿಯಂತೆ(ನಾಯಿಯು ಯಜಮಾನನನ್ನು ಕಚ್ಚಿದಂತೆ) **ದಾಸಾನಾಂ** ಬ್ರಾಹ್ಮಣರ ದಾಸರಾದ ಬ್ರಾಹ್ಮಣರ ಮನೆ ಬಾಗಿಲು ಕಾಯುವ **ಪೃಥ್ವ್ಯಾಃ**

**ಪಾಲಾನಾಂ** ರಾಜರ **ಸ್ವಾಮಿನಿ** ನಿಯಾಮಕರಾದ ಬ್ರಾಹ್ಮಣರಲ್ಲಿ **ಅಘಂ** ಅಪರಾಧವು **ದೃಷ್ಟಂ** ನೋಡಲ್ಪಟ್ಟಿತು ಅದು **ಅಧರ್ಮಃ** ಪಾಪವು **ಅಹೋ** ಕಷ್ಟವು.

**ಬ್ರಾಹ್ಮಣೈಃ ಕ್ಷತ್ರಬಂಧುರ್ಹಿ ದ್ವಾರಪಾಲೋ ನಿರೂಪಿತಃ ।**
**ಸ ಕಥಂ ತದ್ಗೃಹೇ ದ್ವಾಸ್ಥಃ ಸಭಾಂಡಂ ಭೋಕ್ತುಮರ್ಹತಿ ॥೩೪॥**

**ಬ್ರಾಹ್ಮಣೈಃ** ಬ್ರಹ್ಮಜ್ಞಾನಿಗಳಾದ ವೇದಜ್ಞಾನಿಗಳಾದ ಮರೀಚಿ ಮನು ಮುಂತಾದವರಿಂದ **ಕ್ಷತ್ರಬಂಧುಃ** ಕ್ಷತ್ರಿಯನು **ಗೃಹಪಾಲಃ** ಬ್ರಾಹ್ಮಣರ ಮನೆ ಕಾಯುವವನೆಂದು(ದಾಸನೆಂದು)**ನಿರೂಪಿತಃ** ಧರ್ಮಶಾಸ್ತ್ರದಲ್ಲಿ ಪ್ರತಿಪಾದಿತ-ನಾಗಿದ್ದಾನೆ **ಹಿ** ಆದ ಕಾರಣ **ದ್ವಾಸ್ಥಃ** ಬಾಗಿಲುಕಾಯುವ ನಾಯಿಗೆ ಸಮಾನನಾದವನು **ಸಭಾಂಡಂ** ಪದಾರ್ಥಗಳಿಂದ ಸಹಿತವಾದ **ಗೃಹಂ** ಮನೆಯನ್ನು **ಕಥಂ ಭೋಕ್ತುಂ ಅರ್ಹತಿ** ಮುಟ್ಟಲು ಹೇಗೆ ಯೋಗ್ಯನಾಗುವನು. ಇವನು ನಾಯಿಯಂತಿರುವನು ಹೊರಗೆ ನಿಂತು ನೀರು ಕೇಳಬೇಕಿತ್ತು ಒಳಗೆ ಬಂದು ನಮ್ಮನ್ನು ಮುಟ್ಟಿದನು ಹೇಗೆ ಆದ್ದರಿಂದ ದಂಡ್ಯನಿವನು.

**ಕೃಷ್ಣೇ ಗತೇ ಭಗವತಿ ಶಾಸ್ತರ್ಯುತ್ಪಥಗಾಮಿನಾಮ್ ।**
**ತಾನ್ ಭಿನ್ನಸೇತೂನದ್ಯಾಹಂ ಶಾಸ್ಮಿ ಪಶ್ಯತ ಮೇ ಬಲಮ್ ॥೩೫॥**

**ಶಾಸ್ತರಿ** ಅಪರಾಧಿಗಳಿಗೆ ಶಾಸನಮಾಡುವ **ಭಗವತಿ** ಭಗವಾನ್ **ಕೃಷ್ಣೇ** ಶ್ರೀಕೃಷ್ಣನು **ಗತೇ ಸತಿ** ಪರಂಧಾಮಕ್ಕೆ ಹೋಗುತ್ತಿರಲು **ಉತ್ಪಥಗಾಮಿನಾಂ** ಮಾರ್ಗವನ್ನು ಬಿಟ್ಟು ಚಲಿಸುವ **ಭಿನ್ನಸೇತೂನ್** ಧರ್ಮಮರ್ಯಾದೆಯನ್ನು ಮೀರಿದ **ತಾನ್** ಕ್ಷತ್ರಿಯರನ್ನು **ಅದ್ಯ** ಈಗ **ಅಹಂ** ನಾನು **ಶಾಸ್ಮಿ** ಶಿಕ್ಷಿಸುವೆನು **ಬಾಲಕಾಃ** ಬಾಲಕರೇ **ಮೇ ಬಲಂ** ನನ್ನ ಸಾಮರ್ಥ್ಯವನ್ನು **ಪಶ್ಯತ** ನೋಡಿರಿ.

**ಇತ್ಯುಕ್ತ್ವಾ ರೋಷತಾಮ್ರಾಕ್ಷಃ ವಯಸ್ಯಾನೃಷಿಬಾಲಕಾನ್ ।**
**ಕೌಶಿಕ್ಯಪ ಉಪಸ್ಪೃಶ್ಯ ವಾಗ್ವಜ್ರಂ ವಿಸಸರ್ಜ ಹ ॥೩೬॥**

**ಇತಿ** ಈ ರೀತಿಯಾಗಿ **ವಯಸ್ಯಾನ್** ಸಮಾನವಯಸ್ಕರಾದ (ಗೆಳೆಯರಾದ) **ಋಷಿಬಾಲಕಾನ್** ಋಷಿಕುಮಾರರಿಗೆ **ಉಕ್ತ್ವಾ** ಹೇಳಿ **ರೋಷತಾಮ್ರಾಕ್ಷಃ** ಸಿಟ್ಟಿನಿಂದ ಕೆಂಪು ಕಣ್ಣುಳ್ಳವನಾಗಿ **ಕೌಶಿಕೀ** ಕುಶನಿರ್ಮಿತ ಪವಿತ್ರಧರಿಸಿ **ಅಪಃ ಉಪಸ್ಪೃಶ್ಯ** ಆಚಮನಮಾಡಿ **ವಾಗ್ವಜ್ರಂ** ಶಾಪವನ್ನು **ವಿಸಸರ್ಜ** ಕೊಟ್ಟನು **ಹ** ಕಷ್ಟವು.

*ಭಾಗವತತಾತ್ಪರ್ಯ-*

ಈ ವಿಧ ಶಾಪ ಉಚಿತವಲ್ಲವೆಂದು ಭಾವ. ಕೌಶಿಕನದಿಯ ನೀರನ್ನು ಆಚಮನ ಮಾಡಿ ಎಂಬ ವ್ಯಾಖ್ಯಾನವು ಜಲಾಶಯಮಚಕ್ಷಾಣಃ ಎಂದು ಹಿಂದೆ ಹೇಳಿದ್ದಕ್ಕೆ ವಿರುದ್ಧ. ಕಾರಣ ವಿವಕ್ಷಿತ ತಾತ್ಪರ್ಯವನ್ನು ಹೇಳುವರು.

**ಕೌಶಿಕೀ ಕುಶಪಾಣಿಃ ।**

ದರ್ಭದಿಂದ ಮಾಡಿದ ಪವಿತ್ರವನ್ನು ಕೈಯಲ್ಲಿ ಧರಿಸಿದ ಎಂದರ್ಥ. ಕುಶಿಕಗೋತ್ರೋತ್ಪನ್ನ ಎಂಬರ್ಥವು ಸರಿಯಲ್ಲ. ಮುಂದೆ ಅಂಗೀರಸಗೋತ್ರೋದ್ಭವ ಎಂದು ಹೇಳಲಾಗಿದೆ.

**ಇತೋ ಲಂಘಿತಮರ್ಯಾದಂ ತಕ್ಷಕಃ ಸಪ್ತಮೇಽಹನಿ ।**
**ಧಕ್ಷ್ಯತಿ ಸ್ಮ ಕುಲಾಂಗಾರಂ ಚೋದಿತೋ ಮೇ ಪಿತೃದ್ರುಹಮ್ ॥೩೭॥**

**ಇತಃ** ಇವತ್ತಿನಿಂದ **ಸಪ್ತಮೇ ಅಹನಿ** ಏಳನೇ ದಿವಸ **ಮೇ** ನನ್ನಿಂದ **ಚೋದಿತಃ** ಪ್ರೇರಿತವಾದ **ತಕ್ಷಕಃ** ತಕ್ಷಕ ಎಂಬ ಹೆಸರಿನ ಸರ್ಪವು **ಲಂಘಿತಮರ್ಯಾದಂ** ಧರ್ಮ ಮರ್ಯಾದೆಯನ್ನು ಉಲ್ಲಂಘಿಸಿದ **ಕುಲಾಂಗಾರಂ** ಕುಲವನ್ನು ನಾಶಮಾಡಲು ಬೆಂಕಿಯಂತಿದ್ದ **ಪಿತೃದ್ರುಹಂ** ನನ್ನ ತಂದೆಗೆ ದ್ರೋಹ ಬಗೆದ ಪರೀಕ್ಷಿತನನ್ನು **ಧಕ್ಷ್ಯತಿ ಸ್ಮ** ಸುಟ್ಟು ಹಾಕುವದು ಇದು ನನ್ನ ಸಾಕ್ಷಿ ಸಿದ್ಧ.

**ವಿಜಯಧ್ವಜೀಯ- ಧಕ್ಷ್ಯತಿ ಸ್ಮ** ಸುಟ್ಟು ಹಾಕಲಿ. ಲೃಟ್ ಸ್ಮ ಶಬ್ದವಿರುವದರಿಂದ ಲೋಟ್ ಅರ್ಥ ಹೇಳುವದು. ಸ್ಮಶಬ್ದವು ಭಾಗವತ ಪ್ರಧಾನನಾದ ರಾಜನನ್ನು ಸುಡಲು ಸಾಮರ್ಥ್ಯ ತಿಳಿಸುವದು.

**ತತೋಽಭ್ಯೇತ್ಯಾಶ್ರಮಂ ಬಾಲೋ ಗಲೇ ಸರ್ಪಕಲೇವರಮ್ ।**
**ಪಿತರಂ ವೀಕ್ಷ್ಯ ದುಃಖಾರ್ತೋ ಮುಕ್ತಕಂಠೋ ರುರೋದ ಹ ॥೩೮॥**

**ತತಃ** ನಂತರ **ಆಶ್ರಮಂ ಅಭ್ಯೇತ್ಯ** ಆಶ್ರಮಕ್ಕೆ ಬಂದು **ಗಲೇ** ಕುತ್ತಿಗೆಯಲ್ಲಿ **ಸರ್ಪಕಲೇವರಂ** ಹಾವಿರುವ ಶರೀರವುಳ್ಳ **ಪಿತರಂ** ತಂದೆಯನ್ನು **ವೀಕ್ಷ್ಯ** ನೋಡಿ **ಬಾಲಃ** ಬಾಲಕನಾದ ಶೃಂಗಿಯು **ದುಃಖಾರ್ತಃ** ದುಃಖಪೀಡಿತನಾಗಿ **ಮುಕ್ತಕಂಠಃ** ಬಾಯಿತೆರೆದು **ರುರೋದ** ಅತ್ತನು (ಗಟ್ಟಿಯಾಗಿ ಅತ್ತನು) ಸಮಾಧಿಸ್ಥರನ್ನು ಏಳೆಂದು ಎಬ್ಬಿಸಬಾರದು ಎಂದು ತಿಳಿದು ಗಟ್ಟಿಯಾಗಿ ಅತ್ತನೆಂದು ಭಾವ.

**ಸ ವಾ ಆಂಗಿರಸೋ ಬ್ರಹ್ಮನ್ ಶ್ರುತ್ವಾ ಸುತವಿಲಾಪಿತಮ್ ।**
**ಉನ್ಮೀಲ್ಯ ಶನಕೈರ್ನೇತ್ರೇ ದೃಷ್ಟ್ವಾ ಚಾಂಸೇ ಮೃತೋರಗಮ್ ॥೩೯॥**

**ಬ್ರಹ್ಮನ್** ಶೌನಕರೇ **ಸಃ ಆಂಗಿರಸಃ** ಆಂಗಿರಸಕುಲದಲ್ಲಿ ಜನಿಸಿದ ಶಮೀಕರು **ಸುತವಿಲಾಪಿತಂ** ಮಗನ ಅಳು **ಶ್ರುತ್ವಾ** ಕೇಳಿ **ಶನಕೈಃ** ಮೆಲ್ಲನೆ **ನೇತ್ರೇ ಉನ್ಮೀಲ್ಯ** ಕಣ್ಣು ತೆರೆದು **ಅಂಸೇ** ಕುತ್ತಿಗೆಯಲ್ಲಿ **ಮೃತೋರಗಂ ಚ** ಸತ್ತ ಹಾವನ್ನು **ದೃಷ್ಟ್ವಾ** ನೋಡಿ

**ವಿಸೃಜ್ಯ ಪುತ್ರಂ ಪಪ್ರಚ್ಛ ವತ್ಸ ಕಸ್ಮಾದ್ವಿರೋದಿಷಿ ।**
**ಕೇನ ವಾ ತೇ ವಿಪ್ರಕೃತಮಿತ್ಯುಕ್ತಃ ಸ ನಿವೇದಯತ್ ॥೪೦॥**

**ವಿಸೃಜ್ಯ** ಹಾವನ್ನು ತೆಗೆದೆಸೆದು **ಪುತ್ರಂ** ಮಗನನ್ನು **ವತ್ಸ** ಮಗುವೇ **ಕಸ್ಮಾತ್ ವಿರೋದಿಷಿ** ಏಕೆ ಅಳುವಿ **ಕೇನ ತೇ ವಿಪ್ರಕೃತಂ** ಯಾರಿಂದ ನಿನಗೆ ಅಪಕಾರವಾಯಿತು **ಇತ್ಯುಕ್ತಃ** ಈ ರೀತಿ ಪ್ರಶ್ನಿಸಲ್ಪಟ್ಟ **ಸಃ** ಶೃಂಗಿಯು **ನಿವೇದಯತ್** ವಿಷಯವನ್ನು ತಿಳಿಸಿದನು.

**ನಿಶಮ್ಯ ಶಪ್ತಮತದರ್ಹಂ ನರೇಂದ್ರಂ**
**ಸ ಬ್ರಾಹ್ಮಣೋ ನಾತ್ಮಜಮಭ್ಯನಂದತ್ ।**
**ಅಹೋ ಬತಾಂಹೋ ಮಹದಜ್ಞ ತೇ ಕೃತ-**
**ಮಲ್ಪೀಯಸೀ ದ್ರೋಹ ಉರುಶ್ರಮೋ ಧೃತಃ ॥೪೧॥**

**ಸಃ ಬ್ರಾಹ್ಮಣಃ** ಆ ಶಮೀಕ ಋಷಿಯು **ಅತದರ್ಹಂ** ಶಪಿಸಲು ಯೋಗ್ಯನಲ್ಲದ **ನರೇಂದ್ರಂ** ರಾಜನನ್ನು **ಶಪ್ತಂ ನಿಶಮ್ಯ** ಮಗನಿಂದ ಶಪಿಸಲ್ಪಟ್ಟವನನ್ನಾಗಿ ಕೇಳಿ **ಆತ್ಮಜಂ** ಮಗನನ್ನು **ನ ಅಭ್ಯನಂದತ** ಒಳ್ಳೇ ಕೆಲಸ ಮಾಡಿದಿ ಎಂದು ಸಂತೋಷಪಡಲಿಲ್ಲ **ಕಿಂತು ಹೇ ಅಜ್ಞ** ಎಲೋ ದಡ್ಡನೆ **ತೇ** ನಿನ್ನಿಂದ **ಅಲ್ಪೀಯಸಿ ದ್ರೋಹೇ** ಸಣ್ಣತಪ್ಪು ಆದಾಗ **ಉರುಶ್ರಮಃ ಧೃತಃ** ಬಹುದಂಡ ವಿಧಿಸಿರುವಿ ಕಾರಣ **ಮಹತ್ ಅಂಹಃ ಕೃತಃ** ಮಹಾಪಾಪಮಾಡಲ್ಪಟ್ಟಿದೆ **ಅಹೋ ಬತ** ಕಷ್ಟವು

ನೀನು ಪಾಪಮಾಡಿರುವಿ ಎಂಬುದಕ್ಕೆ ಮತ್ತೊಂದು ಕಾರಣ ಹೇಳುವರು.

**ನ ವೈ ನೃಭಿರ್ನರದೇವೋಽಪರಾಧ್ಯಃ**
**ತಂ ಶಪ್ತುಮರ್ಹಸ್ಯವಿಪಕ್ವಬುದ್ಧೇ ।**

**ಯತ್ತೇಜಸಾ ದುರ್ವಿಷಹೇಣ ಗುಪ್ತಾ**
**ವಿಂದಂತಿ ಭದ್ರಾಣ್ಯಕುತೋಭಯಾಃ ಪ್ರಜಾಃ ॥೪೨॥**

**ದುರ್ವಿಷಹೇಣ** ಅಸಾಧ್ಯವಾದ **ಯತ್ತೇಜಸಾ** ಯಾರ ಸಾಮರ್ಥ್ಯದಿಂದ **ಗುಪ್ತಾ** ರಕ್ಷಿತರಾದ **ಪ್ರಜಾಃ** ಪ್ರಜರು **ಅಕುತೋಭಯಾಃ** ಯಾರ ಭಯವಿಲ್ಲದೇ **ಭದ್ರಾಣಿ** ಕಲ್ಯಾಣಗಳನ್ನು **ವಿಂದಂತಿ** ಹೊಂದುವರು ಕಾರಣ **ನರದೇವಃ** ರಾಜನು **ನೃಭಿಃ** ಅವನ ಅಧೀನರಾದ ಜನರಿಂದ **ನ ಅಪರಾಧ್ಯಃ** ಶಿಕ್ಷಿಸಬಾರದು **ಹೇ ಅವಿಪಕ್ವಬುದ್ಧೇ** ಪಕ್ವವಾಗದ ಬುದ್ಧಿಯುಳ್ಳವನೇ **ತಂ** ರಾಜನನ್ನು **ಶಪ್ತುಂ ಕಥಂ ಅರ್ಹಸಿ** ಯೋಗ್ಯ ಹೇಗಾಗುವಿ ಎಂದು ನಿಂದಿಸಿದನು.

**ಅರಕ್ಷಮಾಣೇ ನರದೇವನಾಮ್ನಿ**
**ರಥಾಂಗಪಾಣಾವಯಮಂಗಲೋಕಃ ।**
**ತದೈವ ಚೋರಪ್ರಚುರೋ ವಿನಂಕ್ಷ್ಯತ್ಯ**
**ರಕ್ಷ್ಯಮಾಣೋ ವಿವರೂಥವತ್ ಕ್ಷಣಾತ್ ॥೪೩॥**

**ನರದೇವನಾಮ್ನಿ** ರಾಜನ ಅಂತರ್ಯಾಮಿಯಾದುದರಿಂದ ರಾಜನೆಂದೆ ಹೆಸರುಳ್ಳ **ರಥಾಂಗಪಾಣೌ** ಚಕ್ರಧಾರಿಯಾದ ಶ್ರೀಹರಿಯು **ಅರಕ್ಷಮಾಣೇ ಸತಿ** ರಕ್ಷಿಸದಿರಲು **ಹೇ ಅಂಗ** ಎಲೋ ಮಗುವೇ **ಅಯಂ ಲೋಕಃ** ಈ ಪ್ರಪಂಚವು **ಚೋರಪ್ರಚುರಃ ಸ್ಯಾತ್** ಬಹಳ ಕಳ್ಳರಿಂದ ಕೂಡಿದ್ದಾಗುವದು **ತದಾ ಹಿ** ಚೋರಪ್ರಚುರವಾದಾಗ **ಕ್ಷಣಾತ್** ಒಂದು ಕ್ಷಣದಲ್ಲಿ **ವಿನಂಕ್ಷ್ಯತಿ** ನಾಶವಾಗುವದು **ಅರಕ್ಷಮಾಣಃ** ರಕ್ಷಿಸಲ್ಪಡದಿರುವದರಿಂದ **ವಿವರೂಥವತ್** ರಕ್ಷಕರಹಿತವಸ್ತುಗಳಂತೆ ನಾಶವಾಗುವದು.

*ಭಾಗವತತಾತ್ಪರ್ಯ–*

ಇಲ್ಲಿ 'ವಿವರೂಥವತ್' ಎಂಬುದಕ್ಕೆ ಮೋಡಗಳು ಚದುರಿಹೋದಂತೆ ಎಂಬ ವ್ಯಾಖ್ಯಾನವು ಅಜ್ಞಾನಮೂಲಕ ಎಂಬ ಅಭಿಪ್ರಾಯದಿಂದ ವರೂಥಶಬ್ದಾರ್ಥವನ್ನು ಹೇಳುವರು

ಸೇನಾ ವರೂಥಿನೀ ಪ್ರೋಕ್ತಾ ವರೂಥೋ ಗುಪ್ತಿರುಚ್ಯತೇ ಇತ್ಯಭಿಧಾನಮ್॥

ವರೂಥಿನೀ ಎಂದರೆ ಸೇನೆ, ವರೂಥ ಎಂದರೆ ರಕ್ಷಣೆ ಎಂಬ ಅರ್ಥದಲ್ಲಿ ಅಭಿಧಾನವಿದೆ.

**ವಿಶೇಷ :-** ಇಲ್ಲಿ **ವಿವರೂಥಂ** ಎಂಬುದಕ್ಕೆ ರಕ್ಷಣೆರಹಿತ ಎಂಬ ಅರ್ಥವು ಶಬ್ದದ ಮುಖ್ಯವೃತ್ತಿಯಿಂದ ಬರುವದು. ರಕ್ಷಣೆ ಎಂಬ ಅರ್ಥವಿರುವ ಗುಪ್ತಿಶಬ್ದಕ್ಕೆ ಲಕ್ಷಣಯಾ ಗೋಪ್ತಾ ರಕ್ಷಕ ಎಂದರ್ಥ ಮಾಡಿ ರಕ್ಷಕರಹಿತ ಸೇನೆಯಂತೆ ಹೀಗೂ ಅರ್ಥಮಾಡಿರುವರು.

ಲೋಕವು ಚೋರರಿಂದ ನಾಶಿತವಾದರೆ ಅದರ ಪಾಪ ನಮಗೆ ಬರುವದು ಎಂದು ಹೇಳುವರು.

**ತದದ್ಯ ನಃ ಪಾಪಮುಪೈತ್ಯನನ್ವಯಂ**
**ಯನ್ನಷ್ಟನಾಥಸ್ಯ ಪಶೋರ್ವಿಲುಂಪಕಾಃ ।**
**ಪರಸ್ಪರಂ ಘ್ನಂತಿ ಶಪಂತಿ ವೃಂಜತೇ**
**ಪಶೂನ್ ಸ್ತ್ರಿಯೋಽರ್ಥಾನ್ ಪುರುದಸ್ಯವೋ ಜನಾಃ ॥೪೪॥**

**ಯತ್** ಯಾವ ಕಾರಣ **ನಷ್ಟನಾಥಸ್ಯ** ಪಾಲಕರಹಿತವಾದ **ಪಶೋಃ** ರಾಷ್ಟ್ರದ **ವಿಲುಂಪಕಾಃ** ನಾಶಕರು ಚೋರಾದಿಗಳು **ಭವಿಷ್ಯಂತಿ** ಆಗುವರೋ **ತತ್** ಆದ ಕಾರಣ **ಅದ್ಯ** ಈಗ **ನಃ** ನಮಗೆ **ಅನನ್ವಯಂ** ನಮ್ಮ ಸಂಬಂಧಕ್ಕೆ ಅಯೋಗ್ಯವಾದ (ಅಸದೃಶವಾದ) ಸಂತತಿನಾಶಕವಾದ **ಪಾಪಂ** ಪಾಪವು **ಉಪೈತಿ** ಬರುವದು **ಪರಸ್ಪರಂ** ಒಬ್ಬರನ್ನೊಬ್ಬರು **ಘ್ನಂತಿ** ಕೊಲ್ಲುವರು **ಶಪಂತಿ** ನಿಂದಿಸುವರು **ಪಶೂನ್** ದನಗಳನ್ನು **ಸ್ತ್ರಿಯಃ** ಸ್ತ್ರೀಯರನ್ನು **ಅರ್ಥಾನ್** ದ್ರವ್ಯವನ್ನು **ವೃಂಜತೇ** ಅಪಹರಿಸುವರು

(ಪಶುಗಳನ್ನು ಕೊಲ್ಲುವರು, ಸ್ತ್ರೀಯರನ್ನು **ಶಪಂತಿ** ಧರ್ಷಣೆ ಮಾಡುವರು, ಹಣವನ್ನು ಅಪಹರಿಸುವರು ಎಂದು ಭಾವ.)

*ಭಾಗವತತಾತ್ಪರ್ಯ-*

ಇಲ್ಲಿ ಪಶುಶಬ್ದದಿಂದ ಪ್ರಸಿದ್ಧ ಪಶು ಸ್ವೀಕರಿಸಿದರೆ ಪ್ರಕೃತಸಂಗತವಾಗಲಾರದು ಕಾರಣ ಪ್ರಮಾಣದಿಂದ ಅರ್ಥ ತಿಳಿಸುವರು.

**ವಿಡ್ರಾಷ್ಟ್ರಂ ಪಶುರುತ್ಸೇಕೋ ಭ್ರಮರಶ್ಚೇತಿ ಕಥ್ಯತೇ । ಇತಿ ಚ ॥**

ವಿಟ್,ರಾಷ್ಟ್ರ, ಪಶುಃ, ಉತ್ಸೇಕ, ಭ್ರಮರ, ಇವೆಲ್ಲವೂ ಸಮಾನಾರ್ಥಕಗಳು ಕಾರಣ ಇಲ್ಲಿ ಪಶು ಎಂದರೇ ರಾಷ್ಟ್ರವೆಂದರ್ಥಎಂದು ಭಾವ.

ನಮಗೆ ಕೇವಲ ರಾಷ್ಟ್ರ ನಾಶಮಾಡಿದ ಪಾಪವಷ್ಟೇ ಅಲ್ಲ ಕಿಂತು ಎಲ್ಲ ಧರ್ಮಲೋಪಮಾಡಿದ ವರ್ಣಸಂಕರ ಮಾಡಿದ ಪಾಪವೂ ಬಂದಿದೆ ಎಂದು ತಿಳಿಸುವರು.

**ತದಾರ್ಯಧರ್ಮಶ್ಚ ವಿಲೀಯತೇ ನೃಣಾಂ**
**ವರ್ಣಾಶ್ರಮಾಚಾರಯುತಸ್ತ್ರಯೀಮಯಃ ।**
**ತತೋಽರ್ಥಕಾಮೋಽಭಿನಿವೇಶಿತಾತ್ಮನಾಂ**
**ಶುನಾಂ ಕಪೀನಾಮಿವ ವರ್ಣಸಂಕರಃ ॥೪೫॥**

**ತದಾ** ಅರ್ಥಾದಿಗಳ ಅಪಹಾರವಾದಾಗ **ಅರ್ಥಾತ್** ರಾಷ್ಟ್ರನಾಶಕರನ್ನು ಶಿಕ್ಷಿಸದಿದ್ದಾಗ **ಆರ್ಯಧರ್ಮಃ** ಶ್ರೇಷ್ಠವಾದ ಯಜ್ಞಾದಿಧರ್ಮಗಳು **ತ್ರಯೀಮಯಃ** ವೇದ ಪ್ರತಿಪಾದ್ಯವಾದುದು **ವರ್ಣಾಶ್ರಮಾಚಾರಯುತಃ** ವರ್ಣಗಳ ಆಶ್ರಮಗಳ ಆಚಾರದಿಂದ ಕೂಡಿದ್ದು **ವಿಲೀಯತೇ** ನಾಶವಾಗುವದು **ತತಃ** ನಂತರ **ಶುನಾಂ ಕಪೀನಾಂ ಇವ** ನಾಯಿಕೋತಿಗಳಂತೆ **ಅರ್ಥಕಾಮೋಽಭಿನಿವೇಶಿತಾತ್ಮನಾಂ** ಹಣ ಮಾಲೆ ಗಂಧ ವನಿತಾ ಕಾಮನೆಯುಳ್ಳ ಮನುಷ್ಯರಲ್ಲಿ **ವರ್ಣಸಂಕರಃ** ಜಾತಿಯಲ್ಲಿ ಮಿಶ್ರಣವಾಗುವದು.

**ವಿಶೇಷ :-** ಹೀನಜಾತಿಯವರು ಉತ್ತಮಜಾತಿಯವರೊಡನೆ ಉತ್ತಮಜಾತಿಯವರು ಹೀನರೊಡನೆ ಸಂಪರ್ಕಿಸುವದರಿಂದ ಕಲುಷಿತವಾಗುವದು ಎಂದು ಭಾವ.

ಇದುವರೆಗೆ ಯಾವ ರಾಜನೂ ಶಾಪಾರ್ಹನಲ್ಲವೆಂದು ಹೇಳಿದರು. ಪರೀಕ್ಷಿತನಂತು ಸರ್ವಥಾ ಶಾಪಯೋಗ್ಯನಲ್ಲವೆಂಬ ಅಭಿಪ್ರಾಯದಿಂದ ಹೇಳುವರು.

**ಧರ್ಮಪಾಲೋ ನರಪತಿಃ ಸ ತು ಸಾಮ್ರಾಟ್ ಬೃಹಚ್ಛ್ರವಾಃ ।**
**ಸಾಕ್ಷಾನ್ಮಹಾಭಾಗವತೋ ರಾಜರ್ಷಿರ್ಹಯಮೇಧರಾಟ್ ॥**
**ಕ್ಷುತ್ತೃಟ್‌ಚ್ಛ್ರಮಾನ್ವಿತೋ ದೀನೋ ನೈವಾಸ್ಮಚ್ಛಾಪಮರ್ಹತಿ ॥೪೬॥**

**ಸ ತು ನರಪತಿಃ** ಆ ಪರೀಕ್ಷಿತನಾದರೂ **ಧರ್ಮಪಾಲಃ** ಧರ್ಮರಕ್ಷಕನು **ಸಾಮ್ರಾಟ್** ಚಕ್ರವರ್ತಿಯು **ಬೃಹಚ್ಛ್ರವಾಃ** ಮಹಾಕೀರ್ತಿಶಾಲಿಯು **ಸಾಕ್ಷಾತ್ ಮಹಾಭಾಗವತಃ** ಮುಖ್ಯವಾಗಿ(ಅನೌಪಚಾರಿಕವಾಗಿ) ಭಗವದ್ಭಕ್ತನಾದ **ರಾಜರ್ಷಿಃ** ಶ್ರೇಷ್ಠರಾಜನು **ಹಯಮೇಧರಾಟ್** ಅಶ್ವಮೇಧಮಾಡಿದವನು ಈ ಎಲ್ಲ ಕಾರಣದಿಂದ ಇವನು

ದುಷ್ಪನಲ್ಲ **ಕ್ಷುತ್** ಹಸಿವೆ **ತೃಟ್** ನಿರಡಿಕೆ ಮತ್ತು **ಶ್ರಮ** ಆಯಾಸದಿಂದ **ಅನ್ವಿತಃ** ಕೂಡಿದವನು **ದೀನಃ** ದುಃಖಿತನು ಆಗಿ ನಮ್ಮಾಶ್ರಮಕ್ಕೆ ಬಂದವನು ಕಾರಣ ಅರ್ಘ್ಯಾದಿಗಳಿಂದ ಪೂಜನೀಯನು **ಅಸ್ಮತ್** ನಮ್ಮ **ಶಾಪಾರ್ಹಃ ನೈವ** ಶಾಪಕ್ಕೆ ಯೋಗ್ಯ ಅಲ್ಲವೇ ಅಲ್ಲ.

ಈ ಪಾಪಕ್ಕೆ ಬೇರೆ ಪ್ರಾಯಶ್ಚಿತ್ತವಿಲ್ಲದ ಕಾರಣ ಭಗವಂತನನ್ನೆ ಪ್ರಾರ್ಥಿಸುವರು.

**ಅಪಾಪೇಷು ಸ್ವಭೃತ್ಯೇಷು ಬಾಲೇನಾಪಕ್ವಬುದ್ಧಿನಾ ।**
**ಪಾಪಂ ಕೃತಂ ತದ್ಭಗವಾನ್ ಸರ್ವಾತ್ಮಾ ಕ್ಷಂತುಮರ್ಹತಿ ॥೪೭॥**

**ಅಪಾಪೇಷು** ಪಾಪರಹಿತರಾದ **ಸ್ವಭೃತ್ಯೇಷು** ತನ್ನ(ಭಗವಂತನ)ಭೃತ್ಯರಲ್ಲಿ **ಅಪಕ್ವಬುದ್ಧಿನಾ** ವಿವೇಕವಿರದ **ಬಾಲೇನ** ಹುಡುಗನಿಂದ **ಪಾಪಂ ಕೃತಂ** ಪಾಪವು ಮಾಡಲ್ಪಟ್ಟಿದೆ **ತತ್** ಅದನ್ನೂ **ಸರ್ವಾತ್ಮಾ ಭಗವಾನ್** ಸರ್ವಾಂತರ್ಯಾಮಿಯಾದ ಶ್ರೀಹರಿಯು **ಕ್ಷಂತುಂ ಅರ್ಹತಿ** ಕ್ಷಮಿಸಲು ಸಮರ್ಥನು ಕಾರಣ ಕ್ಷಮಿಸು ಎಂದು ಭಾವ.

ಅನಿವಾರ್ಯವಾಗಿ ಪಾಪವೇನೋ ಬಂತು ಅಷ್ಟೇ ಅಲ್ಲ ನಮ್ಮ ಆಶ್ರಮಕ್ಕೆ ಬಂದ ಪರೀಕ್ಷಿತನು ಅವಮಾನಿತನಾಗಿ ಪ್ರತೀಕಾರವನ್ನೇನೋ ಮಾಡಲಿಲ್ಲ ಹಾಗೇನಾದರು ಮಾಡಿದ್ದರೆ ನಮ್ಮ ಪಾಪಪ್ರಾಯಶ್ಚಿತ್ತವಾಗುತ್ತಿತ್ತು ಎಂದು ಹೇಳುವರು.

**ತಿರಸ್ಕೃತಾಃ ವಿಪ್ರಲಬ್ಧಾಃ ಶಪ್ತಾಃ ಕ್ಷಿಪ್ತಾ ಹತಾ ಅಪಿ ।**
**ನಾಸ್ಯ ತತ್ಪ್ರತಿಕುರ್ವಂತಿ ತದ್ಭಕ್ತಾಃ ಪ್ರಭವೋಽಪಿ ಹಿ ॥೪೮॥**

**ತಿರಸ್ಕೃತಾಃ** ನಿಂದಿತರಾದವರು **ವಿಪ್ರಲಬ್ಧಾಃ** ವಂಚಿತರು **ಕ್ಷಿಪ್ತಾಃ** ಅಪಮಾನಿತರು **ಹತಾಃ ಅಪಿ** ಹೊಡೆತತಿಂದರೂ **ಅಸ್ಯ** ತಿರಸ್ಕಾರಾದಿಗಳನ್ನು ಮಾಡಿದವನಿಗೆ **ತದ್ಭಕ್ತಾಃ** ಶ್ರೀಹರಿಯ ಭಕ್ತರು **ಪ್ರಭವಾಃ** ಪ್ರತೀಕಾರ ಮಾಡಲು ಸಮರ್ಥರಾದರೂ **ನ ತತ್ಪ್ರತಿಕುರ್ವಂತಿ** ತಿರಸ್ಕಾರಾದಿಗಳಿಗೆ ಪ್ರತಿಕ್ರಿಯೆ ಮಾಡುವದಿಲ್ಲ (**ಹಿ** ವೃದ್ಧಿಕಾಮುಕ-ರಾದುದರಿಂದ ಪ್ರತೀಕಾರಮಾಡುವದಿಲ್ಲ.)

**ಇತಿ ಪುತ್ರಕೃತಾಘೇನ ಸೋಽನುತಪ್ತೋ ಮಹಾಮುನಿಃ ।**
**ಸ್ವಯಂ ವಿಪ್ರಕೃತೋ ರಾಜ್ಞಾ ನೈವಾಘಂ ತದಚಿಂತಯತ್ ॥೪೯॥**

ಇತಿ ಈ ರೀತಿಯಾಗಿ **ಪುತ್ರಕೃತಾಘೇನ** ಮಗನು ಮಾಡಿದ ಅಪರಾಧದಿಂದ **ಅನುತಪ್ತಃ** ಸಂತ್ರಸ್ತನಾದ **ಮಹಾಮುನಿಃ** ಶಮೀಕರು **ಸ್ವಯಂ** ತಾನೇ **ರಾಜ್ಞಾ** ರಾಜನಿಂದ **ವಿಪ್ರಕೃತಃ ಅಪಿ** ಅಪಕಾರ ಹೊಂದಿದರೂ **ತದಘಂ** ಅವನ ಅಪರಾಧವನ್ನು **ನೈವ ಅಚಿಂತಯತ್** ಗಣನೆಗೆ ತೆಗೆದುಕೊಳ್ಳಲಿಲ್ಲ.

**ಸಾಧವಃ ಪ್ರಾಯಶೋ ಲೋಕೇ ಪರೈರ್ದ್ವಂದ್ವೇಷು ಯೋಜಿತಾಃ ।**
**ನ ವ್ಯಥಂತಿ ನ ಹೃಷ್ಯಂತಿ ಯತ ಆತ್ಮಾ ಗುಣಾಶ್ರಯಃ ॥೫೦॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥

**ಸಾಧವಃ** ಸಜ್ಜನರು **ಪ್ರಾಯಶಃ** ಬಹುತೇಕವಾಗಿ **ಲೋಕೇ** ಜಗತ್ತಿನಲ್ಲಿ **ಪರೈಃ** ಬೇರೆಯವರಿಂದ **ದ್ವಂದ್ವೇಷು** ಸುಖದುಃಖಾದಿಗಳಲ್ಲಿ **ಯೋಜಿತಾಃ** ಸಂಬದ್ಧರಾದರೂ **ನ ವ್ಯಥಂತಿ** ಕಷ್ಟಪಡುವದಿಲ್ಲ **ನ ಹೃಷ್ಯಂತಿ** ಸಂತೋಷಪಡುವದಿಲ್ಲ ಏಕೆಂದರೆ **ಯತಃ** ಯಾವ ಕಾರಣ **ಆತ್ಮಾ** ಜೀವನು **ಗುಣಾಶ್ರಯಃ** ಗುಣದೋಷಗಳಿಗೆ ಆಶ್ರಯನಾಗಿರುವನು.

*ಭಾಗವತತಾತ್ಪರ್ಯ-*

ಆತ್ಮಾಗುಣಾಶ್ರಯಃ ಎಂಬ ಹೇತುವಾಕ್ಯಕ್ಕೆ ಅಗುಣಾಶ್ರಯಃ ಎಂಬ ವ್ಯಾಖ್ಯಾನ ಪ್ರಮಾಣವಿರುದ್ಧವಾದುದರಿಂದ ಕಾರಣವನ್ನು ಸರಿಯಲ್ಲ ಎಂದು ಹೇಳುವರು.

**ಸ್ವಕೃತೋ ಗುಣಃ ಸ್ವಸ್ಯೈವ ಯತಃ ।**

ಯಾವ ಕಾರಣ ಜೀವನು ಈಶ್ವರಪ್ರೇರಿತ ತನ್ನ ಕರ್ಮಗಳಿಂದ ಬರುವ ಶುಭಾಶುಭಫಲಗಳಿಗೆ ಆಶ್ರಯನಾಗುವನು. ಆದ ಕಾರಣ ಮತ್ತೊಬ್ಬ ವ್ಯಕ್ತಿಯು ನಮಗೆ ಸುಖದುಃಖಕೊಡುವವನಲ್ಲ ಎಂಬ ಅನುಸಂಧಾನದಿಂದ ದುಃಖಪಡುವದಿಲ್ಲ ಸಂತೋಷಪಡುವದಿಲ್ಲವೆಂದು ಭಾವ.

ಇಲ್ಲಿಗೆ ಹದಿನೆಂಟನೇಯ ಅಧ್ಯಾಯವು ಮುಗಿಯಿತು.

★★★★★

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ಏಕೋನವಿಂಶೋಽಧ್ಯಾಯಃ

**ಅಧ್ಯಾಯಸಾರಾಂಶ**

ಪರೀಕ್ಷಿತ ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತರೂಪದಲ್ಲಿ ಗಂಗಾಪ್ರವಾಹದ ನಡುವೆ ನಿರ್ಮಿಸಿದ್ದ ಅರಮನೆಯಲ್ಲಿ ಪ್ರಾಯೋಪವೇಶಕ್ಕೆ ಕುಳಿತ. ಆಗ ಎಲ್ಲ ಮುನಿಗಳು ಅಲ್ಲಿಗೆ ಬಂದರು. ತಾನು ಧನ್ಯನೆಂದು ಭಾವಿಸಿದ. ಮಗನಾದ ಜನಮೇಜಯನಿಗೆ ರಾಜ್ಯವಹಿಸಿ ತಾನು ಮುನಿವೇಷ ಧರಿಸಿ ದರ್ಭೆಯ ಮೇಲೆ ಪ್ರಾಯೋಪವೇಶಕ್ಕೆ ಕುಳಿತ. ಬಂದ ಜ್ಞಾನಿಗಳಲ್ಲಿ ಮರಣೋನ್ಮುಖನಾದ ನನಗೆ ಮಾಡಲೇ ಬೇಕಾದ ಅವಶ್ಯ ಕರ್ತವ್ಯಕರ್ಮಗಳನ್ನು ಬೋಧಿಸಬೇಕು ಎಂದು ಪ್ರಾರ್ಥಿಸಿದ.

ಮೋಕ್ಷಸಾಧನಗಳಲ್ಲಿ ಮೊದಲಿಗೆ ಸಂಪಾದಿಸಬೇಕಾದುದು ವೈರಾಗ್ಯ. ಅದನ್ನು ಮುಮುಕ್ಷು ಮೊದಲು ಸಂಪಾದನೆ ಮಾಡಬೇಕೆಂದು ಪರೀಕ್ಷಿತನಿಗೆ ಹೇಳುವ ನೆಪದಿಂದ ತಿಳಿಸುವರು. ಹಿಂದಿನ ಅಧ್ಯಾಯದಲ್ಲಿ ಪರೀಕ್ಷಿತನು ಧರ್ಮಪಾಲಕನೆಂದು ಹೇಳಿದರಷ್ಟೆ. ಅದು ಸರಿಯಲ್ಲ. ಏಕೆಂದರೆ ಮುನಿಗಳಿಗೆ ದ್ರೋಹ ಬಗೆದಿರುವದು. ಪಶ್ಚಾತ್ತಾಪ ಆಗದೇ ಇರುವದು. ಇವೆಲ್ಲವನ್ನು ನೋಡಿದಾಗ ಅವನು ಹೇಗೆ ಧರ್ಮಪಾಲಕನಾಗುತ್ತಾನೆ. ಎಂಬ ಶಂಕೆಗೆ ಋಷಿಗಳಿಗೆ ಅಪರಾಧವೆಸಗಿದ್ದರಿಂದ ಸಜ್ಜನನಾದ ಪರೀಕ್ಷಿತನಿಗೆ ಬಹಳ ಪಶ್ಚಾತ್ತಾಪವಾಗಿದೆ ಎಂಬುದನ್ನು ಇಲ್ಲಿ ತಿಳಿಸುತ್ತಾರೆ.

**ಪ್ರಾಯೋಪವೇಶಕ್ಕೆ ಕುಳಿತ ಪರೀಕ್ಷಿತ**

**ಸೂತ ಉವಾಚ -**

**ಮಹೀಪತಿಸ್ತ್ವಥ ತತ್ಕರ್ಮ ಗರ್ಹ್ಯಂ**
**ವಿಚಿಂತಯನ್ನಾತ್ಮಕೃತಂ ಸುದುರ್ಮನಾಃ ।**

**ಅಹೋ ಮಯಾ ನೀಚಮನಾರ್ಯವತ್ಕೃತಂ**
**ನಿರಾಗಸಿ ಬ್ರಹ್ಮಣಿ ಗೂಢತೇಜಸಿ** ॥೧॥

**ಮಹೀಪತಿಃ ತು** ಧರ್ಮಪಾಲಕನಾದ ಪರೀಕ್ಷಿತರಾಜನು **ಅಥ** ಮನೆಗೆ ಹೋದನಂತರ **ಗೂಢತೇಜಸಿ** ಅಪ್ರಕಟಿತ ಸಾಮರ್ಥ್ಯವುಳ್ಳ **ನಿರಾಗಸಿ** ಅಪರಾಧವಿಲ್ಲದ **ಬ್ರಹ್ಮಣಿ** ಬ್ರಾಹ್ಮಣನ ವಿಷಯದಲ್ಲಿ **ಮಯಾ** ನನ್ನಿಂದ **ಅನಾರ್ಯವತ್** ನೀಚನಂತೆ **ನೀಚಂ ಕರ್ಮಕೃತಂ** ನೀಚಕಾರ್ಯವು ಮಾಡಲ್ಪಟ್ಟಿತು **ಅಹೋ** ಕಷ್ಟವು **ಆತ್ಮಕೃತಂ** ತಾನು ಮಾಡಿದ **ಗರ್ಹ್ಯಂ** ನಿಂದ್ಯವಾದ **ತತ್** ಮುನಿಯ ಕೊರಳಲ್ಲಿ ಸತ್ತ ಸರ್ಪ ಹಾಕಿದ್ದನ್ನು **ವಿಚಿಂತಯತ್** ಆಲೋಚಿಸಿ **ಸುದುರ್ಮನಾಃ ಅಭೂತ್** ಅತ್ಯಂತ ದುಃಖಿತವಾದ ಮನಸ್ಸುಳ್ಳವನಾದನು.

ವಿಶೇಷ- ತಾನು ಮಾಡಿದ ಪಾಪ ದೊಡ್ಡದೆಂದು ತಿಳಿಸಲು **ನಿರಾಗಸಿ** ಎಂದು, ಪ್ರತಿಕ್ರಿಯೆ ಮಾಡುವ ಸಾಮರ್ಥ್ಯವಿದೆ ತಿಳಿಸಲು **ಗೂಢತೇಜಸಿ** ಎಂದು ವಿಶೇಷಣವಿತ್ತಿರುವರು. 'ಬ್ರಾಹ್ಮಣೋ ನಾವಮಂತವ್ಯಃ ನಿರಾಗಸ್ತು ವಿಶೇಷತಃ'' ಎಂದು ಪ್ರಮಾಣವಿದೆ. ಬ್ರಾಹ್ಮಣನಿಗೇನೇ ಅಪರಾಧ, ಅವಮಾನ ಮಾಡಬಾರದು. ಅದರಲ್ಲಿಯೂ ಅವನಲ್ಲಿ ಏನೂ ತಪ್ಪಿಲ್ಲದಿರುವಾಗ ಸರ್ವಥಾ ಅಪಮಾನ ಮಾಡಬಾರದು ಎಂದು ಭಾವ. 'ಬ್ರಹ್ಮ ವೇದಸ್ತಪಸ್ತತ್ತ್ವಂ ಬ್ರಹ್ಮಾ ವಿಪ್ರಪ್ರಜಾಪತಿಃ'' ಎಂದು ಅಭಿದಾನವಿದೆ ಕಾರಣ **ಬ್ರಹ್ಮಣಿ** ಅನ್ನುವದಕ್ಕೆ ಬ್ರಾಹ್ಮಣನಲ್ಲಿ ಎಂದು ಅರ್ಥ ಮಾಡಿದೆ.

''ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ'' ಎಂದು ವಚನವಿರುವದರಿಂದ ನಾನು ಮಾಡಿದ ಪಾಪಕ್ಕೆ ಇಲ್ಲಿಯೇ ಫಲವಾಗುವದು ಎಂದು ಹೇಳುವನು.

**ಧ್ರುವಂ ತತೋ ಮೇ ಕೃತದೇವಹೇಲನಾತ್**
**ದುರತ್ಯಯಂ ವ್ಯಸನಂ ನಾತಿದೀರ್ಘಾತ್ ।**
**ತದಸ್ತು ಕಾಮಮಘನಿಷ್ಕೃತಾಯ ಮೇ**
**ಯಥಾ ನ ಕುರ್ಯಾಂ ಪುನರೇವಮದ್ಧಾ** ॥೨॥

**ಮೇ** ನನ್ನಿಂದ **ಕೃತದೇವಹೇಲನಾತ್** ಬ್ರಾಹ್ಮಣನು ಸಮಸ್ತದೇವತೆಗಳ ಪ್ರತಿಮೆ ಯಾದುದರಿಂದ ಅವನ ಅವಮಾನ ಎಲ್ಲ ದೇವತೆಗಳ ಅವಮಾನ ಆದ್ದರಿಂದ **ದುರತ್ಯಯಂ ವ್ಯಸನಂ** ದಾಟಲಾಗದ ದುಃಖವು **ನಾತಿದೀರ್ಘಾತ್** ಬೇಗನೇ **ಧ್ರುವಂ**

ನಿಶ್ಚಯವಾಗಿ ಆಗುವದು **ತತ್** ಆ ದುಃಖವು **ಮೇ** ನನ್ನ **ಅಘನಿಷ್ಕೃತಾಯ** ಪಾಪಪ್ರಾಯಶ್ಚಿತ್ತಕ್ಕಾಗಿ **ಕಾಮಂ ಅಸ್ತು** ಯಥೇಚ್ಛವಾಗಿ ಬರಲಿ **ಅದ್ಧಾ** ನಿಶ್ಚಯವಾಗಿ **ಯೇನ** ಯಾವ ದುಃಖಬರುವದರಿಂದ ಹೆದರಿದ ನಾನು **ಪುನಃ** ಮತ್ತೊಮ್ಮೆ **ಏವಂ** ಈ ವಿಧವಾದ ಪಾಪವನ್ನು **ಯಥಾ ನ ಕುರ್ಯಾಂ** ಮಾಡಲಾರೆನು ಅದಕ್ಕಾಗಿ ಆದರೂ ಬರಲಿ.

**ಅದ್ಯೈವ ರಾಜ್ಯಂ ಬಲಮೃದ್ಧಕೋಶಂ**
**ಪ್ರಕೋಪಿತಬ್ರಹ್ಮಕುಲಾನಲೋ ಮೇ ।**
**ದಹತ್ವಭದ್ರಸ್ಯ ಪುನರ್ನ ಮೇಽಭೂತ್**
**ಪಾಪೀಯಸಿ ಧೀರ್ದ್ವಿಜದೇವತಾಸು ॥೩॥**

**ಪ್ರಕೋಪಿತಬ್ರಹ್ಮಕುಲಾನಲಃ ಪ್ರಕೋಪಿತ** ಸಿಟ್ಟಿಗೆದ್ದ **ಬ್ರಹ್ಮಕುಲಾನಲಃ** ಬ್ರಾಹ್ಮಣಕುಲವೆಂಬ ಬೆಂಕಿಯು **ಮೇ** ನನ್ನ **ಬಲಂ** ಸೈನ್ಯವನ್ನು **ಋದ್ಧಕೋಶಂ** ಸಮೃದ್ಧವಾದ ಕೋಶವುಳ್ಳ **ರಾಜ್ಯಂ** ರಾಜ್ಯವನ್ನು **ಅದ್ಯೈವ** ಈಗಲೇ **ದಹತು** ಸುಡಲಿ **ಅಭದ್ರಸ್ಯ** ಅಮಂಗಲನಾದ **ಮೇ** ನನಗೆ **ಪುನಃ** ಮತ್ತೆ **ದ್ವಿಜದೇವತಾಸು** ಬ್ರಾಹ್ಮಣರಲ್ಲಿ ದೇವತೆಗಳಲ್ಲಿ **ಪಾಪೀಯಸೀ ಧೀಃ** ಪಾಪಬುದ್ಧಿಯು **ನ ಅಭೂತ್** ಉಂಟಾಗುವದು ಬೇಡ.

**ಸ ಚಿಂತಯನ್ನಿತ್ಥಮಥಾಶ್ರುಣೋದ್ಯಥಾ**
**ಮುನೇ ಸುತೋಕ್ತಾನ್ನಿಷ್ಕೃತಿಂ ತಕ್ಷಕಾಖ್ಯಾತ್ ।**
**ನ ಸಾಧು ಮೇನೇ ನ ಚಿರೇಣ ತಕ್ಷಕಾ**
**ದಲಂ ಪ್ರಸಕ್ತಸ್ಯ ವಿರಕ್ತಿಕಾರಣಮ್ ॥೪॥**

**ಸಃ** ಪರೀಕ್ಷಿತನು **ಇತ್ಥಂ** ಈ ರೀತಿ **ಚಿಂತಯನ್** ವಿಚಾರಮಾಡುತ್ತ **ಮುನೇಃ** ಶಮೀಕರ **ಸುತೋಕ್ತಾತ್** ಮಗನಿಂದ ಹೇಳಲ್ಪಟ್ಟ **ತಕ್ಷಕಾಖ್ಯಾತ್** ತಕ್ಷಕವೆಂಬ ಸರ್ಪದಿಂದ **ನಿಷ್ಕೃತಿಂ** ತನ್ನ ಪಾಪದ ಪ್ರಾಯಶ್ಚಿತ್ತರೂಪ ಮರಣವನ್ನು **ಯಥಾ** ನಿಜವಾಗಿ **ಅಶ್ರುಣೋತ್** ಋಷಿಯು ಕಳಿಸಿದ ಗೌರಮುಖನೆಂಬ ಶಿಷ್ಯನಿಂದ ಕೇಳಿದನು **ಅಲಂ ಪ್ರಸಕ್ತಸ್ಯ** ವಿಷಯಗಳಲ್ಲಿ ಅತಿಯಾಗಿ ಆಸಕ್ತನಾದ ತನಗೆ **ತಕ್ಷಕಾತ್** ತಕ್ಷಕನಿಂದ **ನ ಚಿರೇಣ** ಬೇಗನೆ **ಮರಣಂ** ಮರಣವಾಗುವದು **ವಿರಕ್ತಿಕಾರಣಂ** ವೈರಾಗ್ಯಕಾರಣವಾದುದರಿಂದ **ಸಾಧು ಮೇನೇ** ಒಳ್ಳೆಯದೇ ಎಂದು ತಿಳಿದನು.

**ಅಥೋ ವಿಹಾಯೇಮಮಮುಂಚ ಲೋಕಂ**
**ವಿಮೃಶ್ಯ ತೌ ಹೇಯತಯಾ ಪುರಸ್ತಾತ್ ।**
**· ಕೃಷ್ಣಾಂಘ್ರಿಸೇವಾಮಭಿಮನ್ಯಮಾನ**
**ಉಪಾವಿಶತ್ ಪ್ರಾಯಮಮರ್ತ್ಯನದ್ಯಾಮ್ ॥೫॥**

**ಅಥೋ** ಬ್ರಹ್ಮಶಾಪವನ್ನು ಕೇಳಿದ ನಂತರ **ಪುರಸ್ತಾತ್** ಮೊದಲು **ತೌ** ಇಹಲೋಕ-ಪರಲೋಕಗಳೆರಡನ್ನೂ **ಹೇಯತಯಾ** ಹೇಯವೆಂದು **ವಿಮೃಶ್ಯ** ವಿಚಾರಮಾಡಿ **ಇಮಂ ಅಮುಂ ಚ ಲೋಕಂ ವಿಹಾಯ** ಈಲೋಕ-ಪರಲೋಕಗಳಲ್ಲಿ ವಿರಕ್ತನಾಗಿ **ಕೃಷ್ಣಾಂಘ್ರಿಸೇವಾಂ** ಶ್ರೀಕೃಷ್ಣನ ಪಾದಸೇವೆಯನ್ನೇ **ಅಭಿಮನ್ಯಮಾನಃ** ಶ್ರೇಯಸ್ಸಾಧನವೆಂದು ಚೆನ್ನಾಗಿ ತಿಳಿದು **ಅಮರ್ತ್ಯನದ್ಯಾಂ** ಗಂಗಾನದಿಯಲ್ಲಿ **ಪ್ರಾಯಂ** ಆಮರಣಾಂತ **ಉಪಾವಿಶತ್** ಅನಶನ ವ್ರತಮಾಡಿದನು.

ಗಂಗಾನದಿದಡದಲ್ಲಿ ಪ್ರಾಯೋಪವೇಶಕ್ಕೆ ಕಾರಣ ಹೇಳುವರು.

**ಯಾ ವೈ ಲಸಚ್ಛ್ರೀತುಲಸೀವಿಮಿಶ್ರ-**
**ಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ ।**
**ಪುನಾತ್ಯಶೇಷಾನುಭಯತ್ರ ಲೋಕಾನ್**
**ಕಸ್ತಾಂ ನ ಸೇವೇತ ಮರಿಷ್ಯಮಾಣಃ ॥೬॥**

**ಲಸಚ್ಛ್ರೀತುಲಸೀವಿಮಿಶ್ರಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ ಲಸತ್** ಹೊಳೆಯುವ **ಶ್ರೀ** ಕಾಂತಿಯುಳ್ಳ **ತುಲಸೀವಿಮಿಶ್ರ** ತುಳಸೀಯಿಂದ ಕೂಡಿದ **ಕೃಷ್ಣಾಂಘ್ರಿರೇಣು** ಶ್ರೀಕೃಷ್ಣನ ಪಾದಧೂಳಿಗಳ ಮೇಲಿಂದ **ಅಭ್ಯಧಿಕ** ಅತಿಶ್ರೇಷ್ಠವಾದ **ಅಂಬುನೇತ್ರೀ** ನೀರನ್ನು ಪ್ರವಹಿಸುವ **ಉಭಯತ್ರ ಲೋಕಾನ್** ಎರಡೂ ದಡದಲ್ಲಿರುವ ಜನರನ್ನು **ಅಶೇಷಾನ್** ಎಲ್ಲರನ್ನು **ಪುನಾತಿ** ಪವಿತ್ರಗೊಳಿಸುವಳು **ತಾಂ** ಇಂಥವಳನ್ನು **ಮರಿಷ್ಯಮಾಣಃ** ಸಾಯುತ್ತಿರುವವನು **ಕಃ ನ ಸೇವೇತ್** ಯಾವನು ಸೇವಿಸಲಿಕ್ಕಿಲ್ಲ

**ವಿಶೇಷ :-** **ಉಭಯತ್ರ** ಒಳಗೂ ಹೊರಗೂ ಎಂದೂ ಅರ್ಥ. ಅಥವಾ ಈ ಲೋಕದಲ್ಲಿ ನಮ್ಮ ಜೊತೆಗೆ ವ್ಯವಹಾರಮಾಡಲು ಯೋಗ್ಯತೆ ಬರುವಂತೆ ಶುದ್ಧಿಯನ್ನು, ಪರಲೋಕದಲ್ಲಿ ನರಕಪಾತವಾಗದಂತೆ ಮಾಡುವಳು ಹೀಗೂ ಅರ್ಥ.

'ಬ್ರಹ್ಮಜ್ಞಾನೇ ತುಲಾಂ ಸಿನೋತೀತಿ ತುಲಸೀ' ಎಂದು ವಿಗ್ರಹಮಾಡಿದಾಗ ಬ್ರಹ್ಮಜ್ಞಾನಸದೃಶವಾದ ಎಂದರ್ಥ. ಬ್ರಹ್ಮಜ್ಞಾನ ಸಂಸಾರಸಾಗರವನ್ನು ದಾಟಿಸುವಂತೆ ತುಳಸಿ ಸಂಸಾರಸಾಗರವನ್ನು ದಾಟಿಸುವಳು.

**ತನೋತಿ** ಕರೋತಿ ಮೋಕ್ಷಾದಿಪುರುಷಾರ್ಥಂ ಇತಿ **ತುಃ** ವಿಷ್ಣುಃ, **ತತ್ರ ಲಸತಿ ಇತಿ** ತುಲಸೀ ವಿಷ್ಣುವಿನ ಪಾದದಲ್ಲಿ ಶೋಭಿಸುವವಳು ಎಂದರ್ಥ.

**ಇತಿ ವ್ಯವಸ್ಥಾಯ ಚ ಪಾಂಡವೇಯಃ**
**ಪ್ರಾಯೋಪವೇಶಂ ಪ್ರತಿ ವಿಷ್ಣುಪದ್ಯಾಮ್ ।**
**ದಧ್ಯೌ ಮುಕುಂದಾಂಘ್ರಿಮನನ್ಯಭಾವೋ**
**ಮುನಿವ್ರತೋ ಮುಕ್ತಸಮಸ್ತಸಂಗಃ ॥೭॥**

**ಇತಿ** ಈ ರೀತಿಯಾಗಿ **ವಿಷ್ಣುಪದ್ಯಾಂ** ಗಂಗಾನದಿಯಲ್ಲಿ **ಪ್ರಾಯೋಪವೇಶಂ ಪ್ರತಿ** ಮರಣಾಂತ ಉಪವಾಸ ಮಾಡಲು **ವ್ಯವಸ್ಥಾಯ** ನಿಶ್ಚಯಿಸಿ (ಗಂಗಾ ಮಾಹಾತ್ಮ್ಯತಿಳಿದು) **ಪಾಂಡವೇಯಃ** ಪಾಂಡುಕುಲದಲ್ಲಿ ಜನಿಸಿದ ಪರೀಕ್ಷಿತನು **ಮುನಿವ್ರತಃ** ಶಮದಮಾದಿಗಳಿಂದ ಕೂಡಿದವನಾಗಿ **ಮುಕ್ತಸಮಸ್ತಸಂಗಃ** ಮನೆ-ಮಡದಿ-ಮಕ್ಕಳಲ್ಲಿ ಮಮತೆ ಮರೆತು **ಅನನ್ಯಭಾವಃ** ಅನ್ಯವಿಷಯದಲ್ಲಿ ಮನಸ್ಸಿಡದೇ **ಮುಕುಂದಾಂಘ್ರಿಂ** ಶ್ರೀಹರಿಯ ಪಾದವನ್ನು **ದಧ್ಯೌ** ಧ್ಯಾನಮಾಡಿದನು.

**ತತ್ರೋಪಜಗ್ಮುರ್ಭುವನಂ ಪುನಾನಾಃ**
**ಮಹಾನುಭಾವಾ ಮುನಯಃ ಸಶಿಷ್ಯಾಃ ।**
**ಪ್ರಾಯೇಣ ತೀರ್ಥಾಧಿಗಮಾಪದೇಶೈಃ**
**ಸ್ವಯಂ ಹಿ ತೀರ್ಥಾನಿ ಪುನಂತಿ ಸಂತಃ ॥೮॥**

**ತತ್ರ** ಗಂಗಾತೀರದಲ್ಲಿ ಇರುವ ರಾಜನನ್ನು ಪವಿತ್ರಗೊಳಿಸಲು **ಭುವನಂ ಪುನಾನಾಃ** ಜಗತ್ತನ್ನು ಪವಿತ್ರಗೊಳಿಸುವ **ಮಹಾನುಭಾವಾಃ** ಮಹಾಸಮರ್ಥರಾದ **ಸಶಿಷ್ಯಾಃ** ಶಿಷ್ಯಸಮೇತರಾದ **ಮುನಯಃ** ಋಷಿಗಳು **ಉಪಜಗ್ಮುಃ** ಸಮೀಪಕ್ಕೆ ಹೋದರು. **ಪ್ರಾಯೇಣ** ಬಹಳವಾಗಿ **ತೀರ್ಥಾಧಿಗಮಾಪದೇಶೈಃ** ತೀರ್ಥಯಾತ್ರಾ ನೆಪದಿಂದ ಬಂದಿರುವ **ಸಂತಃ** ಸಜ್ಜನರು **ಸ್ವಯಂ ಹಿ ತೀರ್ಥಾನಿ** ತಾವೇ ತೀರ್ಥಗಳನ್ನು **ಪುನಂತಿ** ಪವಿತ್ರಗೊಳಿಸುವರು.

**ಅತ್ರಿರ್ವಸಿಷ್ಠಶ್ಚ್ಯವನಃ ಶರದ್ವಾನ್**
**ಅರಿಷ್ಟನೇಮಿರ್ಭೃಗುರಂಗಿರಾಶ್ಚ ।**
**ಪರಾಶರೋ ಗಾಧಿಸುತೋಽಥ ರಾಮ**
**ಉಚಥ್ಯ ಇಂದ್ರಪ್ರಮತೀಧ್ಮವಾಹೌ ॥೯॥**

**ಅತ್ರಿಃ** ಅತ್ರಿಯು **ವಶಿಷ್ಠಃ** ವಶಿಷ್ಠರು **ಚ್ಯವನಃ** ಚ್ಯವನ ಋಷಿಯು **ಶರದ್ವಾನ್** ಶರದ್ವಾನರು **ಅರಿಷ್ಟನೇಮಿಃ** ಅರಿಷ್ಟನೇಮಿಗಳು **ಭೃಗುಃ** ಭೃಗುಋಷಿಗಳು **ಅಂಗಿರಾಃ** ಅಂಗಿರಸರು **ಪರಾಶರಃ** ಪರಾಶರರು **ಗಾಧಿಸುತಃ** ವಿಶ್ವಾಮಿತ್ರರು **ರಾಮಃ** ಪರಶುರಾಮನು **ಉಚಥ್ಯಃ** ಉಚಥ್ಯರು **ಇಂದ್ರಪ್ರಮತೀಧ್ಮವಾಹೌ** ಇಂದ್ರಪ್ರಮತೀ ಇಧ್ಮವಾಹ ಎಂಬ ಹೆಸರಿನ ಋಷಿಗಳು.

**ಮೇಧಾತಿಥಿರ್ದೇವಲ ಆರ್ಷ್ಟಿಷೇಣೋ**
**ಭರದ್ವಾಜೋ ಗೌತಮಃ ಪಿಪ್ಪಲಾದಃ ।**
**ಮೈತ್ರೇಯ ಔರ್ವಃ ಕವಷಃ ಕುಂಭಯೋನಿಃ**
**ದ್ವೈಪಾಯನೋ ಭಗವಾನ್ನಾರದಶ್ಚ ॥೧೦॥**

**ಮೇಧಾತಿಥಿರ್ದೇವಲಆರ್ಷ್ಟಿಷೇಣಃ** ಮೇಧಾತಿಥಿ-ದೇವಲ-ಆರ್ಷ್ಟಿಷೇಣರು **ಭರದ್ವಾಜಃ** ಭರದ್ವಾಜರು **ಗೌತಮಃ** ಗೌತಮರು **ಪಿಪ್ಪಲಾದಃ** ಪಿಪ್ಪಲಾದರು **ಔರ್ವಃ** ಓರ್ವನ ಮಗನಾದ **ಮೈತ್ರೇಯಃ** ಮೈತ್ರೇಯರು **ಕವಷಃ ಕುಂಭಯೋನಿಃ** ಅಗಸ್ತ್ಯರು **ಭಗವಾನ್ ದ್ವೈಪಾಯನಃ** ಪೂಜ್ಯರಾದ ವೇದವ್ಯಾಸದೇವರು **ನಾರದಃ** ನಾರದರು.

**ಅನ್ಯೇ ಚ ದೇವರ್ಷಿಬ್ರಹ್ಮರ್ಷಿವರ್ಯಾಃ**
**ರಾಜರ್ಷಿವರ್ಯಾ ಅರುಣಾದಯಶ್ಚ ।**
**ನಾನಾರ್ಷೇಯಪ್ರವರಾನ್ ಸಮೇತಾ-**
**ನಭ್ಯರ್ಚ್ಯ ರಾಜಾ ಶಿರಸಾ ವವಂದೇ ॥೧೧॥**

**ಅನ್ಯೇ ಚ** ಇನ್ನುಳಿದ **ದೇವರ್ಷಿಬ್ರಹ್ಮರ್ಷಿವರ್ಯಾಃ** ದೇವಋಷಿ-ಬ್ರಹ್ಮಋಷಿಶ್ರೇಷ್ಠರು **ರಾಜರ್ಷಿವರ್ಯಾಃ** ರಾಜರ್ಷಿಶ್ರೇಷ್ಠರು **ಅರುಣಾದಯಶ್ಚ** ಅರುಣ ಮೊದಲಾದ **ನಾನಾರ್ಷೇಯಪ್ರವರಾನ್** ಋಷಿಸಮೂಹಗಳಲ್ಲಿ ಶ್ರೇಷ್ಠರಾದ ಎಲ್ಲರನ್ನು **ಸಮೇತಾನ್** ಅಲ್ಲಿ ಸೇರಿದವರನ್ನು **ಅಭ್ಯರ್ಚ್ಯ** ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ **ರಾಜಾ** ಪರೀಕ್ಷಿತನು **ಶಿರಸಾ** ತಲೆಬಾಗಿ **ವವಂದೇ** ನಮಸ್ಕರಿಸಿದನು.

**ವಿಶೇಷ**-ನಾರದಾದಿಗಳು ದೇವಋಷಿಗಳು, ಪರಶುರಾಮಾದಿಗಳು ಬ್ರಹ್ಮಋಷಿಗಳು, ವಿಶ್ವಾಮಿತ್ರಾದಿಗಳು ರಾಜಋಷಿಗಳು, ಜಾತಿಭೇದವನ್ನು ತಿಳಿಸಲು ಅರುಣಾದಿಗಳು ಕಾಂಡ ಋಷಿಗಳು ಎಂದು ಪ್ರತ್ಯೇಕ ಹೇಳಿರುವರು.

**ಸುಖೋಪವಿಷ್ಟೇಷ್ವಥ ತೇಷು ಭೂಯಃ**
**ಕೃತಪ್ರಣಾಮಃ ಸ್ವಚಿಕೀರ್ಷಿತಂ ಯತ್ ।**
**ವಿಜ್ಞಾಪಯಾಮಾಸ ವಿವಿಕ್ತಚೇತಾ**
**ಉಪಸ್ಥಿತೋಽಗ್ರೇಽರ್ಘ್ಯಗೃಹೀತಪಾಣಿಃ ॥೧೨॥**

**ತೇಷು** ಮುನಿಗಳು **ಸುಖೋಪವಿಷ್ಟೇಷು** ಸುಖವಾಗಿ ಕುಳಿತ ಮೇಲೆ **ಭೂಯಃ** ಮತ್ತೆ **ಕೃತಪ್ರಣಾಮಃ** ನಮಸ್ಕಾರಮಾಡಿದವನಾಗಿ **ಅಗ್ರೇ** ಅವರೆದುರಿಗೆ **ಅರ್ಘ್ಯಗೃಹೀತಪಾಣಿಃ** ಪೂಜೆಗಾಗಿ ಕೈಜೋಡಿಸಿದವನಾಗಿ **ಉಪಸ್ಥಿತಃ** ನಿಂತು **ಯತ್ ಸ್ವಚಿಕೀರ್ಷಿತಂ** ತಾನು ಮಾಡಲಿಚ್ಛಿಸಿದ್ದನ್ನು **ವಿಜ್ಞಾಪಯಾಮಾಸ** ತಿಳಿಸಿದನು.

ರಾಜೋವಾಚ -

**ಅಹೋ ವಯಂ ಧನ್ಯತಮಾ ನೃಪಾಣಾಂ**
**ಮಹತ್ತಮಾನುಗ್ರಹಣೀಯಶೀಲಾಃ ।**
**ರಾಜ್ಞಾಂ ಕುಲಂ ಬ್ರಾಹ್ಮಣಪಾದಶೌಚ(ಚಾತ್)**
**ಮಾರಾದ್ವಿಸೃಷ್ಟಂ ಬತ ಗರ್ಹ್ಯ ಕರ್ಮ ॥೧೩॥**

**ಗರ್ಹ್ಯ ಕರ್ಮ** ನಿಂದ್ಯವಾದ ಕಾರ್ಯಮಾಡುವ **ರಾಜ್ಞಾಂ ಕುಲಂ** ರಾಜರ ಕುಲವು **ಬ್ರಾಹ್ಮಣಪಾದಶೌಚಾತ್ ಆರಾತ್** ಬ್ರಾಹ್ಮಣರ ಕಾಲು ತೊಳೆದ ನೀರಿಗಿಂತ ದೂರದಲ್ಲಿ **ವಿಸೃಷ್ಟಂ ಬತ** ಬಿಡಲ್ಪಟ್ಟಿದೆ. **ಮಹತ್ತಮಾನುಗ್ರಹಣೀಯಶೀಲಾಃ** ದೊಡ್ಡವರಿಂದ ಅನುಗ್ರಹ ಪಡೆಯಲು ಯೋಗ್ಯವಾದ ಸ್ವಭಾವವುಳ್ಳ **ನೃಪಾಣಾಂ** ರಾಜರ ಮಧ್ಯದಲ್ಲಿ **ವಯಂ ಧನ್ಯತಮಾಃ** ನಾವು ಅತ್ಯಂತ ಧನ್ಯರು (ಎಂದು ಪರೀಕ್ಷಿತನು ಹೇಳಿದನು.)

**ವಿಶೇಷ :- ಬ್ರಾಹ್ಮಣಪಾದಶೌಚಂ** ಎಂಬ ಪಾಠದಲ್ಲಿ ಯಾರು ಬ್ರಾಹ್ಮಣರ ಪಾದಪ್ರಕ್ಷಾಲನ ಮಾಡಿಲ್ಲವೋ ಅವರನ್ನು ನಿಂದಿಸುವರು ಎಂದು ಅವತಾರಿಕಾ. **ಯೇನ** ಯಾರಿಂದ **ಬ್ರಾಹ್ಣಪಾದಶೌಚಂ** ಬ್ರಾಹ್ಮಣರ ಪಾದಪ್ರಕ್ಷಾಲನದ ನೀರು **ಆರಾತ್** ದೂರದಿಂದಲೇ **ವಿಸೃಷ್ಟಂ** ಬಿಡಲ್ಪಟ್ಟಿದೆಯೋ ಎಂದೂ ಸಂಪಾದಿಸಿಲ್ಲವೋ **ತದ್ರಾಜ್ಞಾಂ ಕುಲಂ** ಆ ರಾಜರ ಕುಲವು **ಗರ್ಹ್ಯ ಕರ್ಮ ಬತ** ಅವರ ಜೀವನವು ನಿಂದ್ಯವು ಎಂದು ಭಾವ.

ಬ್ರಹ್ಮಶಾಪವೂ ವೈರಾಗ್ಯಜನಕವೆಂದು ಅಭಿನಂದಿಸುವನು.

**ತಸ್ಯೈವ ಮೇಽಸ್ತ್ವದ್ಯ ಪರಾವರೇಶೇ**
**ವ್ಯಾಸಕ್ತಚಿತ್ತಸ್ಯ ಗೃಹೇಷ್ವಭೀಕ್ಷ್ಣಮ್ ।**
**ನಿರ್ವೇದಮೂಲೋ ದ್ವಿಜಶಾಪರೂಪೋ**
**ಯತ್ರ ಪ್ರಸಕ್ತೋಽಭಯಮೇವ ಧತ್ತೇ** ॥೧೪॥

**ಪರಾವರೇಶೇ** ಮುಕ್ತಾಮುಕ್ತನಿಯಾಮಕನಾದ ಶ್ರೀಹರಿಯ ವಿಷಯದಲ್ಲಿ **ವ್ಯಾಸಕ್ತಚಿತ್ತಸ್ಯ** ನಿರಂತರ ಆಸಕ್ತವಾಗದಿರುವ ಮನಸ್ಸುಳ್ಳ **ತಸ್ಯೈವ** ನಿಂದ್ಯಕಾರ್ಯ ಮಾಡಿದ ಆ **ಮೇ** ನನಗೆ **ದ್ವಿಜಶಾಪರೂಪೋ** ಬ್ರಾಹ್ಮಣಶಾಪವೆಂಬ ಶಿಕ್ಷೆಯು **ಗೃಹೇಷು** ಮನೆಮುಂತಾದವುಗಳಲ್ಲಿ **ಅಭೀಕ್ಷ್ಣಂ** ಪೂರ್ಣವಾಗಿ **ನಿರ್ವೇದಮೂಲಃ** ವೈರಾಗ್ಯಕಾರಣವಾದ್ದರಿಂದ **ಅದ್ಯೈವ ಅಸ್ತು** ಇಂದೇ ಬರಲಿ **ಯತ್ರ** ಯಾವ ಮನೆ ಮುಂತಾದವುಗಳಲ್ಲಿ **ಪ್ರಸಕ್ತಃ** ವೈರಾಗ್ಯವಿಲ್ಲದವನು **ಭಯಮೇವ** ಸಂಸಾರಭಯವನ್ನೇ **ಧತ್ತೇ** ಹೊಂದುವನೋ ಅಂಥ ಮನೆಗಳಲ್ಲಿ ಎಂದು ಅನ್ವಯ.ಅಥವಾ **ಯತ್ರ** ಯಾವ ಶ್ರೀಹರಿಯಲ್ಲಿ **ಪ್ರಸಕ್ತಃ** ಚನ್ನಾಗಿ ಆಸಕ್ತನಾದ ಭಕ್ತನು **ಅಭಯಂ ಏವ ಧತ್ತೇ** ಮೋಕ್ಷವನ್ನೇ ಹೊಂದುವನೋ ಅಂಥ ಪರಾವರೇಶೇ ಎಂದು ಅನ್ವಯ.

**ವಿಶೇಷಃ-** ಪರಾವರೇಶಃ ಎಂದು ಪಾಠವಿದ್ದಾಗ **ಬ್ರಾಹ್ಮಣಶಾಪರೂಪಃ ಪರಾವರೇಶಃ** ಬ್ರಾಹ್ಮಣಶಾಪಾಂತರ್ಗತ ಶ್ರೀಹರಿಯು **ಹೃದಯೇಷು** ಮನೆ ಮುಂತಾದವುಗಳಲ್ಲಿ **ವ್ಯಾಸಕ್ತಚಿತ್ತಸ್ಯ ಮೇ** ಮನಶ್ಚಾಂಚಲ್ಯವುಳ್ಳ ನನಗೆ **ನಿರ್ವೇದಮೂಲಂ** ವೈರಾಗ್ಯಜನಕನಾಗಲಿ ಎಂದು ಅನ್ವಯವನ್ನು ಮಾಡಬೇಕು. ಶಾಪವು ಅಸ್ವತಂತ್ರ ಎಂದು ತಿಳಿಸಲು ದ್ವಿಜಶಾಪರೂಪಃ ಎಂದು ಶ್ರೀಹರಿಗೆ ವಿಶೇಷಣ ಹೇಳಿರುವರು ಎಂದು ತಿಳಿಯಬೇಕು.

ತನ್ನ ಅಭಿಪ್ರಾಯವನ್ನು ತಿಳಿಸುವನು.

**ತಂ ಮೋಪವಿಷ್ಟಂ ಪ್ರತಿಯಾಂತು ವಿಪ್ರಾ**
**ಗಂಗಾ ಚ ದೇವೀ ಧೃತಚಿತ್ತಮೀಶೇ ।**
**ದ್ವಿಜೋಪಸೃಷ್ಟಃ ಕುಹಕಸ್ತಕ್ಷಕೋ ವಾ**
**ದಶತ್ವಲಂ ಗಾಯತ ವಿಷ್ಣುಗಾಥಾಃ** ॥೧೫॥

**ಉಪವಿಷ್ಟಂ** ಪ್ರಾಯೋಪವೇಶಕ್ಕೆ ಕುಳಿತ **ತಂ ಮಾ ಪ್ರತಿ** ಆ ನನ್ನನ್ನು ಕುರಿತು **ವಿಪ್ರಾಃ** ಬ್ರಾಹ್ಮಣರು **ಪ್ರತಿಯಾಂತು** ಬರಲಿ **ಈಶೇ** ಶ್ರೀಹರಿಯಲ್ಲಿ **ಧೃತಚಿತ್ತಂ** ಮನಸಿಟ್ಟ ನನ್ನ ಹತ್ತಿರ **ಗಂಗಾ ಚ ದೇವೀ** ಗಂಗಾದೇವಿಯು ನಿಜರೂಪದಿಂದ **ಪ್ರತಿಯಾಂತು** ತನ್ನದರ್ಶನದಿಂದ ಪವಿತ್ರಗೊಳಿಸಲು ಬರಲಿ **ದ್ವಿಜೋಪಸೃಷ್ಟಃ** ಬ್ರಾಹ್ಮಣನಿಂದ ಪ್ರೇರಿತವಾದ **ಕುಹಕಃ** ಕಪಟವೇಷದ **ತಕ್ಷಕಃ** ತಕ್ಷಕಸರ್ಪವು **ದಶತು** ಕಚ್ಚಲಿ ಅಲ್ಲಿಯವರೆಗೆ **ವಿಷ್ಣುಗಾಥಾಃ** ಶ್ರೀಹರಿಯ ಚರಿತೆಯನ್ನು **ಅಲಂ ಗಾಯತ** ಚೆನ್ನಾಗಿ ಗಾನಮಾಡಿರಿ. ಇದರಿಂದ ಬ್ರಾಹ್ಮಣ ಶಾಪವು ನಿಜವಾಗಲಿ ಎಂಬುದೂ ತನ್ನ ಇಚ್ಛೆ ಎಂದು ತಿಳಿದವನು. ನನ್ನ ಭೃತ್ಯರ ಭಯದಿಂದ ನಿಜರೂಪದಿಂದ ಬರಲು ಆಗದು. ಅದಕ್ಕಾಗಿ ಕಪಟವೇಷದಿಂದ ಬಂದು ಕಚ್ಚಲಿ ಎಂದಿರುವನು.

ತನಗೆ ಜನ್ಮಾಂತರ ಬಂದರೂ ಶ್ರೀಹರಿಯಲ್ಲಿ, ಅವನ ಭಕ್ತರಲ್ಲಿ ರತಿ ಇರಲಿ ಎಂದು ಪ್ರಾರ್ಥಿಸುವನು.

**ಪುನಶ್ಚ ಭೂಯಾದ್ಭಗವತ್ಯನಂತೇ**
**ರತಿಃ ಪ್ರಸಂಗಶ್ಚ ತದಾಶ್ರಯೇಷು ।**
**ಮಹತ್ಸು ಯಾಂ ಯಾಂ ಉಪಯಾಮಿ ಸೃಷ್ಟಿಂ**
**ಮೈತ್ರ್ಯಸ್ತು ಸರ್ವತ್ರ ನಮೋ ದ್ವಿಜೇಭ್ಯಃ ॥೧೬॥**

**ಯಾಂ ಯಾಂ ಸೃಷ್ಟಿಂ ಉಪಯಾಮಿ** ಯಾವ ಯಾವ ಜನ್ಮಹೊಂದುವೆನೋ **ತತ್ರ ಸರ್ವತ್ರ** ಅಲ್ಲೆಲ್ಲ ಈ ಜನ್ಮದಲ್ಲಿ ಇದ್ದಂತೆ **ಭಗವತಿ ಅನಂತೇ** ಶ್ರೀಹರಿಯಲ್ಲಿ **ಪುನಃ ರತಿಃ ಭೂಯಾತ್** ಮತ್ತೆ ಭಕ್ತಿಯುಂಟಾಗಲಿ **ತದಾಶ್ರಯೇಷು ಮಹತ್ಸು** ಭಗವದ್ಭಕ್ತರಾದ ಉತ್ತಮರಲ್ಲಿ **ಪ್ರಸಂಗಃ** ಹೆಚ್ಚಿನ ಸ್ನೇಹವು ತಾರತಮ್ಯಾನುಸಾರ ಇರಲಿ ಸಮರಲ್ಲಿ **ಮೈತ್ರಿ ಅಸ್ತು** ಪ್ರೇಮವಿರಲಿ ನೀಚರಲ್ಲಿ ದಯೆ ಇರಲಿ ನೀಚಯೋನಿ ಬಂದರೆ **ದ್ವಿಜೇಭ್ಯಃ** ಹರಿಭಕ್ತರಾದ ತ್ರೈವರ್ಣಿಕರಲ್ಲಿ **ನಮಃ ಅಸ್ತು** ನಮ್ರತೆ ಇರಲಿ.

**ವಿಶೇಷ** ಪರೀಕ್ಷಿತರು ನಡೆಸಿದ ಈ ಪ್ರಾರ್ಥನೆಯು ತಮಗೆ ಇದು ಕೊನೆಯ ದೇಹವೆಂದು ಅರಿವಿಲ್ಲದೇ ಅಥವಾ ಅರಿವಿದ್ದರೂ ''ಕಲೌ ಜಾತೋಽಸ್ಮಿ'' ಎಂಬ ಬ್ರಹ್ಮವಾಕ್ಯದಂತೆ ಲೋಕಶಿಕ್ಷಣಕ್ಕಾಗಿ ಎಂದು ತಿಳಿಯಬೇಕು.

ಗಂಗೆಯಲ್ಲಿ ಪ್ರಾಯೋಪವೇಶ ಮಾಡಿದನೆಂದು ಹೇಳಿದರಷ್ಟೇ. ಅದರಲ್ಲಿಯೂ ಸ್ಥಳವಿಶೇಷ ತಿಳಿಸುವರು.

**ಇತಿ ಸ್ಮ ರಾಜಾ ವ್ಯವಸಾಯಯುಕ್ತಃ**
**ಪ್ರಾಚೀನಕಾಗ್ರೇಷು ಕುಶೇಷು ಧೀರಃ ।**
**ಉದಙ್ಮುಖೋ ದಕ್ಷಿಣಕೂಲ ಆಸ್ತೇ**
**ಸಮುದ್ರಪತ್ನ್ಯಾಃ ಸ್ವಸುತೇ ನ್ಯಸ್ತಭಾರಃ ॥೧೭॥**

**ಇತಿ** ಈ ರೀತಿಯಾಗಿ **ವ್ಯವಸಾಯಯುಕ್ತಃ** ನಿಶ್ಚಯದಿಂದ ಕೂಡಿದವನಾಗಿ **ಸ್ವಸುತೇ** ತನ್ನ ಮಗನಾದ ಜನಮೇಜಯನಲ್ಲಿ **ನ್ಯಸ್ತಭಾರಃ** ರಾಜ್ಯಭಾರವನ್ನಿರಿಸಿ **ಸಮುದ್ರಪತ್ನ್ಯಾಃ** ಗಂಗೆಯ **ದಕ್ಷಿಣೇ ಕೂಲೇ** ಬಲದಂಡೆಯ ಸಮೀಪದಲ್ಲಿರುವ ನೀರಿನಲ್ಲಿರುವ ಉಪ್ಪರಿಗೆಯಲ್ಲಿ **ಪ್ರಾಚೀನಾಗ್ರೇಷು** ಪೂರ್ವಕ್ಕೆ ಅಗ್ರಭಾಗವುಳ್ಳ **ಕುಶೇಷು** ದರ್ಭಗಳಲ್ಲಿ **ಧೀರಃ** ಧೈರ್ಯಶಾಲಿಯಾದ **ರಾಜಾ** ಪರೀಕ್ಷಿತನು **ಉದಙ್ಮುಖಃ** ಉತ್ತರಾಭಿಮುಖವಾಗಿ **ಆಸ್ತೇ ಸ್ಮ** ಕುಳಿತಿದ್ದನು.

*ಭಾಗವತತಾತ್ಪರ್ಯ-*

ಇಲ್ಲಿ ಬಲದಂಡೆಯಲ್ಲಿ ರಾಜನಿದ್ದನೆಂದು ಹೇಳುತ್ತದೆ ಹಿಂದೆ ಗಂಗೆಯಲ್ಲಿಯೇ ಪ್ರಾಯೋಪವೇಶ ಹೇಳಿದೆ ಕಾರಣ ವಿರೋಧ ತೋರುವದು ಅದಕ್ಕಾಗಿ ವಿವಕ್ಷಿತ ತಾತ್ಪರ್ಯ ಹೇಳುವರು.

**ಗಂಗಾಯಾಮುದಕೇ ಏವ ಕಿಂಚಿದ್ದಕ್ಷಿಣಭಾಗೇ ಪ್ರಾಸಾದೇ ।**
**ತಥಾ ಹಿ ಮಹಾಭಾರತೇ**

ಗಂಗೆಯಲ್ಲಿಯ ನೀರಿನಲ್ಲಿಯೇ ಸ್ವಲ್ಪಬಲಭಾಗಕ್ಕೆ ಇರುವ ಪ್ರಾಸಾದದಲ್ಲಿ ಕುಳಿತನು. ಇದೇ ರೀತಿ ಮಹಾಭಾರತದಲ್ಲಿ ಹೇಳಿದೆ.

**ವಿಹಾಯ ಸರ್ವಂ ನರದೇವಚಿಹ್ನಂ**
**ಕೇಯೂರಹಾರಾಂಗದಮೌಲಿರತ್ನಾನ್ ।**
**ರತ್ನಾಂಗುಲೀಯಾನ್ವಿಮಲಾನ್ನಿರಸ್ಯ**
**ಪವಿತ್ರಪಾಣಿರ್ಮುನಿವೇಷ ಆಸ್ತೇ ॥೧೮॥**

**ಸರ್ವಂ** ಎಲ್ಲ **ನರದೇವಚಿಹ್ನಂ** ರಾಜನ ಲಕ್ಷಣಗಳಾದ ಛತ್ರ,ಚಾಮರಾದಿಗಳನ್ನು **ವಿಹಾಯ** ಬಿಟ್ಟು **ವಿಮಲಾನ್** ನಿರ್ಮಲವಾದ **ಕೇಯೂರಹಾರಾಂಗದಮೌಲಿರತ್ನಾನ್** ವಂಕಿ, ಹಾರ, ಕಡಗ, ಕಿರೀಟ, ಮುಂತಾದವುಗಳನ್ನು **ರತ್ನಾಂಗುಲೀಯಾನ್** ರತ್ನದ

ಉಂಗುರಗಳನ್ನು ನಿರಸ್ಯ ತೆಗೆದು **ಪವಿತ್ರಪಾಣಿಃ** ಪವಿತ್ರಧರಿಸಿ **ಮುನಿವೇಷಃ ಆಸ್ತೇ** ಕೃಷ್ಣಾಜಿನಾದಿ ಋಷಿವೇಷಧರಿಸಿ ಇರುವನು.

**ಏವಂ ಚ ತಸ್ಮಿನ್ನರದೇವದೇವೇ**
**ಪ್ರಾಯೋಪವಿಷ್ಟೇ ದಿವಿ ದೇವಸಂಘಾಃ ।**
**ಪ್ರಶಸ್ಯ ಭೂಮೌ ವ್ಯಕಿರನ್ ಪ್ರಸೂನೈ**
**ರ್ಮುದಾ ಮುಹುರ್ದುಂದುಭಯಶ್ಚ ನೇದುಃ ॥೧೯॥**

**ತಸ್ಮಿನ್** ಆ ನರದೇವದೇವೇ ರಾಜಶ್ರೇಷ್ಠನಾದ ಪರೀಕ್ಷಿತನು **ಭೂಮೌ** ಭೂಮಿಯಲ್ಲಿ **ಪ್ರಾಯೋಪವಿಷ್ಟೇ** ಉಪವಾಸವ್ರತಕ್ಕೆ ಕುಳಿತಾಗ ದಿವಿ ಆಕಾಶದಲ್ಲಿ **ದೇವಸಂಘಾಃ** ದೇವತೆಗಳ ಸಮೂಹಗಳು **ಪ್ರಶಸ್ಯ** ಪ್ರಶಂಸೆಮಾಡಿ **ಮುದಾ** ಸಂತೋಷದಿಂದ **ಪ್ರಸೂನೈಃ ವ್ಯಕಿರನ್** ಹೂಗಳಿಂದ ಮಳೆಗರೆದವು **ಮುಹುಃ** ಮತ್ತೆ ಮತ್ತೆ **ದುಂದುಭಯಃ** ನಗಾರಿಗಳು **ನೇದುಃ** ಬಾರಿಸಿದವು.

**ಮಹರ್ಷಯೋ ವೈ ಸಮುಪಾಗತಾ ಯೇ**
**ಪ್ರಶಸ್ಯ ಸಾಧ್ವಿತ್ಯನುಮೋದಮಾನಾಃ ।**
**ಊಚುಃ ಪ್ರಜಾನುಗ್ರಹಶೀಲಸಾರಾ**
**ಯದುತ್ತಮಶ್ಲೋಕಗುಣಾನುರೂಪಮ್ ॥೨೦॥**

**ಪ್ರಜಾನುಗ್ರಹಶೀಲಸಾರಾಃ** ಸಜ್ಜನರಿಗೆ ಅನುಗ್ರಹಮಾಡುವ ಸ್ವಭಾವ-ಸಾಮರ್ಥ್ಯಗಳುಳ್ಳ **ಯೇ ಮಹರ್ಷಯಃ** ಯಾವ ಮಹಾಋಷಿಗಳು **ಸಮುಪಾಗತಾಃ** ಬಂದಿರುವರೋ ಆವರು **ಪ್ರಶಸ್ಯ ಸಾಧು ಇತಿ** ಚೆನ್ನಾಗಿದೆ ಎಂದು **ಅನುಮೋದಮಾನಾಃ** ಅನುಮೋದನೆ ಮಾಡುವವರಾಗಿ **ಯದುತ್ತಮಶ್ಲೋಕಗುಣಾನುರೂಪಂ** ಯಾವ ಶ್ರೀಹರಿಯ ವಿಷಯಕ ಜ್ಞಾನಭಕ್ತ್ಯಾದಿಗುಣಗಳುಳ್ಳವರಿಗೆ ಅನುಕೂಲವಾದ ಮಾತುಗಳನ್ನು **ಊಚುಃ** ಆಡಿದರು.

**ನ ವಾ ಇದಂ ರಾಜರ್ಷಿವರ್ಯ ಚಿತ್ರಂ**
**ಭವತ್ಸು ಕೃಷ್ಣಂ ಸಮನುವ್ರತೇಷು ।**
**ಯೇಽಧ್ಯಾಸನಂ ರಾಜಕಿರೀಟಜುಷ್ಟಂ**
**ಸದ್ಯೋ ಜಹುರ್ಭಗವತ್ಪಾರ್ಶ್ವಕಾಮಾಃ ॥೨೧॥**

**ರಾಜರ್ಷಿವರ್ಯ** ಶ್ರೇಷ್ಠನಾದ ರಾಜಋಷಿಯೇ **ಕೃಷ್ಣಂ** ಶ್ರೀಕೃಷ್ಣನನ್ನು **ಸಮನುವ್ರತೇಷು** ಅನುಸರಿಸುವ **ಭವತ್ಸು** ನಿಮ್ಮಲ್ಲಿ **ಇದಂ ನ ಚಿತ್ರಂ** ರಾಜ್ಯಪರಿತ್ಯಾಗ ಮಾಡಿ ಪ್ರಾಯೋಪವೇಶಕ್ಕೆ ಕೂಡುವದು ಆಶ್ಚರ್ಯವಲ್ಲ (ಪಾಂಡವ ವಂಶದಲ್ಲಿ ಜನಿಸಿದ್ದರಿಂದ) **ಭಗವತ್ಪಾರ್ಶ್ವಕಾಮಾಃ** ಶ್ರೀಹರಿಯ ಸಮೀಪ ಹೋಗಲು ಇಚ್ಛಿಸಿದ **ಯೇ** ಯಾವ ಪಾಂಡವರು **ರಾಜಕಿರೀಟಜುಷ್ಟಂ** ಮಾಂಡಲೀಕರಿಂದ ಸೇವಿತವಾದ **ಅಧ್ಯಾಸನಂ** ಸಿಂಹಾಸನವನ್ನು **ಸದ್ಯಃ** ಕಾಲವಿಲಂಬವಿಲ್ಲದೆ **ಜಹುಃ** ತ್ಯಾಗಮಾಡಿದರು ಅಂಥವರ ಮೊಮ್ಮಗ ನೀನು ಎಂದು ಭಾವ.

**ಸರ್ವೇ ವಯಂ ತಾವದಿಹಾಸ್ಮಹೇಽಥ**
**ಕಲೇವರಂ ಯಾವದಸೌ ವಿಹಾಯ ।**
**ಅಜಂ ಪರಂ ವಿರಜಸ್ಕಂ ವಿಶೋಕಂ**
**ಯಾಸ್ಯತ್ಯಯಂ ಭಾಗವತಪ್ರಧಾನಃ ॥೨೨॥**

**ಅಥ** ಆದ್ದರಿಂದ **ಭಾಗವತಪ್ರಧಾನಃ** ಭಗವದ್ಭಕ್ತರಲ್ಲಿ ಮುಖ್ಯನಾದ **ಅಸೌ ಅಯಂ** ಈ ಪರೀಕ್ಷಿತನು **ಯಾವತಾ** ಎಲ್ಲಿಯವರೆಗೆ **ಕಲೇವರಂ** ದೇಹವನ್ನು **ವಿಹಾಯ** ಬಿಟ್ಟು **ಅಜಂ** ಉತ್ಪತ್ತಿರಹಿತನಾದ **ಪರಂ** ತ್ರಿಗುಣಾತೀತನಾದ **ವಿರಜಸ್ಕಂ** ದೋಷದೂರನಾದ (ಅಶೋಭನವನ್ನು ಶೋಭನ ಎಂದು ತಿಳಿಯದ) **ವಿಶೋಕಂ** ನಿತ್ಯನಿರ್ದುಃಖನಾದ ಶ್ರೀಹರಿಯನ್ನು **ಯಾಸ್ಯತಿ** ಹೊಂದುವನೋ **ತಾವತ್** ಅಲ್ಲಿಯವರೆಗೆ **ಸರ್ವೇ ವಯಂ** ನಾವೆಲ್ಲರು **ಇಹ** ಇಲ್ಲಿ **ಆಸ್ಮಹೇ** ಇರುವೆವು.

**ಆಶ್ರುತ್ಯ ತದೃಷಿಗಣವಚಃ ಪರೀಕ್ಷಿತ್**
**ಸಮಂ ಮಧುಶ್ಚುತ್ ಗುರುಶಾಪವ್ಯಲೀಕಮ್ ।**
**ಆಭಾಷತೈನಾನಭಿವಂದ್ಯಯುಕ್ತಃ**
**ಶುಶ್ರೂಷಮಾಣಶ್ಚರಿತಾನಿ ವಿಷ್ಣೋಃ ॥೨೩॥**

**ಸಮಂ** ಒಂದೇ ಸಮನಾಗಿ **ಮಧುಶ್ಚುತ್** ಅಮೃತವನ್ನು ಸುರಿಸುವ ಆದ್ದರಿಂದಲೇ **ಗುರುಶಾಪವ್ಯಲೀಕಂ** ಬ್ರಾಹ್ಮಣನ ಶಾಪವನ್ನು ಫಲವಿಲ್ಲದಂತೆ ಮಾಡಿದ **ತತ್ ಋಷಿಗಣವಚಃ** ಆ ಮುನಿ ಸಮೂಹದ ಮಾತುಗಳನ್ನು **ಆಶ್ರುತ್ಯ** ಕೇಳಿ **ಯುಕ್ತಃ** ಪರಮಾತ್ಮನಲ್ಲಿಯೇ ಮನೋಯೋಗವುಳ್ಳವನಾಗಿ **ಪರೀಕ್ಷಿತ್** ಪರೀಕ್ಷಿತ್ ರಾಜನು **ಏನಾನ್** ಮುನಿಗಳನ್ನು **ಅಭಿವಂದ್ಯ** ನಮಸ್ಕರಿಸಿ **ವಿಷ್ಣೋಃ** ಶ್ರೀಹರಿಯ **ಚರಿತಾನಿ**

ಚರಿತ್ರೆಗಳನ್ನು **ಶುಶ್ರೂಷಮಾಣಃ** ಕೇಳುವ ಅಪೇಕ್ಷೆಯುಳ್ಳವನಾಗಿ **ಅಭಾಷತ** ಮಾತನಾಡಿದನು.

ವಿಶೇಷ- ವ್ಯಲೀಕಂ ಎಂದುದರಿಂದ ದುರ್ಮರಣದೋಷವು ಪರಿಹಾರವಾಯಿತೆಂದು ಸೂಚಿಸಿದಂತಾಯಿತು. ಅಷ್ಟೇ ಹೊರತು ತಕ್ಷಕನು ಕಚ್ಚಲೇ ಇಲ್ಲವೆಂದು ಅರ್ಥವಲ್ಲ. ಮುಂದೆ ತಕ್ಷಕ ಕಚ್ಚಿದಂತೆ ಕಥೆಯೂ ಬರುತ್ತದೆ.

ರಾಜೋವಾಚ-

**ಸಮಾಗತಾಃ ಸರ್ವತ ಏವ ಸರ್ವೇ**
**ವೇದಾ ಯಥಾ ಮೂರ್ತಿಧರಾಸ್ತ್ರಿಪೃಷ್ಠೇ ।**
**ನೇಹಾಥವಾಽಮುತ್ರ ಚ ಕಶ್ಚನಾರ್ಥ**
**ಋತೇ ಪರಾನುಗ್ರಹಮಾತ್ಮಶೀಲಾಃ ॥೨೪॥**

**ತತಶ್ಚ ವಃ ಪ್ರಶ್ನಮಿಮಂ ವಿಪೃಚ್ಛೇ**
**ವಿಶ್ರಮ್ಯ ವಿಪ್ರಾ ಇತಿ ಕೃತ್ಯತಾಯಾಮ್ ।**
**ಸರ್ವಾತ್ಮನಾ ಮ್ರಿಯಮಾಣೈಸ್ತು ಕೃತ್ಯಂ**
**ಶುದ್ಧಂ(ಭಂ) ಚ ತತ್ರಾಮೃಶತಾಭಿಯುಕ್ತಾಃ ॥೨೫॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಏಕೋನವಿಂಶೋಽಧ್ಯಾಯಃ ॥

**ತ್ರಿಪೃಷ್ಠೇ** ಮೂರು ಲೋಕಗಳ ಮೇಲಿರುವ ಸತ್ಯಲೋಕದಲ್ಲಿ **ಸರ್ವೇ ವೇದಾಃ** ಎಲ್ಲ ವೇದಗಳು **ಮೂರ್ತಿಧರಾಃ ಭವಂತಿ** ದೇಹತೆಗೆದುಕೊಂಡು ಇರುತ್ತವೆಯೋ ಹಾಗಿರುವ ತಾವು **ಸರ್ವತಃ** ಎಲ್ಲ ಕಡೆಯಿಂದ **ಸಮಾಗತಾಃ** ಬಂದಿದ್ದೀರಿ **ಇಹ** ಈ ಲೋಕದಲ್ಲಿ **ಅಮುತ್ರ ವಾ** ಪರಲೋಕದಲ್ಲಿ ಆಗಲಿ **ಪರಾನುಗ್ರಹಂ ಋತೇ** ಪರಮಾತ್ಮನ ಅನುಗ್ರಹದ ಹೊರತು **ಕಶ್ಚನ ಅರ್ಥಃ** ಬೇರೆ ಯಾವ ಪ್ರಯೋಜನವಿಲ್ಲ **ಆತ್ಮಶೀಲಾಃ** ಪರಮಾತ್ಮನ ಸಮಾಧಿಯುಳ್ಳ (ಪರಮಾತ್ಮನಲ್ಲಿ ಮನಸ್ಸುಳ್ಳ) **ಹೇ ವಿಪ್ರಾಃ** ಬ್ರಾಹ್ಮಣರೇ **ವಃ** ತಮ್ಮನ್ನು **ಇಮಂ ಪ್ರಶ್ನಂ** ಕೇಳಬೇಕಾದ್ದನ್ನು **ವಿಪೃಚ್ಛೇ** ಕೇಳುವೆನು **ಇತಿ ಕೃತ್ಯತಾಯಾಂ** ಇದನ್ನು ಹೀಗೆ ಮಾಡಬೇಕೆಂದು ಹೇಳುವದರಲ್ಲಿ **ವಿಶ್ರಮ್ಯ** ವಿಶ್ವಾಸ ವಿಟ್ಟು **ಮ್ರಿಯಮಾಣೈಃ** ಸಾಯಲು ಹೊರಟವರಿಂದ **ಸರ್ವಾತ್ಮನಾ** ಎಲ್ಲ ರೀತಿಯಿಂದ **ಶುದ್ಧಂ ಚ** ಮೋಕ್ಷಪರ್ಯವಸಾಯಿಯಾದ **ಯತ್ಕೃತ್ಯಂ** ಯಾವುದು ಮಾಡಲ್ಪಡಬೇಕು ಅದನ್ನು **ಅಭಿಯುಕ್ತಾಃ** ಜ್ಞಾನಿಗಳು **ಆಮೃಶತ್** ಆಲೋಚನೆ ಮಾಡಿದ ನಂತರ ಹೇಳಿರಿ ಎಂದು ಭಾವ.

# ಶ್ರೀಮದ್ಭಾಗವತೇ - ಪ್ರಥಮಸ್ಕಂಧೇ

## ವಿಂಶೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಆದೇ ಸಂದರ್ಭದಲ್ಲಿ ಅದೃಷ್ಟವಶಾತ್ ಶುಕಮುನಿಗಳು ಅಲ್ಲಿಗೆ ಬಂದರು. ರಾಜ ಅವರಿಗೆ ನಮಿಸಿ ಸತ್ಕರಿಸಿ ಕುಳ್ಳಿರಿಸಿದ. ಶುಕಚಾರ್ಯರನ್ನು ಭಕ್ತಿಯಿಂದ ಪ್ರಾರ್ಥಿಸಿದ. ತಾವು ಯಾರ ಕಣ್ಣಿಗೂ ಗೋಚರಿಸದವರು. ಕೃತಕೃತ್ಯರು. ಶ್ರೀಕೃಷ್ಣ ಪಾಂಡವರ ಪ್ರಿಯನಾದ್ದರಿಂದ ಪಾಂಡವರ ವಂಶದಲ್ಲಿ ಹುಟ್ಟಿದ ನನ್ನನ್ನು ಉದ್ಧರಿಸುವದಕ್ಕಾಗಿಯೇ ನಿಮ್ಮನ್ನು ಇಲ್ಲಿಗೆ ಕಳುಹಿಸಿದ್ದಾನೆ. ನನ್ನನ್ನು ಉದ್ಧರಿಸಿ. ಸಾವಿನ ಅಂಚಿನಲ್ಲಿರುವ ನನಗೆ ಮೋಕ್ಷೋಪಾಯವನ್ನು ಉಪದೇಶಿಸಿರಿ. ಹೀಗೆ ರಾಜನಿಂದ ಪ್ರಾರ್ಥಿತರಾದ ಶುಕಾಚಾರ್ಯರು ಶ್ರೀಮದ್ಭಾಗವತವನ್ನು ಹೇಳಲು ಪ್ರಾರಂಭಿಸಿದರು.

ಸಜ್ಜನರ ಸಂಗದಿಂದ ಜ್ಞಾನಾದಿಗಳು. ಅವುಗಳಿಂದಲೇ ಎಲ್ಲ ಪಾಪಗಳ ಕ್ಷಯವೆಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು.

**ಶುಕಾಗಮನ**

ಸೂತ ಉವಾಚ -

**ತತ್ರಾಭವ(ಗಮ)ದ್ಭಗವಾನ್ ವ್ಯಾಸಪುತ್ರೋ ।**
**ಯದೃಚ್ಛಯಾ ಗಾಮಟಮಾನೋಽನಪೇಕ್ಷಃ**
**ಅಲಕ್ಷ್ಯಲಿಂಗೋ ನಿಜಲಾಭತುಷ್ಟೋ**
**ವೃತಶ್ಚ ಬಾಲೈರವಧೂತವೇಷಃ ॥೧॥**

**ಯದೃಚ್ಛಯಾ** ಭಗವಂತನ ಇಚ್ಛೆಯಿಂದ **ಗಾಂ ಅಟಮಾನಃ** ಭೂಮಿಯನ್ನು ಸಂಚರಿಸುವ **ಅನಪೇಕ್ಷಃ** ಬಾಹ್ಯವಿಷಯಾಪೇಕ್ಷೆ ಇಲ್ಲದ(ಕಾರಣ ಹಣದ ಆಸೆಗೆ

ತಿರುಗುವವರಲ್ಲ) **ಅನಪೇಕ್ಷಃ** ಮುಖ್ಯಪ್ರಾಣನಿಗೆ ನಾಥನಾದ ವಿಷ್ಣುವಿನ **ಈಕ್ಷಾ** ದರ್ಶನವುಳ್ಳ(ನಿರಂತರ ಶ್ರೀಹರಿಯನ್ನು ಕಾಣುವವಗೆ ಬಾಹ್ಯಪದಾರ್ಥಾಪೇಕ್ಷೆ ಹೇಗೆ ಬಂದೀತು ಎಂದು ಭಾವ.) ಹಾಗಾದರೆ ಶರೀರಯಾತ್ರಾ ಹೇಗೆ ಎಂಬುದಕ್ಕೂ ಇದೇ ಉತ್ತರ. ವಿಜಯಧ್ವಜೀಯ ಪ್ರಕಾರ **ಕಾಕೋದರವತ್** ಹಾವಿನಂತೆ **ಅನಂ** ಪ್ರಾಣನನ್ನು ಪಿಬತೀತಿ ಅನಪಾ **ಈಕ್ಷಾ** ದರ್ಶನವುಳ್ಳ ಎಂದರ್ಥ.(ಬದುಕಿಗಾಗಿ ವಾಯುಪಾನ ಮಾಡಬೇಕು ಎಂಬ ಜ್ಞಾನವುಳ್ಳವರು) ಲಕ್ಷ್ಮೀಪ್ರಸಾದವಿಲ್ಲದ್ದಕ್ಕೆ ತಿನ್ನಲು ಇಲ್ಲವೆ ಎಂಬುದಕ್ಕೂ ಇದೇ ಉತ್ತರ **ಸ್ವಸ್ಮಾತ್** ಅಪಗತಾ ನ ಭವತೀತಿ ಅನಪಾ ಲಕ್ಷ್ಮೀಃ ತಸ್ಯಾಃ ಈಕ್ಷಣಂ ಯಸ್ಯ ಸಃ **ಅನಪೇಕ್ಷಃ** ಲಕ್ಷ್ಮೀಕಟಾಕ್ಷಪಾತ್ರ ಎಂದರ್ಥ. ವಾಯು ಪಾನದಿಂದ ತೃಪ್ತಿ ಹೇಗೆ ಎಂದರೆ **ನಿಜಲಾಭಪೂರ್ಣಃ** ಸ್ವರೂಪಾನಂದದಿಂದ ಅಲಂಬುದ್ಧಿಯುಳ್ಳವನು **ಅಲಕ್ಷ್ಯಲಿಂಗಃ** ಯಾವ ಆಶ್ರಮದ ಚಿನ್ಹೆಗಳೂ ಕಾಣದಿರುವ **ಅವಧೂತವೇಷಃ** ಅವಧೂತನಂತೆ ವೇಷವುಳ್ಳ, ದಿಗಂಬರನಾದ (ಜನರಿಂದ ತಿರಸ್ಕೃತನಾಗಿ ಇವನು ಹುಚ್ಚನೆಂದು ಬಿಡಲ್ಪಟ್ಟವನು) ಆದ್ದರಿಂದಲೇ **ಬಾಲೈಃ ವೃತಃ** ಮಕ್ಕಳಿಂದ ಸುತ್ತುವರೆದ **ಭಗವಾನ್ ವ್ಯಾಸಪುತ್ರಃ** ಪೂಜ್ಯ ಶುಕಾಚಾರ್ಯರು **ತತ್ರಾಭವತ್** (ಅಗಮತ್) ಮುನಿಗಳಿಂದ ಕೂಡಿದ ಪರೀಕ್ಷಿತನು ಕುಳಿತಲ್ಲಿಗೆ ಬಂದರು.

**ತಂ ದ್ವ್ಯಷ್ಟವರ್ಷಂ ಸುಕುಮಾರಪಾದ**
**ಕರೋರುಬಾಹ್ವಂಸಕಪೋಲಗಾತ್ರಮ್ ।**
**ಚಾರ್ವಾಯತಾಕ್ಷೋನ್ನಸತುಲ್ಯಕರ್ಣಂ**
**ಸುಭ್ರ್ವಾನನಂ ಕಂಬುಸುಜಾತಕಂಠಮ್ ॥೨॥**

**ದ್ವ್ಯಷ್ಟವರ್ಷಂ** ಹದಿನಾರು ವರ್ಷದ **ಸುಕುಮಾರಪಾದಕರೋರು ಬಾಹ್ವಂಸಕಪೋಲಗಾತ್ರಮ್** ಕೋಮಲವಾದ **ಪಾದ** ಕಾಲು **ಕರ** ಕೈಗಳು **ಊರು** ತೊಡೆ **ಬಾಹು** ಭುಜಗಳು **ಅಂಸ** ಹೆಗಲುಗಳು **ಕಪೋಲ** ಗಲ್ಲಗಳು **ಗಾತ್ರಂ** ದೇಹವುಳ್ಳ **ಚಾರ್ವಾಯತಾಕ್ಷೋನ್ನಸತುಲ್ಯಕರ್ಣಂ** ಸುಂದರವಾದ ವಿಶಾಲವಾದ (ವಿಜಯಧ್ವಜೀಯ- ಸ್ವಲ್ಪ ಕೆಂಪಾದ) ಕಣ್ಣುಗಳು, **ಉನ್ನಸ** ಎತ್ತರವಾದ ಮೂಗು, **ತುಲ್ಯಕರ್ಣೌ** ಸಮಾನವಾದ ಕಿವಿಗಳುಳ್ಳ **ಸುಭ್ರ್ವಾನನಂ** ಸುಂದರವಾದ ಹುಬ್ಬುಗಳಿಂದ ಕೂಡಿದ ಮುಖವುಳ್ಳ **ಕಂಬುಸುಜಾತಕಂಠಂ** ಶಂಖದಂತೆ ಮೂರು ರೇಖೆಗಳುಳ್ಳ ಸುಂದರ ಕುತ್ತಿಗೆಯುಳ್ಳ.

**ನಿಗೂಢಜತ್ರುಂ ಪೃಥುತುಂಗವಕ್ಷಸ-**
**ಮಾವರ್ತನಾಭಿಂ ವಲಿವಲ್ಗೂದರಂ ಚ ।**
**ದಿಗಂಬರಂ ವಕ್ರವಿಕೀರ್ಣಕೇಶಂ**
**ಪ್ರಲಂಬಬಾಹುಂ ಸ್ವಮರೋತ್ತಮಾಭಮ್ ॥೩॥**

**ನಿಗೂಢಜತ್ರುಂ** ಮಾಂಸದಿಂದ ಮುಚ್ಚಲ್ಪಟ್ಟ ಕುತ್ತಿಗೆಯ ಕೆಳಭಾಗವುಳ್ಳ (ಕುತ್ತಿಗೆಯ ಕೆಳಗೆ ಎದೆ ಭುಜಗಳ ಮಧ್ಯಭಾಗಕ್ಕೆ ಜತ್ರು ಎನ್ನುವರು) **ಪೃಥುತುಂಗವಕ್ಷಸಂ** ವಿಶಾಲವಾದ ಉನ್ನತವಾದ ಎದೆಯುಳ್ಳ **ಆವರ್ತನಾಭಿಃ** ಸುಳಿಯಂತೆ ತೆಗ್ಗಾದ ಹೊಕ್ಕಳುಳ್ಳ **ವಲಿವಲ್ಗೂದರಂ** ರೇಖೆಗಳಿಂದ ಸುಂದರವಾದ ಹೊಟ್ಟೆಯುಳ್ಳ **ದಿಗಂಬರಂ** ದಿಕ್ಕುಗಳೇ ವಸ್ತ್ರವಾಗಿವುಳ್ಳ **ವಕ್ರವಿಕೀರ್ಣಕೇಶಂ** ಹರವಿದ ಗುಂಗುರಗೂದಲುಗಳುಳ್ಳ **ಪ್ರಲಂಬಬಾಹುಂ** ದೀರ್ಘವಾದ ಕೈಗಳುಳ್ಳ **ಸ್ವಮರೋತ್ತಮಾಭಂ** ದೇವಶ್ರೇಷ್ಠರಲ್ಲಿ ಉತ್ತಮನಾದ ಶ್ರೀವೇದವ್ಯಾಸನಂತೆ ಕಾಂತಿಯುಳ್ಳ.

**ಶ್ಯಾಮಂ ಸದಾಽಽಪೀಚ್ಯವಯೋಽಂಗಲಕ್ಷ್ಮ್ಯಾ**
**ಸ್ತ್ರೀಣಾಂ ಮನೋಜ್ಞಂ ರುಚಿರಸ್ಮಿತೇನ ।**
**ಪ್ರತ್ಯುತ್ಥಿತಾ ಮುನಯಶ್ಶಾಸನೇಭ್ಯ-**
**ಸ್ತಲ್ಲಕ್ಷಣಜ್ಞಾ ಅಪಿ ಗೂಢವರ್ಚಸಮ್ ॥೪॥**

**ಶ್ಯಾಮಂ** ಕಪ್ಪಾದ **ಸದಾ** ಯಾವಾಗಲೂ **ಆಪೀಚ್ಯವಯೋಂಗಲಕ್ಷ್ಮ್ಯಾ** ಕೈಶೋರ ಮತ್ತು ಯೌವ್ವನದ ಮಧ್ಯದಲ್ಲಿರುವ ವಯಸ್ಸಿನ ದೇಹದಕಾಂತಿಯಿಂದ **ರುಚಿರಸ್ಮಿತೇನ** ಮನೋಹರ ಮುಗುಳುನಗೆಯಿಂದ **ಸ್ತ್ರೀಣಾಂ** ಸ್ತ್ರೀಯರ **ಮನೋಜ್ಞಂ** ಮನಸ್ಸನ್ನು ಸೆಳೆಯುವ **ಗೂಢವರ್ಚಸಂ ಅಪಿ** ಆಚ್ಛಾದಿತವರ್ಚಸ್ಸುಳ್ಳವರಾಗಿದ್ದರೂ **ತಲ್ಲಕ್ಷಣಜ್ಞಾನಂ** ತಾವು ಶುಕಾಚಾರ್ಯರು ಎಂಬ ಜ್ಞಾನವನ್ನು ಮಾಡಿಸುವ **ತಂ** ಬಂದವರು ಶುಕಾಚಾರ್ಯರು ಎಂದು ತಿಳಿದು **ಮುನಯಃ ಚ** ಮುನಿಗಳು ಹಾಗೂ ಮತ್ತಿತರರೂ **ಆಸನೇಭ್ಯಃ** ತಾವು ಕುಳಿತ ಆಸನಗಳಿಂದ **ಪ್ರತ್ಯುತ್ಥಿತಾಃ** ಎದ್ದು ನಿಂತರು.

*ಭಾಗವತತಾತ್ಪರ್ಯ-*

ಆಪೀಚ್ಯ ಎಂದರೆ ಯೌವ್ವನ ಎಂಬ ವ್ಯಾಖ್ಯಾನ ಪ್ರಾಮಾಣಿಕವಲ್ಲ ಎಂದರೆ ಅದಕ್ಕಾಗಿ ಆಪೀಚ್ಯಶಬ್ದಾರ್ಥ ಹೇಳುವರು.

**ಕೈಶೋರಯೌವನಾಭ್ಯಂತಃ ಕಾಲ ಆಪೀಚ್ಯಮುಚ್ಯತೇ । ಇತ್ಯಭಿದಾನಾತ್ ।**

ಕೈಶೋರ ಯೌವನ ಇವುಗಳ ಮಧ್ಯಕಾಲದ ವಯೋವಿಶೇಷವು (16ನೇ ವರ್ಷ) **ಆಪೀಚ್ಯ**ವೆನಿಸುವದು ಎಂದು ಅಭಿಧಾನವಿದೆ.

**ಸ ವಿಷ್ಣುರಾತೋಽತಿಥಯ ಆಗತಾಯ**
**ತಸ್ಮೈ ಸಪರ್ಯಾಂ ಶಿರಸಾಽಽಜಹಾರ ।**
**ತತೋ ನಿವೃತ್ತಾ ಹ್ಯಬುಧಾಃ ಸ್ತ್ರಿಯೋಽರ್ಭಕಾ**
**ಮಹಾಸನೇ ಚೋಪವಿವೇಶ ಪೂಜಿತಃ ॥೫॥**

**ವಿಷ್ಣುರಾತಃ ಸಃ** ಶ್ರೀಹರಿಯಿಂದ (ರಕ್ಷಿಸಿ ಕೊಡಲ್ಪಟ್ಟ )ರಕ್ಷಿತನಾದ ಪರೀಕ್ಷಿತನು **ಆಗತಾಯ** ಬಂದಿರುವ **ಅತಿಥಯೇ** ಪೂಜಿಸಲು ನಿಗದಿತವಾದ ದಿನವಿಲ್ಲದ **ತಸ್ಮೈ** ಶುಕಾಚಾರ್ಯರಿಗೆ **ಶಿರಸಾ ನಮಸ್ಕೃತ್ಯ** ತಲೆ ಬಾಗಿ ನಮಸ್ಕರಿಸಿ **ಸಪರ್ಯಾಂ ಆಜಹಾರ** ಪೂಜೆ ಮಾಡಿದನು. **ಸಃ** ಶುಕಾಚಾರ್ಯರು **ಮಹಾಸನೇ** ತಮಗಾಗಿ ಹಾಕಿದ ಎತ್ತರದ ಆಸನದಲ್ಲಿ **ಉಪವಿವೇಶ** ಕುಳಿತರು **ಪೂಜಿತಃ** ಪೂಜಿಸಲ್ಪಟ್ಟರು **ತತಃ** ಮುನಿಗಳು ಎದ್ದು ನಿಂತಿದ್ದು ರಾಜನು ಪೂಜಿಸಿದ್ದನ್ನು ನೋಡಿದ ನಂತರ **ಅಬುಧಾಃ** ಶುಕಾಚಾರ್ಯರೆಂದು ತಿಳಿಯದೇ ಯಾವನೋ ಹುಚ್ಚನೆಂದು ತಿಳಿದು ಬೆನ್ನ ಹತ್ತಿ ಬಂದ **ಸ್ತ್ರಿಯಃ** ಹೆಣ್ಣು ಮಕ್ಕಳು **ಅರ್ಭಕಾಃ** ಬಾಲಕರು **ನಿವೃತ್ತಾಃ** ತಿರುಗಿಹೋದರು.

**ಸ ಸಂವೃತಸ್ತತ್ರ ಮಹಾನ್ ಮಹೀಯಸಾಂ**
**ಬ್ರಹ್ಮರ್ಷಿರಾಜರ್ಷಿದೇವರ್ಷಿಸಂಘೈಃ ।**
**ವ್ಯರೋಚತಾಲಂ ಭಗವಾನ್ಯಥೇಂದು**
**ಗ್ರ್ರಹರ್ಕ್ಷತಾರಾನಿಕರೈಃ ಪರೀತಃ ॥೬॥**

**ಯಥಾ** ಹೇಗೆ **ಗ್ರಹರ್ಕ್ಷತಾರಾನಿಕರೈಃ ಗ್ರಹ** ಬೃಹಸ್ಪತಿ-ಶುಕ್ರಾದಿಗಳು,**ಋಕ್ಷ** ಅಶ್ವಿನಿ ಮೊದಲಾದ **ತಾರಾನಿಕರೈಃ** ನಕ್ಷತ್ರಗಳ ಸಮೂಹದಿಂದ **ಪರಿತಃ** ಸುತ್ತುವರೆದ **ಇಂದುಃ** ಚಂದ್ರನು ಶೋಭಿಸುವಂತೆ **ಮಹೀಯಸಾಂ ಮಹಾನ್** ಉತ್ತಮರಲ್ಲಿ ಉತ್ತಮನಾದ **ಸಃ ಭಗವಾನ್** ಆ ಪೂಜ್ಯರಾದ ಶುಕಾಚಾರ್ಯರು **ಬ್ರಹ್ಮರ್ಷಿರಾಜರ್ಷಿ-ದೇವರ್ಷಿಸಂಘೈಃ** ಎಲ್ಲ ಮುನಿಗಳ ಸಮೂಹಗಳಿಂದ **ಸಂವೃತಃ** ಸುತ್ತುವರೆಯಲ್ಪಟ್ಟು **ಅಲಂ ವ್ಯರೋಚತ** ಚೆನ್ನಾಗಿ ಶೋಭಿಸಿದರು.

**ವಿಶೇಷ** ಃ- ವಿಜಯಧ್ವಜರ ಪ್ರಕಾರ ಈ ಶ್ಲೋಕ ಪರೀಕ್ಷಿತನ ಪರವಾಗಿದೆ. **ಸಃ** ಪರೀಕ್ಷಿತನು ಮರಣಭಯದಿಂದ ಕಳೆಗುಂದಿರಲಿಲ್ಲವೆಂದು ಭಾವವನ್ನು ವರ್ಣಿಸುವರು.

**ಪ್ರಶಾಂತಮಾಸೀನಮಕುಂಠಮೇಧಸಂ**
**ಮುನೀಂ ನೃಪೋ ಭಾಗವತೋಽಭ್ಯುಪೇತ್ಯ ।**
**ಪ್ರಣಮ್ಯ ಮೂರ್ಧ್ನಾಽವಹಿತಃ ಕೃತಾಂಜಲಿ-**
**ರ್ನತ್ವಾ ಗಿರಾ ಸೂನೃತಯಾಽನ್ವಪೃಚ್ಛತ್ ॥೭॥**

**ಪ್ರಶಾಂತಂ** ಅತ್ಯಂತಶಾಂತನಾದ **ಅಕುಂಠಮೇಧಸಂ** ಎಲ್ಲ ಪದಾರ್ಥಗಳ ವಿಷಯದಲ್ಲಿ ತಡೆಯಿಲ್ಲದ ಜ್ಞಾನವುಳ್ಳ **ಮುನಿಂ ಆಸೀನಂ** ಕುಳಿತಿರುವ ಶುಕಾಚಾರ್ಯರನ್ನು **ಭಾಗವತಃ ನೃಪಃ** ಭಗವದ್ಭಕ್ತನಾದ ರಾಜನು **ಅಭ್ಯುಪೇತ್ಯ** ಸಮೀಪಿಸಿ **ನತ್ವಾ** ನಮಸ್ಕಾರ ಮಾಡಿ **ಕೃತಾಂಜಲಿಃ** ಕೈಜೋಡಿಸಿ **ಅವಹಿತಃ** ಸಮಾಧಾನವುಳ್ಳವನಾಗಿ **ಮೂರ್ಧ್ನಾ ಪ್ರಣಮ್ಯ** ಪ್ರಶ್ನೆ ಕೇಳಲು ಮತ್ತೊಮ್ಮೆ ತಲೆಬಾಗಿ ನಮಸ್ಕರಿಸಿ **ಸೂನೃತಯಾ ಗಿರಾ** ಪ್ರಿಯವಚನಪೂರ್ವಕವಾಗಿ **ಅನ್ವಪೃಚ್ಛತ್** ಪ್ರಶ್ನಿಸಿದನು.

**ಶುಕಾಚಾರ್ಯರು ನುಡಿದ ಪ್ರಿಯವಚನಗಳು**

ರಾಜೋವಾಚ-

**ಅಹೋ ಅದ್ಯ ವಯಂ ಬ್ರಹ್ಮನ್ ಸತ್ಸೇವ್ಯಾಃ ಕ್ಷತ್ರಬಂಧವಃ ।**
**ಕೃಪಯಾಽತಿಥಿರೂಪೇಣ ಭವದ್ಭಿಸ್ತೀರ್ಥಕಾಃ ಕೃತಾಃ ॥೮॥**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ **ಕ್ಷತ್ರಬಂಧವಃ ವಯಂ** ಕ್ಷತ್ರಿಯರಾದ ನಾವು **ಅದ್ಯ** ಈ ದಿನ **ಸತ್ಸೇವ್ಯಾಃ** ಸಜ್ಜನರಿಂದ ಸೇವ್ಯರಾಗಿದ್ದೇವೆ (ಸಜ್ಜನರು ನಮ್ಮನ್ನು ಬಯಸುವಂತಾಗಿದೆ) **ಅಹೋ** ಭಾಗ್ಯವು **ಕೃಪಯಾ** ಕರುಣೆಯಿಂದ **ಅತಿಥಿರೂಪೇಣ** ಅತಿಥಿಗಳಾಗಿ ಬಂದು **ಭವದ್ಭಿಃ** ತಮ್ಮಿಂದ **ತೀರ್ಥಕಾಃ ಕೃತಾಃ** ತೀರ್ಥಗಳಂತೆ ಶುದ್ಧಮಾಡಲ್ಪಟ್ಟಿರುವೆವು.

**ಯೇಷಾಂ ಸಂಸ್ಮರಣಾತ್ ಪುಂಸಃ ಸದ್ಯಃ ಶುಧ್ಯಂತಿ ವೈ ಗೃಹಾಃ ।**
**ಕಿಂ ಪುನರ್ದರ್ಶನಸ್ಪರ್ಶಪಾದಶೌಚಾಸನಾದಿಭಿಃ ॥೯॥**

**ಯೇಷಾಂ** ಯಾರ **ಸಂಸ್ಮರಣಾತ್** ಭಕ್ತಿಯಿಂದ ಸ್ಮರಣಮಾಡುವದರಿಂದ **ಗೃಹಾಃ** ಮನೆಗಳು **ಸದ್ಯಃ ಶುಧ್ಯಂತಿ** ತಕ್ಷಣ ಪವಿತ್ರವಾಗುವವು **ದರ್ಶನಸ್ಪರ್ಶಪಾದ-**

**ಶೌಚಾಸನಾದಿಭಿಃ ದರ್ಶನ** ನೋಡುವದು, **ಸ್ಪರ್ಶ** ಕಾಲುಗಳನ್ನು ಒತ್ತುವದು,**ಪಾದಶೌಚ** ಕಾಲು ತೊಳೆಯುವದು **ಆಸನಾದಿಭಿಃ** ಆಸನ ಮುಂತಾದವುಗಳನ್ನು ಕೊಡುವದು ಇವುಗಳಿಂದ **ಕಿಂ ಪುನಃ** ಪವಿತ್ರರಾಗುವರೆಂದು ಮತ್ತೆ ಹೇಳಬೇಕಿಲ್ಲ.

**ಸಾನ್ನಿಧ್ಯಾತ್ತೇ ಮಹಾಯೋಗಿನ್ ಪಾತಕಾನಿ ಮಹಾಂತ್ಯಪಿ ।**
**ಸದ್ಯೋ ನಶ್ಯಂತಿ ವೈ ಪುಂಸಾಂ ವಿಷ್ಣೋರಿವ ಸುರೇತರಾಃ ।।೧೦।।**

**ವಿಷ್ಣೋಃ ಸಾನ್ನಿಧ್ಯಾತ್** ಶ್ರೀಹರಿಯ ಸನ್ನಿಧಾನದಿಂದ **ಸುರೇತರಾ ಇವ** ಅಸುರರು ನಾಶವಾಗುವಂತೆ **ಮಹಾಯೋಗಿನ್** ಶುಕಾಚಾರ್ಯರೇ **ತೇ ಸಾನ್ನಿಧ್ಯಾತ್** ನಿಮ್ಮ ಸನ್ನಿಧಾನದಿಂದ **ಮಹಾಂತ್ಯಪಿ ಪಾತಕಾನಿ** ದೊಡ್ಡವಾದ ಬ್ರಹ್ಮಹತ್ಯಾದಿಪಾಪಗಳೂ ಸಹ **ಸದ್ಯಃ ನಶ್ಯಂತಿ** ತಕ್ಷಣ ನಾಶವಾಗುವವು **ವೈ** ಪ್ರಸಿದ್ಧ.

**ಅಪಿ ಮೇ ಭಗವಾನ್ ಪ್ರೀತಃ ಕೃಷ್ಣಃ ಪಾಂಡುಸುತಪ್ರಿಯಃ ।**
**ಪೈತೃಷ್ವಸೇಯಪ್ರೀತ್ಯರ್ಥಂ ತದ್ಗೋತ್ರಸ್ಯಾಪ್ತಬಾಂಧವಃ ।।೧೧।।**

**ಪಾಂಡುಸುತಪ್ರಿಯಃ** ಪಾಂಡವರಿಗೆ ಪ್ರಿಯನಾದ ಅಥವಾ ಪಾಂಡವರೇ ಪ್ರಿಯರಾಗಿಯುಳ್ಳ **ಪೈತೃಷ್ವಸೇಯಪ್ರೀತ್ಯರ್ಥಂ** ತಂದೆಯ ತಂಗಿಯಾದ ಕುಂತಿಯ ಪುತ್ರರಾದ ಪಾಂಡವರ ಪ್ರೀತಿಗಾಗಿ **ತದ್ಗೋತ್ರಸ್ಯ** ಅವರ ಗೋತ್ರದಲ್ಲಿ ಜನಿಸಿದ ನನ್ನ **ಆಪ್ತಬಾಂಧವಃ** ಸ್ವೀಕೃತವಾದ ಬಂಧುಕೃತ್ಯವುಳ್ಳ **ಭಗವಾನ್ ಕೃಷ್ಣಃ** ಶ್ರೀಕೃಷ್ಣನು **ಪ್ರೀತಃ ಅಪಿ** ಪ್ರೀತನೇ ಆಗಿರುವನು.

ಈ ಸಮಯದಲ್ಲಿ ತಮ್ಮ ಆಗಮನವು ಪ್ರೀತನಾದ ನನ್ನ ಬಂಧು ಶ್ರೀಕೃಷ್ಣನೇ ಮಾಡಿಸಿದ್ದು ಎಂದು ಭಾವ.

**ಅನ್ಯಥಾ ತೇಽವ್ಯಕ್ತಗತೇರ್ದರ್ಶನಂ ನಃ ಕಥಂ ನೃಣಾಮ್ ।**
**ನಿತರಾಂ ಮ್ರಿಯಮಾಣಾನಾಂ ಸಂಸಿದ್ಧಸ್ಯ ವರೀಯಸಃ ।।೧೨।।**

**ಅನ್ಯಥಾ** ಶ್ರೀಕೃಷ್ಣ ಪ್ರೀತಿಯಿಲ್ಲದಿದ್ದರೆ **ವರೀಯಸಃ** ಅತ್ಯಂತ ಶ್ರೇಷ್ಠನಾದ **ಸಂಸಿದ್ಧಸ್ಯ** ಬ್ರಹ್ಮಜ್ಞಾನಿಯಾದುದರಿಂದ ಕೃತಕೃತ್ಯನಾದ **ಅವ್ಯಕ್ತಗತೇಃ** ಅದೃಶ್ಯಗಮನವುಳ್ಳ **ತೇ** ನಿನ್ನ **ದರ್ಶನಂ** ದರ್ಶನವು **ನೃಣಾಂ** ಜನರಿಗೆ **ಕಥಂ** ಹೇಗೆ ? ಅದರಲ್ಲೂ **ಮ್ರಿಯಮಾಣಾನಾಂ ನಃ ನಿತರಾಂ** ಸಾಯಲು ಸಿದ್ಧನಾದ ನನಗಂತು ಅತ್ಯಂತ ಅಸಂಭಾವಿತವೆಂದು ಭಾವ.

**ಅತಃ ಪೃಚ್ಛಾಮಿ ಸಂಸಿದ್ಧಂ ಯೋಗಿನಾಂ ಪರಮಂ ಗುರುಮ್ ।**
**ಪುರುಷಸ್ಯೇಹ ಯತ್ಕಾರ್ಯಂ ಮ್ರಿಯಮಾಣಸ್ಯ ಸರ್ವದಾ ॥೧೩॥**

**ಅತಃ** ಶ್ರೀಕೃಷ್ಣಪ್ರಸಾದದಿಂದ ತಾವು ಬಂದಿರುವದರಿಂದ **ಯೋಗಿನಾಂ** ಯೋಗಿಗಳಿಗೆ **ಪರಮಂ ಗುರುಂ** ಶ್ರೇಷ್ಠ ಗುರುಗಳಾದ **ಸಂಸಿದ್ಧಂ** ಕೃತಕೃತ್ಯರಾದ ತಮ್ಮನ್ನು **ಮ್ರಿಯಮಾಣಸ್ಯ ಪುರುಷಸ್ಯ** ಸಾಯುತ್ತಿರುವ ಮನುಷ್ಯನಿಗೆ **ಸರ್ವದಾ** ಯಾವಾಗಲೂ ಇಹ ಭರತಖಂಡದಲ್ಲಿ **ಯತ್ಕಾರ್ಯಂ** ಯಾವುದು ಮಾಡಲು ಯೋಗ್ಯವೋ ಎಂಬುದನ್ನು **ಪೃಚ್ಛಾಮಿ** ಕೇಳುವೆನು.

**ಯಚ್ಛ್ರೋತವ್ಯಮಥೋ ಜಾಪ್ಯಂ ಯತ್ಕರ್ತವ್ಯಂ ನೃಭಿಃ ಸದಾ ।**
**ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಮ್ ॥೧೪॥**

**ಯತ್ ಶ್ರೋತವ್ಯಂ** ಯಾವುದು ಕೇಳಬೇಕಾದುದು **ಅಥೋ ಯತ್ ಜಾಪ್ಯಂ** ಜಪಿಸಬೇಕಾದುದು ಯಾವುದು **ನೃಭಿಃ** ಇತರ ಜನರಿಂದ **ಸದಾ** ಯಾವಾಗಲೂ **ಯತ್ಕರ್ತವ್ಯಂ** ಅವಶ್ಯವಾಗಿ ಏನು ಮಾಡಬೇಕು **ಸ್ಮರ್ತವ್ಯಂ** ಸ್ಮರಣಮಾಡಬೇಕಾದುದು **ಭಜನೀಯಂ** ಭಜಿಸಬೇಕಾದುದು ಯಾವುದು **ಯದ್ವಾ** ಅಥವಾ **ವಿಪರ್ಯಯಂ** ಅಕರ್ತವ್ಯ ಅಸ್ಮರ್ತವ್ಯ ಅಶ್ರೋತವ್ಯಾದಿಗಳಲ್ಲಿ ಉತ್ತಮವಲ್ಲದ್ದು ಯಾವುದು ಎಂದು **ಬ್ರೂಹಿ** ಹೇಳಿರಿ.

ನೀವು ಬಹುಕಾಲ ಒಂದೆಡೆ ಇರುವವರಲ್ಲ ನನ್ನ ಮೇಲೆ ಕೃಪೆಯಿಂದ ಉಪದೇಶಮಾಡಲು ಕುಳಿತಿರುವಿರಿ ಎಂದು ಹೇಳುವನು

**ನೂನಂ ಭಗವತೋ ಬ್ರಹ್ಮನ್ ಗೃಹೇಷು ಗೃಹಮೇಧಿನಾಮ್ ।**
**ನ ಲಕ್ಷ್ಯತೇ ಹ್ಯವಸ್ಥಾನಮಪಿ ಗೋದೋಹನಂ ಕ್ವಚಿತ್ ॥೧೫॥**

**ಹೇ ಬ್ರಹ್ಮನ್** ಜ್ಞಾನಿಯಾದ ಶುಕಾಚಾರ್ಯರೇ **ಗೃಹಮೇಧಿನಾಂ** ಗೃಹಸ್ಥಾಶ್ರಮೋಚಿತ ಯಜ್ಞಾದಿಗಳನ್ನೂ ಮಾಡುವವರ **ಗೃಹೇಷು** ಮನೆಗಳಲ್ಲಿ **ಕ್ವಚಿತ್** ಒಂದು ಸ್ಥಳದಲ್ಲಿಯೂ **ಗೋದೋಹನಂ ಅಪಿ** ಆಕಳಿನ ಒಂದು ಧಾರೆ ಕರೆಯುವಷ್ಟು ಕಾಲವೂ **ಭಗವತಃ** ಪೂಜ್ಯರಾದ ತಮ್ಮ **ಅವಸ್ಥಾನಂ** ಇರುವಿಕೆಯು **ನ ಲಕ್ಷ್ಯತೇ** ಕಂಡುಬರುವದಿಲ್ಲ **ನೂನಂ** ನಿಶ್ಚಯವು.

**ಏವಮಾಭಾಷಿತಃ ಪೃಷ್ಟಃ ಸ ರಾಜ್ಞಾ ಶ್ಲಕ್ಷ್ಣಯಾ ಗಿರಾ ।**
**ಪ್ರತ್ಯಭಾಷತ ಧರ್ಮಜ್ಞೋ ಭಗವಾನ್ ಬಾದರಾಯಣಿಃ ॥೧೬॥**

॥ ಇತಿ ಶ್ರೀಮದ್ಭಾಗವತೇ ಪ್ರಥಮಸ್ಕಂಧೇ ವಿಂಶೋಽಧ್ಯಾಯಃ ॥

**ರಾಜ್ಞಾ** ಪರೀಕ್ಷಿತನಿಂದ **ಏವಂ** ಈ ರೀತಿ **ಶ್ಲಕ್ಷ್ಣಯಾ ಗಿರಾ ಆಭಾಷಿತಃ** ನಿಮ್ಮಿಂದ ನಾವು ಪವಿತ್ರರಾದೆವು ಎಂಬ ಮಧುರಮಾತುಗಳನ್ನು ಆಡಿಸಿಕೊಂಡ **ಪೃಷ್ಟಃ** ಪ್ರಶ್ನಿಸಲ್ಪಟ್ಟ **ಧರ್ಮಜ್ಞಃ** ಗುರುಶಿಷ್ಯಸಂವಾದರೂಪ ಧರ್ಮವನ್ನರಿತ **ಭಗವಾನ್ ಬಾದರಾಯಣಿಃ** ಪೂಜ್ಯರಾದ ಶುಕಾಚಾರ್ಯರು **ಪ್ರತ್ಯಭಾಷತ** ಉತ್ತರಿಸಿದರು.

ಇಲ್ಲಿಗೆ ಇಪ್ಪತ್ತನೇ ಅಧ್ಯಾಯವು ಮುಗಿಯಿತು

॥ ಇತಿ ಪ್ರಥಮಸ್ಕಂಧಃ ಸಂಪೂರ್ಣಃ ॥

... ಶ್ರೀಕೃಷ್ಣಾರ್ಪಣಮಸ್ತು ...

★★★★★

# ಶ್ಲೋಕಾರ್ಧಾನುಕ್ರಮಣಿಕಾ

## ಅ

## ಆ

## ಆ

## ಇ

## ಐ



## ಓ



## ಔ



## ಕ

## ಗ

## ಧ



## ನ

## ಪ

## ಮ

## ಯ

# ವ

## ಶ

## ಷ



## ಸ

★★★★★

